

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಶ್ರೀ ವಿಷ್ಣು ಮಹಾಪುರಾಣ

ಅನುವಾದ-ಲೇಖಕರು
ಮಹಾಮಹೋಪಾಧ್ಯಾಯ
**ಪಂ. ಪಂಢರೀನಾಥಾಚಾರ್ಯ ಗಲಗಲಿ**
ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ
ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ

—: ಪ್ರಕಾಶಕರು :--
**ಖೋಡೇ ಫೌಂಡೇಶನ್**
ಗ್ರಂಥ ಪ್ರಕಟಣಾ ವಿಭಾಗ
ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ
ಬೆಂಗಳೂರು-560 009
ದೂರವಾಣಿ : 6320014 ಫ್ಯಾಕ್ಸ್ : 091–80–6321416

SRI VISHNU MAHĀPURĀṆA of Bhagavān Sri Vedavyāsā,
Edited and Translated in to Kannaḍa by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathāchārya Galagali
Vishveswara Nagar, Shanti Colony, Hubli-580032 Ph : (0836) 250250

First Edition : 1967

Second Edition : 2003

No. of Pages : 34 + 452

No. of Copies : 1,000



Price : Rs. 180 = 00

Printed at : SRI VENKATESHWARA PRINTERS
No. 3, Yellappa Road, Susheela Road Cross
Chick Mavalli, Lalbagh Crumbigal Road Cross
BANGALORE - 560 004
Phone : (080) - 6573001

# ಪ್ರಸ್ತಾವನೆ

## ಅಷ್ಟಾದಶಪುರಾಣಗಳಲ್ಲಿ ವಿಷ್ಣುಪುರಾಣದ ಸ್ಥಾನಮಾನ

ಸರ್ವ ವಿಷಯೋಪಬೃಂಹಿತವಾದ ಪುರಾಣಗಳು ಭಾರತೀಯ ಪುರಾತನ ಸಾರಸ್ವತ ಪ್ರಪಂಚದ ಜ್ಞಾನಕೋಶದಂತಿವೆ. ಅವುಗಳಲ್ಲಿ ಬಾರದ ವಿಷಯಗಳಿಲ್ಲ. ತಿಳಿಸದ ಪ್ರಮೇಯವಿಲ್ಲ. ಕಲಿಸದ ಪಾಠವಿಲ್ಲ.

ಸೃಷ್ಟಿಯ ಆದಿಕಾಲದಿಂದ ಕೀಟದಿಂದ ಕೈಟಭಾರಿಯವರೆಗೆ ಸಕಲ ಪ್ರಾಣಿಗಳ ಹುಟ್ಟು ಸಾವು, ನೋವು, ನಲಿವು, ಪತನಾಭ್ಯುತ್ಥಾನಗಳ ಕ್ರಮಬದ್ಧ ಇತಿಹಾಸ, ಭೂಗೋಲ, ಖಗೋಲ, ವಿಜ್ಞಾನ, ವ್ಯವಹಾರ, ವಾಣಿಜ್ಯ, ಸಾಹಿತ್ಯ, ಸಂಸ್ಕೃತಿ, ಸಮಾಜ, ಜನಜೀವನ ಮುಂತಾದ ಸಮಸ್ತ ವಿಷಯಗಳಿಗೂ ಪುರಾಣಗಳು ರನ್ನಗನ್ನಡಿಯನ್ನು ಹಿಡಿದು ಯಥಾರ್ಥ ದರ್ಶನವನ್ನು ಮಾಡಿಸುತ್ತವೆ. ಶತಕಾನುಶತಕಗಳಿಂದ ಸಂಗ್ರಹೀತವಾದ ಮುನಿ ಮನುಜ ಮಹಾನುಭಾವರನೇಕರ ಅನುಭವದ ಆಗರ, ಜ್ಞಾನದ ಸಾಗರ ಇಲ್ಲಿ ತೆರೆತೆರೆದಿದೆ.

ಪರಾತ್ಪರ ಸತ್ಯವನ್ನು ಅರಿಸಹೊರಟ ವಿಜ್ಞಾನ ಭಿಕ್ಷುಗಳ ಮೋಕ್ಷಯಾತ್ರೆಯ ಮೊದಲ ಮೆಟ್ಟಲುಗಳಾದ ತೀರ್ಥ ಕ್ಷೇತ್ರ ಮಠ ಮಂದಿರಾದಿ ದಿವ್ಯ ಧಾಮಗಳ ಮೈಮೆ ಗೈಮೆಗಳು ಆ ಆ ಪುರಾಣ ರೂಪದಿಂದ ಸ್ಥಿರ ಸ್ಥಾವರವಾಗಿ ಮೋಕ್ಷ ಪಥದಲ್ಲಿ ಮುಂಬರುವ ಮುಮುಕ್ಷುಗಳಿಗೆ ದಾರಿದೀಪವಾಗಿ ನಿಂತಿವೆ.

ಅಪರೋಕ್ಷ ಜ್ಞಾನಿಗಳ ಬ್ರಹ್ಮಾನುಭೂತಿಯ, ಸತ್ಯ ಸಾಕ್ಷಾತ್ಕಾರದ ಕ್ರಮ ವಿಕ್ರಮಗಳೂ, ಪದ್ಧತಿ ಪ್ರಕಾರಗಳೂ ಈ ಪೌರಾಣಿಕ ಸಾಹಿತ್ಯದಲ್ಲಿ ಭಗವತ್ ಸ್ವರೂಪಿಗಳಾದ ಬಾದರಾಯಣದಿಂದ ಸ್ಫುಟವಾಗಿ ಪ್ರತಿಪಾದಿಸಲ್ಪಟ್ಟದ್ದರಿಂದಲೇ ಇದರಲ್ಲಿ ಪಾವಿತ್ರ್ಯ, ಜನರಂಜನದ ಜೊತೆಗೆ ಚಿತ್ತ ಶೋಧನ, ಆತ್ಮಬೋದನೆಯೂ ಮೇಳಗೂಡಿದಂತಾಗಿ ಪುರಾಣವೆಂದರೆ ಚತುರ್ವಿಧ ಪುರುಷಾರ್ಥ ಪ್ರದವಾದ ವಾಙ್ಮಯೀನ ಕಾಮಧೇನು ಎನ್ನುವಂತಾಗಿದೆ.

**''ಪುರಾ ಪರಂಪರಾಂ ವಕ್ತಿ ಪುರಾಣಂ ತೇನ ವೈ ಸ್ಮೃತಂ ।**
**ನಿರುಕ್ತಿಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೆ ॥**

ಎಂದು ವಾಯು ಪುರಾಣದಲ್ಲಿ ವಂಶ ಪರಂಪರೆ ಹಾಗೂ ಅದರ ಇತಿಹಾಸವನ್ನು ಹೇಳುವದೇ ಪುರಾಣಗಳ ಲಕ್ಷಣ ಎಂದು ಹೇಳಿದೆ.

ಈ ಪುರಾಣಗಳು ಅತ್ಯಂತ ಪ್ರಾಚೀನವಿದ್ದು ವೇದಗಳಿಗಿಂತ ಮೊದಲೇ ಅವು ಭಗವಂತನಿಂದ ರೂಪಿಸಲ್ಪಟ್ಟವು ಎಂದು ಮತ್ಸ್ಯ ಪುರಾಣದಲ್ಲಿ ವೇದವಾಙ್ಮಯಕ್ಕಿಂತಲೂ ಪ್ರಾಚೀನತ್ವ ಅರ್ಥಾತ್ ಅತಿಪೂರ್ವಕಾಲಪ್ರಕಾಶ ವಿಷಯತ್ವವನ್ನು ಅವುಗಳಿಗೆ ಹೇಳಿದ್ದಾರೆ.

**ಪುರಾಣಂ ಸರ್ವ ಶಾಸ್ತ್ರಾಣಾಂ ಪ್ರಥಮಂ ಬ್ರಹ್ಮಣಾ ಸ್ಮೃತಂ।**
**ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿರ್ಗತಾಃ ॥**

ಮತ್ಸ್ಯಪುರಾಣದಲ್ಲಿ ಹೇಳಿದ ಈ ಮಾತಿನಿಂದ ವೇದಗಳಂತೆ ಪುರಾಣಗಳು ನಿತ್ಯ. ವೇದಗಳಿಗೆ ಆನುಪೂರ್ವೀನಿತ್ಯತ್ವ, ಪುರಾಣಗಳಿಗೆ ಆರ್ಥಿಕ ನಿತ್ಯತ್ವ ಉಂಟೆಂದು ಸಿದ್ಧವಾಗುವದು.

ಈಗ ಹದಿನೆಂಟು ಪುರಾಣ ರೂಪದಿಂದ ನಮಗೆ ಗೋಚರವಾಗುವ ಈ ಪಾವನ ವಾಙ್ಮಯವು ಮೊದಲು ನೂರು ಕೋಟಿ ಗ್ರಂಥಾತ್ಮಕವಾಗಿ ಒಂದೇ ವಿರಾಟ್ ಹೊತ್ತಿಗೆಯಾಗಿತ್ತು. ಅದು ಮುಂದೆ ಮಿತ ಮತಿಗಳಾದ ಮಾನವೀಯ ಮಿದುಳಿಗೆ ನಿಲುಕಲು ಅಶಕ್ಯವೆಂದು ತಿಳಿದು ವೇದವ್ಯಾಸ ದೇವರು ಅದನ್ನು ನಾಲ್ಕು ಲಕ್ಷ ಗ್ರಂಥಗಳಿಗೆ ಇಳಿಸಿ ಸಂಕ್ಷೇಪಿಸಿ ಹದಿನೆಂಟು ಪುರಾಣಗಳ ರೂಪಕ್ಕೆ ತಂದರು.

**"ಪುರಾಣಮೇಕಮೇವಾಸೀತ್ ತದಾ ಕಲ್ಪಾಂತರೇ ಕಿಲ।**
**ತ್ರಿವರ್ಗ ಸಾಧನಂ ಪುಣ್ಯಂ ಶತಕೋಟಿ ಪ್ರವಿಸ್ತರಂ ॥**

**ತಲ್ಲಕ್ಷಣಮಿದಂ ಪ್ರೋಕ್ತಂ ವ್ಯಾಸೇನಾದ್ಭುತ ಕರ್ಮಣಾ।**
**ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀಸುತಃ" ॥**

ಎಂದು ಮುಂತಾಗಿ ಪದ್ಮ ಪುರಾಣದ ಸೃಷ್ಟಿ ಖಂಡದಲ್ಲಿ ಪುರಾಣಗಳು ಹದಿನೆಂಟು ಭಾಗವಾಗಿ ಬೆಳೆದು ಬಂದ ಬಗೆಯನ್ನು ವಿವರಿಸಲಾಗಿದೆ.

ಈ ಹದಿನೆಂಟು ಪುರಾಣಗಳ ಹೆಸರುಗಳನ್ನು ಚಮತ್ಕಾರಿಕ ರೀತಿಯಿಂದ ಒಂದೇ ಪದ್ಯದಲ್ಲಿ ಹೇಳುವ ಕ್ರಮವೊಂದು ಉಂಟು.

**"ಮ ದ್ವಯಂ ಭ ದ್ವಯಂ ಚೈವ ಬ್ರ ತ್ರಯಂ ವ ಚತುಷ್ಟಯಂ ॥**
**ಅ ನಾ ಪ ಲಿಂಗ ಕೂ ಸ್ಕಾನಿ ಪುರಾಣಾನಿ ಪೃಥಕ್ ಪೃಥಕ್ ॥**

"ಪ್ರಾರಂಭದಲ್ಲಿ 'ಮ' ಮೊದಲಿನಕ್ಷರವಾಗಿರುವ ಪುರಾಣ ಎರಡು 'ಬ' ಮೊದಲಾಗಿರುವ ಎರಡು, ಬ್ರ ಆದಿಯಾಗಿರುವ ಮೂರು, ವ ಮೊದಲಾಗಿ ಉಳ್ಳವು ನಾಲ್ಕು ಮತ್ತು *ಅ. ನಾ. ಪ. ಲಿಂ. ಕೂ. ಸ್ಕಾ*, ಮುಂತಾದ ಅಕ್ಷರ ಮೊದಲಾಗಿ ಉಳ್ಳವು ಆರು ಹೀಗೆ ಒಟ್ಟು ಹದಿನೆಂಟು ಪುರಾಣಗಳು.

ಈ ಪದ್ಯ ಕ್ರಮದಂತೆ ಪುರಾಣಗಳ ಹೆಸರುಗಳು **ಮ ದ್ವಯಂ** ಎಂದರೆ ಮತ್ಸ್ಯ ಮಾರ್ಕಂಡೇಯ, **ಭ ದ್ವಯ** ಎಂದರೆ ಭಾಗವತ ಭವಿಷ್ಯ, **ಬ್ರ ತ್ರಯ** ಎಂದರೆ ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮ ವೈವರ್ತ. **ವ ಚತುಷ್ಟಯಂ** ಎಂದರೆ ವಾಮನ, ವಾಯು, ವಿಷ್ಣು, ವರಾಹ. **ಅ** ಎಂದರೆ ಅಗ್ನಿ, **ನಾ** ಎಂದರೆ ನಾರದ ಪುರಾಣ ***ಪಂ. ಲಿಂ. ಕೂ. ಸ್ಕಾ*** ಎಂದರೆ ಪದ್ಮ, ಲಿಂಗ, ಗರುಡ, ಕೂರ್ಮ ಮತ್ತು ಸ್ಕಂದ ಪುರಾಣ ಮುಂತಾಗಿ ಇರುತ್ತವೆ. ಕೆಲವರು ***"ಆಲಿಂಪಾಗ್ನಿ ಪುರಾಣಾನಿ ಕೂಸ್ಕಂ ಗಾರುಡ ಮೇವಚ"*** ಎಂದು ದೇವೀ ಭಾಗವತದ ಪಾಠಾಂತರವನ್ನು ಆಧರಿಸಿ ನಾರದ ಪುರಾಣದ ಬದಲು ಆದಿತ್ಯ ಪುರಾಣವನ್ನು ಮಹಾಪುರಾಣದಲ್ಲಿ ಪರಿಗಣಿಸುತ್ತಾರೆ.

ಇವುಗಳಲ್ಲಿ ಬ್ರಹ್ಮ ಹಾಗೂ ಪದ್ಮಪುರಾಣಗಳು ಪ್ರಾಚೀನ ಅಂದರೆ ಪ್ರಥಮ ಬ್ರಹ್ಮಸ್ಮೃತಿಗೋಚರವಾದವು. **''ಬ್ರಾಹ್ಮಂ ಪಾದ್ಮಂ ವೈಷ್ಣವಂಚ''** ಎಂದು ವಿಷ್ಣು ಪುರಾಣದಲ್ಲಿಯೂ **''ಬ್ರಾಹ್ಮಂ ಪುರಾಣಂ ಪ್ರಥಮ ದ್ವಿತೀಯ ಪಾದ್ಮಮುಚ್ಯತೆ''** ಎಂದು ಪದ್ಮ ಪುರಾಣದಲ್ಲಿಯೂ ಕ್ರಮ ನಿರ್ದೇಶಮಾಡಿದ್ದಾರೆ.

ಈ ಕ್ರಮದಲ್ಲಿ ಭಾಗವತ ಐದನೆಯದಾಗಿ ಬರುವದು, ಇವಲ್ಲದೆ ನೃಸಿಂಹ ನಂದಿ, ದುರ್ವಾಸ, ಕಪಿಲ, ಸೌರ, ಪಾರಶರ, ವಿಶನಸ್, ಸನತ್ಕುಮಾರ, ವಿಷ್ಣು ಧರ್ಮ, ನಾರದೋಪಪುರಾಣ, ಮಾಹೇಶ್ವರ, ಸಾಂಬ, ಮಾರೀಚ, ಭಾರ್ಗವ ಮುಂತಾದ ಹದಿನೆಂಟು ಉಪ ಪುರಾಣಗಳೂ, ಉಂಟು. ಇಷ್ಟೇ ಅಲ್ಲದೆ ಆದಿ ಪುರಾಣ ಮುದ್ಗಲಪುರಾಣ, ಗಣೇಶಪುರಾಣ, ದೇವೀಪುರಾಣ, ದೇವೀ ಭಾಗವತ ಪುರಾಣ ಮುಂತಾದ ಅನೇಕ ಉಪ ಪುರಾಣಗಳೂ ಉಂಟು. **''ಏತಾನ್ಯುಪಪುರಾಣಾನಿ ಕಥಿತಾನಿ ಮಹಾತ್ಮಭಿಃ''** ಎಂಬ ಉಕ್ತಿಯಂತೆ ಅರ್ವಾಚೀನ ಮಹಾತ್ಮರಿಂದಲೂ ಕೆಲವು ರಚಿಸಲ್ಪಟ್ಟವೆ. ಇವುಗಳಲ್ಲಿ ಸಾತ್ವಿಕ ರಾಜಸ ತಾಮಸ ಎಂಬ ಪ್ರಭೇದವಿದ್ದು ಶ್ರೀಹರಿಗೆ ನಿರವಧಿಕ ಉತ್ಕೃಷ್ಟತ್ವವನ್ನು ಪ್ರತಿಪಾದಿಸುವ ಪುರಾಣಗಳು **'ಬ್ರಾಹ್ಮಂ ಪಾದ್ಮಂ ವೈಷ್ಣವಂ'** ಅಂದರೆ ಬ್ರಹ್ಮ, ಪದ್ಮ, ವಿಷ್ಣು ಪುರಾಣ ಮುಂತಾದವುಗಳು ಸಾತ್ವಿಕ ಪುರಾಣಗಳೆಂದು ಪದ್ಮ ಪುರಾಣದಲ್ಲಿ ಸ್ಪಷ್ಟವಾಗಿ ರೂಪಿಸಿದ್ದಾರೆ.

ಈ ಪುರಾಣಗಳ ಮುಖ್ಯ ಗುರಿ ದೇವರ ಮಹಿಮೆ ಕೊಂಡಾಡುವದಲ್ಲದೆ.....

**''ದಿವ್ಯಾನಿ ಕರ್ಮಾಣಿ ವಿಕ್ರಮಃ ತ್ಯಾಗ ಏವ ಚ ।**
**ಮಾಹಾತ್ಮ್ಯ ಮಪಿಚಾಸ್ತಿಕ್ಯಂ ಸತ್ಯಂ ಶೌಚಂ ದಯಾರ್ಜವಂ ।**
**ವಿದ್ವದ್ಭಿಃ ಕಥ್ಯತೆ ಲೋಕೇ ಪುರಾಣೇ ಕವಿಸತ್ತಮೈಃ'' ॥**

ಪ್ರಾಚೀನ ರಾಜಮಹಾರಾಜ, ಮುನಿ, ಮನುಜ, ಬಡವ ಬಲ್ಲಿದ ಮುಂತಾದವರ ತ್ಯಾಗ ವಿಕ್ರಮ, ಸತ್ಯನಿಷ್ಠೆ, ದಯೆ, ಆರ್ಜವ, ಸಿದ್ಧಿ ಶುದ್ಧಿ, ಗೈಮೆ ಮೈಮೆ ಧರ್ಮ ಕರ್ಮಗಳ ರೋಮ ಹರ್ಷಕ ಸಜೀವ ವೃತ್ತಾಂತ ಕಥನವೇ ಎಂದು ಪುರಾಣಗಳ ಇತಿ ಕರ್ತವ್ಯಾಂಶವನ್ನು ಭಾರತದಲ್ಲಿ ನಿರೂಪಿಸಲಾಗಿದೆ. ಪುರಾಣ ತಿಳಿಯದೆ ಮನುಷ್ಯನ ಜ್ಞಾನ ಪೂರ್ಣವಾಗುವದಿಲ್ಲ. **''ನೋ ಚೇತ್ ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿ ಚಕ್ಷಣಃ''** ಎಂದು ಸಾರಿದ್ದಾರೆ. **''ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪ ಬೃಂಹಯೇತ್''** ಭಾರತ ಪುರಾಣಗಳ ಸಹಾಯದಿಂದಲೇ ವೇದವಾಕ್ಯದಲ್ಲಿ ಅಡಕವಾದ ರಹಸ್ಯಾರ್ಥ ಸ್ವಾರಸ್ಯವನ್ನು ಬೆಳಕಿಗೆ ತರಬೇಕು. ನಾಲ್ಕು ವೇದ ಓದಿದ್ದರೂ ಪುರಾಣ ಪರಿಶೀಲನೆ ಮಾಡಿರದಿದ್ದರೆ ಅಂಥ ಮನುಷ್ಯ ನನಗೆ ಅಪಾರ್ಥ ಮಾಡಬಹುದೆಂದು ವೇದ ಕೂಡ ಬೆದರುತ್ತದಂತೆ. ಆ ವೇದಾರ್ಥ ನಿರ್ಣಯಕ್ಕೆ ಅನುಕೂಲ ಉಪಯೋಗವಾಗಲಿ ಎಂದು ವೇದವ್ಯಾಸರು ಹದಿನೆಂಟು ಪುರಾಣ ರಚಿಸಿ ಆ ಬಳಿಕ ಇತಿಹಾಸವೆಂದು ಕರೆಯಲ್ಪಡುವ ಮಹಾಭಾರತವನ್ನೂ ಹದಿನೆಂಟು ಪರ್ವಾತ್ಮಕವಾಗಿಯೇ ರಚಿಸಿದರು. ಇದೇ ಮಾತನ್ನು -

"ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀ ಸುತಃ ॥
ಭಾರತಾಖ್ಯಾನಮತುಲಂ ಚಕ್ರೆ ತದುಪಬೃಂಹಿತಂ ॥"
ಎಂದು ದೇವೀ ಭಾಗವತದಲ್ಲಿ ಹೇಳಲಾಗಿದೆ. ಇದು ಪುರಾಣ ಸಾಮಾನ್ಯದ ಮಾತಾಯಿತು.

## ವಿಷ್ಣು ಪುರಾಣದ ವೈಶಿಷ್ಟ್ಯ

ಈ ವಿಷ್ಣು ಪುರಾಣ ಒಂದು ಗ್ರಂಥವಾದರೂ ರಸಗ್ರಂಥಿಯಾಗಿದೆ. ಇದರ ಗುರಿ ಕೈವಲ್ಯವಾದರೂ ಗತಿ ಸಾಹಿತ್ಯಕವಾಗಿದೆ. ಮೋಕ್ಷೋಪಾಯವನ್ನು ಕೂಡ ದ್ರಾಕ್ಷಾಪಾಕದಲ್ಲಿಯೇ ನಿರೂಪಿಸುವ ಇದರ ವಾಚೋವೀಚಿಗಳಲ್ಲಿ ಮಧು ಮಾಧುರಿಯು ಮಡುಗಟ್ಟಿ ನಿಂತುಕೊಂಡಿರುತ್ತದೆ. ಯುಗ ಯುಗಗಳ ಅನುಭವದ ಆಗರವೆಲ್ಲ ಇಲ್ಲಿಯ ಕಥಾ ಸಾಗರದಲ್ಲಿ ತುಳುಕಿ ತೆರೆ ತೆರೆದಿದೆ. ಇದರ ಪ್ರಕೃತಿ ಪುರಾಣದ್ದಾದರೂ ಆತ್ಮ ಕಾವ್ಯಮಯವಾಗಿದೆ. ಇದರ ಮಾತಿನಲ್ಲಿ ಸಾಹಿತ್ಯವಿದ್ದರೆ ರೀತಿಯಲ್ಲಿ ಸಂಗೀತವಿದೆ. ಭಾವ ಸಂಭೃತವಾದ ಇದರ ಕಾವ್ಯಗಂಧಿ ಪದ್ಯ ಪದ್ಧತಿಯಿಂದ ಇಲ್ಲಿಯ ವೇದಾಂತ ವೇದಿಕೆಯಲ್ಲಿಯೂ ರಸದ ರಂಗಸ್ಥಲವೊಂದು ಏರ್ಪಟ್ಟಿದೆ. ಇಲ್ಲಿಯ ಅನೇಕ ದೃಶ್ಯಗಳು ನಾಟಕೀಯ ಹದ ಹವಣುಗಳಿಗೆ ಹೊಂದಾಣಿಕೆ ಯಾಗುವಷ್ಟು ಸುಸಂಬದ್ಧ ಘಟನಾ ಚಮತ್ಕೃತಿಗಳಿಂದ ಪೂರ್ಣವಾಗಿವೆ.

ಆ ನಾಟ್ಯ ಸಂವಿಧಾನಗಳಲ್ಲಿಯೂ ವಾಸ್ತವಿಕತೆ ಎದ್ದು ತೋರುತ್ತದೆ. ಈ ಎಲ್ಲ ನಾಟ್ಯಕಥಾ ಸಂದರ್ಭಗಳ ಜೀವಾಳವಾಗಿ ಅನುಭವ ಅನುಸ್ಯೂತವಾಗಿದೆ. ಹೀಗೆ ನಾಟಕೀಯ ಸನ್ನಿವೇಶ ಘಟನಾಚಮತ್ಕೃತಿ, ಅನುಭೂತಿ ಪರಂಪರೆ, ಮಾತಿನಮೋಡಿ, ಗೀತ ಗುಂಜಾರವ, ಹಾಗೂ ಭಾವ ನಿರ್ಭರತೆಗಳೆಲ್ಲ ಸತ್ಯ ತತ್ವಗಳ ಹಿಮ್ಮೇಳವಾಗಿ ಇದರ ಒಮ್ಮೊ ಹಮ್ಮುಗೆಯಲ್ಲಿ ಹೊಂದಿಕೊಂಡು ಬಂದದ್ದರಿಂದ ಇದೊಂದು ಕಾವ್ಯಶಾಸ್ತ್ರ ವಿನೋದವಾಗಿದೆ. ವೇದಾಂತ ಕಾವ್ಯವಾಗಿದೆ. ತತ್ವಗೀತವಾಗಿದೆ. ಸತ್ಯ ಸಾಹಿತ್ಯವಾಗಿದೆ. ಸೌಂದರ್ಯ ಸಂಹಿತೆಯಾಗಿದೆ. ರಸದ ಉಪನಿಷತ್ತಾಗಿದೆ. ನಿರಂಕನಾಟಕವಾಗಿದೆ. ಭಾವಗೀತೆಗಳ ಮಧುರ ಸಂಗ್ರಹವಾಗಿದೆ. ಗಹನವಾದ ತತ್ವಗಳನ್ನು ದೇವಾಧಿ ದೇವತೆಗಳ, ದೊಡ್ಡವರ, ಭಕ್ತರ ಅನುಭವದ ಸತ್ವಯುತವಾದ ಹಿನ್ನೆಲೆಯಲ್ಲಿ ಸರಸ ಸುಂದರವಾಗಿ ನಿರೂಪಿಸಿದ್ದರಿಂದ ಉದ್ದೇಶವಿಲ್ಲದಿದ್ದರೂ ಕಥಾತಂತ್ರ ಇಲ್ಲಿ ಸಿದ್ಧಿಯನ್ನು ಪಡೆದು ನಿಂತಿದೆ.

ಹಿಂದಿನ ಕಾಲದ ಜನರ ಬದುಕಿನ ವೈಚಿತ್ರ್ಯ, ತ್ಯಾಗ-ತಿತಿಕ್ಷೆ, ರಾಗ-ವಿರಾಗ ಭೋಗ-ಯೋಗಗಳು ಈ ಪುರಾಣ ಪುರುಷರ ವಾಸ್ತವ ಜೀವನದಲ್ಲಿಯೇ ಕಥೆ ಕಾದಂಬರಿಗಳ ಅದ್ಭುತ ರಮ್ಯತೆ ಸತ್ಯಾರ್ಥವಾಗಿ ತಲೆದೋರುವಂತೆ ಮಾಡುತ್ತವೆ. ನಮ್ಮ ಕಲ್ಪನಾ ಕೈಲಾಸದ ಯಕ್ಷ ಮಂದಾರಗಳೆಲ್ಲ ಅಲ್ಲಿಯ ನಿತ್ಯಾನುಭೂತಿಯ ಸತ್ಯಸಂಗತಿ ಗಳಾಗಿ ಅರಳಿ ನಿಂತಿದುದರಿಂದ ನಮ್ಮ ಮಿತಮತಿಗೆ ಅವೆಲ್ಲ ಕಟ್ಟು ಕತೆಗಳಂತೆ ಕಾಣುತ್ತವೆ.

ಆದರೆ ಅವುಗಳು ಕಟ್ಟು ಕತೆಯಂತಿದ್ದರೂ ಹುಟ್ಟು ಮಾತ್ರ ಕಾಲ್ಪನಿಕವಲ್ಲ. ಆದುದರಿಂದಲೇ ಅವುಗಳಲ್ಲಿಯ ಎಷ್ಟೋ ರಚನೆಗಳು ಕಥಾ ಲಕ್ಷಣದ ತಂತ್ರ ತೂಕಗಳಿಗೆ ಹೊಂದಿಕೆಯಾಗದೆ ಉಳಿದಿರುವವು.

ದಿವ್ಯ ಜೀವನದ ಬಾನಗಲವಾದ ಬದುಕನ್ನೆಲ್ಲ ಅಪ್ಪಿ ನಿಂತಿರುವ ವಿರಾಟ್ ಸತ್ಯವನ್ನು ಗುರುತಿಸುವದು ಸಂಕ್ಷೇಪ ಶಾರೀರಕ್ಕೆ ಸೆರೆಯಾಗಿ ಸೋತು ಸವೆದು ನಿಂತ ಶೀರ್ಣಸತ್ಯಾಪರೋಕ್ಷಿಗಳಾದ ನಮ್ಮಂಥವರ ಬಡಕಲ ಬುದ್ಧಿಗೆ ಹೇಗೆ ಸಾಧ್ಯವಾದೀತು ?

ಭಗವಂತನ ವಿಶ್ವರೂಪವನ್ನು ಕಾಣಲರಿಯದ ಅಂಧಪುತ್ರನಾದ ದುರ್ಯೋಧನನು ಪರಮಾತ್ಮನ ಆ ಬಹುರೂಪಗಳನ್ನೆಲ್ಲ ಇದೊಂದು ಇಂದ್ರಜಾಲವೆಂದು ಜರಿದು ಚೀರಿದಂತೆ ಮಹಾ ಪುರುಷರ ತ್ಯಾಗ ಜೀವನದ ಯೋಗ ಯಾಗಗಳ ದುರಂತದೀಪ್ತಿ, ಸುಖಾಂತ ವಿರಕ್ತಿ, ತ್ಯಾಗಮುಖ ಭೋಗ, ರಾಗಾನುವರ್ತಿ ವಿರಾಗ, ಪ್ರಾಣಾರ್ಪಣೆಯ ಔದಾರ್ಯ ಮೊದಲಾದ ಸದ್ಗುಣಗಳು ಅತ್ಯುಚ್ಚತೆಯ ಚರಮ ಸೀಮೆಯಲ್ಲಿ ಸತ್ಯಾಪಿತವಾಗುತ್ತಲಿರುವದನ್ನು ಕಂಡೂ ಕಾಣದ, ಕೇಳಿಯೂ ನಂಬಲಾರದ ನಾವು ಅದನ್ನು ''ಪುರಾಣ ಪ್ರಪಂಚ'' ಅರ್ಥಾತ್ ಸುಳ್ಳಿನ ಸಂಸಾರ ಎಂದು ಉಪೇಕ್ಷೆಯಿಂದ ನೋಡುತ್ತೇವೆ. ಆದರೆ ಭಾವುಕ ದೃಷ್ಟಿಯಿಂದ ಆ ದೈವಿಕ ಜೀವನದ ಯಥಾರ್ಥ ಚಿತ್ರವನ್ನು ಹೃದಯ ದ್ರಾವಕವಾದ ರೀತಿಯಲ್ಲಿ ನಿರೂಪಿಸುವ ಭಾಗವತ, ವಿಷ್ಣು, ಪದ್ಮ, ಮತ್ಸ್ಯ, ವರಾಹ ಪುರಾಣ, ಭಾರತ, ಹರಿವಂಶಾದಿ ಗ್ರಂಥಗಳನ್ನು ಪರಕಿಸಿದಾಗ ಅಲ್ಲಿಯ ಬೀರ ಧೀರ, ಸಾರಶೃಂಗಾರ, ಅಪಾರ ಕರುಣೆ, ಅಸೀಮ ವಾತ್ಸಲ್ಯ, ಮಧುರಭಕ್ತಿ, ವಿನಯ ವಿರಕ್ತಿಗಳನ್ನು ಕಂಡು ಮನಸ್ಸು ಬೆಕ್ಕಸ ಬೆರಗಾಗಿ ನಿಲ್ಲುತ್ತದೆ.

ಭಾಗವತದ ದಶಮಸ್ಕಂದದಲ್ಲಿ ಬರುವ ಕೃಷ್ಣಕತೆಯೇ ಇಲ್ಲಿ ವಿಷ್ಣುಪರ್ವದಲ್ಲಿ ಅವಿರತ ರಸದ ಹೊನಲಾಗಿ ಹರಿದಿದೆ. ಅದನ್ನು ಓದಿದಾಗ ನಮ್ಮ ಮನದ ಕಾಮ ಕಳೆಯುತ್ತದೆ. ಕಲ್ಮಷ ತೊಳೆಯುತ್ತದೆ. ಭಕ್ತಿ ಕುದುರುತ್ತದೆ. ವೇದೋಪನಿಷತ್ತುಗಳಲ್ಲಿ ಹೇಳಿರುವ ತಾತ್ವಿಕ ಉಪದೇಶಕ್ಕೆ ಸಜೀವ ದೃಷ್ಟಾಂತವಾಗಿ ಇಲ್ಲಿ ಬರುವ ಸಾತ್ವಿಕ ಜೀವನಗಳ ಬದುಕಿನ ಬಗೆ, ಬಾಳಿನ ಪರಿಗಳು ಧ್ಯೇಯ ನಿಷ್ಠವಾದ ಆದರ್ಶ ಜೀವನವನ್ನು ಬದುಕ ಬೇಕೆನ್ನುವವರಿಗೆ ಪ್ರೇರಣಾ ಕಾರಣವಾಗುತ್ತವೆ. ಸ್ಫೂರ್ತಿ ಪ್ರಚೋದಕವಾಗುತ್ತವೆ. ಶ್ರೀ ವೇದವ್ಯಾಸಮುನಿಗಳಿಂದ ರಚಿತವಾದ ಹದಿನೆಂಟು ಪುರಾಣಗಳಲ್ಲಿ ವಿಷ್ಣು ಪುರಾಣವು ವೈಶಿಷ್ಟ್ಯಪೂರ್ಣವಾಗಿದೆ. ಇದರಲ್ಲಿ ಆರು ಅಂಶಗಳಿದ್ದು ಪ್ರತಿಯೊಂದು ಅಂಶದಲ್ಲಿಯೂ ಬೇರೆ ಬೇರೆ ದೃಷ್ಟಿಯಿಂದ ಭಿನ್ನ ಭಿನ್ನ ಸನ್ನಿವೇಶ ಮತ್ತು ಉದಾಹರಣೆಗಳ ಮೂಲಕ ವಿಷ್ಣುವಿನ ಸರ್ವೋತ್ತಮತ್ವವನ್ನು ಪ್ರಸ್ತಾಪಿಸಲಾಗಿದೆ.

ಈ ಸಮಗ್ರ ಪುರಾಣದ ಬಂಧವು ಬಂಧುರವೂ ವಿಶಿಷ್ಟತರಹದ್ದೂ ಆಗಿದೆ. ಇದರಲ್ಲಿ ಬಿಗುವಿದ್ದರೂ ಕಾಠಿಣ್ಯವಿಲ್ಲ. ಶೈಲಿಯಲ್ಲಿ ಸಾರಲ್ಯವಿದ್ದರೂ ಶೈಥಿಲ್ಯವು ಎಲ್ಲಿಯೂ ಗೋಚರಿಸುವದಿಲ್ಲ. ತತ್ವ, ಕತೆ, ಉಪದೇಶ ಎಲ್ಲವೂ ಒಂದಕ್ಕೊಂದು ಪೂರಕವಾಗಿ ಹೊಂದಿಕೊಂಡು ಬರುವದರಿಂದ ಶುಷ್ಕತೆ ಅಥವಾ ರಂಜನಾಲಾಘವಗಳಿಗೆ ಎಲ್ಲಿಯೂ ಅನುವು ದೊರೆತಿಲ್ಲ.

ಇಲ್ಲಿಯ ಕವಿದೃಷ್ಟಿಗೆ ಮತಾಂಧ್ಯವಿಲ್ಲ. ಶಬ್ದಾಡಂಬರದ ಷೋಕಿಯಿಲ್ಲ. ಪ್ರಾಸದ ವ್ಯಾಮೋಹವಿಲ್ಲ. ಪ್ರೌಢಿಮೆಯ ಹಂಬಲವೂ ಇಲ್ಲ. ಹಾಗೆಂದು ಭಾಷೆಯು ನಿಸ್ಸತ್ವ

ನೀರಸವೂ ಆಗಿಲ್ಲ. ಗೂಢ ಗಂಭೀರವಾದ ಭಾವನೆಗಳನ್ನೆಲ್ಲ ಸಮರ್ಥ ರೀತಿಯಿಂದ ಸುಲಲಿತವಾಗಿಯೇ ಸರಳ ಶಬ್ದಗಳಲ್ಲಿ ಮೂಡಿಸುವ ಜಾಣ್ಮೆಯು ಈ ಪುರಾಣದಲ್ಲಿ ಅಪರೂಪವಾಗಿ ತೋರಿಬರುತ್ತದೆ.

ಇದರ ಪಾಕವು ದ್ರಾಕ್ಷಾಪಾಕ ವಾಗಿದ್ದರೂ ಎಂಥೆಂಥ ಸೂಕ್ಷ್ಮಾತಿ ಸೂಕ್ಷ್ಮವಾದ ಗಹನ ತತ್ವನಿರೂಪಣೆಯಲ್ಲಿಯೂ ಇಲ್ಲಿಯ ಸರಳ ಸರಣಿಯು ತತ್ತರಿಸುವದಿಲ್ಲ. ಅದರಂತೆ ಮನೋಜ್ಞವಾದ ರಸ ಸನ್ನಿವೇಶಗಳ ಚಿತ್ರಣದಲ್ಲಿ ಶುಷ್ಕವಾಗಿ ಸಂದರ್ಭ ಸೌಂದರ್ಯವನ್ನು ಅಂದಗೆಡಿಸುವದೂ ಇಲ್ಲ. ಇಂಥ ತೂಕದ ರಸಪಾಕದ ವಾಕ್ಸಿದ್ಧಿಯು ಪೌರಾಣಿಕ ವಾಙ್ಮಯದಲ್ಲಿ ಕ್ವಚಿತ್ತಾಗಿ ಗೋಚರಿಸುತ್ತದೆ.

ಆರು ಅಂಶಗಳಲ್ಲಿ ತುಂಬಿ ಸೂಸಿದ ಈ ವಿಷ್ಣು ಪುರಾಣವನ್ನು ಪರಾಶರರು ಮೈತ್ರೇಯ ಮುನಿಗೆ ನಿರೂಪಿಸಿದ್ದಾರೆ. ಪರಾಶರರು ಎಲ್ಲ ಪುರಾಣಗಳನ್ನು ಬರೆದ ವ್ಯಾಸರ ಲೌಕಿಕ ತಂದೆ. ಮಗನಲ್ಲಿ ಬಿತ್ತರಗೊಂಡ ಪುರಾಣ ಕಥನ ಕಲೆಯ ಮೂಲ ಸ್ರೋತದ ಉಗಮಾಗಮದ ಗಂಗೋತ್ರಿಯೇ ಈ ಪರಾಶರ.

ವಶಿಷ್ಠ ಹಾಗೂ ಪುಲಸ್ತ್ಯ ಮುಂತಾದ ಬ್ರಹ್ಮರ್ಷಿಗಳ ಅನುಗ್ರಹದಿಂದ ಪ್ರತಿಭಾತ ಪರಾವರರಾದ ಅವರು ತಮ್ಮಲ್ಲಿ ಜಿಜ್ಞಾಸೆಯಿಂದ ಬಂದ ಮೈತ್ರೇಯರಿಗೆ ಶ್ರೀ ವಿಷ್ಣುವಿನ ಮಹಾ ಮಹಿಮೆಗಳನ್ನು ರಸಾಳ ವಾಣಿಯಿಂದ ನಿರೂಪಿಸಿದ್ದಾರೆ. ಸರ್ಗ, ಪ್ರತಿಸರ್ಗ ವಂಶ, ಮನ್ವಂತರ ಹಾಗೂ ರಾಜಋಷಿ ಮನೆತನಗಳ ಚರಿತ್ರೆ ಇವೈದೂ ಪುರಾಣ ಲಕ್ಷಣಗಳು ಅಲ್ಲಲ್ಲಿ ಆಪಾತತಃ ಪುನರುಕ್ತವಾದಂತೆ ತೋರಿದರೂ ಸೂಕ್ಷ್ಮವೈಲಕ್ಷಣ್ಯೋಪೇತವಾಗಿರುತ್ತವೆ. ವಿಷ್ಣುಪುರಾಣದ ಪ್ರಥಮಾಂಶದಲ್ಲಿಯೇ ಈ ಪುರಾಣದ ಪಂಚಲಕ್ಷಣಗಳ ಸಮನ್ವಯವು ಸಮಂಜಸವಾಗಿ ಆದದ್ದು ಕಂಡು ಬರುತ್ತದೆ.

ಹರಿವಂಶ ಭಾಗವತ ಮುಂತಾದ ಪುರಾಣಗಳೆಲ್ಲವೂ ವಿಷ್ಣುಪುರಾಣದ ಬುಡಕಟ್ಟಿಗೆ ಸೇರಿದವುಗಳೇ. ಹರಿವಂಶ ಹಾಗೂ ವಿಷ್ಣು ಪುರಾಣಗಳಲ್ಲಿ ಉಭಯ ಸಾಧಾರಣವಾದ ನೂರಾರು ಶ್ಲೋಕಗಳು ಏನೂ ವ್ಯತ್ಯಾಸವಿಲ್ಲದೇ ಏಕಾನುಪೂರ್ವಿವುಳ್ಳವುಗಳಾಗಿರುತ್ತವೆ. ಹಲವಾರು ಪದ್ಯಗಳಲ್ಲಿ ಅಲ್ಪಸ್ವಲ್ಪ ಶಬ್ದ ವ್ಯತ್ಯಾಸವು ಕಂಡುಬರುತ್ತದೆ. ಆದರೆ ವಿಷ್ಣು ಪುರಾಣದರೀತಿ ಭಾಗವತದಷ್ಟು ಕಠಿಣವೂ ಅಲ್ಲ. ಹರಿವಂಶದಷ್ಟು ಸುಲಭವೂ ಅಲ್ಲ. ತನ್ನದೇ ಆದ ಸುವರ್ಣ ಮಾಧ್ಯಮವನ್ನು ಕಂಡುಕೊಂಡು ಈ ಪುರಾಣವು ವೈಶಿಷ್ಟ್ಯ ಪೂರ್ಣವಾಗಿ ತನ್ನ ತನವನ್ನು ಮೆರೆದಿದೆ. ಭಾಷಾ ಬಂಧ ಛಂದಗಳ ದೃಷ್ಟಿಯಿಂದ ಇದು ಹರಿವಂಶಕ್ಕೆ ಹತ್ತು ಗಡೆಯಾದರೆ ತತ್ವ ಪ್ರಮೇಯಗಳ ದೃಷ್ಟಿಯಿಂದ ಭಾಗವತದ ಬಳಗಕ್ಕೆ ಇನ್ನೂ ಸಮೀಪದ್ದಾಗಿ ತೋರುತ್ತದೆ.

ಸಾಮಾನ್ಯವಾಗಿ ಸೃಷ್ಟಿಕ್ರಮವು ವೈಷ್ಣವ ಪುರಾಣಗಳ ಕ್ರಮಕ್ಕೆ ಹೊಂದಿಕೊಂಡಿದೆ. ಆದರೆ ಅದರಲ್ಲಿಯೂ ವೈಶಿಷ್ಟ್ಯವಿಲ್ಲದೆ ಇಲ್ಲ. ಪ್ರಥಮ ಅಂಶದಲ್ಲಿ ಬರುವ ಪ್ರಹ್ಲಾದ, ಧ್ರುವ, ವೇನ, ಕಂಡು, ಪ್ರಾಚೇತಸ ಮುಂತಾದವರ ಕತೆಗಳ ಅತ್ಯಂತ ಉದ್ಬೋಧಕವಾಗಿವೆ. ಅದರಲ್ಲಿಯೂ ಪ್ರಹ್ಲಾದ ಚರಿತ್ರೆಯು ವಿಷ್ಣು ಪುರಾಣದಷ್ಟು ಸುಮನೋಹರವಾಗಿ

ಬೇರಾವ ಪುರಾಣದಲ್ಲಿಯೂ ಚಿತ್ರಿಸಲ್ಪಟ್ಟಿಲ್ಲ. ಬಗೆ ಬಗೆಯ ಕಷ್ಟ ನಷ್ಟಗಳ ಹಾಗೂ ವಿಚಿತ್ರ ಹಿಂಸೆಯ ಪಾವಕ ಪರೀಕ್ಷೆಯಲ್ಲಿ ಪುಟಕ್ಕೆ ಹಾಕಿದರೂ ಕಂದದೆ ಕುಂದದೆ ಅಪ್ಪಟ ಅಪರಂಜಿಯಂತೆ ರಾಜಿಸಿದ ಪ್ರಹ್ಲಾದನ ಭಕ್ತಿಯ ಅಗ್ನಿ ದಿವ್ಯವು ಇಲ್ಲಿ ಉದಾತ್ತವಾಗಿದೆ.

ಎರಡನೇ ಅಂಶದಲ್ಲಿ ಬರುವ ಭೂಗೋಲ ಖಗೋಲ ನಿರೂಪಣೆಯು ಶಾಸ್ತ್ರೀಯ ಪ್ರಜ್ಞೆ ಹಾಗೂ ವೈಜ್ಞಾನಿಕ ದೃಷ್ಟಿಕೋನಕ್ಕೆ ಅನುಗುಣವಾಗಿ ಉದ್ಬೋಧಕವಾಗಿದೆ. ಭಾಗವತಾದಿ ವೈಷ್ಣವಪುರಾಣಗಳಿಗೆ ಸಂವಾದಿಯಾಗಿದೆ. ಈ ಅಂಶದ ಕೊನೆಯ ಭಾಗದಲ್ಲಿ ಬರುವ ಜಡಭರತ, ಸೌವೀರಸಮ್ರಾಟ, ಋಭು, ನಿದಾಘ ಮುಂತಾದವರ ತಾತ್ವಿಕ ಕಥೆಗಳು, ಕೌತುಕದ ಕಪ್ಪೆಚಿಪ್ಪಿನಲ್ಲಿ ತತ್ವ ಮೌಕ್ತಿಕಗಳನ್ನು ಅರಳಿಸಿ ತೋರಿಸುವ ಚಮತ್ಕಾರಿಕ ಸನ್ನಿವೇಶಗಳಾಗಿವೆ. ಸಿದ್ಧಾಂತ ಬೋಧನೆಗಾಗಿ ಅಲ್ಲಲ್ಲಿ ಪುರಾಣ ಸಾಹಿತ್ಯದಲ್ಲಿ ವ್ಯಾಸರು ಬಳಸುವ ವಾಙ್ಮಯೀನ ತಂತ್ರಗಳಲ್ಲಿ ಪ್ರಯೋಗ ಸಿದ್ಧಿಯ ದ್ಯೋತಕ ಸನ್ನಿವೇಶಗಳೂ ಆಗಿವೆ.

ಮೂರನೇ ಅಂಶದ ಮೊದಲು ಬರುವ ಸಪ್ತ ಮನ್ವಂತರಗಳ ಕ್ರಮಣಕ್ರಮವು ಮಾಮೂಲಾಗಿದ್ದರೂ ಸೂರ್ಯನ ಸಂಸಾರದ ಚಿತ್ರ ಹರಿವಂಶದಂತೆ ಇಲ್ಲಿಯೂ ಮನೋಜ್ಞವಾಗಿ ಮೂಡಿಬಂದಿದೆ. ಪ್ರತಿಯುಗದ ವ್ಯಾಸಾವತಾರದ ನಿರೂಪಣವು ಅಪೂರ್ವವಾಗಿದೆ. ಇದೇ ಅಂಶದಲ್ಲಿ ಮುಂದೆ ಬರುವ ವೇದಶಾಸ್ತ್ರ ಪುರಾಣ ವಿಭಾಗ ವ್ಯವಸ್ಥಾ ಕ್ರಮಗಳೂ ಯಾಜ್ಞ್ಯವಲ್ಕ್ಯರ ಗುರುದ್ರೋಹ ಹಾಗೂ ವೇದೋದ್ವಮನದ ಪ್ರಕರಣಗಳು ಸರ್ವಪುರಾಣ ಸಾಮಾನ್ಯವಾಗಿವೆ.

ಆದರೆ ಆ ಅಂಶದಲ್ಲಿಯ ಯಮಗೀತೆಯು ಮಾತ್ರ ವಿಶಿಷ್ಟ ರೀತಿಯಿಂದ ವಿಷ್ಣು ಪಾರಮ್ಯವನ್ನು ಪ್ರತಿಪಾದಿಸುತ್ತವೆ. ಭಗವದ್ಗೀತೆಯಂತೆ ಇವೆಲ್ಲ ಮಾರ್ಮಿಕ ಪದ್ಯಗಳು ವಾಚಕರಿಗೆ ಬಾಯಿಪಾಠ ಮಾಡಲಿಕ್ಕೆ ಯೋಗ್ಯವಾಗಿವೆ. ಅದಕ್ಕಾಗಿ ಆ ಮೂಲ ಪದ್ಯಗಳನ್ನೂ ಇದರಲ್ಲಿ ಕೊಟ್ಟು ಪ್ರತಿಪದದ ಅರ್ಥವನ್ನು ಬರೆಯಲಾಗಿದೆ. ಇದರಂತೆ ಇದೇ ಅಂಶದಲ್ಲಿರುವ ಕೆಲವು ಮಾರ್ಮಿಕ ಸುಭಾಷಿತಗಳು ನಿತ್ಯ ವ್ಯವಹಾರದಲ್ಲಿ ಉಪಯುಕ್ತವೂ ಆಗಿವೆ. ಮಾರ್ಗದರ್ಶಕವೂ ಆಗಿವೆ. ಅಂಥಪದ್ಯಗಳು ಜೀವನ ಪಥದ ಪಾಥೇಯವಾಗಬಲ್ಲಂಥವುಗಳು. ಆ ಎಲ್ಲ ಪಠಣೀಯ ಶ್ಲೋಕಗಳನ್ನು ಅರ್ಥ ಸಹಿತವಾಗಿಯೇ ಇದರಲ್ಲಿಯೇ ಕೊಡಲಾಗಿದೆ. ಇದರಲ್ಲಿ ಶ್ರಾದ್ಧ, ಶಯನ, ಭೋಜನಾದಿ ಸ್ವಕರ್ಮ ಸ್ವಧರ್ಮ ವಿಷಯ ನಿರೂಪಣೆಯೂ ಬೋಧಪ್ರದವಾಗಿ ಬಂದಿದೆ.

ಈ ಮೂರನೇ ಅಂಶದಲ್ಲಿ ಜೈನ, ಬೌದ್ಧ ಮುಂತಾದ ಪಾಖಂಡ ಮತಗಳ ಖಂಡನೆಯು ಪ್ರಾಮುಖ್ಯವಾಗಿ ಬಂದಿದೆ. ವಿವಿಧ ಕಥಾ ದೃಷ್ಟಾಂತಗಳಿಂದ ಪಾಖಂಡ ಮತದ ಹೇಯತೆಯನ್ನು ಹೇಳಿ ಅಂಥ ಪಾಖಂಡಿಗಳ ಸಂಪರ್ಕವೂ ಎಂಥ ಅನರ್ಥಕ್ಕೆ ಕಾರಣವಾಗುವದೆಂಬುದನ್ನು ಸಶಕ್ತವಾದ ನಿಖರ ಭಾಷೆಯಲ್ಲಿ ನಿರೂಪಿಸಿದ್ದಾರೆ. ಜೈನ ಬೌದ್ಧಾದಿ ನಾಸ್ತಿಕ ಮತಗಳ ದಾಳಿಗಳಿಂದ ಹಿಂದೂಧರ್ಮವನ್ನು ಕಾಪಾಡಲಿಕ್ಕೆ ಲೆಕ್ಕಣಿಕೆಯನ್ನು ಖಡ್ಗಧಾರೆಗೆ ತೀಡಿ ಕಿಡಿಯಂತಹ ನುಡಿಗಳನ್ನು ಆಡುವದು

ಕಟುವೆನಿಸಿದರೂ ವ್ಯಾಸರ ಸನಾತನ ಧರ್ಮ ರಕ್ಷಣೆಯ ದೀಕ್ಷಾದಾಕ್ಷ್ಯಗಳು ಅದರಿಂದ ವ್ಯಕ್ತವಾಗುತ್ತವೆ. ಈ ಹಿನ್ನೆಲೆಯಲ್ಲಿ ಬರುವ ಶತಧನ್ವರಾಜದಂಪತಿಗಳ ಜನ್ಮ ಜನ್ಮಾಂತರದ ಪರಿಭ್ರಮಣ ಸಂಸಾರಕ್ರಮಣಗಳ ಕಥೆಗಳು ನಾಸ್ತಿಕ ಅವೈದಿಕ ಸಂಪ್ರದಾಯಗಳ ಸ್ನೇಹ ಸಂಪರ್ಕಗಳು ಎಂಥ ಅನರ್ಥದಲ್ಲಿ ಪರಿಣತಿಯನ್ನು ಹೊಂದುವವೆಂಬುದಕ್ಕೆ ನಿದರ್ಶನವಾಗಿವೆ.

ನಾಲ್ಕನೇ ಅಂಶದಲ್ಲಿ ಅನೇಕ ರಾಜ ಮನೆತನಗಳ ಇತಿಹಾಸವು ಬರುತ್ತದೆ. ಮನುಕುಲವು ಬಿತ್ತರಗೊಂಡ ಬಗೆಯನ್ನು ಅರುಹುತ್ತದೆ. ಸೌಭರಿ, ಸಗರ, ಸುದಾಸ ಖಟ್ವಾಂಗ, ಶ್ರೀರಾಮ ಮುಂತಾಗಿ ಸೂರ್ಯ ಕುಲದ ರಾಜರ್ಷಿಗಳ ಚಾರುಚರಿತ್ರೆಗಳನ್ನು ಚಿತ್ರಿಸಿ ಸೋಮವಂಶದ ಭೂಪಾಲರ ವಂಶವಿಸ್ತಾರವನ್ನೂ ವಿಶಿಷ್ಟ ವ್ಯಕ್ತಿಗಳ ಇತಿಹಾಸವನ್ನೂ ಪ್ರವಾಹಿ ಭಾಷೆಯಲ್ಲಿ ಮೂಲಕಥಾ ಸೌಂದರ್ಯಕ್ಕೆ ಕುಂದಾಗದಂತೆ ಕಲಾತ್ಮಕವಾಗಿ ನಿರೂಪಿಸಲಾಗಿದೆ. ಪುರೂರವ, ಪರಶುರಾಮ, ಕಾಶೀರಾಜ, ರಜಿರಾಜ, ಯಯಾತಿ ಮುಂತಾದ ಕಥೆಗಳ ಸೊಲ್ಲು ಸಾಂಪ್ರದಾಯಿಕವಾದರೂ ಉದ್ದೇಶ ಉದ್ಬೋಧನವಾಗಿದೆ. ಮಾನವೀಯ ಸ್ವಭಾವ ಶೋಧನದ ಮುಖಾಂತರ ಸಂಸ್ಕಾರ ಸಂಪನ್ನ ವ್ಯಕ್ತಿಗಳು ಆತ್ಮಸಾಧನೆಯನ್ನೂ ಮಾಡಿಕೊಂಡು ಶ್ರೇಯಸ್ಸನ್ನು ಪಡೆಯಲಿ ಎಂಬ ಉದ್ದಿಧೀರ್ಷೆಯ ಉತ್ಕಟತೆಯು ಪುಟಪುಟದಲ್ಲಿಯೂ ವ್ಯಕ್ತವಾಗುವದು. ಇದೇ ಅಧ್ಯಾಯದಲ್ಲಿ ಯಾದವ ವಂಶದ ಚಿತ್ರವಿಚಿತ್ರವಾದ ವೃತ್ತಾಂತದ ಸಂಗತಿಗಳು ಹಾಗೂ ಕೃಷ್ಣನವರೆಗೆ ಬೆಳೆದು ಬಂದ ಕ್ಷತ್ರಿಯ ವಂಶದ ವೃಕ್ಷದ ಕುಡಿಮಿಡಿಗಳೂ ಮನುಕುಲವು ಬೆಳೆದು ಬಂದ ದಾರಿಯನ್ನು ತೋರಿಸುತ್ತವೆ.

ಐದನೇ ಅಂಶದ ತುಂಬ ಕೃಷ್ಣ ಕತೆಯು ಮತ್ತು ಸೌಂದರ್ಯದಿಂದಲೂ, ಕೃತಿ ಸಾಧನೆಯಿಂದಲೂ ಮನೋಜ್ಞವಾಗಿ ಮೂಡಿ ಬಂದಿದೆ. ಭೂಮಂಡಲದಲ್ಲಿಯ ಎಲ್ಲ ರಾಜ ಮನೆತನಗಳ ಅರಸರ ಕಥಾಕ್ರೋಢೀಕರಣ ರೂಪವಾದ ನಾಲ್ಕನೇಯ ಅಂಶವು ಭಾಗವತದ ನವಮಸ್ಕಂಧವನ್ನು ಹೋಲುತ್ತಿದ್ದರೆ ಸಂಪೂರ್ಣ ಕೃಷ್ಣಕಥೆಯ ಅವತಾರ ಲೀಲೆಗಳನ್ನೆಲ್ಲ ವಿಶದ ವಿವರವಾಗಿ ತಿಳಿಸುವ ಪಂಚಮಾಂಶವು ಅದೇ ಭಾಗವತದ ದಶಮಸ್ಕಂಧದ ವಿಷಯವನ್ನೊಳಗೊಂಡಿದೆ.

ಈ ಐದನೇಯ ಅಂಶದಲ್ಲಿ ಶ್ರೀ ಕೃಷ್ಣನ ಘನತರವಾದ ವ್ಯಕ್ತಿತ್ವವೂ, ಲೋಕೋದ್ಧರಣ ವ್ಯಸನಿತೆಯೂ, ದೈವಿಕ ಲೀಲಾವಿಸ್ತಾರವೂ ಎದ್ದು ಕಾಣುತ್ತಿದ್ದು ಅವನ ಪ್ರತಿಯೊಂದು ಕೃತಿಯೂ ಮಾತೂ ಹೇಗೆ ಜಗದೋದ್ಧಾರಕ್ಕೆ ಕಾರಣವಾಯಿತೆಂಬುದನ್ನು ತಿಳಿಸಿದೆ. ಶ್ರೀ ಮದ್ಭಾಗವತದಲ್ಲಿ ಶ್ರೀ ಕೃಷ್ಣನ ಶೈಶವದ ಕೃತಿಗಳಷ್ಟೇ ತೀವ್ರಾಭಿನಿವೇಶ ದಿಂದ ಅವನ ಮುಂದಿನ ಅವತಾರ ಕಾರ್ಯಗಳನ್ನೂ ಬಣ್ಣಿಸಲಾಗಿದೆ.

ಆದರೆ ಈ ವಿಷ್ಣುಪುರಾಣದಲ್ಲಿ ಪ್ರಕಟವಾಗಿಯೇ ಶ್ರೀ ಕೃಷ್ಣ ಪರಮಾತ್ಮನು ಲೋಕೋದ್ಧಾರದ ಉದ್ದೇಶದಿಂದ ಪ್ರೌಢ ವಯಸ್ಸಿನಲ್ಲಿ ಮಾಡಿದ ದುಷ್ಟ ಶಿಕ್ಷಣ, ಶಿಷ್ಟ ರಕ್ಷಣ ಮುಂತಾದ ಕಾರ್ಯಗಳನ್ನು ವಿವರವಾಗಿ ಹೇಳಿಲ್ಲ. ಆದರೆ ಅವನ ಮುಗ್ಧ

ವಯಸ್ಸಿನ ಬಾಲ್ಯಲೀಲೆಗಳೇ ದುರುಳರ ದಮನ ಮಾಡಿ ಜಗತ್ಪಾಲನ ರೂಪವಾದ ಮಹೋದ್ದೇಶಕ್ಕೆ ಸಾಧನವಾದ ಬಳಿಕ ಅವನ ತಾರುಣ್ಯದ ಗೈಮೆಗಳು ಲೋಕೋಪಕಾರಕವಾಗಿವೆಯೆಂದು ಹೇಳುವದೇನು ? ಎಂದು ಕೈಮುತ್ಯನ್ಯಾಯದಿಂದ ಸಿದ್ಧಪಡಿಸುವ ಉದ್ದೇಶವಿದೆ. ಈ ವಿಷ್ಣುಪುರಾಣಕ್ಕೆ. ಈ ಐದನೇ ಅಂಶದಲ್ಲಿ ಶ್ರೀ ಕೃಷ್ಣ ಪರಮಾತ್ಮನ ಕೈಶೋರಭಾವದ ಮಧುರ ನಿರೂಪಣೆಯು ಒಳ್ಳೇ ಆಕರ್ಷಕವಾಗಿದೆ. ಮುಂದಿನ ಭಾಗ ಸಂಕ್ಷಿಪ್ತವಾದರೂ ಸಾಂಕೇತಿಕವಾಗಿದೆ.

ಭಾಗವತ ದಶಮಸ್ಕಂಧ ಉತ್ರರಾರ್ಧದಲ್ಲಿ ಬರುವ ಪ್ರೌಢ ವಯಸ್ಸಿನ ಶ್ರೀ ಕೃಷ್ಣನ ಮಹಿಮೆಗಳನ್ನೆಲ್ಲ ಸಂಕ್ಷೇಪಿಸಿ ಮುಖ್ಯ ಮುಖ್ಯವಾದ ಘಟನೆಗಳನ್ನು ಮಾತ್ರ ಆ ಮಹಾ ಪ್ರಭುವಿನ ದೈವೀಶಕ್ತಿಯ ದ್ಯೋತನಕ್ಕಾಗಿ ಸಂಕೇತರೂಪವಾಗಿ ಇಲ್ಲಿ ಚಿತ್ರಿಸಲಾಗಿದೆ.

ವಿಷ್ಣು ಪುರಾಣದಲ್ಲಿ ಬರುವ ಕೃಷ್ಣ ಲೀಲೆಯ ಇನ್ನೊಂದು ವೈಶಿಷ್ಟ್ಯವೆಂದರೆ ಇದರಲ್ಲಿ ಶ್ರೀ ಕೃಷ್ಣನಿಗೆ ಚೋರಜಾರ ಭಾವಗಳ ಸಂಪರ್ಕವೇ ಇಲ್ಲ. ಗೋಕುಲ ವೃಂದಾವನಗಳಲ್ಲಿದ್ದಾಗ ಎಲ್ಲಿಯೂ ಕೃಷ್ಣನು ಹಾಲು ಕದ್ದ, ಮೊಸರು ಮೆದ್ದ ಸುದ್ದಿ ಬರುವುದಿಲ್ಲ. ಬೆಣ್ಣೆ ತುಪ್ಪಗಳನ್ನು ತುಡುಗು ಮಾಡಿ ತೂರಾಡಿ ಸೂರಾಡಿದ ಸಮಾಚಾರವೇ ಇದರಲ್ಲಿಲ್ಲ. ಕೃಷ್ಣನ ಕಿಡಿಗೇಡಿತನದ ಬಣ್ಣನೆ ಇಲ್ಲಿ ಬಂದರೂ ಅದು ಅವನ ಶೌರ್ಯವನ್ನು ಸೂಚಿಸುತ್ತದೆ. ಚೌರ್ಯವನ್ನಲ್ಲ. ಇದರಂತೆ ಇಲ್ಲಿ ಕೃಷ್ಣನ ಕತೆಗೆ ಜಾರತನದ ಕೋಡು ಮೂಡಿಲ್ಲ. ಗೋಪಿಕಾ ಸ್ತ್ರೀಯರೊಡನೆ ಅವನು ರಾಸಕ್ರೀಡೆ ಯನ್ನಾಡಿದರೂ ಅದರಲ್ಲಿ ರಾಗರಜೋಮಾಲಿನ್ಯವಿಲ್ಲ. ಕೃಷ್ಣನ ಕಾಮಕೇಳಿಯ ಸಂಕೇತ ಧ್ವನಿಯಂತಿದ್ದ ಕೊಳಲಿನ ಸದ್ದು ಸೊಲ್ಲುಗಳೂ ಈ ವಿಷ್ಣು ಪುರಾಣದಲ್ಲಿ ಕೇಳಿ ಬರುವುದಿಲ್ಲ. ಶರತ್ ಕಾಲದ ಸುಪ್ರಸನ್ನ ರಾತ್ರಿಯಲ್ಲಿ, ತಿಂಗಳಿನ ಬೆಳಕಿನಲ್ಲಿ, ತಾರುಣ್ಯದ ಅಂಚಿಗೆ ತಲುಪದ ಮುಗ್ಧ ಬಾಲಕನೋರ್ವನ ಸರಳ ಹೃದಯದ ಲೀಲಾ ವಿಲಾಸದ ವರ್ಣನೆ ಇಲ್ಲಿ ಬರುತ್ತದೆ. ಇಲ್ಲಿಯ ರಾಸಕ್ರೀಡಾ ಬಣ್ಣನೆಯಲ್ಲಿ ಪ್ರೇಮವಿದೆ ಕಾಮವಿಲ್ಲ. ಭೋಗ ಇದೆ. ರಾಗ ಇಲ್ಲ. ಸರಸವಿದೆ, ಶೃಂಗಾರವಿಲ್ಲ. ಆಟವಿದೆ. ಬೇಟವಿಲ್ಲ, ರಾಸವಿದೆ. ಆದರೆ ಅದರಲ್ಲಿ ವಾಸನೆ ಇಲ್ಲ. ಚಾಪಲ್ಯವಿದೆ, ಲೌಲ್ಯವಿಲ್ಲ.

ಲೌಲ್ಯಲೇಪವಿಲ್ಲದ ಮುಗ್ಧ ಮಧುರ ಸ್ನೇಹದ ಸುಂದರ ನಿದರ್ಶನವನ್ನು ವಿಷ್ಣು ಪುರಾಣದ ಐದನೇ ಅಂಶವು ನಮ್ಮ ಕಣ್ಣೆದುರಿಗೆ ಇಡುತ್ತದೆ. ಇಂಥ ನಿಷ್ಕಲ್ಮಷ ಕೃಷ್ಣನ ಚರಿತ್ರೆಯನ್ನು ಬಿತ್ತರಿಸಿದ ಈ ವಿಷ್ಣುಪುರಾಣದಲ್ಲಿ ನಿರಪವಾದ ವಾಸುದೇವನ ಶುದ್ಧ ಚಾರಿತ್ರ್ಯದ ಹಿನ್ನೆಲೆಯಲ್ಲಿ ವಿಶ್ವಕ್ಷೇಮಂಕರವಾದ ಶ್ರೀ ಕೃಷ್ಣನ ವಿಭೂತಿ ವ್ಯಕ್ತಿತ್ವವು ಮುದ್ದಾಗಿ ಎದ್ದು ನಿಂತಿದೆ. ಕೊನೆಯದಾದ ಆರನೇ ಅಂಶದ ಪ್ರಾರಂಭದಲ್ಲಿ ಕಲಿಧರ್ಮ ನಿರೂಪಣೆಯು ಮಾರ್ಮಿಕವಾಗಿ ಮೂಡಿ ಬಂದಿದೆ. ಅನಂತರ ಯುಗಧರ್ಮ ಪ್ರಳಯ ವರ್ಣನೆಗಳ ನಂತರ ಖಾಂಡಿಕ್ಯ ಕೇಶಿಧ್ವಜರ ದೃಷ್ಟಾಂತಗಳು ಬೋಧಪ್ರದವಾಗಿ ಬಿತ್ತರಗೊಂಡಿವೆ ಇವರ ಕತೆಯು ಉಜ್ವಲವಾಗಿದ್ದಷ್ಟೇ ಉದ್ಬೋಧಕವೂ ಆಗಿದೆ. ಕರ್ಮಕ್ಕಿಂತ ಜ್ಞಾನಕ್ಕೆ ಪ್ರಾಚೀನ ಭಾರತೀಯರ ಜೀವನದಲ್ಲಿ ಎಂಥ ಉಚ್ಚ

ಸ್ಥಾನಮಾನಗಳಿದ್ದವು ಎನ್ನುವದಕ್ಕೆ ಈ ಸುಂದರ ಕತೆ ಒಳ್ಳೇ ಮಾರ್ಮಿಕ ನಿದರ್ಶನ ಭೂತವಾಗಿದೆ. ಆ ಕಾಲದ ರಾಜಕುಲದವರ ಸರಳ ವೃತ್ತಿ, ಜ್ಞಾನದ ಹಂಬಲ, ನಿರಾಡಂಬರ ಸ್ವಭಾವಗಳಿಗೆ ಇದು ಕನ್ನಡಿ ಹಿಡಿಯುತ್ತದೆ.

ಪರಾಶರರ ಕವಿ ಪ್ರಕೃತಿ ಇಲ್ಲಿಯ ಪುರಾಣ ಪರಿಸರದ ಅಧ್ಯಾತ್ಮವಾತಾವರಣದಲ್ಲಿ ದಮಿತ ಯಮಿತವಾಗಿದ್ದರೂ ಅಲ್ಲಲ್ಲಿ ಹಣಿಕಿಕ್ಕಿ ರಸೋರ್ಮಿಗಳನ್ನು ತರಂಗಿಸಿದೆ. ಸಂದರ್ಭ ದೊರೆತಲ್ಲೆಲ್ಲ ಸೌಂದರ್ಯ ಸೂಸಿದೆ. ಇಂಬಿದ್ದಲ್ಲೆಲ್ಲ ಮಾಧುರ್ಯ ತುಂಬಿ ತುಳುಕಿದೆ. ಆದರೆ ಇಲ್ಲಿಯ ಕವಿ ಕಲ್ಪನೆಯಲ್ಲಿ ರಸಾಲಂಕಾರಗಳೆಲ್ಲವೂ ಭಾವಪೂತವಾಗಿಯೇ ಬರುತ್ತವೆ. ಇಲ್ಲಿ ಮೂಡುವ ಶೃಂಗಾರ ತಿಲಕಕ್ಕೆ ಅಂಗಾರಾನುಷಂಗ ದಿಂದ ಪಾವನ ಮಂಡನ ಸ್ವರೂಪ ಬಂದಿದೆ. ಇಲ್ಲಿಯ ಕಾವ್ಯದ ಕಮನೀಯತೆಗೆ ಅಧ್ಯಾತ್ಮಿಕತೆಯ ರಮಣೀಯತೆಯೂ ಸೇರಿದ್ದರಿಂದ ಓದುವವರ ಮನಸ್ಸಿಗೆ ಒಂದು ತರಹದ ಸಾತ್ವಿಕ ಮೋದಾನುಮೋದಗಳು ಅನುಭವಕ್ಕೆ ಬರುತ್ತವೆ. ಬಲರಾಮ ಕೃಷ್ಣರು ವೃಂದಾವನದ ವನಾಂತರಗಳಲ್ಲಿ ಬಾಲಲೀಲೆಗಳನ್ನಾಡುತ್ತಿರುವಾಗ, ಪ್ರಕೃತಿಯ ಶಾರದೋತ್ಸವವನ್ನು ಬಣ್ಣಿಸುವಾಗ ಪುರಾಣ ಋಷಿಯ ಬಣ್ಣನೆಗೆ ಕಾವ್ಯದ ಗರಿ ಮೂಡುತ್ತದೆ. ಪೌರಾಣಿಕ ಸನ್ನಿವೇಶದ ಹಿನ್ನೆಲೆಗಳ ಹರವು ತೆರವುಗಳಲ್ಲಿ ಪಲ್ವಲ ಪುಷ್ಕರಾಕಾರವಾಗಿ ಮಡುವುಗಟ್ಟುತ್ತ ಮೆಲ್ಲಡಿಯಿಡುತ್ತ ಸಾಗಿದ ಪರಾಶರವಾಣಿಯು ಒಮ್ಮೆಲೇ ಇಲ್ಲಿ ರಸದ ಹೊನಲಾಗಿ ಹೊಮ್ಮಿ ಚಿಮ್ಮಿ ಹರಿದಿದೆ.

**ಮಯೂರಾ ಮೌನಮಾತಸ್ಥುಃ ಪರಿತ್ಯಕ್ತಮದಾ ವನೇ ।**
**ಅಸಾರತಾಂ ಪರಿಜ್ಞಾಯ ಸಂಸಾರಸ್ಯೇವ ಯೋಗಿನಃ ॥**

ಶರತ್ಕಾಲವು ಬಂದ ಕೂಡಲೇ ನವಿಲುಗಳ ಮದ ಇಳಿಯಿತು. ಮುಖ ಮೌನ ತಳೆಯಿತು. ಸಂಸಾರವೆಲ್ಲ ಅಸಾರ ಎಂದು ತಿಳಿದ ಯೋಗಿಗಳು ಮೌನಧಾರಣ ಮಾಡುವುದಿಲ್ಲವೇ! ಅದರಂತೆ.

**ಸರ್ವತ್ರಾತಿ ಪ್ರಸನ್ನಾನಿ ಸಲಿಲಾನಿ ತದಾ ಭವನ್ ।**
**ಜ್ಞಾತೇ ಸರ್ವಗತೇ ವಿಷ್ಣೌ ಮನಾಂಸೀವ ಸುಮೇಧಸಾಂ ॥**

ಈ ಶಾರದೋತ್ಸವದಲ್ಲಿ ಎಲ್ಲೆಡೆಯ ನೀರು ತಿಳಿಗಟ್ಟಿದವು. ಪ್ರಸನ್ನವಾದವು. ಜಗದಗಲ ತುಂಬಿದ ಹರಿಯನ್ನು ಕಂಡ ವಿವೇಕಿಗಳ ಮನಸ್ಸು ಪ್ರಸನ್ನವಾಗುವಂತೆ.

**''ಬಭೂವ ನಿರ್ಮಲಂ ವ್ಯೋಮ ಶರದಾ ಧ್ವಸ್ತ ತೋಯದಂ ।**
**ಯೋಗಾಗ್ನಿದಗ್ಧ ಕ್ಲೇಶೌಘಂ ಯೋಗಿನಾಮಿವ ಮಾನಸಂ'' ॥**

ಶರದ್ ಋತು ಬಂದು ಮುಗಿಲಿನಲ್ಲಿಯ ಮೋಡದ ಮುಸುಕು ಮಸುಕಗಳನ್ನೆಲ್ಲ ತೊಡೆದು ಹಾಕಿತು. ಅದರಿಂದ ಆಗಸವು ತಿಳಿ ನೀಲಿಮೆಯ ಸ್ವಚ್ಛತೆಯಿಂದ ಸೊಗಯಿಸಿತು. ಯೋಗಾಗ್ನಿಯಿಂದ ಮನೋ ಮಾಲಿನ್ಯವೆಲ್ಲ ಸುಟ್ಟು ಹೋದ ಬಳಿಕ ಯೋಗಿಗಳ ಚಿತ್ತವು ನಿರ್ಮಲವಾಗಿ ಶೋಭಿಸುವದಿಲ್ಲವೇ! ಅಂತೆ

ಹೀಗೆ ಈ ವಿಷ್ಣುಪುರಾಣದಲ್ಲಿ ಅಲ್ಲಲ್ಲಿ ಬರುವ ನಿಸರ್ಗ ವರ್ಣನೆಯು ಮಾರ್ಮಿಕವೂ ಆಗಿದೆ. ಮಧುರವೂ ಆಗಿದೆ. ಪ್ರಕೃತಿನಟನೆಯ ಪಟಪರಿವರ್ತನದ ಪ್ರತಿಯೊಂದು ಘಟ್ಟ ಗಳಿಗೆಯಲ್ಲಿಯೂ ಪುಟಿದೇಳುವ ಸೊಬಗಿನ ಸುಗ್ಗಿಯಲ್ಲಿ ನೀತಿಯ ನೆಲೆಗಳನ್ನು ಗುರುತಿಸಿ ಹಿಗ್ಗಿನ ಹಾಡು ಹಾಡುವ ಈ ಆರ್ಷಕವಿಯ ದೃಷ್ಟಿ ಸೃಷ್ಟಿ ಎರಡೂ ಉಚ್ಚಮಟ್ಟದ್ದಾಗಿವೆ. ಕವಿಪ್ರಕೃತಿಯ ಈ ಪುರಾಣ ಮುನಿಯ ಮಾತು ಮಾತುಗಳಲ್ಲಿಯೂ ರಸಭಾವಗಳು ಹೂತು ನಿಂತಿವೆ ಕಾವ್ಯಧರ್ಮ ಇಲ್ಲದ ಬರೀ ಶುಷ್ಕಪುರಾಣದ ನಾಕು ಪದ್ಯ ಬರೆಯೆಂದರೆ ಈ ವಿಷ್ಣುಪುರಾಣದ ರಸಋಷಿಯ ಚೇತನಕ್ಕೆ ಸಾಧ್ಯವೇ ಇಲ್ಲ. ಆಡಿದ್ದೆಲ್ಲ ಗಾಡಿಮೋಡಿಯಾಗಿಯೇ ನುಡಿಯಲ್ಲಿ ಮೂಡಿಬರುತ್ತದೆ.

'ವಿವೇಶ ಗೋಕುಲಂ (ಕೃಷ್ಣಃ)' 'ಕೃಷ್ಣನು ಗೋಕುಲದಲ್ಲಿ ಪ್ರವೇಶ ಮಾಡಿದ' ಎಂದು ಹೇಳುವಾಗ ಋಷಿ ಇಲ್ಲಿಯೇ ಈ ವಾಕ್ಯಕ್ಕೆ ಪೂರ್ಣ ವಿರಾಮ ಕೊಡುವದಿಲ್ಲ. ಆ ಕೃಷ್ಣನು ''ವಿವೇಶ ಗೋಕುಲಂ 'ಗೋಪೀನೇತ್ರ ಪಾನೈಕಭಾಜನಂ' ಗೋಪಿಕೆಯರು ತಮ್ಮ ಬಟ್ಟಲಗಣ್ಣಿನ ಕುಡಿನೋಟದಿಂದ ಎಷ್ಟು ಕುಡಿದರೂ ತಣಿಯದ ತೀರದ ಚೆಲುವಿನ ಚಿಲುಮೆಯಾದ ಕೃಷ್ಣನು ಗೋಕುಲವನ್ನು ಪ್ರವೇಶಿಸಿದ'' ಎಂದು ಹೇಳುತ್ತಾರೆ.

ಆ ಕೃಷ್ಣ ಮಾತನಾಡಿದರೆ ಹತ್ತರಂತಲ್ಲ. ***''ಸತೋದ ಜಲಧ್ವಾನ ಗಂಭೀರಮಿದ ಮುಕ್ತವಾನ್''*** ನೀರು ತುಂಬಿದ ಮೋಡದಂತೆ ಗಂಭೀರವಾಗಿಯೇ ನುಡಿದ ಎಂದು ಲೇಖಿಸುತ್ತಾರೆ. ಉಪಮೆ, ಉತ್ಪ್ರೇಕ್ಷೆ, ಅನುಪ್ರಾಸ, ಅರ್ಥಾಂತರನ್ಯಾಸ ಮುಂತಾದ ಅಲಂಕಾರಗಳಂತೂ ಅಂತರಿಕ್ಷದ ಉಡಿಯಲ್ಲಿ ತೂರಿದ ನಕ್ಷತ್ರಗಳಂತೆ ಎಲ್ಲೆಡೆಗೂ ಸೂರೆಯಾಗಿವೆ. ವಾಲ್ಮೀಕಿ ಕಾಲಿದಾಸರೂ ಈ ವಿಷ್ಣುಪುರಾಣದ ಉಪಮೆಯ ಭಾಂಡಾರವನ್ನು ಒಡದೇ ತಮ್ಮ ಸಾಹಿತ್ಯ ಸಂಪುಟಗಳನ್ನು ಸಂಪನ್ನಗೊಳಿಸಿರಬಹುದು ಎಂದು ಎನಿಸುವಂತಿದೆ. ಅದಿತಿದೇವಿಯು ಶ್ರೀ ಕೃಷ್ಣನನ್ನು ಸ್ತುತಿಸುವಾಗ ''ಸ್ವಾಮಿ, ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುವ ನಿನ್ನಿಂದ ನಾನು ಬರೀ ವೈರಿವಿಜಯ, ಮಕ್ಕಳು, ಮರಿಗಳನ್ನು ಬೇಡಿಕೊಂಡೆ ಇದು ನನ್ನದೇ ಕ್ಷುದ್ರತನದ ತಪ್ಪು. ಹೇಗೆಂದರೆ

**ಕೌಪೀನಾಚ್ಛಾದನ ಪ್ರಾಯಾ ವಾಂಛಾ ಕಲ್ಪದ್ರುಮಾದಪಿ ।**
**ಜಾಯತೇ ಯದಪುಣ್ಯಾನಾಂ ಸೋಽಪರಾಧಃ ಸ್ವದೋಷಜಃ ॥**

ಕಲ್ಪವೃಕ್ಷವು ಕಣ್ಣೆದುರು ಬಂದು ನಿಂತಾಗ ಒಂದು ಲಂಗೋಟಿ ಕೊಡು ಎಂದು ಕೇಳಿದರೆ ತಪ್ಪು ಯಾರದು ! ''ಅತ್ಯಂತ ಶಾಂತ ಸಜ್ಜನನಾದ ಮನುಷ್ಯನ ಅಂತರಂಗದಲ್ಲಿ ಶ್ರೀ ಹರಿಯು ನಿಂತಿರುತ್ತಾನೆ ಎಂಬುದು ನಿಶ್ಚಿತವೇ. ನೆಲದ ಬಸಿರು ಮುರಿದು ಮೇಲೆದ್ದ ಹಸಿರು ಕುಸುರುಗಳು ಭೂಗರ್ಭದಲ್ಲಿ ಇರುವ ನೀರಿನ ಸೆಲೆಗೆ ಸಾಕ್ಷಿಯಾಗಿಲ್ಲವೇ !'' ಹೀಗೆ ಅರಿಸುತ್ತ ಹೋದರೆ ವಿಷ್ಣು ಪುರಾಣದ ತುಂಬ ಇಂಥ ಮಣಿ ಮುತ್ತುಗಳು ದೊರಕಬಹುದು. ಪದ್ಯದಂತೆ ವಿಷ್ಣು ಪುರಾಣದ ಗದ್ಯವೂ ಅತ್ಯಂತ ಪ್ರಭಾವಶಾಲಿಯಾದ ಭಾವ ವಾಹಕವಾಗಿ ಇಲ್ಲಿ ಪ್ರಕಟಗೊಂಡಿದೆ. ಗದ್ಯ ಪದ್ಯಾತ್ಮಕವಾದ ಚಂಪೂ ಪ್ರಬಂಧದಂತೆ ಸಂದರ್ಭದ ಔಚಿತ್ಯವನ್ನು ಅರಿತು ಇದರಲ್ಲಿ ಅಲ್ಲಲ್ಲಿ ಪ್ರಯೋಗಿಸಿದ ಗದ್ಯ-ಪದ್ಯಗಳೆರಡೂ ಚೇತೋಹಾರಿ ಯಾಗಿವೆ.

ಕತೆಯ ಓಟಕ್ಕೂ, ಖಚಿತ ರೂಪಣೆಗೂ, ಭಿನ್ನ ಭಿನ್ನ ಪ್ರಸಂಗಗಳ ಕಥಾಕೊಂಡಿಗಳನ್ನು ಜೋಡಿಸಿ ಶೈಲಿಯಲ್ಲಿ ಶೈಥಿಲ್ಯ ಹುಟ್ಟದಂತೆ ಸನ್ನಿವೇಶಗಳ ಹೊಸ ಹೊಸ ಹೆಣೆಗೆಗಳನ್ನು ಹಾಕಲಿಕ್ಕೂ ಇಲ್ಲಿಯ ಗದ್ಯವು ಒಳ್ಳೆ ಸಮರ್ಥವಾದ ಮಧುರಮಾಧ್ಯಮವಾಗಿ ಮೂಡಿ ಬಂದಿದೆ. ಇಷ್ಟು ಸುಂದರವಾಗಿ ಗದ್ಯಗಳನ್ನು ಪುರಾತತ್ವಗಳ ಸನ್ನಿವೇಶದ ಹಿನ್ನೆಲೆಯ ಮೌಲ್ಯಮೆರಗುಗಳ ಸ್ಫುಟೀಕರಣಕ್ಕಾಗಿ ಉಪಯೋಗಿಸಿಕೊಂಡ ಪುರಾಣವೆಂದರೆ ವಿಷ್ಣುಪುರಾಣವೊಂದೇ ಎಂದೆನಿಸುತ್ತದೆ.

ಇಲ್ಲಿ ಬಳಸಲಾದ ಗದ್ಯ ಪದ್ಧತಿಯು ದಂಡಿ ಸುಬಂಧುಗಳ ಪ್ರಬಂಧದಂತೆ ಪ್ರಾಯೋಗಿಕವಾಗೆಂದೆ ಬಾಣನಂತೆ ಪಕ್ವಪರಿಣತಿ ಪಡೆದ ಪೂರ್ಣತೆಯ ರೂಪದಲ್ಲಿದೆ. ಆದರಲ್ಲಿ ಸುಬಂಧುವಿನ ಕಸಕು, ದಂಡಿಯ ಮಸಕು, ಬಾಣನ ವರ್ಣನಾ ವ್ಯಸನಗಳ ಕುಂದುಕೊರತೆಗಳು ಅಪ್ಪಿತಪ್ಪಿ ಕೂಡ ಗೋಚರಿಸುವದಿಲ್ಲ. ಪ್ರಾಸಾದಿಕತೆಯ ಹಸಾದದಲ್ಲಿ ಅರಳಿಸಿಟ್ಟ ಇಲ್ಲಿಯ ಸರಳ ಸುಂದರ ಗದ್ಯ ಬಂಧದಲ್ಲಿ ಕಾವ್ಯದ ಕಮನೀಯತೆಯೇ ಕೆನೆಗಟ್ಟಿ ತೊನೆಯ ತೂಗಿದೆ. ಸೌಭರಿ ಋಷಿಯು ತನ್ನ ಮುದಿತನದಲ್ಲಿ ಮಡದಿಯರಿಗಾಗಿ ತಪಃ ಪ್ರಭಾವದಿಂದ ಸಜ್ಜುಗೊಳಿಸಿದ ಅರಮನೆ ಸಿರಿಮನೆಗಳ ಸೊಬಗಿನ ಬಣ್ಣನೆಯನ್ನು ನೋಡಿ.

*"ತತ್ರಚ ಅಶೇಷ ಶಿಲ್ಪ ಕಲ್ಪ ಪ್ರಣೇತಾರಂ ಧಾತಾರಮಿವ ಅನ್ಯಂ ವಿಶ್ವಕರ್ಮಾಣಮಾಹೂಯ ಸಕಲ ಕನ್ಯಾನಾಮೇಕೈಕಾಃ ಪ್ರೋತ್ಫುಲ್ಲ ಪಂಕಜಾಃ ಕೂಜತ್ ಕಲ ಹಂಸ ಕಾರಂಡವಾದಿ ವಿಹಂಗಮಾಭಿರಾಮ ಜಲಾಶಯಾಃ ಸೋಪಧಾನಾಃ ಸಾವಕಾಶಾಃ ಸಾಧುಶಯ್ಯಾಪರಿಚ್ಛದಾಃ ಪ್ರಸಾದಾಃ ಕ್ರಿಯಂತಾ ಮಿತ್ಯಾದಿದೇಶ"* ವಿಷ್ಣುಪುರಾಣದ ಗದ್ಯದಲ್ಲಿ ಅಲ್ಲಲ್ಲಿ ಸಂದರ್ಭಾನುಸಾರ ತುಸು ಪ್ರೌಢಿಮೆ ಮತ್ತು ಸಮಾಸ ಭೂಯಿಷ್ಠತೆಗಳು ತಲೆದೋರಿದ್ದರೂ ಅದರ ಪ್ರಕೃತಿ ಸರಳ, ತರಳ. ಪ್ರಸಾದ ಸಹಜತೆಗಳೇ ಅದರ ಜೀವಾಳವಾಗಿವೆ. ಇಂಥ ಗದ್ಯ ಶೈಲಿಯನ್ನು ಸಂಸ್ಕೃತ ಕವಿಗಳು ಅನುಸರಿಸಿದ್ದರೆ ದೇವಭಾಷೆಗೆ ಇಂಥ ಕ್ಷೀಣದೆಶೆ ಇಷ್ಟು ಬೇಗ ಬರುತ್ತಿರಲಿಲ್ಲವೋ ಏನೋ ! ಸುಲಭತೆ ಹಾಗೂ ಸಹಜತೆಗಳು ಇಲ್ಲಿಯ ಗದ್ಯದ ಸ್ವಭಾವ ಧರ್ಮಗಳೇ ಆಗಿವೆ. ಊರ್ವಶೀ ಪುರೂರವರ ಸಂವಾದ ಸಂದರ್ಭದ ಈ ಗದ್ಯದ ನುಡಿಯನ್ನು ನೋಡಿರಿ.

ರಾಜಾ ತು ಪ್ರಾಗಲ್ಭ್ಯಾತ್ ತಾಮ್ ಆಹ.......
ಆಖ್ಯಾಹಿ ಮೇ ಸಮಯಮಿತಿ ।

ಅಥ ಪೃಷ್ಟಾ ಊರ್ವಶೀ ಪುನರಪ್ಯಬ್ರವೀತ್ -

"ಶಯನ ಸಮೀಪೇ ಮಮ ಉರಣಕದ್ವಯಂ ಪುತ್ರ ಭೂತಂ ನಾಪನೇಯಮ್ ।
ಭವಾಂಶ್ಚ ಮಯಾ ನಗ್ನೋ ನ ದ್ರಷ್ಟವ್ಯಃ ।
ಘೃತಮಾತ್ರಂ ಮಮ ಆಹಾರಃ ಇತಿಃ । ಏವಮೇವೇತಿ ಭೂಪತಿರಪ್ಯಾಹ" ।

ವಿಷ್ಣು ಪುರಾಣದ ಗದ್ಯ ಪದ್ಯ ಎರಡರಲ್ಲಿಯೂ ಸಾರಲ್ಯ, ಸೌಂದರ್ಯ, ಪ್ರಸಾದ ಇವು ಸಾಧಾರಣ ಧರ್ಮವಾಗಿವೆ. ಇಲ್ಲಿಯ ಪದ್ಯಗಳ ಸೊಗಸು ಸೊಬಗುಗಳನ್ನು ಹೇಳುವ ಕಾರಣವೇ ಇಲ್ಲ.

ಸೂಕ್ತಿ ಸುಭಾಷಿತ ಹಾಗೂ ನೀತಿ ವಚನಗಳಿಗಂತೂ ವಿಷ್ಣುಪುರಾಣವು ಆಗರವೇ ಆಗಿದೆ. ಜನರ ಬದುಕನ್ನು ತಿದ್ದಿ, ಬಾಳನ್ನು ಬಂಗಾರವಾಗಿಸ ಹೊರಟ ಈ ಪುರಾಣದ ತುಂಬ ಬೋಧಪ್ರದವಾದ ನೀತಿ ಸುಭಾಷಿತಗಳು ಮಣಿಮಾಣಿಕ್ಯಗಳಂತೆ ಮಿನುಗುತ್ತವೆ.

ವಿಷ್ಣು ಪುರಾಣದಲ್ಲಿಯ ಈ ನೀತಿಗರ್ಭಿತವಾದ ವಚನೋಪನ್ಯಾಸಗಳು ಮಾನವ ಜನಾಂಗಕ್ಕೆ ಮಾರ್ಗದರ್ಶಕ ದೀಪಸ್ತಂಭಗಳಂತೆ ಬೆಳಕನ್ನು ಬೀರುತ್ತವೆ. ಯುಗ ಯುಗಾಂತರಗಳ ಅನುಭವದ ಆಗರವೆಲ್ಲವೂ ಇಲ್ಲಿ ತೆರೆತೆರೆದಿದೆ. ಸಮಾಜದ ಕಲ್ಯಾಣ ಸಾಧನೆಯ ಆಕಾಂಕ್ಷೆಯಿಂದ ಭಗವಾನ್ ಶ್ರೀ ವೇದವ್ಯಾಸರು ಉಪದೇಶಿಸಿದ ಇಲ್ಲಿಯ ಮಾತಿನ ಮಣಿ ಮುತ್ತುಗಳು ಬಾಳಿನ ಬುತ್ತಿಯಂತೆ ಜೀವನದುದ್ದಕ್ಕೂ ಹೆಜ್ಜೆಹೆಜ್ಜೆಗೂ ಉಪಯೋಗಕ್ಕೆ ಬರುವಂತಹವಿರುತ್ತವೆ. ಇವುಗಳನ್ನು ಪಾಠ ಮಾಡಿಟ್ಟಿದ್ದರೆ ಬದುಕಿನ ಗಂಡಾಂತರದ ಗಡಿಗಳನ್ನು ಉಪಾಯದಿಂದ ದಾಟಿ ಪಾರಾಗಬಹುದು. ಸೂತ್ರರೂಪವಾದ ಅಂಥ ಕೆಲವು ಸುಭಾಷಿತಗಳನ್ನು ಇಲ್ಲಿ ಆಯ್ದು ಕೊಡಲಾಗಿದೆ.

ಮೂಢಾನಾಮೇವ ಭವತಿ ಕ್ರೋಧೋ ಜ್ಞಾನವತಾಂ ಕುತಃ।
ಹನ್ಯತೆ ತಾತ ಕಃ ಕೇನ ಯತಃ ಸ್ವಕೃತ ಭುಕ್‌ಪುಮಾನ್ ।
ಕ್ಷಮಾಸಾರಾ ಹಿ ಸಾಧವಃ।
ಸರ್ವಂ ದುಃಖಮಯಂ ಜಗತ್ ।
ತಸ್ಮಾದ್ ಬಾಲ್ಯೇ ವಿವೇಕಾತ್ಮಾ ಯತೇತ ಶ್ರೇಯಸೆ ಸದಾ।
ತತ್‌ಕರ್ಮ ಯನ್ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೆ।
ಕೋಧನಂ ನಾಭಿ ವಾಂಛತಿ।
ಯತಿತವ್ಯಂ ಸಮತ್ವೇ ಚ ನಿರ್ವಾಣಮಪಿ ಚೇಚ್ಛತಾ।
ನಿಶ್ರೀಕಾಣಾಂ ಕುತಃ ಸತ್ವಂ ವಿನಾ ತೇನ ಗುಣಾಃ ಕುತಃ।
ಪಾತ್ರ ಮಾಯಾಂತಿ ಸಂಪದಃ
ಧಿಕ್ ತಂ ಕಾಮಂ ಮಹಾಗ್ರಹಂ
ನೈತದ್ಯುಕ್ತಿಸಹಂ ವಾಕ್ಯಂ ಹಿಂಸಾ ಧರ್ಮಾಯ ಚೇಷ್ಯತೆ।
ಅಕುರ್ವನ್ ವಿಹಿತಂ ಕರ್ಮ ಶಕ್ತಃ ಪತತಿ ತದ್ದಿನೇ।
ತಸ್ಮಾತ್ ಪಾಖಂಡಿಭಿಃ ಪಾಪೈರಾಲಾಪಸ್ಪರ್ಶನಂ ತ್ಯಜೇತ್ ।
ಕೃತಂ ಮಮತ್ವಂ ಮೋಹಾಂಧೈರ್ನಿತ್ಯಂ ಹೇಯೇ ಕಲೇವರೇ।
ಮಂತ್ರಯಜ್ಞಪರಾ ವಿಪ್ರಾ ಸೀರಯಜ್ಞಾಶ್ಚ ಕರ್ಷಕಾಃ।
ವಿದ್ಯಯಾ ಯೋ ಯಯಾ ಯುಕ್ತಃ ತಸ್ಯ ಸಾ ದೈವತಂ ಸ್ಮೃತಂ।

**ಗಾವಃ ಶೈಲಾಶ್ಚ ದೇವತಾಃ।**
**ಧಿಗ್ ಜನ್ಮ ಪರಪಿಂಡೋಪಜೀವಿನಾಂ।**
**ಕುರ್ವತಾಂ ಯಾತಿಯಃ ಕಾಲೋ ಮಾತಾ ಪಿತ್ರೋರಪೂಜನಂ।**
**ತತ್‌ಖಂಡಮಾಯುಷೋ ವ್ಯರ್ಥಮಸಾಧೂನಾಂ ಹಿ ಜಾಯತೇ।**
**ಶಾಶ್ವತೀ ಕುತ್ರ ನಿರ್ವೃತಿಃ ?**
**ವಿಪಾಕಕಟು ಯತ್ ಕರ್ಮ ತನ್ನ ಶಂಸಂತಿ ಪಂಡಿತಾಃ।**
**ಭರ್ತ್ರಾ ಕಾ ಸ್ತ್ರೀನ ಗರ್ವಿತಾ ?।**
**ಜಾತಸ್ಯ ನಿಯತೋ ಮೃತ್ಯುಃ ಪತನಂ ಚ ತಥೋನ್ನತೇಃ।**
**ಸರ್ವಂ ವೇದಃ ಕಲೌ ಶಾಸ್ತ್ರಂ ಯಸ್ಯ ಯದ್ವಚನಂ ದ್ವಿಜ।**
**ವಿತ್ತೇನ ಭವಿತಾ ಪುಂಸಸ್ವಲ್ಪೇನಾಢ್ಯಮದಃ ಕಲೌ**
**ಸ್ತ್ರೀಣಾಂ ರೂಪಮದಶ್ಚೈವ ಕೇಶೈರೇವ ಭವಿಷ್ಯತಿ।**
**ಸ್ತ್ರಿಯಃ ಕಲೌ ಭವಿಷ್ಯಂತಿ ಸ್ವೈರಿಣ್ಯೋ ಲಲಿತ ಸಸ್ಪೃಹಾಃ।**
**ಯದ್ಯತ್ ಪ್ರೀತಿಕರಂ ಪುಂಸಾಂ ವಸ್ತು ಮೈತ್ರೇಯ ಜಾಯತೆ।**
**ತದೇವ ದುಃಖ ವೃಕ್ಷಸ್ಯ ಬೀಜತ್ವಮುಪಗಚ್ಛತಿ**
**ವಿಮುಕ್ತಿ ಪಾದಪಚ್ಛಾಯಾಮೃತೇ ಕುತ್ರ ಸುಖಂ ನೃಣಾಂ ?।**
**ಭೇಷಜಂ ಭಗವತ್ಪ್ರಾಪ್ತಿಃ ಏಕಾಂತಾತ್ಯಂತಿಕೀ ಮತಾ।**
**ನ ಮಾಂಸ ಚಕ್ಷುಷಾ ದ್ರಷ್ಟುಂ ಬ್ರಹ್ಮ ಭೂತಸ್ಸ ಶಕ್ಯತೇ**
**ತದೀಕ್ಷಣಾಯ ಸ್ವಾಧ್ಯಾಯಃ ಚಕ್ಷುರ್ಯೋಗಸ್ತಥಾ ಪರಂ**
**ಕಿಂ ಚಿತ್ರಂ ಯದಘಂ ಪ್ರಯಾತಿ ವಿಲಯಂ ತಸ್ಮಿನ್ ಹರೌ ಕೀರ್ತಿತೇ॥**

ಇಂಥ ಸಾವಿರಾರು ಮಧುರ ಮಾರ್ಮಿಕ, ನೀತಿಬೋಧಕ, ಅರ್ಥಗರ್ಭಿತ, ಸರಸ ಸುಂದರ ಪದ್ಯಗಳು ವಿಷ್ಣು ಪುರಾಣದ ತುಂಬ ಹರಡಿವೆ. ಇಲ್ಲಿಯ ಸನ್ನಿವೇಶ ಸೌಂದರ್ಯ ಹಾಗೂ ಸಂವಾದ ಸ್ವಾರಸ್ಯವಂತೂ ಎಷ್ಟು ಸವಿದರೂ ತೀರದಷ್ಟಿದೆ.

ಈ ಪುರಾಣವು ಪಂಚರಾತ್ರಾನುಸಾರಿಯಾದ ವೈಷ್ಣವ ಪುರಾಣಗಳಲ್ಲಿ ಪ್ರಧಾನವಾಗಿದೆ. ಪುರಾಣಗಳಲ್ಲಿ ಇದು ಭಾಗವತವನ್ನು ಹೆಚ್ಚಾಗಿ ಹೋಲುತ್ತದೆ. ಹರಿವಂಶವನ್ನು ಹೆಚ್ಚಾಗಿ ಅನುಕರಿಸುತ್ತದೆ. ಇನ್ನೂ ಸೂಕ್ಷ್ಮವಾಗಿ ವಿಚಾರಿಸಿದರೆ ವಿಷ್ಣು ಪುರಾಣವು ಭಾಗವತ ಹರಿವಂಶಗಳ ಮಧ್ಯಂತರದ ಕೃತಿಯಾಗಿರಬಹುದೆಂದು ತೋರುತ್ತದೆ. ಭಾಗವತದಲ್ಲಿ ಬಹುತ್ರ ವಿಷ್ಣುಪುರಾಣದ ವಸ್ತು ವಿಷಯಗಳ ಉಪಬೃಂಹಣೆಯೇ ಇದ್ದುದರಿಂದ ಭಾಗವತವು ಇದರ ಅನಂತರ ಕೃತಿಯೆಂದು ಹೇಳಬಹುದು. ಇಂದಿನ ಅನೇಕ ಪಾಶ್ಚಾತ್ಯ ಹಾಗೂ ಪೌರಸ್ತ್ಯ ವಿಮರ್ಶಕರು ಈ ಪುರಾಣಗಳೆಲ್ಲವೂ ಬೇರೆಬೇರೆ ವ್ಯಕ್ತಿಗಳು ರಚಿಸಿದ ಕೃತಿಗಳು ಎಂದು ವಾದಿಸುತ್ತಾರೆ.

ಪಶ್ಚಿಮದೇಶದ ಪುರಾಣ ಪಂಡಿತನಾದ ಪರ್ಗಿಟರನು ''ವಿಷ್ಣು ಪುರಾಣವು ಅತ್ಯಂತ ಸುಸಂಬದ್ಧವಾದ ವಸ್ತು ವಿಸ್ತಾರದ ಹಿನ್ನೆಲೆಯಲ್ಲಿ ಕ್ರಮಬದ್ಧವಾಗಿ ಕಟ್ಟಲ್ಪಟ್ಟ ಒಂದು

ಪರಿಪೂರ್ಣವಾದ ಕೃತಿಯಾಗಿದೆ. ವಾಯು ಪುರಾಣ, ಬ್ರಹ್ಮಪುರಾಣ ಮತ್ಸ್ಯ ಪುರಾಣಗಳಂತೆ ಕೇವಲ ಭಿನ್ನಭಿನ್ನ ಕಾಲದ ಘಟನಾವಳಿಗಳ ಸೂತ್ರೀಕರಣ ಮಾತ್ರವೇ ಇದರಲ್ಲಿ ಇಲ್ಲ. ಇದರಲ್ಲಿ ಬರುವ ಬೌದ್ಧ, ಜೈನ ಮತೀಯ ಸಂಗತಿ ಸಮಾಚಾರಗಳ ಉಲ್ಲೇಖದ ಮೇಲಿಂದ ಇದು ಬೌದ್ಧಾದಿ ನಾಸ್ತಿಕ ಮತಗಳ ಪ್ರಚಂಡ ದಾಳಿದಬ್ಬಾಳಿಕೆಗಳ ಆಘಾತದಿಂದ ಬ್ರಾಹ್ಮಣ ಧರ್ಮವು ಚೇತರಿಸಿಗೊಂಡು ಮತ್ತೆ ತಲೆಯೆತ್ತಿ ಪ್ರಚಾರಗೊಂಡ ಬಳಿಕವೇ ಈ ವಿಷ್ಣುಪುರಾಣವು ಬರೆಯಲ್ಪಟ್ಟಿದೆಯೆಂದು ಗೊತ್ತಾಗುತ್ತದೆ. ಅರ್ಥಾತ್ ಇದು ಕ್ರಿಸ್ತಶಕದ ಐದನೇ ಶತಕಕ್ಕಿಂತ ಪ್ರಾಚೀನವಾಗಿರಲಿಕ್ಕಿಲ್ಲ ಎನಿಸುತ್ತದೆ'' ಎಂದು ಹೇಳಿ ೫ನೇ ಶತಕಕ್ಕಿಂತ ಇತ್ತೀಚಿನದೆಂದು ಹೇಳಿದ್ದಾನೆ. ಫರ್ಖುಹಾರ ಎಂಬ ಮತ್ತೊಬ್ಬ ಆಂಗ್ಲ ಪುರಾಣ ವಿಮರ್ಶಕನು ಹರಿವಂಶವು ಕ್ರಿಸ್ತಶಕ ನಾಲ್ಕುನೂರಕ್ಕಿಂತ ಇತ್ತೀಚಿನದಾಗಲು ಶಕ್ಯವಿಲ್ಲ. ಅದರಂತೆ ರಚನೆ ರೀತಿಯಲ್ಲಿ ಹರಿವಂಶಕ್ಕೆ ವ್ಯತಿರಿಕ್ತವಾಗದ ಈ ವಿಷ್ಣುಪುರಾಣವಾದರೂ ಕ್ರಿಸ್ತ ನಾಲ್ಕನೆಯ ಶತಮಾನದಲ್ಲಿಯೇ ರಚಿತವಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾನೆ.

ವಿಂಟರನಿಝ್ಝನೂ ಪರ್ಗಿಟರನ ಅಭಿಪ್ರಾಯವನ್ನೇ ಅನುಮೋದಿಸಿದಂತೆ ಮಾಡಿ ಐದನೇ ಶತಮಾನದಲ್ಲಿಯೇ ವಿಷ್ಣುಪುರಾಣದ ಜನನೋತ್ಸವವಾಯಿತೆಂದು ಹೇಳುತ್ತಾನೆ. ಆದರೆ ಮಹಾರಾಷ್ಟ್ರದ ಚಿಂತಾಮಣಿ ವಿನಾಯಕ ವೈದ್ಯರು ವಿಷ್ಣುಪುರಾಣದ ನಾಲ್ಕನೇ ಅಂಶದಲ್ಲಿ ಬರುವ ***''ತೇಷು ಉತ್ಪನ್ನೇಷು ಕೈಂಕಿಲಾ ಯವನಾ ಭೂಪತಯೋ ಭವಿಷ್ಯಂತಿ ಅಮೂರ್ಧಾಭಿಷಿಕ್ತಾಃ''*** ಎಂಬ ವಚನದಿಂದ ಈ ಪುರಾಣವು ಕ್ರಿಸ್ತಶಕದ ಒಂಬತ್ತನೇ ಶತಮಾನದಷ್ಟು ಅರ್ವಾಚೀನವೆಂದು ಹೇಳುತ್ತಾರೆ. ಕೈಂಕಿಲರೆಂಬ ಯವನರಾಜರು ಆಂಧ್ರ ದೇಶದಲ್ಲಿ ೫೭೫ ರಿಂದ೯೦೦ ಕ್ರಿಸ್ತಾಬ್ದದ ಅಂತರದಲ್ಲಿ ಶಾಸನ ಮಾಡಿದ್ದರಿಂದ ಅವರ ಉಲ್ಲೇಖವಿರುವ ಈ ವಿಷ್ಣು ಪುರಾಣವು ೯ನೇ ಶತಮಾನದ ಆನಂತರದಲ್ಲಿ ರೂಪಗೊಂಡಿರಬಹುದೆಂದು ಕಾರಣೋಪನ್ಯಾಸ ಪೂರ್ವಕವಾಗಿ ವಿಧಾನಮಾಡಿದ್ದಾರೆ. ಆದರೆ ವೈದ್ಯರೂ ಈ ಪುರಾಣದ ಚತುರ್ಥಾಂಶದ ಇಪ್ಪತ್ತೊಂದನೇ ಅಧ್ಯಾಯ ಪ್ರಾರಂಭದಲ್ಲಿ ಪರಾಶರರು ***''ಅತಃ ಪರಂ ಭವಿಷ್ಯಾನಹಂ ಭೂಪಾಲಾನ್ ಕೀರ್ತಯಿಷ್ಯಾಮಿ''*** ಎಂದು ಪ್ರತಿಜ್ಞೆಗೈದು ಮುಂದೆ ಕಲಿಯುಗದಲ್ಲಿ ಆಗಲಿರುವ ರಾಜರ ವಂಶಾವಳಿಗಳನ್ನು ಹೇಳತೊಡಗಿದ್ದನ್ನು ಗಮನಿಸಿಲ್ಲ ಅದರಲ್ಲಿ ಕೈಕಿಲಯವನರ ಉಲ್ಲೇಖ ಬಂದ ಮಾತ್ರಕ್ಕೆ ಅದು ಅವರಿಗಿಂತ ಪರವರ್ತಿಯೇ ಆಗಬೇಕಾದುದು ಅಗತ್ಯವಿಲ್ಲ. ಇದರಂತೆ ಪಾರ್ಗಿಟರ, ವಿಂಟರನಿಝ್ಝ, ಫರ್ಖುಹಾರ ಮುಂತಾದದರು ೪-೫ನೇ ಶತಮಾನದಲ್ಲಿಯೇ ಈ ಪುರಾಣದ ತೊಟ್ಟಿಲಪೂಜೆ ಮಾಡಿದ್ದರ ಕಾರಣ ಜೈನ ಬೌದ್ಧ ಮತಗಳ ಆಚಾರ ವಿಚಾರಗಳನ್ನು ಇದರಲ್ಲಿ ತೀವ್ರವಾಗಿ ಖಂಡಿಸಿದ್ದು ಎಂದು ಹೇಳುತ್ತಾರೆ.

ಆದರೆ ಡಾಕಾ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಲೆಕ್ಚರರಾಗಿದ್ದ ಡಾ॥ ಆರ್. ಸಿ. ಹಜರಾ ಎಂಬ ಪುರಾಣ ವಿಚಕ್ಷಣನು ವಿಷ್ಣು ಪುರಾಣದಲ್ಲಿಯ ಜೈನ ಬೌದ್ಧಾದಿ ಖಂಡನ ಭಾಗಗಳು ಪ್ರಕ್ಷಿಪ್ತ ಎಂದು ಹೇಳಿ ಹಿಂದಿನವರ ವಾದವನ್ನು ಅಲ್ಲಗಳೆದು

ವಿಷ್ಣುಪುರಾಣವು ನಾಲ್ಕನೇ ಶತಮಾನದ ಆದಿಮ ಭಾಗದಲ್ಲಿ ಅಥವಾ ಮೂರನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಿತವಾಗಿರಬಹುದೆಂದು ಹೇಳುತ್ತಾನೆ.

ಆದರೆ ಈ ಎಲ್ಲಾ ಪಾಶ್ಚಾತ್ಯ ಪಂಡಿತರು ಕಾಲ ನಿರ್ಣಯಕ್ಕಾಗಿ ತೋರಿಸಿದ ಕಾರಣಗಳಾವವೂ ಸಬಲವೂ ಆಗಿಲ್ಲ. ಸಮಂಜಸವೂ ಆಗಿಲ್ಲ. ಜೈನ ಬೌದ್ಧ ಯವನ ರಾಜ ಮಹಾರಾಜರ ಉಲ್ಲೇಖ ಮಾತ್ರದಿಂದ ಈ ಪುರಾಣವು ಅರ್ವಾಚೀನವಾಗಲೇ ಬೇಕೆಂದಿಲ್ಲ. ಸರ್ವಜ್ಞರಾದ ಪುರಾಣ ಕರ್ತಾರರು ದಿವ್ಯ ದೃಷ್ಟಿಯಿಂದ ಮುಂದಾಗುವದನ್ನು ತಿಳಿದು ಮೊದಲೇ ಭವಿಷ್ಯ ಪರ್ವವೆಂದು ಬರೆದಿಟ್ಟಿದ್ದಾರೆ ಮತ್ತು ಜೈನ ಬೌದ್ಧ ಚಾರ್ವಾಕಾದಿ ನಾಸ್ತಿಕ ಮತಗಳು ಮೊದಲಿನಿಂದಲೂ ಭಾರತದಲ್ಲಿ ಇದ್ದೇ ಇರುತ್ತವೆ. ಅವುಗಳ ಉಲ್ಲೇಖವೂ ಭಾರತೀಯ ವಾಙ್ಮಯದಲ್ಲಿ ಅಲ್ಲಲ್ಲಿ ಕಂಡು ಬರುತ್ತದೆ. ''ದುರಾಗ್ರಹ ಗೃಹೀತತ್ವಾತ್ ವರ್ತಂತೇ ಸಮಯಾಃ ಸದಾ'' ಎಂದು ಆಚಾರ್ಯರು ಈ ದುರ್ಮತಗಳ ಸಾರ್ವಕಾಲಿಕ ಅಸ್ತಿತ್ವವನ್ನು ಸಾರಿದ್ದಾರೆ. ಆದುದರಿಂದ ಈ ವಿಷ್ಣು ಪುರಾಣದಲ್ಲಿ ಬರುವ ಜೈನ ಬೌದ್ಧಾದಿ ಪಾಖಂಡ ಮತಗಳ ಖಂಡನವು ಕಲಿಯುಗದ ಪ್ರಾರಂಭ ಕಾಲದಲ್ಲಿ ವಿರಳವಾಗಿ ಪ್ರಚಾರದಲ್ಲಿದ್ದ ಆ ನಾಸ್ತಿಕ ಮತಗಳ ದೂಷಣಾತ್ಮಕವಾಗಿರುವುದು ಸಂಭಾವಿತವಿದೆ.

ಡಾ. ಹಜರಾರವರು ವಿಷ್ಣು ಪುರಾಣದಲ್ಲಿ ದಶಾವತಾರ ಬಣ್ಣನೆಯ ಪ್ರಸಂಗದಲ್ಲಿ ಬುದ್ಧಾವತಾರ ಬಣ್ಣನೆಯಿಲ್ಲದ್ದರಿಂದ ಈ ಪುರಾಣವು ಬುದ್ಧಾನಂತರ ಸ್ವಲ್ಪ ಕಾಲದಲ್ಲಿ ಬುದ್ಧನನ್ನು ಜನತೆ ದೇವರೆಂದು ಇನ್ನೂ ಭಾವಿಸದ ಕಾಲದಲ್ಲಿಯೇ ನಿರ್ಮಿತ ವಾದುದೆಂದು ಹೇಳಿದ್ದು ಅಷ್ಟು ಸಮಂಜಸವೆನಿಸುವದಿಲ್ಲ. ವಾಸ್ತವಿಕ ದಶಾವತಾರದಲ್ಲಿ ಬುದ್ಧನನ್ನು ಉಲ್ಲೇಖಿಸದ್ದರಿಂದ ಈ ಪುರಾಣವು ಬುದ್ಧನಿಗಿಂತ ಪೂರ್ವದಲ್ಲಿಯೇ ನಿರ್ಮಿತವಾದದ್ದೆಂದು ಸಿದ್ಧವಾಗುತ್ತದೆ.

ರಾಶಿ ಹೋರಾ ಶಬ್ದಗಳ ಉಲ್ಲೇಖವು ವಿಷ್ಣು ಪುರಾಣದಲ್ಲಿದ್ದದರಿಂದ ಇದು ಗ್ರೀಕರ ಸಂಪರ್ಕವು ಅಲೆಗ್ಝಾಂಡರನ ಕಾಲದಲ್ಲಿ ಆದ ಬಳಿಕ ಅರ್ಥಾತ್ ೧-೨ನೇ ಕ್ರಿಸ್ತ ಶತಕಗಳ ನಂತರವೇ ಬರೆಯಲ್ಪಟ್ಟಿದೆಯೆಂಬ ಹಜರಾರ ವಾದದಲ್ಲಿಯೂ ಹುರುಳಿಲ್ಲ. ಯಾಕೆಂದರೆ ವರಾಹ ಮಿಹಿರನು ತನ್ನ ಬೃಹತ್ ಸಂಹಿತೆಯಲ್ಲಿ ಉಲ್ಲೇಖಿಸಿದ ಅತಿಪ್ರಾಚೀನ ಕಾಲದ ಗಾರ್ಗ್ಯ ಸಂಹಿತೆಯಲ್ಲಿಯೇ ಈ ಶಬ್ದಗಳ ಪ್ರಯೋಗವಿದ್ದುದರಿಂದ ''ಅವು ಗ್ರೀಕರಿಂದಲೇ ಭಾರತೀಯರಿಗೆ ತಿಳಿದುಬಂದ ಶಬ್ದಗಳಾಗಿವೆ'' ಎಂಬ ಧಾರಣೆಯೇ ತಳಬುಡವಿಲ್ಲದ್ದಾಗಿದೆ. ಮತ್ತು ಕೆಲವೊಂದು ಗ್ರಂಥಗಳಲ್ಲಿ ಹಲ ಕೆಲವು ಶಬ್ದಗಳನ್ನು ಉಪಯೋಗಿಸದಿದ್ದ ಮಾತ್ರಕ್ಕೆ ಅವು ಆ ಕಾಲದಲ್ಲಿ ಅಸ್ತಿತ್ವದಲ್ಲಿಯೇ ಇದ್ದಿಲ್ಲ ಎಂದು ಅರ್ಥವಾಗುವುದಿಲ್ಲ.

ಶಂಕರಾಚಾರ್ಯ ರಾಮಾನುಜಾಚಾರ್ಯ ಮಧ್ವಾಚಾರ್ಯ ಪ್ರಭೃತಿ ಪ್ರಾಚೀನ ಆಚಾರ್ಯರೆಲ್ಲರೂ ಈ ವಿಷ್ಣು ಪುರಾಣವನ್ನು ತಮ್ಮ ತಮ್ಮ ಭಾಷ್ಯಾದಿ ಗ್ರಂಥಗಳಲ್ಲಿ ಉದಾಹರಿಸುವದರಿಂದ ಇದು ಅತ್ಯಂತ ಪ್ರಾಚೀನವಾದುದೆಂದು ಸಿದ್ಧವಾಗುತ್ತದೆ. ವೈದಿಕ

ಆಚಾರ್ಯರಲ್ಲಿ ಎಲ್ಲರಿಗಿಂತ ಆದಿಮರಾದ ಶಂಕರಾಚಾರ್ಯರು ತಮ್ಮ ಬ್ರಹ್ಮ ಸೂತ್ರಭಾಷ್ಯದಲ್ಲಿ ವಿಷ್ಣು ಪುರಾಣದ ಪ್ರಥಮಾಂಶದ ಐದನೇ ಅಧ್ಯಾಯದಲ್ಲಿಯ ೬೧-೬೪-೬೫ನೆಯ ಕೆಳಗಿನ -

**ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್ ಸೃಷ್ಟ್ಯಾಂ ಪ್ರತಿಪೇದಿರೇ ।**
**ತಾನ್ಯೇವ ತೇ ಪ್ರಪದ್ಯಂತೆ ಸೃಜ್ಯಮಾನಾಃ ಪುನಃ ಪುನಃ ॥**
**ನಾಮರೂಪಂಚ ಭೂತಾನಾಂ ಕೃತ್ಯಾನಾಂಚ ಪ್ರಪಂಚನಂ ।**
**ವೇದಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ ॥**
**ಋಷೀಣಾಂ ನಾಮಧೇಯಾನಿ ಯಥಾ ವೇದ ಶ್ರುತಾನಿ ವೈ ।**
**ತಥಾ ನಿಯೋಗಯೋಗ್ಯಾನಿ ಹ್ಯನ್ಯೇಷಾಮಪಿ ಸೋಽಕರೋತ್ ॥**

ಮುಂತಾದ ಪದ್ಯಗಳನ್ನು ಉದಾಹರಿಸಿದ್ದಾರೆ.

ಶಂಕರಾಚಾರ್ಯರ ಕಾಲದಲ್ಲಿ ವಿಷ್ಣು-ಪುರಾಣವನ್ನು ಪ್ರಮಾಣತ್ವೇನ ಉದಾಹರಿಸಬೇಕಾಗಿದ್ದರೆ ಅದು ಆಗಲೇ ಅತ್ಯಂತ ಪ್ರಾಚೀನವೆಂದೂ ಪ್ರಮಾಣತಮವೆಂದೂ ಜನರಿಗೆ ವಿಶ್ವಾಸವಿದ್ದಿತು. ಈ ಪುರಾಣವು ಶಂಕರಾಚಾರ್ಯರ ನೂರಿನ್ನೂರು ವರ್ಷ ಪೂರ್ವ ಕಾಲದಲ್ಲಿ ಯಾರಾದರೂ ರಚಿಸಿದ್ದಾಗಿದ್ದರೆ (ಪಾಶ್ಚಾತ್ಯ ಪಂಡಿತರು ಹೇಳುವಂತೆ) ಶಂಕರಾಚಾರ್ಯರಂಥ ಮಹಾವಿದ್ವಾಂಸರು ಅದನ್ನು ಪರಮ ಪ್ರಮಾಣ ಗ್ರಂಥವೆಂದು ಆದರದಿಂದ ಉಲ್ಲೇಖಿಸುತ್ತಿರಲಿಲ್ಲ.

ಆ ಶಂಕರಾಚಾರ್ಯರಿಗೆ ತಿಳಿಯದಷ್ಟು ಪೂರ್ವಕಾಲದಲ್ಲಿ ಅಂದರೆ ಸಾವಿರಾರು ವರ್ಷಗಳ ಮೊದಲೇ ಈ ಪುರಾಣವು ರೂಪುಗೊಂಡಿತ್ತೆಂದು ಸಿದ್ಧವಾಗುವುದು. ಶಂಕರಾಚಾರ್ಯರ ಜನನ ಕಾಲವು ಕಂಚೀಕಾಮಕೋಟೀಮಠದ ಕಾಗದ ಪತ್ರ ಹಾಗೂ ಕೇ.ಟೀ. ತೇಲಂಗರವರ 'ಇಂಡಿಯನ್ಎಂಟಿಕ್ವೆರಿ' ಪುಸ್ತಕದ ಅನುಸಾರ ಕ್ರಿಸ್ತಪೂರ್ವ ೫೦೨ ವರ್ಷಗಳೆಂದಾಗುತ್ತದೆ. ಮರಣ ಕಾಲವು ಕ್ರಿ.ಪೂ. ೪೭೭ ಇದಕ್ಕಿಂತ ಮೊದಲು ಸಾವಿರಾರು ವರ್ಷ ಪೂರ್ವದಲ್ಲಿ ಅಂದರೆ ಕ್ರಿಸ್ತಶಕ ಪ್ರಾರಂಭಕ್ಕಿಂತ ಮೊದಲು ಸುಮಾರು ಮೂರು ಸಾವಿರ ಅಥವಾ ಎರಡು ಸಾವಿರ ವರ್ಷಗಳ ಹಿಂದೆ ಈ ವಿಷ್ಣು ಪುರಾಣವು ರೂಪಗೊಂಡಿರಬಹುದು.

ಇದಕ್ಕೆ ಈ ವಿಷ್ಣು ಪುರಾಣದಲ್ಲಿಯೇ ಇನ್ನೊಂದು ಆಧಾರ ದೊರಕುತ್ತದೆ. ಇದರ ಎರಡನೇ ಅಂಶದ ಒಂಬತ್ತನೇ ಅಧ್ಯಾಯದಲ್ಲಿ ೧೬ನೇ ಪದ್ಯ

**ಕೃತ್ತಿಕಾದಿಷು ಋಕ್ಷೇಷು ವಿಷವೇಷು ಚ ಯದ್ದಿವಃ**
**ದೃಷ್ಟ್ವಾರ್ಕಪತಿತಂ ಜ್ಞೇಯಂ ತದ್ಗಾಂಗಂ ದಿಗ್ಗಜೋಜ್ಝಿತಂ ॥**

ಎಂಬ ಪದ್ಯದಲ್ಲಿ ''ಕೃತ್ತಿಕಾದಿಷು ಋಕ್ಷೇಷು'' ಎಂದು ಪ್ರಯೋಗವು ಕಂಡು ಬರುತ್ತದೆ. ಈಗ ಸಾಮಾನ್ಯವಾಗಿ ನಕ್ಷತ್ರಗಳನ್ನು ಅಶ್ವಿನೀಯಿಂದ ಎಣಿಸುತ್ತಾರೆ. ಕ್ರಿಸ್ತ ಶಕದ ಐದನೇ ಶತಕದಲ್ಲಿದ್ದ ವರಾಹಮಿಹಿರನು ನಕ್ಷತ್ರಗಳನ್ನು ಅಶ್ವಿನಿಯಿಂದ

ಎಣಿಸುವುದು ಇತ್ತೀಚಿನ ಕಾಲದಲ್ಲೇಯ ಪ್ರಾರಂಭವಾಯಿತೆಂದೂ ಇದಕ್ಕಿಂತ ಪೂರ್ವಕಾಲದಲ್ಲಿ ಕೃತ್ತಿಕಾದಿಂದಲೇ ನಕ್ಷತ್ರ ಗಣನೆಯ ಸಂಪ್ರದಾಯವಿದ್ದಿತು ಎಂದೂ ಹೇಳುತ್ತಾನೆ. ವಿಷ್ಣು ಪುರಾಣದ ಈ ಪದ್ಯದಲ್ಲಿ ''ಕೃತ್ತಿಕಾದಿಷು ಋಕ್ಷೇಷು'' ಕೃತ್ತಿಕಾದಿಂದ ಮೊದಲಾಗುವ ನಕ್ಷತ್ರಗಳೆಲ್ಲ ಎಂಬ ಉಲ್ಲೇಖದಿಂದ ವರಾಹ ಮಿಹಿರನಗಿಂತ ಬಹುಕಾಲ ಮುಂಚಿತವೇ ಬುದ್ಧಾವತಾರಕ್ಕಿಂತ ಮೊದಲು ಅರ್ಥಾತ್ ಕ್ರಿಸ್ತಶಕಕ್ಕಿಂತ ಎರಡು ಮೂರು ಸಾವಿರ ವರ್ಷ ಹಿಂದೆ ಈ ಪುರಾಣವು ರಚಿಸಲ್ಪಟ್ಟಿತೆಂದು ತಿಳಿಯಬಹುದು.

ಮುಂದೆ ಕಾಲ ಕಾಲಕ್ಕೆ ಈ ಪುರಾಣದಲ್ಲಿ ಅಲ್ಲಲ್ಲಿ ಆಗಾಗ ಪ್ರಕ್ಷೇಪ ವಿಕ್ಷೇಪಗಳೂ ಆವಾಪೋದ್ವಾಪಗಳೂ ನಡೆದು ಜನರಿಗೆ ಅದು ಅರ್ವಾಚೀನ ಎಂದು ತೋರುವಂತಾಗಿರ ಬಹುದು. ಆದರೆ ಈ ಪುರಾಣದ ಮೂಲ ರೂಪವು ಮಾತ್ರ ಈಗ ಐದು ಸಾವಿರ ವರ್ಷಗಳ ಹಿಂದೆ ಭಗವಾನ್ ಬಾದರಾಯಣರಿಂದಲೇ ನಿರ್ಮಿಸಲ್ಪಟ್ಟಿದೆ ಎಂದು ಹೇಳಬಹುದು. ಪಾಶ್ಚಾತ್ಯ ಪಂಡಿತರಿಗೆಲ್ಲ ಭಾರತೀಯ ಸಾಹಿತ್ಯದ ಶಾಸ್ತ್ರ ಪುರಾಣಗಳನ್ನೆಲ್ಲ ತಮ್ಮ ಕ್ರಿಸ್ತಶಕದ ಈಚೆಗೇ ಎಳೆದುತರುವ ಹವ್ಯಾಸ ಬಹಳವಾಗಿದೆ. ಅದಕ್ಕೇ ನಮ್ಮ ಪೌರಸ್ತ್ಯಪಂಡಿತರೂ 'ಸೋ' ಎನ್ನುತ್ತ ಅವರು ಹಾಡಿದ್ದನ್ನೇ ಹಾಡಿ ಆಡಿದ್ದನ್ನೇ ಆಡಿ ಕ್ರಿಸ್ತಶಕದ ಮೊದಲಿನ ಹತ್ತು ಶತಮಾನಗಳಲ್ಲಿಯೇ ಪ್ರಪಂಚದ, ಅದರಲ್ಲಿಯೂ ಪ್ರಾಚೀನ ಭಾರತದ ವಾಙ್ಮಯವನ್ನೆಲ್ಲ ಸಂದಿಯಲ್ಲಿ ಸಮಾರಾಧನ ಮಾಡಿಸಿಬಿಡುವ ನಾದಕ್ಕೆ ಬಿದ್ದಿದ್ದಾರೆ. ಆದುದರಿಂದ ಜನರು ಈ ವಿಷಯದಲ್ಲಿ ನಿಷ್ಪಕ್ಷಪಾತದಿಂದ ಕಾಲವು ತುಸು ಹಿಂದೆಹೋದರೆ ಹೆದರದೆ ಮುಂದೆ ಬಂದರೆ ಬೆದರದೆ ವಿಚಾರಮಾಡಬೇಕು.

ವಸ್ತು ನಿಷ್ಠದೃಷ್ಟಿಯಿಂದ ಸಮಾಲೋಚನೆ ಗೈದರೆ ಪುರಾಣಗಳು ಕಲಿಯುಗದಲ್ಲಿಯೇ ಅತ್ಯಂತ ಪ್ರಾಚೀನವಾದ ಗ್ರಂಥ ರತ್ನಗಳಾಗಿವೆ. ೨೮ನೇ ದ್ವಾಪರಯುಗದ ಅಂತಿಮ ಭಾಗದಲ್ಲಿ ಅವತರಿಸಿದ ಪರಾಶರ ಕುಮಾರ ಕೃಷ್ಣದ್ವೈಪಾಯನರೇ ಈ ಹದಿನೆಂಟು ಪುರಾಣಗಳನ್ನೂ ಈ ರೂಪದಲ್ಲಿ ರಚಿಸಿದ ಪುಣ್ಯಪುರುಷರು ಅಥವಾ ಪುರುಷೋತ್ತಮರು. ಇಂದಿಗೆ ಐದುಸಾವಿರ ವರ್ಷಗಳಹಿಂದೆ ಈ ಕೃಷ್ಣ ದ್ವೈಪಾಯನರು ವೇದಗಳನ್ನು ವಿಭಾಗಮಾಡಿ, ಬ್ರಹ್ಮ ಸೂತ್ರಗಳನ್ನು ರಚಿಸಿ, ಭಾರತವನ್ನು ಬರೆದು, ಹದಿನೆಂಟು ಪುರಾಣಗಳನ್ನು ನಿರ್ಮಿಸಿದರು ಎಂದು ಎಲ್ಲ ಪುರಾಣಗಳಲ್ಲಿಯೂ ಹೇಳಿದ್ದಾರೆ.

''ಅಷ್ಟಾದಶ ಪುರಾಣಾನಾಂವಕ್ತಾ ಸತ್ಯವತೀಸುತಃ ॥ (ಶಿವಪು. ರೇವಾಖಂಡ)'
ವ್ಯಾಸರೂಪಸ್ತದಾಬ್ರಹ್ಮಾ.... ತದಷ್ಟಾದಶಧಾ ಕೃತ್ವಾಭೂಲೋಕೇಸ್ಮಿನ್ ಪ್ರಕಾಶಿತಂ
ಪದ್ಮ-ಸೃಷ್ಟಿಖಂಡ

'ಅಷ್ಟಾದಶ ಪುರಾಣಾನಿ ಕೃತ್ವಾಸತ್ಯವತೀಸುತಃ । (ಮತ್ಸ್ಯಪುರಾಣ)

ಈ ಮಾತಿಗೆ ಪ್ರಬಲ ಹಾಗೂ ನಿರವಕಾಶವಾದ ವಿರೋಧವು ಈ ವರೆಗೆ ಕಾಣದ್ದರಿಂದ ಕ್ರಿಸ್ತಪೂರ್ವದಲ್ಲಿ ಮೂರುಸಾವಿರ ವರ್ಷಗಳ ಹಿಂದೆಯೇ ಬ್ರಹ್ಮಸೂತ್ರ ಭಾರತಗಳೊಂದಿಗೇ ಎಲ್ಲ ಪುರಾಣಗಳೂ ಶ್ರೀ ವೇದವ್ಯಾಸರಿಂದಲೇ ರಚಿತವಾಗಿವೆ ಯೆಂದು ಹೇಳಲು ಯಾವ ಅಭ್ಯಂತರವೂ ಇರುವುದಿಲ್ಲ.

ಈ ವಿಷ್ಣು ಪುರಾಣವೇ ಮೊದಲಾದ ಹದಿನೆಂಟು ಪುರಾಣಗಳು ಇಷ್ಟು ಪುರಾತನ ಕಾಲದವಾದುದರಿಂದಲೇ ಉಪನಿಷತ್ತು ಅರ್ಥಶಾಸ್ತ್ರ ಹಾಗೂ ಪ್ರಾಚೀನ ಭಾರತೀಯ ದರ್ಶನ ಶಾಸ್ತ್ರಗಳಲ್ಲಿ ಈ ಪುರಾಣಗಳ ಉಲ್ಲೇಖವು ಹೇರಳವಾಗಿ ದೊರಕುತ್ತದೆ. ಸ್ಥಲಾವಕಾಶವಿಲ್ಲದ್ದರಿಂದ ಕೆಳಗೆ ಕೆಲವೇ ಉಲ್ಲೇಖಗಳನ್ನು ಕಾಣಿಸಲಾಗಿದೆ.

''ಋಗ್ವೇದಂ ಭಗವೋ ಅಧ್ಯೇಮಿ ಯಜುರ್ವೇದಂ ಸಾಮ ವೇದಮಾಥರ್ವಣಂ ಚತುರ್ಥಮಿತಿ ಇತಿಹಾಸ ಪುರಾಣಂ ಪಂಚಮಂ ವೇದಾನಾಂ ವೇದಂ'' ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಪುರಾಣಗಳ ಉಲ್ಲೇಖವು ಬರುತ್ತದೆ.

ಅಥರ್ವಣ ವೇದದಲ್ಲಿಯೂ ''ಋಚಃ ಸಾಮಾನಿ ಛಂದಾಸಿ ಪುರಾಣಂ ಯಜುಷಾ ಸಹ । ಉಚ್ಛಿಷ್ಟಾತ್ ಜಜ್ಞಿರೆ ಸರ್ವೇ ದಿವಿ ದೇವಾ ದಿವಿ ಶ್ರಿತಾಃ'' ಎಂಬ ಮಂತ್ರದಲ್ಲಿ ವೇದಗಳ ಜೊತೆಗೇ ಪುರಾಣವನ್ನೂ ಪಠಿಸಿದ್ದು ಕಂಡು ಬರುತ್ತದೆ.

ಇದರಂತೆ ಅಥರ್ವಣ ಸಂಹಿತೆಯ ಮತ್ತೊಂದು ಮಂತ್ರದಲ್ಲಿ ''ಇತಿಹಾಸಸ್ಯ ಚ ವೈ ಸಪುರಾಣಸ್ಯ ಗಾಥಾನಾಂ ನಾರಾಶಂಸೀನಾಂ ಸಪ್ರಿಯಂ ಧಾಮ ಭವತಿ ಯ ಏವಂ ವೇದ''

ಶತಪಥ ಬ್ರಾಹ್ಮಣದಲ್ಲಿ (೧೩/೪/೩೧೩)

''ಅಧ್ವರ್ಯುಸ್ತಾರ್ಕ್ಷ್ಯೋವೈ ಪಶ್ಯತೋ ರಾಜೇತ್ಯಾಹ..... ತಾನುಪದಿಶತಿ ಪುರಾಣಂ । ವೇದಃ ಸೋಯಮಿತಿ । ಕಿಂಚಿತ್ ಪುರಾಣ ಮಾಚಚಕ್ಷೀತ'' ।

ಬೃಹದಾರಣ್ಯಕದಲ್ಲಿ (೨/೪/೧೧)

''ಸ ಯಥಾ ಅರ್ದ್ರೇಂಧನಾಗ್ನೇರಭ್ಯಾಹಿತಾತ್ ಪೃಥಕ್ ಧೂಮಾ ವಿನಿಶ್ಚರಂತಿ ಏವಂ ವಾ ರೇಽಸ್ಯ ಮಹತೋ ಭೂತಸ್ಯ ನಿಶ್ವಸಿತಮೇತತ್ ಯದ್ ಋಗ್ವೇದೋ ಯಜುರ್ವೇದೋ ಅಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾಗಿ ಅಸ್ಯೈವ ಏತಾನಿ ನಿಶ್ವಸಿತಾನಿ

ಶತಪಥ ಬ್ರಾಹ್ಮಣ (೧೧/೫/೭/೯)

ಏವಂ ವಿದ್ವಾನ್ ವಾಕೋ ವಾಕ್ಯಮಿತಿಹಾಸಃ ಪುರಾಣಮಿತ್ಯಹರಹಃ ಸ್ವಾಧ್ಯಾಯಮಧೀತೆ

(ಯಾಜ್ಞ್ಯವಲ್ಕ್ಯಸ್ಮೃತಿ) ೩೧೮೯

**ಪುರಾಣನ್ಯಾಯ ಮೀಮಾಂಸಾ ಧರ್ಮಶಾಸ್ತ್ರಾಂಗಮಿಶ್ರಿತಾಃ**
**ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ**

**ಕ್ಯಾತ್ಯಾಯನ ಸ್ಮೃತಿ**

**ಮಾಂಸಕ್ಷೀರೌದನ ಮಧುಕುಲ್ಯಾಭಿಸ್ತರ್ಪಯೇತ್ ಪಿತೃನ್**
**ವಾಕೋವಾಕಂ ಪುರಾಣಾನಿ ಇತಿಹಾಸಾನಿ ಚಾನ್ವಹಂ**
**ಭೃಗೂಕ್ತ ಮಾನವಸಂಹಿತಾ (೩-೨೩೨)**

**ಸ್ವಾಧ್ಯಾಯಂ ಶ್ರಾವಯೇದ್ವಿಪ್ರಃ ಧರ್ಮಶಾಸ್ತ್ರಾಣಿ ಚೈವ ಹಿ**
**ಆಖ್ಯಾನಾನೀತಿಹಾಸಾಂಶ್ಚ ಪುರಾಣಾನಿ ಖಿಲಾನಿ ಚ**

ಇದರ ಮೇಲೆ ಮೇಧಾತಿಥಿಯು ಟೀಕೆ ಬರೆಯುತ್ತ ಪುರಾಣ ಶಬ್ದವನ್ನು ನಿರ್ವಚನೆ ಗೈದಿದ್ದಾನೆ.

**ಪುರಾಣಾನಿ ವ್ಯಾಸಾದಿ ಪ್ರಣೀತಾನಿ ಸೃಷ್ಟ್ಯಾದಿವರ್ಣನ ರೂಪಾಣಿ ।**
**ಖಿಲಾನಿ ಶ್ರೀಸೂಕ್ತ ಮಹಾನಾಮ್ನಿಕಾದೀನಿ ॥'**

## ವಿಷ್ಣು ಸ್ಮೃತಿ

**"ಪುರಾಣಂ ಮಾನವೋ ಧರ್ಮಸಾಂಗೋ ವೇದಶ್ಚಿಕಿತ್ಸಿತಮ್"**

## ಅತ್ರಿ ಸ್ಮೃತಿ

**ಇತಿಹಾಸ ಪುರಾಣಾಭ್ಯಾವೇದಂ ಸಮುಪಬೃಂಹಯೇತ್**
**ಶೌನಕಋಗ್ವಿಧಾನ-ವ್ಯಾಸೋಕ್ತೇ ತು ಪುರಾಣಾರ್ಥೇ ಯಾಥಾರ್ಥ್ಯಂ ದೃಶ್ಯತೇ ಸದಾ (೨೫)**

## ಬೃಹಜ್ಜಾಬಾಲೋಪನಿಷದ್ -

**ಯಾವದ್ ಬೃಹಜ್ಜಾಬಾಲಮಧೀತೇ ಸ ಋಚೋ ಅಧೀತೆ.....**
**ಸ ಪುರಾಣಮಧೀತೆ ಸ ಬ್ರಹ್ಮ ಪ್ರವಣಮಧೀತೇ ॥**

**ಆಶ್ವಲಾಯನ ಗೃಹ್ಯಸೂತ್ರ - ಆಯುಷ್ಮತಾಂ ಕಥಾಃಕೀರ್ತಯಂತೋ**
**ಮಾಂಗಲ್ಯಾನಿ ಇತಿಹಾಸ ಪುರಾಣಾನಿ**

ವ್ಯಾಡಿಯ ವಿಕೃತಿವಲ್ಲೀ ಎಂಬ ಗ್ರಂಥದಲ್ಲಿ ಬ್ರಹ್ಮಪುರಾಣದ ಒಂದು ಪದ್ಯವನ್ನು ಉಲ್ಲೇಖಿಸಲಾಗಿದೆ.

ಗೌತಮ ಧರ್ಮಸೂತ್ರದಲ್ಲಿ (೧೧/೧೯)

ರಾಜರು ತಮ್ಮ ರಾಜ್ಯದ ಶಾಸನ ವ್ಯವಸ್ಥೆಗಾಗಿ ವೇದ, ಧರ್ಮಶಾಸ್ತ್ರ ಹಾಗೂ ಪುರಾಣೋಕ್ತಮಾರ್ಗವೇ ಪ್ರಮಾಣವೆಂದು ನಂಬಿ ಅನುಸರಿಸಬೇಕು ಎಂದು ಹೇಳಿದೆ. ಇದರಂತೆ ಆಪಸ್ತಂಬ ಧರ್ಮ ಸೂತ್ರದಲ್ಲಿಯೂ ಪದ್ಮ ಪುರಾಣದ ಎರಡು ಪದ್ಯಗಳನ್ನು ಉದಾಹರಿಸಿದ್ದಾರೆ. ಕೌಟಲೀಯ ಅರ್ಥ ಶಾಸ್ತ್ರದಲ್ಲಿ ದಾರಿತಪ್ಪಿದ ರಾಜಕುಮಾರರಿಗೆ ಪುರಾಣಗಳ ಉಪದೇಶ ಮಾಡಿ ಸನ್ಮಾರ್ಗಕ್ಕೆ ತರಬೇಕು ಮತ್ತು ಪುರಾಣ ತಜ್ಞರಿಗೆ ರಾಜ್ಯ ಶಾಸನದಲ್ಲಿ ಸರಿಯಾದ ಅಧಿಕಾರ ಸ್ಥಾನ ಕೊಡಬೇಕು ಎಂದು ಹೇಳಿದೆ.

ಹೀಗೆ ನಮ್ಮ ಪ್ರಾಚೀ ವಾಙ್ಮಯದ ತುಂಬ ಪುರಾಣಗಳ ಉಲ್ಲೇಖವು ಅತಿ ಪೂರ್ವ ಕಾಲೀನ ಪ್ರಮಾಣ ಗ್ರಂಥ ರೂಪದಿಂದ ವಿಪುಲವಾಗಿ ದೊರಕುತ್ತಿದ್ದರೂ ಈ ಎಲ್ಲ ಪುರಾಣಗಳನ್ನೂ ತಮ್ಮ ಬಾಯಬಲ್ಲಿಗಿಂತ ಅರ್ವಾಚೀನವಾಗಬೇಕೆಂದು ಕ್ರಿಸ್ತೋತ್ತರ ಕಾಲದಲ್ಲಿಯೇ ತೊಟ್ಟಿಲದಲ್ಲಿ ಹಾಕುವ ಪಾಶ್ಚಾತ್ಯ ವಿಮರ್ಶಕರನ್ನೂ ಅವರನ್ನೇ

''ನಾತಿಚರಾಮಿ'' ''ನಾತಿಚರಾಮಿ''ಎಂದು ಪ್ರತಿಜ್ಞೆ ಮಾಡಿದಂತೆ ಅನುಸರಿಸುತ್ತಿರುವ ಪೌರ್ವಾತ್ಯ ಪಂಡಿತರನ್ನೂ ನೋಡಿ ಆಶ್ಚರ್ಯವಾಗುತ್ತದೆ.

ನಾವು ಮೇಲೆ ಉದಾಹರಿಸಿದ ಗ್ರಂಥಗಳಲ್ಲಿ ಬಹಳಷ್ಟು ಕ್ರಿಸ್ತ ಪೂರ್ವ ಕಾಲದವಿರುತ್ತದೆ. ವ್ಯಾಡಿಯ ಕಾಲವು ಕ್ರಿಸ್ತಾಬ್ದಕ್ಕಿಂತ ಒಂದು ಸಾವಿರ ವರ್ಷ ಹಿಂದೆ ಎಂದು ಇತಿಹಾಸಜ್ಞರು ನಿರ್ಣಯಿಸಿದ್ದಾರೆ.

ಕ್ರಿಸ್ತ ಪೂರ್ವ ಕಾಲದ ರಾಮಾಯಣದ ಬಾಲಕಾಂಡದಲ್ಲಿಯೂ ''**ಪುರಾಣೇ ಷು ಮಯಾ ಶ್ರುತಂ**'' ಎಂದು ಉಲ್ಲೇಖ ಬರುತ್ತದೆ. ಕ್ರಿಸ್ತ ಪೂರ್ವ ೩೫೦ ವರ್ಷ ಹಿಂದಿನ 'ಸುತ್ತ ನಿಪಾತ' ಎಂಬ ಬೌದ್ಧ ಗ್ರಂಥದಲ್ಲಿ ಬಹುವಚನದಲ್ಲಿ ಪುರಾಣಗಳ ಉಲ್ಲೇಖವಿದೆ. ಪ್ರೊ. ಟೀಲರ ಅಭಿಪ್ರಾಯದಂತೆ ಬುದ್ಧನಿಗಿಂತ ಮುಂಚಿನದಾದ ಮಾನವ ಸಂಹಿತೆಯಲ್ಲಿ ಪುರಾಣೋಲ್ಲೇಖವು ಕಂಡು ಬರುತ್ತದೆ. ಕಾತ್ಯಾಯನಸ್ಮೃತಿಯು ಇಸ್ವಿಸನಕ್ಕಿಂತ ೫೦೦ ವರ್ಷ ಪ್ರಾಚೀನವಾದುದೆಂದು ವಿದ್ವಾಂಸರು ಒಪ್ಪಿದ್ದಾರೆ.

ಸಾವಿರಾರು ವರ್ಷ ಮೊದಲಿನ ವೇದ, ಉಪನಿಷತ್, ಬ್ರಾಹ್ಮಣ, ಸೂತ್ರ, ಸ್ಮೃತಿಪ್ರಬಂಧಗಳಲ್ಲಿ ಪ್ರಾಚೀನ ಪ್ರಮಾಣ ಗ್ರಂಥತ್ವೇನ ಉದಾಹೃತವಾಗಬೇಕಾದರೆ ಪುರಾಣಗಳು ಅದಕ್ಕಿಂತ ಎರಡು ಮೂರುಸಾವಿರ ವರ್ಷ ಹಿಂದಿನ ಕಾಲದವೇ ಇರಬೇಕು. ನಮಗೀಗ ೪೦೦, ೬೦೦, ೧೦೦೦, ೧೫೦೦ ಸಾವಿರ ವರ್ಷ ಹಿಂದಿನ ಶ್ರೀ ಮಧ್ವ ರಾಮಾನುಜ ಕಾಲಿದಾಸ ಶಂಕರ ಕುಮಾರಿ ಲಭಟ್ಟರ ಗ್ರಂಥಗಳು ವಿದಿತವಿವೆ. ೩೦೦-೪೦೦ ವರ್ಷಗಳಲ್ಲಿ ಯಾರಿಂದಲೋ ರಚಿಸಲ್ಪಟ್ಟಿದ್ದರೆ ಆ ಗ್ರಂಥಗಳು ಸರ್ವ ಮಾನ್ಯವು ಸರ್ವಥಾ ಆಗಲಾರವು. ಕ್ರಿಸ್ತ ಪೂರ್ವ ಸಾವಿರ ವರ್ಷ ಹಿಂದಿನ ಶ್ರೀ ಸಾಮಾನ್ಯರಿಗೂ ಗ್ರಂಥಕಾರರಿಗೂ ವಿಮರ್ಶಕರಿಗೂ ಪುರಾಣ ಗ್ರಂಥಗಳು ದ್ವಾಪರಯುಗದ ಅಂತ್ಯಭಾಗದಲ್ಲಿ ಭಗವಂತನ ಅವತಾರ ಭೂತರಾದ ಕೃಷ್ಣ ದ್ವೈಪಾಯನ ವ್ಯಾಸರಿಂದಲೇ ರಚಿತವಾದದ್ದರಿಂದ ಹದಿನೆಂಟು ಪುರಾಣಗಳೂ ಅತ್ಯಂತ ಪ್ರಮಾಣಗಳೆಂದು ದೃಢವಾದ ಪರಿಜ್ಞಾನವಿದ್ದಿತು. ಪಾಶ್ಚಾತ್ಯರು ಹೇಳಿದಂತೆ ಯಾರಾದರೂ ಅರ್ವಾಚೀನ ಕಾಲದಲ್ಲಿ ತಮಗಿಂತ ತುಸು ಹಿಂದೆ ಇವುಗಳನ್ನು ರಚಿಸಿದ್ದರೆ ಒಬ್ಬರಲ್ಲ ಒಬ್ಬ ಗ್ರಂಥಕಾರನು ಇದು 'ಕೃತಕ' ಅರ್ವಾಚೀನ, ಕೇನಾಪಿ ಕೃತ. ಅತ ಏವ ಅಪ್ರಮಾಣ' ಎಂದು ಹೇಳುತ್ತಿದ್ದ. ಕ್ರಿಸ್ತ ಪೂರ್ವ ಅಥವಾ ಕ್ರಿಸ್ತೋತ್ತರ ಯಾವುದೇ ಗ್ರಂಥದಲ್ಲಿಯೂ ಈ ಪುರಾಣಗಳು ವ್ಯಾಸರ ಹೊರತು ಬೇರೊಬ್ಬರಿಂದ ಕ್ರಿಸ್ತಶಕದ ಹಿಂದೆ ಮುಂದೆ ಎಂದಾದರೂ ರಚಿತವಾದದ್ದರ ಉಲ್ಲೇಖವು ಅಪ್ಪಿತಪ್ಪಿ ಕೂಡ ಬರುವದಿಲ್ಲ.

ಬ್ರಾಹ್ಮಣ ಸಾಹಿತ್ಯವನ್ನು ದೂಷಿಸುವ ಜೈನ ಬೌದ್ಧಾದಿ ವಾಙ್ಮಯದಲ್ಲಿಯೂ ಕೂಡ ಪುರಾಣಗಳು ಇತ್ತೀಚಿನ ಕಾಲದಲ್ಲಿ ಯಾವನೋ ಅಪ್ರಯೋಜಕ ವ್ಯಕ್ತಿಯಿಂದ ರಚಿತವೆಂದು ಖಂಡಿಸಲ್ಪಟ್ಟಿಲ್ಲ.

ಆದುದರಿಂದ ಪುರಾಣಗಳೆಲ್ಲವೂ ಕ್ರಿಸ್ತಪೂರ್ವ ಮೂರುಸಾವಿರ ವರ್ಷಗಳ ಹಿಂದೆ ವೇದವ್ಯಾಸರಿಂದಲೇ ರಚಿಸಲ್ಪಟ್ಟವು. ವ್ಯಾಸರಗಿಂತ ಹಿಂದೆಯೂ ಈ ಪುರಾಣಗಳು

ಇದ್ದವು. ಅವುಗಳನ್ನೆಲ್ಲ ಕ್ರೋಢೀಕರಿಸಿ ಹೊಸರೂಪಕೊಟ್ಟವರು ಶ್ರೀವ್ಯಾಸರು. ಮೊದಲಿನ ಪುರಾಣಗಳೆಲ್ಲ ಅತ್ತಿತ್ತ ವಿಕೀರ್ಣವಾಗಿ ಆಖ್ಯಾನ ಉಪಾಖ್ಯಾನ ಗೀತೆಗಾಥೆ ಮುಂತಾದ ರೂಪದಿಂದ ಅಲ್ಲಲ್ಲಿ ಪ್ರಚಲಿತವಾಗಿದ್ದವು. ಅವುಗಳನ್ನೆಲ್ಲ ಸಂಗ್ರಹಿಸಿ ಒಂದು ಸುವ್ಯವಸ್ಥಿತ ರೂಪಕೊಟ್ಟು ವ್ಯಾಸರು ಮುಂದೆ ಅವುಗಳ ಪ್ರಸಾರಕ್ಕಾಗಿ ರೋಮಹರ್ಷಣ ಎಂಬ ತಮ್ಮ ಶಿಷ್ಯನಿಗೆ ಅವುಗಳನ್ನು ಚೆನ್ನಾಗಿ ಕಲಿಸಿಕೊಟ್ಟರು. ಆ ರೋಮಹರ್ಷಣನು ಸುಮತಿ, ಅಗ್ನಿವರ್ಣ, ಮಿತ್ರಯು, ಶಾಂತಪಾಯನ, ಅಕೃತ ವ್ರಣ, ಸಾವರ್ಣಿ ಎಂಬ ಆರು ಶಿಷ್ಯರಿಗೆ ಹೇಳಿದನು. ಎಂದು ಮುಂತಾಗಿ ಈ ಪುರಾಣಗಳ ರಚನಾಕ್ರಮವನ್ನು ಇದೇ ವಿಷ್ಣು ಪುರಾಣದಲ್ಲಿ ತಿಳಿಸಿ ಹೇಳಿದ್ದಾರೆ.

**ಆಖ್ಯಾನೈಶ್ಚಾಪ್ಯುಪಾಖ್ಯಾನೈಃ ಗಾಥಾಭಿಃ ಕಲ್ಪಶುದ್ಧಿಭಿಃ।**
**ಪುರಾಣ ಸಂಹಿತಾಂ ಚಕ್ರೆ ಪುರಾಣಾರ್ಥ ವಿಶಾರದಃ ॥**

**ಪ್ರಖ್ಯಾತೋ ವ್ಯಾಸಶಿಷ್ಯೋಽಭೂತ್ ಸೂತೋ ವೈ ರೋಮಹರ್ಷಣಃ ।**
**ಸುಮತಿಶ್ಚಾಗ್ನಿವರ್ಚಶ್ಚ ಮಿತ್ರಯುಃ ಶಾಂಶಪಾಯನಃ ॥**
**ಅಕೃತವ್ರಣೋಥ ಸಾವರ್ಣಿಃ ಷಟ್ ಶಿಷ್ಯಾಸ್ತಸ್ಯಚಾಭವನ್''**

ಇವರಲ್ಲಿ ಶಾಂಶಪಾಯನ, ಅಕೃತವ್ರಣ, ಸಾವರ್ಣಿ ಮತ್ತು ರೋಮಹರ್ಷಣ ನಾಲ್ಕು ಜನರು ಬೇರೆ ಬೇರೆ ಪುರಾಣ ಸಂಹಿತೆಗಳನ್ನೇ ರಚಿಸಿದರೆಂದು ವಿಷ್ಣುಪುರಾಣದಲ್ಲಿ ಹೇಳಿದ್ದಾರೆ.

ಮೂಲ ಹದಿನೆಂಟು ಪುರಾಣಗಳನ್ನು ರಚಿಸಿದವರು ವ್ಯಾಸರೇ ಆಗಿದ್ದರೂ ಮುಂದೆ ಕ್ರಿಸ್ತ ಪೂರ್ವಕಾಲದಲ್ಲಿಯೂ ಕ್ರಿಸ್ತೋತ್ತರದಲ್ಲಿ ೯-೧೦ನೇ ಶತಮಾನಗಳ ವರೆಗೆ ಈ ಪುರಾಣಗಳ ಸಂಸ್ಕರಣವು ನಡದೇ ಇದ್ದಿತು.

ಅದರ ಮೇಲೆ ಯಾರಾದರೂ ಕೈಯ್ಯಾಡಿಸಿ ಹೊರತಂದಾಗ ಅದೇ ಅದರ ಹೊಸ ಹುಟ್ಟು ಎಂದು ಪಾಶ್ಚಾತ್ಯ ವಿಮರ್ಶಕರು ಭ್ರಮಿಸಿದ್ದಾರೆ ನಮ್ಮವರೂ ಅದೇದಾರಿಯಲ್ಲಿ ಕ್ರಮಿಸಿದ್ದಾರೆ

ವ್ಯಾಸರ ಅನಂತರ ವೈಷ್ಣವ ಆರ್ಯಧರ್ಮಕ್ಕೆ ಕ್ರಿಸ್ತಪೂರ್ವಕಾಲದಲ್ಲಿ ಜೈನ ಬೌದ್ಧ ಚಾರ್ವಾಕ ಮುಂತಾದವರಿಂದ ಬಹಳ ದೊಡ್ಡ ಗಂಡಾಂತರ ಬಂದಿತು.

ಕ್ರಿಸ್ತಪೂರ್ವ ೪೦೦ ರಿಂದ ಕ್ರಿಸ್ತಾಬ್ದ ೨೦೦ ರ ವರೆಗೆ ಈ ಸನಾತನ ಧರ್ಮವು ಏಳೆಂಟುನೂರು ವರ್ಷಗಳವರೆಗೆ ಹೋರಾಡಿ ಕೊನೆಗೆ ತನ್ನ ಅಂತಸ್ಸತ್ವದಿಂದ ಆ ಎಲ್ಲ ನಾಸ್ತಿಕ ಮತಗಳನ್ನು ಪರಾಹತಗೊಳಿಸಿ ತನ್ನ ವೈದಿಕ ಸಂಸ್ಕೃತಿಯ ವಿಜಯ ಧ್ವಜವನ್ನು ಮೇಲೆತ್ತಿತು. ವಿಕ್ರಮ, ಚಂದ್ರಗುಪ್ತ, ಸಮುದ್ರಗುಪ್ತ, ಸ್ಕಂದಗುಪ್ತ, ಪುಷ್ಯಮಿತ್ರ ಮುಂತಾದ ರಾಜರ ಕಾಲದಲ್ಲಿ ಪುರಾಣಗಳ ಪರಿಷ್ಕರಣವಾದದ್ದು ತಿಳಿದು ಬರುತ್ತದೆ. ಈ ಹೊಸ ಪರಿಷ್ಕರಣದಿಂದ ಹಳೆಯ ಪುರಾಣ ಸಂಹಿತೆಗಳು ಕಣ್ಮರೆಯಾದಂತೆ ಕಾಣುತ್ತವೆ. ವಿಷ್ಣು ಪುರಾಣದಲ್ಲಿ ವ್ಯಾಸರ ಪ್ರಶಿಷ್ಯರಾದ ಅಕೃತವ್ರಣ, ಸಾವರ್ಣಿ, ಶಾಂತಪಾಯನ, ರೋಮಹರ್ಷಣ ಮುಂತಾದವರು ನಾಲ್ಕು ಪುರಾಣ ಸಂಹಿತೆಗಳನ್ನು ರಚಿಸಿದರೆಂದು ಹೇಳಿದೆ. ಆವಾವೂ ಈಗ ಕಾಣುವುದಿಲ್ಲ. ಆಗ ಆದ ಪುರಾಣ ಸಂಸ್ಕರಣದಲ್ಲಿಯೇ ಜೈನ

ಬೌದ್ಧ ಖಂಡನಾತ್ಮಕ ಉಪಾಖ್ಯಾನಗಳ ವಿಸ್ತಾರ ಹಾಗೂ ತತ್ತತ್ಕಾಲೀನ ರಾಜ ಮಹಾರಾಜರ ಉಲ್ಲೇಖಗಳು ಆ ಪುರಾಣಗಳಲ್ಲಿ ಸೇರಿಕೊಂಡಿರಬಹುದು.

ಆದರೆ ಮೂಲ ಹದಿನೆಂಟು ಪುರಾಣಗಳೆಲ್ಲವೂ ಭಗವಾನ್ ಶ್ರೀ ಕೃಷ್ಣ ದ್ವೈಪಾಯನ ವ್ಯಾಸರಿಂದಲೇ ಕಲಿಯುಗದ ಪ್ರಾರಂಭದಲ್ಲಿ ಐದು ಸಾವಿರ ವರ್ಷಗಳ ಹಿಂದೆ ರಚಿತವಾಗಿವೆಯೆಂಬ ವಿಷಯದಲ್ಲಿ ಭಾರತೀಯ ವೇದಶಾಸ್ತ್ರ ಪುರಾಣ ಸ್ಮೃತಿ ಸಾಹಿತ್ಯವು ಜಾಗರೂಕ ಸಾಕ್ಷಿಯಾಗಿ ನಿಂತಿದೆ.

ಹದಿನೆಂಟು ಪುರಾಣಗಳೆಲ್ಲವೂ ಕ್ರಿಸ್ತಪೂರ್ವ ಮೂರುಸಾವಿರ ವರ್ಷ ಪೂರ್ವದವು ಎಂದಾದಬಳಿಕ ವಿಷ್ಣುಪುರಾಣವೂ ಕಾಡ ಅಷ್ಟೇ ಪ್ರಾಚೀನತಮವಾದುದೆಂದು ಬೇರೆ ಹೇಳಬೇಕಾಗಿಲ್ಲ. ಈ ವಿಷ್ಣು ಪುರಾಣದ ಸ್ವರೂಪ, ಲಕ್ಷಣ, ವ್ಯಾಪ್ತಿ, ವಿಸ್ತಾರಗಳನ್ನು ಮತ್ಸ್ಯಪುರಾಣದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.

**''ವಾರಾಹಕಲ್ಪವೃತ್ತಾಂತಂ ಅಧಿಕೃತ್ಯ ಪರಾಶರಃ'' ।**
**ಯತ್ರಾಹ ಧರ್ಮಾನಖಿಲಾಂಸ್ತದುಕ್ತಂ ವೈಷ್ಣವಂ ವಿದುಃ ॥**
**ತ್ರಯೋವಿಂಶತಿ ಸಾಹಸ್ರಂ ತತ್ಪ್ರಮಾಣಂ ವಿದುರ್ಬುಧಾಃ ॥**

ವರಾಹ ಕಲ್ಪದ ವೃತ್ತಾಂತವನ್ನು ಹೇಳಹೊರಟ ಪರಾಶರ ಮುನಿಯು ಬಿತ್ತರಿಸಿದ ಸಕಲ ಧರ್ಮರಹಸ್ಯವೇ ವಿಷ್ಣುಪುರಾಣ ಎನಿಸುತ್ತದೆ. ಈ ವಿಷ್ಣುಪುರಾಣದಲ್ಲಿ ಇದ್ದ ಒಟ್ಟು ಶ್ಲೋಕಗಳ ಸಂಖ್ಯೆ (೨೩೦೦೦) ಇಪ್ಪತ್ತು ಮೂರು ಸಾವಿರ.

ಆದರೆ ನಮಗೆ ಈಗ ದೊರಕುವ ವಿಷ್ಣು ಪುರಾಣದಲ್ಲಿ ಕೇವಲ ಏಳುಸಾವಿರ (೭೦೦೦) ಪದ್ಯಗಳು ಮಾತ್ರ ಇರುತ್ತವೆ. ಕೆಲವರು ''ವಿಷ್ಣು-ಧರ್ಮೋತ್ತರ''ಎಂಬ ಪುರಾಣವನ್ನು ವಿಷ್ಣು ಪುರಾಣದ ಉತ್ತರ ಭಾಗವಿರಬಹುದು. ಈಗಿರುವ ಆರು ಅಂಶಗಳು ಅದರ ಪೂರ್ವಭಾಗ ಎಂದು ಹೇಳುತ್ತಾರೆ. ಆದರೆ ಈಗ ಉಪಲಬ್ಧವಿದ್ದ ವಿಷ್ಣು-ಧರ್ಮೋತ್ತರದ ಒಂಬತ್ತು ಸಾವಿರ ಪದ್ಯಗಳನ್ನು ಸೇರಿಸಿದರೂ ಒಟ್ಟು ವಿಷ್ಣು ಪುರಾಣದ ಪದ್ಯಗಳ ಸಂಖ್ಯೆ (೧೬) ಹದಿನಾರು ಸಾವಿರವಾಯಿತು. ಇಪ್ಪತ್ತು ಮೂರು ಸಾವಿರವಾಗುವದಿಲ್ಲ.

ವಿಲ್ಸನ್ ಎಂಬ ವಿಷ್ಣು ಪುರಾಣದ ವಿಮರ್ಶಕನು ಭಾರತದ ಎಲ್ಲ ದೇಶಗಳಲ್ಲಿ ಸಂಚರಿಸಿ ಆ ಪುರಾಣದ ಏಳು ಪ್ರತಿಗಳನ್ನು ಕಲೆ ಹಾಕಿದನು. ಆ ಏಳೂ ಪ್ರತಿಗಳಲ್ಲಿ ಆರು ಸಾವಿರ ಶ್ಲೋಕಗಳೇ ಇದ್ದುದು ಕಂಡು ಬಂದಿತು.

ಇದರ ಮೇಲಿಂದ ವಿಷ್ಣು ಪುರಾಣದ ಏಳು ಸಾವಿರ ಪದ್ಯಗಳೇ ಉಪಲಬ್ಧ ವಿದ್ದ ಭಾಗ ಎಂದು ಗೊತ್ತಾಗುತ್ತದೆ. ವಿಷ್ಣು ಧರ್ಮೋತ್ತರವು ಪ್ರತ್ಯೇಕವಾದ ಒಂದು ಪುರಾಣವೆಂದೇ ಪರಿಗಣಿಸುವುದು ಸೂಕ್ತವೆಂದು ತೋರುತ್ತದೆ. ಶ್ರೀ ಶಂಕರಾಚಾರ್ಯರೇ ಮೊದಲಾದ ಪ್ರಾಚೀನ ಆಚಾರ್ಯರು ಎರಡನ್ನೂ ಬೇರೆ ಬೇರೆ ಪುರಾಣಗಳೆಂದೇ ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಆದ್ಯಸಂಕರಾಚಾರ್ಯರ ಕಾಲದಲ್ಲಿಯೇ ವಿಷ್ಣು ಪುರಾಣವು ಏಳೇ ಸಾವಿರ ಪದ್ಯಗಳುಳ್ಳದ್ದಾಗಿದ್ದು ಉಳಿದ ಪದ್ಯಗಳೆಲ್ಲ ಆಗಲೇ ಲುಪ್ತವಾಗಿದ್ದವೆಂದು ತಿಳಿದು ಬರುತ್ತದೆ.

ಶ್ರೀ ಶಂಕರಾಚಾರ್ಯರು ತಮ್ಮ ವಿಷ್ಣು ಸಹಸ್ರ ನಾಮ ಭಾಷ್ಯದಲ್ಲಿ ''ವಿಷ್ಣು ಪುರಾಣಾಂತೇ ಪರಾಶರೇಣ ಉಪಸಂಹೃತಂ ಯಸ್ಮಿನ್ನ್ಯಸ್ತಮತಿಃ ಇತ್ಯಾದಿ'' ಎಂದು ಈಗಿದ್ದ ವಿಷ್ಣುಪುರಾಣದ ಅಂತ್ಯ ಭಾಗದ ಪದ್ಯವಾದ

**''ಯಸ್ಮಿನ್ನ್ಯಸ್ತ ಮತಿರ್ನ ಯಾತಿ ನರಕಂ ಸ್ವರ್ಗೋಽಪಿ ಯಚ್ಚಿಂತನೇ ।**
**ವಿಘ್ನೋ ಯತ್ರ ನಿವೇಶಿತಾತ್ಮ ಮನಸೋ ಬ್ರಾಹ್ಮೋಽಪಿ ಲೋಕೋಽಲ್ಪಕಃ ॥**
**ಮುಕ್ತಿಂ ಚೇತಸಿ ಯಂ ಸ್ಥಿತೋಽಮಲಧಿಯಾಂ ಪುಂಸಾಂ ದದಾತ್ಯವ್ಯಯಃ ।**
**ಕಿಂ ಚಿತ್ರಂ ಯದಘಂ ಪ್ರಯಾತಿ ವಿಲಯಂ ತತ್ರಾಚ್ಯುತೇ ಕೀರ್ತಿತೇ ॥**

ಯಾವ ಹರಿಯಲ್ಲಿ ಚಿತ್ತವನ್ನಿಟ್ಟ ಮಾತ್ರಕ್ಕೆ ನರಕದ ಭಯ ದೂರವಾಗುವುದು. ನೆನೆಯುವಷ್ಟರಲ್ಲಿ ನಾಕ ಕೈಯಲ್ಲಿ ಬರುವದು. ಆ ಹರಿಭಕ್ತನಿಗೆ ಬ್ರಹ್ಮಲೋಕವೂ ಕೂಡ ವಿಘ್ನವೇ ಎನಿಸುವದು. ಮುಕ್ತಿ ಕೈ ಮಾಡಿ ಕರೆಯುವಾಗ ಈ ಬ್ರಹ್ಮ ಲೋಕವೂ ಕ್ಷುದ್ರವೆನಿಸುವದು ಸಹಜವಷ್ಟೇ ! ನಂಬಿದವರಿಗೆ, ನಿರಂತರ ನೆನೆಯುವವರಿಗೆ ಕೈವಲ್ಯವನ್ನೇ ಕೊಡುವ ಆ ಅಚ್ಯುತನ ನಾಮಸ್ಮರಣವನ್ನು ಮಾಡುವುದರಿಂದ ಪಾಪಗಳು ನಾಶವಾಗುವದರಲ್ಲಿ ಆಶ್ಚರ್ಯವೇನಿದೆ ? ಎಂಬ ಈ ಪದ್ಯವನ್ನು ಉದಾಹರಿಸಿದ್ದಾರೆ. ಇದು ವಿಷ್ಣು ಪುರಾಣದ ಕೊನೆಯ ಪದ್ಯವೆಂದು ಹೇಳಿದ್ದಾರೆ. ಆದಿ ಶಂಕರರ ಕಾಲದಲ್ಲಿಯೇ ವಿಷ್ಣು ಪುರಾಣದ ಹದಿನಾರು ಸಾವಿರ ಪದ್ಯಗಳು ಕಳೆದು ಹಳೇ ಮಾತಾಗಿ ಈಗಿದ್ದಷ್ಟೇ ವಿಷ್ಣುಪುರಾಣ ಎಂದು ತಿಳಿಯುವಂತಾಗಿತ್ತು ಎಂಬುದು 'ವಿಷ್ಣುಪುರಾಣಾಂತೇ ಪರಾಶರೇಣ ಉಪಸಂಹೃತಂ' ಅಂತೇ ಮತ್ತು ಉಪಸಂಹೃತಂ ಎಂಬ ಎರಡು ಶಬ್ದಗಳಿಂದ ಗೊತ್ತಾಗುವದು. ಶ್ರೀ ಶಂಕರಾಚಾರ್ಯರ ಕಾಲದಲ್ಲಿಯೇ ಅದರ ಮೂಲ ರೂಪವನ್ನು ಗುರುತಿಸದಷ್ಟು ಅಪಗಮ ಉಪಗಮಗಳು ಆಗಬೇಕಾದರೆ ಮೂಲ ಪುರಾಣವು ಎಷ್ಟು ಕಾಲ ಹಿಂದಿನದಿರಬೇಡ ! ವಾಚಕರೇ ಊಹಿಸಬಹುದು. ಪ್ರಾಚೀನ ವೈದಿಕರ ದೃಷ್ಟಿಯಿಂದ ಪುರಾಣಗಳು ಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಾಗಿವೆ. ಸಾತ್ವಿಕ ಪುರಾಣಗಳಲ್ಲಿ ಶ್ರೀ ಹರಿಯ ಮಹಾಮಹಿಮೆಯು ವಿಶೇಷ ರೂಪವಾಗಿ ಬಣ್ಣಿಸಲ್ಪಟ್ಟಿರುತ್ತದೆ. ವಿಷ್ಣು ಪುರಾಣವು ಸಾತ್ವಿಕ ಪುರಾಣದಲ್ಲಿ ಪರಿಗಣಿತವಾಗಿದೆ.

ಪದ್ಮ ಪುರಾಣದಲ್ಲಿ –

**ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಂ**
**ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭ ದರ್ಶನೇ ॥**
**ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿ ವೈ ॥**

ವಿಷ್ಣು, ನಾರದ, ಭಾಗವತ ಗರುಡ, ಪದ್ಮ ಮತ್ತು ವರಾಹ ಈ ಆರು ಪುರಾಣಗಳು ಸಾತ್ವಿಕ ಪುರಾಣಗಳೆಂದು ಪದ್ಮ ಪುರಾಣದ ಉತ್ತರ ಖಂಡದಲ್ಲಿ ಹೇಳಲಾಗಿದೆ.

ಇದರಂತೆ ಸ್ಕಂದ, ಶಿವ, ಲಿಂಗ, ಮತ್ಸ್ಯ, ಕೂರ್ಮ ಮುಂತಾದವು ತಾಮಸ, ಉಳಿದವೆಲ್ಲ ರಾಜಸ ಎಂದು ನಿರ್ದೇಶಿಸಿದ್ದಾರೆ.

ಈ ವಿಷ್ಣು ಪುರಾಣವು ಸಾತ್ವಿಕ ಪುರಾಣವಾಗಿದ್ದು ಶ್ರೀ ಮದಾನಂದ ತೀರ್ಥರು ಇದನ್ನು ಅನೇಕ ಬಾರಿ ಉಲ್ಲೇಖಿಸಿದ್ದಾರೆ. ಮತ್ತು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಕೃಷ್ಣ ಕಥೆಯನ್ನು ಬಿತ್ತರಿಸುವಾಗ ವಿಷ್ಣು ಪುರಾಣದ ವಸ್ತು ವಿಷಯಗಳನ್ನು ಹೇರಳವಾಗಿ ಬಳಿಸಿಗೊಂಡಿದ್ದಾರೆ.

ವಿಷ್ಣು ಪಾರಮ್ಯಪ್ರತಿಪಾದಕವಾದ ಈ ಪುರಾಣವು ಶ್ರೀ ಶಂಕರಾಚಾರ್ಯರಿಗೂ ರಾಮಾನುಜಾಚಾರ್ಯರಿಗೂ ಶ್ರೀ ಮಧ್ವಾಚಾರ್ಯರಿಗೂ ಪರಮ ಮಾನ್ಯವಾಗಿದೆ.

ನಾರದ ಪುರಾಣದಲ್ಲಿ ಈ ವಿಷ್ಣು ಪುರಾಣದ ಆರೂ ಅಂಶಗಳ ಸಾರಾಂಶವನ್ನು ಸಂಕ್ಷಿಪ್ತವಾಗಿ ಕೊಟ್ಟಿದ್ದಾರೆ. ಅದು ಇಡೀ ವಿಷ್ಣುಪುರಾಣದ ವಿಹಂಗಮ ನೋಟದಂತೆ ಅತ್ಯಂತ ಹೃದಯಂಗಮವಾಗಿದೆ.

ಶೃಣು ವತ್ಸ ! ಪ್ರವಕ್ಷ್ಯಾಮಿ ಪುರಾಣಂ ವೈಷ್ಣವಂ ಮಹತ್ ॥
ತ್ರಯೋವಿಶಂತಿಸಾಹಸ್ರಂ ಸರ್ವಪಾತಕನಾಶನಂ ॥

ಯತ್ರಾದಿಭಾಗೇ ನಿರ್ದಿಷ್ಟಾಃ ಷಡಂಶಾಃ ಶಕ್ತಿಜೇನ ಹಿ ।
ಮೈತ್ರೇಯಾಯಾದಿಮೇ ತತ್ರ ಪುರಾಣಸ್ಯಾವತಾರಿಕಾಃ ॥

ಪ್ರಥಮಾಂಶೇ

ಆದಿಕಾರಣಸರ್ಗಶ್ಚ ದೇವಾದೀನಾಂ ಚ ಸಂಭವಃ ।
ಸಮುದ್ರಮಥನಾಖ್ಯಾನಂ ದಕ್ಷಾದೀನಾಂ ತತೋಽನ್ವಯಾಃ ।
ಧ್ರುವಸ್ಯ ಚರಿತಂ ಚೈವ ಪೃಥೋಶ್ಚರಿತಮೇವ ಚ ।
ಪ್ರಾಚೇತಸಂ ತಥಾಖ್ಯಾನಂ ಪ್ರಲ್ಹಾದಸ್ಯ ಕಥಾನಕಮ್ ।
ಪೃಥಗ್ ರಾಜ್ಯಾಧಿಕಾರಾಖ್ಯಾಃ ಪ್ರಥಮಾಂಶ ಇತೀರತಃ ॥

ದ್ವಿತೀಯಾಂಶ

ಪ್ರಿಯವ್ರತಸ್ಯಚಾಖ್ಯಾನಂ ದ್ವೀಪವರ್ಷನಿರೂಪಣಮ್ ।
ಪಾತಾಲನರಕಾಖ್ಯಾನಂ ಸಪ್ತಸ್ವರ್ಗನಿರೂಪಣಮ್ ।
ಸೂರ್ಯಾದಿಚಾರಕಥನಂ ಪೃಥಗ್‌ಲಕ್ಷಣ ಸಂಯುತಮ್ ।
ಚರಿತಂ ಭರತಸ್ಯಾಥ ಮುಕ್ತಿಮಾರ್ಗನಿದರ್ಶನಮ್ ॥
ನಿದಾಘಋಭುಸಂವಾದೊ ದ್ವಿತೀಯೊಂಶ ಉದಾಹೃತಃ ।

ತೃತೀಯಾಂಶ

ಮನ್ವಂತರ ಸಮಾಖ್ಯಾನಂ ವೇದವ್ಯಾಸಾವತಾರಕಮ್ ।
ನರಕೋದ್ಧಾರಕಂ ಕರ್ಮ ಗದಿತಂ ಚ ತತಃ ಪರಂ ॥
ಸಗರಸ್ಯೌರ್ವಸಂವಾದೇ ಸರ್ವಧರ್ಮ ನಿರೂಪಣಮ್ ।
ಶ್ರಾದ್ಧಕಲ್ಪಂ ತಥೊದ್ದಿಷ್ಟಂ ವರ್ಣಾಶ್ರಮ ನಿಬಂಧನೆ ॥

ಸದಾಚಾರಶ್ಚ ಕಥಿತೊ ಮಾಯಾಮೋಹಕಥಾ ತತಃ ॥
ತೃತೀಯೊಂಶೊಯಮುದಿತಃ ಸರ್ವಪಾಪಪ್ರಣಾಶನಃ ।

ಚತುರ್ಥಾಂಶೆ

ಸೂರ್ಯವಂಶಕಥಾ ಪುಣ್ಯಾ ಸೋಮವಂಶಾನುಕೀರ್ತನಮ್ ॥
ಚತುರ್ಥಾಂಶೇ ಮುನಿಶ್ರೇಷ್ಠ ! ನಾನಾರಾಜಕಥೋಚಿತಮ್

ಪಂಚಮಾಂಶೆ

ಕೃಷ್ಣಾವತಾರ ಸಂಪ್ರಶ್ನೊ ಗೋಕುಲೀಯಕಥಾ ತತಃ ।
ಪೂತನಾದಿವಧೋ ಬಾಲ್ಯೇ ಕೌಮಾರ್ಯೇಽಘಾದಿಹಿಂಸನಮ್ ॥
ಕೈಶೋರೇ ಕಂಸಹನನಂ ಮಾಥುರಂ ಚರಿತಂ ತಥಾ ।
ತತಸ್ತು ಯೌವನೇ ಪ್ರೋಕ್ತಾ ಲೀಲಾ ದ್ವಾರಾವತೀಭವಾ ॥
ಸರ್ವದೈತ್ಯವಧೋ ಯತ್ರ ವಿವಾಹಾಶ್ಚ ಪೃಥಗ್ವಿಧಾಃ ।
ಯತ್ರ ಸ್ಥಿತ್ವಾ ಜಗನ್ನಾಥಃ ಕೃಷ್ಣೋ ಯೋಗೇಶ್ವರೇಶ್ವರಃ ॥
ಭೂಭಾರಹರಣಂ ಚಕ್ರೇ ಪರಸ್ವಹನನಾದಿಭಿಃ ।
ಅಷ್ಟಾವಕ್ರೀಯಮಾಖ್ಯಾನಂ ಪಂಚಮೋಂಶ ಇತೀರಿತಃ ॥

ಷಷ್ಠಾಂಶೆ

ಕಲಿಜಂ ಚರಿತಂ ಪ್ರೋಕ್ತಂ ಚಾತುರ್ವಿಧ್ಯಂ ಲಯಸ್ಯ ಚ ।
ಬ್ರಹ್ಮಜ್ಞಾನ ಸಮುದ್ದೇಶಃ ಖಾಂಡಿಕ್ಯಸ್ಯ ನಿರೂಪಿತಃ ।
ಕೇಶಿಧ್ವಜೇನ ಚೇತ್ಯೇಷ ಷಷ್ಠೋಂಶಃ ಪರಿಕೀರ್ತಿತಃ ॥

ಉತ್ತರಭಾಗೆ

ಅತಃ ಪರಸ್ತು ಸೂತೇನ ಶೌನಕಾದಿಭಿರಾದರಾತ್ ॥
ಪೃಷ್ಟೇನ ಚೋದಿತಾಃ ಶಶ್ವದ್ವಿಷ್ಣುಧರ್ಮೋತ್ತರಾಹ್ವಯಾಃ ॥
ನಾನಾಧರ್ಮಕಥಾಃ ಪುಣ್ಯಾ ವ್ರತಾನಿ ನಿಯಮಾ ಯಮಾಃ ।
ಧರ್ಮಶಾಸ್ತ್ರಂ ಚಾರ್ಥಶಾಸ್ತ್ರಂ ವೇದಾಂತಂ ಜ್ಯೋತಿಷಂ ತಥಾ ।
ವಂಶಾಖ್ಯಾನ ಪ್ರಕರಣಾತ್ ಸ್ತೋತ್ರಾಣಿ ಮಲಯಸ್ತಥಾ ॥
ನಾನಾವಿದ್ಯಾಶ್ರಯಾಃ ಪ್ರೋಕ್ತಾಃ ಸರ್ವಲೋಕೋಪಕಾರಕಾಃ ।
ಏತದ್ವಿಷ್ಣು ಪುರಾಣಂ ವೈ ಸರ್ವಶಾಸ್ತ್ರಾರ್ಥಸಂಗ್ರಹಮ್ ॥

ಎಲ್ಲ ಪಾಪಗಳನ್ನು ಪರಹಿಸರಿಸುವ ವಿಷ್ಣು ಪುರಾಣವು ೨೩ ಸಾವಿರ ಪದ್ಯಾತ್ಮಕವಾಗಿದೆ. ಶಕ್ತಿ ಮುನಿಯ ಮಗನಾದ ಪರಾಶರಋಷಿಯು ಇದನ್ನು ಮೈತ್ರೇಯನಿಗೆ ಹೇಳಿದ್ದಾರೆ. ಇದರಲ್ಲಿ ಆರು ಭಾಗಗಳಿವೆ ಎಂದು ಹೇಳಿ ಈ ಪುರಾಣ ಪ್ರವರ್ತನೆಯ ಹಿನ್ನೆಲೆಯನ್ನು ಪ್ರಾರಂಭದಲ್ಲಿ ವಿವರಿಸಿದ್ದಾರೆ.

## ಪ್ರಥಮಾಂಶ

ಇದರ ಮೊದಲನೆಯ ಅಂಶದಲ್ಲಿ ಪ್ರಾಕೃತಿಕ ವೈಕೃತಿಕ ಸೃಷ್ಟಿ, ದೇವತೆಗಳ ಉತ್ಪತ್ತಿ, ಹಿಂದೆ ಹಾಲ್ಗಡಲನ್ನು ಕಡೆದ ಕತೆ, ದಕ್ಷಾದಿಗಳು ಮಾಡಿದ ಪ್ರಜಾಸೃಷ್ಟಿ, ಧ್ರುವನ ಚರಿತೆ, ಪೃಥುರಾಜನ ಕಥೆ, ಪ್ರಾಚೇತಸರ ಆಖ್ಯಾನ, ಪ್ರಹ್ಲಾದನ ಕಥಾನಕ, ಕಶ್ಯಪ ಸೃಷ್ಟಿ, ವಿಷ್ಣುವಿನ ವಿಭೂತಿ, ಹಾಗೂ ಜಗದ್ವ್ಯವಸ್ಥೆ ಮುಂತಾದ ವಿಷಯಗಳನ್ನು ನಿರೂಪಿಸಲಾಗಿದೆ.

## ದ್ವಿತೀಯಾಂಶ

ಪ್ರಿಯವ್ರತನ ಆಖ್ಯಾನ, ದೇಶ ನಡುಗಡ್ಡೆಗಳ ಬಣ್ಣನೆ, ಪಾತಾಲ ನರಕಗಳ ವಿವರಣೆ, ಸ್ವರ್ಗ ಮುಂತಾದ ಮೇಲಿನ ಲೋಕಗಳ ನಿರೂಪಣೆ, ಸೂರ್ಯಗ್ರಹ ನಕ್ಷತ್ರಾದಿಗಳ ಪರಿಭ್ರಮಣದ ಅರ್ಥ ಮತ್ತು ಕ್ರಮ, ಲಕ್ಷಣ, ವ್ಯಾಪ್ತಿ, ವಿಸ್ತಾರ, ಖಗೋಲ, ಭೂಗೋಲ, ಕಾಲಚಕ್ರ, ಜ್ಯೋತಿಶ್ಚಕ್ರ, ಮುಂತಾದ ವಿಷಯಗಳನ್ನು ಹೇಳಲಾಗಿದೆ.

## ಮೂರನೆಯ ಅಂಶ

ಮನುಮನ್ವಂತರಗಳ ವೃತ್ತಾಂತ, ವೇದವ್ಯಾಸರ ಅವತಾರ, ನರಕದಿಂದ ಪಾರು ಮಾಡುವ ಕರ್ಮ ನಿರೂಪಣ, ಸಗರ ಔರ್ವ ಸಂವಾದದಲ್ಲಿ ಸರ್ವಧರ್ಮಗಳ ಕಥನ, ಶ್ರಾದ್ಧವಿಚಾರ, ವರ್ಣಾಶ್ರಮಾಚಾರ, ಸದಾಚಾರ, ಮಾಯಾಮೋಹ ಕಥೆ ಮೊದಲಾದ ಅನೇಕ ವಿಷಯಗಳನ್ನು ಹೇಳಲಾಗಿದೆ.

## ನಾಲ್ಕನೆಯ ಅಂಶ

ಸೂರ್ಯವಂಶದ ಕಥೆ ಮತ್ತು ಚಂದ್ರವಂಶದ ಕಥೆಗಳು ರಾಜಮಹಾರಾಜರ ಚರಿತ್ರೆಗಳೊಂದಿಗೆ ಈ ಚತುರ್ಥಾಂಶದಲ್ಲಿ ನಿರೂಪಿಸಲ್ಪಟ್ಟಿವೆ.

## ಪಂಚಮಾಂಶ

ಕೃಷ್ಣಾವತಾರ, ಗೋಕುಲದಲ್ಲಿ ಕೃಷ್ಣನ ಬಾಲಲೀಲೆ, ಪೂತನೆಯ ಸಂಹಾರ, ಅಘಾಸುರಮಾರಣ, ಕಂಸಹನನ ಮಥುರೆಯಲ್ಲಿ ಕೃಷ್ಣನ ಕಥೆ, ದ್ವಾರಕೆಯಲ್ಲಿ ನಡೆದ ಕೃಷ್ಣನ ತಾರುಣ್ಯ ಲೀಲೆ, ದೈತ್ಯರ ಸಂಹಾರ, ಅನೇಕ ವಿವಾಹಗಳ ವೃತ್ತಾಂತ ಎಲ್ಲ ದೈತ್ಯರ ಸಂಹಾರ ಮುಂತಾದವುಗಳಿಂದ ಕೃಷ್ಣನು ಭೂಮಿಯ ಭಾರವನ್ನು ಇಳುಹಿದ ಸಂಗತಿ, ಅಷ್ಟಾವಕ್ರಾಖ್ಯಾನ ಮುಂತಾದವುಗಳು ಈ ಐದನೇ ಅಂಶದಲ್ಲಿ ಬಂದಿವೆ.

## ಷಷ್ಠಾಂಶ

ಕಲಿಯ ಧರ್ಮ, ನಾಲ್ಕುವಿಧ ಪ್ರಲಯ, ಕೇಶಿಧ್ವಜ ಖಾಂಡಿಕ್ಯರ ಕಥೆ, ಬ್ರಹ್ಮ ಜ್ಞಾನೋಪದೇಶ, ಮುಂತಾದ ವಿಷಯಗಳು ಇದರಲ್ಲಿ ನಿರೂಪಿತವಾಗಿವೆ.

## ಉತ್ತರಭಾಗ

ಅನಂತರ ಸೂತರು ಶೌನಕಾದಿಗಳ ಪ್ರಶ್ನೆಗೆ ಉತ್ತರಿಸುತ್ತ ಅನೇಕ ವಿಷ್ಣು ಧರ್ಮಗಳನ್ನು ಹೇಳಿದ್ದಾರೆ. ಅನೇಕ ಧರ್ಮಗಳು, ವ್ರತ, ನಿಯಮ, ಧರ್ಮಶಾಸ್ತ್ರ,

ಅರ್ಥಶಾಸ್ತ್ರ, ವೇದಾಂತ, ಜ್ಯೋತಿಷ್ಯ, ವಂಶಾಖ್ಯಾನ, ಮಲಯವೃತ್ತ, ಹಾಗೂ ಸರ್ವಲೋಕಕ್ಕೆ ಉಪಕಾರಕವಾದ ನಾನಾ ವಿದ್ಯೆಗಳು ಮತ್ತು ಸರ್ವಶಾಸ್ತ್ರಾರ್ಥ ಸಂಗ್ರಾಹಕವಾದ ಅನೇಕ ವಿಷಯಗಳು ಇಲ್ಲಿ ನಿರೂಪಿಸಲ್ಪಟ್ಟಿವೆ. ಇದರ ಮೇಲಿಂದ ವಿಷ್ಣು ಪುರಾಣದಲ್ಲಿ ಪೂರ್ವಭಾಗ ಉತ್ತರ ಭಾಗ ಎಂದು ಎರಡು ಭಾಗವಿದ್ದು ಮೊದಲಿನ ಆರು ಅಂಶಗಳು ಪೂರ್ವಭಾಗದಲ್ಲಿಯೂ ವಿಷ್ಣು ಧರ್ಮ, ಜ್ಯೋತಿಷ್ಯ ಮುಂತಾದವುಗಳು ಉತ್ತರಭಾಗದಲ್ಲಿಯೂ ಬರುತ್ತವೆಯೆಂದು ತೋರುತ್ತದೆ.

ನಾರದ ಪುರಾಣದ ಈ ಉತ್ತರ ಭಾಗದ ವಿಷಯಾನುಕ್ರಮಣಿಯನ್ನು ನೋಡಿದರೆ ವಿಷ್ಣು ಧರ್ಮೋತ್ತರ ಪುರಾಣವೇ ವಿಷ್ಣು ಪುರಾಣದ ಉತ್ತರ ಭಾಗವೆಂದು ತೋರುತ್ತದೆ. ಅದಕ್ಕಾಗಿಯೇ ವಿಷ್ಣು ಪುರಾಣದ ವೈದೇಶಿಕ ವಿಮರ್ಶಕ ವೀಕ್ಷಕನಾದ ವಿಲ್ಸನನ್ನು "How is the descrepancy to be Explained ?" ಎಂದು ಅಸಹಾಯೋದ್ಗಾರವನ್ನು ತೆಗೆದಿದ್ದಾನೆ.

ನಾರದ ಪುರಾಣದಲ್ಲಿ ವಿಷ್ಣು ಪುರಾಣ, ವಿಷ್ಣು ಧರ್ಮೋತ್ತರ ಪುರಾಣ ಎರಡನ್ನೂ ಒಂದೇ ಪುರಾಣದ ಪೂರ್ವಾರ್ದ ಉತ್ತರಾರ್ಧವೆಂದು ಪರಿಗಣಿಸಿ ಶ್ಲೋಕ ಸಂಖ್ಯೆಯನ್ನು (೭೩) ಸಾವಿರ ಎಂದು ಹೇಳಲಾಗಿದೆ. ಪೂರ್ವ ಭಾಗಕ್ಕೆ ವಿಷ್ಣು ಪುರಾಣವೆಂದೂ ಉತ್ತರ ಭಾಗಕ್ಕೆ ವಿಷ್ಣು ಧರ್ಮೋತ್ತರವೆಂದೂ ಬೇರೆಬೇರೆ ಹೆಸರು ಬಂದದ್ದರಿಂದ ಎರಡೂ ಸ್ವಯಂಪೂರ್ಣ ಸ್ವತಂತ್ರ ಪುರಾಣಗಳೆಂದೇ ಜನರಲ್ಲಿ ಭಾವನೆಯಾಗಿ ಸ್ವತಂತ್ರವಾಗಿಯೇ ಅವುಗಳ ಪಠನ ಪಾರಾಯಣ ಪ್ರವಚನಗಳು ರೂಢವಾದವು. ಆದರೆ ಬೃಹದ್ವಿಷ್ಣು ಪುರಾಣ ಎಂಬ ಗ್ರಂಥವು ಎರಡೂ ಕೂಡಿದ್ದಿರಬಹುದು. ಹೇಮಾದ್ರಿ ಮತ್ತು ಸ್ಮೃತಿ ರತ್ನಾವಲಿಕಾರರು ಬೃಹದ್ವಿಷ್ಣು ಪುರಾಣದಿಂದ ಹಲವಾರು ಪದ್ಯಗಳನ್ನು ಉದಾಹರಿಸಿದ್ದಾರೆ. ಆ ಪದ್ಯಗಳು ಈಗಿನ ವಿಷ್ಣು ಪುರಾಣದಲ್ಲಿ ದೊರಕುವದಿಲ್ಲ. ಕಾಠೇವಾಡದಲ್ಲಿ ವಿಷ್ಣು ಪುರಾಣ ಹಾಗೂ ವಿಷ್ಣು ಧರ್ಮೋತ್ತರ ಪುರಾಣ ಎರಡೂ ಕೂಡಿದ ಬೃಹದ್ವಿಷ್ಣು ಪುರಾಣವಿದ್ದು ಅದರಲ್ಲಿ ೨೩ ಸಾವಿರ ಪದ್ಯಗಳೂ ಇವೆ ಎಂದು ತ್ರ್ಯಂಬಕ ಗುರುನಾಥ ಕಾಳೆ ಇವರು ತಮ್ಮ ಪುರಾಣ ನಿರೀಕ್ಷಣ ಎಂಬ ಗ್ರಂಥದಲ್ಲಿ ಬರೆದಿದ್ದಾರೆ. ಎಲ್ಲ ಪುರಾಣಗಳಲ್ಲಿ ವಿಷ್ಣು ಪುರಾಣವು ಪ್ರಾಚೀನ ತಮವಾಗದಿದ್ದರೂ ಬಹು ಪ್ರಾಚೀನ ಎಂದು ಪಾಶ್ಚಾತ್ಯ ವಿದ್ವಾಂಸರು ನಿಷ್ಕರ್ಷಿಸಿದ್ದಾರೆ. ಇದು ಮುಂದಿನ ಎಲ್ಲ ಪೌರಾಣಿಕ ಮಾತ್ರವಲ್ಲದೇ ಮತಸ್ಥಾಪಕಾಚಾರ್ಯರಿಗೂ ಧರ್ಮಶಾಸ್ತ್ರ ನಿಬಂಧಕಾರರಿಗೂ ಪರಮ ಮಾನ್ಯವಾಯಿತು.

ಈ ವಿಷ್ಣು ಪುರಾಣದಲ್ಲಿ ಸ್ಮೃತಿಯಂತೆ ಧರ್ಮ ಶಾಸ್ತ್ರ ಭಾಗವೂ ವಿಶೇಷವಾಗಿದ್ದು ಇದರಲ್ಲಿಯ ಅಂಥ ಪದ್ಯಗಳನ್ನು ಮುಂದಿನ ಅನೇಕ ನಿಬಂಧಕಾರರು ಅತ್ಯಂತ ಆದರದಿಂದ ಉಲ್ಲೇಖಿಸಿದ್ದಾರೆ. ಜೀಮೂತ ವಾಹನ, ಅಪರಾರ್ಕ, ವಿಜ್ಞಾನೇಶ್ವರ, ಅನಿರುದ್ಧಭಟ್ಟ, ಬಲ್ಲಾಳಸೇನ, ದೇವನಭಟ್ಟ, ಹೇಮಾದ್ರಿ, ಕುಲ್ಲೂಕಭಟ್ಟ ಮುಂತಾದವರೆಲ್ಲರೂ ಪರಮ ಪ್ರಮಾಣವೆಂದು ಧರ್ಮಶಾಸ್ತ್ರ ವಿಷಯದಲ್ಲಿ ವಿಷ್ಣು ಪುರಾಣವನ್ನು ಉದಾಹರಿಸಿದ್ದಾರೆ ಮತ್ತು ಈ ವಿಷ್ಣು ಪುರಾಣಕ್ಕೆ ಅನೇಕ ಮಹಾ ವ್ಯಕ್ತಿಗಳು ಟೀಕೆ ಬರೆದು ಅದರ ವಿಷಯದಲ್ಲಿ ತಮಗಿರುವ ಅಗಾಧ ಶ್ರದ್ದೆಯನ್ನು ವ್ಯಕ್ತಪಡಿಸಿದ್ದಾರೆ.

ಭಾಗವತಕ್ಕೆ ವ್ಯಾಖ್ಯಾನ ಬರೆದ ಶ್ರೀಧರ, ಅದ್ವೈತಮತದ ಅಧ್ವರ್ಯುಗಳಾದ ಚಿತ್ಸುಖಾಚಾರ್ಯ, ಪ್ರಸನ್ನ ಹನುಮನ್ನಾಟಕ ಬರೆದ ಹನುಮಾನ್ ಮುಂತಾದವರೂ ಮತ್ತು ಜಗನ್ನಾಥ ಪಾಠಕ, ಸೂರ್ಯಕಾಂತ ಮಿಶ್ರ, ನೃಸಿಂಹ ಭಟ್ಟ, ರತ್ನಗರ್ಭ ವಿಷ್ಣುಚಿತ್ತ ಮೊದಲಾದವರೂ ಇದರ ಮೇಲೆ ಸುಂದರವಾದ ಟೀಕೆಗಳನ್ನು ಬರೆದಿದ್ದಾರೆ. ಇದರಂತೆ ಮಧ್ವಮತೀಯ ಅನೇಕ ಪಂಡಿತರೂ ರಾಮಾನುಜೀಯ ಮತದವರೂ ವಿಷ್ಣುವಿನ ಮಹಾಮಹಿಮೆಯನ್ನು ಹೇಳುವ ಈ ವಿಷ್ಣು ಪುರಾಣವು ತಮ್ಮ ಮತಕ್ಕೆ ಮುಖ್ಯ ಸಾಧಕವೆಂದು ಮಾರ್ಮಿಕವಾದ ಟೀಕೆಟಿಪ್ಪಣೆಗಳನ್ನು ಬರೆದಿದ್ದಾರೆ.

ಈ ವಿಷ್ಣು ಪುರಾಣವನ್ನು ಬರೆಯುವಾಗ ನಾವು ನಾಲ್ಕು ಮುದ್ರಿತ ಪತ್ರಗಳನ್ನೂ ಮೂರು ಅಮುದ್ರಿತವಾದ ತಾಡವಾಲಿ ಪ್ರತಿಗಳನ್ನೂ ಕಣ್ಣೆದುರು ಇಟ್ಟುಗೊಂಡಿದ್ದೆವು. ಮುದ್ರಿತ ಪ್ರತಿಗಳಲ್ಲಿ ಒಂದು ರಾಮದುರ್ಗ ಸಂಸ್ಥಾನಿಕರ ಹೋಮ ಲೈಬ್ರರಿಯಲ್ಲಿಯದು. ಇನ್ನೊಂದು ನಮ್ಮ ಮನೆಯಲ್ಲಿಯೇ ಇದ್ದಿತು. ಮೂರನೆಯದು ನಾಗಪುರದ ವೈದಿಕ ಮನೆತನವೊಂದರ ಒಡೆತನದಲ್ಲಿಯ ಪುಸ್ತಕ ಪೋಥಿಯಲ್ಲಿ ದೊರೆತದ್ದು. ನಾಗಪೂರದ ಪ್ರತಿಯೂ ಐದನೇ ಅಂಶದಲ್ಲಿ ೩೫ನೇ ಅಧ್ಯಾಯದಲ್ಲಿಯ ''ರಾಮ ರಾಮ ಮಹಾಬಾಹೋ ಕ್ಷಮ್ಯತಾಂ ಕ್ಷಮ್ಯತಾ......'' ಎಂಬ ಪದ್ಯವು ಅರ್ಧವಾಗಿ ವಿಚ್ಛಿನ್ನವಾಗಿ ಪೂರ್ಣವಾಗಿದೆ. ರಾಮದುರ್ಗ ಸಂಸ್ಥಾನಿಕರ ಪ್ರತಿಯು ನಮ್ಮ ಮನೆಯ ವಿಷ್ಣುಪುರಾಣದ ಪ್ರತಿಯನ್ನೇ ಹೋಲುತ್ತಿದ್ದು ಶುದ್ಧವಾಗಿದೆ. ನಮ್ಮ ಮನೆಯ ಪ್ರತಿಯಲ್ಲಿ ಈ ಎಲ್ಲ ಮುದ್ರಿತಾ. ಮುದ್ರಿತ ಪ್ರತಿಗಳಿಗಿಂತ ಅನೇಕ ಉಪಯುಕ್ತ ಹಾಗೂ ಅಧಿಕ ಪದ್ಯಗಳಿದ್ದರೂ ಅಕ್ಷರಗಳು ಅಸುವಾಚ್ಯವಿರುತ್ತವೆ ಮತ್ತು ಪ್ರತಿಯನ್ನು ಲಿಪಿಮಾಡಿದವರ ಅನುಧಾನದಿಂದ ಅಲ್ಲಲ್ಲಿ ಸ್ಖಾಲಿತ್ಯವೂ ವಿಶೇಷವಾಗಿ ಆಗಿರುತ್ತದೆ. ರಾಮದುರ್ಗದ ಪ್ರತಿಯು ತದನು ಸಾರಿಯೆಂದು ಕಂಡು ಬಂದಿದ್ದರಿಂದ ಅದರ ಬಲದಿಂದ ನಮ್ಮ ಪ್ರತಿಯನ್ನು ಅರ್ಥಾಪಿಸಿ ಓದಿಕೊಂಡು ಇದೇ ಸಿದ್ಧಾಂತಕ್ಕೆ ಅವಿರುದ್ಧವಾದ ಪಾಠವೆಂದು ಅನುಸರಿಸಲಾಗಿದೆ. ನಾಗಪೂರದ ಪ್ರತಿಯು ಮುದ್ರಿತ ಪ್ರತಿಗಳಂತೆಯೇ ಇರುತ್ತದೆ. ಈ ಮುದ್ರಿತಾಮುದ್ರಿತ ಪ್ರತಿಗಳಲ್ಲಿ ಹಲಕೆಲವು ಪದ್ಯಗಳಲ್ಲಿ ಹಾಗೂ ವಿಷಯ ವಿನ್ಯಾಸಗಳಲ್ಲಿ ವ್ಯತ್ಯಾಸ ಬಂದಾಗ ನಮ್ಮ ಮನೆಯ ಪ್ರತಿ ಹಾಗೂ ರಾಮದುರ್ಗ ಪ್ರತಿಗಳು ಸಂವಾದಿಯಾಗಿದ್ದಲ್ಲಿ ಅದನ್ನೇ ನಾವು ಅಧಿಕೃತ ವಿಷ್ಣುಪುರಾಣದ ಪ್ರಾಮಾಣಿಕ ಪಾಠವೆಂದು ಅನುಸರಿಸಿದ್ದೇವೆ.

ಅನುವಾದದಲ್ಲಿ ಪ್ರಾಯಃ ಎಲ್ಲ ಪದ್ಯಗಳ ಅರ್ಥವನ್ನೂ ಕ್ರೋಡೀಕರಿಸಲಿಕ್ಕೆ ಪ್ರಯತ್ನಿಸಲಾಗಿದೆ. ಪುನರುಕ್ತಿ, ಅತ್ಯುಕ್ತಿ, ಹೆಚ್ಚಿನ ಬಣ್ಣನೆಗಳು ಬಂದಲ್ಲಿ ಮಾತ್ರ ಕಿಂಚಿತ್ ಸಂಕ್ಷೇಪವನ್ನು ಮಾಡಲಾಗಿದೆ.

*ಪಂಡರೀನಾಥಾಚಾರ್ಯ ಗಲಗಲಿ*

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಶು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತುಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತಪೂರ್ವವಾದ **'ನ ಭೂತೋ ನ ಭವಿಷ್ಯತಿ'** ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜಿನಿಯರಿಂಗ್ ಪದವಿ ಪಡೆದಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳನ್ನು ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ

ವಿನ್ಯಾಸದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಚರ್ಚಿಸಿ, ಶ್ರೀಹರಿಖೋಡೆ ಯವರೇ ವಿನ್ಯಾಸವಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜಿನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ದ್ವಿತೀಯ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮುದ್ರಿಸಿರುವ **ಶ್ರೀ ವೆಂಕಟೇಶ್ವರ ಪ್ರಿಂಟರ್ಸ್**, ನಂ. 3, ಯಲ್ಲಪ್ಪ ರಸ್ತೆ, ಚಿಕ್ಕಮಾವಳ್ಳಿ (ಸುಶೀಲ ರಸ್ತೆ ಕ್ರಾಸ್) ಬೆಂಗಳೂರು-560 004 ಇದರ ಮಾಲೀಕರಾದ **ಮುದ್ರಣಪ್ರಶಸ್ತಿ ವಿಜೇತ ಕೆ. ಎ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ** ಹಾಗೂ ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತು ವರ್ಷದ ಅನುಭವ, ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ.

ಈ ಎಲ್ಲಾ ಪುರಾಣ ಪುಸ್ತಕಗಳ ಕರಡು ಪ್ರತಿ ತಿದ್ದುವಿಕೆ (ಪ್ರೂಫ್ ಕರೆಕ್ಷನ್) ಕಾರ್ಯವನ್ನು ಶ್ರೀಯುತ ಸಿ.ಹೆಚ್. ಬದ್ರಿಆಚಾರ್‌ರವರು ಅತ್ಯಂತ ಜವಾಬ್ದಾರಿ, ಜಾಗೂರಕತೆಯಿಂದ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಇದೆಲ್ಲಕ್ಕೂ ಬಹುಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಶ್ರೀಮಾನ್ ಕೆ.ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ ಹಾಗೂ ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀಮಾನ್ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ.

ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ

21-10-2003 **ಪಂಢರೀನಾಥಾಚಾರ್ಯ ಗಲಗಲಿ**

ಹುಬ್ಬಳ್ಳಿ **ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ**-580 032

ಭಗವಾನ್ ಶ್ರೀ ವೇದವ್ಯಾಸರಿಂದ ರಚಿತವಾದ

# ಶ್ರೀ ವಿಷ್ಣು ಮಹಾಪುರಾಣ

## ಪ್ರಥಮ ಅಂಶ

### ಅಧ್ಯಾಯ - ೧

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್ ॥**

*ಸೂತರು ಶೌನಕಾದಿ ಮುನಿಗಳನ್ನು ಕುರಿತು ಹೇಳುತ್ತಾರೆ.*

ತಮ್ಮ ಪ್ರಾತಃಕಾಲದ ಪೂಜಾ, ಜಪ, ತಪಾದಿಗಳನ್ನೆಲ್ಲ ಮುಗಿಸಿ ಕುಳಿತುಕೊಂಡು ಮುನಿಶ್ರೇಷ್ಠರಾದ ಪರಾಶರ ಋಷಿಗಳ ಬಳಿಗೆ ಮೈತ್ರೇಯರು ಬಂದು ಸಾಷ್ಟಾಂಗ ನಮಸ್ಕಾರ ಮಾಡಿ ಇಂತು ಬಿನ್ನಹ ಮಾಡಿಕೊಂಡರು. ''ಮುನಿಪುಂಗವರಾದ ಗುರುವರ್ಯರೇ, ನಾನು ತಮ್ಮಿಂದ ಸಕಲ ವೇದಾವೇದಾಂತಗಳನ್ನೂ ಸಾಂಗ ಧರ್ಮ ಶಾಸ್ತ್ರಗಳನ್ನೂ ಕ್ರಮ ಪ್ರಕಾರವಾಗಿ ಅಧ್ಯಯನ ಮಾಡಿದ್ದೇನೆ. ನನ್ನ ವೈರಿಗಳೂ ಕೂಡ ನನ್ನನ್ನು ಈಗ ''ಶಾಸ್ತ್ರ ಓದದ ದಡ್ಡ ಮನುಷ್ಯ'' ಎಂದು ಎನ್ನಲಾರರು. ಇಂತು ಈ ವರೆಗೆ ತಮ್ಮ ಮುಖದಿಂದ ಸಕಲ ವೇದ ಶಾಸ್ತ್ರಗಳನ್ನು ಕೇಳಿ ತಿಳಿದುಕೊಂಡ ನಾನು ಈಗ ತಮ್ಮಿಂದ ಈ ಜಗತ್ತಿನ ಹುಟ್ಟು, ಉಳಿವು, ಅಳಿವುಗಳನ್ನೂ ಮತ್ತು ಈ ಚರಾಚರ ಪ್ರಪಂಚಕ್ಕೆಲ್ಲ ಉತ್ಪತ್ತಿ, ಸ್ಥಿತಿ, ಗತಿ, ಮೃತಿ ಮುಂತಾದವುಗಳನ್ನು ತಂದು ಕೊಡುವ ಆ ಪರಮಾತ್ಮನ ಮಹಾಮಹಿಮೆಯನ್ನು ಕೇಳಬೇಕೆಂದು ಅಪೇಕ್ಷಿಸುತ್ತೇನೆ. ಪರಮಾತ್ಮನಿಂದ ಸೃಷ್ಟವಾದ ಈ ಚರಾಚರ ಪ್ರಪಂಚದಲ್ಲಿಯ ಸಮುದ್ರ ಮತ್ತು ಪರ್ವತಗಳ ಸ್ಥಾನಮಾನಗಳನ್ನೂ ಮತ್ತು ಸೂರ್ಯ ಚಂದ್ರರ ಸ್ಥಿತಿಗತಿಗಳನ್ನೂ, ಮತ್ತು ದೇವಾಧಿದೇವತೆಗಳ ಹಾಗೂ ಮನುಮಹರ್ಷಿಗಳ ವಂಶ ವಿಸ್ತಾರಗಳನ್ನೂ, ಮನ್ವಂತರಗಳ ವಿಭಾಗ ವ್ಯವಸ್ಥೆಗಳನ್ನೂ, ದೇವ, ಋಷಿ, ರಾಜರ, ಚರಿತ್ರೆಗಳನ್ನೂ, ವ್ಯಾಸರು ಮಾಡಿದ ವೇದ ವಾಙ್ಮಯದ ವಿಭಾಗ ವ್ಯವಸ್ಥೆಯನ್ನೂ ಮತ್ತು ಮುಖ್ಯವಾಗಿ ಮಾನವ ಧರ್ಮದ ತಿರುಳನ್ನು ತಮ್ಮ ಬಾಯಿಂದ ಕೇಳಿ ತಿಳಿದುಕೊಳ್ಳಬೇಕೆಂದು ನನಗೆ ಉತ್ಕಟವಾದ ಅಭಿಲಾಷೆಯು ಉತ್ಪನ್ನವಾಗಿರುತ್ತದೆ. ''ತಾವು ದಯಮಾಡಿ ಸತ್ಕಥಾ ಶ್ರವಣದ ನನ್ನ ಈ ಅಕಾಂಕ್ಷೆಯನ್ನು ತಮ್ಮ ದಿವ್ಯ ಜ್ಞಾನೋಪದೇಶದಿಂದ ತೃಪ್ತಿ ಪಡಿಸಬೇಕೆಂದು ಬೇಡಿಕೊಳ್ಳುತ್ತೇನೆ''.

ಇದನ್ನು ಕೇಳಿ ಪರಾಶರ ಮುನಿಗಳು ಮೈತ್ರೇಯರನ್ನು ಅಭಿನಂದಿಸಿ ನುಡಿದರು. ''ಧರ್ಮದ ಮರ್ಮವನ್ನು ಬಲ್ಲ ಮೈತ್ರೇಯ ! ನೀನು ನನಗೆ ಈಗ ಮಾಡಿದ ಪ್ರಶ್ನೆಗಳನ್ನು

ಕೇಳಿದಾಗ ನನ್ನ ಜೀವನದಲ್ಲಿ ಹಿಂದೆ ಎಂದೋ ಒಂದು ಸಲ ನಡೆದು ಹೋದ ಅಂದಿನ ಆ ಘಟನೆಯು ಇಂದು ಮತ್ತೆ ಈಗ ನೆನಪಿಗೆ ಬರುತ್ತದೆ. ನನ್ನ ತಂದೆಯ ತಂದೆಯಾದ ಭಗವಾನ್ ವಸಿಷ್ಠರು ಆ ಸಂದರ್ಭದಲ್ಲಿ ನುಡಿದ ಮಾತು ಮತ್ತು ನೀಡಿದ ಉಪದೇಶಗಳು ನನಗೀಗ ಸ್ಮರಣಕ್ಕೆ ಬರುತ್ತವೆ.

ಮೈತ್ರೇಯ - ವಸಿಷ್ಠ, ವಿಶ್ವಾಮಿತ್ರರ ಕಲಹದ ಕತೆಯನ್ನು ನೀನೂ ಕೇಳಿರಬಹುದು. ಚಂಡಕೋಪರಾದ ವಿಶ್ವಾಮಿತ್ರರು ನನ್ನ ತಂದೆಯಾದ (ವಸಿಷ್ಠರ ಕುಮಾರ) ಶಕ್ತಿ ಮುನಿಯನ್ನು ಕೊಂದು ತಿಂದು ಬಿಡಲು ರಾಕ್ಷಸ ಕಲ್ಮಾಷ ಪಾದನಿಗೆ ಪ್ರೇರಣೆ ಮಾಡಿದರು. ಅವರ ಸಲಹೆಯಂತೆ ದುಷ್ಟನಾದ ಆ ದೈತ್ಯಾಧಮನು ಪರಮ ಸಾತ್ವಿಕರಾದ ನನ್ನ ತಂದೆ ಶಕ್ತಿ ಮಹರ್ಷಿಯನ್ನು ಸಂಹರಿಸಿ ಭಕ್ಷಣ ಮಾಡಿಬಿಟ್ಟನು. ತಂದೆ ಇಲ್ಲದ ತಬ್ಬಲಿಯಾದ ನನಗೆ ಅಜ್ಜ ವಸಿಷ್ಠರೇ ತಂದೆಯಾಗಿ ರಕ್ಷಣೆ ಮಾಡಿ ಸರ್ವ ವೇದಶಾಸ್ತ್ರಗಳ ದಿವ್ಯ ಶಿಕ್ಷಣವನ್ನಿತ್ತು ನನ್ನನ್ನು ದೊಡ್ಡವನನ್ನಾಗಿ ಮಾಡಿದರು. ಆ ಬ್ರಹ್ಮರ್ಷಿಗಳ ತಪಃಪೂತವಾದ ಶಿಕ್ಷೆರಕ್ಷೆಗಳಲ್ಲಿ ನಾನು ಬೆಳೆದು ದೊಡ್ಡವನಾದ ಬಳಿಕ ರಾಕ್ಷಸರು ನನ್ನ ತಂದೆಯನ್ನು ಕೊಂದು ತಿಂದು ತೇಗಿದರೆಂಬ ಸಮಾಚಾರವನ್ನು ಕೇಳಿದೆನು. ಆಗ ನನ್ನ ಕೋಪಾಗ್ನಿಯು ಭುಗಿಲ್ಲೆಂದು ಉರಿದೆದ್ದಿತು. ನನ್ನ ತಂದೆಯಂಥ ಮಹಾ ಮಹರ್ಷಿಯನ್ನು ಹಿಂಸೆಗೊಳಿಸಿದ ಹಂತಕರಾದ ಈ ದುಷ್ಟ ರಾಕ್ಷಸರ ಕುಲವನ್ನೇ ಸಮೂಲವಾಗಿ ನಿರ್ಮೂಲ ಮಾಡಬೇಕೆಂದು ನನಗೆ ಮನಸ್ಸಾಯಿತು. ಕೋಪದಿಂದ ಕೆರಳಿ ಕೆಂಡದಂತಾದ ನಾನು ಆಗ ಸಂಪೂರ್ಣ ರಾಕ್ಷಸ ಕುಲದ ವಿಧ್ವಂಸಕ್ಕಾಗಿ ''ದೈತ್ಯಮೇಧ'' ಎಂಬ ಘೋರ ಯಜ್ಞವನ್ನು ಪ್ರಾರಂಭ ಮಾಡಿದೆನು. ನಾನು ಕೈಕೊಂಡ ಆ ಭಯಂಕರವಾದ ರಾಕ್ಷಸ ಸತ್ರದಲ್ಲಿ ನೂರಾರು ಜನ ದುರುಳ ದಾನವರು ದಗ್ಧರಾಗಿ ಹೋದರು. ಹಿಂಸಾಪ್ರಿಯರಾದ ದುಷ್ಟ ದೈತ್ಯರೆಲ್ಲರು ನನ್ನ ಯಜ್ಞಕುಂಡದ ಕಿಚ್ಚಿನಲ್ಲಿ ಬಿದ್ದು ಪುರುಪುರು ಸುಟ್ಟು ಹೋಗಿ ರಾಕ್ಷಸ ವಂಶವೇ ಸಂಪೂರ್ಣ ಧ್ವಂಸವಾಗತೊಡಗಿತು. ಹೀಗೆ ಇಡೀ ದೈತ್ಯಕುಲವೆಲ್ಲವೂ ನನ್ನ ಕೋಪೋದ್ದೀಪಿತವಾದ ಯಜ್ಞಾಗ್ನಿಯ ಕಿಚ್ಚಿನಲ್ಲಿ ಕಮರಿ ಸುಟ್ಟು ಹುರುಪಳಿಸಿ ಹೋಗುತ್ತಿರುವದನ್ನು ಕಂಡು ಕರುಣೆತುಂಬಿದ ನನ್ನ ಅಜ್ಜ ವಸಿಷ್ಠ ಮಹರ್ಷಿಗಳು ನನ್ನನ್ನು ಆ ಘೋರ ವ್ಯಾಪಾರದಿಂದ ತಡೆದು ನಿಲ್ಲಿಸಿ ಹೀಗೆ ನುಡಿದು ಆದೇಶವಿತ್ತರು - ''ಮಗು ನಿನಗೆ ಎಂಥ ಕೋಪವಪ್ಪ! ಇಷ್ಟು ಸಿಟ್ಟಿಗೇಳುವುದು ನಿನಗೆ ಉಚಿತವಲ್ಲ. ಕೋಪ ಎನ್ನುವದು ಮೂರ್ಖರಿಗೆ ಮೀಸಲಾದ ದುರ್ಗುಣ. ಜ್ಞಾನಿಗಳಾದವರು ಕೋಪ ರೂಪವಾದ ದುರ್ಗುಣಕ್ಕೆ ಅವಕಾಶವನ್ನೇ ಕೊಡಕೂಡದು. ನೀನು ತುಸು ವಿಚಾರಿಸಿ ನೋಡು. ನಿನ್ನ ತಂದೆಯ ಆಯುಷ್ಯವೇ ತೀರ ಬಂದಿತ್ತು. ಅವನ ಪ್ರಾರಬ್ಧಕ್ಕೆ ಅನುಸಾರವಾಗಿ ಮರಣವು ತಾನಾಗಿ ಒದಗಿ ಬಂದಾಗ ಈ ರಾಕ್ಷಸರು ನೆಪ ಮಾತ್ರವಾದರು. ವಾಸ್ತವಿಕವಾಗಿ ವಿಚಾರಿಸಿದರೆ ಯಾರು ಯಾರನ್ನು ಕೊಲ್ಲಬಲ್ಲರು ? ಮನುಷ್ಯರೆಲ್ಲರೂ ತಾವು ಪೂರ್ವಜನ್ಮದಲ್ಲಿ ಮಾಡಿದ ತಮ್ಮ ತಮ್ಮ ಕರ್ಮಗಳ ಫಲಭೋಗವನ್ನು ಈ ಜನ್ಮದಲ್ಲಿ ಉಣ್ಣುತ್ತಾರೆ. ಅದಕ್ಕಾಗಿ ಯಾರೂ ಯಾರ ಮೇಲೆಯೂ ಕೋಪ ಅಥವಾ ಮನಸ್ತಾಪವನ್ನು ಮಾಡಿಕೊಳ್ಳುವ ಕಾರಣವಿಲ್ಲ. ಕೋಪವು ಬಹು ಕಾಲದಿಂದ ಗಳಿಸಿದ

ಪುಣ್ಯದ ಲೋಪಕ್ಕೆ ಕಾರಣವಾಗುತ್ತದೆ. ಮತ್ತು ಅದರಿಂದ ಮಾನವರ ಕೀರ್ತಿ ತಪಸ್ಸು ಎಲ್ಲವೂ ಹಾಳಾಗುತ್ತದೆ. ಹೀಗೆ ಈ ಲೋಕದಲ್ಲಿ ಮನುಷ್ಯರ ಹೆಸರನ್ನು ಕೆಡಿಸಿ ಪರಲೋಕದಲ್ಲಿಯೂ ಅವನ ಪುಣ್ಯವನ್ನು ಹ್ರಾಸ ಮಾಡತಕ್ಕ ಕ್ರೋಧವೆಂಬ ದುರ್ಗುಣವನ್ನು ಋಷಿಗಳಾದವರು ಸಂಪೂರ್ಣವಾಗಿ ಬಿಟ್ಟು ಬಿಡುತ್ತಾರೆ. ಆದುದರಿಂದ ಮಗು, ಋಷಿಪುಂಗವನಾದ ನೀನಾದರೂ ಆ ದುರ್ಗುಣಕ್ಕೆ ಬಲಿಯಾಗಬೇಡ. ಇಷ್ಟು ಜನ ರಾಕ್ಷಸರನ್ನು ನೀನು ಸಿಟ್ಟಿಗೆದ್ದು ಸುಟ್ಟು ಹಾಕಿದ್ದೇ ಸಾಕು. ನಿನ್ನ ತಂದೆಯನ್ನು ಕೊಂದ ದಾನವರು ಯಾರೋ ! ಆದರೆ ನೀನು ಈಗ ಮಾರಣಹೋಮ ಮಾಡಿ ನಿರ್ನಾಮ ಮಾಡುವ ಈ ರಾಕ್ಷಸರಾರೋ ! ನಿನ್ನ ತಂದೆಯನ್ನು ಕೊಂದು ತಿಂದು ಹೋದ ಅಂದಿನ ದೈತ್ಯರು ಎಂದೋ ಸತ್ತುಹೋಗಿದ್ದಾರೆ. ಆದರೆ ನಿರಪರಾಧಿಗಳಾದ ಇಂದಿನ ಅನೇಕ ದೈತ್ಯರು ನಿನ್ನ ಕೋಪದ ಕಾಳ್ಗಿಚ್ಚಿಗೆ ನಿಷ್ಕಾರಣ ಬಲಿಯಾಗಿ ಬೆಂದು ಹೋಗುತ್ತಿದ್ದಾರೆ. ಆದುದರಿಂದ ಈ ಸಂಹಾರ ಸತ್ರವನ್ನು ಇಲ್ಲಿಗೇ ಸಾಕುಮಾಡಿ ಮುಗಿಸಿಬಿಡು. ಕ್ಷಮಾಗುಣವುಳ್ಳವರೇ ನಿಜವಾಗಿ ದೊಡ್ಡವರು.'' ಹೀಗೆ ಮಹಾತ್ಮರಾದ ನನ್ನ ಮುತ್ತಾತ ವಸಿಷ್ಠರು ಉಪದೇಶಮಾಡಲು ನನಗೂ ನನ್ನ ತಪ್ಪಿನ ಅರಿವಾಗಿ ಕೂಡಲೇ ಆ ರಾಕ್ಷಸ ಸತ್ರವನ್ನು ನಿಲ್ಲಿಸಿಬಿಟ್ಟೆನು. ಇದರಿಂದ ದಯಾಳುಗಳಾದ ಆ ವಸಿಷ್ಠ ಋಷಿಗಳಿಗೆ ಅತ್ಯಂತ ಸಂತೋಷವಾಗಿ ಪ್ರಸನ್ನ ಮನಸ್ಸಿನಿಂದ ಅವರು ನನ್ನನ್ನು ಹರಿಸಿದರು. ಅದೇ ವೇಳೆಯಲ್ಲಿ ಬ್ರಹ್ಮದೇವರ ಮಕ್ಕಳಾದ ಪುಲಸ್ತ್ಯ ಋಷಿಗಳು ಅಲ್ಲಿಗೆ ದಯಮಾಡಿಸಿದರು. ಬ್ರಹ್ಮರ್ಷಿ ವಸಿಷ್ಠರು ಅಂಥ ಮಹಾನ್ ಅತಿಥಿಯ ಆಗಮನದಿಂದ ಪರಮ ಸಂತುಷ್ಟರಾಗಿ ಅವರನ್ನು ಅರ್ಘ್ಯ ಪಾದ್ಯಾದಿಗಳಿಂದ ಉಪಚರಿಸಿ ಆಸನವಿತ್ತು ಸತ್ಕರಿಸಿದರು. ಆಗ ಪುಲಹ ಋಷಿಯ ಅಣ್ಣನಾದ ಆ ಪುಲಸ್ತ್ಯರು ಸಂಹಾರ ಸತ್ರದಿಂದ ವಿರಮಿಸಿ ಅಲ್ಲಿಯೇ ನಿಂತುಕೊಂಡ ನನ್ನೆಡೆಗೆ ತಮ್ಮ ನೇಹನಲುಮೆದುಂಬಿದ ನೋಟವನ್ನು ಹರಿಸಿ ಇಂತು ನುಡಿದರು.

''ಪರಾಶರ, ದುಷ್ಟದೈತ್ಯರು ನಿನ್ನ ತಂದೆ ಶಕ್ತಿ ಮಹರ್ಷಿಗೆ ಘೋರ ಅಪಚಾರವನ್ನೆಸಗಿದ್ದೇನೋ ನಿಜ. ಅದರಿಂದ ನಿನಗೆ ಆ ಎಲ್ಲ ಸಮಾಚಾರವನ್ನು ಕೇಳಿ ತಿಳಿದ ಬಳಿಕ ಕರುಳು ಕುದಿದು, ಪಿತ್ತ ಕೆರಳಿ, ಕೋಪಬರುವದೂ ಸ್ವಾಭಾವಿಕ. ಅದರಿಂದ ನೀನು ರಾಕ್ಷಸ ಸಂಹಾರ ಸತ್ರವನ್ನು ಕೈಕೊಂಡದ್ದೂ ಸಹಜವೇ. ಆದರೆ ಈಗ ನಿನ್ನ ಹಿರಿಯರಾದ ವಸಿಷ್ಠ ಋಷಿಗಳು ''ಬೇಡ'' ಎಂದ ಕೂಡಲೆ ಎಷ್ಟೇ ದ್ವೇಷ ತ್ವೇಷ ರೋಷಗಳು ಮನಸ್ಸಿನಲ್ಲಿ ಉಕ್ಕುತ್ತಿದ್ದರೂ ಅವೆಲ್ಲವುಗಳನ್ನು ಹತ್ತಿಕ್ಕಿ, ಹಿರಿಯರ ವಾಕ್ಯವನ್ನು ಮನ್ನಿಸಿ' ಆ ಘೋರ ಯಜ್ಞವನ್ನು ನಿಲ್ಲಿಸಿದ್ದು ಮಾತ್ರ ನಿನ್ನ ದೊಡ್ಡಗುಣವನ್ನು ಎತ್ತಿ ತೋರಿಸುತ್ತದೆ. ವಸಿಷ್ಠರ ಆದೇಶದಿಂದ ಕೋಪವನ್ನು ತತ್‌ಕ್ಷಣದಲ್ಲಿ ಪರಿತ್ಯಜಿಸಿ ನಿನ್ನ ಅಂತರಂಗದಲ್ಲಿ ಕ್ಷಮಾ ಗುಣಕ್ಕೆ ಇಂಬುಕೊಟ್ಟದ್ದು ತುಂಬ ಶ್ಲಾಘನೀಯವಾಗಿದೆ. ಪರಾಶರಾ, ದೈತ್ಯರು ನನ್ನ ವಂಶದವರು. ಎಂಥ ಕೋಪಾಟೋಪದಿಂದ ಕೆರಳಿ ಹೋಗಿದ್ದರೂ ನೀನು ಆ ನನ್ನ ದೈತ್ಯ ಸಂತತಿಗೆ ದಯತೋರಿ ಕ್ಷಮೆ ಮಾಡಿ ಅವರ ವಂಶವು ಹಾಳಾಗದಂತೆ ಮಾಡಿದ್ದಕ್ಕಾಗಿ ನನಗೂ ಬಹಳ ಸಂತೋಷವಾಗಿದೆ. ಆದ್ದರಿಂದ ನಾನೀಗ ನಿನಗೆ ಪುರಾಣ ಪ್ರವರ್ತಕನಾಗು ಎಂದು

ವರವನ್ನು ಕೊಡುತ್ತೇನೆ. ನನ್ನ ವರದ ಬಲದಿಂದ ಎಲ್ಲ ದೇವತೆಗಳ ಹಾಗೂ ದೇವೋತ್ತಮನಾದ ಆ ವಿಷ್ಣುವಿನ ಮಹಾಮಹಿಮೆಗಳ ದಿವ್ಯಜ್ಞಾನೋದಯವೂ ನಿನಗೆ ಚೆನ್ನಾಗಿ ಆಗುತ್ತದೆ.'' ಎಂದು ಹೇಳಿದರು. ಅದನ್ನು ಕೇಳಿ ಅಲ್ಲಿಯೇ ಕುಳಿತ ವಸಿಷ್ಠರು ನನ್ನನ್ನು ಉದ್ದೇಶಿಸಿ ''ವತ್ಸ, ಪುಲಸ್ತ್ಯರು ಹೇಳಿದಂತೆ ನಿನಗೆ ಸರ್ವ ಪ್ರಾಚೀನ ಪುರಾಣ ಇತಿವೃತ್ತಗಳ ಯಥಾರ್ಥ ಜ್ಞಾನವು ಒದಗಿ ಬರುತ್ತದೆ'' ಎಂದು ನುಡಿದು ಪುಲಸ್ತ್ಯರ ಮಾತನ್ನೇ ಅನುಮೋದಿಸಿದರು.

ಮೈತ್ರೇಯ, ನೀನೀಗ ನನ್ನನ್ನು ಜಗತ್ತಿನ ಹುಟ್ಟು, ಬದುಕು, ಸಾವುಗಳ ಬಗ್ಗೆ ವಿಚಾರಿಸಿದಾಗ ಅಂದು ಆ ಇಬ್ಬರು ಬ್ರಹ್ಮರ್ಷಿಗಳು ನುಡಿದ ಮಾತು, ನಡೆದ ಘಟನೆ, ನೀಡಿದ ಆಶೀರ್ವಾದ, ಇತ್ತ ವರ ಎಲ್ಲವೂ ನೆನಪಿಗೆ ಬರುತ್ತಲಿವೆ. ಅವರು ಕೊಟ್ಟ ಹರಕೆಯು ಇಂದು ಸಂಪನ್ನವಾಗಿದೆ. ನನಗೆ ಅವರ ಆಶೀರ್ವಾದ ಬಲದಿಂದ ಸೃಷ್ಟಿ ರಹಸ್ಯದ ಯಥಾರ್ಥ ಜ್ಞಾನವು ಉಂಟಾಗಿದೆ. ಆದುದರಿಂದ ನಾನು ನಿನ್ನ ಎಲ್ಲ ಪ್ರಶ್ನೆಗಳಿಗೂ ಪುರಾಣ ಪ್ರವಚನದಿಂದ ಉತ್ತರ ಕೊಡುತ್ತಲಿದ್ದೇನೆ. ಈ ಪುರಾಣ ಸಂಹಿತೆಯನ್ನು ಲಕ್ಷ್ಯವಿಟ್ಟು ಕೇಳು, ಮೈತ್ರೇಯ, ಎಲ್ಲ ಪುರಾಣಗಳ ಸಾರಭೂತವಾದ ಬೀಜ ಮಾತು ಒಂದಿದೆ. ಅದನ್ನು ಚೆನ್ನಾಗಿ ಮನನ ಮಾಡಿದರೆ ಬೇಕಾದ ಪುರಾಣವನ್ನು ಕೇಳಿದರೂ ಮುಖ್ಯಾರ್ಥದ ಅನುಸಂಧಾನಕ್ಕೆ ವ್ಯತ್ಯಾಸ ಬರುವದಿಲ್ಲ.

**''ವಿಷ್ಣೋಃ ಸಕಾಶಾದುದ್ಭೂತಂ ಜಗತ್ತತ್ರೈವ ಚ ಸ್ಥಿತಂ ।**
**ಸ್ಥಿತಿ-ಸಂಯಮ-ಕರ್ತಾಸೌ ಜಗತೋಽಸ್ಯ ಜಗಚ್ಚ ಸಃ'' ॥**

ಈ ಜಗತ್ತೆಲ್ಲವೂ ವಿಷ್ಣುವಿನಿಂದಲೇ ಹುಟ್ಟಿರುತ್ತದೆ. ಅವನಿಂದಲೇ ಬಾಳಿ ಬದುಕುತ್ತದೆ. ಈ ಚರಾಚರ ಪ್ರಪಂಚಕ್ಕೆಲ್ಲ ಅವನೇ ಆಧಾರವಾಗಿರುತ್ತಾನೆ. ಈ ಜಗತ್ತಿನ ಸ್ಥಿತಿ-ಗತಿ ಕ್ಷತಿ ಯಾವುದಾದರೂ ಅವನಿಂದಲೇ ಆಗುತ್ತವೆ. 'ಕಿಂ ಬಹುನಾ' ಈ ಜಗತ್ತಿನ ಸರ್ವವ್ಯಾಪಾರಗಳೂ ಆ ವಿಷ್ಣುವಿನಿಂದಲೇ ಆಗುವದರಿಂದ ಈ ಜಗತ್ತೆಲ್ಲವೂ ವಿಷ್ಣುಮಯವೇ ಆಗಿದೆ.

*ಶ್ರೀ ವಿಷ್ಣುಮಹಾಪುರಾಣದಲ್ಲಿನ ಪ್ರಥಮಾಂಶದ ಮೊದಲನೇ ಅಧ್ಯಾಯ ಸಂಪೂರ್ಣ*

—o—

## ಪ್ರಕೃತಿ ಪುರುಷರ ಸಂಸಾರ ಸೃಷ್ಟಿ, ಸ್ಥಿತಿ, ಸಂಹಾರ ನಿರೂಪಣೆ

ಅಧ್ಯಾಯ - ೨

**ಪರಾಶರ -** ಹರಿಹರ ಬ್ರಹ್ಮಾದಿರೂಪಗಳನ್ನು ಧಾರಣ ಮಾಡಿ ಪ್ರಪಂಚದ ಸೃಷ್ಟಿ ಸಂರಕ್ಷಣೆ ಮತ್ತು ಸಂಹಾರಾದಿಗಳನ್ನು ಮಾಡತಕ್ಕ ಸರ್ವತ್ರ ವ್ಯಾಪ್ತನಾದ ಮೂಲರೂಪಿಯಾದ ಶ್ರೀ ವಿಷ್ಣುವಿಗೆ ನಮಸ್ಕಾರ ಮಾಡಿ ದಕ್ಷನೇ ಮೊದಲಾದ ಮುನಿಪುಂಗವರ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಹಿಂದೆ ಬ್ರಹ್ಮದೇವರು ಹೇಳಿದ್ದನ್ನೇ ನಾನೀಗ ನಿಮಗೆ ಹೇಳುತ್ತೇನೆ. ವಿಷ್ಣು ಪಾರಮ್ಯ ಪ್ರತಿಪಾದಕವಾದ ಅನೇಕ ಪ್ರಮೇಯಗಳನ್ನೂ ಕಥೋಪಕಥೆಗಳನ್ನೂ ಚತುರ್ಮುಖನು ತಮಗೆ ಉಪದೇಶಿಸಿದಂತೆಯೇ ಆ ದಕ್ಷಾಧಿಮುನಿಗಳು ನರ್ಮದಾನದಿಯ ದಂಡೆಯ ಮೇಲೆ ಯಜ್ಞಮಾಡುತ್ತಲಿರುವ ಪುರಕುತ್ಸ ಮಹಾರಾಜನಿಗೆ ನಿರೂಪಣ ಮಾಡಿದರು. ಆ ಪುರುಕುತ್ಸನು ಸಾರಸ್ವತಮುನಿಗೆ ಆ ಎಲ್ಲ ಪ್ರಮೇಯ ರಹಸ್ಯವನ್ನು ಅರುಹಿದನು. ನಾನು ಆ ಸಾರಸ್ವತನಿಂದ ಅದನ್ನೆಲ್ಲ ಕೇಳಿಕೊಂಡು ನಿಮಗೆ ಹೇಳುತ್ತಲಿದ್ದೇನೆ.

ಪ್ರಾಕೃತವಾದ ಶರೀರ ಹಾಗೂ ನಾಮರೂಪಾದಿಗಳಿಂದ ವರ್ಜಿತನಾದ ಆ ಪರಾತ್ಪರನಾದ ಪರಮಾತ್ಮನು ಸಕಲ ವಿಧವಾದ ನಾಶಗಳಿಂದ ರಹಿತನಾಗಿದ್ದಾನೆ. ಅವನಿಗೆ ಜನ್ಮ, ಮೃತ್ಯು, ಮುಪ್ಪು ಮುಂತಾದ ಯಾವ ದೋಷಗಳೂ ಇರುವದಿಲ್ಲ. ಅವನು ಈ ಪ್ರಪಂಚದಲ್ಲಿ ಎಲ್ಲ ಕಡೆಗೂ ವಾಸಿಸಿರುತ್ತಾನೆ. ಈ ಪ್ರಪಂಚವೆಲ್ಲವೂ ಅವನನ್ನು ಆಧರಿಸಿಕೊಂಡೇ ಇರುತ್ತದೆ. ಆದುದರಿಂದ ಅವನನ್ನು ವಾಸುದೇವ ಎಂದು ಬಲ್ಲವರು ಕರೆಯುತ್ತಾರೆ.

**ಸರ್ವತ್ರಾಽಸೌ ಸಮಸ್ತಂಚ ವಸತ್ಯತ್ರೇತಿ ವೈ ಯತಃ ।**
**ತತಃಽಸೌ ವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ ॥**

ಸಕಲ ವಿಧವಾದ ನಾಶರಹಿತನೂ, ಹುಟ್ಟು ಸಾವುಗಳು ಇಲ್ಲದವನೂ, ನಿತ್ಯ ನಿರ್ವಿಕಾರನೂ, ಆದ ಆ ವಾಸುದೇವನು ಅನೇಕ ಅವತಾರರೂಪಗಳಿದ್ದರೂ ಏಕರೂಪಿಯಾಗಿದ್ದಾನೆ. ಅವನಲ್ಲಿ ಯಾವದೇ ಕುಂದು ಕೊರತೆ ಇರದಿದ್ದರಿಂದ ನಿರ್ದೋಷನಾಗಿದ್ದಾನೆ. ನಮ್ಮ ಕಣ್ಣಿಗೆ ಕಾಣುವ ಸ್ಥೂಲ ಪ್ರಪಂಚ, ಮೂಲ ಪ್ರಕೃತಿ, ಪುರುಷ ಮತ್ತು ಕಾಲ ಈ ಚತುರ್ವಿಧ ತತ್ವಗಳಿಗಿಂತ ಪರಮಶ್ರೇಷ್ಠವಾದ ಪರಾತ್ಪರ ತತ್ವವೇ ಶ್ರೀ ವಿಷ್ಣುವಾಗಿದ್ದಾನೆ. ಈ ದಿವ್ಯ ತತ್ವವನ್ನು ಜ್ಞಾನಿಗಳು ತಿಳಿಯುತ್ತಾರೆ. ಶ್ರೀ ಮನ್ನಾರಾಯಣನ ಭಿನ್ನಾಂಶಗಳಾದ ಪ್ರಕೃತಿ, ಪುರುಷ, ಪ್ರಪಂಚ, ಮತ್ತು ಕಾಲ ಈ ನಾಲ್ಕು ರೂಪಗಳೂ ಈ ವಿಶ್ವದ ಸೃಷ್ಟಿ, ಸ್ಥಿತಿ, ಸಂಹಾರ ಮತ್ತು ಆವಿರ್ಭಾವ ಮುಂತಾದ ವ್ಯವಹಾರಗಳಿಗೆಲ್ಲ ಪ್ರತ್ಯೇಕವಾಗಿ ಕಾರಣಗಳಾಗಿವೆ. ನಮ್ಮ ಕಣ್ಣಿಗೆ ಕಾಣುವ ಈ ಪ್ರಪಂಚ,

ಕಣ್ಣಿಗೆ ಕಾಣದ ಸೂಕ್ಷ್ಮವಾದ ಅವ್ಯಕ್ತ ಪ್ರಕೃತಿ, ಮತ್ತು ಈ ಪುರುಷ, ಈ ಕಾಲ, ಇವು ನಾಲ್ಕೂ ಆ ಜಗದೀಶ್ವರನ ಲೀಲೆಯ ಆವಿಷ್ಕಾರಗಳಿದ್ದಂತೆ, ಇದೆಲ್ಲವೂ ಆ ಪರಮಾತ್ಮನ ಆಟವೇ ಸರಿ.

ಈ ವಿಶ್ವಕ್ಕೆಲ್ಲ ಮೂಲಕಾರಣವಾದ ಮೂಲ ಪ್ರಕೃತಿಯನ್ನೇ ಬಲ್ಲವರು ಅವ್ಯಕ್ತವೆಂದೂ, ಪ್ರಧಾನವೆಂದೂ ಕರೆಯುತ್ತಾರೆ. ಆ ಮೂಲ ಪ್ರಕೃತಿಯು ನಿತ್ಯವಾಗಿದ್ದು ಸೂಕ್ಷ್ಮರೀತಿಯಿಂದ ಎಲ್ಲದಕ್ಕೂ ಕಾರಣಭೂತವಾಗಿದೆ. ಈ ಸ್ಥೂಲವಾದ ಕಾರ್ಯ ಪ್ರಪಂಚವೆಲ್ಲವೂ ಅದರ ಪರಿಣಾಮವಾಗಿದೆ. ತ್ರಿಗುಣಾತ್ಮಕವಾದ ಈ ಮೂಲ ಪ್ರಕೃತಿಯು ಜಗತ್ತಿನ ಜನನ ಮರಣಗಳಿಗೆ ಕಾರಣವಾದರೂ ಅದಕ್ಕೆ ಪರಮಾತ್ಮನ ಹೊರತು ಬೇರೆ ಯಾವ ಆಧಾರವೂ ಇಲ್ಲ. ಪ್ರಳಯದ ಅನಂತರ ಈ ಎಲ್ಲ ಪ್ರಪಂಚವೂ ಆ ಮೂಲ ಪ್ರಕೃತಿಯೊಳಗೇ ಲೀನವಾಗಿದ್ದಿತು. ''ಈ ಸೃಷ್ಟಿಯ ಪೂರ್ವ ಕಾಲದಲ್ಲಿ ಹಗಲು ಇಲ್ಲ ರಾತ್ರಿ ಇಲ್ಲ. ಆಕಾಶ ಇಲ್ಲ ಭೂಮಿ ಇಲ್ಲ. ಕತ್ತಲೆಯು ಇಲ್ಲ. ಬೆಳಕೂ ಇಲ್ಲ. ಒಟ್ಟಾರೆ ಹೇಳಬೇಕೆಂದರೆ ಆ ಕಾಲದಲ್ಲಿ ಬೇರಾವುದೂ ಇಲ್ಲ. ಆಗ ಇದ್ದ ವಸ್ತುವೆಂದರೆ ಕಣ್ಣಿಗೆ ಕಾಣದ, ಕಿವಿಗೆ ಕೇಳದ, ಬುದ್ಧಿಗೆ ನಿಲುಕದ ಪ್ರಕೃತಿತತ್ವ ಮತ್ತು ಪರತತ್ವ. ಪುರುಷ ಹಾಗೂ ಕಾಲ'' ಎಂಬ ಅರ್ಥವುಳ್ಳ ವೇದ ಮಂತ್ರಗಳನ್ನು ಪಠಿಸುವ ಬ್ರಹ್ಮವಾದಿಗಳು ಇದೇ ಮೂಲ ಪ್ರಕೃತಿ ಮತ್ತು ಪುರುಷ ಹಾಗೂ ಪುರುಷೋತ್ತಮರನ್ನು ಕೊಂಡಾಡಿದ್ದಾರೆ.

ಈ ಪ್ರಕೃತಿ ಪುರುಷರು, ಪುರುಷೋತ್ತಮನಾದ ಆ ಪರಮಾತ್ಮನ ಭಿನ್ನ ರೂಪಗಳೇ ಆಗಿರುತ್ತವೆ. ಆ ಪರಮಾತ್ಮನ ಕಾಲನಾಮಕವಾದ ರೂಪವು ಈ ಪ್ರಕೃತಿ ಪುರುಷರ ವಿವೇಕಕ್ಕೆ ಕಾರಣವಾಗಿರುತ್ತದೆ. ಈ ಸೃಷ್ಟಿಗಿಂತ ಮೊದಲು ಪ್ರಳಯ ಕಾಲದಲ್ಲಿ ಕಣ್ಣಿಗೆ ಕಾಣುವ ಈ ವ್ಯಕ್ತ ಪ್ರಪಂಚವೆಲ್ಲವೂ ಅವ್ಯಕ್ತವಾದ ಸೂಕ್ಷ್ಮ ಪ್ರಕೃತಿಯಲ್ಲಿ ಲೀನವಾಗಿತ್ತು. ಪ್ರಕೃತಿಯಲ್ಲಿ ದೃಶ್ಯ ಪ್ರಪಂಚಕ್ಕೆ ಲಯವಾದದ್ದರಿಂದ ಇದಕ್ಕೆ ಪ್ರಾಕೃತ ಪ್ರಳಯ ಎಂದು ಹೆಸರು. ಸತ್ವ ರಜಸ್ಸು ತಮಸ್ಸು ಈ ಮೂರು ಗುಣಗಳ ಸಾಮಾನ್ಯಾವಸ್ಥೆಯ ಪ್ರಳಯ ಕಾಲದಲ್ಲಿಯೂ ಪ್ರಕೃತಿ ಮತ್ತು ಪುರುಷ ಇವರಿಬ್ಬರೇ ಅವಿಚ್ಛಿನ್ನವಾದ ಅಸ್ತಿತ್ವವುಳ್ಳವರು. ಈ ಪ್ರಕೃತಿ ಪುರುಷರ ಸ್ಥಿತಿಗತಿಗಳಿಗೆ ಕಾಲನಾಮಕವಾದ ಪರಮಾತ್ಮನ ರೂಪವೇ ಕಾರಣವಾಗಿದ್ದು ಸೃಷ್ಟಿ ಸ್ಥಿತ್ಯಾದಿಗಳೆಲ್ಲವೂ ಆ ಕಾಲನ ಲೀಲೆಗಳೇ ಆಗಿವೆ.

ಪ್ರಪಂಚದಲ್ಲಿ ಎಲ್ಲೆಡೆಗೆ ತುಂಬಿರುವ ಆ ನಾರಾಯಣನಿಗೆ ಪರಬ್ರಹ್ಮ ಎಂಬ ಹೆಸರು. ಸರ್ವಾಂತರ್ಯಾಮಿಯಾದ ಅವನು ಸೃಷ್ಟಿಯ ಪೂರ್ವಕಾಲದಲ್ಲಿ ತನ್ನ ಇಚ್ಛೆಯಿಂದಲೇ ಪ್ರಧಾನ ನಾಮಕವಾದ ಮೂಲ ಪ್ರಕೃತಿಯಲ್ಲಿಯೂ ಪುರುಷನಾಮಕನಾದ ಬ್ರಹ್ಮದೇವನಲ್ಲಿಯೂ ಸ್ವಯಂ ಸನ್ನಿಹಿತವಾಗಿ ಸೃಷ್ಟಿಗೆ ಅನುಕೂಲವಾಗುವಂತೆ ಚಾಲನೆ ಚೋದನೆಗಳನ್ನಿತ್ತು ಸರ್ವಕಾರಕನೂ ಪ್ರೇರಕನೂ ಆಗುತ್ತಾನೆ. ತಾನಿದ್ದ ಸ್ಥಳದಿಂದಲೇ ಪರಿಮಳ ದ್ರವ್ಯವು ಎಲ್ಲೆಡೆಗೂ ತನ್ನ ಸೌರಭವನ್ನು ಸೂಸುವಂತೆ ಪರಮಾತ್ಮನು ಇದ್ದಲ್ಲಿಂದಲೇ ಪ್ರಕೃತಿ ಪುರುಷರನ್ನು ಚೋದಿಸಿ ಈ ಜಗತ್‌ಚಕ್ರಕ್ಕೆ ಚಾಲನೆಯನ್ನಿತ್ತು ಎಲ್ಲದಕ್ಕೂ ಮುಖ್ಯ ಕಾರಣನಾಗಿದ್ದಾನೆ. ಸೃಷ್ಟಿಯ ಪ್ರಾರಂಭದಲ್ಲಿ ಗುಣಸಾಮ್ಯರೂಪವಾದ ಮೂಲ ಪ್ರಕೃತಿಯಿಂದ ಗುಣಗಳ

ಅಭಿವ್ಯಕ್ತಿಯು ಉಂಟಾಯಿತು. ಭಗವತ್‌ಪ್ರೇರಣೆಯಿಂದ ಮೊದಲು ಅಭಿವ್ಯಕ್ತವಾದ ಈ ಪ್ರಧಾನ ತತ್ವಕ್ಕೆ. ಮಹತ್ತತ್ವ ಎಂದು ಹೆಸರು. ಇದು ಸಾತ್ವಿಕ, ರಾಜಸ, ತಾಮಸ, ಎಂದು ಮೂರು ವಿಧವಾಗಿದೆ. ಬೀಜವು ತೊಗಟೆಯಿಂದ ಆವರಿಸಲ್ಪಟ್ಟಂತೆ ಮೂಲ ಪ್ರಕೃತಿಯು ಈ ಮಹತ್ತತ್ವದಿಂದ ಎಲ್ಲ ಕಡೆಗೂ ಸಮನಾಗಿ ಆವರಿಸಲ್ಪಟ್ಟಿರುತ್ತದೆ ಈ ಮಹತ್ತತ್ವದಿಂದ ವೈಕಾರಿಕ, ತೈಜಸ ಮತ್ತು ತಾಮಸ ಎಂಬ ಮೂರು ತೆರನಾದ ಅಹಂಕಾರ ತತ್ವವು ಉತ್ಪನ್ನವಾಯಿತು. ಈ ಅಹಂಕಾರ ತತ್ವವು ಇಂದ್ರಿಯಾಭಿಮಾನಿ ದೇವತೆಗಳಿಗೂ ಇಂದ್ರಿಯಗಳಿಗೂ ಮತ್ತು ಪಂಚಮಹಾಭೂತಗಳಿಗೂ ಅನುಕ್ರಮವಾಗಿ ಕಾರಣವಾಗಿದೆ. ಮೂಲ ಪ್ರಕೃತಿಯು ಮಹತ್ತತ್ವವನ್ನು ಆವರಿಸಿದಂತೆ ಮಹತ್ತತ್ವವು ಅಹಂಕಾರವನ್ನು ಆವರಿಸಿಕೊಂಡಿತು. ಅನಂತರ ಭೂತಾದಿಯಲ್ಲಿ ವಿಕಾರವುಂಟಾದಾಗ ಶಬ್ದರೂಪವಾದ ಭೂತಸೂಕ್ಷ್ಮವು ಉದಿಸಿತು. ಈ ಭೂತಸೂಕ್ಷ್ಮದಿಂದ ಶಬ್ದಗುಣಕವಾದ ಆಕಾಶವು ಉತ್ಪನ್ನವಾಯಿತು ಈ ಆಕಾಶವು ಕ್ಷೋಬೆಗೊಂಡಾಗ ಸ್ಪರ್ಶತನ್ಮಾತ್ರ ಸೃಷ್ಟಿಯಾಯಿತು. ಆದರಿಂದ ಸ್ಪರ್ಶ ಗುಣಕವಾದ ವಾಯು ತತ್ವವೂ ಆ ವಾಯುಕ್ಷೋಭದಿಂದ ರೂಪತನ್ಮಾತ್ರ ಸೃಷ್ಟಿಯೂ ಆಯಿತು.

## ತತ್ವ ಮತ್ತು ತತ್ವಾಭಿಮಾನಿಗಳ ಉತ್ಪತ್ತಿ

ಅದರಿಂದ ರೂಪ ಗುಣಕವಾದ ತೇಜಸ್ಸು, ಆ ತೇಜಸ್ಸಿನಿಂದ ರಸ ತನ್ಮಾತ್ರ, ಅದರಿಂದ ರಸ ಗುಣಕವಾದ ನೀರು, ಪ್ರಕ್ಷುಬ್ಧವಾದ ಈ ಜಲತತ್ವದಿಂದ ಗಂಧ ತನ್ಮಾತ್ರ, ಅದರಿಂದ ಭೂಮಿಯ ಸೃಷ್ಟಿಯು ಆಯಿತು. ಗಂಧವು ಪೃಥ್ವಿಯ ಗುಣವಾಗಿದೆ. ತತ್ ತದ್ ಭೂತಗಳ ಸೂಕ್ಷ್ಮಾಂಶಗಳಾದ ತನ್ಮಾತ್ರಗಳು ಆ ಭೂತಗಳ ಅಸಾಧಾರಣ ಗುಣಗಳೂ ಆಗಿವೆ. ಭೂತಗಳ ಸೂಕ್ಷ್ಮಾವಸ್ಥೆಯಲ್ಲಿ ಅವು ಸ್ವಯಂ ಸುಖ ದುಃಖ ಮೋಹಗಳನ್ನು ಉಂಟುಮಾಡಲಾರವು. ಸೂಕ್ಷ್ಮಾವಸ್ಥೆಯಲ್ಲಿ ಆ ಭೂತ ತನ್ಮಾತ್ರಗಳಿಂದ ಯಾವದೇ ವಿಶೇಷವು ಅನುಭವ ಗೋಚರವಾಗದಿರುವದರಿಂದ ಅವುಗಳಿಗೆ ''ಅವಿಶೇಷ'' ಎಂದು ಕರೆಯುತ್ತಾರೆ. ಹೀಗೆ ತಾಮಸ ಅಹಂಕಾರದಿಂದ ಪಂಚಭೂತಗಳ ಮತ್ತು ಭೂತ ಸೂಕ್ಷ್ಮಗಳ ಸೃಷ್ಟಿಯಾಯಿತು. ತೈಜಸ ಅಹಂಕಾರದಿಂದ ಹತ್ತು ಜನ ಇಂದ್ರಿಯಾಭಿಮಾನಿ ದೇವತೆಗಳು ಉತ್ಪನ್ನರಾದರು. ಮನೋಭಿಮಾನಿ ದೇವತೆಯು ಹನ್ನೊಂದನೇಯವನು. ಇಂದ್ರಿಯಗಳು ಹತ್ತು. ಮನಸ್ಸನ್ನು ಹಿಡಿದು ಹನ್ನೊಂದು. ತೊಗಲು, ಕಣ್ಣು, ಕಿವಿ, ನಾಲಿಗೆ, ಮೂಗು ಇವು ಐದು ಜ್ಞಾನೇಂದ್ರಿಯಗಳು. ಇವು ಸ್ಪರ್ಶ, ರೂಪ, ಶಬ್ದ, ರಸ, ಗಂಧಗಳನ್ನು ಗ್ರಹಿಸುತ್ತವೆ. ಪೃಷ್ಠ, ಉಪಸ್ಥೆ, ಕೈ, ಕಾಲು, ಮುಖ, ಇವು ಐದು ಕರ್ಮೇಂದ್ರಿಯಗಳು. ಮಲ-ಮೂತ್ರಗಳನ್ನು ವಿಸರ್ಜಿಸುವದು, ಕೈ ಕೆಲಸ ಚಲನ-ನಡೆದಾಟ, ಮಾತು, ಇವು ಈ ಐದು ಕರ್ಮೇಂದ್ರಿಯಗಳಿಂದ ಆಗತಕ್ಕ ಕಾರ್ಯಗಳು. ಆಕಾಶದಲ್ಲಿ ಶಬ್ದವು ಸಮಾವೇಶಗೊಂಡರೆ ವಾಯುವಿನಲ್ಲಿ ಶಬ್ದ ಸ್ಪರ್ಶಗಳು ಸಮಾವಿಷ್ಟವಾಗಿವೆ. ತೇಜಸ್ಸಿನಲ್ಲಿ ಈ ಶಬ್ದ ಸ್ಪರ್ಶಗಳೊಡನೆ ರೂಪವೂ ಸೇರುತ್ತದೆ. ಜಲದಲ್ಲಿ ಶಬ್ದ ಸ್ಪರ್ಶರೂಪಗಳಲ್ಲದೆ ರಸವೂ ಸಮಾವೇಶಗೊಂಡಿದೆ. ಪ್ರಥ್ವಿಯಲ್ಲಿ ಮಾತ್ರ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ಐದು ಗುಣಗಳೂ

ಸಮಾವಿಷ್ಟವಾಗಿವೆ ಈ ಅವಸ್ಥೆಯಲ್ಲಿಯೇ ಇವು ಸುಖ ದುಃಖ ಮೋಹಗಳಿಗೆ ಕಾರಣವಾಗುತ್ತವೆ.

ಈ ಎಲ್ಲ ತತ್ವಗಳು ಬೇರೆ ಬೇರೆಯಾಗಿದ್ದಾಗ ಏನನ್ನೂ ಮಾಡಲಿಕ್ಕೆ ಸಮರ್ಥವಾಗಲಿಲ್ಲ. ಆಗ ಅವೆಲ್ಲವೂ ಒಂದಕ್ಕೊಂದು ಹೊಂದಿಕೊಂಡು ಸಾಮರಸ್ಯ ಸಹಕಾರದಿಂದ ಒಂದರಲ್ಲಿ ಒಂದು ಸೇರಿಕೊಂಡು ಐಕ್ಯಮತ್ಯದಿಂದ ಸಂಪಿಂಡಿತವಾಗಿ ನಿಂತುಕೊಂಡವು. ಆಗ ಪರಮಾತ್ಮನ ಸನ್ನಿಧಾನದಿಂದ, ಮಹಾಲಕ್ಷ್ಮಿಯ ಅನುಗ್ರಹ ಬಲದಿಂದ ಈ ಮಹದಾದಿ ತತ್ವಗಳೆಲ್ಲಕೂಡಿ ಬ್ರಹ್ಮಾಂಡವನ್ನು ನಿರ್ಮಿಸಿದವು. ಭೂತಗಳಿಂದ ನಿರ್ಮಿತವಾದ ಈ ಬ್ರಹ್ಮಾಂಡವು ನೀರಮೇಲಿನ ಗುಳ್ಳೆಯಂತೆ ಒಮ್ಮೆಲೇ ಬೆಳೆದು ಬೃಹದಾಕಾರವಾಗಿ ನೀರಿನಲ್ಲಿ ತೇಲಹತ್ತಿತ್ತು. ಅವ್ಯಕ್ತನಾದ ಶ್ರೀ ವಿಷ್ಣುವು ಈ ಬ್ರಹ್ಮಾಂಡದಲ್ಲಿ ಬ್ರಹ್ಮರೂಪದಿಂದ ಕ್ರೀಡಿಸುತ್ತಾನೆ. ಮೈತ್ರೇಯ, ಈ ಎಲ್ಲ ಬೆಟ್ಟ ಬಯಲು, ಕಾಡು, ನಾಡು, ದ್ವೀಪ, ಸಮುದ್ರ, ಚಿಕ್ಕೆ, ಚಂದ್ರ, ದೇವ, ದಾನವ, ಮಾನವ ಮತ್ತು ಸಮಸ್ತ ಪ್ರಾಣಿ ಪ್ರಪಂಚವೆಲ್ಲವೂ ಈ ಬ್ರಹ್ಮಾಂಡದಲ್ಲಿಯೇ ಹುಟ್ಟಿರುತ್ತವೆ. ಮೈತ್ರೇಯ, ಈ ಬ್ರಹ್ಮಾಂಡದ ಮೇಲೆ ಏಳು ಆವರಣಗಳು ಉಂಟು. ಈ ಬ್ರಹ್ಮಾಂಡದ ಹೊರಗೆ ಮೊದಲು ಜಲಾವರಣವು. ಅಂದರೆ ಈ ಮೊಟ್ಟೆಯ ಆಕಾರದ ಬ್ರಹ್ಮಾಂಡದ ಮೇಲೆ ಕೆಳಗೇ ನೀರೇ ಆವರಿಸಿದೆ. ಅದರ ಮೇಲೆ ಅಗ್ನಿಯ ಆವರಣ. ಅದರಾಚೆ ವಾಯುವಿನ ಆವರಣ. ಈ ವಾಯ್ವಾವರಣದ ಮೇಲೆ ಆಕಾಶ, ಭೂತಾದಿಯಾದ ಅಹಂಕಾರವು. ಆ ಅಹಂಕಾರತತ್ವಕ್ಕೆ ಮಹತ್ತತ್ವವು ಆವರಣವಾಗಿದೆ.

ಈ ಎಲ್ಲ ಆವರಣಗಳನ್ನೂ ಮಹತ್ತತ್ವವನ್ನೂ ಆವರಿಸಿಗೊಂಡು ಅವೆಲ್ಲವುಗಳ ಆಚೆ ಅವ್ಯಕ್ತ ತತ್ವವು ಹಬ್ಬಿನಿಂತಿದೆ. ಈ ಎಲ್ಲ ಆವರಣಗಳೂ ಒಂದಕ್ಕಿಂತ ಒಂದು ಹತ್ತುಪಟ್ಟು ದೊಡ್ಡದಾಗಿವೆ. ತೆಂಗಿನಕಾಯಿ ಒಳತಿರುಳು ಪದರು ಪದರಾದ ಹೊರತೊಗಟೆಗಳಿಂದ ಸುತ್ತಿಕೊಂಡಂತೆ ಈ ಬ್ರಹ್ಮಾಂಡವೂ ಏಳು ಪ್ರಾಕೃತ ಆವರಣಗಳಿಂದ ಆವೃತವಾಗಿರುತ್ತದೆ. ಜಗನ್ನಿಯಾಮಕನಾದ ಶ್ರೀ ವಿಷ್ಣುವು ರಜೋಗುಣವನ್ನು ಸ್ವೀಕರಿಸಿ ಬ್ರಹ್ಮರೂಪದಿಂದ ಈ ಪ್ರಪಂಚದ ಸೃಷ್ಟಿಯನ್ನು ಮಾಡುತ್ತಾನೆ. ಸತ್ವರೂಪನಾದ ಆ ಪರಮಾತ್ಮನೇ ಸ್ವಯಂ ವಿಷ್ಣುವಾಗಿ ಕಲ್ಪಾಂತ ಕಾಲದವರೆಗೆ ತಾನೇ ನಿರ್ಮಿಸಿದ ಈ ಪ್ರಪಂಚವನ್ನು ಪಾಲನಮಾಡುತ್ತಾನೆ. ಕೊನೆಗೆ ತಮೋಗುಣದ ಪ್ರಾಚುರ್ಯವಾದಾಗ ಪ್ರಳಯಕಾಲದಲ್ಲಿ ಎಲ್ಲವನ್ನೂ ತಾನೇ ಪರಮೇಶ್ವರನಾಗಿ ಸಂಹರಿಸುತ್ತಾನೆ. ಹೀಗೆ ಸರ್ವಲೋಕ ಸಂಹಾರವಾಗಿ, ಎಲ್ಲ ಕಡೆಗೂ ಪ್ರಳಯದ ಜಲ ತುಂಬಿ, ನೋಡಿದಲ್ಲೆಲ್ಲ ನೀರೇ ನೀರಾಗಿ, ಜಗತ್ತೆಲ್ಲವೂ ಜಲ ಸಮಾಧಿಯಲ್ಲಿ ಲೀನವಾದಾಗ ಆ ಶ್ರೀ ಹರಿಯು ಶೇಷಶಾಯಿಯಾಗಿ ಮಲಗಿಕೊಳ್ಳುತ್ತಾನೆ. ಹೀಗೆ ಶ್ರೀ ಮಹಾವಿಷ್ಣುವು ಒಬ್ಬನೇ ಸೃಷ್ಟಿ, ಸ್ಥಿತಿ, ಸಂಹಾರಾದಿಗಳಿಂದ ಬ್ರಹ್ಮ, ವಿಷ್ಣು, ಮಹೇಶ್ವರ ಎಂದು ಕರೆಯಲ್ಪಡುತ್ತಾನೆ. ಈ ಪ್ರಪಂಚವೆಲ್ಲವೂ ಆ ವಿಷ್ಣುವಿನಿಂದಲೇ ಓತಪ್ರೋತವಾಗಿ ಅವನ ಲೀಲಾವೈಭವದ ಮಹಿಮಾ ಆವಿಷ್ಕಾರ ರೂಪವಾಗಿದೆ.

## ನಿರ್ಗುಣನಿಂದ ತ್ರಿಗುಣಾತ್ಮಕ ಸೃಷ್ಟಿ ಹೇಗೆ ?

**ಮೈತ್ರೇಯ ಉವಾಚ** - ಪರಮಾತ್ಮನು ನಿರ್ಗುಣನೂ ನಿರಂಜನನೂ ಆಗಿದ್ದಾನೆ. ಅವನಲ್ಲಿ ಸೃಷ್ಟ್ಯಾದಿ ಗುಣಗಳಿಗೆ ಕಾರಣವಾದ ಸತ್ವಾದಿ ಗುಣಗಳಾಗಲೀ ಭೌತಿಕ ದೇಹವಾಗಲೀ ರಾಗದ್ವೇಷಾದಿಗಳಾಗಲಿ; ಇರುವುದಿಲ್ಲ. ಆದ್ದರಿಂದ ಅವನಿಂದ ಸೃಷ್ಟಿಯಾಗುವದೆಂತು ?

**ಪರಾಶರ ಉವಾಚ** - ಪ್ರತಿಯೊಂದು ಪದಾರ್ಥದಲ್ಲಿಯೂ ಒಂದು ಸ್ವಾಭಾವಿಕವಾದ ಶಕ್ತಿ ವಿಶೇಷವು ಇರುತ್ತದೆ. ಅದರಂತೆ ಪರಮಾತ್ಮನಲ್ಲಿಯೂ ಬೆಂಕಿಯಲ್ಲಿ ಸುಡುವ ಶಕ್ತಿಯು ಸ್ವಾಭಾವಿಕವಾಗಿ ಇದ್ದಂತೆ ಜಗತ್ ಸೃಷ್ಟ್ಯಾದಿರೂಪ ಶಕ್ತಿಯೂ ಅವನಲ್ಲಿ ಸ್ವಾಭಾವಿಕವಾಗಿ ಇರುತ್ತದೆ. ಈ ಪರಮಾತ್ಮನ ಸೃಷ್ಟಿಕ್ರಮದ ರಹಸ್ಯವನ್ನು ನಿನಗೆ ತಿಳಿಸುತ್ತೇನೆ ಚಿತ್ತವಿಟ್ಟು ಆಲಿಸು. ಸೃಷ್ಟಿಯ ಆದಿಕಾಲದಲ್ಲಿ ಪ್ರಪಂಚದ ಪುನರ್ನಿರ್ಮಾಣಕ್ಕಾಗಿ ಆ ನಾರಾಯಣನೇ ಲೋಕ ಪಿತಾಮಹನಾದ ಚತುರ್ಮುಖ ಬ್ರಹ್ಮನ ರೂಪದಿಂದ ಹುಟ್ಟುತ್ತಾನೆ. ಅವನು ಹುಟ್ಟುತ್ತಾನೆಂದು ಏನು ಅರ್ಥ? ಅವನು ನಿಜವಾಗಿ ಅಜನಲ್ಲವೇ? ನಿತ್ಯಾತ್ಮಕನಾದ ಅವನ ಹುಟ್ಟು ಔಪಚಾರಿಕ. ಅಂದರೆ ಒಂದೊಂದು ರೂಪದಿಂದ ಪ್ರಕಟವಾಗುತ್ತಾನೆ, ಪ್ರಾದುರ್ಭೂತನಾಗುತ್ತಾನೆ, ಅಭಿವ್ಯಕ್ತನಾಗುತ್ತಾನೆ, ಎಂದು ಅದರ ಅರ್ಥ. ಈ ಬ್ರಹ್ಮದೇವರಿಗೆ ಅವರ ದೇವಮಾನದ ಪ್ರಮಾಣದಿಂದ ನೂರುವರ್ಷ ಆಯುಸ್ಸು. ಬ್ರಹ್ಮಮಾನದ ಈ ಶತಾಯುಷ್ಯದ ಪೂರ್ಣಾವಧಿಗೆ ಪರಕಾಲ ಎಂದು ಹೆಸರು. ಅದರ ಅರ್ಧಕ್ಕೆ ಪರಾರ್ಧ ಎನ್ನುತ್ತಾರೆ. ಸರ್ವ ನಿಯಾಮಕನಾದ ಶ್ರೀ ವಿಷ್ಣುವಿನ ಕಾಲನಾಮಕ ರೂಪವು ಒಂದು ಇದೆ ಎಂದು ನಾನು ನಿನಗೆ ಈ ಮೊದಲೇ ತಿಳಿಸಿದ್ದೇನೆ. ಆ ಕಾಲಮಾನದ ವಿಶದ ವಿವರಗಳನ್ನು ಈಗ ತಿಳಿಸುತ್ತೇನೆ ಕೇಳು.

### ಕಾಲಮಾನದ ವಿವರಣೆ

ಕಣ್ಣಿನ ಎಮೆಯನ್ನು ಒಮ್ಮೆ ಪಿಳುಕಿಸಿ ತೆರೆಯುವ ಕಾಲಾವಕಾಶಕ್ಕೆ ಒಂದು ನಿಮಿಷ ಎನ್ನುವರು.

| | | |
|---|---|---|
| **15 ನಿಮಿಷ ಗಳೆಂದರೆ** | = | **1 ಕಾಷ್ಠಾ** |
| **30 ಕಾಷ್ಠಾ ಗಳೆಂದರೆ** | = | **1 ಕಲೆ** |
| **30 ಕಲೆ ಗಳೆಂದರೆ** | = | **1 ಮುಹೂರ್ತ** |
| **30 ಮುಹೂರ್ತ ಗಳೆಂದರೆ** | = | **1 ದಿವಸ** |
| **30 ದಿವಸ ಗಳೆಂದರೆ** | = | **1 ತಿಂಗಳು** |
| **6 ತಿಂಗಳು ಎಂದರೆ** | = | **1 ಅಯನ ( ದಕ್ಷಿಣಾಯನ ಉತ್ತರಾಯಣ)** |
| **2 ಅಯನಗಳು ಎಂದರೆ** | = | **1 ವರ್ಷ** |

ಮನುಷ್ಯರ ಈ ಒಂದು ವರ್ಷವು ದೇವತೆಗಳಿಗೆ ಒಂದು ದಿನವಾಗುತ್ತದೆ. ಅವರಿಗೆ ಉತ್ತರಾಯಣವೇ ಹಗಲು. ದಕ್ಷಿಣಾಯಣನೇ ರಾತ್ರಿ. ದೇವಮಾನದಿಂದ ಇಂಥ ಹನ್ನೆರಡು ಸಾವಿರ ವರ್ಷಗಳು ತಿರುಗಿದಾಗ ಕೃತ, ತ್ರೇತಾ, ದ್ವಾಪರ, ಕಲಿಯುಗ ಈ

ಚತುರ್ಯುಗ ಚಕ್ರವು ತಿರುಗಿ ಹೋಗಿರುತ್ತದೆ. ಕೃತಯುಗವು ದೇವಮಾನದಿಂದ ನಾಲ್ಕು ಸಾವಿರ ವರ್ಷದ ಅವಧಿಯದು ಇರುತ್ತದೆ. ತ್ರೇತಾಯುಗವು ಮೂರು ಸಾವಿರ ವರ್ಷ. ದ್ವಾಪರಯುಗವು ಎರಡು ಸಾವಿರ ಮತ್ತು ಕಲಿಯುಗವು ಒಂದು ಸಾವಿರ ವರ್ಷ. ಈ ಪ್ರಮಾಣದಲ್ಲಿ ಯುಗ ಚಕ್ರವು ತಿರುಗುತ್ತದೆ. ಈ ಯುಗಗಳ ಹಿಂದೆ ಮುಂದೆ ಪ್ರಮಾಣ ಬದ್ಧವಾದ ಸಂಧ್ಯಾಕಾಲವೂ ಉಂಟು. ಯುಗದ ಅವಧಿಯು ಎಷ್ಟು ಸಾವಿರ ವರ್ಷವೋ ಅಷ್ಟು ನೂರು ವರ್ಷಗಳ ಸಂಧ್ಯಾಕಾಲವು ಆ ಯುಗಗಳ ಆದಿಭಾಗದಲ್ಲಿಯೂ ಅಂತ್ಯ ಭಾಗದಲ್ಲಿಯೂ ಇರುವದು. ಕೃತಯುಗದ ಪ್ರಮಾಣವು ದೇವಮಾನದಿಂದ ನಾಲ್ಕು ಸಾವಿರ ವರ್ಷಗಳದ್ದಿರುವದರಿಂದ ಅದರ ಆದಿ ಅಂತ್ಯಭಾಗದ ಸಂಧ್ಯಾಕಾಲವೂ ಕೂಡ ನಾಲ್ಕು ನೂರು ದಿವ್ಯ ವರ್ಷಗಳದ್ದಿರುವದು. ತ್ರೇತಾಯುಗದ ತುದಿ ಮೊದಲುಗಳಲ್ಲಿ ಮೂನ್ನೂರು ವರ್ಷಗಳ ಸಂಧ್ಯಾಕಾಲವು ಇರುತ್ತದೆ. ಈ ಎರಡೂ ದೀರ್ಘ ಸಂಧ್ಯಾಕಾಲದ ಮಧ್ಯಂತರ ಅವಕಾಶವನ್ನೇ ಕೃತಯುಗ, ತ್ರೇತಾಯುಗ, ಎಂದು ಕರೆಯುತ್ತಾರೆ. ಕೃತ, ತ್ರೇತಾ, ದ್ವಾಪರ, ಕಲಿ ಈ ನಾಲ್ಕು ಯುಗಗಳ ಚತುರ್ಯುಗ ಚಕ್ರವು ಒಂದು ಸಾವಿರಸಲ ಸುತ್ತಿದಾಗ ಬ್ರಹ್ಮದೇವರಿಗೆ ಒಂದು ಹಗಲಾಗುವದು. ಬ್ರಹ್ಮದೇವರ ಈ ಒಂದು ಹಗಲಿನಲ್ಲಿ ಹದಿನಾಲ್ಕು ಮನ್ವಂತರಗಳು ನಡೆದು ಹೋಗುತ್ತವೆ. ಒಂದೊಂದು ಮನ್ವಂತರಕ್ಕೆ ಒಬ್ಬೊಬ್ಬ ಮನುವು ಅಧಿಪತಿಯಾಗಿರುತ್ತಾನೆ. ಮನುಮಹಾರಾಜನ ಒಂದು ಅಧಿಕಾರದ ಕಾಲಾವಧಿಗೆ ಮನ್ವಂತರ ಎಂದು ಹೆಸರು. ಪ್ರತಿಯೊಂದು ಮನ್ವಂತರದಲ್ಲಿಯೂ ಅನುಶಾಸಕರಾಗಿ ಒಬ್ಬ ಮನು ಮಹಾರಾಜ ಮತ್ತು ಅವನ ಮಕ್ಕಳು. ಸಪ್ತ ಋಷಿಗಳು, ದೇವೇಂದ್ರ, ದೇವತೆಗಳು ಇವರೆಲ್ಲರೂ ಪೂರ್ವ ಕಲ್ಪದಂತೆಯೇ ಜನ್ಮವನ್ನು ತಳೆದು ಒಟ್ಟಿಗೆ ಅಧಿಕಾರರೂಢರಾಗಿ ಕೊನೆಗೆ ಒಮ್ಮೆಲೇ ತೆರಳಿಬಿಡುವರು. ಇವರೆಲ್ಲರ ಅಧಿಕಾರಕ್ಕೆ ಒಳಪಟ್ಟು ಉರುಳುವ ಕಾಲ ಚಕ್ರದ ವಿಶಿಷ್ಟ ಪರಿಮಾಣವೇ ಮನ್ವಂತರ.

## ಚತುರ್ಯುಗಗಳ ಚಕ್ರ

ಈ ಚತುರ್ಯುಗಗಳ ಚಕ್ರವು ಎಪ್ಪತ್ತೊಂದು ಸಲ ಸುತ್ತಿದಾಗ ಒಂದು ಮನ್ವಂತರವು ಪೂರ್ಣವಾಗುತ್ತದೆ. ಇದು ತುಸು ಹೆಚ್ಚು ಕಡಿಮೆ ಐದು ಸಾವಿರ ದೈವೀವರ್ಷಗಳಾಗಬಹುದು. ಹೀಗೆ ದೇವಮಾನದಿಂದ ಒಂದು ಮನ್ವಂತರದಲ್ಲಿ ಎಂಟು ಲಕ್ಷ ಐವತ್ತೆರಡುಸಾವಿರ ಮತ್ತು ಕೆಲವು ಚಿಲ್ಲರೆ ವರ್ಷಗಳು ಆಗುತ್ತವೆ. ಇನ್ನು ಮನುಷ್ಯಮಾನದಲ್ಲಿ ಒಂದು ಮನ್ವಂತರದಲ್ಲಿ ಮೂವತ್ತು ಕೋಟಿ ಆರವತ್ತೇಳುಲಕ್ಷ ಇಪ್ಪತ್ತು ಸಾವಿರ ವರ್ಷಗಳು ಆಗುತ್ತವೆ. ಇದರಲ್ಲಿ ಪರಿಶಿಷ್ಟವಾದ ಐದು ಸಾವಿರ ದಿವ್ಯ ವರ್ಷಗಳನ್ನು ಸೇರಿಸಿದರೆ ಮನುಷ್ಯ ಮಾನದಿಂದ ಮತ್ತೆ ಹದಿನೆಂಟು ಲಕ್ಷ ವರ್ಷಗಳು ಹೆಚ್ಚಾಗುತ್ತವೆ. ಬ್ರಹ್ಮದೇವರ ಒಂದು ಹಗಲಿನಲ್ಲಿ ಇಂಥ ಹದಿನಾಲ್ಕು ಮನ್ವಂತರಗಳು ನಡೆದು ಹೋಗುತ್ತವೆ. ಈ ದಿವಸದ ಕೊನೆಯ ಭಾಗದಲ್ಲಿ ಜರಗುವ ಜಲಪ್ರಳಯಕ್ಕೆ ಬ್ರಾಹ್ಮ ಪ್ರಳಯವೆಂದೂ ನೈಮಿತ್ತಿಕ ಪ್ರಳಯ ಎಂದೂ ಕರೆಯುತ್ತಾರೆ.

ಆ ಸಮಯದಲ್ಲಿ ಭೂಮ್ಯಾಕಾಶಗಳೆಲ್ಲ ಸ್ವರ್ಗದೊಡನೆ ದಂದಹಿಸ ಹತ್ತುವವು. ಈ ಪ್ರಳಯಾಗ್ನಿಯಿಂದ ಭೂರ್ಭುವಾದಿ ಲೋಕಗಳೆಲ್ಲ ಉರಿದು ಹೋದಾಗ ಆ ಕಾಳ್ಗಿಚ್ಚಿನಿಂದ ಬೆಂದು ಬಸವಳಿದ ಜನರೆಲ್ಲ ಜನೋಲೋಕದೆಡೆಗೆ ಓಡತೊಡಗುವರು. ಆಗ ಮೂರು ಲೋಕಗಳನ್ನೆಲ್ಲ ಜಲ ರಾಶಿಯು ತುಂಬಿ ನೋಡಿದಲ್ಲೆಲ್ಲ ಒಂದೇ ಒಂದು ಸಮುದ್ರವು ತಾನೇತಾನಾಗಿ ವಿಜೃಂಭಿಸಿರುವಾಗ ಪರಬ್ರಹ್ಮನಾದ ನಾರಾಯಣನು ತನ್ನ ರುದ್ರ ರೂಪದಿಂದ ಮೂರು ಲೋಕಗಳನ್ನೆಲ್ಲ ಹುರಿದು ಮುಕ್ಕಿ ಆದಿಶೇಷನ ಮೇಲೆ ಮಲಗಿ ಬಿಡುತ್ತಾನೆ. ಜನೋ ಲೋಕದಲ್ಲಿರುವ ಮುನಿಜನರೆಲ್ಲರೂ ಆ ಪರಮಾತ್ಮನನ್ನು ಧ್ಯಾನ ಮಾಡುತ್ತಿರುತ್ತಾರೆ. ಬ್ರಹ್ಮದೇವರ ಈ ಹಗಲಿನಷ್ಟೇ ದೀರ್ಘವಾದ ಇಂಥ ಒಂದು ಮಹಾರಾತ್ರಿಯು ಕಳೆದ ಬಳಿಕ ಮತ್ತೆ ಹೊಸ ಸೃಷ್ಟಿಯ ಪ್ರಾರಂಭ. ಇದು ಬ್ರಹ್ಮದೇವರ ಒಂದು ದಿನದ ಪ್ರಮಾಣ. ಇಂಥ ಮೂರು ನೂರಾ ಅರವತ್ತು ದಿನಗಳಾದರೆ ಬ್ರಹ್ಮದೇವರ ಒಂದು ವರುಷವಾಗುತ್ತದೆ. ಇಂಥ ನೂರು ವರ್ಷಗಳ ಕಾಲವೇ ಬ್ರಹ್ಮದೇವರ ಆಯುಷ್ಯದ ಪ್ರಮಾಣವಾಗಿದೆ. ಬ್ರಹ್ಮದೇವರ ಆಯುಷ್ಯದ ಈ ಸುದೀರ್ಘ ಅವಧಿಯನ್ನೇ ಪರಕಾಲ ಎಂದು ಕರೆಯುವುದು. ಈ ಪರಕಾಲದ ಎರಡು ಪರಾರ್ಧದಲ್ಲಿ ಈಗ ಮೊದಲನೇ ಪರಾರ್ಧವು ಮುಗಿದು ಹೋಗಿದೆ. ಮೊದಲನೇ ಪರಾರ್ಧದ ಕಡೆಯ ಕಲ್ಪವೇ ಪಾದ್ಮ ಮಹಾಕಲ್ಪ ಎಂದು ಪ್ರಸಿದ್ಧವಾಗಿದೆ. ಈಗ ಎರಡನೇ ಪರಾರ್ಧವು ಪ್ರಾರಂಭವಾಗಿದೆ. ಅದರಲ್ಲಿ ಈಗ ನಡೆಯುತ್ತಲಿರುವ ಮೊದಲ ಕಲ್ಪಕ್ಕೆ ವರಾಹಕಲ್ಪ ಎಂದು ಹೆಸರು.

**ಮೈತ್ರೇಯ** - ಪೂಜ್ಯರಾದ ಮಹಾ ಮುನಿಗಳೇ ಈ ವರಾಹ ಕಲ್ಪದ ಪ್ರಾರಂಭದಲ್ಲಿ ಬ್ರಹ್ಮಸ್ವರೂಪಿಯಾದ ಆ ಭಗವಂತನು ಎಲ್ಲ ಪ್ರಾಣಿಗಳನ್ನು ಸೃಷ್ಟಿ ಮಾಡಿದ ಬಗೆ ಹೇಗೆ ದಯವಿಟ್ಟು ಅದನ್ನು ತಿಳಿಸಬೇಕು.

## ವರಾಹಾವತಾರದ ಹಿನ್ನೆಲೆ

**ಪರಾಶರ** - ಈ ಮೊದಲು ಕಳೆದು ಹೋದ ಪಾದ್ಮಕಲ್ಪದ ಕೊನೆಯಲ್ಲಿ ಸುಖ ನಿದ್ರೆಯಿಂದ ಎಚ್ಚತ್ತ ಸುಖಾತ್ಮಕನಾದ ನಾರಾಯಣನು ಕಣ್ಣು ತೆರೆದು ಎಲ್ಲೆಡೆ ನೋಡಿದಾಗ ಲೋಕವೆಲ್ಲವೂ ಶೂನ್ಯವಾಗಿತ್ತು. ಆಗ ಎಲ್ಲ ಕಡೆಗೆ ಇದ್ದದ್ದು ಬರೇ ನೀರು. ಆ ನೀರನ್ನು ಸೃಷ್ಟಿಸಿದವನು ನಾರಾಯಣನೇ. ನಾರಾಯಣನಿಂದ ನಿರ್ಮಿತವಾದದ್ದರಿಂದ ಆ ನೀರಿಗೆ ''ನಾರ'' ಎಂದು ಹೆಸರು. ಅದರಲ್ಲಿ ಪವಡಿಸಿದ್ದುದರಿಂದ ಅವನಿಗೆ ನಾರಾಯಣ ಎಂದು ಅಭಿಧಾನವು ಪ್ರಾಪ್ತವಾಯಿತು. ಪ್ರಳಯ ಜಲಧಿಯಲ್ಲಿ ಮುಳುಗಿಹೋದ ಭೂಮಂಡಲವನ್ನು ಉದ್ಧಾರ ಮಾಡಲಿಕ್ಕಾಗಿ ಶ್ರೀ ಹರಿಯು ಹಿಂದಿನ ಕಲ್ಪಗಳಲ್ಲಿ ಮತ್ಸ್ಯ ಕೂರ್ಮ ಅವತಾರಗಳನ್ನು ಎತ್ತಿದಂತೆ ಈ ಕಲ್ಪದಲ್ಲಿ ವರಾಹ ರೂಪವನ್ನು ಧಾರಣ ಮಾಡಿದನು. ವೇದ ಯಜ್ಞಮಯನಾದ ಪರಮಾತ್ಮನ ಈ ವರಾಹ ಅವತಾರವನ್ನು ಜನೋಲೋಕದಲ್ಲಿ ವಾಸಿಸಿದ ಸನಕ ಸನಂದನಾದಿ ಸತ್‌ಪುರುಷರು ಸ್ತೋತ್ರ ಮಾಡಿದರು. ಆಗ ಆ ಮಾಯಾ ವರಾಹನು ಪೃಥ್ವಿಯ ಉದ್ಧಾರಕ್ಕಾಗಿ ಅಪಾರ ಜಲರಾಶಿಯಲ್ಲಿ ಹೊಕ್ಕು ಪಾತಾಳದ ಆಳಕ್ಕೆ ಇಳಿದನು. ತಾನಿದ್ದ ಪಾತಾಳದವರೆಗೆ ಧಾವಿಸಿಬಂದ ಆ ಭಗವಂತನನ್ನು ನೋಡಿ ಭೂದೇವಿಯು ಉಲ್ಹಾಸದಿಂದ ಹಿಗ್ಗಿ ಭಕ್ತಿಯಿಂದ ಬಗ್ಗಿ ಇಂತು ಸ್ತೋತ್ರ ಮಾಡಿದಳು.

## ಪೃಥಿವೀ ಉವಾಚ

**ನಮಸ್ತೇ ಸರ್ವ ಭೂತಾಯ ಶಂಖ ಚಕ್ರ ಗದಾಧರ**
**ಮಾಮುದ್ಧರಾಸ್ಮಾದದ್ಯತ್ವಂ ತ್ವತ್ತೋಽಹಂ ಪೂರ್ವಮುತ್ಥಿತಾ ॥**

**ತ್ವಾಮಾರಾಧ್ಯ ಪರಂ ಬ್ರಹ್ಮ ಯಾತಾ ಮುಕ್ತಿಂ ಮುಮುಕ್ಷವಃ**
**ವಾಸುದೇವಮನಾರಾಧ್ಯ ಕೋ ಮೋಕ್ಷಂ ಸಮವಾಪ್ಸ್ಯಯಾತ್ ॥**

**ತ್ವನ್ಮಯಾಹಂ ತ್ವದಾಧಾರಾ ತ್ವತ್ ಸೃಷ್ಟಾ ತ್ವಾಮುಪಾಶ್ರಿತಾ**
**ಮಾಧವೀಮಿತಿ ಲೋಕೋಯಮಭಿಧತ್ತೆ ತತೋ ಹಿ ಮಾಂ ॥**

**ಜಯಾಽ ಖಿಲ ಜ್ಞಾನಮಯ ಜಯ ಸ್ಥೂಲ ಜಯಾಽವ್ಯಯ**
**ಜಯಾನಂತ ಜಯಾವ್ಯಕ್ತ ಜಯ ವ್ಯಕ್ತ ಮಯ ಪ್ರಭೋ ॥**

**ತ್ವಂ ಯಜ್ಞಃ ತ್ವಂ ವಷಟ್‌ಕಾರಃ ತ್ವಂ ಓಂ ಕಾರಃ ತ್ವಂ ಅಗ್ನಯಃ**
**ತ್ವಂ ವೇದಾಃ ತ್ವಂ ತದಂಗಾನಿ ತ್ವಂ ಯಜ್ಞಃ ಪುರುಷೋ ಹರೇ ॥**

**ಯಚ್ಚೋಕ್ತಂ ಯಚ್ಚ ನೈವೋಕ್ತಂ ಮಯಾತ್ರ ಪರಮೇಶ್ವರ**
**ತತ್ಸರ್ವಂ ತ್ವಂ ನಮಸ್ತುಭ್ಯಂ ಭೂಯೋ ಭೂಯೋ ನಮೋ ನಮಃ ॥**

ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿದ ಸರ್ವ ಪ್ರಾಣಿಗಳ ಅಂತರ್ಗತನಾದ ಪರಮಾತ್ಮನೇ, ನಿನಗೆ ನನ್ನ ನಮಸ್ಕಾರ. ಹಿಂದೆ ನೀನೇ ನನ್ನನ್ನು ಉದ್ಧಾರಮಾಡಿದ್ದೆ. ಅದರಂತೆ ಈಗಾದರೂ ಪಾತಾಳದ ಆಳದಲ್ಲಿ ಸಿಕ್ಕುಬಿದ್ದ ನನ್ನನ್ನು ನೀನೇ ಮೇಲಕ್ಕೆ ಎತ್ತು. ನಿನ್ನ ಪರಾತ್ಪರವಾದ ಮೂಲರೂಪವನ್ನು ಸಾಕಲ್ಯೇನ ತಿಳಿದವರು ಯಾರೂ ಇಲ್ಲ. ಅವತಾರ ರೂಪಗಳನ್ನು ಮಾತ್ರ ಜ್ಞಾನಿಗಳು ಯಥಾ ಶಕ್ತಿ ತಿಳಿಯಲು ಪ್ರಯತ್ನಿಸುತ್ತಾರೆ. ಪರಬ್ರಹ್ಮನಾದ ನಿನ್ನನ್ನು ಆರಾಧನೆಮಾಡಿಯೇ ಹಿಂದೆ ಅನೇಕ ಭಕ್ತರು ಮೋಕ್ಷ ಪಡೆದಿದ್ದಾರೆ.

ಮುಕುಂದನನ್ನು ಆರಾಧಿಸದೆ ಮೋಕ್ಷವನ್ನು ಹೊಂದಲು ಯಾರಿಗೆ ತಾನೇ ಸಾಧ್ಯ? ನೀನು ನನ್ನಲ್ಲಿ ವ್ಯಾಪಿಸಿರುವೆ. ನನಗೆ ನೀನೇ ಆಧಾರ. ನಾನು ನಿನ್ನಿಂದಲೇ ಹುಟ್ಟಿದವಳು. ನಾನು ನಿನ್ನನ್ನೇ ಆಶ್ರಯಿಸಿದ್ದೇನೆ. ಹೀಗೆ ಎಲ್ಲ ರೀತಿಯಿಂದಲೂ ಮಾಧವನಾದ ನಿನ್ನನ್ನೇ ಆಶ್ರಯಿಸಿದ್ದರಿಂದ ನನಗೆ ಜನರು ಮಾಧವೀ ಎಂದು ಕರೆಯುತ್ತಾರೆ. ಜ್ಞಾನ ಪೂರ್ಣನೂ ನಾಶರಹಿತನೂ, ವ್ಯಕ್ತ ಪ್ರಪಂಚದ ತುಂಬ ವ್ಯಾಪಿಸಿದವನೂ, ಅವ್ಯಕ್ತ ಸ್ವರೂಪನೂ, ಆದ ಓ ಮಹಾಪ್ರಭುವೇ, ನಿನಗೆ ಜಯವಾಗಲಿ. ಈ ಯಜ್ಞ, ವಷಟ್ಕಾರ ಮಂತ್ರ, ಓಂಕಾರ ಮತ್ತು ಈ ಯಜ್ಞಾಗ್ನಿ, ಇವೆಲ್ಲವೂ ನಿನ್ನ ಪೂಜೆಯ ಅಂಗವಾಗಿ ನಿನ್ನ ಸನ್ನಿಧಾನೋಪೇತವಾಗಿರುತ್ತವೆ. ಎಲ್ಲ ವೇದ ವೇದಾಂಗಗಳು ನಿನ್ನ ಹೊಗಳು ಭಟ್ಟಂಗಿಗಳು ಆಗಿರುತ್ತವೆ. ನೀನೇ ಯಜ್ಞಪುರುಷ. ಸೂರ್ಯ, ಚಂದ್ರ, ಚಿಕ್ಕೆ ಮತ್ತು ಈ ಮೂರ್ತಾಮೂರ್ತ, ದೃಶ್ಯಾದೃಶ್ಯವಾದ ಎಲ್ಲ ಪ್ರಪಂಚವು ಮತ್ತು ನಾನು ಈ ವರೆಗೆ ಹೇಳಿದ ಮತ್ತು ಹೇಳದಿರುವ ಎಲ್ಲ ಪ್ರಪಂಚವು ನಿನ್ನಿಂದ ವ್ಯಾಪ್ತವಾಗಿ ನಿನ್ನಿಂದ

ನಿಯಮಿತವಾಗಿ ನಿನ್ನ ಮಹಿಮೆಯಿಂದ ತುಂಬಿದೆ. ಆದುದರಿಂದ ನಿನಗೆ ನಮ್ಮ ನಮಸ್ಕಾರ. ಮತ್ತೆ ಮತ್ತೆ ನಮಸ್ಕಾರ.''

ಭೂದೇವಿಯ ಈ ಪ್ರಾರ್ಥನೆಯನ್ನು ಕೇಳಿ ಮಹಾಸ್ವಾಮಿಯು ಸಾಮವೇದದಂತೆ ಮಧುರವಾದ ಧ್ವನಿಯಿಂದ ಗಂಭೀರವಾಗಿ ಗರ್ಜನೆಯನ್ನು ಮಾಡಿದನು. ಆ ಮೇಲೆ ಆ ವರಾಹರೂಪಿಯಾದ ವಿಷ್ಣುವು ಕಮಲದಂತೆ ವಿಶಾಲವಾದ ಕಣ್ಣಿನಿಂದ ಭೂದೇವಿಯನ್ನು ಒಮ್ಮೆ ನೋಡಿ ತನ್ನ ಕೋರೆದಾಡೆಯಿಂದ ಆ ಭೂಮಂಡಲವನ್ನು ಎತ್ತಿ ಪಾತಾಳದ ಆಳದಿಂದ ಮೇಲಕ್ಕೆ ಎದ್ದನು. ಕನ್ನೈದಿಲೆಯಂತೆ ಕಪ್ಪು ಬಣ್ಣದ ಆ ಕೃಷ್ಣನು ಮೇಲೆ ಬಂದಾಗ ನೀಲಾದ್ರಿಯೇ ನೀರಿನಿಂದ ಮೇಲಕ್ಕೆ ನೆಗೆದು ಬಂದಂತೆ ಕಂಡಿತು. ಆಗ ಆ ಪರಮಾತ್ಮನನ್ನು ಸನಕಾದಿ ಮುನಿಗಳೂ ಬ್ರಹ್ಮಾದಿದೇವತೆಗಳೂ ಭಕ್ತಿಯಿಂದ ಕೊಂಡಾಡಿದರು. ಹೀಗೆ ಸರ್ವರಿಂದ ಪ್ರಾರ್ಥಿತನಾದ ಆ ಪರಮಾತ್ಮನು ಭೂಮಿಯನ್ನು ಎತ್ತಿ ನೀರಮೇಲೆ ಹಗುರವಾಗಿ ಇಟ್ಟನು. ಅಪಾರವಾದ ಆ ಕಡಲಿನ ಒಡಲಿನಲ್ಲಿ ದೊಡ್ಡ ನೌಕೆಯಂತೆ ಅದು ತೇಲತೊಡಗಿತು. ಆ ಮಹೀಮಂಡಲದ ಮೈ ಅಳತೆಯು ಹರವಾದುದರಿಂದ ಅದು ನೀರಿನಲ್ಲಿ ಮುಳುಗದೆ ನೀರಿನಮೇಲೆ ತೇಲುತ್ತ ನಿಂತುಕೊಂಡಿತು. ಹೀಗೆ ಭೂಮಿಯನ್ನು ಸರಿಯಾಗಿ ನಿಲ್ಲಿಸಿ ಹಿಂದೆ ನಷ್ಟವಾಗಿ ಹೋದ ಎಲ್ಲ ದೊಡ್ಡ ದೊಡ್ಡ ಗುಡ್ಡಗಳನ್ನು ಆ ಭಗವಂತನು ನಿರ್ಮಿಸಿ ಆ ಸ್ಥಾನಗಳಲ್ಲಿ ಗಟ್ಟಿಯಾಗಿ ಎಲ್ಲ ಬೆಟ್ಟಗಳನ್ನೂ ನೆಟ್ಟು ಬಿಟ್ಟನು. ಆ ಬಳಿಕ ಈ ಭೂಮಿಯಲ್ಲಿ ಸಪ್ತದ್ವೀಪಗಳನ್ನು ಮತ್ತು ಭೂಲೋಕ. ಭುವರ್ಲೋಕ. ಸ್ವರ್ಲೋಕ, ಮಹರ್ಲೋಕ ಈ ನಾಲ್ಕು ಲೋಕಗಳನ್ನೂ ಪೂರ್ವಕಲ್ಪದಂತೆಯೇ ಮತ್ತೆ ನಿರ್ಮಾಣ ಮಾಡಿದನು. ಅನಂತರ ಆ ಪರಮಾತ್ಮನೇ ರಜೋಗುಣದಿಂದ ಚತುರ್ಮುಖ ಬ್ರಹ್ಮನಾಗಿ ಪ್ರಪಂಚವನ್ನೆಲ್ಲ ಕ್ರಮವಾಗಿ ಸೃಷ್ಟಿ ಮಾಡಿದನು. ಈ ಪ್ರಪಂಚದಲ್ಲಿಯ ಪ್ರಾಣಿಗಳ ಪೂರ್ವ ಕರ್ಮ, ಸಂಸ್ಕಾರ, ಪ್ರಾರಬ್ಧ ಸ್ವಭಾವಗಳೇ ಅವುಗಳ ಸಂಸ್ಕೃತಿಗೆ ಮುಖ್ಯ ಕಾರಣಗಳಾಗಿದ್ದು ತಮ್ಮ ತಮ್ಮ ಕರ್ಮಾನುಸಾರವಾಗಿ ಸಂಸಾರ ಚಕ್ರದಲ್ಲಿ ತಿರುಗುವ ಚರಾಚರ ಪ್ರಪಂಚಕ್ಕೆಲ್ಲ ಪರಮಾತ್ಮನು ನಿಮಿತ್ತಕಾರಣನು ಮಾತ್ರ ಆಗಿದ್ದಾನೆ.

**ಮೈತ್ರೇಯ** - ಸೃಷ್ಟಿಯ ಪ್ರಾರಂಭ ಕಾಲದಲ್ಲಿ ಬ್ರಹ್ಮದೇವರು ದೇವದಾನವರನ್ನೂ, ಮನುಷ್ಯ ಪಶುಗಳನ್ನೂ, ಜಲಚರ, ಸ್ಥಲಚರಗಳನ್ನೂ, ವೃಕ್ಷಪಕ್ಷಿಗಳನ್ನೂ ಮತ್ತು ಅವುಗಳ ರೂಪ ಗುಣ ಸ್ವಭಾವಗಳನ್ನೂ ಎಂತು ಹೇಗೆ ನಿರ್ಮಿಸಿದನು ? ಇದನ್ನೆಲ್ಲ ನನಗೆ ವಿಶದವಾಗಿ ತಿಳಿಸಬೇಕು.

## ನವವಿಧ ಸೃಷ್ಟಿ

ಪರಾಶರ - ಮೈತ್ರೇಯ, ಸೃಷ್ಟಿಮಾಡಬೇಕೆಂದು ಕಾರ್ಯ ಪ್ರವೃತ್ತನಾದ ಬ್ರಹ್ಮದೇವನಿಂದ ಮೊದಲು ಉದಿಸಿ ಬಂದದ್ದು ಬುದ್ಧಿ ಶೂನ್ಯವಾದ ಅವಿದ್ಯಾಪ್ರಪಂಚ. ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ, ಮತ್ತು ಅಂಧತಾಮಿಸ್ರ ಎಂದು ಬ್ರಹ್ಮದೇವರ ಚೊಚ್ಚಲುಮಗಳಾದ ಅವಿದ್ಯೆಯು ಐದು ತೆರನಾಗಿದೆ. ಅನಂತರ ಅವರ

ಇಚ್ಛೆಯಂತೆ ಗಿಡ, ಬಳ್ಳಿ, ಕಂಟಿ ಪೊದೆ, ಹುಲ್ಲು ಎಂದು ಐದು ವಿಧವಾದ ಸ್ಥಾವರ ವಸ್ತುಗಳು ಸೃಷ್ಟಿಯಾಯಿತು. ಈ ಸ್ಥಾವರಗಳಲ್ಲಿ ಸುಪ್ತವಾಗಿ ಚೇತನಶಕ್ತಿ ಇದ್ದರೂ ಜ್ಞಾನಶಕ್ತಿ ಇಲ್ಲ. ಎಲ್ಲಕ್ಕಿಂತ ಮೊದಲು ಸೃಷ್ಟಿಯಾದದ್ದರಿಂದ ಈ ಸ್ಥಾವರ ಸೃಷ್ಟಿಯು ಮೊದಲು ಸೃಷ್ಟಿ ಎಂದು ಅನಿಸಿಕೊಳ್ಳಲ್ಪಡುತ್ತದೆ. ಜ್ಞಾನಶೂನ್ಯವಾದ ಈ ಜಡ ಸೃಷ್ಟಿಯಿಂದ ಯಾವ ಪುರುಷಾರ್ಥವನ್ನೂ ಸಾಧಿಸಲಿಕ್ಕಾಗುವದಿಲ್ಲ. ಎಂದು ತಿಳಿದ ಬೊಮ್ಮನು ಮತ್ತೆ ಓಡಾಡುವ ಪ್ರಾಣಿಗಳನ್ನು ನಿರ್ಮಿಸಿದನು. ಆಹಾರಕ್ಕಾಗಿ ಅಲೆದಾಡುವ ಈ ಪ್ರಾಣಿಗಳ ಸೃಷ್ಟಿಗೆ ತಿರ್ಯಕ್ ಸೃಷ್ಟಿಯೆಂದು ಹೆಸರು. ಇಪ್ಪತ್ತೆಂಟು ಜಾತಿಯ ಈ ತಿರ್ಯಕ್ ಸೃಷ್ಟಿಯಲ್ಲಿ ಯಾವುದಕ್ಕೂ ಬುದ್ಧಿಯ ಬೆಳಕು ಇಲ್ಲ. ಅವುಗಳಿಗೆ ಸುಖ, ಜ್ಞಾನ, ಅಹಂಕಾರದಿಂದ ಕಾರ್ಯಪ್ರವೃತ್ತಿ. ದೇಹಯಾತ್ರೆಗೆ ಮಾತ್ರ ಸಾಕಾಗುವಷ್ಟು ಪರಿಮಿತಜ್ಞಾನವು ಇದ್ದುದರಿಂದ ಪರಮಾತ್ಮನು ಈ ತಮೋಮಯ ಸೃಷ್ಟಿಯು ಸಾಧಕವಾಗದೆಂದು ಬಗೆದು ಮತ್ತೊಂದು ಒಳ್ಳೆ ಸೃಷ್ಟಿಯನ್ನು ಮಾಡಬೇಕೆಂದು ಬಯಸಿದನು. ಆಗ ದಿವ್ಯ ಜ್ಞಾನೋಪೇತರೂ ಸಾತ್ವಿಕ ಸ್ವಭಾವವುಳ್ಳವರೂ ಆದ ದೇವತೆಗಳ ಸೃಷ್ಟಿಯಾಯಿತು. ನಿತ್ಯ ಸಂತುಷ್ಟರಾದ ದೇವತೆಗಳ ಈ ಮೂರನೇ ಸೃಷ್ಟಿಯಿಂದ ಬ್ರಹ್ಮದೇವರಿಗೆ ತೃಪ್ತಿಯಾಯಿತು. ಆ ಮೇಲೆ ಪರಮಾತ್ಮನು ಸಾಧಕರ ಒಂದು ವರ್ಗವನ್ನು ಸೃಷ್ಟಿಸಬೇಕೆಂದು ಬಯಸಿದನು. ಅದೇ ಮನುಷ್ಯನ ಸೃಷ್ಟಿ. ಮನುಷ್ಯರು ಜ್ಞಾನ ಪ್ರಧಾನರು. ಅವರಲ್ಲಿ ತಮೋಗುಣ ಪ್ರಭಾವದಿಂದ ದುಃಖ ಪ್ರಾಚುರ್ಯವಿದ್ದು ಅವರು ರಜೋಗುಣದ ಪರಿಣಾಮವಾಗಿ ಕಾರ್ಯೋನ್ಮುಖರೂ ಆಗಿರುತ್ತಾರೆ.

ಮೈತ್ರೇಯ, ಒಟ್ಟು ಈ ಬ್ರಹ್ಮ ಸೃಷ್ಟಿಯು ಒಂಭತ್ತು ವಿಧವಾಗಿದೆ ಎಂದು ತಿಳಿಯಬಹುದು. ಬ್ರಹ್ಮದೇವರ ಶರೀರ ಭೂತವಾದ ಮಹತ್ತತ್ವದ ಸೃಷ್ಟಿಯು ಮೊದಲು ಸೃಷ್ಟಿ. ಅನಂತರ ಭೂತ ಸರ್ಗವೆಂದು ಹೆಸರಾದ ಭೂತ ಮತ್ತು ತನ್ಮಾತ್ರೆಗಳ ಸೃಷ್ಟಿ ಎರಡನೇಯದು. ಇಂದ್ರಿಯ ಮತ್ತು ಇಂದ್ರಿಯಾಭಿಮಾನಿಗಳ ಸೃಷ್ಟಿ ಮೂರನೇಯದು. ಜಡವಾದ ವೃಕ್ಷಲತಾದಿಗಳ ಸೃಷ್ಟಿ ನಾಲ್ಕನೇ ಸೃಷ್ಟಿ. ಪಕ್ಷ್ಯಾದಿಗಳ ಸೃಷ್ಟಿ ಐದನೇಯ ತಿರ್ಯಕ್ ಸೃಷ್ಟಿ. ಊರ್ಧ್ವಮುಖವಾದ ದೇವತೆಗಳ ಸೃಷ್ಟಿ ಆರನೇಯದು. ಸೃಷ್ಟಿಯ ಮುಖವು ಕೆಳಮುಖವಾದಾಗ ಜನಿಸಿ ಬಂದ ಮನುಷ್ಯರ ಸೃಷ್ಟಿ ಏಳನೇ ಸೃಷ್ಟಿ. ಈ ಪ್ರಾಣಿಗಳಿಗೆಲ್ಲ ಬಲ ಮತ್ತು ಮಾನವರಿಗೆ ಜ್ಞಾನ ಮತ್ತು ದೇವತೆಗಳಿಗೆ ತೃಪ್ತಿಗಳನ್ನು ಕೊಟ್ಟ ಎಂಟನೇಯ ಸೃಷ್ಟಿ ಅನುಗ್ರಹ ಸೃಷ್ಟಿ ಎಂದು ಕರೆಯಲ್ಪಡುತ್ತದೆ. ಇದು ಪ್ರಾಣಿಗಳಲ್ಲಿ ತಾಮಸ ರೂಪವಾದರೆ ದೇವ ಮಾನವರಲ್ಲಿ ಸಾತ್ವಿಕವಾಗಿದೆ. ಹೀಗೆ ಮೂರು ಪ್ರಾಕೃತಿಕ ಸೃಷ್ಟಿ ಐದು ವೈಕೃತಿಕ ಸೃಷ್ಟಿ ಹೀಗೆ ಒಟ್ಟು ಎಂಟು ಸೃಷ್ಟಿಗಳಾದ ಬಳಿಕ ಬ್ರಹ್ಮದೇವರು ಸನಕಾದಿ ಮಾನಸಪುತ್ರರನ್ನು ನಿರ್ಮಿಸಿದರು. ಈ ದಿವ್ಯ ಜ್ಞಾನಿಗಳ ಸೃಷ್ಟಿಯು ಒಂಬತ್ತನೇ ಸೃಷ್ಟಿಯಾಯಿತು.

## ಸೃಷ್ಟಿಯ ವಿವಿಧ ವಿಸ್ತಾರ

**ಮೈತ್ರೇಯ** - ಮುನಿವರ್ಯ ದೇವತೆಗಳೇ ಮೊದಲಾದವರ ಹುಟ್ಟಿನ ಬಗೆಯನ್ನು ನೀವು ಸಂಕ್ಷೇಪವಾಗಿ ವಿವರಿಸಿದಿರಿ. ಅದನ್ನು ಇನ್ನೂ ತುಸು ಬಿತ್ತರಿಸಿ ಹೇಳಬೇಕು.

**ಪರಾಶರ** - ಪ್ರಾಣಿಕೋಟಿಗಳ ಅನಾದಿ ಕರ್ಮಾನುಸಾರವಾಗಿ ಬ್ರಹ್ಮದೇವರು ದೇವ, ಮಾನವ, ತಿರ್ಯಕ್, ಸ್ಥಾವರ ಎಂದು ಚತುರ್ವಿಧ ಸೃಷ್ಟಿಯನ್ನು ಮಾಡಿದ ಬಳಿಕ ತನ್ನ ಸೃಷ್ಟಿಯ ಅಂಗವಾಗಿ ದೇವ, ಮಾನವ, ದಾನವ, ಪಿತೃ ಎಂದು ಮತ್ತೆ ನಾಲ್ಕು ವಿಧವಾಗಿ ಸೃಷ್ಟಿಯನ್ನು ಮುಂದುವರಿಸತಕ್ಕದ್ದೆಂದು ಕಾರ್ಯೋನ್ಮುಖರಾದರು. ಆಗ ತಮೋಗುಣದ ಉದ್ರೇಕವಾಗಿ ಆ ಬ್ರಹ್ಮ ಪ್ರಜಾಪತಿಯ ಕಟಿಪಶ್ಚಾತ್ ಭಾಗದಿಂದ ಅಸುರರು ಹುಟ್ಟಿದರು. ಅನಂತರ ಆ ಪಿತಾಮಹನು ಅತ್ಯಲ್ಪ ತಮೋಮಯವಾದ ಆ ಶರೀರವನ್ನು ತ್ಯಾಗಮಾಡಿದ. ಬ್ರಹ್ಮದೇವರಿಂದ ಪರಿತ್ಯಕ್ತವಾದ ಆ ತಮೋಮಯ ಶರೀರವೇ ರಾತ್ರಿ ಎನಿಸುತ್ತದೆ. ಅನಂತರ ಸತ್ವೋದ್ರೇಕದಿಂದ ಒಡಗೂಡಿದ ಮತ್ತೊಂದು ಶರೀರವನ್ನು ಧರಿಸಿಕೊಂಡು ದೇವತೆಗಳನ್ನು ಸೃಷ್ಟಿ ಮಾಡಿದನು. ಬ್ರಹ್ಮದೇವರು ಆ ಸಾತ್ವಿಕ ಶರೀರವೇ ಹಗಲಾಯಿತು. ಆ ಬಳಿಕ ಬ್ರಹ್ಮದೇವರು ಮತ್ತೊಂದು ಸಾತ್ವಿಕವಾದ ಶರೀರವನ್ನು ತೊಟ್ಟು ತಾನೇ ಎಲ್ಲರ ತಂದೆ ಎಂಬ ಭಾವನೆಯಿಂದ ಮತ್ತೆ ಸೃಷ್ಟಿ ಮಾಡಿದನು. ಅದೇ ಪಿತೃಗಣ ಸೃಷ್ಟಿಯಾಯಿತು. ಅದನ್ನೂ ಚತುರ್ಮುಖನು ತೊರೆದಾಗ ಅದು ಸಂಧ್ಯಾಕಾಲವಾಯಿತು. ಅನಂತರ ಚತುರಾನನನು ರಜೋಮಯ ಶರೀರವನ್ನು ಧಾರಣಮಾಡಿ ಮಾನವರನ್ನು ಸೃಷ್ಟಿಸಿದನು.

ಆ ರಜೋಮಯ ಶರೀರವನ್ನು ಬ್ರಹ್ಮದೇವರು ಬಿಟ್ಟ ಬಳಿಕ ಅದು ಪ್ರಾತಃ ಸಂಧ್ಯೆಯಾಯಿತು. ಅದಕ್ಕೆ ಜ್ಯೋತ್ಸ್ನೆ ಎಂದು ಹೆಸರು. ಮೈತ್ರೇಯ, ಈ ಕಾರಣದಿಂದಲೇ ದೇವತೆಗಳಿಗೆ ಹಗಲು ಹೊತ್ತು ಬಲ ಹೆಚ್ಚು ರಾತ್ರಿ ಅಸುರರಿಗೆ ಬಲವು ಹೆಚ್ಚಾಗುವದು. ಮನುಷ್ಯರಿಗೆ ಬೆಳಗುಮುಂಜಾನೆ ಬಲ, ಹುಮ್ಮಸ್ಸು ಹೆಚ್ಚು. ಪಿತೃಗಳಿಗೆ ಸಾಯಂಕಾಲ ಶಕ್ತಿ ಜಾಸ್ತಿ. ಹೀಗೆ ಹಗಲು-ರಾತ್ರಿ, ಸಂಜೆ ಮುಂಜಾವುಗಳು ತ್ರಿಗುಣಾತ್ಮಕವಾದ ಬ್ರಹ್ಮದೇವರ ಶರೀರಗಳೇ ಆಗಿವೆ. ಅನಂತರ ಪರಮಾತ್ಮನು ರಜೋಮಯವಾದ ಮತ್ತೊಂದು ಶರೀರವನ್ನು ಧರಿಸಿದ್ದನು. ಆ ಶರೀರದಲ್ಲಿ ಅವನಿಗೆ ಬಹಳ ಹಸಿವು ಆಗಿ ಅದರಿಂದ ಕೋಪವು ಬಂದಿತು. ಆಗ ಹಸಿವೆಯೆಂದು ಹೊಟ್ಟೆ ಹೊಟ್ಟೆ ಬಡಿದುಕೊಳ್ಳುವ ಕೋಪಿಷ್ಠವಾದ ಒಂದು ವಿದ್ರೂಪ ಜಾತಿಯು ಹುಟ್ಟಿತು. ಹೊರೆ ಮೀಶೆಯುಳ್ಳ ಕಾಡುರೂಪದ ಆ ಕೀಳು ಜನಾಂಗವು ಹಸಿವೆಯಿಂದ ಕಂಗಾಲಾಗಿ ತಮ್ಮನ್ನು ನಿರ್ಮಿಸಿದ ಪ್ರಜಾಪತಿಯನ್ನೇ ಕಬಳಿಸಲು ಓಡಿದರು. ಆಗ ಅವರಲ್ಲಿ ಕೆಲವರು ''ಛೀ ಹೀಗೆ ಮಾಡುವದು ಬೇಡ ಈ ಪ್ರಜಾಪತಿಯನ್ನು ರಕ್ಷಿಸಿರಿ'' ಎಂದರು. ರಕ್ಷಿಸಿರಿ ಎಂದವರೇ ರಾಕ್ಷಸರು. ''ಇವನನ್ನು ತಿಂದೇ ಬಿಡೋಣ'' ಎಂದು ನುಡಿದವರು ಯಕ್ಷರಾದರು. ಅದನ್ನು ಕಂಡು ಭಗವಂತನ ತಲೆ ಸಿಡಿದು ಕೂದಲುಗಳು ಉದುರಿಬಿದ್ದು ಮತ್ತೆ ಮೈಯೆಲ್ಲ ಹರಿದು ತಲೆ ಏರಿದವು. ಆಗ ಹರಿದಾಡುವ ಹಾವುಗಳ ಜನನವಾಯಿತು. ಇದರಿಂದ ಆ ಸ್ರಷ್ಟಾರನಿಗೆ ಕೋಪ ಬಂದು ಅದರಿಂದ ಮುಂಗೋಪಿಗಳಾದ ಮಾಂಸ ತಿನ್ನುವ ಭೂತಗಳ ಸೃಷ್ಟಿಯಾಯಿತು. ಅನಂತರ ಮುಂದೊಮ್ಮೆ ಹಾಡುತ್ತ ಕುಳಿತ ಬ್ರಹ್ಮದೇವರ ಅಂಗದಿಂದ ಗಂಧರ್ವ ಕುಲವು ಉತ್ಪನ್ನವಾಯಿತು. ಹೀಗೆ ಜೀವ ಕೋಟಿಯ ಪೂರ್ವ ಜನ್ಮ ಕರ್ಮಾನುಸಾರವಾಗಿ ಸೃಷ್ಟಿಕ್ರಮವು ಕವಲೊಡೆಯುತ್ತ ನಡೆಯಿತು.

ಇದಾದನಂತರ ಆ ಜಗದೀಶ್ವರನ ಇಚ್ಛೆಯಿಂದ ಪರಮಾತ್ಮನ ಮುಖದಿಂದ ಪಕ್ಷಿಗಳೂ, ಅವನ ವಕ್ಷಸ್ಥಳದಿಂದ ಕುರಿಗಳೂ, ಬಾಯಿಂದ ಮೇಕೆಗಳೂ, ಹೊಟ್ಟೆ ಮತ್ತು ಪಕ್ಕೆಗಳಿಂದ ಆಕಳು ಹುಟ್ಟಿಬಂದವು. ಮತ್ತು ಆ ಪರಮೇಶ್ವರನ ಎರಡೂ ಕಾಲುಗಳಿಂದ ಆನೆ, ಕುದುರೆ, ಕತ್ತೆ, ಕರಡಿ ಕಡವೆ, ಚಿಗರೆ, ಒಂಟೆ, ಮುಂತಾದ ಹಲವಾರು ಜಾತಿಯ ಪಶುಗಳೂ ಮತ್ತು ಅವನ ಮೈಮೇಲಿನ ಕೂದಲುಗಳಿಂದ ವನಸ್ಪತಿಗಳು, ಕಂದ ಮೂಲಫಲಗಳೂ, ಉತ್ಪನ್ನವಾದವು. ಕಲ್ಪಾರಂಭ ಕಾಲದಲ್ಲಿ ತಾನು ನಿರ್ಮಿಸಿದ ಈ ವನಸ್ಪತಿಗಳನ್ನೂ, ಪಶುಗಳನ್ನೂ, ತ್ರೇತಾಯುಗದಲ್ಲಿ ಯಜ್ಞ ಕಾರ್ಯಕ್ಕಾಗಿ ಉಪಯೋಗಿಸಿಕೊಂಡನು. ಪರಮಾತ್ಮನು ಸೃಷ್ಟಿಸಿದ ಪ್ರಾಣಿ ಪ್ರಪಂಚದಲ್ಲಿ ಮಾಂಸತಿಂದು ಬದುಕುವ ಹುಲಿ, ಸಿಂಹಗಳ ಒಂದು ವರ್ಗವಾದರೆ ಎರಡು ಖುರದ ಪ್ರಾಣಿಗಳದು ಇನ್ನೊಂದು ವರ್ಗ. ಆನೆಗಳದು ಮೂರನೇ ವರ್ಗ. ಮಂಗಗಳು ನಾಲ್ಕನೇ ವರ್ಗ. ಹಕ್ಕಿಗಳದು ಐದನೇ ವರ್ಗ. ನೀರಿನಲ್ಲಿ ಹರಿದಾಡುವ ಮೀನು ಮೊದಲಾದ ಜಲಚರ ಪ್ರಾಣಿಗಳು ಆರನೇ ವರ್ಗ, ನೆಲದ ಮೇಲೆ ಸರಿದಾಡುವ ಹಾವು ಹಲ್ಲಿ ಮುಂತಾದವುಗಳು ಏಳನೇ ವರ್ಗ, ಇದರಂತೆ ಗಾಯತ್ರಿ, ಋಗ್ವೇದ, ರಥಂತರಸಾಮ, ಅಗ್ನಿಷ್ಟೋಮ ಇವೆಲ್ಲವೂ ಬ್ರಹ್ಮದೇವರ ಮುಖದಿಂದ ಮೊದಲು ಮೂಡಿಬಂದವು. ಯಜುರ್ವೇದ, ತ್ರಿಷ್ಟುಪ್ ಛಂದಸ್ಸು, ಪಂಚ ದಶಸ್ತೋಮ ಬೃಹತ್‌ಸಾಮ ಮತ್ತು ಉಕ್ತಯಾಗ, ಇವು ದಕ್ಷಿಣ ಮುಖದಿಂದ ನಿರ್ಮಾಣಗೊಂಡವು. ಅದರಂತೆ ಸಾಮವೇದ, ಜಗತೀಛಂದಸ್ಸು, ಸಪ್ತದಶಸ್ತೋಮ, ವೈರೂಪ್ಯಸಾಮ, ಇವು ಬ್ರಹ್ಮದೇವರ ಪಶ್ಚಿಮ ಮುಖದಿಂದ ಮೂಡಿಬಂದವು. ಅಥರ್ವವೇದ, ಅನುಷ್ಟುಪ್ ಛಂದಸ್ಸು, ಏಕವಿಂಶಸೋಮ, ವೈರಾಜಸೋಮ ಮತ್ತು ಆಪ್ತೋರ್ಯಾಮಯಾಗ ಮುಂತಾದವುಗಳು ಉತ್ತರ ಮುಖದಿಂದ ಉತ್ಪನ್ನವಾದವು.

ಇದರಂತೆ ಚಿಕ್ಕ ದೊಡ್ಡ ಪ್ರಾಣಿಗಳೆಲ್ಲವೂ ಪರಮಾತ್ಮನ ಅಂಗದಿಂದ ಉದಿಸಿ ಬಂದವು. ಹೀಗೆ ಬ್ರಹ್ಮದೇವರು ಕಲ್ಪಾರಂಭಕಾಲದಲ್ಲಿ ಎಲ್ಲ ಚರಾಚರ ಪ್ರಾಣಿಗಳನ್ನು ಅವರವರ ಕರ್ಮಾನುಸಾರವಾಗಿ ಸೃಷ್ಟಿಸಿದರು. ಹಿಂದಿನ ಕಲ್ಪದಲ್ಲಿ, ತಮ್ಮ ಹಿಂದಿನ ಜನ್ಮಗಳಲ್ಲಿ ಅವು ಮಾಡಿದ ಕರ್ಮಾನುಸಾರವಾಗಿ ಅವುಗಳ ಮುಂದಿನ ಜನ್ಮದ ಪ್ರವೃತ್ತಿ ಫಲ ಪ್ರಯೋಜನಗಳು ಆಗುತ್ತವೆ. ಆದುದರಿಂದಲೇ ಆ ಜೀವಿಗಳಲ್ಲಿ ಕೆಲವು ಕ್ರೂರವಾದರೆ ಹಲವು ಸಾತ್ವಿಕವಾಗಿವೆ. ಕೆಲವರು ಧಾರ್ಮಿಕ, ಹಲವರು ಅಧಾರ್ಮಿಕ. ಅವರವರ ಸಂಸ್ಕಾರಕ್ಕೆ ಅನುಗುಣವಾಗಿ ಅವರವರ ಅಭಿರುಚಿ ಅಭಿನಿವೇಶಗಳು ಇರುತ್ತವೆ. ದೇವತೆಗಳು ಮತ್ತು ಋಷಿಗಳೇ ಮುಂತಾದ ಸಜ್ಜೀವರಾಶಿಗಳ ಹೆಸರು, ಆಕಾರ, ಕಾರ್ಯಕರ್ತವ್ಯಗಳ ರೂಪರೇಷೆಗಳನ್ನು ವೇದದಲ್ಲಿ ಹೇಳಿದಂತೆಯೇ ಬ್ರಹ್ಮ ರಚಿಸಿದ್ದಾನೆ. ಒಂದೊಂದು ಹೊಸ ಋತುವು ಬಂದಾಗ ಇದೇ ಋತುವು ಈ ಮೊದಲು ಬಂದಾಗ ಹೂ ಹಣ್ಣು ಹಸಿರು ಕುಸುರುಗಳು ಋತು ಧರ್ಮಗಳಾಗಿ ಮತ್ತೆ ಮರುಕಳಿಸಿ ಬರುವಂತೆ ಅನಾದಿಯಾದ ಸೃಷ್ಟಿಯ ವ್ಯಾಪಾರದಲ್ಲಿ ಹೊಸ ಸೃಷ್ಟಿಯು ಪ್ರಾರಂಭವಾದಾಗ ಹಿಂದಿನ ಸೃಷ್ಟಿಯ ಎಲ್ಲ ವಿಧಿ ವಿಧಾನಗಳೂ ಮತ್ತೆ ಮರುಕಳಿಸಿ ಮೂಡಿನಿಲ್ಲುವವು.

ಪ್ರತಿಯೊಂದು ಕಲ್ಪದ ಪ್ರಾರಂಭದಲ್ಲಿ ಇದೇ ರೀತಿಯ ಸೃಷ್ಟಿಕ್ರಿಯೆಯು ಮತ್ತೆಮತ್ತೆ ನಡೆದೇ ಇರುತ್ತದೆ. ನವ ನಿರ್ಮಾಣ ನಿಪುಣನಾದ ಸಂಸಾರ ಶಿಲ್ಪಿ ಶ್ರೀಮನ್ನಾರಾಯಣನ ಸರ್ವ ಸಮರ್ಥವಾದ ಸಂಕಲ್ಪ ಶಕ್ತಿಯಿಂದಲೂ ಜೀವರ ಅನಾದಿ ಕರ್ಮದಿಂದಲೂ ಈ ಅನಾದಿಯಾದ ಸಂಸಾರ ಚಕ್ರವು ಉರುಳುತ್ತಿರುತ್ತದೆ.

**ಮೈತ್ರೇಯ** - ಪೂಜ್ಯರೇ, ಬ್ರಹ್ಮದೇವರು ಮಾನವರನ್ನು ಸೃಷ್ಟಿಸಿ ಅವರ ವರ್ಣಾಶ್ರಮ, ಗುಣಧರ್ಮ, ಆಚಾರ ವಿಚಾರಗಳನ್ನು ಹೇಗೆ ನಿರ್ಮಿಸಿ ನಿಯತಗೊಳಿಸಿದರು ಎಂಬುದನ್ನು ನಿರೂಪಿಸಬೇಕು.

## ಮಾನವನ ಆಹಾರ, ವ್ಯವಹಾರ, ನಾಗರೀಕತೆ

**ಪರಾಶರ** - ಮೈತ್ರೇಯ, ಸತ್ಯ ಸಂಕಲ್ಪನಾದ ಸ್ವಾಮಿ ಶ್ರೀ ಹರಿಯ ಇಚ್ಛೆಯಂತೆ ಅವನ ಮುಖ, ವಕ್ಷಸ್ಥಲ, ತೊಡೆ ಮತ್ತು ಕಾಲುಗಳಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಚತುರ್ವರ್ಣದ ನಾಲ್ಕು ಜಾತಿಯ ಜನರು ಹುಟ್ಟಿ ಬಂದರು. ಲೋಕ ಕಲ್ಯಾಣಕಾರಕವಾದ ಯಜ್ಞಕಾರ್ಯದ ನಿರ್ವಾಹಕ್ಕಾಗಿ ಬ್ರಹ್ಮದೇವರು ಈ ವರ್ಣವಿಭಾಗವನ್ನು ಮಾಡಿದ್ದಾರೆ. ಯಜ್ಞಗಳಿಂದ ದೇವತೆಗಳನ್ನು ಸಂತೋಷಪಡಿಸಿದ್ದರೆ ಅದಕ್ಕೆ ಪ್ರತಿಯಾಗಿ ದೇವತೆಗಳೂ ಕೂಡ ಕಾಲ ಕಾಲಕ್ಕೆ ಮಳೆ ಬೆಳೆಗಳನ್ನು ಕೊಟ್ಟು ಜೀವಕೋಟಿಯನ್ನು ಕಾಪಾಡುತ್ತಾರೆ. ಬ್ರಹ್ಮದೇವರು ನಿರ್ಮಿಸಿದ ಈ ನಾಲ್ಕೂ ವರ್ಣದ ಮಾನವರು ಮೊದಲು ಸದಾಚಾರ ಸಂಪನ್ನರಾಗಿ ಶುದ್ಧಾಂತಃಕರಣದಿಂದ ಮನ ಬಂದಲ್ಲಿ ಸುಖದಿಂದ ವಾಸವಾಗಿದ್ದರು. ಅವರಿಂದ ಯಾರಿಗೂ ತೊಂದರೆ ಇರಲಿಲ್ಲ. ಅವರಿಗೂ ಯಾರಿಂದಲೂ ಆತಂಕವೂ ಇರಲಿಲ್ಲ. ನಿರ್ಮಲವಾದ ಅವರ ಮನಸ್ಸಿನಲ್ಲಿ ಪರಮಾತ್ಮನು ನಿರಂತರವೂ ನೆಲೆಸಿದ್ದನು. ತಮ್ಮ ದಿವ್ಯ ಜ್ಞಾನದಿಂದ ಅವರು ವಿಷ್ಣು ಪದವನ್ನು ಕಾಣಲು ಸಮರ್ಥರಾಗಿದ್ದರು. ಆ ಬಳಿಗೆ ಹೀಗೆ ಎಷ್ಟೋ ಕಾಲಖಂಡವು ಉರುಳಿದ ಬಳಿಕ ಕಾಲನಿಯಾಮಕನಾದ ಆ ಭಗವಂತನ ಇಚ್ಛೆಯಂತೆ ಆ ಕಾಲವು ಬದಲಾಯಿತು. ಸ್ವಾರ್ಥ ಆಸೆ ಮತ್ತು ತಾಮಸೀ ವೃತ್ತಿಗಳ ಪರಿಣಾಮವಾಗಿ ಅಧರ್ಮದ ಬೀಜಗಳನ್ನೂ ಎಲ್ಲ ಕಡೆಗೆ ಬಿತ್ತಿದಂತಾಯಿತು. ಅಲ್ಪಾಲ್ಪವಾದ ಪಾಪಗಳೇ ಮಾನವನ ಸ್ವಾರ್ಥ ರಾಗ ದ್ವೇಷಗಳಿಂದ ಬೆಳೆದು ಘೋರ ಪಾತಕಗಳಾಗಿ ಅವರ ಅಧಃಪತನಕ್ಕೆ ಕಾರಣಗಳಾದವು. ಇದರಿಂದ ಮನುಷ್ಯನಿಗೆ ಸ್ವಾಧೀನ ವಾದ ಎಲ್ಲ ವೃದ್ಧಿಸಿದ್ಧಿಗಳು ನಷ್ಟವಾದವು. ಅವರ ಶಕ್ತಿಗಳು ಕ್ಷೀಣವಾಗಿ ಪಾಪದ ಹೊರೆ ಹೆಚ್ಚಾದಾಗ ಪರಸ್ಪರ ಮಾನವ ಮಾನವರಲ್ಲಿ ಘರ್ಷಣೆ, ಸೋಲು, ಗೆಲುವು, ನೋವು, ನರಳಾಟ ಪ್ರಾರಂಭವಾಯಿತು.

ಮಾನವನು ತನ್ನ ಸೋದರ ಮಾನವನಿಂದಲೇ ಹೆದರಿ ಬೆದರಿ ನಿಲ್ಲು ವಂತಾಯಿತು ಮತ್ತು ಮನುಷ್ಯ ಮನುಷ್ಯರಲ್ಲಿಯೇ ಹಿಂಸೆ ಆಕ್ರಮಣವನ್ನು ತಡೆಯುವುದಕ್ಕಾಗಿ ಕೋಟೆ ಕೊತ್ತಳಗಳನ್ನು ಕಟ್ಟಹತ್ತಿದರು. ನಿಸರ್ಗದಿಂದ ನಿರ್ಮಿತವಾದ ಜಲ, ಸ್ಥಲ, ಗುಡ್ಡಗಳನ್ನು ಮನುಷ್ಯನು ತನ್ನ ಸಂರಕ್ಷಣೆಗಾಗಿ ದುರ್ಗ ಕಂದಕಗಳನ್ನಾಗಿ ಮಾಡಿಕೊಂಡನು. ಮಾನವನ

ಸ್ವಾರ್ಥ ವೃದ್ಧಿಯ ಸಂಕೇತವಾಗಿ ವೈಯಕ್ತಿಕ ಒಡೆತನದ ಮನೆಗಳು ರೂಪಗೊಂಡವು. ಚಳಿ, ಮಳೆ, ಬಿಸಿಲು, ಗಾಳಿಗಳ ಬಾಧೆಗಳಿಂದ ಬದುಕಿ ಉಳಿಯುವ ನೆವವನ್ನು ಮುಂದೆ ಮಾಡಿ, ಮನೆ, ಮಾರು, ಕುಲ, ಕುಟುಂಬ ಎಂದು ಮುಂತಾಗಿ ಕೃತ್ರಿಮ ಜೀವನವು ಪ್ರಾರಂಭವಾಯಿತು. ಊರು ಕೇರಿಗಳಲ್ಲಿ ನೆಲೆಸಿದ ಬಳಿಕ ಕಾಡಿನಲ್ಲಿ ಉತ್ತಿ ಬಿತ್ತಿ ಬೆಳೆ ಮಾಡದೇ ದೊರಕುವ ಕಂದ ಮೂಲ ಹಣ್ಣು ಕಾಯಿಗಳು ಸಿಕ್ಕದಂತಾಯಿತು. ಅದಕ್ಕಾಗಿ ಕೃಷಿ, ಕೈಗಾರಿಕೆಗಳನ್ನು ಕೈಗೊಳ್ಳಲೇಬೇಕಾಯಿತು. ಅಕ್ಕಿ, ಗೋಧಿ, ಎಳ್ಳು, ನವಣೆ, ದೇವಧಾನ್ಯ, ಉದ್ದು, ಹೆಸರು, ಅವರೆ, ಹುರುಳಿ, ತೊಗರಿ, ಕೋದ್ರವ, ಕಡಲೆ, ಸಣಬು, ಮಸೂರ ಮುಂತಾಗಿ ಬಗೆಬಗೆಯ ಧಾನ್ಯಗಳನ್ನು ಮಾನವರು ಹೊಲಗಳಲ್ಲಿ ಬೆಳೆಯತೊಡಗಿದರು. ಇವಲ್ಲದೆ ಕಾಡಕ್ಕಿ, ಕಾಡೆಳ್ಳು, ಕಾಡುನವಣೆ, ಗವೇಧಿಕ, ಬಿದಿರಿನ ಅಕ್ಕಿ ಮುಂತಾಗಿ ಅನೇಕ ಕಾಡು ಬೆಳೆಗಳನ್ನೂ ಔಷಧ ವನಸ್ಪತಿಗಳನ್ನೂ ದೂರದ ಅಡವಿಗಳಲ್ಲಿ ಬೆಳೆಯತೊಡಗಿದರು. ಈ ಎಲ್ಲ ಬೆಳೆಗಳು ಸರಿಯಾಗಿ ಬರಬೇಕಾದರೆ ಸಕಾಲಕ್ಕೆ ಮಳೆಯಾಗಬೇಕು. ಈ ಮಳೆಯು ಯಜ್ಞದಿಂದಾಗುವುದು. ಆದರಿಂದ ಪೂರ್ವ ಕಾಲದಲ್ಲಿ ಯೋಗಿಗಳು ಕಾಲೋಚಿತವಾಗಿ ಯಜ್ಞಯಾಗಗಳನ್ನು ಮಾಡುತ್ತಲಿದ್ದರು. ಆದರೆ ಯಾರ ಹೃದಯದಲ್ಲಿ ದುಷ್ಟ ವಿಚಾರದ ಒಂದು ತೊಟ್ಟಾದರೂ ತಟಕಿಕ್ಕಿದೆಯೋ ಅವರಿಗೆ ಮಾತ್ರ ಈ ಯಾಗ ಯೋಗಗಳಲ್ಲಿ ಶ್ರದ್ಧೆ ಮೂಡಲಿಲ್ಲ. ಅವರು ವೇದ ಹಾಗೂ ವೇದೋಕ್ತ ಯಜ್ಞ ಕರ್ಮಗಳನ್ನು ಹಳಿದರು. ಧರ್ಮ ಕರ್ಮ ಹಾಗೂ ಯಜ್ಞಯಾಗಾದಿ ಪುಣ್ಯಕಾರ್ಯಗಳಿಗೆ ವಿಘ್ನ ವಿರೋಧಗಳನ್ನು ತಂದೊಡ್ಡುವ ಇಂಥ ದುರಾತ್ಮರಿಂದಲೇ ಪ್ರಪಂಚದ ಪ್ರಗತಿಯು ಆಗಾಗ ಕುಂಠಿತವಾಗುತ್ತದೆ.

ಹೀಗೆ ಪ್ರಜಾ ಸೃಷ್ಟಿ ಹಾಗೂ ಪ್ರಜಾವೃದ್ಧಿ ಆದ ಬಳಿಕ ಅವರ ಉಪಜೀವನದ ಮಾರ್ಗವೂ ವ್ಯವಸ್ಥಿತವಾದಂತಾಯಿತು. ಬ್ರಹ್ಮದೇವರು ಆ ಮನುಷ್ಯರ ಯೋಗ್ಯತಾನುಸಾರವಾಗಿ ಧರ್ಮ ವ್ಯವಸ್ಥೆಯನ್ನು ಮಾಡಿದರು. ಧರ್ಮ ಸಂರಕ್ಷಕನಾದ ಶ್ರೀಹರಿಯು ಸ್ವಧರ್ಮ ಮತ್ತು ಸ್ವಕರ್ಮಗಳ ಆಚಾರಾನುಷ್ಠಾನವನ್ನು ಪಾಲನ ಮಾಡುವ ಎಲ್ಲ ವರ್ಣದವರಿಗೂ ಪುಣ್ಯಲೋಕ ಪ್ರಾಪ್ತವಾಗುವಂತೆ ನಿಯಮಮಾಡಿದನು. ಕರ್ಮಠರಾದ ಬ್ರಾಹ್ಮಣರಿಗೆ ಪ್ರಾಜಾಪತ್ಯಲೋಕ, ರಣಾಂಗಣದಲ್ಲಿ ವೈರಿಗಳಿಗೆ ಬೆನ್ನು ತೋರಿಸದೆ ಧಾರಾತೀರ್ಥದಲ್ಲಿ ದೇಹವಿಟ್ಟ ಕ್ಷತ್ರಿಯರಿಗೆ ಸ್ವರ್ಗಲೋಕ, ಸ್ವಧರ್ಮಾಸಕ್ತರಾದ ವೈಶ್ಯರಿಗೆ ಮರುಲ್ಲೋಕ, ಸೇವಾಧರ್ಮವನ್ನು ಆಚರಿಸುವ ಶೂದ್ರರಿಗೆ ಗಂಧರ್ವ ಲೋಕವು ಪ್ರಾಪ್ತವಾಗುತ್ತದೆ. ನಿರಂತರ ಪರಮಾತ್ಮನ ಚಿಂತನವನ್ನು ಮಾಡುವ ಧ್ಯಾನ ಯೋಗಿಗಳು ಶ್ರೀ ಹರಿಯ ಪದವಿ ಯನ್ನು ಹೊಂದುತ್ತಾರೆ.

ನೈಷ್ಠಿಕ ಬ್ರಹ್ಮಚಾರಿಗಳು, ಸೂರ್ಯಮಂಡಲದ ಉತ್ತರಾಂಶದಲ್ಲಿ ನಿಂತು ಊರ್ಧ್ವರೇತಸ್ಕರಾಗಿ ಯಾವಜ್ಜೀವ ತಪಸ್ಸು ಮಾಡುತ್ತಿರುವ ಎಂಬತ್ತೆಂಟುಸಾವಿರ ತಪಸ್ವೀ ಸನ್ಯಾಸಿಗಳು ಪಡೆಯುವ ಲೋಕವನ್ನು ಹೊಂದುತ್ತಾರೆ. ವಾನಪ್ರಸ್ಥಾಶ್ರಮಿಗಳು ಸಪ್ತಋಷಿಗಳ ಲೋಕವನ್ನು ಹೊಂದುತ್ತಾರೆ. ಗೃಹಸ್ಥಾಶ್ರಮಿಗಳಿಗೆ ಪ್ರಾಜಾಪತ್ಯ ಲೋಕವು ಮೀಸಲಾಗಿದೆ. ಸನ್ಯಾಸಿಗಳಿಗಂತೂ ಬ್ರಹ್ಮಲೋಕದ ಬಾಗಿಲು ತೆರೆದಿದೆ. ಇದಲ್ಲದೇ

ಸ್ವಧರ್ಮನಿಷ್ಠರಾದ ಎಲ್ಲ ಯೋಗಿಗಳಿಗೂ ವೈಕುಂಠ ಲೋಕದಲ್ಲಿ ಮುಕ್ತದ್ವಾರವಿದೆ. ಚಂದ್ರ ಸೂರ್ಯ ಮುಂತಾಗಿ ಗ್ರಹಗಳೆಲ್ಲವೂ ಹೋಗಿ ಹೋಗಿ ಮತ್ತೆ ಮರಳಿ ಬರುತ್ತವೆ. ಆದರೆ ವಾಸುದೇವನ ದ್ವಾದಶಾಕ್ಷರ ಮಂತ್ರ ಜಪಿಸುವ ಯೋಗಿಗಳಲ್ಲಿ ಒಬ್ಬನೂ ಈವರೆಗೂ ಮರಳಿ ಬಂದಿಲ್ಲ. ಪುಣ್ಯಲಬ್ಧವಾದ ಆ ದಿವ್ಯಲೋಕಗಳು ಶಾಶ್ವತ ಸತ್ಯಗಳಾಗಿವೆ. ಆದರೆ ವೇದಗಳನ್ನು ನಿಂದಿಸುವ, ಯಜ್ಞ ಮುಂತಾದ ಪುಣ್ಯಕಾರ್ಯಗಳಿಗೆ ಅಡ್ಡಿ ಆತಂಕಗಳನ್ನು ಒಡ್ಡುವ ಪಾಪಾತ್ಮರಿಗೆ ಮಾತ್ರ ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಅಸಿಪತ್ರವನ, ಭೀಕರವಾದ ಕಾಲ ಸೂತ್ರ ಮುಂತಾದ ಅನೇಕ ಘೋರ ಸ್ಥಾನಗಳು ಕಾದಿರುತ್ತವೆ. ಹೀಗೆ ಪರಮಾತ್ಮನು ಸ್ಥಾವರ ಜಂಗಮಾತ್ಮಕವಾದ ಪ್ರಾಣಿಗಳನ್ನೇನೋ ಸೃಷ್ಟಿಮಾಡಿದನು. ಆದರೆ ಅವನಿಂದ ಸೃಷ್ಟವಾದ ಪ್ರಾಣಿಗಳೆಲ್ಲವೂ ಅಂತ್ಯಾವಯವೀ - ಅಂದರೆ ತಮ್ಮ ತಲೆಗೆ ತಾನೇ ಕೊನೆಯಾಗಿಬಿಟ್ಟವು. ಅವುಗಳಿಂದ ಬೇರೆ ಸಂತತಿಯ ಉತ್ಪಾದನೆಯು ಆಗಲಿಲ್ಲ. ಆಗ ಬ್ರಹ್ಮರೂಪಿ ಪರಮಾತ್ಮನು ಸಂತಾನಾಭಿವೃದ್ಧಿಗಾಗಿ ತನಗೆ ಅನುರೂಪರಾದ ಒಂಭತ್ತು ಜನ ಮಹರ್ಷಿಗಳನ್ನು ತನ್ನ ಮಾನಸ ಪುತ್ರರನ್ನಾಗಿ ಹುಟ್ಟಿಸಿದನು. ಭೃಗು, ಪುಲಸ್ತ್ಯ, ಪುಲಹ, ಕೃತು, ಅಂಗೀರಸ್, ಮರೀಚಿ, ದಕ್ಷ, ಅತ್ರಿ ಹಾಗೂ ವಶಿಷ್ಠ ಈ ಒಂಭತ್ತು ಬ್ರಹ್ಮಮಾನಸ ಪುತ್ರರು ''ನವಬ್ರಹ್ಮ'' ರೆಂದೇ ಪುರಾಣಗಳಲ್ಲಿ ಪ್ರಖ್ಯಾತರಾಗಿದ್ದಾರೆ. ಈ ಒಂಭತ್ತು ಜನ ಮಹಾಮಹಿರ್ಷಿಗಳಿಗೆ ಬ್ರಹ್ಮದೇವರು ಖ್ಯಾತಿ, ಪ್ರೀತಿ, ಕ್ಷಮಾ, ಸನ್ನತಿ, ಭೂತಿ, ಸಂಭೂತಿ, ಪ್ರಸೂತಿ, ಅನಸೂಯಾ, ಊರ್ಜಾ, ಎಂದು ಒಂಬತ್ತು ಮಾನಸ ಕನ್ಯೆಯರನ್ನು ಪಡೆದು ''ಇವರನ್ನು ಮದುವೆಯಾಗಿರಿ'' ಎಂದು ಹೇಳಿ ಅವರಿಗೆ ಒಪ್ಪಿಸಿದರು.

ಇದಕ್ಕೂ ಮೊದಲು ಬ್ರಹ್ಮದೇವರು ಸನಕ, ಸನಂದನ, ಸನಾತನ, ಸನತ್ಕುಮಾರ ಮುಂತಾದ ಪರಮಹಂಸರನ್ನು ಹುಟ್ಟಿಸಿದ್ದರು. ಆದರೆ ನಿಷ್ಕಾಮರಾದ ಅವರಿಗೆ ಈ ಪ್ರಪಂಚದಲ್ಲಿ ಆಸಕ್ತಿಯೇ ಇರಲಿಲ್ಲ. ರಾಗ ರಹಿತರಾದ ಆ ಮಹಾ ಯೋಗಿಗಳು ಲೋಕ ಸೃಷ್ಟಿಯಿಂದ ವಿಮುಖರಾದದ್ದನ್ನು ಕಂಡು ಬ್ರಹ್ಮದೇವರಿಗೆ ಬಹಳ ಕೋಪ ಬಂದಿತು. ಅವರ ಹುಬ್ಬು ಗಂಟಿಕ್ಕಿತು. ಮೂರು ಲೋಕಗಳನ್ನು ಸುಡುವ ಕೋಪಾಟೋಪದಿಂದ ಉದ್ದೀಪಿತವಾದ ಅವರ ಹಣೆಯಿಂದ ಮಧ್ಯಾನ್ಹದ ಚಂಡ ಮರೀಚಿಯಂತೆ ಉಗ್ರ ಶರೀರವುಳ್ಳ ''ರುದ್ರ'' ಎಂಬ ಒಬ್ಬ ಮಗನು ಹುಟ್ಟಿದನು. ಆ ರುದ್ರನ ಶರೀರವು ಅರ್ಧಗಂಡು, ಅರ್ಧ ಹೆಣ್ಣು ಸೇರಿ ಅರ್ಧನಾರೀನರಾತ್ಮಕವಾಗಿತ್ತು. ಅದನ್ನು ಕಂಡು ಬ್ರಹ್ಮದೇವನು ಅವನಿಗೆ ''ನಿನ್ನನ್ನು ನೀನೇ ಇಬ್ಭಾಗವಾಗಿ ಮಾಡಿಕೋ'' ಎಂದು ಹೇಳಿ ಅದೃಶ್ಯನಾದನು. ಆಗ ಆ ಶಿವನು ತನ್ನನ್ನು ಎರಡು ಬಗೆಯಾಗಿ ವಿಭಾಗಿಸಿಕೊಂಡು ಒಂದು ರೂಪದಿಂದ ಗಂಡು ಒಂದು ರೂಪದಿಂದ ಹೆಣ್ಣು ಆದನು. ಮತ್ತೆ ಹನ್ನೊಂದು ರೂಪಗಳನ್ನು ತಾಳಿ ಏಕಾದಶ ರುದ್ರರೂಪವುಳ್ಳವನಾದನು. ಅವುಗಳಲ್ಲಿ ಹಲವು ಶಾಂತರೂಪವಾದರೆ ಕೆಲವು ರುದ್ರರೂಪಗಳೂ ಉಂಟು. ರುದ್ರನ ಸ್ತ್ರೀ ರೂಪಗಳು ಹನ್ನೊಂದು. ಅವುಗಳಲ್ಲಿ ಕೆಲವು ಬಿಳಿ ಬಣ್ಣದಿಂದ ಒಪ್ಪಿದರೆ ಇನ್ನುಳಿದವು ಕಪ್ಪುರೂಪದಿಂದ ಕಂಗೊಳಿಸಿದವು.

## ಸ್ವಾಯಂಭುವ ಮನುವಿನ ಸಂಸಾರ

ಅನಂತರ ಬ್ರಹ್ಮದೇವರು ಸ್ವಾಯಂಭುವ ಮನುವಿಗೆ ಪ್ರಜಾಪತಿ ಸ್ಥಾನವನ್ನು ಕೊಟ್ಟು ಪ್ರಜೆಗಳನ್ನು ಶಾಸನಗೈಯಬೇಕೆಂದು ನಿಯಮಿಸಿದನು. ಸ್ವಾಯಂಭುವ ಮನುವು ತಪಃ ಪೂತಳಾದ ಶತರೂಪಾದೇವಿಯನ್ನು ಪತ್ನಿಯೆಂದು ಪರಿಗ್ರಹಿಸಿದನು. ಪ್ರಪಂಚದ ಆ ಆದಿಮ ದಂಪತಿಗಳಿಗೆ ಪ್ರಿಯವ್ರತ ಉತ್ತಾನಪಾದ ಎಂಬ ಇಬ್ಬರು ಪುತ್ರರೂ ಪ್ರಸೂತಿ ಆಕೂತಿ ಎಂಬ ಇಬ್ಬರು ಕನ್ಯೆಯರೂ ಜನಿಸಿದರು. ಪ್ರಸೂತಿಯನ್ನು ದಕ್ಷಪ್ರಜಾಪತಿಗೂ ಆಕೂತಿಯನ್ನು ಋಚಿ ಋಷಿಗೂ ಮದುವೆ ಮಾಡಿಕೊಟ್ಟನು. ಈ ಆಕೂತಿ ಋಚಿಗಳಿಗೆ ದಕ್ಷಿಣಾ ಎಂಬ ಮಗಳೂ, ಯಜ್ಞ ಎಂಬ ಮಗನೂ ಜನಿಸಿ ಅವರಿಬ್ಬರೂ ಅಣ್ಣ ತಂಗಿಯರು ಪರಸ್ಪರ ಮದುವೆಯಾಗಿ ದಂಪತಿಗಳಾದರು. ಈ ಸಹೋದರ ದಂಪತಿಗಳಿಂದ ಹುಟ್ಟಿದ ಹನ್ನೆರಡು ಜನ ಮಕ್ಕಳೇ ಸ್ವಾಯಂಭುವ ಮನ್ವಂತರನಲ್ಲಿ ''ಯಾಮ'' ಎಂಬ ಹೆಸರಿನ ದೇವತೆಗಳಾದರು. ದಕ್ಷ ಪ್ರಜಾಪತಿಯು ತನ್ನ ಹೆಂಡತಿಯಾದ ಪ್ರಸೂತಿದೇವಿಯಲ್ಲಿ ಇಪ್ಪತ್ತನಾಲ್ಕು ಕನ್ಯಾಮಣಿಗಳನ್ನು ಪಡೆದನು. ಆ ಚತುರ್ವಿಂಶತಿ ಚೆಲುವೆಯರ ಹೆಸರುಗಳನ್ನು ಕೇಳು. ಶ್ರದ್ಧೆ, ಲಕ್ಷ್ಮೀ, ಧೃತಿ, ತುಷ್ಟಿ, ಮೇಧಾ, ಕ್ರಿಯೆ, ಬುದ್ಧಿ, ಲಜ್ಜೆ, ವಪು, ಶಾಂತಿ, ಸಿದ್ಧಿ, ಕೀರ್ತಿ, ಖ್ಯಾತಿ, ಸತಿ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸನ್ನತಿ, ಅನುಸೂಯಾ, ಊರ್ಜಾ, ಸ್ವಾಹಾ ಮತ್ತು ಸ್ವಧಾ. ಇವರಲ್ಲಿ ಮೊದಲಿನ ಹದಿಮೂರು ಜನರನ್ನು ದಕ್ಷನು ಧರ್ಮ ದೇವನಿಗೆ ಧಾರೆಯೆರೆದು ಕೊಟ್ಟನು. ಹದಿನಾಲ್ಕನೇಯವಳಾದ ಖ್ಯಾತಿದೇವಿಯನ್ನು ಭೃಗು ಋಷಿಗೂ, ಸತೀದೇವಿಯನ್ನು ಮಹಾದೇವರಿಗೂ, ಸಂಭೂತಿಯನ್ನು ಮರೀಚಿಮುನಿಗೂ, ಸ್ಮೃತಿಯನ್ನು ಆಂಗಿರಸ್ಸನಿಗೂ, ಪ್ರೀತಿಯನ್ನು ಪುಲಸ್ತ್ಯನಿಗೂ, ಕ್ಷಮಾದೇವಿಯನ್ನು ಪುಲಹ ಋಷಿಗೂ, ಸನ್ನತಿಯನ್ನು ಕ್ರತುಮುನಿಗೂ, ಅನುಸೂಯೆಯನ್ನು ಅತ್ರಿಮುನಿಗೂ, ಊರ್ಜಾಳನ್ನೂ ವಶಿಷ್ಠರಿಗೂ, ಸ್ವಾಹಾದೇವಿಯನ್ನು ಮತ್ತು ಸ್ವಧಾಳನ್ನು ಪಿತೃಗಳಿಗೂ, ಕೊಟ್ಟು ಮದುವೆ ಮಾಡಿದನು.

ಈ ಇಪ್ಪತ್ತುನಾಲ್ಕು ಜನ ದಾಕ್ಷಾಯಣೀ, ಕನ್ನೆಗಳಲ್ಲಿ ಹಿರಿಯಳಾದ ಶ್ರದ್ಧಾ ದೇವಿಯಿಂದ ಕಾಮನೂ, ಲಕ್ಷ್ಮೀಯಿಂದ ದರ್ಪವೂ, ಧೃತಿಯಿಂದ ನಿಯತಿಯೂ ತುಷ್ಟಿಯಿಂದ ಸಂತೋಷವೂ, ಪುಷ್ಟಿಯಿಂದ ಲೋಭವೂ ಹುಟ್ಟಿದವು. ದಕ್ಷ ಕುಮಾರಿಯಾದ ಮೇಧಾಳಿಗೆ ಶ್ರುತ ಎಂಬ ಮಗನು ಹುಟ್ಟಿದನು. ಕ್ರಿಯೆಯಿಂದ ದಂಡ, ದಮ ಮತ್ತು ನಯ ಎಂಬ ಮೂರು ಮಕ್ಕಳು ಉತ್ಪನ್ನರಾದರು. ಅದರಂತೆ ಬುದ್ಧಿಯಿಂದ ಬೋಧನೂ, ಲಜ್ಜೆಯಿಂದ ವಿನಯನೂ, ವಪುವಿನ ಪುತ್ರನಾಗಿ ವ್ಯವಸಾಯನೂ, ಶಾಂತಿಯಿಂದ ಕ್ಷೇಮನೂ, ಸಿದ್ಧಿಯಿಂದ ಸುಖನೂ, ಕೀರ್ತಿಯಿಂದ ಋತನೂ, ಸಂತಾನವಾಗಿ ಜನಿಸಿದರು. ಇವರೆಲ್ಲರೂ ಧರ್ಮಸೇನನ ಮಕ್ಕಳಾಗಿದ್ದರು. ಕಾಮನಿಂದ ರತಿದೇವಿಯಲ್ಲಿ ಧರ್ಮದೇವನ ಮೊಮ್ಮಗನಾಗಿ ಹರ್ಷನು ಹುಟ್ಟಿದನು.

ಅಧರ್ಮಕ್ಕೆ ಹಿಂಸೆಯೆಂಬ ಹೆಂಡತಿಯಿಂದ ಅನೃತ ಮತ್ತು ನಿಕೃತಿ ಎಂಬ ಮಕ್ಕಳು ಜನಿಸಿದರು. ಅನೃತವೆಂದರೆ ಸುಳ್ಳು, ನಿಕೃತಿಯೆಂದರೆ ಮೋಸ, ಕಪಟ. ಅಧರ್ಮ

ಕುಮಾರರಾದ ಅನೃತ ಮತ್ತು ನಿಕೃತಿಯರಿಗೆ ಭಯ ಮತ್ತು ನರಕ ಎಂಬ ಗಂಡು ಮಕ್ಕಳೂ ಮಾಯಾ, ವೇದನಾ ಎಂಬ ಹೆಣ್ಣು ಮಕ್ಕಳೂ ಜನಿಸಿದರು. ಮಾಯೆಯು ತನ್ನ ಅಣ್ಣನಾದ ಭಯನನ್ನೇ ಗಂಡನನ್ನಾಗಿ ಮಾಡಿಕೊಂಡಳು. ವೇದನೆಯು ನರಕನ ಕೈಹಿಡಿದಳು. ಮಾಯೆಯು ಭಯನಿಂದ ಮೃತ್ಯುವನ್ನೆ ಪುತ್ರನನ್ನಾಗಿ ಪಡೆದಳು. ನರಕನಿಂದ ವೇದನೆಗೆ ದುಃಖ ಎಂಬ ಸಂತಾನವಾಯಿತು. ಆ ಮೃತ್ಯುವಿಗೆ ಚಿಂತೆ, ಮುಪ್ಪು, ದುಃಖ, ಆಸೆ, ಕೋಪ ಎಂಬ ಪಂಚ ಪುತ್ರರಾದರು. ಜನಜಂಗುಳಿಯಲ್ಲಿ ದುಃಖದ ಬೀಜಗಳನ್ನು ಬಿತ್ತುವ ಇವರು ಊರ್ಧ್ವ ರೇತಸ್ಕರಾದ ಚಿರಂತನ ಬ್ರಹ್ಮಚಾರಿಗಳು. ಇವೆಲ್ಲವೂ ನಾರಾಯಣನ ರುದ್ರರೂಪಗಳಾಗಿದ್ದು ವಿಶ್ವಸಂಹಾರಕ್ಕೆ ಅವು ಕಾರಣವಾಗಿರುತ್ತವೆ.

ಮೈತ್ರೇಯ - ಗುರುಗಳೇ, ನಿತ್ಯವಾದ ಈ ಸೃಷ್ಟಿ, ಸ್ಥಿತಿ, ಸಂಹಾರಗಳ ಸ್ವರೂಪವನ್ನು ನನಗೆ ಅರುಹಬೇಕು.

## ಸೃಷ್ಟಿ ಸಂಹಾರ ಪ್ರಕ್ರಿಯೆ

ಪರಾಶರ - ಅಚಿಂತ್ಯಾದ್ಭುತ ಮಹಿಮೆಯುಳ್ಳ ಆ ಪರಮಾತ್ಮನು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಬೇರೆ ಬೇರೆ ರೂಪಗಳಿಂದ ನಿರಂತರ ಮಾಡುತ್ತಲೇ ಇರುತ್ತಾನೆ. ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ, ನಿತ್ಯ ಎಂದು ಪ್ರಳಯವು ನಾಲ್ಕು ವಿಧವಾಗಿದೆ. ಜಗದೊಡೆಯನಾದ ಪರಮಾತ್ಮನು ತನ್ನ ಶೇಷರೂಪವಾದ ಹಾವಿನ ಹಾಸಿಗೆಯ ಮೇಲೆ ಪವಡಿಸಿದಾಗ ಸಂಭವಿಸುವ ನಾರಾಯಣನ ನಿದ್ರಾನಿಮಿತ್ತಕವಾದ ಪ್ರಳಯವು ನೈಮಿತ್ತಿಕ ಪ್ರಳಯ. ಬ್ರಹ್ಮಾಂಡದ ಏಕೃತಿಗೆಳೆಲ್ಲವೂ ಮೂಲ ಪ್ರಕೃತಿಯಲ್ಲಿ ಲೀನವಾದಾಗ ನಡೆಯುವ ಪ್ರಳಯವು ಪ್ರಾಕೃತ ಪ್ರಳಯ. ಯೋಗಿಗಳು ತಮ್ಮ ಜ್ಞಾನ ಯೋಗದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಅವನ ಅನುಗ್ರಹದಿಂದ ಅವನಲ್ಲಿ ಲೀನವಾಗುವುದು ಆತ್ಯಂತಿಕ ಪ್ರಳಯ. ಹುಟ್ಟಿದ ಪ್ರಾಣಿಗಳಿಗೆಲ್ಲ ಹಗಲಿರುಳು ನಡೆಯುವ ನಾಶವು ನಿತ್ಯ ಪ್ರಳಯ. ಇದರಂತೆ ಸೃಷ್ಟಿಯ ಪ್ರಾರಂಭಕಾಲದಲ್ಲಿ ಪ್ರಕೃತಿಯಿಂದ ಮಹತ್ತತ್ವ ಮೊದಲಾದ ತತ್ವಗಳ ಸೃಷ್ಟಿಯು ಪ್ರಾಕೃತ ಸೃಷ್ಟಿ. ಅವಾಂತರ ಪ್ರಳಯವಾದ ಬಳಿಕ ಬ್ರಹ್ಮದೇವರ ದಿವಸಾವಕಾಶಕಾಲದಲ್ಲಿ ನಡೆಯುವ ಸೃಷ್ಟಿಯು ನೈಮಿತ್ತಿಕ ಸೃಷ್ಟಿಯು. ಹೀಗೆ ಎಲ್ಲರ ದೇಹಗಳಲ್ಲಿ ಅಂತರ್ಯಾಮಿಯಾದ ಮಹಾವಿಷ್ಣುವು ಎಲ್ಲ ಕಡೆಗೂ ನಡೆಯುವ ಹುಟ್ಟು ಸಾವು, ಬಾಳು, ಬದುಕುಗಳಿಗೆಲ್ಲ ತಾನೊಬ್ಬನೇ ನಿಯಂತಾರನಾಗಿ ವಿಶ್ವದ ಎಲ್ಲ ಜೀವಜಾತದ ಜನನಮರಣ ಜಾಲದ ಪಟಪರಿವರ್ತನೆಯನ್ನು ಮಾಡುತ್ತಲಿರುತ್ತಾನೆ.

ಪರಾಶರ - ಮಹಾ ಮುನಿಯೇ, ಬ್ರಹ್ಮದೇವರಿಂದ ರುದ್ರದೇವರ ತಾಮಸ ಸೃಷ್ಟಿಯು ಪ್ರವರ್ತಿತವಾದುದನ್ನು ನಾನು ನಿನಗೆ ಈ ಮೊದಲೇ ತಿಳಿಸಿದ್ದೇನೆ. ಈಗ ಆ ರುದ್ರ ಸೃಷ್ಟಿಯು ಮುಂದುವರಿದ ಬಗೆಯನ್ನು ಕೇಳು. ಕಲ್ಪಾದಿಯಲ್ಲಿ ತನಗೆ ಅನುಗುಣನಾದ ಮಗನೊಬ್ಬನನ್ನು ಪಡೆಯಬೇಕೆಂದು ಬ್ರಹ್ಮದೇವರು

ಚಿಂತಿಸುತ್ತಿರುವಾಗ ಅವರ ತೊಡೆಯಿಂದ ತಿಳಿನೀಲಿ ಮಿಶ್ರಿತ ಕೆಂಬಣ್ಣ ಕುಮಾರನೊಬ್ಬನು ತೊಡೆಯಿಂದ ಪೊರಮಟ್ಟನು. ಹುಟ್ಟಿದ ಕೂಡಲೇ ಆ ನೀಲ ಲೋಹಿತನು ಅಳುತ್ತ ಓಡ ತೊಡಗಲು ಬ್ರಹ್ಮದೇವರು ಅವನಿಗೆ ''ನೀನು ಏಕೆ ಅಳುತ್ತೀ?'' ಎಂದು ಕೇಳಿದರು. ಅದಕ್ಕೆ ಆ ಬ್ರಹ್ಮಪುತ್ರನು ''ನನಗೆ ಏನಾದರೂ ಹೆಸರನ್ನು ಕೊಡು'' ಎಂದು ಬಿನ್ನವಿಸಿದನು. ಆಗ ಬ್ರಹ್ಮದೇವರು ಈ ವಿಚಿತ್ರ ಪುತ್ರನನ್ನು ಸಂತೈಸುತ್ತ ''ರೋದನವನ್ನು ಮಾಡಿದ ನಿನಗೆ ರುದ್ರ ಎಂದು ಹೆಸರಾಗಲಿ. ಇನ್ನು ನೀನು ಅಳುವುದು ಸಾಕು. ಧೈರ್ಯವನ್ನು ಹೊಂದು'' ಎಂದು ಹೇಳಿದರು. ಅನಂತರ ಆ ರುದ್ರನು ಮತ್ತೆ ಏಳು ಬಾರಿ ಅತ್ತದ್ದರಿಂದ ಬ್ರಹ್ಮದೇವರು ಭವ, ಶರ್ವ, ಮಹೇಶಾನ, ಪಶುಪತಿ, ಭೀಮ, ಉಗ್ರ ಮತ್ತು ಮಹಾದೇವ ಎಂದು ಏಳು ಬೇರೆ ಬೇರೆ ಹೆಸರುಗಳನ್ನು ಕೊಟ್ಟರು. ಮಹಾದೇವರ ಈ ಏಳು ರೂಪ ಮತ್ತು ಎಂಟನೆಯ ರುದ್ರ ರೂಪಕ್ಕೂ ಬ್ರಹ್ಮದೇವರು. ಸೂರ್ಯ, ನೀರು, ನೆಲ, ಅಗ್ನಿ, ವಾಯು, ಆಕಾಶ, ಯಜ್ಞದಲ್ಲಿ ದೀಕ್ಷೆಗೊಂಡ ಬ್ರಾಹ್ಮಣ ಮತ್ತು ಚಂದ್ರ ಇವು ಎಂಟು ಶರೀರ ಸ್ಥಾನಗಳನ್ನಾಗಿ ದಯಪಾಲಿಸಿದರು ಮತ್ತು ಈ ಅಷ್ಟರುದ್ರರಿಗೆ ಸುವರ್ಚಲಾ, ಉಷಾ, ಸುಕೇಶೀ, ಶಿವಾ, ಸ್ವಾಹಾ, ಧೃತಿ, ದೀಕ್ಷಾ ಮತ್ತು ರೋಹಿಣಿ ಇವರು ಎಂಟು ಜನರು ಮಡದಿಯರಾಗುವಂತೆ ಮಾಡಿದರು. ರುದ್ರದೇವರ ಶರೀರ ಸ್ಥಾನರಾದ ಆ ಅಷ್ಟ ಮೂರ್ತಿಗಳಿಂದ ಈ ಅಷ್ಟ ಮಹಿಷಿಯರು ಶನಿ, ಶುಕ್ರ, ಮಂಗಳ, ಮನೋಜವ, ಸ್ಕಂದ, ಸ್ವರ್ಗ, ಸಂತಾನ ಮತ್ತು ಬುಧ ಎಂದು ಎಂಟು ಮಕ್ಕಳನ್ನು ಪಡೆದರು. ರುದ್ರದೇವರ ಈ ಪುತ್ರ ಪೌತ್ರ ಸಂತಾನದಿಂದ ಈ ಜಗತ್ತೇ ತುಂಬಿಹೋಗಿದೆ. ಈ ತೆರನಾದ ಮಹಾಪ್ರಭಾವ ಸಂಪನ್ನರಾದ ಮಹಾರುದ್ರದೇವರು ದಕ್ಷಪ್ರಜಾಪತಿಯ ಮಗಳಾದ ಸತಿದೇವಿಯನ್ನು ತಮ್ಮ ಧರ್ಮಪತ್ನಿಯೆಂದು ಕೈಹಿಡಿದಿದ್ದರು. ಆದರೆ ಸತೀ ಶಿರೋಮಣಿಯಾದ ಆ ಸತೀದೇವಿಯು ಶಿವನಿಂದಕನಾದ ತಂದೆ ದಕ್ಷನ ಮೇಲಿನ ಕೋಪದಿಂದ ತದುಪಜ್ಞವಾದ ತನ್ನ ಶರೀರವನ್ನೇ ಬಿಟ್ಟುಬಿಟ್ಟಳು.

ಅನಂತರ ಮೇನಾದೇವಿಯಲ್ಲಿ ಹಿಮಾಲಯ ಪರ್ವತದ ಮಗಳಾಗಿ ಜನಿಸಿ ತನ್ನ ತಪಃ ಪ್ರಭಾವದಿಂದ ಮತ್ತೆ ಅದೇ ಮಹಾದೇವನನ್ನು ಮದುವೆಯಾದಳು. ಈ ಸತೀ ದೇವಿಯ ಜ್ಯೇಷ್ಠ ಸೋದರಿಯಾದ ಖ್ಯಾತಿದೇವಿಗೆ ಭೃಗು ಋಷಿಗಳಿಂದ ಧಾತಾ ವಿಧಾತಾ ಎಂಬ ಇಬ್ಬರು ತನಯರು ಉತ್ಪನ್ನರಾದರು. ದೇವ ದೇವೋತ್ತಮನಾದ ಶ್ರೀಮನ್ನಾರಾಯಣನ ಕಾಂತಾಮಣಿಯಾದ ಆ ಕಮಲಾದೇವಿಯೂ ಕೂಡ ಭೃಗುಪತ್ನಿಯಾದ ಖ್ಯಾತಿಯ ಕುವರಿಯೇ ಆಗಿದ್ದಳು. ಈ ಮಾತನ್ನು ಕೇಳಿ ಮೈತ್ರೇಯರು ''ದೇವದಾನವರು ಅಮೃತಕ್ಕಾಗಿ ಕ್ಷೀರ ಸಮುದ್ರವನ್ನು ಕಡೆಯುವಾಗ ಲಕ್ಷ್ಮಿಯು ಹುಟ್ಟಿದಳು'' ಎಂದು ನೀವು ಹೇಳಿದಿರಿ, ಮತ್ತು ಅದೇ ಲಕ್ಷ್ಮೀದೇವಿಯು ಭೃಗು ಋಷಿಯಿಂದ ಖ್ಯಾತೀ ದೇವಿಯಲ್ಲಿ ಜನಿಸಿದಳೆಂದೂ ಹೇಳುತ್ತಿದ್ದೀರಿ. ಇದರಲ್ಲಿ ಯಾವುದು ನಿಜ'' ಎಂದು ಕೇಳಿದರು. ಆಗ ಪರಾಶರ ಮಹರ್ಷಿಗಳು ಮೈತ್ರೇಯರಿಗೆ ಶ್ರೀ ತತ್ವದ ರಹಸ್ಯವನ್ನು ತಿಳಿಸಿ ಹೇಳುತ್ತ ಇಂತು ನುಡಿದರು. ''ಶ್ರೀ ವಿಷ್ಣುವು ತನ್ನ ನಿತ್ಯ ಸತ್ಯ ಸ್ವರೂಪದಿಂದ ಸರ್ವತ್ರ ವ್ಯಾಪ್ತನಾದಂತೆ ಜಗಜ್ಜನನಿಯಾದ ಈ ಶ್ರೀದೇವಿಯೂ

ಸರ್ವತ್ರ ವ್ಯಾಪ್ತಳೂ ನಿತ್ಯಳೂ ಆಗಿದ್ದಾಳೆ. ವಿಷ್ಣು ಮತ್ತು ಲಕ್ಷ್ಮೀದೇವಿಯರ ಸಂಬಂಧವು ನಿತ್ಯ ಸಂಬಂಧವಾಗಿದೆ. ಅವಳು ವಾಣಿಯಾದರೆ ವಿಷ್ಣುವು ಅದರ ಅರ್ಥವಾಗಿದ್ದಾನೆ. ವಿಷ್ಣುವು ನ್ಯಾಯವಾಗಿದ್ದರೆ, ಅವಳು ನೀತಿಯಾಗಿದ್ದಾಳೆ. ವಿಷ್ಣುವು ಬೋಧ ರೂಪನಾಗಿದ್ದರೆ ಲಕ್ಷ್ಮಿಯು ಬುದ್ಧಿ ರೂಪಿಣಿಯಾಗಿದ್ದಾಳೆ. ಅವನು ಧರ್ಮ ಇವಳು ಸತ್ಕ್ರಿಯೆ, ಅವನು ಭೂಧರ ಇವಳು ಭೂ, ಅವನು ಯಜ್ಞ, ಇವಳು ದಕ್ಷಿಣೆ, ಅವನು ಅಗ್ನಿ ಇವಳು ಸ್ವಾಹಾ, ಅವನು ಶಂಕರ ಇವಳು ಗೌರಿ, ಅವನು ಸೂರ್ಯ ಇವಳು ಕಾಂತಿ, ಅವನು ಇಂದ್ರ ಇವಳು ಶಚಿ, ಅವನು ಧ್ವಜನಾದರೆ, ಇವಳು ಪತಾಕೆ. ಇವಳು ತೃಷೆಯಾದರೆ ಅವನು ಲೋಭ, ಅವನು ಗಿಡ ಇವಳು ಬಳ್ಳಿ, ಅವನು ಹಗಲು ಇವಳು ರಾತ್ರಿ, ಅವನು ಚಂದ್ರ ಇವಳು ಬೆಳದಿಂಗಳು. ಅವನು ರಾಗ ಇವಳು ರತಿ, ಮೈತ್ರೇಯ ಹೆಚ್ಚೇನು ! ಮಾನವ ಪಶು ಪಕ್ಷಿಗಳಲ್ಲಿ ಇರುವ ಪುರುಷರೂಪ ಶ್ರೀ ಹರಿ, ಸ್ತ್ರೀರೂಪ ಲಕ್ಷ್ಮೀದೇವಿ. ಇವರಿಬ್ಬರಿಗೂ ಅವಿನಾಭಾವರೂಪವಾದ ಶಾಶ್ವತ ಸಂಬಂಧವು ಇರುತ್ತದೆ.

ಈ ಶ್ರೀ ಸಿರಿದೇವಿಯ ಅವತಾರದ ಕತೆಯನ್ನು ನಾನು ಮೊದಲು ಮರೀಚಿ ಮುನಿಗಳಿಂದ ಕೇಳಿದ್ದೆ. ಆ ಕಮಲಾದೇವಿಯ ಕೌತುಕದ ಕತೆಯನ್ನು ನಿನಗೆ ಬಿತ್ತರಿಸುವೆನು ಕೇಳು.

## ದುರ್ವಾಸರ ಕೋಪ, ಇಂದ್ರನಿಗೆ ಶಾಪ

ಮಹಾದೇವರ ಅಂಶ ಸಂಭೂತರಾದ ದುರ್ವಾಸರು ಭೂಮಂಡಲದಲ್ಲಿ ಹಿಂದೊಮ್ಮೆ ಸಂಚಾರ ಮಾಡುತ್ತಿದ್ದರು. ಆಗ ನಂದನ ವನದ ಮಂದಾರವೃಕ್ಷದ ದಿವ್ಯ ಸುಗಂಧದ ಪರಿಮಳವು ಗಮ್ಮನೆ ಅವರ ಮೂಗಿಗೆ ಬಡಿಯಿತು. ಇಂಥ ದಿವ್ಯ ಪರಿಮಳವು ಎಲ್ಲಿಂದ ಬಂದಿತೆಂದು ಆಚೀಚೆ ನೋಡುವಷ್ಟರಲ್ಲಿ ಓರ್ವ ವಿದ್ಯಾಧರ ವಿಲಾಸಿನಿಯು ಕಲ್ಪವೃಕ್ಷದ ಹೂಗಳಿಂದ ರಚಿತವಾದ ದಿವ್ಯಮಾಲೆಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ನಡೆದಿರುವುದು ಕಂಡಿತು. ಆ ಮಂದಾರ ಮಾಲೆಯ ಸುಗಂಧದಿಂದ ಸಮೀಪದ ಕಾಡು ನಾಡುಗಳೆಲ್ಲ ಗಮಗಮ ವಾಸನೆಯಿಂದ ಪರಿಮಳಿತವಾಗಿದ್ದವು. ಅದರ ಸುವಾಸನೆಯ ಆಸೆಯಿಂದ ಅನೇಕ ವನೇಚರರು ಆಕೃಷ್ಟರಾಗಿ ಆ ವಿದ್ಯಾಧರೆಯ ಸುತ್ತುಮುತ್ತು ದುಂಬಿಗಳ ದಂಡಿನಂತೆ ಮುಕುರಿದ್ದರು. ದುರ್ವಾಸರಂಥ ವೀತರಾಗರಾದ ಮಹಾಮುನಿಗಳಿಗೂ ಆ ದಿವ್ಯ ಮಾಲೆಯ ಸೌಗಂಧವು ಮನಸ್ಸನ್ನು ಸೆಳೆಯಿತು. ಅದರ ಕಂಪಿನಿಂದ ಆಕರ್ಷಿತರಾದ ದುರ್ವಾಸರು ಆ ವಿದ್ಯಾಧರ ಅಂಗನೆಯ ಬಳಿಗೆ ಹೋಗಿ ಸೌರಭವನ್ನು ಸೂಸುವ ಆ ಹೂವಿನ ಸರವನ್ನು ತಮಗೆ ಕೊಡಬೇಕೆಂದು ಕೇಳಿದರು. ಆಗ ವಿದ್ಯಾಧರ ವನಿತೆಗೆ ತನ್ನ ಕೈಯಲ್ಲಿಯ ಕುಸುಮ ಮಾಲೆಯ ಬಗ್ಗೆ ಹೆಮ್ಮೆ ಅನಿಸಿತು. ಅವಧೂತ ಯೋಗಿಗಳಾದ ದುರ್ವಾಸರಂಥ ವಿರಕ್ತ ಸನ್ಯಾಸಿಗಳು ಅದನ್ನು ಬಯಸಬೇಕಾದರೆ ಆ ಕುಸುಮ ಸರದ ಸ್ವರ್ಗೀಯ ಸೌರಭವು ಹೇಗಿರಬೇಡ ! ಇಂಥ ಗಂಧಾಢ್ಯವೂ ಸುಮನೋಹರವೂ ಆದ ಹೂವಿನ ಸರವನ್ನು ತಾನೇ ತನ್ನ ಮುಡಿಯಲ್ಲಿ ಧರಿಸಬೇಕೆಂದು ಅವಳ ಹೆಣ್ಣು ಹೃದಯ ಹಾತೊರೆದರೂ ಚಂಡಕೋಪರಾದ ದುರ್ವಾಸರು ತನಗೆ ಶಾಪ ಕೊಡಬಹುದು ಎಂಬ ಭಯದಿಂದ ಆ ಹೂವಿನ ಹಾರವನ್ನು ಆ ತಪೋಧನರಿಗೆ ಕೊಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದಳು.

ಆಗ ಸಂತುಷ್ಟರಾದ ದುರ್ವಾಸರು ಆ ಕುಸುಮ ಹಾರವನ್ನು ಹೆಂಗಸರಂತೆ ತಮ್ಮ ಜಡೆಯಲ್ಲಿ ಮುಡಿದು ಆನಂದದಿಂದ ಮುಂದೆ ನಡೆದರು. ಗಂಟುಕಟ್ಟಿದ ಜಟಾಕಲಾಪದಲ್ಲಿ ಸೌಗಂಧವನ್ನು ಸೂಸುವ ಆ ಸುಂದರವಾದ ಮಂದಾರ ಮಾಲೆಯನ್ನು ಧರಿಸಿದ್ದರಿಂದ ಅವರೊಂದು ಹುಚ್ಚರಂತೆ ತೋರುತ್ತಿದ್ದರು.

ಅಷ್ಟರಲ್ಲಿ ಅವರ ಎದುರಿಗೆ ಮೂರು ಲೋಕದ ಒಡೆಯನಾದ ದೇವೇಂದ್ರನು ದೇವತೆಗಳಿಂದ ಒಡಗೂಡಿಕೊಂಡು ಐರಾವತದ ಮೇಲೆ ಕುಳಿತು ಬರುತ್ತಲಿದ್ದನು. ಅವನನ್ನು ಕಂಡ ಕೂಡಲೇ ಹುಚ್ಚನಂತೆ ಅವಧೂತ ಚರ್ಯೆಯಲ್ಲಿರುವ ದುರ್ವಾಸ ಮುನಿಗಳು ತಮ್ಮ ತಲೆಯಮೇಲಿನ ಆ ಕುಸುಮ ಮಾಲೆಯನ್ನು ತೆಗೆದು ದೇವೇಂದ್ರನ ಮೇಲೆ ಎಸೆದರು. ದುಂಬಿಗಳ ದಂಡು ಝೇಂಕರಿಸುತ್ತಲಿರುವ ಆ ಪುಷ್ಪಮಾಲೆಯನ್ನು ಸಾರ್ವಭೌಮನಾದ ಇಂದ್ರನು ತೆಗೆದುಕೊಂಡು ತನ್ನ ವಾಹನವಾದ ಐರಾವತದ ತಲೆಗೆ ಕಟ್ಟಿದನು. ಮಸ್ತಿಗೆ ಬಂದು ಝೂಲಾಡುತ್ತಿರುವ ಆ ಐರಾವತವು ಆ ಹೂಮಾಲೆಯ ಮರುಗಂಪಿನ ವಾಸನೆಯಿಂದ ಉನ್ಮಾದಿತವಾಗಿ ತನ್ನ ತಲೆಯ ಮೇಲೆ ಮುಡಿಸಿದ ಆ ದಿವ್ಯಹಾರವನ್ನು ಸೊಂಡಿಲಿನಿಂದ ಸೆಳೆದು ನೆಲದ ಮೇಲೆ ಹುಡಿಯಲ್ಲಿ ಒಗೆದುಬಿಟ್ಟಿತು. ಅದನ್ನು ನೋಡಿ ದುರ್ವಾಸರಿಗೆ ಕೋಪ ಬಂದು ಅವರು ಇಂದ್ರನನ್ನು ಕುರಿತು ಗುಡುಗಿದರು. "ಸುರರಾಜ, ನಿನಗೆ ಐಶ್ವರ್ಯದ ಅಜೀರ್ಣವಾಗಿ ಕಣ್ಣು ನೆತ್ತಿಯ ಮೇಲೆ ಬಂದಿವೆ. ಪ್ರಸಾದವೆಂದು ನಾನು ಕೊಟ್ಟ ಮಾಲೆಯನ್ನು ಧರಿಸದೆ, ಅಭಿನಂದಿಸದೆ ಆನೆಯ ಕೈಯಲ್ಲಿ ಕೊಟ್ಟು ಮಣ್ಣುಪಾಲಾಗಿ ಮಾಡಿದೆ. ಅದರಿಂದ ನಿನ್ನ ಐಶ್ವರ್ಯವೆಲ್ಲವೂ ಮಣ್ಣುಪಾಲಾಗಿ ನೀನು ದಟ್ಟ ದರಿದ್ರನಾಗುವಿ. ನನ್ನನ್ನೂ ಒಬ್ಬ ದೇಶಾವರೀ ಬ್ರಾಹ್ಮಣನೆಂದು ಬಗೆದು, ನಾನಿತ್ತ ಹೂವಿನ ಹಾರವನ್ನು ಶಿರಸಾಧಾರಣವನ್ನು ಮಾಡುವದು ಬಿಟ್ಟು, ಅದನ್ನು ಆನೆಯ ತಲೆಯ ಮೇಲೆ ಹಾಕಿ ನನಗೆ ಅವಮಾನ ಮಾಡಿರುವಿ. ನಿನ್ನ ತ್ರೈಲೋಕ್ಯಾಧಿಪತ್ಯದ ಅಧಿಕಾರ ಐಶ್ವರ್ಯ ಸ್ಥಾನಮಾನಗಳೆಲ್ಲವೂ ನಷ್ಟವಾಗಲಿ" ಎಂದು ಶಾಪವಿತ್ತರು.

ಆಗ ಕೂಡಲೇ ದೇವೇಂದ್ರನು ಐರಾವತದಿಂದ ಕೆಳಗಿಳಿದು ದುರ್ವಾಸರ ಕಾಲು ಹಿಡಿದು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳತೊಡಗಿದನು. ಅದಕ್ಕೆ ಚಂಡಕೋಪರಾದ ದುರ್ವಾಸರು ಪ್ರಸನ್ನರಾಗದೇ ಸಿಟ್ಟಿನಿಂದ ಉರಿಯುತ್ತಲೇ ಗರ್ಜಿಸಿದರು. "ಇಂದ್ರ, ನಿನ್ನ ಈ ನಮಸ್ಕಾರದ ನಾಟಕಕ್ಕೆ ನಾನೇನು ಕರಗುವ ಮನುಷ್ಯನಲ್ಲ. ನಮಸ್ಕಾರ ಚಮತ್ಕಾರಕ್ಕೆ ಮರುಳಾಗಿ ಕೂಡಲೇ ಕರುಣೆ ತೋರುವ ಮುನಿಗಳು ಬೇರೆ ಇರಬಹುದು. ನಾನು ಅಂಥ ಅಳ್ಳೆದೆಯ ಅಂತಃಕರಣಿ ಋಷಿಯಲ್ಲ. ಗೌತಮನೇ ಮೊದಲಾದ ಉಳಿದ ಋಷಿಗಳು ನಿನ್ನನ್ನು ಹೊಗಳಿ ಹೊಗಳಿ ಗರ್ವದ ಗೋಪುರದ ಮೇಲೆ ಕೂಡಿಸಿದ್ದಾರೆ. ವಸಿಷ್ಠರೇ ಮುಂತಾದ ದಯಾಸಾಗರರಾದ ದೊಡ್ಡ ದೊಡ್ಡ ಮುನಿಗಳೂ ಕೂಡ ನಿನ್ನ ಪ್ರಶಂಸೆಯನ್ನು ಮಾಡಿದ್ದರಿಂದ ನಿನ್ನ ಅಹಂಕಾರವು ಬೆಳೆದು ಇಂದು ನನ್ನಂಥ ಮಹಾಮಹರ್ಷಿಯನ್ನೂ ಅವಮಾನಿಸುವ ಮಟ್ಟಕ್ಕೆ ಮುಟ್ಟಿದೆ. ಅವರಂತೆ ನಾನೆಂದಿಗೂ ನಿನ್ನನ್ನು ಕ್ಷಮಿಸಲಾರೆ. ನನ್ನ ಹೆಸರು ದುರ್ವಾಸ. ಹುಬ್ಬುಗಂಟು

ಹಾಕಿ, ಕಣ್ಣು ಕೆಂಪಗೆ ಮಾಡಿ, ಜಡೆಯನ್ನು ಅಪ್ಪಳಿಸುವ ಈ ದುರ್ವಾಸ ಮುನಿಯ ಸನಿಹದಲ್ಲಿ ಆ ಕ್ಷಮೆಯು ಬರಲಾರದು. ನಿನ್ನ ಈ ಪ್ರಣಾಮದ ಪ್ರದರ್ಶನ, ಅನುನಯದ ಅಭಿನಯ, ಮತ್ತು ವಿನಯದ ವಿಡಂಬನೆಯನ್ನು ಸಾಕು ಮಾಡು'' ಎಂದು ಹೇಳಿ ಅಲ್ಲಿಂದ ಹೊರಟು ಹೋದರು. ಅನಂತರ ದೇವೇಂದ್ರನಾದರೂ ಐರಾವತವನ್ನು ಏರಿ ದೇವತೆಗಳೊಂದಿಗೆ ಅಮರಾವತಿಗೆ ನಡೆದ.

ಮೈತ್ರೇಯ, ಅಂದಿನಿಂದ ದೇವೇಂದ್ರನ ಐಶ್ವರ್ಯವೆಲ್ಲವೂ ಕಳೆದು ಹೋಯಿತು. ಅವನ ಗರ್ವವೂ ಇಳಿದುಹೋಯಿತು. ಅವನ ಮುಖವು ನಿಸ್ತೇಜವಾಯಿತು. ಅಮರಾವತಿಯ ಐಶ್ವರ್ಯವೆಲ್ಲವೂ ತೊಳೆದುಹೋಗಿ ಅಲ್ಲಿಯ ಜನರೆಲ್ಲರೂ ನಿಃಸತ್ವರಾದರು. ಇದರಿಂದ ಮೂರು ಲೋಕದಲ್ಲಿಯ ಜನರ ಉತ್ಸಾಹವು ಅಡಗಿ ಧೈರ್ಯವು ಉಡುಗಿ ''ನಿರ್ವೀರ ಮುರ್ವೀತಲಂ'' ಎನ್ನುವಂತಾಯಿತು. ಆಗ ಇಂಥ ಸಂಧಿಯನ್ನು ಕಾಯುತ್ತ ಕುಳಿತ ದೈತ್ಯರು ಒಮ್ಮೆಲೇ ಸ್ವರ್ಗಕ್ಕೆ ಲಗ್ಗೆ ಇಟ್ಟರು. ದೇವದಾನವರ ನಡುವೆ ಘೋರ ಯುದ್ಧವಾಗಿ ದೇವತೆಗಳೆಲ್ಲರೂ ಸೋತು ಸ್ವರ್ಗವನ್ನು ಬಿಟ್ಟು ಓಡಿಹೋದರು. ಆಗ ಸೋಲು ಮತ್ತು ಅವಮಾನಗಳಿಂದ ಸಂತಪ್ತನಾದ ಸುರರಾಜನು ದೇವತೆಗಳನ್ನು ಮುಂದೆ ಮಾಡಿಕೊಂಡು ಬ್ರಹ್ಮದೇವರಿಗೆ ಶರಣುಹೋದನು. ಚತುರ್ಮುಖನು ಸ್ವರ್ಗವಾಸಿಗಳ ಆ ಕರುಣ ಕತೆಯನ್ನು ಕೇಳಿ ಅವರಿಗೆ ಶರಣಾಗತ ರಕ್ಷಕನಾದ ಶ್ರೀ ಹರಿಗೆ ಶರಣುಹೋಗಲು ಸಲಹೆ ಮಾಡಿದನು. ಶರಣು ಬಂದವರನ್ನು ಕರುಣೆಯಿಂದ ಕಾಪಿಟ್ಟು ಕಲ್ಯಾಣವನ್ನುಂಟು ಮಾಡುವ ಆ ಶ್ರೀ ಹರಿಯ ದಯಾಮಯ ಸ್ವಭಾವವು ಬ್ರಹ್ಮದೇವರಿಗೆ ಚೆನ್ನಾಗಿ ಗೊತ್ತು.

ವಾಣೀಪತಿಯಾದ ಬ್ರಹ್ಮದೇವರು ಬರೀಬಾಯಿಮಾತಿನಿಂದ ದೇವತೆಗಳಿಗೆ ಶ್ರೀ ಹರಿಯನ್ನು ಶರಣು ಹೋಗಿರಿ ಎಂದು ಹೇಳದೆ ಸ್ವತಃ ತಾನೇ ಮುಂದಾಳುವಾಗಿ ಆ ವೃಂದಾರಕರ ವೃಂದವನ್ನು ಕರೆದುಕೊಂಡು ಹಾಲ್ಗಡಲಿನ ದಂಡೆಗೆ ಹೋಗಿ ನಿಂತು ಎಲ್ಲ ದೇವತೆಗಳಿಂದ ಒಡಗೂಡಿ ಆ ಪರಮಾತ್ಮನನ್ನು ಸ್ತೋತ್ರ ಮಾಡಿದರು.

**''ನಮಾಮಿ ಸರ್ವಂ ಸರ್ವೇಶಮನಂತಮಜಮವ್ಯಯಂ ।**
**ಲೋಕಧಾಮ ಪರಾಧಾರಮಪ್ರಕಾಶಮಭೇದಿನಂ ॥**
**ನಾರಾಯಣಮಣೀಯಾಂಸಮಶೇಷಾಣಾಮಣೀಯಸಾಮ್ ।**
**ಸಮಸ್ತಾನಾಂ ಗರಿಷ್ಠಂ ಚ ಭೂರಾದೀನಾಂ ಗರೀಯಸಾಮ್ ॥**

ಸಕಲ ಜಗದೊಡೆಯನೂ, ನಾಶರಹಿತನೂ, ಸರ್ವಾಧಾರನೂ, ಸರ್ವೇಶ್ವರನೂ, ಅಣೋರಣೀಯನೂ, ಮಹತೋಮಹೀಯನೂ, ಸರ್ವಜಗತ್ಕಾರಣನೂ, ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುವವನೂ ಆದ ಶ್ರೀಮನ್ನಾರಾಯಣನಿಗೆ ನಮ್ಮ ನಮಸ್ಕಾರವಿರಲಿ. ದಯಾಘನನಾದ ಶ್ರೀ ಹರಿಯೇ, ನಿನ್ನ ಭಕ್ತರಾದ ನಮಗೆ ಬೇಗನೇ ದರ್ಶನವನ್ನು ಕೊಡು.''

## ದೇವತೆಗಳ ಸ್ತೋತ್ರ, ವಿಷ್ಣುವಿನ ಸಾಕ್ಷಾತ್ಕಾರ

ಈ ರೀತಿಯಾಗಿ ಬ್ರಹ್ಮದೇವರು ಸ್ತೋತ್ರ ಮಾಡಿದ ಮೇಲೆ ಎಲ್ಲ ದೇವತೆಗಳೂ ಮತ್ತು ಬೃಹಸ್ಪತ್ಯಾಚಾರ್ಯರೇ ಮೊದಲಾದ ಋಷಿಗಳೂ ಆ ಭಗವಂತನಿಗೆ ಶರಣು ಹೋಗಿ ಅವನನ್ನು ಭಕ್ತಿಯಿಂದ ಕೊಂಡಾಡಿದರು. ಅವರ ಈ ಸ್ತೋತ್ರ ಮಂತ್ರಗಳಿಂದ ಸುಪ್ರೀತನಾಗಿ ಹರಿಯು ಆ ದೇವತೆಗಳಿಗೆಲ್ಲರಿಗೂ ತನ್ನ ಪ್ರತ್ಯಕ್ಷ ದರ್ಶನವನ್ನು ದಯಪಾಲಿಸಿದನು. ಅವನ ನಾಲ್ಕೂ ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳು ಹೊಳೆಯುತ್ತಲಿದ್ದವು. ತೇಜಸ್ಸಿನ ಒಂದು ಅಪೂರ್ವವಾದ ಕಾಂತಿ ಪುಂಜವೇ ಅವರ ಕಣ್ಣೆದುರು ರಾಶಿಯಾಗಿ ನಿಂತಂತೆ ಎನಿಸಿತು. ಆ ತೇಜಃಪುಂಜದ ಪ್ರಕಾಶಾತಿಶಯದಿಂದ ಅಲ್ಲಿ ನಿಂತ ದೇವತೆಗಳೆಲ್ಲರ ಕಣ್ಣು ಕುಕ್ಕಿದವು. ಒಂದು ಕ್ಷಣ ಅವರೆಲ್ಲರೂ ಕೈಮುಗಿದು ನಿಂತುಕೊಂಡು ಅವನನ್ನು ಮತ್ತೆ ಸ್ತೋತ್ರ ಮಾಡತೊಡಗಿದರು.

''ಸ್ವಾಮಿನ್, ಸರ್ವತ್ರ ವ್ಯಾಪ್ತನಾದ ನೀನು ಸರ್ವಜ್ಞನೂ ಆಗಿರುವೆ. ಈ ಜಗತ್ತೆಲ್ಲವೂ ನಿನ್ನಿಂದಲೇ ನಡೆದಿರುತ್ತದೆ. ದಾನವರೊಡನೆ ಹೋರಾಡಿ ಸೋತು ಸಣ್ಣಾಗಿ ಹೋದ ನಾವು ದೀನರಾಗಿ ನಿನಗೆ ಶರಣು ಬಂದಿದ್ದೇವೆ. ಆರ್ತರಾದ ನಮ್ಮ ಮೇಲೆ ನೀನು ಅನುಗ್ರಹವನ್ನು ಮಾಡಿ ನಮ್ಮನ್ನು ರಕ್ಷಿಸು. ಎಲ್ಲರ ದುಃಖಗಳನ್ನು ಕಳೆಯುವ ನಿನ್ನ ಚರಣಗಳನ್ನು ಶರಣು ಹೊಂದುವವರೆಗೆ ಪ್ರಾಣಿಗಳಿಗೆ ದುಃಖ ದುರವಸ್ಥೆಗಳು ಇರುವವು. ನಿನ್ನನ್ನು ಶರಣು ಹೊಂದಿದ ಬಳಿಕ ಎಲ್ಲ ಸಂಕಟಗಳೂ ಪರಿಹಾರವಾಗಿ ಸಂತಸದ ಸುಗ್ಗಿಯಾಗುವುದು.''

## ಸಮುದ್ರಮಂಥನಕ್ಕೆ ಆದೇಶ

ಈ ರೀತಿಯಾಗಿ ಸ್ತೋತ್ರ ಮಾಡುವ ಸುರವೃಂದದ ಪ್ರಶಂಸೆಯಿಂದ ಪ್ರಸನ್ನನಾದ ಪರಮಾತ್ಮನು ಆ ದೇವತೆಗಳನ್ನು ಸಂತೈಸುತ್ತ, ''ಅದಿತಿಕುಮಾರರೇ, ನಾನು ಬೇಗನೇ ನಿಮ್ಮ ತೇಜೋವೃದ್ಧಿಯಾಗುವಂತೆ ಮಾಡುತ್ತೇನೆ. ನೀವೀಗ ನಾನು ಹೇಳಿದ ಹಂಚಿಕೆಯನ್ನು ಮಾಡಬೇಕು. ಮೊದಲು ನೀವು ದೈತ್ಯರೊಡನೆ ಸ್ನೇಹದಿಂದ ಸಂಧಿಮಾಡಿಕೊಂಡು ಸಮುದ್ರಮಂಥನವನ್ನು ಮಾಡಿರಿ. ಭೂಲೋಕದಲ್ಲಿಯ ಔಷಧಿ ಗಿಡಮೂಲಿಕೆಗಳನ್ನೆಲ್ಲ ಸಮುದ್ರದಲ್ಲಿ ಹಾಕಿ, ಮಂದರಬೆಟ್ಟವನ್ನು ಕಡೆಗೋಲು ಮಾಡಿ, ಅದಕ್ಕೆ ವಾಸುಕಿ ಎಂಬ ಹಾವನ್ನು ಹಗ್ಗವನ್ನಾಗಿ ಸುತ್ತಿ. ಹಾಲ್ಗಡಲನ್ನು ಕಡೆಯಿರಿ. ದೈತ್ಯರಿಗೂ ಕೂಡ ''ಅಮೃತವನ್ನು ಇಬ್ಬರೂ ಸಮನಾಗಿ ಹಂಚಿಕೊಳ್ಳೋಣ'' ಎಂದು ಹೇಳಿ ಸಾಮೋಪಾಯದಿಂದ ಅವರನ್ನೂ ಒಲಿಸಿಕೊಂಡು ದೇವದೈತ್ಯರಿಬ್ಬರೂ ಕೂಡಿ ಸಮುದ್ರಮಂಥನವನ್ನು ಮಾಡಿರಿ. ಅದರಿಂದ ಉದಿಸಿ ಬಂದ ಅಮೃತವನ್ನು ಕುಡಿದರೆ ನೀವು ಮುಪ್ಪು ಸಾವುಗಳನ್ನು ತಪ್ಪಿಸಿಕೊಂಡು ಅಜರರೂ ಅಮರರೂ ಆಗುವಿರಿ. ಈ ಕಾರ್ಯದಲ್ಲಿ ನಾನು ನಿಮಗೆ ಎಲ್ಲ ರೀತಿಯಿಂದಲೂ ಸಹಾಯಕನಾಗಿ ಹಿನ್ನೆಲೆಯಲ್ಲಿರುತ್ತೇನೆ'' ಎಂದು ಪ್ರೋತ್ಸಾಹನೆಯನ್ನಿತ್ತು ಕಳುಹಿಸಿದನು. ಶ್ರೀಹರಿಯ ಆದೇಶದಂತೆ ಸುರಗಣದ ಧುರೀಣರು ದೈತ್ಯರಾಜರಿದ್ದಲ್ಲಿಗೆ ಬಂದು ಅಮೃತವನ್ನು

ಪಡೆಯಲಿಕ್ಕಾಗಿ ಹಾಲ್ಗಡಲನ್ನು ಕಡೆಯೋಣ ಎಂದು ಹೇಳಿದರು. ಮುಪ್ಪು ಮರಣ ಎರಡನ್ನೂ ತಪ್ಪಿಸುವ ಅಮೃತದ ವಿಚಾರವು ದೈತ್ಯ ಧುರೀಣರಿಗೆಲ್ಲ ತಕ್ಷಣ ಹಿಡಿಸಿ ಅವರು ಆನಂದದಿಂದ ಸಮುದ್ರ ಮಂಥನಕ್ಕೆ ಸಿದ್ಧರಾದರು. ಸುರಾಸುರರೆಲ್ಲರೂ ಸೇರಿ ಔಷಧ ವನಸ್ಪತಿಗಳನ್ನು ಆ ಹಾಲಿನ ಸಮುದ್ರದಲ್ಲಿ ತಂದು ಹಾಕಿ, ಮಂದರ ಪರ್ವತವನ್ನು ಹೊತ್ತು ತಂದು ನೀರಿನಲ್ಲಿರಿಸಿ, ಅದಕ್ಕೆ ವಾಸುಕಿಯನ್ನು ಬಿಗಿದು ಕಡೆಯತೊಡಗಿದರು. ಶ್ರೀ ವಿಷ್ಣುವಿನ ಹಂಚಿಕೆಯಿಂದ ದೈತ್ಯರೆಲ್ಲರೂ ಆ ಸರ್ಪದ ಮುಖವನ್ನು ಹಿಡಿದರು. ದೇವತೆಗಳು ಬಾಲಹಿಡಿದು ಮಥಿಸತೊಡಗಿದರು. ರಭಸದಿಂದ ಕಡೆಯುವಾಗ ಕೋಟ್ಯಾವಧಿ ಕೈಗಳ ಕಸುವಿನ ಕೊಸರಾಟದಿಂದ ವಾಸುಕಿ ಹಾವು ತೇಕಾಡಿ ನಿಟ್ಟುಸಿರು ಬಿಡತೊಡಗಿತು. ವಿಷಭರಿತವಾದ ನಿಶ್ವಾಸದ ಗಾಳಿಯಿಂದ ದೈತ್ಯರಿಗೆಲ್ಲ ಬವಳಿಬಂದಂತೆನಿಸಿತು. ಬಾಲಹಿಡಿದ ದೇವತೆಗಳ ಮೇಲೆ ಶ್ರೀ ಹರಿಯ ಆಜ್ಞೆಯಂತೆ ತುಂತುರು ಮಳೆಯಾಗಿ ಅವರ ಶ್ರಮ ಪರಿಹಾರವಾದಂತೆನಿಸಿ ಅವರು ಮತ್ತಿಷ್ಟೂ ಉತ್ಸಾಹ ಹಾಗೂ ನವ ಶಕ್ತಿಯಿಂದ ಕಡೆಯತೊಡಗಿದರು.

## ಲಕ್ಷ್ಮೀ, ಅಮೃತ, ರತ್ನಗಳ ಉತ್ಪತ್ತಿ

ಸುರರೂ ಅಸುರರೂ ಕೂಡಿ ವೇಗದಿಂದ ಮಂದರಗಿರಿಯನ್ನು ಕಡೆಯಲು ಉಪಕ್ರಮಿಸಿದಾಗ ಅತ್ಯಂತ ಭಾರಭೂತವಾದ ಆ ಬೆಟ್ಟವು ನೀರಿನಲ್ಲಿ ಮುಳುಗಿ ಅಗಾಧ ಸಾಗರದ ತಳವನ್ನು ಸೇರಿತು. ಆಗ ದೇವತೆಗಳೆಲ್ಲರೂ ಸಂಭ್ರಾಂತರಾಗಲು ವಿಷ್ಣುವು ಕೂರ್ಮರೂಪವನ್ನು ತೆಗೆದುಕೊಂಡು ಆ ಮಹಾಮಂದರವನ್ನು ತನ್ನ ಬೆನ್ನ ಮೇಲೆ ಹೊತ್ತು ಎತ್ತಿಹಿಡಿದನು. ವಿಶಾಲವಾದ ಕೂರ್ಮಪೃಷ್ಠದ ಮೇಲೆ ನಿಂತ ಆ ಮಹಾಚಲವನ್ನು ಮತ್ತೆ ದೇವದಾನವರು ಮಥಿಸತೊಡಗಿದಾಗ ಅದು ಬಲಿಷ್ಠರಾದ ಅಸಂಖ್ಯ ದೇವದೈತ್ಯರ ಪ್ರಚಂಡ ಎಳೆತಸೆಳೆತಗಳ ರಭಸಕ್ಕೆ ಸಿಕ್ಕು ಹೊಯ್ದಾಡಹತ್ತಿತು. ಆಗ ಪರಮಾತ್ಮನು ಬೇರೊಂದು ವಿರಾಡ್ ರೂಪದಿಂದ ಮಂದರ ಮಹಾಶೈಲದ ಮೇಲೆ ಜಿಮ್ಮ ಆ ಕುಲಾಚಲದ ಶಿಖರ ಶ್ರೇಣಿಗಳನ್ನೆಲ್ಲಗಟ್ಟಿಯಾಗಿ ತಬ್ಬಿಹಿಡಿದನು. ಹೀಗೆ ಭಗವಂತನ ಅನುಗ್ರಹದಿಂದ ಹಾಲಿನ ಕಡಲಿನ ಕಡೆತದ ಕಾರ್ಯವು ಯಾವ ಅಡೆತಡೆಯಿಲ್ಲದೆ ಎಡೆಬಿಡದೆ ನಡೆದಾಗ ಕಡೆಕಡೆದು ದೈತ್ಯಾದಿತ್ಯರ ಕೈಗಳು ಸೋತು ಸುಣ್ಣವಾದವು. ಅವರೆಲ್ಲರೂ ದಣಿಕೆಯಿಂದ ನಿರ್ವಿಣ್ಣರಾದರು. ಆಯಾಸದಿಂದ ಅವರೆಲ್ಲರೂ ಕ್ಷೀಣದೀನರಾದ ಕೂಡಲೇ ಮಂಥನ ಕಾರ್ಯವು ನಿಲ್ಲುವ ಪರಿಸ್ಥಿತಿ ಬಂದಿತು. ಆಗ ಶ್ರೀ ಹರಿಯು ತನ್ನ ಒಂದು ಅದೃಶ್ಯರೂಪದಿಂದ ದೇವದೈತ್ಯರಲ್ಲಿ ಸನ್ನಿಹಿತನಾಗಿ ಅವರೆಲ್ಲರ ಅಂಗೈಮುಂಗೈಗಳಲ್ಲಿ ಬಲ ತುಂಬಿ ಮಂಥನ ಕಾರ್ಯವನ್ನು ಮುಂದುವರಿಸಿದನು. ಹೀಗೆ ದಿತಿಪುತ್ರರೂ ಅದಿತಿಪುತ್ರರೂ ಕೂಡಿ ಬಹುಕಾಲ ಮಂಥನ ಮಾಡಿದ ಬಳಿಕ ಆ ಕಡಲಿನ ಒಡಲಿನಿಂದ ದೇವ ಪೂಜ್ಯವಾದ ಕಾಮಧೇನುವು ಉತ್ಪನ್ನವಾಯಿತು. ಇದೇನು ಎಂದು ದೈತ್ಯರೆಲ್ಲರೂ ಅಚ್ಚರಿಯಿಂದ ನೋಡತೊಡಗಿದರು. ಆ ನಂತರ ಸುರೆ, ಪಾರಿಜಾತ, ಅಪ್ಸರೆಯರು, ಚಂದ್ರ ಮುಂತಾದ ಮುದಮೋದ ಕೊಡುವ ವಸ್ತುಗಳು ಜನಿಸಿದವು. ಶಿವನು ಚಂದ್ರನನ್ನು ತಲೆಯಲ್ಲಿ

ಧರಿಸಿದನು. ಆ ಬಳಿಕ ವಿಷವು ಉದಿಸಿತು. ಅದನ್ನು ಹಾವುಗಳು ತೆಗೆದುಕೊಂಡವು. ಅನಂತರ ಅಚ್ಚ ಬಿಳಿ ಬಣ್ಣದ ಸ್ವಚ್ಛ ಬಟ್ಟೆಯನ್ನು ಉಟ್ಟು ಕೊಂಡು ಭಗವಾನ್ ದೇವಧನ್ವಂತರಿಯು ಅಮೃತ ತುಂಬಿದ ಕಮಂಡಲವನ್ನು ಕೈಯಲ್ಲಿ ಹಿಡಿದು ಆ ಕ್ಷೀರೋದಧಿಯಿಂದ ಮೇಲೆ ಎದ್ದನು. ಭಗವಾನ್ ಧನ್ವಂತರಿಯ ಕೈಯಲ್ಲಿಯ ಅಮೃತ ಕಲಶವನ್ನು ಕಂಡು ದೇವತೆಗಳಿಗೆ ಹಿಗ್ಗಾಯಿತು. ದೈತ್ಯರಿಗೆ ಹರ್ಷವಾಯು ತುಂಬಿತು. ಆ ಬಳಿಕ ಆ ಹಾಲುಗಡಲಿನಿಂದ ಮಿಂಚುವ ಕಾಂತಿಯಿಂದ ಕಂಗೊಳಿಸುವ ಲಕ್ಷ್ಮೀದೇವಿಯು ಉದಿಯಿಸಿ ಬಂದಳು. ಅರಳಿದ ಕಮಲದಲ್ಲಿ ನಿಂತುಕೊಂಡ ಅವಳು ತನ್ನ ಕೈಯಲ್ಲಿಯೂ ಕಮಲ ಕುಟ್ಮಲವನ್ನು ಹಿಡಿದಿದ್ದಳು. ಆ ಶ್ರೀದೇವಿಯನ್ನು ಕಂಡು ಋಷಿಗಳು ಶ್ರೀ ಸೂಕ್ತದಿಂದ ಸ್ತೋತ್ರಮಾಡಿದರು. ಗಂಧರ್ವರು ಹಾಡಿದರು, ಅಪ್ಸರೆಯರು ಕುಣಿದರು. ದಿಗ್ಗಜಗಳು ಅವಳ ಅಭಿಷೇಕಕ್ಕಾಗಿ ತಾವಾಗಿ ಆಗಮಿಸಿದ ಗಂಗಾದಿ ತೀರ್ಥಗಳ ಪುಣ್ಯಜಲವನ್ನು ಹೊಂಗಲಶಗಳಲ್ಲಿ ತುಂಬಿಕೊಂಡು ತಮ್ಮ ಸೊಂಡಿಲಿನಿಂದ ಆ ಲೋಕಮಾತೆಗೆ ಸ್ನಾನ ಮಾಡಿಸಿದವು.

## ಲಕ್ಷ್ಮೀ ಸ್ವಯಂವರ

ಸಮುದ್ರರಾಜನು ಕೂಡಲೇ ಅಲ್ಲಿ ಮೈದಾಳಿ ಎಂದೂ ಬಾಡದ ತಾವರೆಯ ಹಾರವೊಂದನ್ನು ಅವಳಿಗೆ ಕೊಟ್ಟನು. ವಿಶ್ವಕರ್ಮನು ಅವಳ ಅಂಗಾಂಗಗಳಿಗೆ ಅನುರೂಪವಾದ ಆಭರಣಗಳನ್ನು ಮಾಡಿ ಅರ್ಪಿಸಿದನು. ಹೀಗೆ ಸ್ನಾನ ವೇಷ ಭೂಷಣಗಳಿಂದ ಅಲಂಕೃತಳಾದ ಆ ಶ್ರೀದೇವಿಯು ಎಲ್ಲ ದೈತ್ಯರೂ ದೇವತೆಗಳೂ ನೋಡ ನೋಡುತ್ತಲಿರುವಾಗಲೇ ಶ್ರೀ ವಿಷ್ಣುವನ್ನು ವರಿಸಿ ಅವನ ಅರ್ಧಾಂಗಿನಿಯಾಗಿ ಅವನ ವಕ್ಷಸ್ಥಳವನ್ನು ಅಲಂಕರಿಸಿದಳು. ಜಗದೀಶ್ವರನ ಹೃದಯ ಮಂದಿರದಲ್ಲಿ ವಾಸ ಮಾಡಿ ಆ ಇಂದಿರಾದೇವಿಯು ಎಲ್ಲ ದೇವತೆಗಳನ್ನು ಕರುಣಾಪೂರ್ಣ ದೃಷ್ಟಿಯಿಂದ ಒಮ್ಮೆ ನೋಡಿದಳು. ಆದರಿಂದ ದೇವತೆಗಳೆಲ್ಲರೂ ಅತ್ಯಂತ ಸಂತೃಪ್ತಿಯನ್ನು ಹೊಂದಿದರು.

ಇದರಿಂದ ವಿಷ್ಣುದ್ವೇಷಿಗಳಾದ ವಿಪ್ರಚಿತ್ತಿ ಮೊದಲಾದ ದೈತ್ಯರಿಗೆ ಮಾತ್ರ ದುಃಖವಾಯಿತು. ಇದನ್ನು ಅರಿತ ಆ ಮಹಾಲಕ್ಷ್ಮಿಯು ಆ ದುರುಳ ದಾನವರನ್ನು ದೂರಮಾಡಿಬಿಟ್ಟಳು. ಲಕ್ಷ್ಮಿದೇವಿಯಿಂದ ವಿಮುಖರಾದ ಆ ದೈತ್ಯರು ದೇವ ಧನ್ವಂತರಿಯ ಕೈಯಲ್ಲಿರುವ ಅಮೃತ ಕಮಂಡಲವನ್ನು ತಮ್ಮ ಮುಂಗೈ ಜೋರಿನಿಂದ ಕಸಿದುಕೊಂಡು ದೇವತೆಗಳಿಗೆ ಕೊಡಬಾರದೆಂದು ದುರ್ಬುದ್ಧಿಯಿಂದ ತಾವೇ ಕೊಂಡೊಯ್ದು ತಮ್ಮ ತಮ್ಮಲ್ಲಿ ಆ ಅಮೃತಪ್ರಾಶನಕ್ಕಾಗಿ ಕಚ್ಚಾಡ ಹತ್ತಿದರು. ಆಗ ಶ್ರೀಮನ್ನಾರಾಯಣನು ಮೋಹಿನಿಯ ರೂಪವನ್ನು ತೆಗೆದುಕೊಂಡು ಆ ದೈತ್ಯರನ್ನೆಲ್ಲ ವಂಚಿಸಿ ಆ ಅಮೃತ ಕಲಶವನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಮತ್ತು ತನ್ನ ರೂಪ ಸಿರಿಗೆ ಮಾರುಹೋದ ಆ ದುರುಳ ದಾನವರನ್ನೆಲ್ಲ ತನ್ನ ಮಧುರಮಾತುಗಳಿಂದ ಮರುಳು ಮಾಡಿ ಅವರನ್ನೆಲ್ಲ ಕಣ್ಣುಕಟ್ಟಿ ಕುಳ್ಳಿರಿಸಿ ದೇವತೆಗಳಿಗೆಲ್ಲ, ಅಮೃತವನ್ನು ಉಣಬಡಿಸಿದನು. ಇಂದ್ರಾದಿ ದೇವತೆಗಳು ಆ ಮಾಯಾ ಮೋಹಿನಿಯಿಂದ ಅಮೃತ

ಪಾನವನ್ನು ಮಾಡಿ ಅಜರರೂ ಅಮರರೂ ಆದರು. ಕೊನೆಗೆ ಇದನ್ನು ತಿಳಿದ ದೈತ್ಯರೆಲ್ಲರೂ ಕೋಪದಿಂದ ಹುಚ್ಚಾಗಿ ತಮ್ಮನ್ನು ವಂಚನೆ ಮಾಡಿ ಅಮೃತ ಪ್ರಾಶನವನ್ನು ಮಾಡಿದ ದೇವತೆಗಳನ್ನೆಲ್ಲ ಕಡಿದು ಕೊಚ್ಚಿ ಹಾಕಬೇಕೆಂದು ಆಯುಧಗಳನ್ನು ಹಿಡಿದು ಏರಿಬಂದರು. ಅಮೃತಪಾನದಿಂದ ಬಲಿಷ್ಠರಾದ ದೇವತೆಗಳು ಆ ದೈತ್ಯರನ್ನು ಕಂಡಲ್ಲಿ ತುಂಡರಿಸಿ ದಿಕ್ಕಾಪಾಲಾಗಿ ಓಡಿಸಿದರು.

ಅನಂತರ ದೇವತೆಗಳೆಲ್ಲರೂ ಸಂತಸದಿಂದ ಜಗದೀಶ್ವರನ ಅಡಿದಾವರೆಗೆ ವಂದಿಸಿ, ಶ್ರೀದೇವಿಯ ಅನುಗ್ರಹದಿಂದ ಕಳೆದುಹೋದ ರಾಜ್ಯ, ಐಶ್ವರ್ಯ, ಸೌಭಾಗ್ಯಗಳನ್ನು ಮರಳಿ ಪಡೆದು, ಅವನ ಅಪ್ಪಣೆಯಂತೆ ತಮ್ಮ ಸ್ವರ್ಗ ಸಾಮ್ರಾಜ್ಯಕ್ಕೆ ತೆರಳಿದರು. ದೇವೇಂದ್ರನು ಸ್ವರ್ಗ ಸಿಂಹಾಸನವನ್ನು ಆರೋಹಣ ಮಾಡಿ ಪಟ್ಟಾಭಿಷಿಕ್ತನಾದನು ಮತ್ತು ''ಇದೆಲ್ಲವೂ ಶ್ರೀಹರಿಯ ವಕ್ಷಸ್ಥಳದಲ್ಲಿ ಕುಳಿತುಕೊಂಡಿರುವ ಲಕ್ಷ್ಮೀದೇವಿಯು ತಮ್ಮನ್ನು ಕರುಣಾಕಟಾಕ್ಷದಿಂದ ನೋಡಿದ್ದರ ಪ್ರಭಾವ'' ಎಂದು ಅರಿತು ಆ ಸುರ ಸಾಮ್ರಾಜ್ಯದ ಸಿಂಹಾಸನದ ಮೇಲೆ ಕುಳಿತೇ ತನ್ನ ಚಿಗುರು ಬೆರಳಿನಲ್ಲಿ ಅರಳುದಾವರೆಯನ್ನು ಹಿಡಿದು ಕಮಲಾದೇವಿಯನ್ನು ಭಕ್ತಿಯಿಂದ ಸ್ತುತಿಸಿದನು.

**ದೇವರಾಜ್ಯೇ ಸ್ಥಿತೋ ದೇವೀಂ ತುಷ್ಟಾವಾಬ್ಜಕರಾಂ ತತಃ ॥**

## ಇಂದ್ರ ಉವಾಚ - ಲಕ್ಷ್ಮೀ ಸ್ತೋತ್ರ

**ನಮಸ್ತೇ ಸರ್ವಲೋಕಾನಾಂ ಜನನೀ ಮಬ್ಜಸಂಭವಾಮ್ ।**
**ಶ್ರಿಯಮುನ್ನಿದ್ರಪದ್ಮಾಕ್ಷೀಂ ವಿಷ್ಣು ವಕ್ಷಃ ಸ್ಥಲಸ್ಥಿತಾಮ್ ॥**

**ಪದ್ಮಾಲಯಾಂ ಪದ್ಮಹಸ್ತಾಂ ಪದ್ಮಪತ್ರ ನಿಭೇಕ್ಷಣಾಮ್ ।**
**ವಂದೇ ಪದ್ಮಮುಖೀಂ ದೇವೀಂ ಪದ್ಮನಾಭಪ್ರಿಯಾಮಹಮ್ ॥**

**ನ ತೇ ವರ್ಣಯಿತುಂ ಶಕ್ತಾ ಗುಣಾನ್ ಜಿಹ್ವಾಪಿ ವೇಧಸಃ ।**
**ಪ್ರಸೀದ ದೇವಿ ಪದ್ಮಾಕ್ಷಿ ಮಾಽಸ್ಮಾಂಸ್ತ್ಯಾಕ್ಷೀಃ ಕದಾಚನ ॥**

''ತಾವರೆಯಿಂದ ಉದಿಯಿಸಿ, ಹರಿಯ ಎದೆಯಲ್ಲಿ ನೆಲೆಸಿ ಭಕ್ತರನ್ನೆಲ್ಲ ಮುಕ್ತಿ ಮಂದಿರಕ್ಕೆ ಕರೆದೊಯ್ಯುವ ಇಂದಿರಾದೇವಿಯ ಪಾದಾರವಿಂದಗಳಿಗೆ ನಮ್ಮ ಅನಂತ ವಂದನೆಗಳು ಇರಲಿ. ತಾವರೆಯನ್ನೇ ತನ್ನ ತಾಣವನ್ನಾಗಿ ಮಾಡಿಕೊಂಡು ಕಮಲ ಕುಟ್ಮಲವನ್ನು ಕೈಯಲ್ಲಿ ಧರಿಸಿದ, ಕಮಲನಾಭನ ಪ್ರೇಯಸಿಯಾದ ತಾವರೆಮೊಗದ ಶ್ರೀದೇವಿಯನ್ನು ನಾನು ವಂದಿಸುತ್ತೇನೆ.

ತಾಯಿ, ನಿನ್ನ ಹೊರತು ಸರ್ವ ಯಜ್ಞಮಯನಾದ ಆ ಪರಮಾತ್ಮನ ದೇಹವನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ಎದೆಯಲ್ಲಿ ನೆಲೆಸುವುದು ಬೇರಾರಿಗೆ ಸಾಧ್ಯವಾದೀತು! ಅಮ್ಮಾ, ನೀನು ನಮ್ಮಿಂದ ವಿಮುಖಳಾದಾಗ ನಮ್ಮ ಸರ್ವಸ್ವವೂ ಹಾಳಾಗಿ ನಾವೆಲ್ಲರೂ ನಷ್ಟಪ್ರಾಯರಾಗಿದ್ದೆವು. ನೀನೀಗ ನಮ್ಮೆಡೆಗೆ ದಯೆದುಂಬಿದ ಕರುಣಾ ಕಟಾಕ್ಷದ ಕಿರಣಗಳನ್ನು ಬೀರಿದ ಕೂಡಲೇ ಮತ್ತೆ ನಮ್ಮ ಭಾಗ್ಯೋದಯವಾಯಿತು. ಅಂಬ, ನಿನ್ನ,

ದಯಾದೃಷ್ಟಿಯು ಬಿದ್ದಲ್ಲಿ ಆರೋಗ್ಯ, ಐಶ್ವರ್ಯ, ಶಾಂತಿ, ಸೌಭಾಗ್ಯ, ಸಿರಿ, ಸಂತಸಗಳು ನಲಿದಾಡುತ್ತವೆ. ಆದುದರಿಂದ ನಲ್‌ದಾಯಿಯೇ, ನೀನೆಂದಿಗೂ ನಮ್ಮನ್ನು ಬಿಡಬೇಡ. ನಮ್ಮ ಮನೆ ಬಿಟ್ಟು ಹೋಗಬೇಡ. ಬೊಕ್ಕಸ ಭಂಡಾರಗಳ ತ್ಯಾಗ ಮಾಡಬೇಡ. ನಿರಂತರವೂ ನಮ್ಮಲ್ಲಿ ನೆಲೆಸಿ ತಾಯಿಗರುಳಿನಿಂದ ನಮ್ಮನ್ನು ಹರಸಿ ಆಶೀರ್ವದಿಸು''. ದೇವೇಂದ್ರನ ಈ ಸ್ತೋತ್ರದಿಂದ ಪರಿತುಷ್ಟಳಾದ ಆ ಐಶ್ವರ್ಯದ ಅಧಿದೇವಿಯು ಅಲ್ಲಿ ನೆರೆದ ದೇವತೆಗಳಿಗೂ ಕೇಳುವಂತೆ ಇಂದ್ರನಿಗೆ ಹೇಳಿದಳು. ''ದೇವರಾಜ, ನಿನ್ನ ಈ ಸ್ತೋತ್ರದಿಂದ ಪ್ರಸನ್ನಳಾಗಿದ್ದೇನೆ. ನಿನಗೆ ಬೇಕಾದ ವರಕೇಳು.''

''ತಾಯಿ ನೀನು ಇನ್ನು ಮುಂದೆ ಈ ತ್ರೈಲೋಕ್ಯ ರಾಜ್ಯವನ್ನು ಎಂದೂ ತೊರೆದು ಹೋಗಬೇಡ ಮತ್ತು ನಾನು ಈ ವರೆಗೆ ಮಾಡಿದ ನಿನ್ನ ಈ ಸ್ತೋತ್ರ ವನ್ನು ಪಠಿಸಿ ನಿನ್ನನ್ನು ಯಾರು ಆರಾಧಿಸುವರೋ ಅವರನ್ನು ನೀನು ಎಂದೂ ಬಿಟ್ಟುಹೋಗತಕ್ಕದ್ದಲ್ಲ. ಈ ಎರಡು ವರಗಳನ್ನು ನನಗೆ ದಯಪಾಲಿಸ ಬೇಕು'' ಎಂದು ಇಂದ್ರನು ವರವನ್ನು ಕೇಳಿಕೊಂಡ. ಅದನ್ನು ಕೇಳಿ ಶ್ರೀದೇವಿಯು 'ಹಾಗೇ ಆಗಲಿ' ಎಂದು ಹೇಳಿ ಸ್ವರ್ಗಾಧಿಪತಿಯು ಕೇಳಿದ ಆ ಎರಡೂ ವರಗಳನ್ನು ಕೊಟ್ಟು ''ಅವನನ್ನೂ ಮುಂದೆ ಈ ಲಕ್ಷ್ಮೀಸ್ತೋತ್ರವನ್ನು ಬೈಗು ಬೆಳಗುಗಳಲ್ಲಿ ಅನುದಿನವೂ ಪಠಿಸುವವರನ್ನೂ ತಾನೆಂದೂ ಬಿಟ್ಟುಹೋಗುವುದಿಲ್ಲ'' ಎಂದು ಆಶ್ವಾಸನವನ್ನಿತ್ತಳು.

## ಲಕ್ಷ್ಮಿಯ ವಿವಿಧ ಅವತಾರಗಳು

ಈ ಲಕ್ಷ್ಮೀದೇವಿಯು ಕ್ಷೀರಸಮುದ್ರದಿಂದ ಜನಿಸಿ ಬರುವುದಕ್ಕಿಂತ ಮೊದಲು ಭೃಗು ಋಷಿಯಿಂದ ಖ್ಯಾತಿ ದೇವಿಯಲ್ಲಿ ಹುಟ್ಟಿ ಬಂದಿದ್ದಳು. ಪರಮಾತ್ಮನು ಅವತಾರ ಮಾಡಿದಾಗೆಲ್ಲ ಈ ಸಿರಿದೇವಿಯೂ ತಾನೂ ಅವತರಿಸಿ ಅವನ ಸೇವೆ ಮಾಡುತ್ತಾಳೆ. ಶ್ರೀ ಹರಿಯು ಅದಿತಿ ದೇವಿಯ ಹೊಟ್ಟೆಯಿಂದ ಪ್ರಾದುರ್ಭೂತ ನಾಗಿ ಆದಿತ್ಯನೆಂದು ಪ್ರಸಿದ್ಧನಾದಾಗ ಈ ಭಾಗ್ಯ ಲಕ್ಷ್ಮಿಯು ಪದ್ಮದಿಂದ ಹುಟ್ಟಿ ಪದ್ಮಾ ಎಂಬ ಹೆಸರಿನಿಂದ ಅವನ ಅರ್ಧಾಂಗಿನಿಯಾದಳು. ಅವನು ಪರಶುರಾಮ ನಾದಾಗ ಇವಳು ಧರಣೀ ದೇವಿಯಾದಳು. ಅವನು ರಾಮನಾದಾಗ ಇವಳು ಸೀತೆ; ಅವನು ಕೃಷ್ಣನಾದಾಗ ಇವಳು ರುಕ್ಮಿಣಿ, ಅವನು ದೇವನಾದಾಗ ಇವಳು ದೇವೀ, ಅವನು ನರನಾದಾಗ ಇವಳು ನಾರಿ, ಹೀಗೆ ವಿಷ್ಣುವು ಯಾವುದೇ ಅವತಾರ ಮಾಡಿದರೂ ಅವನ ಕಾಂತೆಯಾದ ಈ ಕಮಲಾದೇವಿಯು ಅದಕ್ಕೆ ಅನುಕೂಲವಾದ ಶರೀರ, ಅನುರೂಪವಾದ ವೇಷಭೂಷಣಗಳನ್ನು ಧರಿಸಿ ಅವನ ಸೇವೆಯನ್ನು ಮಾಡುವಳು. ಭೃಗು ಋಷಿಯಿಂದ ಖ್ಯಾತಿ ದೇವಿಯಲ್ಲಿ ಜನಿಸಿದ ಲಕ್ಷ್ಮೀದೇವಿಗೆ ಧಾತಾ ವಿಧಾತಾ ಎಂಬ ಇಬ್ಬರು ಸಹೋದರರಿದ್ದರು. ಈ ಧಾತಾ ವಿಧಾತಾ ಸಹೋದರರಿಗೆ ಮಹಾತ್ಮಾ ಮೇರುವಿನ ಮಕ್ಕಳಾದ ಆಯತಿ ನಿಯತಿ ಎಂಬ ಇಬ್ಬರು ಕನ್ಯೆಯರನ್ನು ಕೊಟ್ಟು ಮದುವೆ ಮಾಡಲಾಯಿತು. ಅವರಿಂದ ಧಾತವಿಧಾತರಿಗೆ ಪ್ರಾಣ ಮೃಕಂಡು ಎಂಬ ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಮೃಕಂಡುವಿನ ಮಗನೇ ಮಾರ್ಕಂಡೇಯ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಆ ಮಾರ್ಕಂಡೇಯನಿಗೆ ಗ್ಲೋದಶಿರ ಎಂಬ ಪುತ್ರನು ಜನಿಸಿದನು.

ಇತ್ತ ಧಾತೃವಿನ ಮಗನಾದ ತ್ರಾಣನಿಗೆ ದ್ಯುತಿಮಾನ್ ಎಂಬ ಪುತ್ರನೂ ಆ ದ್ಯುತಿಮಾನನಿಗೆ ರಾಜವಾನನೆಂಬ ಪುತ್ರನೂ ಉತ್ಪನ್ನನಾದನು. ಈ ರಾಜವಾನನಿಂದ ಭೃುಗುವಂಶವು ಬಹಳ ವಿಸ್ತಾರ ಹೊಂದಿತು. ಮರೀಚಿ ಪ್ರಜಾಪತಿಯ ಪತ್ನಿಯಾದ ಸಂಭೂತಿಯು ಪೌರ್ಣಮಾಸ ಎಂಬ ಮಗನನ್ನು ಹಡೆದಳು. ಮಹಾತ್ಮನಾದ ಆ ಪೌರ್ಣಮಾಸನಿಗೆ ವಿರಜ, ಪರ್ವತ ಎಂಬ ಇಬ್ಬರು ಮಕ್ಕಳು ಜನಿಸಿದರು.

ಅಂಗೀರಸ ಋಷಿಯ ಭಾರ್ಯೆಯಾದ ಸ್ಮೃತಿದೇವಿಯು ಸಿನೀವಾಲಿ, ಕುಹೂ, ರಾಕಾ ಮತ್ತು ಅನುಮತಿ ಎಂಬ ನಾಲ್ಕು ಮಕ್ಕಳನ್ನು ಹಡೆದಳು. ಅತ್ರಿಋಷಿ ಕುಟುಂಬಿನಿಯಾದ ಅನುಸೂಯಾದೇವಿಯು ಸೋಮ, ದುರ್ವಾಸ ಮತ್ತು ದತ್ತಾತ್ರೇಯ ಎಂಬ ದೋಷದೂರರಾದ ಮೂವರು ಸತ್ಪುತ್ರರನ್ನು ಹೆತ್ತಳು. ಪುಲಸ್ತ್ಯ ಋಷಿಯ ಧಮಪತ್ನಿಯಲ್ಲಿ ದತ್ತೋಲಿ ಎಂಬ ಗಂಡು ಮಗನು ಹುಟ್ಟಿದನು. ಇದೇ ದತ್ತೋಲಿಯು ತನ್ನ ಹಿಂದಿನ ಜನ್ಮದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಅಗಸ್ತ್ಯ ಋಷಿಯಾಗಿದ್ದನು. ಪುಲಹ ಋಷಿಯ ಹೆಂಡತಿಯಾದ ಕ್ಷಮಾದೇವಿಯ ಕರ್ದಮ, ಊರ್ವಶೀ, ಸಹಿಷ್ಣು ಎಂಬ ಮೂವರು ಸುತರರನ್ನು ಹಡೆದಳು. ಕ್ರುತುಮುನಿಯ ಪತ್ನಿಯಾದ ಸಂತತಿದೇವಿಯು ಊರ್ಧ್ವರೇತಸ್ಕರೂ, ಅಂಗುಷ್ಠ ಮಾತ್ರ ಆಕಾರದವರೂ, ಸೂರ್ಯನಂತೆ ಮಹಾತೇಜಸ್ವಿಗಳೂ ಆದ ವಾಲಖಿಲ್ಯರು ಎಂಬ ಅರವತ್ತು ಸಾವಿರ ಮುನಿ ಕುಮಾರರನ್ನು ಪ್ರಸವಿಸಿದಳು.

ಬ್ರಹ್ಮರ್ಷಿ ವಸಿಷ್ಠರಿಗೆ ಊರ್ಜಾ ಎಂಬ ಭಾರ್ಯೆಯಲ್ಲಿ ರಜ, ಗೋತ್ರ, ಊರ್ಧ್ವಬಾಹು, ಸವನ, ಅನಘ, ಸತತ ಮತ್ತು ಶುಕ್ರ ಎಂಬ ಏಳು ಜನ ಪ್ರಭಾವಶಾಲಿಗಳಾದ ಪುತ್ರರು ಉತ್ಪನ್ನರಾದರು. ಇವರೆಲ್ಲರೂ ರಾಗದ್ವೇಷಾದಿರಹಿತ ರಾಧ್ದರಿಂದ ಮೂರನೇ ಮನ್ವಂತರದಲ್ಲಿ ಸಪ್ತರ್ಷಿ ಪದವಿಯನ್ನು ಅಲಂಕರಿಸಿದರು. ಬ್ರಹ್ಮದೇವರ ಜ್ಯೇಷ್ಠಪುತ್ರನಾದ ಅಗ್ನಿಯ ಅಭಿಮಾನಿ ದೇವತೆಗೆ ಸ್ವಾಹಾದೇವಿಯಿಂದ ಪಾವಕ, ಪವಮಾನ ಮತ್ತು ಜಲಭಕ್ಷಿಯಾದ ಶುಚಿ ಎಂಬ ಮೂವರು ಮಕ್ಕಳಾದರು. ಈ ಮೂವರು ಅಗ್ನಿಪುತ್ರರಿಗೆ ಒಬ್ಬೊಬ್ಬರಿಗೂ ಹದಿನೈದು ಮಕ್ಕಳಾದರು. ಇವರು ನಲವತ್ತೈದು ಜನರೂ, ಮೂರು ಜನ ಅಗ್ನಿ ಕುಮಾರರೂ ಹಾಗೂ ಸ್ವಯಂ ಅಗ್ನಿದೇವನೂ, ಎಲ್ಲರೂ ಸೇರಿ ನಲ್ವತ್ತೊಂಭತ್ತು ಅಗ್ನಿಗಳೆಂದು ಕರೆಯಲ್ಪಡುತ್ತಾರೆ. ಮೈತ್ರೇಯ, ಬ್ರಹ್ಮದೇವರು ಅಗ್ನಿಷ್ವಾತ್ತರೆಂಬ ಅನಗ್ನಿಕ ಪಿತೃಗಳನ್ನು ಸೃಷ್ಟಿ ಮಾಡಿದರೆಂದು ನಾನು ನಿನಗೆ ಈ ಮೊದಲೇ ತಿಳಿಸಿದ್ದೇನೆ. ಈ ಪಿತೃಗಳಿಗೆ ಸ್ವಧಾ ಎಂಬ ಭಾರ್ಯೆಯಿಂದ ಮೇನಾ ಮತ್ತು ಧಾರಿಣಿ ಎಂಬ ಇಬ್ಬರು ಕನ್ಯೆಯರು ಜನಿಸಿದರು. ಈ ಇಬ್ಬರೂ ಪಿತೃಕುಮಾರಿಯರು ಬ್ರಹ್ಮಜ್ಞಾನ ಸಂಪನ್ನರಾದರು. ತಮ್ಮ ಯೋಗ ಶಕ್ತಿಯಿಂದ ಬ್ರಹ್ಮವಾದಿನಿಯರು ಎಂದು ಸುಪ್ರಸಿದ್ಧರಾದರು. ದಕ್ಷ ಪ್ರಜಾಪತಿಯ ಈದೌಹಿತ್ರ ಸಂತತಿಯವಂಶ ವಿಸ್ತಾರವನ್ನು ಶ್ರದ್ಧೆಯಿಂದ ಕೇಳಿದವರಾರೂ ನಿಃಸಂತಾನರಾಗುವುದಿಲ್ಲ.

## ಉತ್ತಾನಪಾದನ ಮುತ್ತಿನಂಥ ಮಗ

ಸ್ವಾಯಂಭುವ ಮನುವಿಗೆ ಪ್ರಿಯವ್ರತ ಉತ್ತಾನಪಾದ ಎಂಬ ಮಹಾಶೂರರೂ ಧರ್ಮದ ಮರ್ಮವನ್ನು ಬಲ್ಲವರೂ ಆದ ಈರ್ವರು ಮಕ್ಕಳು ಜನಿಸಿದರು. ಅವರಲ್ಲಿ ಉತ್ತಾನಪಾದ ರಾಜನಿಗೆ ಸುರುಚಿ ಎಂಬ ಮೆಚ್ಚಿನ ಮಡದಿಗೆ ಉತ್ತಮ ಎಂಬ ಮಗನು ಹುಟ್ಟಿದನು. ಆ ಮಹಾರಾಜನಿಗೆ ಸುನೀತಿ ಎಂಬ ಹೆಸರಿನ ಪಟ್ಟದರಸಿ ಇದ್ದಳು. ಅವಳ ಮೇಲೆ ಅರಸನಿಗೆ ಪ್ರೇಮವಿರಲಿಲ್ಲ. ಆದುದರಿಂದ ಅವಳ ಮಗನಾದ ಧ್ರುವ ಎಂಬ ಬಾಲಕನನ್ನು ರಾಜನು ತನ್ನ ಎರಡನೇ ಹೆಂಡತಿಯ ಭಯದಿಂದ ಹೆಚ್ಚಾಗಿ ಸೇರುತ್ತಿರಲಿಲ್ಲ.

ಒಂದು ದಿನ ಉತ್ತಾನಪಾದ ರಾಜನ ತೊಡೆಯ ಮೇಲೆ ಉತ್ತಮಕುಮಾರನು ಕುಳಿತದ್ದನ್ನು ನೋಡಿ ಧ್ರುವನು ತಾನೂ ತನ್ನ ತಂದೆಯ ತೊಡೆಯನ್ನು ಏರಬೇಕೆಂದು ಉತ್ಸಾಹದಿಂದ ರಾಜನ ಬಳಿಗೆ ಬಂದನು. ಆದರೆ ಅಲ್ಲಿಯೇ ಅವನ ಪ್ರೇಯಸಿಯಾದ ಸುರುಚಿಯು ಇದ್ದುದರಿಂದ ಮಹಾರಾಜನು ಧ್ರುವನನ್ನು ಕರೆದು ಕೊಳ್ಳಲಿಲ್ಲ. ಆದರೂ ಆ ಮಗುವು ಮಹಾರಾಜನ ತೊಡೆಯನ್ನು ಏರಬೇಕೆಂದು ಮುಂದೆ ಬರಲು ಸುರುಚಿಯು ''ಮಗು, ನನ್ನ ಹೊಟ್ಟೆಯಿಂದ ಹುಟ್ಟದಿರುವ ನೀನು ಈ ರಾಜರ ತೊಡೆಯನ್ನೇರಲು ಏಕೆ ಆಸೆಪಡುವಿ? ನೀನೇನೋ ಈ ಮಹಾರಾಜನ ಮಗನಾದರೂ ನನ್ನ ಹೊಟ್ಟೆಯಿಂದ ಹುಟ್ಟಲಿಲ್ಲ. ನನ್ನ ಹೊಟ್ಟೆಯಿಂದ ಹುಟ್ಟದವರಿಗೆ ಈ ರಾಜರ ಉತ್ಸಂಗವಾಗಲೀ ಮುಂದೆ ಈ ಸಿಂಹಾಸನವಾಗಲೀ ಎಂದಿಗೂ ದೊರಕಲಾರದು. ಇದು ನನ್ನ ಹೊಟ್ಟೆಯಿಂದ ಹುಟ್ಟಿದವರಿಗೆ ಮಾತ್ರ ಮೀಸಲು. ನೀನು ಇದಕ್ಕೇಕೆ ಆಸೆಪಡುವಿ? ನೀನು ನನ್ನ ಸವತಿಯಾದ ಸುನೀತಿಯ ಹೊಟ್ಟೆಯಿಂದ ಹುಟ್ಟಿರುವೆ ಎಂಬುದನ್ನು ನೀನು ತಿಳಿದಿರುವುದಿಲ್ಲವೋ ? ನಿನಗೆ ಇದು ಎಂದಿಗೂ ನಿಲುಕಲಾರದ ಹಣ್ಣು, ನೀನು ವ್ಯರ್ಥವಾಗಿ ಇದನ್ನು ಅಪೇಕ್ಷಿಸಬೇಡ'' ಎಂದು ಹೇಳಿದಳು.

ಮಲತಾಯಿಯ ಈ ಮಾತನ್ನು ಕೇಳಿ ಧ್ರುವನು ಸಿಟ್ಟಿಗೆದ್ದು ಅಲ್ಲಿಂದ ಹೊರಟು ನೇರವಾಗಿ ತನ್ನ ತಾಯಿ ಇದ್ದಲ್ಲಿಗೆ ಬಂದನು. ಆಗ ಸುನೀತಿಯು ಕೋಪದಿಂದ ತುಟಿಗಳು ನಡುಗುತ್ತಿರುವ ಆ ಧ್ರುವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ''ಮಗು, ನಿನಗೆ ಇಷ್ಟು ಸಿಟ್ಟು ಬರಲು ಕಾರಣವೇನು? ನಿನ್ನನ್ನು ಯಾರು ಅಪಮಾನಗೊಳಿಸಿದರು !'' ಎಂದು ಕೇಳಿದಳು. ಆಗ ಆ ಧ್ರುವಕುಮಾರನು ಸುರುಚಿಯು ಮಹಾರಾಜನ ಸಮಕ್ಷ ಗರ್ವದಿಂದ ತನಗೆ ಆಡಿದ ಮಾತುಗಳನ್ನೂ, ಮಾಡಿದ ಅಪಮಾನವನ್ನೂ ನಿಟ್ಟುಸುರು ಬಿಡುತ್ತ ದುಃಖದಿಂದ ತಿಳಿಸಿದನು. ಅದನ್ನು ಕೇಳಿ ದೀನಳಾದ ಸುನೀತಿಯ ಮುಖವು ಬಾಡಿತು. ಆಗ ಅವಳು ನಿಡಿದಾದ ಉಸಿರನ್ನು ಬಿಟ್ಟು ಧ್ರುವನನ್ನು ಕುರಿತು ಹೀಗೆ ನುಡಿದಳು.

''ಮಗು, ಸುರುಚಿಯು ಹೇಳಿದ್ದು ನಿಜವಾಗಿಯೂ ಸತ್ಯವಾಗಿದೆ. ನೀನು ಭಾಗ್ಯಹೀನನಿದ್ದದ್ದೇ ನಿಜ. ಇಲ್ಲದಿದ್ದರೆ ನನ್ನ ಉದರದಿಂದ ಜನಿಸುತ್ತಿರಲಿಲ್ಲ. ಭಾಗ್ಯವಂತರಿಗೆ ಮಲತಾಯಿಯ ಇಂಥ ಮಾತುಗಳನ್ನು ಕೇಳುವ ಪ್ರಸಂಗವೇ ಬರುವುದಿಲ್ಲ. ರಾಜರತೊಡೆ, ರಾಜೈಶ್ವರ್ಯ ಮತ್ತು ರಾಜ ಛತ್ರ ಮುಂತಾದವುಗಳೆಲ್ಲ

ಪುಣ್ಯವಂತರಿಗೆ ಮಾತ್ರ ದೊರಕುತ್ತವೆ. ಪೂರ್ವ ಜನ್ಮದಲ್ಲಿ ಪುಣ್ಯ ಮಾಡಿದ್ದರಿಂದ ಮಹಾರಾಜನಿಗೆ ಸುರುಚಿಯಲ್ಲಿಯೇ ಅಭಿರುಚಿಯು ಇರುತ್ತದೆ. ಮಹಾರಾಜನಿಗೆ ನಾನು ಬರೀ ಪತ್ನಿ ಮಾತ್ರ. ಸುರುಚಿಯು ಪ್ರೇಯಸಿ. ಅಲ್ಪಪುಣ್ಯನಾದ ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ನಿನಗೆ ನಿನ್ನ ತಮ್ಮ ಉತ್ತಮನಿಗೆ ಲಭ್ಯವಾದ ರಾಜಾಂಕ ಮತ್ತು ರಾಜೈಶ್ವರ್ಯಗಳು ದೊರಕಲಾರವು. ಸುರುಚಿಯ ಮಾತಿನಿಂದ ನಿನಗೆ ದುಃಖವಾಗಿದ್ದರೆ ನೀನೂ ಹೆಚ್ಚಿನ ಪುಣ್ಯವನ್ನು ಸಂಪಾದನೆ ಮಾಡಲಿಕ್ಕೆ ಪ್ರಯತ್ನ ಮಾಡು. ನೀನು ಒಳ್ಳೇ ಶೀಲ ಚಾರಿತ್ರ್ಯ ಸಂಪನ್ನನಾಗು, ಮತ್ತು ಧರ್ಮಾನುಷ್ಠಾನವನ್ನು ಮಾಡು, ಎಲ್ಲರೊಡನೆ ಅತ್ಯಂತ ಸ್ನೇಹದಿಂದಇರು. ಸರ್ವಪ್ರಾಣಿಗಳಿಗೂ ಹಿತವನ್ನು ಮಾಡಲಿಕ್ಕಾಗಿ ನಿನ್ನ ದೇಹವನ್ನೇ ಮುಡುಪಾಗಿರಿಸು. ಇಂಥ ಪುಣ್ಯ ಕರ್ಮಗಳನ್ನು ನಿರಂತರವೂ ಮಾಡುತ್ತಲಿದ್ದರೆ ಸಕಲ ವಿಧವಾದ ಸಂಪತ್ತು ಸೌಭಾಗ್ಯಗಳು ತಾವಾಗಿಯೇ ಬರುತ್ತವೆ. ತಗ್ಗು ಇದ್ದ ತಾಣದಲ್ಲಿ ನೀರು ತಾನಾಗಿಯೇ ಹರಿದುಬರುವಂತೆ ಸದ್ಗುಣಗಳಿಂದ ಸತ್ಪಾತ್ರನಾದ ಮನುಷ್ಯನಿದ್ದಲ್ಲಿ ಸಿರಿಸಂಪದ ಸೌಭಾಗ್ಯಗಳು ತಾವಾಗಿಯೇ ಬರುತ್ತವೆ.

ತಾಯಿಯ ಈ ಮಾತನ್ನು ಕೇಳಿ ಧ್ರುವನು ತುಸು ವಿಚಾರಿಸಿ ಶಾಂತ ಸ್ವರದಲ್ಲಿ ನುಡಿದನು, ''ಅಮ್ಮಾ, ನನ್ನನ್ನು ಸಮಾಧಾನಪಡಿಸಲಿಕ್ಕಾಗಿ ನೀನು ಹೇಳಿದ ಮಾತು ಮಲತಾಯಿಯ ಕಟುವಚನದಿಂದ ಒಡೆದುಹೋದ ನನ್ನ ಹೃದಯದಲ್ಲಿ ನಿಲ್ಲಲಾರದು. ಸುರುಚಿಯು ಮಹಾರಾಜನ ಮೆಚ್ಚಿನ ಮಡದಿಯಾಗಲಿ. ಅವಳ ಮಗ ಉತ್ತಮನೇ ಆ ರಾಜ್ಯವನ್ನು ಹೊಂದಲಿ. ನನಗೆ ಇನ್ನೊಬ್ಬರು ಕೊಟ್ಟ ರಾಜ್ಯವಾಗಲೀ, ಐಶ್ವರ್ಯವಾಗಲೀ ಬೇಕಾಗಿಲ್ಲ. ನಿನ್ನ ಹೊಟ್ಟೆಯಿಂದ ಹುಟ್ಟಿದ ನಾನು ಜಗತ್ ಪೂಜ್ಯವಾದ ಸ್ಥಾನವನ್ನು ಪಡೆಯುತ್ತೇನೆ. ತಾಯಿ, ನಿನ್ನ ಹೊಟ್ಟೆಯ ಪುಣ್ಯದಿಂದ ನಾನು ನನ್ನ ತಂದೆಗೂ ದೊರಕಲಾರದಂಥ ದಿವ್ಯಸ್ಥಾನವನ್ನು ನಿನ್ನ ಆದೇಶದಂತೆ ಭಗವದಾರಾಧನೆ ಮಾಡಿ ಪಡೆಯಬೇಕೆಂದು ನಿರ್ಧರಿಸಿದ್ದೇನೆ.''

## ಧ್ರುವನಿಗೆ ಸಪ್ತರ್ಷಿಗಳ ಆದೇಶ, ಉಪದೇಶ

ಹೀಗೆ ತಾಯಿಯನ್ನು ಸಂತೈಸಿ ಅವಳಿಗೆ ನಮಸ್ಕಾರ ಮಾಡಿ ಧ್ರುವನು ಮನೆ ಬಿಟ್ಟು ಹೊರಬಿದ್ದು ತಮ್ಮ ಊರಾದ ರಾಜಧಾನಿಯನ್ನು ದಾಟಿ ನಗರ ಸಮೀಪದ ಒಂದು ಉಪವನಕ್ಕೆ ಬಂದನು. ಅಲ್ಲಿ ಇದಕ್ಕೂ ಮೊದಲೇ ಏಳು ಋಷಿಗಳು ಬಂದು ಕೃಷ್ಣಾಜಿನವನ್ನು ಹಾಸಿದ ಆಸನಗಳ ಮೇಲೆ ಕುಳಿತುಕೊಂಡಿರುವುದು ಧ್ರುವನ ಕಣ್ಣಿಗೆ ಬಿದ್ದಿತು. ಅವನು ಅವರೆಲ್ಲರಿಗೂ ನಮಸ್ಕರಿಸಿ ವಿನಯದಿಂದ ತಲೆ ತಗ್ಗಿಸಿ ಕೈಮುಗಿದು ''ಋಷಿವರ್ಯರೇ, ನಾನು ಉತ್ತಾನಪಾದ ರಾಜನಿಂದ ಸುನೀತಿ ದೇವಿಯಲ್ಲಿ ಜನಿಸಿದ ರಾಜಕುಮಾರನಿದ್ದು ನನ್ನ ಮನಸ್ಸಿಗೆ ನೋವಾದದ್ದರಿಂದ ನನಗೆ ವೈರಾಗ್ಯವು ಉದಿಸಿ ನಿಮ್ಮ ಹತ್ತಿರ ಬಂದಿದ್ದೇನೆ'' ಎಂದು ಹೇಳಿದನು. ಆಗ ಆ ಋಷಿಗಳು ''ಬಾಲಕನೇ, ನೀನಿನ್ನೂ ನಾಲ್ಕೈದು ವರ್ಷದ ಚಿಕ್ಕ ಮಗುವಾಗಿರುವೆ. ನಿಮ್ಮ ತಂದೆತಾಯಿಗಳು ಇನ್ನೂ ಬದುಕಿರುತ್ತಾರೆ. ನಿನಗೆ ಯಾವದೇ ಶಾರೀರಿಕ ರೋಗರುಜಿನಗಳು ಇಲ್ಲ, ಮತ್ತು ಬೇರಾವ

ಮನಸ್ತಾಪಗಳೂ ಇದ್ದಂತೆ ತೋರುವುದಿಲ್ಲ. ನಿನ್ನ ಈ ಅಕಾಲ ವೈರಾಗ್ಯಕ್ಕೆ ಕಾರಣವೇನು?'' ಎಂದು ಕೇಳಿದರು. ಆಗ ಧ್ರುವನು ತನ್ನ ಮಲತಾಯಿಯಾದ ಸುರುಚಿಯು ತನಗೆ ಮಾಡಿದ ಅವಮಾನದ ಕತೆಯನ್ನೆಲ್ಲ ತಿಳಿಸಿ ''ಪೂಜ್ಯರೇ, ನಾನೀಗ ನನ್ನ ತಂದೆಯ ತೊಡೆಯನ್ನಾಗಲಿ ಅಥವ ಪೈತೃಕ ರಾಜ್ಯವನ್ನಾಗಲೀ ಪಡೆಯಲಿಚ್ಛಿಸುವುದಿಲ್ಲ. ಈ ವರೆಗೆ ಯಾರೂ ಹೊಂದದ ಉಚ್ಛ ಸ್ಥಾನವನ್ನು ಹೊಂದಬೇಕೆಂದು ನಾನು ಬಯಸಿದ್ದೇನೆ. ಅದಕ್ಕಾಗಿ ಅಂಥ ಉಪಾಯವು ಏನಾದರೂ ತಮಗೆ ಗೊತ್ತಿದ್ದರೆ ದಯವಿಟ್ಟು ತಿಳಿಸಿರಿ'' ಎಂದು ಧೈರ್ಯದಿಂದ ಬಿನ್ನವಿಸಿದನು. ಅದನ್ನು ಕೇಳಿ ಆ ಋಷಿಮಂಡಲದ ಮುಂದಾಳುಗಳಿಗೆಲ್ಲ ಅತ್ಯಂತ ಆಶ್ಚರ್ಯವಾಯಿತು. ಮಲತಾಯಿಯ ಒಂದು ಬಿರುಸುಮಾತಿನಿಂದ ಮರ್ಮಸ್ಥಳಕ್ಕೆ ಪೆಟ್ಟು ಹತ್ತಿದ ಆ ಕ್ಷತ್ರಿಯ ರಾಜಕುಮಾರನ ಸ್ವಾಭಿಮಾನ, ಧೈರ್ಯ ಮತ್ತು ಅನನ್ಯ ಸಾಧ್ಯವಾದ ಅತ್ಯುಚ್ಛ ಸ್ಥಾನವನ್ನು ಪಡೆಯಲು ಆ ಶಿಶುವಿನ ಅಗಮ್ಯ ಉತ್ಸಾಹಗಳನ್ನು ಕಂಡು ಅಚ್ಚರಿಗೊಂಡರು. ಕ್ಷತ್ರಿಯ ಜಾತಿಯ ಎಳೆ ಮಕ್ಕಳಲ್ಲಿಯೂ ಕೂಡ ಎಂಥ ಛಲ ಮತ್ತು ಸ್ವಾಭಿಮಾನಗಳಿರುತ್ತವೆ ಎಂಬುದನ್ನು ಕಂಡು ಅವರಿಗೆ ಕೌತುಕವೆನಿಸಿತು. ಆ ಎಳೆ ಕಂದಮ್ಮನ ಧೈರ್ಯೋತ್ಸಾಹಗಳನ್ನೂ ಮತ್ತು ಅವನು ಪಟ್ಟಪಾಡನ್ನೂ ಹಾಗೂ ಅವನ ದೃಢ ನಿರ್ಧಾರವನ್ನೂ ಕೇಳಿ ಕರುಣಾಕ್ರಾಂತರಾದ ಮರೀಚಿ ಋಷಿಗಳು ''ಗೋವಿಂದನನ್ನು ಆರಾಧನೆ ಮಾಡದೇ ಶ್ರೇಷ್ಠ ಸ್ಥಾನವು ದೊರೆಯಲಾರದು. ಆದ್ದರಿಂದ ಆ ಪರಮಾತ್ಮನನ್ನೇ ನೀನು ಆರಾಧಿಸು'' ಎಂದು ಹೇಳಿದರು.

ಅದರಂತೆ ''ಹರಿ ತುಷ್ಟನಾದವನಿಗೆ ಶ್ರೇಷ್ಠ ಸ್ಥಾನವು ದೊರೆಯಲಾರದು'' ಎಂದು ಅತ್ರಿ ಋಷಿಗಳೂ ''ನಿನಗೆ ಸರ್ವೋಚ್ಚ ಸ್ಥಾನವು ಬೇಕಾದರೆ ಸರ್ವಾಧಾರನಾದ ಗೋವಿಂದನನ್ನೇ ಪೂಜಿಸು'' ಎಂದು ಅಂಗೀರಸರೂ, ''ಭಕ್ತರಿಗೆ ಮುಕ್ತಿಯನ್ನು ನೀಡುವ ಮುಕುಂದನನ್ನು ಆರಾಧಿಸಿದರೆ ಉಳಿದೆಲ್ಲ ಸ್ಥಾನಮಾನಗಳು ತಾವಾಗಿಯೇ ದೊರಕುವವು'' ಎಂದು ಪುಲಸ್ತ್ಯರೂ, ''ಶಚೀಪತಿಯು ಯಾವ ಜಗದೊಡೆಯನನ್ನು ಆರಾಧಿಸಿ ಇಂದ್ರ ಪದವಿಯನ್ನು ಹೊಂದಿದನೋ ಅಂಥ ಶ್ರೀ ವಿಷ್ಣುವನ್ನೇ ಆರಾಧಿಸು'' ಎಂದು ಪುಲಹ ಮುನಿಗಳೂ, ''ಯಜ್ಞ ಪುರುಷನೂ ಯೋಗೇಶ್ವರನೂ ಆದ ಜನಾರ್ದನನು ಪ್ರಸನ್ನನಾದ ಬಳಿಕ ಯಾವುದು ತಾನೇ ದೊರಕಲಿಕ್ಕಿಲ್ಲ!'' ಎಂದು ಕ್ರತು ಋಷಿಗಳೂ, ''ಶ್ರೀಹರಿಯನ್ನು ನೀನು ಭಕ್ತಿಯಿಂದ ಆರಾಧಿಸಿದರೆ ನೀನು ಮನಸ್ಸಿನಲ್ಲಿ ಇಚ್ಛಿಸಿದ್ದೆಲ್ಲವೂ ದೊರಕುತ್ತದೆ. ಈ ಮೂರು ಲೋಕಗಳಲ್ಲಿಯ ಉತ್ತಮೋತ್ತಮ ಸ್ಥಾನವು ದೊರಕುವುದೆಂದು ಬೇರೆ ಹೇಳಬೇಕೇನು'' ಎಂದು ವಸಿಷ್ಠ ಮಹರ್ಷಿಗಳೂ ನುಡಿದರು.

ಹೀಗೆ ಶ್ರೀ ಹರಿಯ ಆರಾಧನೆಯನ್ನು ಮಾಡಬೇಕೆಂದು ಏಕ ಕಂಠದಿಂದ ಸೂಚನೆ ನೀಡಿದ ಆ ಏಳೂ ಜನ ಮಹರ್ಷಿಗಳಿಗೆ ಆ ಸುನೀತಿಯ ಕುಮಾರನು ಮತ್ತೊಮ್ಮೆ ನಮಸ್ಕರಿಸಿ ನುಡಿದ ''ಸ್ವಾಮಿ, ತಾವೆಲ್ಲರೂ ನನ್ನ ಇಚ್ಛಾ ಪೂರ್ತಿಯಾಗಿ ಶ್ರೀ ವಿಷ್ಣುವಿನ ಆರಾಧನೆಯನ್ನು ಮಾಡಲಿಕ್ಕೆ ಹೇಳಿದಿರಿ. ನಾನು ಆ ಶ್ರೀ ಹರಿಯ ಆರಾಧನೆಯನ್ನು ಹೇಗೆ ಮಾಡಬೇಕು ? ಅವನು ಸಂತೋಷವಾಗಲು ಯಾವ ಮಂತ್ರವನ್ನು ಜಪಿಸಬೇಕು ? ಇದನ್ನೆಲ್ಲ ದಯವಿಟ್ಟು ತಾವು ನನಗೆ ಹೇಳಿಕೊಡಬೇಕು''. ಆ ಚಿಕ್ಕ ಮಗುವಿನ ಈ ಮಾತನ್ನು

ಕೇಳಿ ಸಪ್ತ ಋಷಿಗಳು ಪ್ರಸನ್ನರಾಗಿ ಅವನಿಗೆ 'ಓಂ ನಮೋ ಭಗವತೇ ವಾಸುದೇವಾಯ'' ಎಂಬ ವಾಸುದೇವ ಮಂತ್ರವನ್ನು ಉಪದೇಶ ಮಾಡಿದರು. ಮತ್ತು ಆ ಮಂತ್ರ ಜಪದ ವಿಧಿ ವಿಧಾನಗಳನ್ನೆಲ್ಲ ಸರಿಯಾಗಿ ತಿಳಿಸಿ ಕೊಟ್ಟು ''ಧ್ರುವಕುಮಾರ, ಹಿಂದೆ ನಿನ್ನ ಮುತ್ತಾತನಾದ ಸ್ವಾಯಂಭುವ ಮನವು ಈ ವಾಸುದೇವ ಮಂತ್ರವನ್ನು ಜಪಮಾಡಿ ಪರಮಾತ್ಮನನ್ನು ಪ್ರಸನ್ನೀಕರಿಸಿಕೊಂಡಿದ್ದನು. ಅದರಂತೆ ನೀನಾದರೂ ಏಕಾಗ್ರಚಿತ್ತದಿಂದ ಈ ಮಂತ್ರದ ಜಪಾನುಷ್ಠಾನವನ್ನು ಮಾಡಿ ಆ ಜಗದೀಶ್ವರನನ್ನು ಆರಾಧಿಸಿ ಒಲಿಸಿಕೋ'' ಎಂದು ಉಪದೇಶಗೈದರು. ಸಪ್ತರ್ಷಿಗಳು ಹೇಳಿದ ವಾಸುದೇವ ಮಂತ್ರದ ಜಪಾನುಷ್ಠಾನದ ವಿಧಿನಿಯಮಗಳನ್ನೆಲ್ಲ ಕೇಳಿಕೊಂಡು, ಆ ಏಳೂ ಜನ ಋಷಿಗಳಿಗೂ ಸಾಷ್ಟಾಂಗ ವಂದನೆಯನ್ನು ಮಾಡಿ, ಆ ಋಷಿಗಳ ಆಶೀರ್ವಾದದಿಂದ ತನ್ನ ಕಾರ್ಯವು ಆದಂತೆಯೇ ಎಂದು ಭಾವಿಸಿ ಆ ಧ್ರುವ ಕಂದನು ಮುನ್ನಡೆದನು. ಅವನು ಹಾಗೆಯೇ ಮುಂದೆ ಮುಂದೆ ನಡೆದು ಬಂದಾಗ ಯಮುನಾನದಿಯ ದಂಡೆಯ ಮೇಲೆ ಮಧುವನವೆಂಬ ಪುಣ್ಯಕ್ಷೇತ್ರವಿದ್ದಿತು. ಪೂರ್ವಕಾಲದಲ್ಲಿ ಮಧು ಎಂಬ ಬಲಿಷ್ಠನಾದ ದೈತ್ಯನ ಮಗನಾದ ಲವಣಾಸುರನನ್ನು ಶ್ರೀರಾಮಚಂದ್ರನ ಸೋದರನಾದ ಶತ್ರುಘ್ನನು ಕೊಂದು ಮಧುರಾ ಎಂಬ ನಗರವನ್ನು ನಿರ್ಮಿಸಿದ್ದನು. ಅಲ್ಲಿ ಸ್ವಯಂ ಶ್ರೀ ರಾಮಚಂದ್ರನು ನಿರಂತರ ಸನ್ನಿಹಿತನಾದ್ದರಿಂದ ಅದೊಂದು ದೊಡ್ಡ ತೀರ್ಥಕ್ಷೇತ್ರವೆಂದು ಸುಪ್ರಸಿದ್ಧವಾಯಿತು. ಎಲ್ಲ ಪಾಪವನ್ನೂ ಪರಿಹರಿಸತಕ್ಕ ಯಮುನಾತೀರದ ಈ ಪುಣ್ಯ ತೀರ್ಥದಲ್ಲಿ ನಿಂತು ಬಾಲಭಕ್ತನಾದ ಧ್ರುವನು ಮರೀಚಿ, ವಸಿಷ್ಠಾದಿ ಋಷಿಗಳು ತನಗೆ ಉಪದೇಶ ಮಾಡಿದಂತೆ ಶ್ರೀ ಹರಿಯನ್ನು ಕುರಿತು ತಪಸ್ಸು ಮಾಡತೊಡಗಿದನು. ಅನನ್ಯ ಭಾವದಿಂದ ಆ ಕೂಸು ಪರಮಾತ್ಮನನ್ನು ಧ್ಯಾನ ಮಾಡತೊಡಗಿದಾಗ ಸುಪ್ರಸನ್ನನಾದ ಶ್ರೀ ವಿಷ್ಣುವು ಅವನ ಹೃದಯದಲ್ಲಿ ಸನ್ನಿಹಿತನಾದನು. ಆದ್ದರಿಂದ ತನ್ನ ಪಾದದ ಹೆಬ್ಬೆರಳಿನಿಂದ ನೆಲವನ್ನು ಅಮುಕಿ ನಿಂತು ಹಗಲಿರುಳು ಜಪಧ್ಯಾನಾಸಕ್ತನಾದ ಆ ಧ್ರುವನ ದೇಹಭಾರದಿಂದ ಭೂಮಿಯು ನಡುಗಿಹೋಯಿತು.

## ಧ್ರುವನ ಉಗ್ರ ತಪಸ್ಸು ಪರಮಾತ್ಮನ ಸಾಕ್ಷಾತ್ಕಾರ

ಅವನ ಅತ್ಯುಗ್ರವಾದ ತಪಸ್ಸಿನಿಂದ ನದೀ ಸಮುದ್ರಗಳು ಪ್ರಕ್ಷುಬ್ಧವಾದವು. ದೇವತೆಗಳು ದೇವೇಂದ್ರನ ಜೊತೆಗೆ ಗುಪ್ತ ಆಲೋಚನೆಯನ್ನು ಮಾಡಿ ಧ್ರುವನ ತಪಸ್ಸನ್ನು ಕೆಡಿಸಲು ಬಂದರು. ಕೂಷ್ಮಾಂಡ ಎಂಬ ಉಪದೇವತೆಗಳು ಬಗೆ ಬಗೆಯ ಬೇರೆ ಬೇರೆ ರೂಪಗಳನ್ನು ಧರಿಸಿ ಧ್ರುವನ ಎದುರು ಸುಳಿದು ಸಂಚರಿಸಿ ಅವನ ತಪಃಸ್ಸಮಾಧಿಯನ್ನು ಭಂಗಗೊಳಿಸಲಿಕ್ಕೆ ಪ್ರಯತ್ನವನ್ನು ಮಾಡಿದರು. ಅವರಲ್ಲಿ ಒಬ್ಬನು ಮಾಯೆಯಿಂದ ಸುನೀತಿಯ ವೇಷವನ್ನು ತೆಗೆದುಕೊಂಡು ಕಂಣೀರುದುರುಸುತ್ತ ಧ್ರುವನ ಎದುರು ನಿಂತಳು. ''ಅಯ್ಯೋ ಮಗು, ನನ್ನನ್ನು ಬಿಟ್ಟು ಈ ಕಾಡಿನಲ್ಲಿ ಒಬ್ಬಂಟಿಗನಾಗಿ ಕುಳಿತು ಇದನ್ನೇನು ನಡಿಸಿದೆ! ಈ ಘೋರ ತಪಸ್ಸಿನಿಂದ ನಿನ್ನ ಶರೀರವು ಸೊರಗಿ ನೀನು ಕೊರಗಿ ಕಟ್ಟಿಗೆಯಂತಾಗಿರುವೆ. ಬಹಳ ದೇವರಿಗೆ ಹರಕೆ ಹೊತ್ತು ನಿನ್ನನ್ನು ಹೆತ್ತಿದ್ದೇನೆ. ಸವತಿಯ ಕಾಟದಿಂದ ಮತ್ತು ಪೀಡೆಯಿಂದ ನೊಂದು ಬೆಂದು

ಒಸವಳಿದ ನನಗೆ ನಿನ್ನ ಹೊರತು ಬೇರೆ ಯಾರು ದಿಕ್ಕು! ಅನಾಥಳಾದ ನನ್ನನ್ನು ನೀನು ಕೂಡ ಬಿಟ್ಟು ಬಂದರೆ ಏಕಾಕಿನಿಯಾದ ನನ್ನ ಗತಿ ಏನು? ಐದು ವರ್ಷದ ನೀನೆಲ್ಲಿ? ಈ ಘೋರ ತಪಸ್ಸೆಲ್ಲಿ? ಈ ಆಡುವ ವಯಸ್ಸಿನಲ್ಲಿ ಉಗ್ರತಪಸ್ಸನ್ನು ಪ್ರಾರಂಭಿಸಿ ನೀನು ಇಷ್ಟು ಕಷ್ಟ ಪಡುವುದನ್ನು ನಾನೆಂತು ನೋಡಲಿ! ತಾಯಿ ತಂದೆಗಳಿಗೆ ಪ್ರೀತಿಯನ್ನುಂಟು ಮಾಡುವುದೇ ಮಕ್ಕಳ ಮುಖ್ಯ ಧರ್ಮವಾಗಿರುತ್ತದೆ. ನನ್ನನ್ನು ದುಃಖ ಪಡಿಸಿ ನೀನು ಈ ತಪಸ್ಸನ್ನು ಮುಂದುವರಿಸಿದರೆ ನಿನಗೆ ಪುಣ್ಯವು ಬರದೆ ಪಾಪವೇ ಬರುತ್ತದೆ ಆದ್ದರಿಂದ ಈ ತಪಸ್ಸನ್ನು ಇಲ್ಲಿಗೆ ನಿಲ್ಲಿಸಿ ಮನೆಗೆ ಬಾ. ನೀನು ದಾರುಣವಾದ ತಪೋನುಷ್ಠಾನದಿಂದ ನಿವೃತ್ತನಾಗದಿದ್ದರೆ ನಾನು ನಿನ್ನ ಕಣ್ಣೆದುರೇ ಪ್ರಾಣ ಬಿಡುತ್ತೇನೆ'' ಎಂದು ಒದರುತ್ತ, ಕಣ್ಣೀರಿನ ಕೋಡಿ ಹರಿಸುತ್ತ ನಿಂತುಕೊಂಡಿರುವ ತಾಯಿ ಸುನೀತಿಯನ್ನು ನೋಡಿದರೂ ಕೂಡ ಶ್ರೀ ಹರಿಯ ಧ್ಯಾನದಲ್ಲಿಯೇ ಏಕಚಿತ್ತನಾದ ಧ್ರುವನು ಅತ್ತ ಗಮನ ಕೊಡದೇ ನೋಡಿಯೂ ನೋಡದಂತೆ ಕುಳಿತುಕೊಂಡನು.

''ಅಯ್ಯೋ ಧ್ರುವ! ಭಯಂಕರರಾದ ರಾಕ್ಷಸರು ಈ ಘೋರಾರಣ್ಯದಲ್ಲಿ ಅನೇಕ ಶಸ್ತ್ರಾಸ್ತ್ರಗಳನ್ನು ಎತ್ತಿಕೊಂಡು ನಿನ್ನನ್ನು ಹೊಡೆಯಲಿಕ್ಕೆ ಧಾವಿಸಿ ಬರುತ್ತಲಿದ್ದಾರೆ. ಆದ್ದರಿಂದ ಇಲ್ಲಿಂದ ಬೇಗನೆ ಹೊರಟು ಹೋಗು'' ಎಂದು ಒದರಿ ಚೀರಿ ಹೇಳುತ್ತ ಮಾಯಾಸುನೀತಿಯು ಅಲ್ಲಿಂದ ಕಾಲ್ತೆಗೆದಳು. ಆ ಬಳಿಕ ಉರಿಯ ತೆರೆಗಳನ್ನು ಚಿಮ್ಮಿಸುತ್ತ ಉಗ್ರ ಶಸ್ತ್ರಾಸ್ತ್ರಗಳನ್ನು ತಿರುವುತ್ತಾ ಅನೇಕ ರಾಕ್ಷಸರು ಧ್ರುವನ ಎದುರು ಪ್ರಕಟರಾದರು. ಅವರು ವಿಕಾರವಾಗಿ ಕೂಗುತ್ತ ಹದನವಾದ ಬಿಲ್ಲು ಬಾಣಗಳನ್ನು ಮಸೆಯುತ್ತ ''ಹಿಡಿಯಿರಿ, ಬಡಿಯಿರಿ, ಕೊಲ್ಲಿರಿ, ಆ ಹುಡುಗನನ್ನು ಕೊಂದು ತಿಂದುಬಿಡಿರಿ'' ಎಂದು ಒದರುತ್ತ ಸಿಂಹ, ಒಂಟೆ, ಮೊಸಳೆಗಳಂತೆ ಬಾಯಿತೆರೆದು ಬೆದರಿಸುತ್ತಿದ್ದರು. ಹುಲಿ ಹಾವುಗಳಾಗಿ ಹೆದರಿಸುತ್ತಿದ್ದರು. ಬಾಲಭಕ್ತನಾದ ಆ ಧ್ರುವನನ್ನು ತಪಸ್ಸಿನಿಂದ ಓಂದಿರುಗಿಸಬೇಕೆಂದು ದೇವತೆಗಳೂ ದೈತ್ಯರೂ ಕೂಡಿ ಶತ ಪ್ರಯತ್ನ ಮಾಡಿದರೂ ಸಾಧ್ಯವಾಗಲಿಲ್ಲ. ಶ್ರೀ ವಿಷ್ಣುವಿನ ಪಾದಾರವಿಂದದಲ್ಲಿ ತದೇಕ ತಾನ ಲೀನ ಮಾನಸನಾಗಿ ಧ್ಯಾನ ಮಾಡುತ್ತ ಕುಳಿತ ಆ ಧ್ರುವ ಶಿಶುವು ತನ್ನ ಹೃದಯ ಪೀಠದಲ್ಲಿ ವಿರಾಜಿಸುವ ವಾಸನಾಮಯವಾದ ಶ್ರೀ ಮನ್ನಾರಾಯಣನ ಮೂರ್ತಿಯ ಹೊರತಾಗಿ ಬೇರಾವುದನ್ನು ಕಣ್ಣೆತ್ತಿ ನೋಡುತ್ತಿರಲಿಲ್ಲ. ಆದರಿಂದ ದೇವತೆಗಳು ಸೃಷ್ಟಿಸಿದ ಮಾಯಾ ಚೇಷ್ಟೆಗಳೆಲ್ಲವೂ ತಮ್ಮಷ್ಟಕ್ಕೆ ತಾವೇ ಕರಗಿ ಹೋದವು. ಆದರಿಂದ ದೇವತೆಗಳು ಮತ್ತಿಷ್ಟು ಗಾಬರಿಯಾಗಿ ಶ್ರೀ ಹರಿಗೆ ಶರಣು ಹೋದರು.

''ಜಗತ್ಪ್ರಭುವಾದ ಪರಮಾತ್ಮನೇ, ವತ್ಸ ಧ್ರುವನ ಉಗ್ರ ತಪಸ್ಸಿನಿಂದ ಉದ್ವಿಗ್ನರಾಗಿ ನಾವು ನಿನಗೆ ಶರಣು ಬಂದಿದ್ದೇವೆ. ದಿನ ದಿನಕ್ಕೂ ಆ ಕೂಸಿನ ತಪಸ್ಸು ಅತ್ಯುಗ್ರವಾಗತೊಡಗಿದೆ. ಅವನೇನು ಇಂದ್ರನಾಗಬೇಕೆಂದಿರುವನೋ! ಸೂರ್ಯ ಸಿಂಹಾಸನವನ್ನು ಏರ ಬಯಸುವನೋ? ಅಥವಾ ಕುಬೇರನ ಕೊಶಾಧ್ಯಕ್ಷನಾಗಬೇಕೆಂದು ಇಚ್ಛಿಸುವನೋ? ಅಥವಾ ವರುಣ ಸಾಮ್ರಾಜ್ಯವನ್ನು

ಅಪೇಕ್ಷಿಸುವನೋ ಅಥವ ಚಂದ್ರ ಪದವನ್ನು ಇಚ್ಛಿಸುವನೋ ? ನಾವಂತೂ ಅವನ ಈ ಘೋರ ತಪಸ್ಸಿನಿಂದ ಕಂಗೆಟ್ಟಿದ್ದೇವೆ. ಸ್ವಾಮಿ ನೀನು ಆ ಧ್ರುವನನ್ನು ಈ ತಪಸ್ಸಿನಿಂದ ಹೇಗಾದರೂ ಮಾಡಿ ಹಿಂದಿರುಗಿಸು.'' ಎಂದು ಪ್ರಾರ್ಥಿಸಿಕೊಂಡರು.

ಆಗ ಪರಮಾತ್ಮನು ನಕ್ಕು ''ಧ್ರುವನಿಗೆ ನಿಮ್ಮ ಇಂದ್ರ ಪದವಿಯೂ ಬೇಡ, ಚಂದ್ರ ಪದವಿಯೂ ಬೇಡ, ಅವನಿಗೆ ಏನು ಬೇಕೋ ಅದನ್ನು ನಾನು ಅವನಿಗೆ ಕೊಟ್ಟು ಅವನನ್ನು ಶಾಂತಪಡಿಸುತ್ತೇನೆ. ನೀವು ನಿಶ್ಚಿಂತರಾಗಿ ನಿಮ್ಮ ಸ್ಥಾನಗಳಿಗೆ ಹೋಗಿ'' ಎಂದು ಹೇಳಿ ಆ ದೇವತೆಗಳನ್ನೆಲ್ಲ ಕಳಿಸಿಕೊಟ್ಟು ಆ ಶ್ರೀ ಹರಿಯು ಧ್ರುವನೆದುರು ಶಂಖ, ಚಕ್ರ, ಗದಾ ಪದ್ಮ ದಾರಿಯಾಗಿ ಪ್ರತ್ಯಕ್ಷನಾದನು.

''ಉತ್ತಾನಪಾದಕುಮಾರ, ನಿನಗೆ ಕಲ್ಯಾಣವಾಗಲಿ. ನಿನ್ನ ತಪಸ್ಸಿನಿಂದ ಸಂತುಷ್ಟನಾದ ನಾನು ನಿನಗೆ ವರವನ್ನು ನೀಡಬೇಕೆಂದು ಬಂದಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು'' ಎಂದು ದೇವಾಧಿದೇವನು ಧ್ರುವನಿಗೆ ಹೇಳಿದನು.

ತನ್ನ ಇಷ್ಟದೇವನ ಈ ದಿವ್ಯಧ್ವನಿಯನ್ನು ಕೇಳಿ ಆ ಧ್ರುವಕುಮಾರನು ಪಕ್ಕನೇ ಕಣ್ಣು ತೆರೆದು ನೋಡಿದನು. ಅವನ ಹೃದಯ ಮಂಟಪದಲ್ಲಿ ಇಷ್ಟು ದಿನ ತಾನು ಧ್ಯಾನ ಮಾಡುತ್ತಲಿದ್ದ ಭಗವಂತನ ಮೂರ್ತಿಯೇ ಶಂಖ, ಚಕ್ರ, ಗದಾ, ಪದ್ಮ ಧಾರಿಯಾಗಿ ತಲೆಯ ಮೇಲೆ ಕಿರೀಟವಿರಿಸಿಕೊಂಡು ಕಣ್ಣೆದುರು ಸಾಕ್ಷಾತ್ತಾಗಿ ಕಂಗೊಳಿಸುತ್ತಲಿತ್ತು. ಆಗ ಧ್ರುವನ ಮೈಮೇಲಿನ ಕೂದಲುಗಳು ನೆಟ್ಟಗಾದವು, ಅವನು ಆನಂದದಿಂದ ಮತ್ತು ಭಯದಿಂದ ಕಂಪಿಸುತ್ತ ಆ ಸ್ವಾಮಿಗೆ ನಮಸ್ಕಾರ ಮಾಡಬೇಕೆಂದು ನೆಲದಮೇಲೆ ಅಡ್ಡ ಬಿದ್ದನು. ದೇವಾಧಿದೇವನಾದ ಪರಮೇಶ್ವರನನ್ನು ಏನೆಂದು ಸ್ತೋತ್ರ ಮಾಡಬೇಕೋ ಅವನಿಗೆ ತಿಳಿಯದಾಯಿತು. ಆದುದರಿಂದ ಅವನು ಭಯಭಕ್ತಿಗಳಿಂದ ಬಾಗಿ ಆ ಭಗವಂತನಿಗೆ ಶರಣು ಹೋಗಿ ''ಸ್ವಾಮಿ, ನಿನ್ನನ್ನು ಸ್ತುತಿಸ ಹೊರಟ ಬ್ರಹ್ಮಾದಿಗಳೂ ಮುಗ್ಗುರಿಸುವುದುಂಟು. ಅಂಥ ನಿನ್ನನ್ನು ನಾನು ಹೇಗೆ ಸ್ತುತಿಸಲಿ ! ಆದ್ದರಿಂದ ಬಾಲಕನಾದ ನನಗೆ ನಿನ್ನನ್ನು ಸ್ತೋತ್ರ ಮಾಡಲಿಕ್ಕೆ ಬೇಕಾಗುವ ಬುದ್ಧಿಯನ್ನು, ವಾಣಿಯನ್ನೂ ಕೊಟ್ಟು ಕಾಪಾಡು'' ಎಂದು ಕೇಳಿಕೊಂಡನು. ಆಗ ಶ್ರೀ ಮನ್ನಾರಾಯಣನು ಆ ಎಳೆ ಕೂಸಿನ ಮುಗ್ಧ ಸ್ವಭಾವವನ್ನು ಕಂಡು ಸುಪ್ರಸನ್ನನಾಗಿ ತನ್ನ ಶಂಖದ ತುದಿಯಿಂದ ಧ್ರುವನನ್ನು ಸ್ಪರ್ಶ ಮಾಡಿದನು. ಭಗವಂತನ ಕೈಯಲ್ಲಿ ಎಸೆಯುವ ಲಕ್ಷ್ಮೀ ಸನ್ನಿಧಾನೋಪೇತವಾದ ಆ ಶಂಖದ ಸ್ಪರ್ಶಮಾತ್ರದಿಂದಲೇ ಧ್ರುವನಿಗೆ ದಿವ್ಯಜ್ಞಾನೋದಯವಾಗಿ ತತ್‌ಕ್ಷಣದಲ್ಲಿಯೇ ಹೊಸಸ್ಫೂರ್ತಿಯು ಹೊಮ್ಮಿ ಪ್ರಗಲ್ಭವಾಣಿಯಿಂದ ಆ ಪರಮಾತ್ಮನನ್ನು ಸ್ತೋತ್ರ ಮಾಡಿದನು.

**''ಬೃಹತ್ವಾತ್ ಬೃಂಹಣತ್ವಾಚ್ಚ ಯದ್ರೂಪಂ ಬ್ರಹ್ಮಸಂಜ್ಞಿತಂ ।**
**ತಸ್ಮೈ ನಮಸ್ತೇ ಸರ್ವಾತ್ಮನ್ ಯೋಗಿಚಿಂತ್ಯಾಽವಿಕಾರಿಣೇ ।**

ಸರ್ವತ್ರ ವ್ಯಾಪ್ತನೂ ಸರ್ವಗುಣ ಪರಿಪೂರ್ಣನೂ ಸರ್ವೋತ್ತಮನೂ ಆದುದರಿಂದ ನಿನಗೆ ಬ್ರಹ್ಮ ಎಂದು ಹೆಸರು. ಇಂಥ ನಿರುಪಪದ ಬ್ರಹ್ಮ ಶಬ್ದವಾಚ್ಯನೂ

ಯೋಗಿಗಮ್ಯನೂ ವಿಕಾರರಹಿತನೂ ಆದ ಪರಮಾತ್ಮನೇ, ನಿನಗೆ ನಮಸ್ಕಾರವಿರಲಿ. ವೇದಗಳಲ್ಲಿ ಸಹಸ್ರಶೀರ್ಷ, ಪುರುಷ ಎಂದು ವರ್ಣನೆ ಮಾಡಿದ ವಿಶ್ವವ್ಯಾಪಿಯಾದ ವಿರಾಟಪುರುಷನು ನೀನೇ ಇರುತ್ತೀ. ನಿನ್ನಿಂದಲೇ ಋಗ್ವೇದ, ಯಜುರ್ವೇದ, ಸಾಮವೇದ ಮುಂತಾದ ಶಬ್ದ ಪ್ರಪಂಚವೂ ಮತ್ತು ಬ್ರಾಹ್ಮಣಾದಿ-ವರ್ಣಗಳೂ ಪಂಚಮಹಾಭೂತಗಳೂ ಮತ್ತು ಎಲ್ಲ ಪಶು ಪಕ್ಷ್ಯಾದಿ ಪ್ರಾಣಿಗಳೂ ಉತ್ಪನ್ನವಾಗಿರುತ್ತವೆ. ನೀನು ಎಲ್ಲರ ಹೃದಯಗುಹಾವಾಸಿ ಯಾದುದರಿಂದ ನನ್ನ ಮನೋರಥವನ್ನೂ ಕೂಡ ಚೆನ್ನಾಗಿ ತಿಳಿದಿರುತ್ತೀ. ಸ್ವಾಮಿ, ನಿನ್ನ ದರ್ಶನವಾದುದರಿಂದ ನನ್ನ ಇಚ್ಛಾಪೂರ್ತಿಯಾದಂತಾಯಿತು. ನಾನು ಮಾಡಿದ ತಪಸ್ಸು ಸಾರ್ಥಕವಾಯಿತು. ನನಗೆ ಯಾವ ಆಶೆಯೂ ಉಳಿದಿಲ್ಲ'' ಎಂದು ಮುಂತಾಗಿ ಭಗವಂತನನ್ನು ಸ್ತೋತ್ರ ಮಾಡಿ ನಿಸ್ಪೃಹ ಭಾವವನ್ನು ವ್ಯಕ್ತ ಮಾಡಿದನು.

## ಹರಿ 'ಬೇಡು' ಎಂದ. ಧ್ರುವ 'ಬೇಡ' ಎಂದ.

ಆಗ ಹರಿಯು ''ರಾಜಕುಮಾರ, ನನ್ನ ದರ್ಶನವು ವ್ಯರ್ಥವಾಗಬಾರದು. ಆದ್ದರಿಂದ ನಿನ್ನ ಮನಸ್ಸಿನಲ್ಲಿದ್ದ ವರವನ್ನು ಬೇಡು. ನನ್ನನ್ನು ನೋಡಿದ ಬಳಿಕ ಮಾನವರ ಯಾವ ಆಶಾಕಾಂಕ್ಷೆಗಳೂ ಅತೃಪ್ತವಾಗಿ ಉಳಿಯುವುದಿಲ್ಲ'' ಎಂದು ಅಪ್ಪಣೆ ಇತ್ತನು.

ಆಗ ಧ್ರುವನು ಗದ್ಗದಿತ ಕಂಠನಾಗಿ ''ಪ್ರಭೋ, ನಿನ್ನ ದರ್ಶನವಾದ ಬಳಿಕ ನಿಜವಾಗಿಯೂ ನನಗೆ ಯಾವ ಅಪೇಕ್ಷೆಯೂ ಉಳಿದಿಲ್ಲ ಆದರೆ ನಿನ್ನ ಆಜ್ಞೆಯಾದುದರಿಂದ ನನ್ನ ಮನಸ್ಸಿನಲ್ಲಿ ಮೊದಲು ಮೂಡಿದ ಅಭಿಲಾಷೆಯನ್ನು ಸರ್ವಜ್ಞನಾದ ನಿನ್ನೆದುರು ಇರಿಸುತ್ತೇನೆ. ನನ್ನ ಮಲತಾಯಿಯು ತನ್ನ ಹೊಟ್ಟೆಯಿಂದ ಹುಟ್ಟದಿರುವ ನನಗೆ ನಮ್ಮ ತಂದೆಯ ತೊಡೆಯಾಗಲೀ ರಾಜ್ಯಾಧಿಕಾರವಾಗಲೀ ದೊರೆಯಲಾರದೆಂದು ಗರ್ವದಿಂದ ನುಡಿದಿದ್ದಳು. ಆದುದರಿಂದ ಈ ಎಲ್ಲ ಸ್ಥಾನಗಳಿಗಿಂತ ಅತ್ಯುತ್ತಮವಾದ ಒಂದು ದಿವ್ಯ ಪದವನ್ನು ನಿನ್ನ ಪ್ರಸಾದದಿಂದ ಪಡೆಯಬೇಕೆಂದು ನಾನು ಬಯಸುತ್ತೇನೆ.'' ಎಂದು ಬೇಡಿಕೊಂಡನು. ಆಗ ಹರಿಯು ''ಧ್ರುವ, ನೀನು ಬೇಡಿದ ಸರ್ವೋತ್ತಮವಾದ ಸ್ಥಾನವನ್ನು ನಿನಗೆ ದಯಪಾಲಿಸುತ್ತೇನೆ. ಪೂರ್ವ ಜನ್ಮದಲ್ಲಿಯಾದರೂ ನೀನು ಬ್ರಾಹ್ಮಣ ಪುತ್ರನಾಗಿ ಏಕಾಗ್ರ ಮನಸ್ಸಿನಿಂದ ನನ್ನನ್ನು ಆರಾಧಿಸಿದ್ದಿ. ತಾಯಿತಂದೆಗಳ ನಿರಂತರ ಸೇವಾ ಶುಶ್ರೂಷೆಗಳನ್ನು ಮಾಡಿ ವೇದೋಕ್ತ ಧರ್ಮಗಳನ್ನೆಲ್ಲ ಮಾಡಿ ಅನೂಚಾನವಾಗಿ ಪಾಲನಮಾಡುತ್ತಿದ್ದಿ. ಆಗ ಕೆಲವು ಕಾಲ ಕಳೆದ ಬಳಿಕ ನಿನಗೆ ಓರ್ವ ತರುಣ ರಾಜಕುಮಾರನ ಸಂಗಡ ಸ್ನೇಹ ಸಂಬಂಧವು ಬೆಳೆಯಿತು. ನಿನ್ನ ಮಿತ್ರನಾದ ಆ ರಾಜಪುತ್ರನು ಅತ್ಯಂತ ಸುಂದರನೂ ತರುಣನೂ ಎಲ್ಲ ಭೋಗವಿಲಾಸ ಸಾಮಗ್ರಿ ಸಂಪತ್ತಿನಿಂದ ಒಡಗೂಡಿದವನೂ ಆಗಿದ್ದುದರಿಂದ ನಿನಗೂ ಅಂಥ ಸಿರಿ, ಸಂಪದ, ಸೌಭಾಗ್ಯ, ಸೌಂದರ್ಯ, ಸಾಮ್ರಾಜ್ಯ, ಅಧಿಕಾರ, ವೈಭವ, ವಿಲಾಸ, ವಿಭ್ರಮೋಪೇತವಾದ ರಾಜೈಶ್ವರ್ಯವನ್ನು ರಾಜಕುಮಾರನಾಗಿ ಅನುಭವಿಸಬೇಕೆಂಬ ಅಪೇಕ್ಷೆ ಆಯಿತು. ಆ ಜನ್ಮದಲ್ಲಿ ನೀನು ವಿಶೇಷವಾಗಿ ನನ್ನನ್ನು ಆರಾಧಿಸಿದ್ದರಿಂದ ಆ

ಪುಣ್ಯ ಪ್ರಭಾವದಿಂದ ಈ ಜನ್ಮದಲ್ಲಿ ನೀನು ಸ್ವಾಯಂಭುವ ಮನುವಿನ ಮೊಮ್ಮಗನಾಗಿ ಉತ್ತಾನಪಾದ ರಾಜನ ಅರಮನೆಯಲ್ಲಿ ರಾಜಕುಮಾರನಾಗಿ ಜನಿಸಿದೆ.

ಮತ್ತೆ ಈ ಜನ್ಮದಲ್ಲಿಯೂ ಕೂಡ ಉಗ್ರವಾದ ತಪಸ್ಸನ್ನು ಮಾಡಿ ನನ್ನ ಆರಾಧನೆಯನ್ನು ಮಾಡಿದ್ದರಿಂದ ಮೂರು ಲೋಕಗಳಲ್ಲಿಯೇ ಅತ್ಯಂತ ಉಚ್ಚತರವಾದ ಮತ್ತು ಚಂದ್ರ, ಸೂರ್ಯ, ಬುಧ, ಬ್ರಹಸ್ಪತಿ ಮುಂತಾದ ಎಲ್ಲ ನಕ್ಷತ್ರಗಳಿಗಿಂತಲೂ ಸಪ್ತಋಷಿ ಮಂಡಲಕ್ಕಿಂತಲೂ ಉಚ್ಚತಮವಾದ ದಿವ್ಯ ಸ್ಥಾನವನ್ನು ನಿನಗೆ ಕೊಡ ಮಾಡಿದ್ದೇನೆ. ನೀನು ಈ ಕಲ್ಪಾಂತರದವರೆಗೂ ಈ ಧ್ರುವಸ್ಥಾನದಲ್ಲಿದ್ದು ಬೆಳಗುವೆ. ನಿನ್ನ ತಾಯಿಯಾದ ಸುನೀತಿಯು ಕೂಡ ನಿನ್ನ ಸಮೀಪದಲ್ಲಿಯೇ ಒಂದು ಜಾಜ್ವಲ್ಯ ಮಾನವಾದ ನಕ್ಷತ್ರವಾಗಿ ನೀನು ಇರುವವರೆಗೆ ವಿಮಾನರೂಢಳಾಗಿ ಹೊಳೆಯುತ್ತಲಿರುವಳು. ಈ ಧ್ರುವ ಚರಿತ್ರವನ್ನು ಬೈಗು ಬೆಳಗು ಹೊತ್ತಿನಲ್ಲಿ ಶ್ರದ್ಧೆಯಿಂದ ಕೇಳುವವರಿಗೂ ಹೇಳುವವರಿಗೂ ಮಹಾಪುಣ್ಯವು ಪ್ರಾಪ್ತವಾಗುವುದು. ದೇವ ದೇವೋತ್ತಮನಾದ ಶ್ರೀ ಮನ್ನಾರಾಯಣನಿಂದ ಇಂಥ ವರವನ್ನು ಪಡೆದು ಧ್ರುವ ಕುಮಾರನು ಸರ್ವೋಚ್ಚ ಸ್ಥಾನದಲ್ಲಿ ಇಂದಿಗೂ ಕಂಗೊಳಿಸುತ್ತಲಿದ್ದಾನೆ.

## ಧರ್ಮಾತೀತನಾದ ದುಷ್ಟ ರಾಜ

ಧ್ರುವರಾಜನಿಗೆ ಶಿಷ್ಟಿ, ಭವ್ಯ ಎಂಬ ಇಬ್ಬರು ಮಕ್ಕಳಿದ್ದರು. ಭವ್ಯನಿಂದ ಶಂಭುಕುಮಾರನು ಹುಟ್ಟಿದನು. ಶಿಷ್ಟಿಗೆ ಸುಚ್ಛಾಯಾ ಎಂಬ ಪತ್ನಿಯಲ್ಲಿ ರಿಪು, ರಿಪುಂಜಯ, ವಿಪ್ರ, ವಿಕಲ, ವೃಕತೇಜ ಎಂಬ ಐವರು ಮಕ್ಕಳು ಜನಿಸಿದರು. ರಿಪುವಿನ ಭಾರ್ಯೆಯಿಂದ ಅತ್ಯಂತ ತೇಜಸ್ವಿಯಾದ ಚಾಕ್ಷುಷನು ಉತ್ಪನ್ನನಾದನು. ಚಾಕ್ಷಷನು ವೀರಣ ಪ್ರಜಾಪತಿಯ ಮಗಳಾದ ವಾರುಣಿಯಲ್ಲಿ ಮನು ಎಂಬ ಮಗನನ್ನು ಹಡೆದನು. ಆ ಮನು ಮಹಾರಾಜನಿಗೆ ವೈರಾಜ ಪ್ರಜಾಪತಿಯ ಕನ್ನೆಯಾದ ನಡ್ವಲೆಯಲ್ಲಿ ಪುರು, ಕುರು, ಶತದ್ಯುಮ್ನ, ತಪಸ್ವಿ, ಸತ್ಯವಾನ, ಶುಚಿ ; ಅಗ್ನಿಷ್ಟೋಮ, ಸುದ್ಯುಮ್ನ ಮತ್ತು ಅಭಿಮನ್ಯು ಎಂಬ ಹತ್ತು ಜನ ಗಂಡು ಮಕ್ಕಳು ಜನಿಸಿದರು. ಈ ಕುರುಮಹಾರಾಜನಿಂದ ಆಗ್ನೇಯ ದೇವಿಯು ಅಂಗ, ಸುಮನ, ಖ್ಯಾತಿ, ಕೃತು, ಅಂಗಿರಸ, ಶಿಬಿ ಎಂಬ ಆರು ಜನ ಮಹಾಪ್ರಭಾವಶಾಲಿಗಳಾದ ಸತ್ಪುತ್ರರನ್ನು ಹೆತ್ತಳು. ಮೃತ್ಯುವಿನ ಮೊದಲನೇಯ ಮಗಳಾದ ಸುನೀತಳನ್ನು ಅಂಗರಾಜನಿಗೆ ಕೊಟ್ಟಿತ್ತು. ಅಂಗ ಅರಸನಿಗೆ ಮೃತ್ಯುಕುಮಾರಿಯಾದ ಈ ಸುನೀತೆಯಿಂದ ದುಷ್ಟನಾದ ವೇನನು ಹುಟ್ಟಿದನು. ಈ ವೇನನು ತನ್ನ ತಾಯಿಯ ತಂದೆಯಾದ ಮೃತ್ಯುವಿನ ದೋಷದಿಂದ ಬಾಲ್ಯದಿಂದಲೇ ಉನ್ಮತ್ತನೂ, ನೀಚನೂ ಆಗಿದ್ದನು. ತಂದೆಯ ನಂತರ ದೊಡ್ಡ ದೊಡ್ಡ ಋಷಿಗಳೆಲ್ಲ ಬಂದು ಅವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟಾಭಿಷೇಕವನ್ನು ಮಾಡಿದಕೂಡಲೇ ಆ ವೇನರಾಜನು ಈ ರೀತಿಯಾಗಿ ಘೋಷಣೆಯನ್ನು ಹೊರಡಿಸಿದನು.

**''ನ ಯಷ್ಟವ್ಯಂ ನ ದಾತವ್ಯಂ ನ ಹೋತವ್ಯಂ ಕಥಂಚನ ।**
**ಭೋಕ್ತಾ ಯಜ್ಞಸ್ಯ ಕಸ್ತ್ವನ್ಯೋ ಹ್ಯಹಂ ಯಜ್ಞಪತಿಃ ಪ್ರಭುಃ ॥**

ಯಾರೂ ಯಜ್ಞಮಾಡಬಾರದು, ಯಾರಿಗೂ ದಾನವನ್ನು ಕೊಡಕೂಡದು,

ಹೋಮ ಹವನಗಳಲ್ಲಿ ಯಾವ ದೇವತೆಗೂ ಆಹುತಿಗಳನ್ನು ಕೊಡತಕ್ಕದ್ದಲ್ಲ. ಯಜ್ಞದ ಆಹುತಿಗಳನ್ನು ಭೋಗಿಸಕ್ಕಂಥ ದೇವರು ನನ್ನ ಹೊರತು ಬೇರೆ ಯಾರು ಇದ್ದಾರೆ ! ನಾನೇ ಪ್ರಭು, ಪರಮಾತ್ಮಾ ಮತ್ತು ಯಜ್ಞಪತಿಯೂ ಆಗಿರುತ್ತೇನೆ.

## ದುಷ್ಟರಾಜರನ್ನು ಪದಭ್ರಷ್ಟಗೊಳಿಸುವ ಭಾರತದ ಹಿಂದಿನ ಸತ್ಪರಂಪರೆ

ವೇನನ ವಿಚಿತ್ರವಾದ ಈ ಭೀಷಣ ಘೋಷಣೆಯನ್ನು ಕೇಳಿ ಸಂತ್ರಸ್ತರಾದ ಋಷಿಗಳು ಶಾಂತ ಸ್ವರದಲ್ಲಿಯೇ ಅವನಿಗೆ ತಿಳಿಹೇಳಿದರು. ''ಮಹಾರಾಜ, ನಿನ್ನ ರಾಜ್ಯದ ಕಲ್ಯಾಣಕ್ಕಾಗಿ ನಿನ್ನ ಶರೀರದ ಉಪಕಾರಕ್ಕಾಗಿ, ಮತ್ತು ನಿನ್ನ ಪ್ರಜೆಗಳ ಹಿತಕ್ಕಾಗಿ ನಾವು ಎಲ್ಲ ಯಜ್ಞಗಳ ಒಡೆಯನಾದ ಶ್ರೀ ಹರಿಯನ್ನು ದೊಡ್ಡ ದೊಡ್ಡ ಯಜ್ಞಗಳಿಂದ ಪೂಜಿಸುತ್ತೇವೆ. ನಮ್ಮ ಸತ್ಕಾರ್ಯಗಳಿಂದ ಬರತಕ್ಕ ಪುಣ್ಯದಲ್ಲಿ ಅದರ ಆರನೇ ಅಂಶವು ನಿನಗೆ ತಾನಾಗಿಯೇ ಪ್ರಾಪ್ತವಾಗುವುದು. ಇಂಥ ಯಜ್ಞಯಾಗಾದಿ ಸತ್ಕರ್ಮದಿಂದ ಯಜ್ಞಪುರುಷನಾದ ಶ್ರೀ ಹರಿಯು ಸಂತುಷ್ಟನಾಗಿ ನಮಗೂ ನಿನಗೂ ಸರ್ವ ರಾಷ್ಟ್ರಕ್ಕೂ ಕಾಮಧೇನುವಿನಂತೆ ಸರ್ವಾಭೀಷ್ಟಗಳನ್ನು ಪ್ರದಾನಮಾಡಿ ಕಲ್ಯಾಣವನ್ನುಂಟು ಮಾಡುವನು.''

ಅದನ್ನು ಕೇಳಿ ಮದಾಂಧನಾದ ಆ ವೇನರಾಜನು ''ನನ್ನಗಿಂತ ದೊಡ್ಡವನು ಬೇರೆ ಯಾರಿರುವನು ? ಆ ಹರಿಯೆಂದರೆ ಯಾರು ! ಆ ನಿಮ್ಮ ಹರಿ ಹಾಗೂ ಬ್ರಹ್ಮ, ಶಿವ, ಇಂದ್ರ, ಚಂದ್ರ ವಾಯು, ಸೂರ್ಯ, ಅಗ್ನಿ, ವರುಣ ಮುಂತಾದ ಎಲ್ಲ ದೇವತೆಗಳೂ ರಾಜರ ಶರೀರದಲ್ಲಿಯೇ ಇರುತ್ತಾರೆ. ರಾಜನೆಂದರೆ ಸರ್ವ ದೇವತಾ ಸ್ವರೂಪನೆಂದು ತಿಳಿದು ನಾನು ಹೇಳಿದಂತೆ ಕೇಳಿರಿ. ಸ್ತ್ರೀಯರಿಗೆ ಗಂಡನ ಸೇವೆಯೇ ಧರ್ಮ, ಪ್ರಜರಿಗೆ ಅರಸರ ಅಪ್ಪಣೆಯನ್ನು ಪಾಲಿಸುವುದೇ ಧರ್ಮ. ಆದ್ದರಿಂದ ನೀವು ನಾನು ಹೇಳಿದಂತೆಯೇ ನಡೆಯಿರಿ.'' ಎಂದು ಖಡಾ ಖಂಡಿತವಾಗಿ ಹೇಳಿ ಕಠೋರ ಅನುಶಾಸನಗೈದರು.

ವೇನ ಮಹಾರಾಜನ ಧರ್ಮದ್ರೋಹಾತ್ಮಕವಾದ ಈ ಮಾತುಗಳನ್ನು ಕೇಳಿ ಕುಪಿತರಾದ ಆ ಋಷಿಗಳೆಲ್ಲರೂ ''ಹನ್ಯತಾಂ ಹನ್ಯತಾಂ ಪಾಪಃ'' ಈ ಪಾಪಿ ಮನುಷ್ಯನು ಸತ್ತುಹೋಗಲಿ, ಶ್ರೀ ಹರಿಯನ್ನು ನಿಂದಿಸುವ ದುರಾಚಾರಿಯು ಭೂಮಿಗೆ ಒಡೆಯನಾಗಲು ಅಯೋಗ್ಯನು'' ಎಂದು ಶಾಪದ ಕಿಡಿನುಡಿಗಳನ್ನು ಸಿಡಿಸಿ ಮಂತ್ರ ಪೂತನಾದ ತಮ್ಮ ಕೈಯಲ್ಲಿಯ ದರ್ಭಗಳನ್ನು ಬೀಸಿದರು. ಆದರಿಂದ ಆ ವೇನರಾಜನು ಪರಮಾತ್ಮನ ನಿಂದೆಯನ್ನು ಮಾಡಿದ್ದರಿಂದಲೂ ತಕ್ಷಣದಲ್ಲಿ ಮರಣವನ್ನು ಹೊಂದಿದನು.

ಆಗ ದೇಶದಲ್ಲಿ ಅರಾಜಕ ಪರಿಸ್ಥಿತಿಯುಂಟಾಗಿ ಕಳ್ಳರ ದರೋಡೆಖೋರರ ಉಪದ್ರವವು ಹೆಚ್ಚಾಗತೊಡಗಿತು. ರಾಜನಿಲ್ಲದೆ ರಾಷ್ಟ್ರರಕ್ಷಣೆಯು ಆಗಲಾರದು ಎಂದು ಬಗೆದು ಎಲ್ಲ ಮುನಿಗಳು ಕೂಡಿ ವಿಚಾರಿಸಿ ಆ ವೇನ ಶರೀರದ ತೊಡೆಯನ್ನು ಕಡಿದರು. ಆದರಿಂದ ಕುಳ್ಳ ಮತ್ತು ಕಪ್ಪು ಮನುಷ್ಯನು ಉತ್ಪನ್ನನಾದನು. ಅವನು ಆ ಬ್ರಾಹ್ಮಣರನ್ನು ನಾನು ಏನು ಮಾಡಲಿ ಎಂದು ಕೇಳಿದನು. ಅದಕ್ಕೆ ಅವರು ಅವನಿಗೆ ''ನಿಷೀದ'' ಸುಮ್ಮನೆ ಕುಳಿತುಕೊ ಎಂದು ಹೇಳಿದರು. ಆದರಿಂದ ಅವನು ನಿಷಾದ ಎಂದು ಹೆಸರಾದನು. ಅವನಿಂದ ಮುಂದೆ ಹುಟ್ಟಿ ಬೆಳೆದ ಜಾತಿಗೆ ನಿಷಾದ ಎಂಬ ಹೆಸರಾಯಿತು. ವೇನರಾಜನ

ಪಾಪವೆಲ್ಲವೂ ಅವನಲ್ಲಿ ಹೊರಬಿದ್ದು ಹೋದದ್ದರಿಂದ ಆ ನಿಷಾದ ಜಾತಿಯವರೆಲ್ಲರೂ ಎಷ್ಟೋ ವರ್ಷಗಳವರೆಗೆ ಕಳವು, ಕೊಲೆ, ಸುಲಿಗೆ ಮುಂತಾದ ಪಾಪಾಚಾರಗಳನ್ನು ಮಾಡುತ್ತ ವಿಂಧ್ಯಪರ್ವತದಲ್ಲಿ ವಾಸಮಾಡಿದ್ದರು. ಅನಂತರ ಆ ಋಷಿಗಳು ಆ ವೇನರಾಜನ ನಿರ್ಜೀವ ಶರೀರದ ಬಲಗೈಯನ್ನು ಕಡಿದರು. ಆದರಿಂದ ಅಗ್ನಿಯಂತೆ ದೇದೀಪ್ಯಮಾನವಾದ ಶರೀರವುಳ್ಳ ಪೃಥುರಾಜನು ಉತ್ಪನ್ನನಾದನು. ಆ ಪೃಥುರಾಜನಿಗೆ ಧರಿಸಲಿಕ್ಕಾಗಿ "ಆಜಗವ" ಎಂಬ ಶಿವ ಧನಸ್ಸು ದಿವ್ಯ ಬಾಣಗಳೂ ಮತ್ತು ಒಂದು ಕವಚವೂ ಆಕಾಶದಿಂದ ಬಂದವು.

ಅವನ ಅಭಿಷೇಕಕ್ಕಾಗಿ ಎಲ್ಲ ಪುಣ್ಯ ನದಿಗಳೂ, ಸಮುದ್ರಗಳು, ರತ್ನಗಳನ್ನು ತೆಗೆದುಕೊಂಡು ಅಲ್ಲಿ ಉಪಸ್ಥಿತವಾದವು. ಆ ಪೃಥುರಾಜನ ಬಲಗೈಯಲ್ಲಿ ಚಕ್ರಚಿನ್ಹ ಇದ್ದುದರಿಂದ ಅವನು ಸಾಕ್ಷಾತ್ ವಿಷ್ಣುವಿನ ಅಂಶವೆಂದು ತಿಳಿದು ಬ್ರಹ್ಮದೇವರು ದೇವತೆಗಳಿಂದಲೂ, ಋಷಿಗಳಿಂದಲೂ ಒಡಗೂಡಿ ಬಂದು ಅವನ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರು.

## ರಂಜನೆ ಮಾಡಿದ್ದರಿಂದ ರಾಜ

ರಾಜ್ಯಾರೂಢನಾದ ಆ ಪೃಥುರಾಜನು ತನ್ನ ತಂದೆಯಿಂದ ಪೀಡಿಸಲ್ಪಟ್ಟ ಪ್ರಜೆಗಳನ್ನು ರಂಜನೆ ಮಾಡಿ ಅವರ ಅನುರಾಗವನ್ನು ಸಂಪಾದಿಸಿದನು. ಇದರಿಂದ ಅವನಿಗೆ ರಾಜ ಎಂದು ಮೊಟ್ಟಮೊದಲನೇ ಹೆಸರು ಆಯಿತು.

"ಪಿತ್ರಾಽ ಪರಂಜಿತಾಸ್ತಸ್ಯ ಪ್ರಜಾಸ್ತೇನಾನುರಂಜಿತಾಃ ।
ಅನುರಾಗಾತ್ ತತಸ್ತಸ್ಯ ನಾಮ ರಾಜೇತ್ಯಜಾಯತ ॥

ಆ ಪೃಥುರಾಜನು ಧರ್ಮದಿಂದ ರಾಜ್ಯವನ್ನು ಆಳುತ್ತಿದ್ದುದರಿಂದ ಪೃಥ್ವಿಯಲ್ಲಿ ಸಮೃದ್ಧವಾಗಿ ಮಳೆ ಬೆಳೆಗಳು ಬರುತ್ತಿದ್ದವು. ಹಸುಗಳು ಹಂಡೆಗಟ್ಲೆ ಹಾಲನ್ನು ಓಂಡುತ್ತಿದ್ದವು. ಗಿಡಗಳ ಎಲೆ ಹೂಗಳಲ್ಲಿ ಜೇನು ತುಂಬಿ ತುಳುಕಾಡುತ್ತಿತ್ತು.

## ಹೊಗಳಿಕೆಯ ಅರ್ಥ, ಸಾಧಿಸಬೇಕಾದ ಪುರುಷಾರ್ಥ

ಆ ಪೃಥುಮಹಾರಾಜನು ಉತ್ಪನ್ನನಾದ ಕೂಡಲೇ ಪೈತಾಮಹ ಯಜ್ಞವನ್ನು ಮಾಡಿದನು. ಆ ಪೈತಾಮಹ ಯಜ್ಞದ ಸೋಮಾಭಿಷವದ ದಿವಸದಲ್ಲಿ ಸೋಮರಸವನ್ನು ಓಂಡುವ ಸ್ಥಾನದಿಂದ ಮಹಾ ಮೇಧಾವಿಯಾದ ಸೂತನು ಉತ್ಪನ್ನನಾದನು. ಮತ್ತು ಅದೇ ಯಜ್ಞದಿಂದ ಮಗಧನೂ ಜನಿಸಿದನು. ಆದುದರಿಂದ ಋಷಿಗಳು ಅವರನ್ನು ಸೂತ, ಮಗಧ ಎಂದು ಕರೆದು ಅವರಿಗೆ ಪೃಥುರಾಜನನ್ನು ಸ್ತೋತ್ರ ಮಾಡಲಿಕ್ಕೆ ಹೇಳಿದರು. ಆಗ ಅವರು ಋಷಿಗಳನ್ನು ಕೇಳಿಕೊಂಡು ಪೃಥುರಾಜನನ್ನು ಬಾಯಿ ತುಂಬ ಹೊಗಳಿದರು. ಆಗ ಪೃಥುರಾಜನು ತಾನಿನ್ನೂ ಅಂಥ ಯಾವ ಶ್ಲಾಘನೀಯ ಕಾರ್ಯಗಳನ್ನು ಮಾಡದಿದ್ದರೂ ಋಷಿಮುನಿಗಳು ಸೂತಮಗಧದಿಂದ ಸ್ತೋತ್ರ ಮಾಡಿಸಿದ್ದನ್ನು ಕೇಳಿ ಅವರು ಹೊಗಳಿದ ಗುಣಗಳೆಲ್ಲವನ್ನೂ ತಾನು ತನ್ನ ಜೀವನದಲ್ಲಿ ಸಂಪಾದನೆ ಮಾಡಬೇಕೆಂದೂ, ಅವರು

ತಮ್ಮ ಪ್ರಶಂಸೆಯಲ್ಲಿ ತನಗೆ ಹಚ್ಚಿದ ವಿಶೇಷಗಳೆಲ್ಲವೂ ಸಾರ್ಥಕವಾಗುವಂತೆ ಎಲ್ಲ ಸದ್ಗುಣಗಳನ್ನು ತನ್ನಲ್ಲಿ ಬೆಳೆಸಿಕೊಳ್ಳಬೇಕೆಂದೂ, ಅವರ ಎಲ್ಲ ವರ್ಣನೆಗೆ ಪಾತ್ರನಾಗುವ ಅರ್ಹತೆಯನ್ನು ಸಂಪಾದಿಸುವದೇ ತನ್ನ ಜೀವನದ ಧ್ಯೇಯವಾಗಬೇಕೆಂದೂ ಸಂಕಲ್ಪಿಸಿದನು. ಅದರಂತೆ ಅವನು ತನ್ನ ಮುಂದಿನ ಜೀವನದಲ್ಲಿ ಅವರು ಬಣ್ಣಿಸಿದ ಮಾಡಿದಂತೆಯೇ ಸತ್ಯ, ದಾನ, ಕ್ಷಮಾ, ಪರಾಕ್ರಮ, ಸೌಜನ್ಯ, ಪ್ರಿಯಭಾಷಣ, ದುಷ್ಟಶಾಸನ, ತ್ಯಾಗಶೀಲತೆ, ಸಾಧುಜನ ಪಕ್ಷಪಾತ, ವ್ಯವಹಾರ ಕೌಶಲ್ಯ, ಕೃತಜ್ಞತೆ, ದೇವಭಕ್ತಿ ಮುಂತಾದ ಅನೇಕ ಶ್ರೇಷ್ಠ ಗುಣಗಳಿಂದ ಆತ್ಮವಿಕಾಸವನ್ನು ಮಾಡಿಕೊಂಡು ಅತ್ಯುತ್ತಮ ರೀತಿಯಿಂದ ಪ್ರಜಾಪಾಲನೆ ಮಾಡಿ ಆದರ್ಶ ಮಹಾರಾಜನೆಂದು ಪ್ರಸಿದ್ಧನಾದನು. ಮತ್ತು ಅನೇಕ ಯಜ್ಞಯಾಗಗಳನ್ನು ಮಾಡಿ ಬ್ರಾಹ್ಮಣರಿಗೆ ಭಾರಿ ದಕ್ಷಿಣೆಯನ್ನಿತ್ತು ಸಂತೋಷಪಡಿಸಿದನು.

ವೇನರಾಜನ ದುಃಶಾಸನ ಸಮಯದಲ್ಲಿಯೂ ಅನಂತರ ಅರಾಜಕತೆಯ ಅವಧಿಯಲ್ಲಿಯೂ ಭೂದೇವಿಯು ತನ್ನಲ್ಲಿರುವ ಧಾನ್ಯ ಔಷಧಿಗಳನ್ನೆಲ್ಲ ಅಡಗಿಸಿ ಇಟ್ಟಿದ್ದರಿಂದ ಪ್ರಜೆಗಳೆಲ್ಲ ಹಸಿವೆ ಮತ್ತು ರೋಗ ರುಜಿನಗಳಿಂದ ಪೀಡಿತರಾಗಿ ಪೃಥುರಾಜನಿಗೆ ಶರಣು ಬಂದರು. ಆಗ ಕ್ರುದ್ಧನಾದ ಪೃಥುರಾಜನು ತನ್ನ ಅಜಗವ ಧನುಸ್ಸನ್ನೂ ಬಾಣಗಳನ್ನೂ ಕೈಕೊಂಡು ಹೊರಟಾಗ ಭೂದೇವಿಯು ಆಕಳಿನ ರೂಪವನ್ನು ತೆಗೆದುಕೊಂಡು ಓಡತೊಡಗಿದಳು. ಅವಳು ಹೋದಲ್ಲೆಲ್ಲ ಪೃಥುರಾಜನು ಬಿಲ್ಲುಬಾಣಗಳನ್ನು ಹಿಡಿದು ಬೆನ್ನಟ್ಟಿ ಬರಲು ಆ ಪೃಥ್ವೀದೇವಿಯು ಭಯಕಂಪಿತಳಾಗಿ ರಾಜನನ್ನು ಕುರಿತು ನುಡಿದಳು.

## ರತ್ನಗರ್ಭೆ ಮಣ್ಣು ಕಲ್ಲು ತೂರಿದಾಗ ಪೃಥುವಿನ ಶಾಸನ

''ಮಹಾರಾಜ, ಸ್ತ್ರೀವಧವನ್ನು ಮಾಡಿದರೆ ಎಂಥ ಪಾಪವು ಬರುತ್ತದೆ ಎಂಬುದನ್ನು ನೀನು ತಿಳಿದಿಲ್ಲವೇ ? ನೀನು ನನ್ನನ್ನು ಕೊಲ್ಲಲ್ಲು ಏಕೆ ಬಂದಿರುವೆ ?

**ಪೃಥುರಾಜ** - ಯಾವ ದುಷ್ಟನನ್ನು ಕೊಂದರೆ ಬಹು ಜನರಿಗೆ ಕ್ಷೇಮವಾಗುವದೋ ಅಂಥ ಹಿಂಸೆಯು ಕೂಡ ಪುಣ್ಯಕರವಾಗುತ್ತದೆ.

**ಪೃಥ್ವೀ** - ಪ್ರಜಾಜನರಿಗೆ ಉಪಕಾರ ಮಾಡಲಿಕ್ಕಾಗಿ ನೀನು ನನ್ನನ್ನು ಕೊಲ್ಲಬಯಸುತ್ತೀಯಷ್ಟೇ ! ಆದರೆ ನಿನ್ನ ಎಲ್ಲ ಪ್ರಜೆಗಳಿಗೆ ನಿಲ್ಲುವ ನೆಲೆಯಾದ ನನ್ನನ್ನೇ ನಾಶಮಾಡಿದರೆ ಆ ಪ್ರಜೆಗಳನ್ನೆಲ್ಲ ಎಲ್ಲಿ ನಿಲ್ಲಿಸುತ್ತೀ ? ನನ್ನನ್ನು ಸಂಹರಿಸಿದ ಬಳಿಕ ಅವರೆಲ್ಲರೂ ಅಂತರಾಳದಲ್ಲಿ ಜೋತಾಡಬೇಕೇ ?

**ಪೃಥುರಾಜ** - ಪ್ರಜಾವಿದ್ರೋಹ ಮಾಡಿದ ಪೃಥ್ವಿದೇವಿ ! ನನ್ನ ಬಾಣಗಳಿಂದ ನಿನ್ನನ್ನು ಕೊಂದು ನನ್ನ ಯೋಗಶಕ್ತಿಯಿಂದ ಪ್ರಜೆಗಳೆಲ್ಲರೂ ನೆಲವಿಲ್ಲದೇ ನಿಲ್ಲುವಂತೆ ಮಾಡುತ್ತೇನೆ.'' ಪೃಥುರಾಜನ ಈ ದೃಢನಿರ್ಧಾರದ ಮಾತುಗಳನ್ನು ಕೇಳಿ ಧರಣೀದೇವಿಯು ಹೆದರಿ ನಡುಗುತ್ತ ''ಮಹಾರಾಜ, ಉಪಾಯದಿಂದ ಮಾಡಿದರೆ ಎಲ್ಲ ಕೆಲಸಗಳೂ ಸಿದ್ಧಿಸುತ್ತವೆ. ನಾನೊಂದು ಉಪಾಯವನ್ನು ಹೇಳುತ್ತೇನೆ. ಅದನ್ನು ನೀನು

ಮಾಡು. ನಾನು ನುಂಗಿದ ಅನ್ನ ಔಷಧಿಗಳೆಲ್ಲ ನಿನ್ನ ಪ್ರಜೆಗಳಿಗೆ ದೊರಕಬೇಕೆಂದು ನೀನು ಬಯಸುತ್ತಲಿದ್ದರೆ ಗೋರೂಪವನ್ನು ಧರಿಸಿದ ನನ್ನನ್ನು ತೊರೆ ಬಿಡಿಸುವ ಬೇರೆ ಬೇರೆ ಯೋಗ್ಯ ಕರುಗಳನ್ನು ತಂದು ನನ್ನನ್ನು ಹಿಂಡಿಕೊಳ್ಳಿರಿ. ಹಾಲಿನ ರೂಪದಿಂದ ನಿಮಗೆ ಬೇಕಾದ ವಸ್ತುಗಳನ್ನೆಲ್ಲ ನಾನು ಕರೆದುಕೊಡುತ್ತೇನೆ. ಮೊದಲು ಕಾಡು ಬೀಡುಗಳಿಂದ ತಗ್ಗು ದಿನ್ನೆಯಾದ ಭೂಮಿಯನ್ನು ನಿನ್ನ ಬಿಲ್ಲು ಬಾಣಗಳಿಂದ ಸಮನಾಗಿಸಿ ಬಯಲು ಮಾಡು. ಅದರಿಂದ ಎಲ್ಲ ಕಡೆಗೂ ಧಾನ್ಯಗಳನ್ನು ಮತ್ತು ಉಪಯುಕ್ತವಾದ ವನಸ್ಪತಿ ವೃಕ್ಷಗಳನ್ನು ಬೆಳೆಯಲೂ ಮತ್ತು ನಿಮಗೆ ಇಷ್ಟವಾದ ಇತರ ಎಲ್ಲ ವಿಧ ವಸ್ತುಗಳನ್ನು ಕ್ಷೀರರೂಪವಾಗಿ ಕರೆಯಲೂ ನನಗೆ ಅನುಕೂಲವಾಗುವದು.'' ಎಂದು ಹೇಳಿದಳು.

## ಗಂಧರ್ವರ ಸೀಮೆಯಾಯಿತು ಕಾಡಿನ ನಾಡು

ಆ ಭೂದೇವಿಯ ಮಾತನ್ನು ಕೇಳಿ ಪೃಥುರಾಜನು ತನ್ನ ಬಿಲ್ಲು ಬಾಣಗಳಿಂದ ನೆಲದ ತುಂಬ ಹಬ್ಬಿದ ಸಾವಿರಾರು ದಿನ್ನೆ ಗುಡ್ಡ ಹಾಗೂ ಹೆಬ್ಬಂಡೆಗಳನ್ನು ಸವರಿ, ಸರಿಸಿ ಸಮನೆಲ ವಿಸ್ತಾರವಾದ ಬಯಲು ಪ್ರದೇಶಗಳನ್ನು ನಿರ್ಮಿಸಿದನು. ಇದಕ್ಕೂ ಮೊದಲು ಭೂಮಂಡಲದ ತುಂಬ ಸಣ್ಣ ದೊಡ್ಡ ಗುಡ್ಡ, ದಿನ್ನೆ, ತಗ್ಗು, ತೆವರುಗಳು ಅಡ್ಡಾದಿಡ್ಡಿ ಬೆಳೆದು ಬಿಟ್ಟಿದ್ದರಿಂದ ಹಳ್ಳಿ ಅಥವಾ ನಗರಗಳ ಬೆಳವಣಿಗೆಗೆ ಅವಕಾಶವೇ ಇರಲಿಲ್ಲ. ಎಲ್ಲಿ ನೋಡಿದಲ್ಲೆಲ್ಲ ಕಾಡುಗಳೇ ಬೀಡು ಬಿಟ್ಟು ನಾಡು ರೂಪಗೊಳ್ಳಲಿಕ್ಕೆ ಆಸ್ಪದ ಇರಲಿಲ್ಲ. ಸಮನಾದ ನೆಲವೇ ಇಲ್ಲದ್ದರಿಂದ ಹೊಲಗಳು ಹುಟ್ಟಿರಲೇ ಇಲ್ಲ. ಬೇಸಾಯವು ಪ್ರಾರಂಭವಾಗಿರಲಿಲ್ಲ. ವ್ಯಾಪಾರ ಉದ್ಯೋಗಗಳು ಬೆಳದಿರಲಿಲ್ಲ. ವ್ಯಾಪಾರ ವ್ಯವಹಾರಗಳಿಗಾಗಿ ನಿರ್ಮಿಸಬೇಕಾದ ದಾರಿಗಳ ಮಾತಂತೂ ದೂರವೇ ಉಳಿಯಿತು.

## ತಿರೆ ತೊರೆ ಬಿಟ್ಟಿತು

ಪೃಥುರಾಜನು ತನ್ನ ಧನುರ್ಬಾಣಗಳಿಂದ ಕಾಡುಗಳನ್ನೆಲ್ಲ ಕಡಿದು ಬೆಟ್ಟಬಂಡೆಗಳನ್ನು ಒಡೆದು, ತಗ್ಗುಗಳನ್ನು ತುಂಬಿ, ದಿನ್ನೆಗಳನ್ನು ಪುಡಿಗೈದು, ತೆವರುಗಳನ್ನು ಸಮಮಾಡಿ, ದೂರ ದೂರದವರೆಗೆ ದೊಡ್ಡ ದೊಡ್ಡ ಬಯಲು ಮೈದಾನಗಳನ್ನು ರಚಿಸಿ ಸಮತಟ್ಟಾದ ನೆಲವನ್ನು ನಿರ್ಮಿಸಿದನು. ನಂತರ ಧಾನ್ಯದ ಬೀಜಗಳನ್ನು ಉತ್ತಿ ಬಿತ್ತಿ ಬೆಳೆಯುವ ಒಕ್ಕಲುತನದ ಕಾರ್ಯವು ಪ್ರಾರಂಭವಾಯಿತು. ಆದರಿಂದ ಅನೇಕ ಉದ್ಯೋಗ ವ್ಯಾಪಾರ ವ್ಯವಸಾಯಗಳು ಎಲ್ಲ ಕಡೆಗೆ ತಾವಾಗಿಯೇ ಬೆಳೆದವು. ಅದಕ್ಕಾಗಿ ಜನರು ದನ-ಕರುಗಳನ್ನು ಕಟ್ಟಿಕೊಂಡು ಮನೆಗಳನ್ನು ರಚಿಸಿಕೊಂಡು ಗ್ರಾಮಾರಾಮ ಮತ್ತು ನಗರ ನಾಲೆಗಳನ್ನು ಮಾಡಿಕೊಂಡು ವಾಸಮಾಡಹತ್ತಿದರು.

## ಮಣ್ಣಿನ ಒಡಲಿನಿಂದ ಬೆಣ್ಣೆ ಕಡೆದ ಪೃಥು

ಜನರಿಗೆ ಹೊಲಗಳಿಂದ ಹಣ್ಣು, ಕಾಯಿ, ಕಂದಮೂಲಗಳೂ, ಧಾನ್ಯಗಳೂ ಆಹಾರಕ್ಕಾಗಿ ದೊರಕತೊಡಗಿದವು. ಪೃಥುರಾಜನು ಸ್ವಾಯಂಭುವಮನುವನ್ನು ಕರುವನ್ನಾಗಿ ಮಾಡಿಕೊಂಡು ಪ್ರಜಾ ಜನರ ಹಿತಕ್ಕಾಗಿ ಗೋರೂಪಧಾರಿಣಿಯಾದ

ಧರಿಣೀಮಾತೆಯಿಂದ ಸಮೃದ್ಧವಾಗಿ ಆಹಾರ ಧಾನ್ಯವನ್ನು ಹಿಂಡಿಕೊಂಡನು. ಅದರಿಂದ ಅಂದಿನಿಂದ ಇಂದಿನವರೆಗೂ ಭೂಲೋಕದಲ್ಲಿ ಧನಧಾನ್ಯಗಳ ಸಮೃದ್ಧಿಯಾಗಿ ಪ್ರಜೆಗಳೆಲ್ಲರೂ ಆ ಧಾನ್ಯಾಹಾರವನ್ನು ತಿಂದು ತುಷ್ಟರಾಗಿ ಬಾಳಿ ಬದುಕುವಂತಾಗಿದೆ. ಆಹಾರ ಧಾನ್ಯವನ್ನು ಕೊಟ್ಟು ಪೃಥ್ವಿಯನ್ನು ಪೃಥುರಾಜನು ಉದ್ಧಾರ ಮಾಡಿದ್ದರಿಂದ ಅವನಿಗೆ ಭೂಮಿಯ ತಂದೆಯೆಂದು ಹೆಸರು ಬಂದಿತು. ಪೃಥುವಿನ ಮಗಳಾದ್ದರಿಂದ ಈ ಭೂದೇವಿಗೂ ''ಪೃಥಿವೀ'' ಎಂದು ಹೆಸರು ಬಂದಿತು. ಇದರಂತೆ ಎಲ್ಲ ದೇವತೆಗಳೂ, ಋಷಿಗಳೂ, ದೈತ್ಯರೂ, ಪರ್ವತಗಳೂ ಗಂಧರ್ವರೂ, ಯಕ್ಷರೂ, ಪಿತೃಗಳೂ, ಗಿಡಗಳೂ, ನಾಗರೂ ಮುಂತಾದವರೆಲ್ಲ ಬೇರೆ ಬೇರೆ ಕರು, ಹಿಂಡುವಪಾತ್ರೆ, ಹಿಂಡುವ ವ್ಯಕ್ತಿಗಳನ್ನು ತೆಗೆದುಕೊಂಡು ಬಂದು ತಮಗೆ ಬೇಕಾದ ಇಷ್ಟಾರ್ಥಗಳನ್ನು ಕರೆದುಕೊಂಡರು.

ಮಹಾತ್ಮನಾದ ಈ ಪೃಥುರಾಜನಿಗೆ ಅಂತರ್ಧಾನ ಸಾದಿ ಎಂಬ ಇಬ್ಬರು ಮಕ್ಕಳು. ಅಂತರ್ಧಾನನು ಶಿಖಂಡಿನಿ ಎಂಬ ತನ್ನ ಭಾರ್ಯೆಯಿಂದ ಹವಿರ್ಧಾನ ಎಂಬ ಮಗನನ್ನು ಪಡೆದನು. ಹವಿರ್ಧಾನನು ಅಗ್ನಿ ಕುಲದ ಕನ್ಯೆಯಾದ ಧಿಷಣಾ ಎಂಬ ತನ್ನ ಧರ್ಮಪತ್ನಿಯಿಂದ ಪ್ರಾಚೀನಬರ್ಹಿ, ಶುಕ್ರ, ಗಯ, ಕೃಷ್ಣ, ಮೃಗ ಮತ್ತು ಅಜಿನ ಎಂಬ ಆರು ಮಕ್ಕಳನ್ನು ಪಡೆದನು. ಹವಿರ್ಧಾನನ ಸತ್ಪುತ್ರರಾದ ಈ ಷಟ್ ಪುತ್ರರಲ್ಲಿ ಹಿರಿಯನಾದ ಪ್ರಾಚೀನಬರ್ಹಿಯು ತನ್ನ ಯೋಗ್ಯತೆಯಿಂದ ಪ್ರಜಾಪತಿ ಸ್ಥಾನವನ್ನು ಪಡೆದನು. ಅವನು ತನ್ನ ಜೀವಿತದ ಅವಧಿಯಲ್ಲಿ ಅನೇಕಾನೇಕ ಯಜ್ಞಗಳನ್ನು ಮಾಡಿ ಭೂಮಂಡಲದ ತುಂಬ ಪೂರ್ವಾಭಿ ಮುಖವಾಗಿ ಯಜ್ಞದ ಉದ್ದೇಶದಿಂದ ದರ್ಭೆಗಳನ್ನು ಹಾಸಿದ್ದರಿಂದ ಅವನಿಗೆ ಪ್ರಾಚೀನಬರ್ಹಿ ಎಂಬ ಹೆಸರು ಯಥಾರ್ಥವಾಗಿ ಪ್ರಸಿದ್ಧವಾಯಿತು. ಈ ಪ್ರಾಚೀನಬರ್ಹಿ ಮಹಾರಾಜನು ಘೋರ ತಪಸ್ಸನ್ನು ಮಾಡಿ ಮುಗಿಸಿದ ಬಳಿಕ ಸಮುದ್ರ ಕುಮಾರಿಯಾದ ಸುವರ್ಣಾ ಎಂಬ ಕನ್ಯಾರತ್ನವನ್ನು ವಿವಾಹವಾಗಿ ಪ್ರಾಚೇತಸರು ಎಂಬ ಹತ್ತು ಮುತ್ತಿನಂಥ ಮಕ್ಕಳನ್ನು ಪಡೆದನು.

ಆ ಎಲ್ಲ ಮಕ್ಕಳಿಗೆ ತಂದೆಯಾದ ಪ್ರಾಚೀನಬರ್ಹಿಯು ''ಸತ್ಪುತ್ರರೇ, ದೇವಾಧಿ ದೇವರಾದ ಬ್ರಹ್ಮದೇವರು ನನಗೆ ಮತ್ತು ನಿಮಗೆ ಪ್ರಜಾ ಅಭಿವೃದ್ಧಿಯನ್ನು ಮಾಡಲು ಅಪ್ಪಣೆ ಕೊಟ್ಟಿದ್ದಾರೆ. ಆದ್ದರಿಂದ ನೀವು ನನ್ನ ಪ್ರೀತಿಗಾಗಿಯೂ ಬ್ರಹ್ಮದೇವರ ಪರಮಾನುಗ್ರಹಕ್ಕಾಗಿಯೂ ಜಾಗ್ರತೆಯಾಗಿ ಸಂತಾನವನ್ನು ಬೆಳೆಸಿರಿ. ಇದು ನನ್ನ ಆಜ್ಞೆ, ಮತ್ತು ಬ್ರಹ್ಮದೇವರ ಆದೇಶ'' ಎಂದು ಹೇಳಿದನು. ಆಗ ತಂದೆಗೆ ವಿಧೇಯರಾದ ಆ ದಶಕುಮಾರರು ವಿನಯದಿಂದ ''ತಾತ, ತಮ್ಮ ಅಪ್ಪಣೆಯಂತೆ ಪ್ರಜಾವೃದ್ಧಿಯನ್ನು ಮಾಡಲಿಕ್ಕೆ ನಮ್ಮಲ್ಲಿ ಮಹಾಸಾಮರ್ಥ್ಯವು ಬರಲು ನಾವು ಏನು ಮಾಡಬೇಕು'' ಎಂದು ಕೇಳಿದರು. ಆಗ ಪ್ರಾಚೀನ ಬರ್ಹಿಯು ''ಮೋಕ್ಷಾದಿ ಚತುರ್ವಿಧ ಪುರುಷಾರ್ಥವನ್ನು ಕೊಡುವ ಶ್ರೀ ಗೋವಿಂದನನ್ನೇ ನೀವು ಪ್ರಜಾವೃದ್ಧಿಗಾಗಿ ಆರಾಧನೆಯನ್ನು ಮಾಡಿರಿ'' ಎಂದು ಹೇಳಿದರು. ಆಗ ಆ ಹತ್ತೂ ಜನ ಪ್ರಾಚೀನಬರ್ಹಿಯ ಪುತ್ರರು ತಂದೆಯ ಮಾತಿನಂತೆ ಶ್ರೀ ವಿಷ್ಣುವಿನ ಆರಾಧನೆ ಮಾಡಬೇಕೆಂದು ಸಂಕಲ್ಪ ಮಾಡಿದರು. ಮತ್ತು ಶ್ರೀ ಹರಿಧ್ಯಾನ ರೂಪವಾದ ತಮ್ಮ ತಪಸ್ಸಿಗೆ ನೆಲದಲ್ಲಿ ಏನಾದರೂ ವಿಘ್ನವು

ಬರಬಹುದೆಂದು ಸಮುದ್ರದ ನಟ್ಟನಡುವೆ ನಡುನೀರಿನಲ್ಲಿ ಮುಳುಗಿ ಕುಳಿತು ಏಕಾಗ್ರಚಿತ್ತದಿಂದ ಶ್ರೀ ಹರಿಯ ಸ್ತೋತ್ರವನ್ನು ಮಾಡುತ್ತ ಹತ್ತು ಸಾವಿರ ವರ್ಷಗಳ ವರೆಗೆ ತಪೋನುಷ್ಠಾನವನ್ನು ಆಚರಿಸಿದರು. ಪ್ರಾಚೇತಸರೆಂಬ ಹೆಸರಿನ ಆ ಹತ್ತು ಜನ ರಾಜಕುಮಾರರು ಹತ್ತು ಸಾವಿರ ವರ್ಷಗಳವರೆಗೆ ಜಲಸಮಾಧಿಯನ್ನು ಹೊಂದಿ ಬಗೆಬಗೆಯಾಗಿ ಭಗವಂತನನ್ನು ಕೊಂಡಾಡುತ್ತ ತದೇಕತಾನ ಮನಸ್ಸಿನಿಂದ ನಿರಂತರ ಧ್ಯಾನರೂಪವಾದ ತಪಸ್ಸನ್ನು ಮಾಡಿದ್ದರಿಂದ ಶ್ರೀ ಹರಿಯು ಅವರಿಗೆ ಪ್ರಸನ್ನನಾದನು. ಮತ್ತು ಶ್ರೀಮನ್ನಾರಾಯಣನು ಅವರಿಗೆ ನೀರಿನಲ್ಲಿ ನಿಂತಲ್ಲಿಯೇ ತನ್ನ ಪ್ರತ್ಯಕ್ಷ ದರ್ಶನವನ್ನಿತ್ತು ಅವರಿಗೆ ಅಭಿಲಷಿತವಾದ ಸಂತಾನ ಅಭಿವೃದ್ಧಿರೂಪವಾದ ವರವನ್ನು ಕೊಟ್ಟು ಹರಿಸಿದನು. ಆ ಪ್ರಾಚೇತಸರು ಪ್ರಸನ್ನನಾದ ಪರಮಾತ್ಮನಿಂದ ಪ್ರಜಾಭಿವೃದ್ಧಿಯ ವರವನ್ನು ಪಡೆದುಕೊಂಡು ಆ ಸಮುದ್ರ ಗರ್ಭದಿಂದ ಹೊರಬಿದ್ದು ನೀರಿನಿಂದ ಮೇಲೆ ಎದ್ದು ಬಂದರು.

## ನೀರಿನಲ್ಲಿ ತಪಸ್ಸು ಮಾಡಿ ಬೆಂಕಿ ಉಗುಳಿದರು

ರಾಜಕುಮಾರರಾದ ಹತ್ತೂ ಜನ ಪ್ರಾಚೇತಸರು ಅತ್ತ ತಪಸ್ಸಿಗಾಗಿ ಸಾಗರದ ನೀರಿನ ಆಗರವನ್ನು ಸೇರಿದ ಬಳಿಕ ಇತ್ತ ಭೂಮಂಡಲವನ್ನೆಲ್ಲ ಗಿಡಗಂಟೆಗಳು ಆಕ್ರಮಿಸಿ ವ್ಯಾಪಿಸಿಬಿಟ್ಟವು. ಪೃಥುಮಹಾರಾಜನು ಕಡಿದು ಒಟ್ಟಿದ ಗಿಡಬಳ್ಳಿಗಳೆಲ್ಲ ಈ ಹತ್ತು ಸಾವಿರ ವರ್ಷದಲ್ಲಿ ಕುಡಿಯೊಡೆದು, ಗುಡಿ ಎತ್ತಿ, ಶಾಖೋಪ ಶಾಖೆಗಳಿಂದ ದಾಂಗುಡಿ ಇಟ್ಟು ಹೆಮ್ಮರಗಳಾಗಿ ನೆಲದ ತುಂಬ ಹಮ್ಮಿ ಹೊಮ್ಮಿ ನಿಂತವು. ವನಸ್ಪತಿಗಳ ಈ ರಭಸದ ಬೆಳವಣಿಗೆಯಿಂದ ನೋಡಿದಲ್ಲೆಲ್ಲ ಗಿಡದ ಝೂಡುಗಳು ನಿಬಿಡವಾಗಿ ಹಬ್ಬಿ, ಊರು ಕೇರಿಗಳನ್ನೆಲ್ಲ ಎಲ್ಲ ಕಡೆಗೂ ಚಲ್ಲುವರಿದು ತಮ್ಮ ಟೊಂಗೆ ಟಿಸಿಲುಗಳಿಂದ ಹೊಚ್ಚಿ ಮುಚ್ಚಿ ಬಿಟ್ಟವು. ನೋಡಿದಲ್ಲೆಲ್ಲ ಗಿಡಬಳ್ಳಿಗಳು ಬೀಡು ಬಿಟ್ಟದ್ದವು. ಜನರಿಗೂ ಜಾನಾವರಗಳಿಗೂ ಉಳಿಯಲಿಕ್ಕೂ ಬೆಳೆಯಲಿಕ್ಕೂ ಅವಕಾಶವೇ ಇಲ್ಲದಂತಾಗಿತ್ತು. ನಾಡೆಲ್ಲವೂ ಕಾಡಾಗಿ ಪ್ರಾಣಿಗಳು ಬದುಕುವುದೇ ಕಷ್ಟವಾಯಿತು.

ನೀರಿನಿಂದ ಮೇಲಕ್ಕೆ ಎದ್ದು ಬಂದ ಪ್ರಾಚೇತಸರು ತಾವಿಲ್ಲದಾಗ ಭೂಮಂಡಲದಲ್ಲಿ ನಡೆದ ಈ ಗಿಡಗಳ ಹಾವಳಿಯನ್ನು ಕಂಡು ಕ್ರುದ್ಧರಾಗಿ ತಮ್ಮ ಬಾಯಿಯಿಂದ ಬೆಂಕಿಯ ಜ್ವಾಲೆಗಳನ್ನು ಉಗುಳತೊಡಗಿದರು. ಅದಕ್ಕೆ ಅವರ ನಿಶ್ವಾಸದ ಗಾಳಿಯು ಸೇರಿ ಕಿಡಿ ಕಿಚ್ಚಾಗಿ ದಳ್ಳುರಿಯ ರೂಪವನ್ನು ತೆಗೆದುಕೊಂಡು ಗಿಡಗಳನ್ನೆಲ್ಲ ಸುಡುತ್ತಿತ್ತು. ಅವರು ಸಿಟ್ಟಿನ ಭರದಲ್ಲಿ ಬಿಟ್ಟ ನಿಟ್ಟುಸಿರು ಸುಂಟರ ಗಾಳಿಯಾಗಿ ಎಲ್ಲೆಡೆಗೆ ಹಮ್ಮಿದ ಹೆಮ್ಮರಗಳನ್ನು ಬೇರು ಸಹಿತ ಕಿತ್ತಿ ಒಗೆಯುತ್ತಿತ್ತು. ಕಿತ್ತಿ ಬಿದ್ದ ಆ ಗಿಡಗಳನ್ನು ಅವರ ಮುಖದಿಂದ ತೂರಿ ಬಂದ ಕೋಪಾಗ್ನಿಯ ಕಾಡ್ಗಿಚ್ಚು ಸುಟ್ಟು ಹಾಕುತ್ತಲಿತ್ತು. ಹೀಗೆ ಭೂಮಂಡಲದಲ್ಲಿರುವ ವೃಕ್ಷ ಕುಲವನ್ನೆಲ್ಲ ಪ್ರಾಚೇತಸರ ಮೌಖಿಕ ಅಗ್ನಿಯು ಸುಟ್ಟು ಬೂದಿಯನ್ನಾಗಿ ಮಾಡಿತು. ಅದರಿಂದ ಮಹೀತಲವನ್ನೆಲ್ಲ ವ್ಯಾಪಿಸಿನಿಂತ ಗಿಡಗಳು ರಾಶಿರಾಶಿಯಾಗಿ ಉರಿದು ಹೋದವು. ಮತ್ತೆ ಎಲ್ಲ ಕಡೆ ಬಯಲು, ನೆಲ, ಹೊಲ, ಜಲ,

ಸ್ಥಲ, ಬೆಟ್ಟ, ಬಾನು, ಕಾನು, ಭೂಮಿ, ಎಲ್ಲವೂ ಬೇರೆಬೇರೆಯಾಗಿ ಕಾಣತೊಡಗಿದವು. ಹೀಗೆ ಪ್ರಾಚೇತಸರ ಕೋಪಾಗ್ನಿಗೆ ವನಸ್ಪತಿ ಪ್ರಪಂಚವೆಲ್ಲವೂ ಆಹುತಿಯಾಗಿ ಕೆಲವೇ ಗಿಡಗಂಟೆಗಳು ಉಳಿದುಕೊಂಡಾಗ ವೃಕ್ಷಗಳ ಅಧಿರಾಜನಾದ ಚಂದ್ರನು ಆ ಪ್ರಾಚೇತಸರ ಬಳಿಗೆ ಬಂದು ಬಿನ್ನಹ ಮಾಡಿಕೊಂಡನು. ''ರಾಜಶ್ರೇಷ್ಠರೇ, ನೀವು ತುಸು ಶಾಂತರಾಗಿ ನನ್ನ ಮಾತನ್ನು ಆಲಿಸಿರಿ. ನಿಮಗೂ ಈ ಅಳಿದುಳಿದ ಗಿಡಗಳಿಗೂ ಸಂಧಿಯನ್ನು ಮಾಡಿಸಬೇಕೆಂದು ನಾನಿಲ್ಲಿಗೆ ಬಂದಿದ್ದೇನೆ. ವೃಕ್ಷಗಳ ಕನ್ಯೆಯಾದ ಈ ''ಮಾರಿಷಾ'' ಎಬ ಲಲನಾ ಮಣಿಯು ನಾರೀ ಕುಲಕ್ಕೆ ಒಂದು ರತ್ನದಂತೆ ಇರುತ್ತಾಳೆ. ಇವಳನ್ನು ನೀವು ಪ್ರಾಣಿಗ್ರಹಣ ಮಾಡಿರಿ. ಇವಳಿಂದ ನಿಶ್ಚಿತವಾಗಿಯೂ ನಿಮ್ಮ ವಂಶವು ಅಭಿವೃದ್ಧಿಯನ್ನು ಹೊಂದುವುದು. ನಿಮ್ಮ ತೇಜಸ್ಸಿನ ಅರ್ಧದಲ್ಲಿ ನನ್ನ ತೇಜಸ್ಸಿನ ಅರ್ಧಭಾಗವನ್ನು ನಾನು ಕೂಡಿಸುತ್ತೇನೆ. ಈ ಎರಡೂ ತೇಜಸ್ಸುಗಳ ಪ್ರಭಾವದಿಂದ ಈ ಮಾರಿಷೆಯಲ್ಲಿ ನಿಮಗೆ ದಕ್ಷಪ್ರಜಾಪತಿ ಎಂಬ ಮಗನು ಹುಟ್ಟುವನು. ವೃಕ್ಷಕುಮಾರಿಯಾದ ಈ ಮಾರಿಷೆಯ ಜನನ ಕತೆಯೂ ಕೌತುಕಕಾರಿಯಾಗಿದೆ ಕೇಳಿರಿ.

ಪೂರ್ವಕಾಲದಲ್ಲಿ ವೇದವೇದಾಂತವಿಶಾರದನಾದ ''ಕಂಡು'' ಎಂಬ ಋಷಿಯು ಗೋಮತೀ ನದಿಯ ತೀರದಲ್ಲಿ ಘೋರ ತಪಸ್ಸನ್ನು ಆಚರಿಸುತ್ತಲಿದ್ದನು. ಅವನ ತಪಸ್ಸನ್ನು ಹಾಳುಮಾಡಲು ದೇವೇಂದ್ರನು ''ಪ್ರಮ್ಲೋಚಾ'' ಎಂಬ ಅಪ್ಸರೆಯನ್ನು ಕೊಟ್ಟು ಕಳಿಸಿದನು. ಪ್ರಮ್ಲೋಚೆಯ ಅನಿಂದ್ಯ ಸೌಂದರ್ಯ, ಮುಗ್ಧ ಮಂದಹಾಸ ಹಾಗೂ ಮಧುರಾಲಾಪಗಳನ್ನು ಕಂಡು ಮುನಿಯು ತಪಸ್ಸು ಖಂಡಿತವಾಯಿತು. ಅವನು ಆ ಸ್ವರ್ಗಸುಂದರಿಯೊಡನೆ ಮಂದರದ್ರೋಣಿಯಲ್ಲಿ ವಿಲಾಸಗೈಯುತ್ತ ವಿಷಯ ಲಂಪಟನಾಗಿ ನೂರಾರು ವರುಷಗಳನ್ನು ಕಳೆದನು. ಅನಂತರ ಒಂದು ದಿನ ಪ್ರಮ್ಲೋಚೆಯು ಮಹರ್ಷಿಗೆ ''ಮುನಿವರ್ಯರೇ, ನಾನಿನ್ನು ಸ್ವರ್ಗಕ್ಕೆ ಹೋಗುತ್ತೇನೆ. ಪ್ರಸನ್ನವಾದ ಮನಸ್ಸಿನಿಂದ ತಾವು ನನಗೆ ಅಪ್ಪಣೆಯನ್ನು ನೀಡಬೇಕು.'' ಎಂದು ಕೇಳಿಕೊಂಡಳು. ಆದರೆ ಕಾಮವಾಸನೆಯ ಕಾವು ಇನ್ನೂ ಕಡಿಮೆಯಾಗದ ಆ ಕಂಡು ಮುನಿಯು ಆ ಅಪ್ಸರಾಂಗನೆಗೆ ''ಇನ್ನೂ ಕೆಲವು ದಿನ ಇಲ್ಲಿಯೇ ನನ್ನೊಡನೆ ವಿಲಾಸ ಕೇಳಿಯಾಡುತ್ತ ಇರು'' ಎಂದು ಅಂಗಲಾಚಿದನು. ಆಗ ಆ ಪ್ರಮ್ಲೋಚೆಯು ಋಷಿಯ ಅಪೇಕ್ಷೆಯಂತೆ ಮತ್ತೆ ನೂರು ವರ್ಷಕ್ಕಿಂತ ಹೆಚ್ಚು ಕಾಲ ಅಲ್ಲಿ ಇದ್ದು ಆ ಮಹರ್ಷಿಯೊಡನೆ ವಿಷಯ ಸುಖವನ್ನು ಅನುಭವಿಸಿದಳು.

## ಭೋಗ ಉಂಡು, ಯೋಗಕಂಡ ಕಂಡು ಮುನಿ

ಅನಂತರ ಮತ್ತೆ ಅವಳು ಸ್ವರ್ಗಕ್ಕೆ ಹೋಗಲು ಆ ಋಷಿಯ ಅನುಮತಿಯನ್ನು ಕೇಳಿದಳು. ಆದರೆ ಮುನಿಯು ಆ ಗಂಧರ್ವ ಸುಂದರಿಯನ್ನು ತನ್ನ ಬಳಿಗೆ ಬರಸೆಳೆದು ''ಚೆಲುವಿನ ಚಿಟ್ಟೆಯೇ, ಇನ್ನೂ, ತುಸುಹೊತ್ತು ನಿಲ್ಲು. ನೀನು ಹೋದಬಳಿಕ ಮತ್ತೆ ಬೇಗ ಮರಳಿ ಬರುವದಿಲ್ಲ'' ಎಂದು ನುಡಿದು ಬಲವಂತದಿಂದ ನಿಲ್ಲಿಸಿಗೊಳ್ಳುತ್ತಿದ್ದನು. ಆಗ ಆ ದೇವಲೋಕದ ಗಣಿಕೆಯು ಮುಗುಳನಗೆ ನಕ್ಕು ಆ ಮುನಿಯ ಮನವನ್ನು

ಮರುಳುಮಾಡಿ ಮತ್ತೆ ಅವನೊಡನೆ ರಾಗ ರತಿಯಾಗಿ ಶೃಂಗಾರ ಸತಿಯಾಗಿ ಲೀಲಾವಿಲಾಸಕ್ಕೆ ಇಳಿಯುತ್ತಿದ್ದಳು. ಹೀಗೆ ಮತ್ತೆ ಸುಮಾರು ಇನ್ನೂರು ವರ್ಷಗಳು ಉರುಳಿದವು. ಪ್ರಮ್ಲೋಚೆಗೆ ಅಮರಾವತಿಯನ್ನು ಬಿಟ್ಟು ಬಂದು ಬಹಳ ದಿನಗಳಾಗಿದ್ದರಿಂದ ಮರಳಿ ಸ್ವರ್ಗಕ್ಕೆ ಹೋಗಬೇಕೆಂಬ ಆಶೆಯಿಂದ ಹೃದಯವು ಅತ್ತ ಎಳೆಯುತ್ತಿತ್ತು. ಅದಕ್ಕಾಗಿ ಅವಳು ಮೇಲಿಂದ ಮೇಲೆ ಕಂಡು ಋಷಿಯನ್ನು ಕೇಳುತ್ತಲಿದ್ದಳು. ಆದರೆ ಪ್ರಣಯ ಪರತಂತ್ರನಾದ ಆ ಮುನಿಯು ಅವಳ ರಾಗ ರಸದ ಪ್ರಣಯ ಕೇಲೀವಿಲಾಸ ಲಾಲಸನಾಗಿ ಅವಳನ್ನು ಬಿಡುತ್ತಿರಲಿಲ್ಲ. ಹಾಗೇ ಬಿಟ್ಟು ಹೋದರೆ ಚಂಡಕೋಪನಾದ ಆ ಕಂಡು ಮುನಿಯು ಕೋಪದಿಂದ ಕೆಂಡದಂತಾಗಿ ತನಗೆ ಶಾಪಕೊಡಬಹುದೆಂದು ಭೀತಿಯಿಂದಲೂ, ಅಷ್ಟು ದಿನದ ಸಹವಾಸದಿಂದ ಆ ಮುನಿಯ ಮೇಲೆ ತನಗೆ ಉಂಟಾದ ಸ್ವಾಭಾವಿಕ ಮೋಹ ಮಮತೆಗಳಿಂದಲೂ ಅವಳು ಅಲ್ಲಿಂದ ಆ ಸ್ಥಳವನ್ನು ಬಿಟ್ಟು ಹೋಗಲಾರದೆ ಅಲ್ಲಿಯೇ ಇದ್ದುಬಿಟ್ಟಳು. ಆ ಮುನಿಯ ಮನಸ್ಸಿನಲ್ಲಿ ಕಾಮ ಕುಣಿಯುತ್ತಲಿದ್ದ. ಹಗಲಿರುಳು ಪ್ರೇಮದಿಂದ ಮರುಳಾದ ಋಷಿಗೆ ಅನುದಿನವೂ ಹೊಸಹೊಸ ರೂಪರಸಗಳೇ ಅವಳಲ್ಲಿ ತೋರಿಬರುತ್ತಿದ್ದವು.

ಒಂದು ದಿನ ಸಂಜೆಯ ಹೊತ್ತು, ಕಂಡು ಮುನಿಯು ಗಡಿಬಿಡಿಯಿಂದ ತನ್ನ ಎಲೆಯ ಮನೆಯಿಂದ ಹೊರಹೊರಟ. ಅವನ ಈ ಅವಸರದ ಗಮನವನ್ನು ತಡೆದು ಆ ತರಳೆ ಕೇಳಿದಳು. ''ಸವಾರಿ ಎತ್ತ ಚಿತ್ತೈಸುವದು ?'' ಅದಕ್ಕೆ ಮುನಿಯು ''ಸುಂದರೀ, ಅತ್ತ ನೋಡು. ಹೊತ್ತು ಹೊರಳಿದೆ. ನಾನು ಕೂಡಲೇ ಸಂಜೆಯ ಸಂಧ್ಯಾವಂದನೆಯನ್ನು ಮಾಡುವೆನು. ಇಲ್ಲದಿದ್ದರೆ ನನ್ನ ಕರ್ಮ ಲೋಪವಾಗಲಿಕ್ಕಿಲ್ಲವೇ ?'' ಆಗ ಆ ಚೆಲುವೆಯು ತುಟಿಯ ತುದಿಯಲ್ಲಿ ನಗೆಮುಗಳನ್ನು ಅರಳಿಸಿ ''ಧರ್ಮವನ್ನು ಅರಿತ ಮುನಿವರ್ಯ, ನಿಮಗೆ ಇಂದೇ ಸಂಜೆಯಾಯಿತೇ ! ನಾನು ಇಲ್ಲಿ ಬಂದ ಬಳಿಕ ಎಷ್ಟೋ ವರ್ಷಗಳು ಉರುಳಿಹೋಗಿವೆ. ಈ ಅವಧಿಯಲ್ಲಿ ಹೊತ್ತು ಹೊರಳಿದ್ದೆಷ್ಟೋ ! ಇರುಳು ಉರುಳಿದ್ದೆಷ್ಟೋ ! ಬೆಳಗು ಮರಳಿದ್ದೆಷ್ಟೋ ! ಸಂಜೆ ಅರಳಿದ್ದೆಷ್ಟೋ ! ಒಂದು ದಿನವೂ ಸಂಜೆ ಮುಂಜಾವುಗಳಲ್ಲಿ ತಾವು ಒಂದು ಸಲವೂ ಸಂಧ್ಯೆಯನ್ನು ವಂದಿಸಲಿಲ್ಲ. ಎಂದಿಲ್ಲದ ಸಂಧ್ಯಾವಂದನೆಯ ಗಡಿಬಿಡಿಯು ಇಂದೇಕೆ ಬಂದಿದೆ ! ಇಷ್ಟು ದಿನ ಬಿಟ್ಟದ್ದು ಒಂದು ಆಶ್ಚರ್ಯ. ಇಂದು ಒಮ್ಮೆಲೇ ಇಷ್ಟು ಅವಸರಪಟ್ಟದ್ದು ಮತ್ತೊಂದು ಆಶ್ಚರ್ಯ. ಇದರ ರಹಸ್ಯವೇನು ತಿಳಿಸುವಿರಾ !''

**ಕಂಡು ಮುನಿ :-** ಭದ್ರೇ ನೀನು ಇಂದೇ ಮುಂಜಾವಿನಲ್ಲಿ ಈ ಹೊಳೆಯ ದಂಡೆಗೆ ಬಂದೆಯಲ್ಲವೇ ! ಆಗಲೇ ನಾನು ನಿನ್ನನ್ನು ಕಂಡದ್ದು. ಆ ಬಳಿಕ ತೆಳುಮೈ ತರಳೆಯಾದ ನೀನು ನನ್ನ ಎಲೆ ಮನೆಯಲ್ಲಿ ಪ್ರವೇಶಿಸಿದೆ. ನೀನು ನನ್ನ ಆಶ್ರಮದಲ್ಲಿದ್ದಾಗಲೇ ಇಡೀ ಹಗಲುಹೊತ್ತು ಸರಿದು ಹೋಯಿತು. ಇದೋ ಇದೀಗ ಸಂಧ್ಯಾಸಮಯ. ಇದರಲ್ಲಿ ನಗುವ ಮಾತೇನು? ಕೌತುಕದ ಕಾರಣವೇನು? ಈಗ ಪರಿಹಾಸವನ್ನು ಬಿಟ್ಟು ನಿಜವಾಗಿ ನಡೆದದ್ದೇನು ತಿಳಿಸು.

ಬಳಿಕ ಆ ಮುನಿಯು ಮತ್ತೆ ತನ್ನ ಮನಸ್ಸನ್ನು ಸ್ಥಿರಮಾಡಿಕೊಂಡು ತಪಸ್ಸಿಗೆ ಅಣಿಯಾದನು. ಕಳೆದು ಹೋದ ತನ್ನ ತಪಸ್ಸಿನ ನಿಧಿಯನ್ನು ಮತ್ತೆ ಪಡೆಯಲಿಕ್ಕಾಗಿ ನಾರಾಯಣನ ಒಳ್ಳೇ ಜಾಗ್ರತ ಸ್ಥಳವಾದ ಪುರುಷೋತ್ತಮ ಬೆಟ್ಟದ ಮೇಲಿರುವ ಹರಿಮಂದಿರಕ್ಕೆ ಹೋಗಿ ಅಲ್ಲಿ ಏಕಾಗ್ರ ಮನಸ್ಸಿನಿಂದ ಮುಕುಂದನ ಆರಾಧನೆಯನ್ನು ಮಾಡಿದನು. ಅಲ್ಲಿ ಮಹಾ ಯೋಗಿಯಾದ ಮುನಿಪುಂಗವನು ತದೇಕ ಚಿತ್ತದಿಂದ ಎರಡೂ ಕೈಗಳನ್ನು ಮೇಲೆತ್ತಿ ಬ್ರಹ್ಮಪಾರ ಸ್ತೋತ್ರವನ್ನು ಪಠಿಸುತ್ತ ಜಪ ತಪಗಳಿಂದ ಭಗವಂತನನ್ನು ಮೆಚ್ಚಿಸಿದನು.

## ಬ್ರಹ್ಮಪಾರ ಸ್ತೋತ್ರ

**ಪ್ರಚೇತನ ಉವಾಚ :**

ಬ್ರಹ್ಮಪಾರಂ ಮುನೇ ಶ್ರೋತುಮಿಚ್ಛಾಮಃ ಪರಮಂ ಸ್ತವಮ್ ।
ಜಪತಾ ಕಂಡುನಾ ದೇವೂ ಯೇನಾಽರಾಧ್ಯತ ಕೇಶವಃ ॥ 53 ॥

**ಸೋಮಃ ಉವಾಚ :**

ಪಾರಂ ಪರಂ ವಿಷ್ಣು ರಪಾರಪಾರಃ
ಪರಃ ಪರೇಭ್ಯಃ ಪರಮಾರ್ಥರೂಪೀ ।

ಸ ಬ್ರಹ್ಮ ಪಾರಃ ಪರಪಾರ ಭೂತಃ
ಪರಃ ಪರಾಣಾಮಪಿ ಪಾರಪಾರಃ ॥ 54 ॥

ಸ ಕಾರಣಂ ಕಾರಣತಸ್ತತೋಽಪಿ
ತಸ್ಯಾಪಿ ಹೇತುಃ ಪರಹೇತು ಹೇತುಃ ।
ಕಾರ್ಯೇಷು ಚೈವಂ ಸಹಿ ಕರ್ಮಕರ್ತೃ
ರೂಪೈರಶೇಷೈ ರವತೀಹ ಸರ್ವಮ್ ॥ 55 ॥

ಸ ಬ್ರಹ್ಮಭೂರ್ಬ್ರಹ್ಮ ಸ ಸರ್ವಭೂತೋ
ಬ್ರಹ್ಮ ಪ್ರಜಾನಾಂ ಪತಿರಚ್ಯುತೋಽ ಸೌ ।
ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣುಃ
ಅಪಕ್ಷಯಾದ್ಯೈ ರಖಿಲೈರಸಂಗಿ ॥ ॥ 56 ॥

ಬ್ರಹ್ಮಾಕ್ಷರಮಜಂ ನಿತ್ಯಂ ಯಥಾಸೌ ಪುರುಷೋತ್ತಮಃ ।
ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ॥ 57 ॥

ಏತದ್ ವೈ ಬ್ರಹ್ಮಪಾರಾಖ್ಯಂ ಸಂಸ್ತವಂ ಪರಮಂ ಜಪನ್ ।
ಅವಾಪ ಪರಮಾಂ ಸಿದ್ಧಿಂ ಸ ಸಮಾರಾಧ್ಯ ಕೇಶವಮ್ ॥ 58 ॥

ಪ್ರಚೇತಸರು - ಜಪ ಮಾಡತಕ್ಕ ಕಂಡು ಋಷಿಗಳು ಕಂಡುಕೊಂಡ ಆ ಬ್ರಹ್ಮಪಾರ ಸ್ತೋತ್ರವನ್ನು ಕೇಳಬೇಕೆಂದು ನಮಗೆ ಬಯಕೆಯಾಗಿದೆ. ಯಾವ ಮಂತ್ರದ ಜಪದಿಂದ ಶ್ರೀ ಹರಿಯು ಸುಪ್ರಸನ್ನವಾಗಿರುವನೋ ಅಂಥ ಸ್ತೋತ್ರವು ಎಲ್ಲರಿಗೂ ಜಪಿಸಲು ಯೋಗ್ಯವಾಗಿದೆ ಅದನ್ನು ನಮಗಾಗಿ ತಿಳಿಸಬೇಕು.

ಸೋಮ - ಅಪರಂಪಾರವಾದ ಈ ಸಂಸಾರ ಸಾಗರದಿಂದ ಭಕ್ತರನ್ನು ಆ ಪರಮಾತ್ಮನೇ ಪಾರುಗೊಳಿಸಬಲ್ಲನು. ಅವನು ಶ್ರೇಷ್ಠರಾದ ದೇವಾಧಿ ದೇವತೆಗಳಿಗಿಂತ ಶ್ರೇಷ್ಠತಮನು. ಅವನೇ ಪರಮಾರ್ಥ. ಪರಾವರ ಜೀವಿಗಳಿಗೆಲ್ಲ ಪರಗತಿಯನ್ನು ಈಯುವ ಅವನೇ ವೇದರಾಶಿಯ ಕೊನೆಯ ಗುರಿ, ಪರಮ ಮುಖ್ಯಾರ್ಥ. ಬ್ರಹ್ಮದೇವರ ''ಪರಾರ್ಧ'' ಪೂರ್ಣಾಯುಷ್ಯದ ಅವಸಾನ ಕಾಲದಲ್ಲಿ ನಡೆದ ಬ್ರಹ್ಮಪ್ರಳಯದಲ್ಲಿಯೂ ಕೂಡ ಅಪಾರ ಪ್ರಳಯ ಜಲಧಿಯ ನೀರಿನಲ್ಲಿ ಲೀಲೆಯಿಂದ ಹಾಯಾಗಿ ಆಲದೆಲೆಯ ಮೇಲೆ ಬಾಲನಾಗಿ ತೇಲಾಡುವ ಧೀರನೆಂದರೆ ಅವನೊಬ್ಬನೇ. ಚೇತನರಾಶಿಯಲ್ಲಿ ಉತ್ತಮರಿಗೆಲ್ಲ ಅವನು ಅತ್ಯುತ್ತಮ. ಶ್ರೇಷ್ಠತೆಯ ತಾರತಮ್ಯ ಶ್ರೇಣಿಯಲ್ಲಿ ಕೊನೆಯ ಮೆಟ್ಟಲು ಅವನೆ. ಹಿರಿತನದ, ತಾರತಮ್ಯದ ತುದಿ ಅವನು. ಅವನು ಸರ್ವಕ್ಕೂ ಕಾರಣನಾಗಿದ್ದಾನೆ. ನಮಗೆ ಕಾರಣಗಳೆಂದು ತೋರುವ ಎಲ್ಲಕ್ಕೂ ಅವನೇ ಮೂಲಕಾರಣ. ಪ್ರಪಂಚಕ್ಕೆ ಕಾರಣಗಳಾದ ಪಂಚಮಹಾಭೂತಗಳಿಗೆ ಮೂಲ ಕಾರಣವಾದ ಪ್ರಕೃತಿ ತತ್ವಕ್ಕೂ ಕೂಡ ಅವನೇ ಕಾರಣನಾಗಿದ್ದಾನೆ. ಸರ್ವ ಶ್ರೇಷ್ಠವೂ, ಸರ್ವಕಾರಣವೂ, ಆದ ಪ್ರಕೃತ್ಯಭಿಮಾನಿ ಮಹಾಲಕ್ಷ್ಮಿಗೂ ಕೂಡ ಅವನೇ ಮುಖ್ಯ ಕಾರಣನಾಗಿದ್ದಾನೆ. ಉಳಿದೆಲ್ಲ ಕಾರಣಗಳಿಗೆ ಕಾರಣತ್ವವೂ ಬಂದಿರುವದು ಅವನಿಂದ. ಅದರಂತೆ ಕಾರ್ಯಗಳಲ್ಲೆಲ್ಲ ಅವನು ನೆಲಿಸಿರುವದರಿಂದ ಅವನ ಮಹಿಮೆಯಿಂದಲೇ ಅವುಗಳಲ್ಲಿ ಸತ್ತಾ ಪ್ರತೀತಿಗಳು ಉಂಟಾಗುತ್ತವೆ. ಕಾರ್ಯವಾಗುವದು ಅವನ ದಯೆಯಿಂದ. ಕಾರ್ಯದಲ್ಲಿಯೂ ಕಾರಣದಲ್ಲಿಯೂ ನಿಂತುಕೊಂಡು ತಾನೇ ಕರ್ತೃವೂ ಕರ್ಮವೂ ಆಗಿ ಎಲ್ಲ ಕ್ರಿಯೆಗಳನ್ನು ತಾನೇ ಮಾಡಿ ಮಾಡಿಸಿ ಜಗದ್ರಕ್ಷೆಯ ಭಾರವನ್ನು ನಿರ್ವಹಿಸುತ್ತಲಿದ್ದಾನೆ. ಬ್ರಹ್ಮದೇವರನ್ನು ಅವನೇ ಹುಟ್ಟಿಸಿದನು. ಮತ್ತು ಆ ಬ್ರಹ್ಮದೇವರು ಕಳೆದುಕೊಂಡ ವೇದರಾಶಿಯನ್ನು ಅವರಿಗೆ ಮರಳಿ ತಂದುಕೊಟ್ಟವನು ಅವನೇ. ಈ ವಿಶ್ವವನ್ನೆಲ್ಲ ವ್ಯಾಪಿಸಿದ ನಿಜವಾದ ಪರಬ್ರಹ್ಮನೆಂದರೆ ಆ ನಾರಾಯಣನೇ. ಚತುರ್ಮುಖ ಬ್ರಹ್ಮದೇವರಲ್ಲಿ ನಿಂತು ಪ್ರಪಂಚವನ್ನೂ ಪ್ರಜೆಗಳನ್ನೂ, ಸೃಷ್ಟಿ

---

★ *ಕಂಡು ಮುನಿಯು ಕಂಡು ಹಿಡಿದ ಈ ಬ್ರಹ್ಮಪಾರ ಸ್ತೋತ್ರವು ಅತ್ಯಂತ ಪವಿತ್ರವಾದ ಮಹಾಮಂತ್ರವೆನಿಸಿದೆ. ಪ್ರತಿಯೊಬ್ಬ ಆಸ್ತಿಕನೂ ದಿನನಿತ್ಯದ ದೇವರ ಪೂಜೆಯ ಪ್ರಾರಂಭದಲ್ಲಿ ಇದನ್ನು ಅವಶ್ಯವಾಗಿ ಪಠಿಸುತ್ತಾರೆ. ದೇವಪೂಜಾ ಪದ್ಧತಿಯಲ್ಲಿ ಕಡ್ಡಾಯವಾಗಿ ಪಠಿಸಲೇಬೇಕೆಂದು ವಿಧಿಸಲ್ಪಟ್ಟ ಈ ಸ್ತೋತ್ರದ ಅರ್ಥವನ್ನು ಸಮಗ್ರವಾಗಿ ಮುಂದೆ ಕೊಟ್ಟಿದ್ದೇವೆ. ಮತ್ತು ಭಾವಿಕರಿಗೆಲ್ಲ ಪಾರಾಯಣಕ್ಕೆ ಅನುಕೂಲವಾಗಲೆಂದು ಮೂಲ ಸಂಸ್ಕೃತದಲ್ಲಿ ಸಮಗ್ರ ಬ್ರಹ್ಮಪಾರ ಸ್ತೋತ್ರವನ್ನು ಅವಿಕಲವಾಗಿ ಇಲ್ಲಿ ಕೊಡಲಾಗಿದೆ.*

ಮಾಡಿದವನು ಪರಬ್ರಹ್ಮನೇ ಅವನು ಸರ್ವ ಷಡ್ಗುಣ ಪರಿಪೂರ್ಣನೂ ಸರ್ವವಿಧ ನಾಶ ರಹಿತನೂ, ನಿತ್ಯನೂ ಆಗಿದ್ದು ಅವನು ಜನನ ಜಾಲದಲ್ಲಿ ಸಿಗುವದಿಲ್ಲ. ಸಾವು ಅವನ ಸನಿಹವೂ ಸುಳಿಯದು ಮೋಹಪಾಶವು ಅವನನ್ನು ಎಳೆಯದು "ಇಂಥ ನಿತ್ಯ ಸತ್ಯ ಸ್ವರೂಪನಾದ ಆ ಪರಬ್ರಹ್ಮನಿಗೆ ಅಕ್ಷರ ಬ್ರಹ್ಮನೆಂದೂ ಕ್ಷರಾಕ್ಷರ ಪುರುಷರಿಂದ ಉತ್ತಮನಾಗಿದ್ದರಿಂದ ಪುರುಷೋತ್ತಮನೆಂದೂ ಹೆಸರು. ಇಂಥ ಪರಾತ್ಪರ ಪುರುಷೋತ್ತಮನಾದ ನಿರ್ದೋಷ ನಾರಾಯಣನ ನಿತ್ಯ ಸ್ಮರಣದಿಂದ ನಮ್ಮಲ್ಲಿಯ ರಾಗದ್ವೇಷಾದಿ ದೋಷಗಳೆಲ್ಲವೂ ದೂರವಾಗಲಿ." ಇಂಥ ಶ್ರೇಷ್ಠವಾದ ಬ್ರಹ್ಮಪಾರ ಸ್ತೋತ್ರವನ್ನು ಭಕ್ತಿಯಿಂದ ಜಪಿಸಿ ಕಂಡುಮುನಿಯು ಭಗವಂತನನ್ನು ಒಲಿಸಿ ದಿವ್ಯ ಸಿದ್ಧಿಯನ್ನು ಪಡೆದನು.

## ಮಾರಿಷೆಯ ಜನ್ಮಾಂತರದ ಕತೆ

ಮರಗಳ ಮಗಳಾದ ಈ ಮಾರಿಷೆಯ ಪೂರ್ವಜನ್ಮದ ವೃತ್ತಾಂತವು ಮುಂದಿನ ಕಾರ್ಯ ಗೌರವ ದೃಷ್ಟಿಯಿಂದ ಉಪಯುಕ್ತವಾದುದರಿಂದ ನಿಮಗೆ ಹೇಳುತ್ತೇನೆ ಕೇಳಿರಿ. ಹಿಂದಿನ ಜನ್ಮದಲ್ಲಿ ಈ ಮಾರಿಷೆಯು ಒಬ್ಬ ಮಹಾರಾಜನ ಪಟ್ಟದರಸಿಯಾಗಿದ್ದಳು. ದುರ್ದೈವದಿಂದ ದೊರೆ ಬೇಗನೇ ಮರಣಹೊಂದಿದನು. ಪ್ರಾಯಕ್ಕೆ ಬರವುದಕ್ಕಿಂತ ಮೊದಲೇ ಪತಿಯನ್ನು ಕಳೆದುಕೊಂಡು ಪರದೇಶಿಯಾದ ಆ ರಾಜ ಮಹಿಷಿಯು ದುಃಖದಗ್ಧಳಾಗಿ ಭಗವಂತನಿಗೆ ಶರಣು ಹೋದಳು. ಪರಿಪರಿಯ ಸೇವೆಯಿಂದ ಅವನನ್ನು ಆರಾಧಿಸಿ ಒಲಿಸಿಕೊಂಡಳು. ಆ ಅರಸಿಯ ಆರಾಧನೆಗೆ ಮೆಚ್ಚಿ ಪರಮಾತ್ಮನು ಮೂರ್ತಿವಂತನಾಗಿ ಅವಳೆದುರು ಮೈದಾಳಿ ಬಂದು ನಿಂತು "ನೀನು ಬೇಕಾದ ವರ ಕೇಳು" ಎಂದು ಹೇಳಿದನು. ಅದಕ್ಕೆ ಆರ್ತಳಾದ ಆ ಅನಾಥ ರಾಜರಮಣಿಯು, "ಭಗವನ್, ಎಳಮೆಯಲ್ಲಿಯೇ ಪತಿಯನ್ನು ಕಳೆದುಕೊಂಡು ನನ್ನ ಬಾಳು ವ್ಯರ್ಥವಾಗಿದೆ. ಭಾಗ್ಯಹೀನವಾದ ನನ್ನ ಬದುಕು ಬರಿದೋ ಬರಿದು. ಜಗತೀಪತೇ, ನನ್ನ ಈ ಜನ್ಮವಂತೂ ಬಾಲ್ಯ ವೈಧವ್ಯದಿಂದ ಹಾಳಾಗಿ ಹೋಯಿತು. ಆದರೆ ಮುಕುಂದ, ಮುಂದಾದರೂ ನೀನು ದಯೆದೋರು. ಇನ್ನು ಮೇಲೆ ನನಗೆ ಬರುವ ಎಲ್ಲ ಜನ್ಮಗಳಲ್ಲಿಯೂ ನಿನ್ನ ದಯೆಯಿಂದ ಯೋಗ್ಯ ಪತಿಯನ್ನೂ ಶ್ಲಾಘ್ಯಪುತ್ರರನ್ನೂ ಪಡೆಯುವಂತಾಗಲಿ. ನನ್ನ ಮಗನು ಪ್ರಜಾಪತಿಗೆ ಸರಿಯಾಗಿ ನಿಲ್ಲಲಿ. ಅಧೋಕ್ಷಜಾ, ನಿನ್ನ ದಯೆಯಿಂದ ಎಲ್ಲರ ಕಣ್ಣಿಗೂ ಹಬ್ಬವಾಗುವಂತಹ ರೂಪ ಸಿರಿಯು ನನ್ನ ಸೊತ್ತಾಗಲಿ. ಭಗವನ್, ನನ್ನ ಮೇಲೆ ನಿಜವಾದ ಅನುಗ್ರಹವಿದ್ದರೆ ನಾನು ಮುಂದಿನ ಜನ್ಮದಲ್ಲಿ ಹೆಣ್ಣಿನ ಹೊಟ್ಟೆಯಿಂದ ಹುಟ್ಟದೇ ಹಾಗೇ ಹೇಗಾದರೂ ಮಾನವಿಯಾಗಿ ಮೂಡಿ ಬರುವಂತೆ ಮಾಡು."

ರಾಜಮಹಿಷಿಯ ಈ ಮಾತನ್ನು ಕೇಳಿ ವರವೀಯಲು ಪರಮೇಶ್ವರನು ಸಿದ್ಧನಾದನು. ನಮಿಸಬೇಕೆಂದು ನತಳಾದ ಆ ರಾಜಾಂಗನೆಯನ್ನು ಕರುಣೆಯಿಂದ ಕರಪಿಡಿದು ಎಬ್ಬಿಸಿ ಹೀಗೆ ಆಶೀರ್ವದಿಸಿದನು. "ಕಲ್ಯಾಣಿ, ನೀನು ಮುಂದಿನ ಒಂದೇ ಜನ್ಮದಲ್ಲಿ ಪ್ರಬಲ ಪರಾಕ್ರಮಿಗಳಾದ ಹತ್ತು ಜನ ಕೊಡುಗೈ ದೊರೆಗಳನ್ನು ಪತಿಗಳನ್ನಾಗಿ ಪಡೆಯುವೆ.

ಅದರಂತೆ ಅತ್ಯಂತ ಬಲಿಷ್ಠನಾದ ಓರ್ವ ಮಹಾತ್ಮನು ನಿನಗೆ ಮಗನಾಗಿ ಜನಿಸಲಿರುವನು. ಅವನಲ್ಲಿ ಪ್ರಜಾಪತಿಯ ಎಲ್ಲ ಗುಣಗಳು ಮೇಳೈಸುವವು. ಆ ನಿನ್ನ ಸತ್ಪುತ್ರನು ಅನೇಕ ವಂಶಗಳ ಮೂಲ ಪುರುಷನಾಗುವನು. ನಿನಗಾದರೂ ನಿನ್ನ ಇಚ್ಛೆಯಂತೆ ಗರ್ಭವಾಸವಿಲ್ಲದೆ ದಿವ್ಯರೂಪವು ಪ್ರಾಪ್ತವಾಗುವದು. ನನ್ನ ದಯೆಯಿಂದ ನೀನು ಎಲ್ಲ ಮಾನವೀಯ ಮನೋಹರವಾದ ಚೆಲವು, ಒಲವು, ಔದಾರ್ಯ, ಮುಂತಾದ ಗುಣಗಳ ಖಣಿಯಾಗಿ ಜನಿಸಲಿರುವೆ'' ಎಂದು ಒಲುಮೆಯಿಂದ ವರವಿತ್ತು ಹರಿಯು ಅಲ್ಲಿಂದ ಅದೃಶ್ಯನಾದನು. ಸತ್ಯಸಂಕಲ್ಪನಾದ ಆ ಶ್ರೀ ಹರಿಯ ವರವೇ ಈ ಮರಗಳ ಮಗಳಾದ ಮಾರಿಷೆಯ ರೂಪದಿಂದ ಮೈದಾಳಿ ನಿಂತಿದೆ. ಪ್ರಾಚೀನ ಬರ್ಹಿಯ ದಶಕುಮಾರರೇ, ಆ ದೇವದೇವೋತ್ತಮನ ಆದೇಶದಂತೆ ನೀವು ಇವಳನ್ನು ನಿಮ್ಮ ಧರ್ಮಪತ್ನಿಯೆಂದು ಸ್ವೀಕರಿಸಿರಿ''

ಪರಾಶರ - ಚಂದ್ರನ ವಚನವನ್ನು ಕೇಳಿ ಪ್ರಚೇತಸರು ವೃಕ್ಷಗಳ ಮೇಲಿನ ತಮ್ಮ ಕೋಪವನ್ನು ಕಡಿಮೆಮಾಡಿ ಗಿಡಗುವರಿಯಾದ ಮಾರಿಷೆಯನ್ನು ಧಾರ್ಮಿಕ ವಿಧಿ ವಿಧಾನಗಳಿಂದ ತಮ್ಮ ಧರ್ಮಪತ್ನಿಯೆಂದು ಪರಿಗ್ರಹಿಸಿದರು. ಈ ಮೊದಲು ಬ್ರಹ್ಮದೇವರ ಮಗನಾಗಿ ಜನಿಸಿದ ದಕ್ಷ ಪ್ರಜಾಪತಿಯು ಹತ್ತು ಜನ ಪ್ರಾಚೇತಸರ ಪುತ್ರನಾಗಿ ಮತ್ತೆ ಮಾರಿಷೆಯಲ್ಲಿ ಹುಟ್ಟಿಬಂದನು. ಈ ಮಾರಿಷಾಕುಮಾರನಾದ ದಕ್ಷನು ಬ್ರಹ್ಮದೇವರ ಮಾತನ್ನು ಅಕ್ಷರಶಃ ಪಾಲಿಸಿ ಪ್ರಜಾಭಿವೃದ್ಧಿಯನ್ನು ಮಾಡಿ ಸೃಷ್ಟಿಕಾರ್ಯದಲ್ಲಿಯೂ ಒಳ್ಳೆ ದಕ್ಷನೆನಿಸಿದನು. ಚತುರ್ಮುಖನ ಆದೇಶದಂತೆ ಸೃಷ್ಟಿಯನ್ನು ಹೇಗಾದರೂ ಮಾಡಿ ಬೆಳಿಸಬೇಕೆಂಬ ಉದ್ದೇಶದಿಂದ ಅವನು ಅನೇಕಾನೇಕ ಮಕ್ಕಳನ್ನು ತಾನೇ ಹೆತ್ತನು. ಅಸಂಖ್ಯ ಚರಾಚರ ಪ್ರಾಣಿಗಳನ್ನು ಈದನು. ಹಲವು ಎರಡು ಕಾಲಿನ ಪ್ರಾಣಿಗಳನ್ನೂ ಕೆಲವು ನಾಲ್ಕು ಕಾಲಿನ ಪಶುಗಳನ್ನು ಅವನು ತಾನೇ ಹಡೆದನು. ಮನಸ್ಸಿನಿಂದಲೂ ಹಲ ಕೆಲವರನ್ನು ಹುಟ್ಟಿಸಿದನು. ಇಷ್ಟರಿಂದ ಅವನ ಇಷ್ಟದಂತೆ ಸೃಷ್ಟಿಯಲ್ಲಿ ವೃದ್ಧಿಯು ಆಗದಿದ್ದದ್ದನ್ನು ನೋಡಿ ಕೊನೆಗೆ ಅವನು ಹೆರುವ ಯಂತ್ರದಂತಿರುವ ಅರವತ್ತು ಹೆಣ್ಣುಮಕ್ಕಳನ್ನು ಪಡೆದನು. ಅವರಲ್ಲಿ ಹತ್ತು ಕನ್ಯೆಯರನ್ನು ಧರ್ಮನಿಗೆ ಇತ್ತನು. ಕಶ್ಯಪಋಷಿಗೆ ಹದಿಮೂರು ಕನ್ಯೆಯರನ್ನಿತ್ತನು. ೨೭ಜನ ಚೆಲುವೆಯರನ್ನು ಚಂದ್ರನಿಗೆ ಧಾರೆಯೆರೆದನು. ಚಂದ್ರ ಪತ್ನಿಯರಾದ ಆ ಇಪ್ಪತ್ತೇಳು ದಕ್ಷಕುಮಾರಿಯರೇ ಈಗ ಗಗನ ಮಂಡಲದಲ್ಲಿ ದಿವ್ಯ ನಕ್ಷತ್ರರಾಗಿ ಕಾಲಚಕ್ರವನ್ನು ಉರುಳಿಸುತ್ತಾರೆ. ಈ ಎಲ್ಲ ದಕ್ಷಕುವರಿಯರಿಂದ ದೇವ, ದಾನವ, ದೈತ್ಯ, ಮಾನವ, ಪಶು, ಪಕ್ಷಿ ಗಂಧರ್ವ, ನಾಗ ಮುಂತಾದ ಎಲ್ಲ ಬಗೆಯ ಜೀವ ಜಂಗುಳಿಯ ಸೃಷ್ಟಿಯಾಯಿತು.

ಮೈತ್ರೇಯ, ಅಂದಿನಿಂದ ಮೈಥುನ ಅಥವಾ ಸ್ತ್ರೀಸಂಗದಿಂದ ಸೃಷ್ಟಿಯು ಪ್ರಾರಂಭವಾಯಿತು. ಈ ಮೊದಲು ದೇವಋಷಿಗಳು ಇಚ್ಛೆಯಿಂದಲೇ ಈಯುತ್ತಿದ್ದರು. ನೋಡಿದ ಮಾತ್ರದಿಂದಲೇ ಸಂತಾನವನ್ನು ನೀಡುತ್ತಿದ್ದರು. ಮಹಾತ್ಮರಾದವರು ಮುಟ್ಟದರೂ ಸಾಕು ಮಕ್ಕಳಾಗುತ್ತಿದ್ದವು. ಉಗ್ರವಾದ ತಪಃಸಾಧನದಿಂದ ಸಿದ್ಧಿ ಪಡೆದ ಯೋಗಿಗಳ ಹಾಗೂ ದೇವತಾ ಪುರುಷರ ಆ ಸೃಷ್ಟಿಕ್ರಮವೇ ಬೇರೆ. ಆ ಹುಟ್ಟಿಗೆ ಹೆಣ್ಣು ಗಂಡುಗಳ ಕೂಡಾಟ ಒಡನಾಟವಾಗಲೀ ಹೆರಿಗೆಯ ಹಗರಣವಾಗಲೀ ಒಂದೂ ಇರಲಿಲ್ಲ. ಆ ತರಹದ ಸಂಕಲ್ಪಶಕ್ತಿ, ದರ್ಶನ ಶಕ್ತಿ, ಸ್ಪರ್ಶನ ಶಕ್ತಿಗಳು ಇಲ್ಲವಾಗಿ

ನರಕುಲವು ನಿರ್ಬಲವಾದಾಗ ನರನಾರಿಯರ ಒಡನಾಟದಿಂದ ಒಡಮೂಡುವ ಸಂಗ ಸೃಷ್ಟಿಯು ಪ್ರಾರಂಭವಾಯಿತು.

**ಮೈತ್ರೇಯ** - ''ಮುನಿಮಹಾಶಯರೇ, ದಕ್ಷನು ಮೊದಲು ಬ್ರಹ್ಮನ ದಕ್ಷಿಣಾಂಗುಷ್ಠದಿಂದ ಅಂದರೆ ಬಲಗೈ ಹೆಬ್ಬಟ್ಟಿನಿಂದ ಹುಟ್ಟಿಬಂದನೆಂದು ಕೇಳಿದ್ದೇನೆ. ಅವನು ಮತ್ತೆ ಪ್ರಾಚೇತಸ ಪುತ್ರನಾಗಿ ಹೇಗೆ ಜನಿಸಿದ ! ಮತ್ತು ಈ ದಕ್ಷನು ಚಂದ್ರನ ಮಗಳೂ ಆದ ಮಾರಿಷಾಳ ಮಗ ಅರ್ಥಾತ್ ಚಂದ್ರನ ದೌಹಿತ್ರ. ಈ ಚಂದ್ರನ ಮೊಮ್ಮಗನಾದ ದಕ್ಷನು ತನ್ನ ಇಪ್ಪತ್ತೇಳು ಹೆಣ್ಣು ಮಕ್ಕಳನ್ನು ತನ್ನ ಮಾತಾಮಹನಿಗೆ ಕೊಟ್ಟು ಅಜ್ಜನಿಗೆ ಮಾವನು ಹೇಗಾದನು?''

**ಪರಾಶರ** - ದಕ್ಷನೇ ಮೊದಲಾದ ಪ್ರಜಾಪತಿಗಳು ಪ್ರತಿಯುಗದಲ್ಲಿಯೂ ಹುಟ್ಟಿಬರುತ್ತಾರೆ. ಹಿಂದೆ ಆ ಕಾಲದಲ್ಲಿ ಹಿರಿಯ - ಕಿರಿಯ, ಅಜ್ಜ ಮೊಮ್ಮಗ, ಈ ಭೇದವೇ ಇರಲಿಲ್ಲ. ತಪಃಶಕ್ತಿಯು ಹೆಚ್ಚಿದ್ದವರೇ ಹಿರಿಯರು. ಜ್ಞಾನಶಕ್ತಿಯು ಕಡಿಮೆ ಇದ್ದವರೇ ಕಿರಿಯರು. ವಯಸ್ಸಿನ ಮೇಲೆ ಆ ಕಾಲದಲ್ಲಿ ಹಿರಿತನ - ಕಿರಿತನಗಳನ್ನು ನಿರ್ಣಯಿಸುತ್ತಿರಲಿಲ್ಲ. ಮತ್ತು ಶಾರೀರಿಕ ಸಂಬಂಧಕ್ಕೆ ವ್ಯಕ್ತಿಯ ತಪಃ ಪ್ರಭಾವವೇ ಕಾರಣವಾಗಿದ್ದಿತು.

**ಮೈತ್ರೇಯ** - ದೇವದಾನವರ ಮತ್ತು ನಾಗ ಗಂಧರ್ವರ ಉತ್ಪತ್ತಿಯನ್ನು ನನಗೆ ಚಿತ್ರಿಸಿ ಹೇಳಬೇಕು.

## ಮಾತಿನ ಮಲಕಿನಲ್ಲಿ ಸಿಲುಕಿದ ದಕ್ಷಕುಮಾರರು

**ಪರಾಶರ** - ಸಂಕಲ್ಪ ಸೃಷ್ಟಿ ಮತ್ತು ಮಾನಸ ಸೃಷ್ಟಿಗಳಿಂದ ಪ್ರಜೋತ್ಪಾದನೆಯ ಕಾರ್ಯವು ಸಮೃದ್ಧವಾಗಿ ಬೆಳೆದು ಮುಂದುವರಿಯುವ ಲಕ್ಷಣವು ಕಾಣದಿದ್ದುದರಿಂದ ದಕ್ಷಪ್ರಜಾಪತಿಯು ಹೊಸ ಮಾದರಿ ಸೃಷ್ಟಿಯ ಹೊಳವು ಹಾಕಿದನು. ಸಂಗ ಸೃಷ್ಟಿಯಿಂದ ಸಂತಾನ ಅಭಿವೃದ್ಧಿ ಮಾಡಬೇಕೆಂದು ಬಯಸಿ ವೀರಣ ಪ್ರಜಾಪತಿಯ ಮಗಳಾದ ಅಸಿಕ್ನಿಯನ್ನು ಮದುವೆಯಾದನು. ಮಹಾ ತಪಸ್ವಿನಿಯಾದ ಈ ಅಸಿಕ್ನಿಯಲ್ಲಿ ದಕ್ಷನಿಗೆ ಐದು ಸಾವಿರ ಮಕ್ಕಳು ಹುಟ್ಟಿದರು. ತಂದೆಯ ಅಪೇಕ್ಷೆಯಂತೆ ಪ್ರಬುದ್ಧರಾದ ಅವರೆಲ್ಲರೂ ಪ್ರಜಾಭಿವೃದ್ಧಿಗಾಗಿ ಆಲೋಚನೆಯನ್ನು ಮಾಡತೊಡಗಿದಾಗ ನಾರದರು ಅಲ್ಲಿಗೆ ಬಂದು ಮಧುರ ಮಾತುಗಳಿಂದ ಅವರನ್ನು ಕೇಳಿದರು.

''ಹಸಿರುಗುದುರೆ ಏರಿ ಹರಿಯಶ್ವರೆಂದು ಹೆಸರಾದ ದಕ್ಷಕುಮಾರರೇ ! ನೀವು ಈಗ ಪ್ರಜಾಭಿವೃದ್ಧಿಗಾಗಿ ಪ್ರಯತ್ನವನ್ನು ಮಾಡುತ್ತಿರುವಂತೆ ತೋರುತ್ತಿದೆ. ಆದರೆ ನನ್ನದೃಷ್ಟಿಯಲ್ಲಿ ಮೂರ್ಖರಿರುವಿರಿ. ಯಾವ ಭೂಮಿಯಲ್ಲಿ ನಿಂತು ನೀವು ಈ ಸೃಷ್ಟಿಯನ್ನು ಮಾಡಹೊರಟಿರುವಿರೋ ಅದರ ತುದಿ ಮೊದಲುಗಳನ್ನು ಕಂಡಿರುವಿರಾ ? ಅದರ ಮೇಲೆ ಕೆಳಗೇನು ಎಂದು ಅರಿತಿರುವಿರಾ ? ಅದರೊಳಗೇನು ಅವಿತಿದೆ ಹೊರಗೇನು ಕವಿತಿದೆ ಎನ್ನುವದನ್ನು ಬಲ್ಲಿರಾ? ಇದಾವುದನ್ನು ತಿಳಿಯದೇ ನೀವೆಂತು ಸೃಷ್ಟಿಯನ್ನು ಮಾಡಬಲ್ಲಿರಿ. ಇದರ ಒಳ ಹೊರಗೆಲ್ಲ ಕಡೆಗೂ ತಿರುಗಾಡಿ ನೀವು ಈ ನೆಲದ ನೆಲೆಯನ್ನು ಗ್ರಹಿಸಬಲ್ಲಿರಾ! ಹೀಗಿದ್ದರೂ ನೀವು ತಿರುಗಾಡಿ ಈ ತಿರೆಯ ತಿರುಳನ್ನು ತಿಳಿಯಲು ಏಕೆ ಯತ್ನಿಸುತ್ತಿಲ್ಲ? ಈ ಭೂಮಂಡಲದ ಒಳಹೊರಗೆ ಎಲ್ಲ

ಕಡೆಗೂ ಭಗವಂತನನ್ನು ನೀವು ಅರಿತಿಲ್ಲ. ಮತ್ತೆ ನೀವು ಸೃಷ್ಟಿ ಮಾಡುವುದು ಹೇಗೆ? ಸಂಗ ಸೃಷ್ಟಿಯಿಂದಾಗುವ ಸಂಸಾರ ಬಂಧನವನ್ನೂ ಅದರ ತೊಡಕು ತೊಂದರೆಗಳನ್ನು ಅರಿಯದ ನೀವು ಒಮ್ಮೆಲೇ ಸೃಷ್ಟಿಗೆ ಉಜ್ಜುಗಿಸುವದು ಶುದ್ಧ ಹುಡುಗಾಟವಲ್ಲವೆ?''

**ಪರಾಶರ** - ನಾರದ ಮುನಿಯ ಈ ಮಾತನ್ನು ಕೇಳಿ ದಕ್ಷ ಕುಮಾರರು ವಿಚಾರ ಮಾಡಿ ಭೂಮಿ ಎಂದರೆ ಲಿಂಗ ಶರೀರ. ಅದರಿಂದಲೇ ಮನುಷ್ಯ ಮುಂತಾದ ಪ್ರಾಣಿಗಳ ಬೇರೆ ಬೇರೆ ದೇಹಗಳು ಬೆಳೆಯುವವು. ಅಂಗದೇಹ ಎಂಬ ಭೂಮಿಯ ಅಂತ್ಯ ಎಂದರೆ ಅಂಗಭಾಗ. ಅದು ಅಪರೋಕ್ಷ ಜ್ಞಾನದಿಂದಲೇ ಆಗುವದು. ಅದು ಹರಿಯ ಪ್ರಸ್ತಾರದಿಂದ ಎಂದು ತಿಳಿದು ಅದರ ಸಂಪಾದನೆಗಾಗಿ ಸನ್ಯಾಸಿಗಳಾಗಿ ತಪಸಿಗೆ ತೆರಳಿದರು. ಇತ್ತ ಮಕ್ಕಳು ಮನೆಗೆ ಬಾರದ್ದನ್ನು ಕಂಡು ದುಃಖಿತನಾದ ದಕ್ಷ ಪ್ರಜಾಪತಿಯು ಮತ್ತೆ ಸಾವಿರ ಜನ ಮಕ್ಕಳನ್ನು ಪಡೆದನು. ಬಣ್ಣ ಬಣ್ಣದ ಕುದುರೆ ಏರಿದ್ದರಿಂದ ಶಬಲಾಶ್ವರೆಂದು ಖ್ಯಾತರಾದ ಆ ದಕ್ಷ ಪುತ್ರರು ಸೃಷ್ಟಿಯನ್ನು ಬೆಳೆಸುವ ಎತ್ತುಗಡೆಯಲ್ಲಿದ್ದಾಗ ಮತ್ತೆ ನಾರದರು ಬಂದು ''ಮುಖ್ಯ ಸೃಷ್ಟಿಕರ್ತನಾದ ಬ್ರಹ್ಮನ ಸ್ವರೂಪವನ್ನೇ ತಿಳಿಯದ ನೀವು ಇದೇನು ಮಾಡಹೊರಟಿರುವಿರಿ ? ಸೃಷ್ಟಿಯೆಂದರೇನು ಹುಡುಗಾಟವೆ !'' ಎಂದು ಮುಂತಾಗಿ ಹಿಂದಿನಂತೆ ಮಾತಿನ ಮಲಕಿನಲ್ಲಿ ಅವರ ವಿಚಾರ ಶಕ್ತಿಯನ್ನು ಸಿಲುಕಿಸಿದರು. ಆಗ ಆ ಅಣ್ಣ ತಮ್ಮಂದಿರು ತಮ್ಮ ತಮ್ಮಲ್ಲಿ ವಿಚಾರವಿನಿಮಯಮಾಡಿ ಒಂದು ನಿರ್ಣಯಕ್ಕೆ ಬಂದರು. ''ನಾರದರು ನುಡಿದದ್ದು ನಿಜವಾಗಿಯೂ ಯುಕ್ತಿಯುಕ್ತವಾಗಿದೆ. ನಮ್ಮ ಹಿರಿಯ ಅಣ್ಣಂದಿರು ಹೋದ ಹಾದಿಯನ್ನೆ ಹಿಡಿಯುವದೂ ಅದನ್ನು ಹುಡುಕುವದೂ ನಮ್ಮ ಕರ್ತವ್ಯವೇ ಆಗಿದೆ. ಆ ದಿಶೆಯಲ್ಲಿ ಹೋಗಿ ಪೃಥ್ವೀಮಂಡಲದ ಇಯತ್ತೆಯನ್ನು ಅಳೆದು ಮಹತ್ತೆಯನ್ನು ತಿಳಿದು ಅನಂತರ ಪ್ರಜಾಸೃಷ್ಟಿಗೆ ನಾವು ಇಳಿಯೋಣ'' ಹೀಗೆ ವಿಚಾರ ಮಾಡಿ ಆ ಸಾವಿರ ಸಹೋದರರೂ ಅಣ್ಣಂದಿರ ಮಾರ್ಗವನ್ನು ಅರಸುತ್ತ ನಡೆದರು. ಕಡಲಿಗೆ ಕೂಡಿದ ಹೊಳೆಯಂತೆ ಈವರೆಗೂ ಅವರಾರೂ ಹಿಂದಿರುಗಿಲ್ಲ. ಅಂದಿನಿಂದ ''ತಪ್ಪೊ ಸರಿಯೋ ವಿಚಾರಿಸದೆ ಅಣ್ಣ ತುಳಿದ ದಾರಿಯೆಂದು ತಮ್ಮನೂ ನುಗ್ಗಿ ಬಿಡುವದು ತಿಳಿಗೇಡಿತನವಾಗುತ್ತದೆ.'' ಎಂದು ಗಾದೆಯ ಮಾತು ಬಂದಿದೆ. ಆದ್ದರಿಂದ ತಿಳಿದವರು ಇಂಥ ತಪ್ಪುಮಾಡಬಾರದು.

## ಗಂಡು ಮಕ್ಕಳಿಗಾಗಿ ಅತ್ತ, ಅರವತ್ತು ಹೆಣ್ಣುಹೆತ್ತ

ತನ್ನ ಈ ಎರಡನೆಯ ಸಾವಿರ ಮಕ್ಕಳ ಅವಸ್ಥೆಯೂ ಹೀಗಾದದ್ದನ್ನು ನೋಡಿ ದಕ್ಷನಿಗೆ ಕೋಪ ಬಂದಿತು. ಇದಕ್ಕೆಲ್ಲಕಾರಣನಾದ ನಾರದ ಮುನಿಗೂ ಅವನು ಶಾಪವಿತ್ತನು. ಪ್ರಜಾಭಿವೃದ್ಧಿಯ ಬಯಕೆ ಅವನಲ್ಲಿ ಬಲವತ್ತರವಾಗಿದ್ದಿತು. ಆದ್ದರಿಂದ ಅವನು ಅರವತ್ತು ಜನ ಹೆಣ್ಣು ಮಕ್ಕಳನ್ನು ಹಡೆದನು. ಅವರಲ್ಲಿ ಹತ್ತು ಹುಡುಗಿಯರನ್ನು ಧರ್ಮನಿಗೆ, ಕಶ್ಯಪರಿಗೆ ಹದಿಮೂರು, ಚಂದ್ರನಿಗೆ ಇಪ್ಪತ್ತೇಳು, ಅರಿಷ್ಟನೇಮಿಗೆ ನಾಲ್ಕು, ಬಹು ಪುತ್ರನಿಗೆ ಇಬ್ಬರು, ಕೃಶಾಶ್ವನಿಗೆ ಇಬ್ಬರು, ಅಂಗಿರಸನಿಗೆ ಒಬ್ಬಳನ್ನು ಮದುವೆ ಮಾಡಿ ಕೊಟ್ಟನು. ಧರ್ಮದೇವನ ಹೆಂಡಂದಿರಾದ ದಕ್ಷಕುಮಾರಿಯರ ಹೆಸರು ಇಂತಿವೆ. ಅರುಂಧತಿ, ವಸು, ಜ್ಯಾಮಿ, ಲಂಬಾ, ಭಾನು,

ಮರುತ್ವತಿ, ಸಂಕಲ್ಪಾ, ಮೂಹೂರ್ತಾ, ಸಾಧ್ಯಾ, ಮತ್ತು ವಿಶ್ವಾ. ಇವರಲ್ಲಿ ಕೊನೆಯವಳಾದ ವಿಶ್ವಾದೇವಿಯಿಂದ ವಿಶ್ವೇದೇವತೆಗಳು ಹುಟ್ಟಿದರು. ಸಾಧ್ಯಾ ಸತಿಯಿಂದ 'ಸಾಧ್ಯಾ' ಎಂಬ ದೇವತಾಗಣವು ಉತ್ಪನ್ನವಾಯಿತು. ಮರುತ್ವತಿಯಿಂದ ಮರುತ್ವಂತರೂ, ವಸುದೇವಿಯಿಂದ ಅಷ್ಟವಸುಗಳೂ, ಭಾನುಭಾಮಿನಿಯಿಂದ ಭಾನುನಾಮಕ ದೇವತೆಗಳೂ, ಮುಹೂರ್ತಾ ಎಂಬ ಮಡದಿಯಿಂದ ಮುಹೂರ್ತಾಭಿಮಾನಿ ದೇವತೆಗಳೂ, ಲಂಬಾದೇವಿಯಿಂದ ನಾದ ದೇವತೆಯಾದ ಘೋಷನೂ, ಜ್ಯಾಮಿಯೆಂಬ ಜಾಯೆಯಿಂದ ನಾಗವೀಧಿ, ಗಜವೀಧಿ, ಎಂಬ ನಕ್ಷತ್ರ ಮಾರ್ಗದ ಅಧಿ ದೇವತೆಗಳೂ ಅರುಂಧತೀದೇವಿಯಿಂದ ಎಲ್ಲ ಭೂಮಿ ತಾಯಿಯ ಮಕ್ಕಳೂ, ಸಂಕಲ್ಪಾದೇವಿಯಿಂದ ಸಂಕಲ್ಪದ ಅಧಿದೇವತೆಯೂ ಹುಟ್ಟಿದರು. ವಸುದೇವಿಯ ಮಕ್ಕಳಾದ ಅಷ್ಟ ವಸುಗಳಲ್ಲಿ ಅಗ್ನಿಯು ಜೇಷ್ಠ ಪುತ್ರ. ಉಳಿದ ಏಳುವಸುಗಳಿಗೆ ಕ್ರಮವಾಗಿ ಅಪ, ಧ್ರುವ, ಸೋಮ, ಧರ, ಅನಿಲ, ಪ್ರತ್ಯೂಷ ಮತ್ತು ಪ್ರಭಾಸ ಎಂಬ ಹೆಸರುಗಳಿವೆ. ವಸು ಪುತ್ರನಾದ ಅಗ್ನಿಗೆ ಶರವಣದಲ್ಲಿ ಉದಿಸಿದ ಸ್ಕಂದನು ಪುತ್ರನಾದನು. ಶಾಖ, ವಿಶಾಖ ಮತ್ತು ನೈಗಮೇಯ ಇವರು ಷಣ್ಮುಖನ ಅಂಶಭೂತರಾದ ಸಹೋದರರು. ಅಗ್ನಿಯಿಂದ ಶರಸ್ತಂಭದಲ್ಲಿ ಜನ್ಮತಾಳಿದ ಈ ಷಣ್ಮುಖನನ್ನು ಕೃತ್ತಿಕಾ ನಕ್ಷತ್ರ ಪುಂಜದ ಅಧಿದೇವತೆಯರು ರಕ್ಷಿಸಿದ್ದರಿಂದ ಅವನಿಗೆ ಕಾರ್ತಿಕೇಯ ಎಂದು ಹೆಸರಾಯಿತು.

ದೇವಗುರು ಬೃಹಸ್ಪತ್ಯಾಚಾರ್ಯನಿಗೆ ಬ್ರಹ್ಮಜ್ಞಾನಿಯಾದ ಓರ್ವ ತಂಗಿ ಇದ್ದಳು. ಯೋಗ ಸಾಧನೆಯಲ್ಲಿ ಸಿದ್ಧಿಯನ್ನುಪಡೆದ ಅವಳು ಬ್ರಹ್ಮವಾದಿನಿಯಾಗಿ ಯಾವ ಲೇಪವೂ ಇಲ್ಲದೆ ಪ್ರಪಂಚ ಪ್ರದಕ್ಷಣೆಯನ್ನು ಮಾಡಿ ಬಂದಿದ್ದಳು. ಇಂಥ ಮಹಿಳಾ ಮಣಿಯಾದ ಗುರು ಸೋದರಿಯನ್ನು ಎಂಟನೇ ವಸುವಾದ ಪ್ರಭಾಸನು ಮದುವೆಯಾದನು. ಈ ದಿವ್ಯ ದಂಪತಿಗಳಿಂದ ದೇವತೆಗಳ ಬಡಿಗನಾದ ವಿಶ್ವಕರ್ಮನು ಉತ್ಪನ್ನನಾದನು. ದೇವಲೋಕದ ತುಂಬೆಲ್ಲ ಸಹಸ್ರಾಧಿಕ ಸಂಖ್ಯೆಯಲ್ಲಿ ತಲೆಯೆತ್ತಿದ್ದ ಶಿಲ್ಪ ಕಲಾ ಕೌಶಲದ ಕುಸುರೆಲ್ಲವೂ ಅವನ ಕೈ ಕೆಲಸ. ಈ ವಿಶ್ವದಲ್ಲಿ ಆಭರಣ ಅಲಂಕಾರಗಳ ನಿರ್ಮಿತಿಗೆ ಮೊಟ್ಟ ಮೊದಲು ಹೊಳವನ್ನು ಹಾಕಿದವನು ಈ ಶಿಲ್ಪಿ ಸಾರ್ವಭೌಮನೇ. ಆಗಸದಲ್ಲಿ ಹಾರುವ ದೇವ ವಿಮಾನಗಳು ಇವನ ಪ್ರತಿಭೆಯ ಆವಿಷ್ಕಾರ. ಇವನ ಕೈ ಚಳಕವನ್ನು ಅಲ್ಪ ಸ್ವಲ್ಪ ಅನುಕರಿಸಿ ಮಾನವರು ಅದನ್ನೇ ತಮ್ಮ ದಿವ್ಯ ಶಿಲ್ಪವೆಂದು ಹೇಳಿಕೊಳ್ಳುತ್ತಾರೆ.

## ಕಶ್ಯಪರಸಂಸಾರ ಸೃಷ್ಟಿಯ ವಿಸ್ತಾರ

ಕಶ್ಯಪ ಋಷಿಯ ಹದಿಮೂರು ಜನ ಹೆಂಡಂದಿರಾದ ದಕ್ಷ ದುಹಿತೆಯರ ಹೆಸರುಗಳು ಇಂತಿವೆ. ಅದಿತಿ, ದಿತಿ, ದನು, ಅರಿಷ್ಟಾ, ಸುರಸಾ, ಖಷಾ, ಸುರಭಿ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರು ಮತ್ತು ಮುನಿ. ಕಳೆದು ಹೋದ ಚಾಕ್ಷುಷ ಮನ್ವಂತರದಲ್ಲಿ ತುಷಿತರು ಎಂಬ ಹನ್ನೆರಡು ಜನ ದೇವತೆಗಳಿದ್ದರು. ವೈವಸ್ವತ

ಮನ್ವಂತರ ಪ್ರಾರಂಭದಲ್ಲಿ ಅವರೆಲ್ಲರೂ ತಮ್ಮ ತಮ್ಮಲ್ಲಿ ವಿಚಾರ ಮಾಡಿ ''ಬರಲಿರುವ ಈ ಹೊಸ ಮನ್ವಂತರದಲ್ಲಿ ನಾವೆಲ್ಲರೂ ಪರಮ ಪತಿವ್ರತೆಯಾದ ಅದಿತಿದೇವಿಯ ಹೊಟ್ಟೆಯಿಂದ ಹುಟ್ಟಿ ಬರೋಣ. ಅದರಿಂದ ನಮಗೆ ಶ್ರೇಯಸ್ಸು ಉಂಟಾಗುವದು'' ಎಂದು ನಿರ್ಧಾರ ಮಾಡಿ ಆ ಅದಿತಿ ದೇವಿಯಿಂದ ಕಶ್ಯಪ ಕುಮಾರರಾಗಿ ಜನಿಸಿ ಬಂದರು. ವಿಷ್ಣು, ಶಕ್ರ, ಆರ್ಯಮ, ಧಾತಾ, ತ್ವಷ್ಟಾ, ಪೂಷಾ, ವಿವಸ್ವಾನ್, ಸವಿತಾ, ಮಿತ್ರ, ವರುಣ, ಅಂಶ, ಭಗ, ಮತ್ತು ಅತಿ ತೇಜಸ್ ಈ ಹನ್ನೆರಡು ಅದಿತಿದೇವಿಯ ಮಕ್ಕಳು ದ್ವಾದಶ ಆದಿತ್ಯರೆಂದು ಪ್ರಸಿದ್ಧರಾದರು ಹಿಂದಿನ ಚಾಕ್ಷುವಿ ಮನ್ವಂತರದಲ್ಲಿ ಅದಿತಿ ದೇವಿಯಿಂದ ಉತ್ಪನ್ನರಾದ್ದರಿಂದ ಆದಿತ್ಯರೆಂದು ಪ್ರಖ್ಯಾತರಾದರು. ದಕ್ಷಪ್ರಜಾಪತಿಯ ಶಾಪದಿಂದ ಚಂದ್ರನಿಗೆ ಕ್ಷಯರೋಗವು ಹಿಡಿದದ್ದರಿಂದ ಅವನ ಇಪ್ಪತ್ತೇಳು ಜನ ಹೆಂಡಂದಿರಲ್ಲಿ ಒಬ್ಬಳಿಗೂ ಮಕ್ಕಳಾಗಲಿಲ್ಲ. ದಕ್ಷಪ್ರಜಾಪತಿಯ ನಾಲ್ಕು ಜನ ಹೆಣ್ಣು ಮಕ್ಕಳನ್ನು ಅರಿಷ್ಟನೇಮಿಗೆ ಕೊಟ್ಟಿತ್ತು. ಆ ನಾಲ್ಕು ದಾಕ್ಷಾಯಣಿಯರು ನಾಲ್ಕು ನಾಲ್ಕರಂತೆ ಹದಿನಾರು ಮಕ್ಕಳನ್ನು ಹಡೆದರು. ದಕ್ಷನ ಇಬ್ಬರು ಕನ್ಯೆಯರು ಮದುವೆಯಾದ ಬಹುಪುತ್ರನಿಗೆ ವಿದ್ಯುಚ್ಛಕ್ತಿಯ ಅಧಿದೇವತೆಗಳಾದ ನಾಲ್ವರು ಹೆಣ್ಣುಮಕ್ಕಳು ಹುಟ್ಟಿದರು. ದಕ್ಷನ ಮತ್ತೊಬ್ಬ ಅಳಿಯ ಅಂಗಿರಸ ಮುನಿಯ ಈರ್ವರು ಅರ್ಧಾಂಗಿನಿಯರು ಪ್ರತ್ಯಂಗಿರಸ ಎಂಬ ಋಗ್ವೇದ ಮಂತ್ರದ ಅಭಿಮಾನಿ ದೇವತೆಗಳನ್ನು ಹೆತ್ತರು. ದಕ್ಷಪ್ರಜಾಪತಿಯ ಮತ್ತೆರಡು ಕನ್ಯೆಯರ ಕೈ ಹಿಡಿದ ಕೃಶಾಶ್ವನು ದೈವೀ ಆಯುಧಗಳ ಅಭಿಮಾನಿಗಳಾದ ದೇವತೆಗಳನ್ನು ಪಡೆದನು. ಈ ಎಲ್ಲ ದೇವತೆಗಳು ಪ್ರಳಯದಲ್ಲಿ ಸಾಯುತ್ತಾರೆ ಕಲ್ಪಾರಂಭದಲ್ಲಿ ಮತ್ತೆ ಹುಟ್ಟುತ್ತಾರೆ. ಈ ದೇವತೆಗಳಲ್ಲಿ ಅಷ್ಟವಸುಗಳೂ, ಏಕಾದಶ ರುದ್ರರೂ, ದ್ವಾದಶಾದಿತ್ಯರೂ, ಹಾಗೂ ಪ್ರಜಾಪತಿ ಮತ್ತು ವಷಟ್ಕಾರ ಒಟ್ಟು ಈ ಮೂವತ್ತುಮೂರು ದೇವತೆಗಳು ಮಾತ್ರ ದೇವತಾಗಣದಲ್ಲಿ ಮುಖ್ಯರೂ ತಾವು ಬಯಸಿದಂತೆ ಅವತರಿಸಿ ಬರಲು ಸಮರ್ಥರೂ ಆಗಿದ್ದಾರೆ. ಏನೇ ಆದರೂ ಎಲ್ಲ ದೇವತೆಗಳ ಹುಟ್ಟು ಸಾವುಗಳು ರವಿಯ ಉದಯಾಸ್ತದಂತೆ ಸೃಷ್ಟಿ ಚಕ್ರದ ನಿಯಮ ಬದ್ಧವಾಗಿ ನಿಯತಿಯ ನಿಯಂತ್ರಣಕ್ಕೆ ಒಳಪಟ್ಟು ಸುವ್ಯವಸ್ಥಿತವಾಗಿ ನಡೆಯುತ್ತವೆ. ಹೊಸ ಯುಗ ಬಂದಾಗ ಹೊಸ ಹುಟ್ಟು. ಯುಗದ ಕೊನೆಗೆ ಸಾವು. ಇದು ಎಂಥ ದೇವತೆಗಾದರೂ ಕಟ್ಟಿಟ್ಟ ಕರ್ಮ ನಿಯತಿ.

## ದೈತ್ಯರ ಉತ್ಪತ್ತಿ ಪ್ರಹ್ಲಾದನ ಚರಿತ್ರೆ

ಕಶ್ಯಪ ಮುನಿಯ ಎರಡನೇ ಹೆಂಡತಿ ದಿತಿದೇವಿಗೆ ಸೋಲನ್ನರಿಯದ ಹಿರಣ್ಯ ಕಶ್ಯಪು, ಹಿರಣ್ಯಾಕ್ಷ ಎಂಬ ಇಬ್ಬರು ಗಂಡು ಮಕ್ಕಳೂ ಸಿಂಹಿಕಾ ಎಂಬ ಒಬ್ಬ ಹೆಣ್ಣು ಮಗಳೂ ಹುಟ್ಟಿದರು. ಸಿಂಹಿಕೆಯು ವಿಪ್ರಚಿತ್ತಿ ಎಂಬ ದೈತ್ಯನ ಮಡದಿಯಾದಳು. ಹಿರಣ್ಯಕಶ್ಯಪುವಿಗೆ ಲ್ಹಾದ, ಸಂಲ್ಹಾದ, ಅನುಲ್ಹಾದ ಮತ್ತು ಪ್ರಹ್ಲಾದ ಎಂಬ ನಾಲ್ಕು ಜನ ಪುತ್ರರು ಉತ್ಪನ್ನರಾದರು. ಇವರಿಂದ ದೈತ್ಯ ಕುಲವು ಕವಲೊಡೆದು ದಾಂಗುಡಿ ಇಟ್ಟು ಭರದಿಂದ ಎಲ್ಲ ಕಡೆ ಹಬ್ಬಿತು. ಈ ನಾಲ್ಕು ಜನ ಹಿರಣ್ಯಕಶ್ಯಪುವಿನ ಮಕ್ಕಳಲ್ಲಿ ಪ್ರಹ್ಲಾದ

ವೀರಾಧಿವೀರನಾಗಿದ್ದರೂ ವಿನಯಶಾಲಿಯಾಗಿದ್ದನು. ದೈತ್ಯ ಕುಲದಲ್ಲಿ ಹುಟ್ಟಿದರೂ ದೈವೀ ಗುಣಗಳನ್ನು ಬೆಳೆಸಿಕೊಂಡಿದ್ದನು. ಸಾರ್ವಭೌಮನ ಮಗನಾದರೂ ಸೌಮ್ಯವಾದಿಯ ಧೋರಣೆಯನ್ನು ತಳೆದಿದ್ದನು. ಸ್ವೇಚ್ಛಾಚಾರಿಗಳ ಮಧ್ಯದಲ್ಲಿದ್ದರೂ ಜಿತೇಂದ್ರಿಯನಾಗಿದ್ದನು. ದೇವತಾ ದ್ವೇಷಿಗಳ ಮನೆಯಲ್ಲಿ ಬೆಳೆದಿದ್ದರೂ ಅವನು ದೇವೋತ್ತಮನಾದ ಶ್ರೀ ಹರಿಯ ಅತ್ಯಂತ ಭಕ್ತನಾಗಿದ್ದನು. ತನ್ನ ವೈರಿಯಾದ ಶ್ರೀ ಹರಿಯಲ್ಲಿ ಭಕ್ತಿಯನ್ನು ಮಾಡುವ ಮಗನನ್ನು ಕಂಡು ಹಿರಣ್ಯಕಶ್ಯಪುವಿನ ಪಿತ್ತ ಕೆರಳಿತು. ''ಈ ದುಷ್ಟ ಮಗನನ್ನು ಸುಟ್ಟು ಹಾಕಿರಿ'' ಎಂದು ಗರ್ಜಿಸಿದ ಆ ದೈತ್ಯರಾಜ. ಸುತ್ತಲೂ ಹತ್ತಿ ಉರಿಯುವ ಬೆಂಕಿಯ ಬಣವೆಗೆ ಹೃದಯದಲ್ಲಿ ಹರಿಯನ್ನು ಹೊತ್ತ ಆ ಬಾಲಕನನ್ನು ಸುಡಲಿಕ್ಕೆ ಆಗದೆ ಅದು ತಣ್ಣಗಾಯಿತು. ಅವನ ಕೈಕಾಲು ಕಟ್ಟಿ ಕಡಲಿನ ಆಳಕ್ಕೆ ಇಳಿಬಿಟ್ಟಾಗ ಭೂಮಿಯ ಒಡಲು ನಡುಗಿಹೋಯಿತು. ಅವನನ್ನು ಕಡಿದು ಹಾಕಲು ಎತ್ತಿದ ಘೋರ ಆಯುಧಗಳೆಲ್ಲವೂ ಹೆಬ್ಬಂಡೆಗೆ ಅಪ್ಪಳಿಸಿದಂತೆ ಮೊಂಡವಾಗಿ ಮುರಿದುಬಿದ್ದವು. ನಾಲಿಗೆಯ ತುದಿಯಲ್ಲಿ ಕಾಳ ಕೂಟದ ಕಿಚ್ಚನ್ನೇ ಇರಿಸಿಕೊಂಡು ಪ್ರಹ್ಲಾದನ ಮೈಯನ್ನು ಚುಚ್ಚಬಂದ ಹಾವುಗಳೆಲ್ಲವೂ ಹೈರಾಣಾದವು. ಸಾವು ಅವನ ಬಳಿ ಸುಳಿಯಲಿಲ್ಲ. ಅವನ ಮೇಲೆ ಬೆಟ್ಟಗಳನ್ನು ಒಟ್ಟಿದರೂ ಅವನು ಭಗವಂತನನ್ನು ನೆನೆಯುತ್ತಲೇ ಇದ್ದ. ಸ್ವರ್ಗದ ತುಟ್ಟತುದಿಯಿಂದ ಅವನನ್ನು ನೆಲದ ಆಳಕ್ಕೆ ತಳ್ಳಿದರೂ ಅವನನ್ನು ಭೂದೇವಿಯು ತನ್ನ ಉಡಿಯಲ್ಲಿ ಹಿಡಿದು ರಕ್ಷಿಸಿದಳು. ತನ್ನ ಬಗೆಯಲ್ಲಿ ಭಗವಂತನನ್ನು ಒಲಿಸಿಗೊಂಡು ಆ ಭಕ್ತ ಪ್ರಹ್ಲಾದನನ್ನು ಗಾಳಿಯು ಗಾಸಿಗೊಳಿಸಲಿಲ್ಲ. ಏರಿ ಬಂದ ದಿಗ್ಗಜಗಳು ಮೋರೆ ಕೋರೆ ಒಡೆದುಕೊಂಡು ದಿಕ್ಕಾಪಾಲಾಗಿ ಓಡಿದವು. ಸಾವಿರ ಬಗೆಯಾಗಿ ತೂರಿ ಬಂದ ಶಂಬರಾಸುರನ ಮಾಯಾಮಾಟಗಳಾವುವೂ ಅವನ ಮೇಲೆ ನಾಟದೇ ಶಂಬರನೇ ಅಲ್ಲಿಂದ ಓಟ ಕಿತ್ತಬೇಕಾಯಿತು. ಪ್ರಹ್ಲಾದನಿಗೆ ಊಡಿಸಿದ ಹಾಲಾಹಲ ವಿಷವು ಏನೂ ಪರಿಣಾಮವನ್ನು ಮಾಡದಿದ್ದಾಗ ದೈತ್ಯಕುಲದಲ್ಲಿ ದೊಡ್ಡ ಕೋಲಾಹಲವೇ ಎದ್ದಿತು. ಏನಾದರೂ ಸಾವು ಅವನ ಬಳಿ ಸುಳಿಯಲಿಲ್ಲ. ಶ್ರೀ ಹರಿಯ ಕರುಣಾ ಕಟಾಕ್ಷವು ಆ ಪ್ರಹ್ಲಾದನ ಶರೀರಕ್ಕೆ ರಾಮರಕ್ಷೆಯಾಗಿ, ಭದ್ರ ಕವಚವಾಗಿ ಅವನ ಮೈ ಮೇಲಿನ ಒಂದು ಕೂದಲೆಳೆಯೂ ಕೊಂಕದಂತೆ ಕಾಪಾಡುತ್ತಿತ್ತು. ಭಗವಂತನನ್ನು ನಂಬಿದ ಧರ್ಮಾತ್ಮನಾದ ಆ ಪ್ರಹ್ಲಾದನು ಸತ್ಯ, ಸದಾಚಾರ, ಮೈತ್ರಿ, ಸಮದೃಷ್ಟಿ, ಭೂತ ದಯಾದಿ ಅನೇಕ ಗುಣಗಳ ಖಣಿಯಾಗಿದ್ದನು. ಎಲ್ಲ ಸಜ್ಜನರಿಗೂ ಅವನೊಬ್ಬ ಆದರ್ಶ ಸತ್ಪುರುಷನಾಗಿದ್ದನು.

ಮೈತ್ರೇಯ - ಭಗವನ್ ತನ್ನ ಸತ್ಪುತ್ರನಾದ ಪ್ರಹ್ಲಾದನ ಮೇಲೆ ಹಿರಣ್ಯಕಶ್ಯಪುವಿಗೆ ಇಷ್ಟು ದ್ವೇಷ ಏಕೆ ಹುಟ್ಟಿತ್ತು? ಅವನಿಗೆ ವಿಷ ವಿಕ್ಕಿ, ಬೆಂಕಿಯಲ್ಲಿ ಹಾಕಿ, ಕಡಲಿಗೆ ಎಸೆದು, ಪರ್ವತದಿಂದ ತಳ್ಳಿ, ಆನೆಗಳಿಂದ ಇರಿಸಿ, ಬೆಟ್ಟಗಳಿಂದ ಜಜ್ಜಿ, ಹಾವುಗಳಿಂದ ಕಡಿಸಿ, ಶಸ್ತ್ರಗಳಿಂದ ಹೊಡಿಸಿ, ಸ್ವರ್ಗದಿಂದ ನುಗಿಸಿ, ಮುಗಿಸಿ ಬಿಡುವಷ್ಟು ಅವನ ಮೇಲೆ ದ್ವೇಷವು ಉಳಿದೆಲ್ಲ ದೈತ್ಯರಿಗಾದರೂ ಏಕೆ ಮೂಡಿತು? ಎಂಥ ವೈರಿಗೂ ಮಾಡದ ಇಂಥ ಘೋರ ಶಾಸನವನ್ನು ಒಳ್ಳೇ ಗುಣಗಳ ಗಣಿಯಂತಿರುವ ಪ್ರಹ್ಲಾದನ ಮೇಲೆ ಆ ದೈತ್ಯರು

ಮಾಡಿದ ಕಾರಣವೇನು? ಇದೆಲ್ಲವನ್ನೂ ತನ್ನ ಬರಿ ಭಕ್ತಿಯ ಬಲದಿಂದಲೇ ಎದುರಿಸಿ ಪಾರಾದ ಧೀರ ಪ್ರಹ್ಲಾದನ ಚರಿತ್ರೆಯನ್ನೂ ಆ ಹರಿಭಕ್ತಿಯ ಪ್ರಭಾವವನ್ನು ನಮಗೆ ತಿಳಿಸಿಕೊಡಬೇಕು.

**ಪರಾಶರ -** ಮೈತ್ರೇಯ, ಕಶ್ಯಪರ ದಯಿತೆಯಾದ ದಿತಿದೇವಿಯ ಮಗ ಹಿರಣ್ಯಕಶ್ಯಪು ಮಹಾವೀರನಾಗಿದ್ದನು. ಮೇಲೆ ಬ್ರಹ್ಮದೇವರ ವರವು ದೊರೆತ ಬಳಿಕಂತೂ ಅವನಲ್ಲಿ ಅಹಂಕಾರ ಉದ್ರೇಕವಾಯಿತು. ಅವನ ಹೂಂಕಾರ ಮಾತ್ರದಿಂದಲೇ ಮೂರು ಲೋಕಗಳೂ ಅವನ ಪಾದಾಕ್ರಾಂತವಾದವು. ದೇವಲೋಕದ ಮೇಲೆ ದಾಳೀ ಮಾಡಿ ಅವನು ಇಂದ್ರನ ಸಿಂಹಾಸನವೇರಿದನು. ಸೂರ್ಯ ಮಂಡಲವು ಅವನ ನಿಯಂತ್ರಣದಲ್ಲಿ ಬಂದಿತು. ಪಂಚಮಹಾ ಭೂತಗಳೂ ಆ ಭೂತಾಧಿಪತಿಗಳೂ ಅವನ ನಿಯಂತ್ರಣದಲ್ಲಿ ಬಂದಿತು. ಪಂಚಮಹಾ ಭೂತಗಳೂ ಆ ಭೂತಾಧಿಪತಿಗಳೂ ಅವನ ಊಳಿಗಕ್ಕೆ ನಿಂತರು. ಅಮರಾವತಿಯ ದೇವತೆಗಳು ಅಲ್ಲಿಂದ ಓಡಿ ಬಂದು ಭೂಲೋಕದಲ್ಲಿ ಮಾನವರ ವೇಷ ತೊಟ್ಟು ತಲೆ ಮರಿಸಿಕೊಂಡು ತಿರುಗಾಡತೊಡಗಿದರು. ತ್ರಿಲೋಕೀ ಸಾಮ್ರಾಜ್ಯಕ್ಕೆಲ್ಲ ಹಿರಣ್ಯಕಶ್ಯಪುವು ಏಕೆ ಮಾತ್ರ ಸಾರ್ವಭೌಮನಾಗಿ, ಭೋಗ ವಿಲಾಸ ಲೋಲನಾಗಿ ಕಾಲವನ್ನು ಕಳೆಯತೊಡಗಿದನು. ಸುರಾಪಾನದಿಂದ ಅಮಲೇರಿ ಭೋಗ ಪರ್ಯಂಕದಲ್ಲಿ ಹೊರಳಾಡುವ ಅವನೆದುರಿನಲ್ಲಿ ಲೋಕಪಾಲಕರು ಬಂದು ನಿಂತು ಜಯ ಘೋಷಗಳನ್ನು ಉಗ್ಗಡಿಸಿದರು. ಗಂಧರ್ವರು ಹಾಡಿದರು. ಸಿದ್ಧರು ಹೊಗಳಿ ಪಾಡಿದರು. ಅಪ್ಸರೆಯರು ಅವನ ಎದುರು ಕುಣಿದರು. ಅರಮನೆಯ ಉಪ್ಪರಿಗೆಯ ಮೇಲೆ ಬಂಗಾರದ ಬಟ್ಟಲಲ್ಲಿ ಶೆರೆಯನ್ನು ಹೀರತಕ್ಕ ಅವನೆದುರು ಭೋಗ ಜೀವನದ ಬಾಗಿಲನ್ನೇ ತೆರೆದಂತಾಗಿದ್ದಿತು. ಮದಿರೆ ಮದಿರಾಕ್ಷಿಯರ ಮದವು ಮಿದುಳಿಗೆ ಏರಿ ಅದರ ''ಧುಂದಿ'' ಯಿಂದ ಅಂಧನಾದ ಆ ಅಸುರ ಸಾರ್ವಭೌಮನ ಅಂತಃಪುರಗಳಲ್ಲಿ ಭಾಗ್ಯಲಕ್ಷ್ಮಿಯೂ ಬಂದಿನಿಯಾಗಿ ಬಿದ್ದುಕೊಂಡಿದ್ದಳು. ಒಂದು ದಿನ ಗುರುಕುಲದಲ್ಲಿ ಓದುತ್ತಿದ್ದ ಅವನ ಚಿಕ್ಕ ಮಗು ಪ್ರಹ್ಲಾದ ತನ್ನ ಗುರುಗಳ ಜೊತೆಗೆ ತಂದೆಯ ಬಳಿಗೆ ಬಂದನು. ಕುಡಿತ ಹೆಚ್ಚಾಗಿ ವಿವೇಕದ ಹಿಡಿತವು ತಪ್ಪುತ್ತಿದ್ದ ಹಿರಣ್ಯಕಶ್ಯಪುವಿನ ಚರಣಗಳಿಗೆ ಪ್ರಹ್ಲಾದನು ಬಂದು ಭಕ್ತಿಯಿಂದ ವಂದಿಸಿ ನಿಂತನು.

## ಪ್ರಹ್ಲಾದನ ಅಧ್ಯಯನದ ಫಲಶ್ರುತಿ

ಆಗ ಆ ರಾಕ್ಷಸೇಶ್ವರನು ಪ್ರೇಮದಿಂದ ತನ್ನ ಪುತ್ರನನ್ನು ಎತ್ತಿ ''ವತ್ಸ, ಇಷ್ಟು ದಿನ ಗುರುಕುಲದಲ್ಲಿ ನೀನು ಏನು ಕಲಿತೆ? ಈವರೆಗೆ ನೀನು ಅಧ್ಯಯನ ಮಾಡಿದ್ದರಲ್ಲಿ ಅತ್ಯುತ್ತಮವಾದ ಸಾರಭೂತವಾದ ಸುಭಾಷಿತ ಒಂದನ್ನು ಹೇಳು'' ಎಂದನು. ಆಗ ಪ್ರಹ್ಲಾದನು ಉತ್ಸಾಹದಿಂದ ಉಬ್ಬಿ ''ಅಪ್ಪಾ, ನಾನು ಈವರೆಗೆ ಕಲಿತುದೆಲ್ಲದರ ಕೆನೆಯಂತಿರುವ ಸುಭಾಷಿತ ಒಂದನ್ನು ಹೇಳುತ್ತೇನೆ ಕೇಳು.

**''ಅನಾದಿ ಮಧ್ಯಾಂತಮಜಮವೃದ್ಧಕ್ಷಯಮಚ್ಯುತಮ್**
**ಪ್ರಣತೋಽಸ್ಮ್ಯಂತಮಂತಾನಾಂ ಸರ್ವಕಾರಣ ಕಾರಣಮ್''**

ತುದಿಮೊದಲು ಮಧ್ಯಗಳು ಇರದ ಜನನ ಮರಣಗಳಿಲ್ಲದ, ಹಿಗ್ಗು ಕುಗ್ಗುಗಳಿಲ್ಲದ ಸರ್ವಕಾರಣಗಳಿಗೂ ಮೂಲಕಾರಣನಾದ, ಎಲ್ಲ ಕೊನೆಗಳಿಗೂ ಕೊನೆಯಾದ ಆ ಜಗದೀಶ್ವರನಿಗೆ ನನ್ನ ನಮಸ್ಕಾರವಿರಲಿ'' ಇದನ್ನು ಕೇಳಿ ದೈತ್ಯೇಂದ್ರನ ಕಣ್ಣಿನಲ್ಲಿ ಕೆಂಪು ಚಿಮ್ಮಿತು. ತುಟಿ ನಡುಗಿತು. ಅವನು ಪ್ರಹ್ಲಾದನ ಗುರುವಿನತ್ತ ನೋಡಿ ''ಎಲೋ ಬ್ರಹ್ಮ ಬಂಧುವೇ, ನನ್ನ ಮಗನಿಗೆ ಇದೇ ಏನು ನೀನು ಕಲಿಸಿದ್ದು! ಕಸಕ್ಕಿಂತ ಕಡೆಯಾದ ನನ್ನವೈರಿಯ ಸ್ತೋತ್ರವು ಈ ಹುಡುಗನ ಪಿಂಡಕ್ಕೆ ಹಿಡಿಯುವಂತೆ ಹೇಳಿಕೊಟ್ಟಿಯಲ್ಲವೇ ? ನನ್ನನ್ನು ಧಿಕ್ಕರಿಸಿ ನಡೆಯುವಷ್ಟು ದುರ್ಬುದ್ಧಿಯು ನಿನಗೆ ಹುಟ್ಟಿತೇ?'' ಎಂದು ಗರ್ಜಿಸಿದನು.

ಅವನ ಈ ಘೋರ ಗರ್ಜನೆಯನ್ನು ಕೇಳಿ ಭಯದಿಂದ ತತ್ತರಿಸಿ ಹೋದ ಆ ಗುರುವು ''ಮಹಾರಾಜರು ನನ್ನ ಮೇಲೆ ಕೋಪಿಸಿಕೊಳ್ಳಬಾರದು. ಪ್ರಹ್ಲಾದ ಇದನ್ನೆಲ್ಲ ಹೇಳಿಕೊಟ್ಟವನು ನಾನಲ್ಲ.'' ಎಂದು ನಡುಗುತ್ತ ನುಡಿದನು. ಆಗ ಹಿರಣ್ಯಕಶ್ಯಪುವು ಕಡೆಗೆ ತಿರುಗಿ ''ಮಗು, ನಿಜ ಹೇಳು. ನಿನಗೆ ಇದನ್ನೆಲ್ಲ ಕಲಿಸಿಕೊಟ್ಟವರಾರು? ಈ ನಿನ್ನ ಗುರುವಂತೂ ತಾನು ಅಲ್ಲವೆನ್ನುತ್ತಾನೆ.

**ಪ್ರಹ್ಲಾದ** - ಜಗತ್ತಿನಲ್ಲಿ ಎಲ್ಲರ ಹೃದಯದಲ್ಲಿ ನೆಲಸಿ ಜೀವಿಗಳಿಗೆಲ್ಲ ಕಲಿಸುವವನು ಶ್ರೀ ವಿಷ್ಣು ಒಬ್ಬನೇ. ಆ ಭಗವಂತನ ಹೊರತು ಬೇರೆ ಯಾರು ಯಾರಿಗೆ ಕಲಿಸಬಲ್ಲರು?

## ''ಅಹಂ ಬ್ರಹ್ಮಾಸ್ಮಿ''

**ಹಿರಣ್ಯಕಶ್ಯಪು** - ಅಯ್ಯೋ ಮಗು! ನಿನ್ನ ಬುದ್ಧಿಯು ಕೆಟ್ಟಿದೆ. ಜಗದೀಶ್ವರನಾದ ನಾನು ನಿನ್ನೆದುರೇ ನಿಂತಿದ್ದೇನೆ, ನನ್ನ ಮುಂದೆ ಮತ್ತೆ ಮತ್ತೆ ಆ ವಿಷ್ಣುವಿನ ಹೆಸರನ್ನು ಹೇಳುವಿಯಲ್ಲಾ; ಅವನಾವನೋ ನಿನ್ನ ವಿಷ್ಣುವು?''

**ಪ್ರಹ್ಲಾದ** - ಅಪ್ಪ! ಆ ವಿಷ್ಣುವು ಮಾತುಗಳಿಗೆ ಸಿಲುಕುವವನಲ್ಲ. ಮನಸ್ಸಿಗೆ ನಿಲುಕುವವನೂ ಅಲ್ಲ. ಭಕ್ತಿಯಿಂದ ಭಜಿಸುವ ಯೋಗಿಗಳ ಧ್ಯಾನಕ್ಕೆ ಮಾತ್ರ ಅವನು ಗೋಚರನಾಗುವನು. ಈ ಪ್ರಪಂಚವೆಲ್ಲವೂ ಯಾವನಿಂದ ಜನಿಸಿದೆಯೋ ಮತ್ತು ಯಾವನಿಂದ ತುಂಬಿದೆಯೋ ಅವನೇ ವಿಷ್ಣುವು. ಅವನೇ ನನ್ನ ದೇವರು.

**ಹಿರಣ್ಯಕಶ್ಯಪು** - ಅಯ್ಯೋ! ತಿಳಿಗೇಡಿಯಾದ ಕಿಡಿಗೇಡಿ ಮಗನೇ! ನಿನ್ನೆದುರು ಪ್ರತ್ಯಕ್ಷ ಪರಮೇಶ್ವರನಾದ ನಾನು ಸಾಕ್ಷಾತ್ತಾಗಿ ನಿಂತುಕೊಂಡಾಗ ಮತ್ತೇಕೆ ವಿಷ್ಣು ವಿಷ್ಣು ಎಂದು ಬಡಬಡಿಸುವಿ. ನಿನಗೆ ಜೀವ ಬೇಸರವಾಗಿದೆಯೇ!

**ಪ್ರಹ್ಲಾದ** - ''ತಾತ, ನನಗೊಬ್ಬನಿಗಲ್ಲ. ನಿನಗೂ ಕೂಡ ಅವನೇ ಕಾರಣ ಅವನೇ ಪರಬ್ರಹ್ಮನು ನನ್ನನ್ನು ನಿನ್ನನ್ನು ಹುಟ್ಟಿಸಿದವನು ಅವನು. ಬದುಕಿಸಿದವನು ಅವನು. ಇದಕ್ಕೆ ಕೋಪವೇಕೆ? ದಯಮಾಡಿ ಶಾಂತನಾಗು.''

## ಮೊದಲು ಶಿಕ್ಷೆ ನಂತರ ಶಿಕ್ಷಣ

ಪ್ರಹ್ಲಾದನ ಈ ದೃಢ ನಿರ್ಧಾರದ ವಾಕ್ಯವನ್ನು ಕೇಳಿ ಹಿರಣ್ಯಕಶ್ಯಪುವು ಸಂತಪ್ತನಾಗಿ

''ಈ ದುಷ್ಟನನ್ನು ಇಲ್ಲಿಂದ ಹೊರಗೆ ದಬ್ಬಿರಿ. ನನ್ನ ವೈರಿಗಳ ಕೈವಾರಿಯಾದ ಆ ವಿಷ್ಣುವನ್ನು ಹೊಗಳುವ ಇವನನ್ನು ಗುರುಗಳ ಮನೆಗೆ ಎಳೆದುಕೊಂಡು ಹೋಗಿರಿ. ಗುರುಕುಲದಲ್ಲಿ ಮೊದಲು ಇವನಿಗೆ ಶಿಕ್ಷೆಯಾಗಲಿ. ಅನಂತರ ಶಿಕ್ಷಣ.'' ಆಗ ದೈತ್ಯರು ಆ ಬಾಲಕನನ್ನು ಗುರುಗಳ ಮನೆಗೆ ಸೆಳೆದೊಯ್ದರು. ಪ್ರಹ್ಲಾದನು ಹರಿನಾಮ ಸ್ಮರಣೆ ಮಾಡುತ್ತ ಗುರುಗಳ ಮನೆಗೆ ತಲುಪಿ ಕೆಲವು ಕಾಲ ಕಲಿಯುವ ಶಾಸ್ತ್ರ ಮಾಡಿದನು. ಆ ಗುರು ಗೃಹದಲ್ಲಿ ಉಪಾಧ್ಯಾಯರು ಹೇಳುವದೇ ಬೇರೆ. ಇವನಿಗೆ ಕೇಳುವುದೇ ಬೇರೆ. ಮತ್ತೆ ಕೆಲವು ದಿನಗಳು ಉರುಳಿದ ಬಳಿಕ ದಾನವೇಂದ್ರನು ಅಕ್ಕರೆಯಿಂದ ತನ್ನ ಚಿಕ್ಕ ಮಗ ಪ್ರಹ್ಲಾದನನ್ನು ಕರೆ ಕಳಿಸಿ ''ಮಗು, ಎಲ್ಲಿ! ಒಂದು ಸುಭಾಷಿತವನ್ನು ಹೇಳು ನೋಡೋಣ' ಎಂದು ಕಕುಲಾತಿಯಿಂದ ಕೇಳಿದನು. ಕೂಡಲೇ ಆ ಭಕ್ತ ಬಾಲಕನಿಗೆ ಸ್ಫೂರ್ತಿ ಬಂದಂತಾಗಿ ಉತ್ಸಾಹದಿಂದ ಉಬ್ಬಿ ಉಚ್ಚ ಕಂಠದಿಂದ ನುಡಿದನು.

**''ಯತಃ ಪ್ರಧಾನ ಪುರುಷೌ ಯತಃ ಶ್ಚೈವ ಚರಾಚರಮ್**
**ಕಾರಣಮ್ ಸಕಲಸ್ಯಾಸ್ಯ ಸ ನೋ ವಿಷ್ಣುಃ ಪ್ರಸೀದತು''**

ಯಾವನು ಪ್ರಕೃತಿ ಪುರುಷರನ್ನು ಸೃಜಿಸಿದನೋ ಮತ್ತು ಚರಾಚರ ಪ್ರಪಂಚವನ್ನು ನಿರ್ಮಿಸಿದನೋ ಅಂಥ ಜಗತ್ತಿನ ಕಾರಣ ಪುರುಷನಾದ ವಿಷ್ಣುವು ನಮ್ಮ ಮೇಲೆ ಪ್ರಸನ್ನನಾಗಲಿ.''

## ರತ್ನದ ಗಣಿಯಲ್ಲಿ ಇದ್ದಲಿಯ ತುಣುಕು

ಹಿರಣ್ಯಕಶ್ಯಪು - ದುರುಳನಾದ ಈ ತರಳನನ್ನು ಈಗಲೇ ಕೊಂದು ಹಾಕಿರಿ ಸ್ವಜನದ್ರೋಹವನ್ನು ಮಾಡುವ ಇಂಥ ದುಷ್ಟನು ಬದುಕಿ ಮಾಡವದೇನು? ಇವನೊಬ್ಬ ರಾಕ್ಷಸ ಕುಲದ ''ರತ್ನದ ಗಣಿಯಿಂದ ಎದ್ದು ಬಂದ ಇದ್ದಲಿಯ ತುಣುಕು ಇದ್ದಂತೆ. ಇದನ್ನು ತಿಕ್ಕಿದಷ್ಟೂ ಕಪ್ಪೇ ಹೊರಡುವದು. ತೊಳೆದರಂತೂ ಎಲ್ಲರ ಮೈ ಕೈಗಳಿಗೆ ಮಸಿ ಬಳೆಯುವದು.'' ರಾಕ್ಷಸ ರಾಜನ ಈ ಅಪ್ಪಣೆಯನ್ನು ಕೇಳಿ ನೂರಾರು ಸಾವಿರ ದೈತ್ಯರು ಅಸ್ತ್ರ ಹಿರಿದು ಪ್ರಹ್ಲಾದನ ಮೇಲೆ ಮುಗಿಬಿದ್ದರು.

## ನೈನಂ ಛಿಂದಂತಿ ಶಸ್ತ್ರಾಣಿ

ಆಗ ಏಕೈಕ ವೀರನಾದ ಪ್ರಹ್ಲಾದನು ಅವರೆದುರು ಧೈರ್ಯವಾಗಿ ನಿಂತು ''ನೀವು ಎತ್ತಿದ ಆಯುಧಗಳಲ್ಲಿಯೂ, ಅವುಗಳನ್ನು ಹೊತ್ತು ನಿಮ್ಮಲ್ಲಿಯೂ ನೀವು ಹೊಡೆಯಬಂದ ನನ್ನಲ್ಲಿಯೂ ನಿಯಾಮಕನಾದ ಆ ಶ್ರೀಹರಿಯು ಇದ್ದುದು ನಿಜವಾದರೆ ನಿಮ್ಮ ಆಯುಧಗಳಿಂದ ನನಗೆ ಸಾವು ನೋವುಗಳು ಉಂಟಾಗದಿರಲಿ'' ಎಂದು ಹೇಳಿ ವಿಷ್ಣುವಿನ ನಾಮ ಗರ್ಜನೆಯನ್ನು ಮಾಡುತ್ತ ನಿಂತುಕೊಂಡನು. ನೂರಾರು ದೈತ್ಯರು ನೂರಾರು ಆಯುಧಗಳನ್ನು ಏಕಕಾಲದಲ್ಲಿ ಮಸೆದು ಎಸೆದರೂ ಅದರಿಂದ ಅವನಿಗೆ ಯಾವ ವೇದನೆಯೂ ಆಗಲಿಲ್ಲ. ಸಹಸ್ರಾರು ಶಸ್ತ್ರಾಸ್ತ್ರಗಳ ಭೀಕರ ಆಘಾತಗಳನ್ನೆಲ್ಲ ಏನೂ ಆಯಾಸವಿಲ್ಲದೆ ತಾಳಿಕೊಂಡು ಎಲ್ಲಿಯೂ ಗಾಯವಾಗದೆ ಮತ್ತೆ ಅವನು ಹೊಸ ಉತ್ಸಾಹದಿಂದ ಹರಿನಾಮಸ್ಮರಣೆ ಮಾಡಹತ್ತಿದನು. ಮತ್ತೆ

ನಡಿಸಿದ ಈ ದೇವತಾ ಧ್ಯಾನವನ್ನು ನೋಡಿ ಹಿರಣ್ಯಕಶ್ಯಪುವಿಗೆ ಭಯಂಕರ ಸಂತಾಪವಾದರೂ ಮಗನೆಂಬ ಮಮತೆಯಿಂದ ಅದನ್ನೆಲ್ಲ ನುಂಗಿಕೊಂಡು ಮತ್ತೆ ಅವನ ಹತ್ತಿರ ಬಂದು ಪ್ರೇಮದಿಂದ ಅವನ ತಲೆಯನ್ನು ನೇವರಿಸಿ ''ಕೆಟ್ಟ ಬುದ್ಧಿಯ ಪುಟ್ಟ ಮಗು! ಇನ್ನಾದರೂ ನಿನ್ನ ಆ ಹರಿಯ ಹುಚ್ಚು ಬಿಡಲಿ. ನಿನಗೆ ಅಭಯದಾನ ಮಾಡುತ್ತೇನೆ. ಅತಿ ಮೂರ್ಖತನಕ್ಕೆ ಎಳಸಬೇಡ.

**ಪ್ರಹ್ಲಾದ** - ಅಭಯದಾನವು ಅಂಜಿದವರಿಗಲ್ಲವೇ? ಅಂಜಿಕೆಗಳನ್ನು ಓಡಿಸುವ ಆ ಪರಮಾತ್ಮನು ನನ್ನ ಹೃದಯದಲ್ಲಿಯೇ ಇರುವಾಗ ನನಗೆಲ್ಲಿಯ ಅಂಜಿಕೆ? ಅವನೊಬ್ಬನು ಹತ್ತಿರ ಇದ್ದರೆ ಸಾಕು. ಸಾವಿನ ಅಂಜಿಕೆಯೇ ಹರಿದು ಹೋಗುತ್ತದೆ.

**ಹಿರಣ್ಯಕಶ್ಯಪು** - ಎಲೋ ಅವಿವೇಕಿಯೇ ! ಆ ದುರಾತ್ಮನಾದ ಹರಿಯನ್ನು ಹೊಗಳುವ ಇಚ್ಛೆಯಾದರೂ ನಿನಗೆ ಎಂದು ಉಂಟಾಯಿತು? ಎಂಥ ತಂದೆಗೆ ಎಂಥ ಮಗ ಹುಟ್ಟಿದಿ; ಸುಮತಿಯಾದ ತಂದೆಗೆ ಕುಮತಿಯಾದ ಮಗ! ನಾನು ಎಷ್ಟು ತಿಳಿಸಿ ಸಂತೈಸಿ ಹೇಳಿದರೂ ನಿನಗೆ ಬುದ್ಧಿ ಬರಲಿಲ್ಲ. ನೀನು ಸಾಯುವ ಹವಣಿಕೆಯಲ್ಲಿಯೇ ಇದ್ದಂತಿದೆ. ಆಗಲಿ, ಎಲೋ ಹಾವುಗಳೇ! ಈ ದುಷ್ಟ ಹುಡುಗನನ್ನು ವಿಷವನ್ನು ಉಗುಳುವ ನಿಮ್ಮ ಹದನವಾದ ಹಲ್ಲುಗಳಿಂದ ಕಚ್ಚಿ ಚುಚ್ಚಿ ಕೊಂದುಹಾಕಿರಿ.

## ಹಾವು ಹೂವಾದವು. ಸಾವು ಸೋತಿತು

ಹಿರಣ್ಯಕಶ್ಯಪುವಿನ ಅಪ್ಪಣೆಯಾದ ಕೂಡಲೇ ತಕ್ಷಕ, ಕುಹಕ, ಅಂಧಕ ಮೊದಲಾದ ಘೋರ ಸರ್ಪಗಳು ತಕ್ಷಣದಲ್ಲಿಯೇ ಪ್ರಹ್ಲಾದನ ಮೈಗೆ ಅಡರಿ ತಮ್ಮ ತಮ್ಮ ಚೂಪಾದ ಹಲ್ಲುಗಳಿಂದ ಅವನ ಮೈ ತುಂಬ ಕಚ್ಚಿದವು. ಅವನ ಅಂಗಾಗಳಲ್ಲೆಲ್ಲ ಕಾಲಕೂಟ ವಿಷವನ್ನೇ ಸೂಜಿ ಹಲ್ಲುಗಳಿಂದ ಚುಚ್ಚಿದವು. ಇಷ್ಟಾದರೂ ಆ ಪ್ರಹ್ಲಾದನು ಮಾತ್ರ ಹಾವುಗಳು ಮೈತುಂಬ ಹರಿದಾಡಿ ಕಂಡಲೆಲ್ಲ ಕಡಿಯುತ್ತಲಿದ್ದರೂ ಅತ್ತ ಲಕ್ಷ್ಯವನ್ನೇ ಕೊಡದೆ ಶ್ರೀಕೃಷ್ಣನ ಧ್ಯಾನಮಾಡುತ್ತ ನಿಂತು ಬಿಟ್ಟನು. ಅದರಿಂದ ಪರಮಾತ್ಮನ ಧ್ಯಾನಾನಂದವು ಮನತುಂಬಿ ಮೈತುಂಬಿ ಹೊರಸೂಸುತ್ತಿರುವ ಅವನಿಗೆ ಹಾವು ಕಚ್ಚಿದ್ದೂ ಗೊತ್ತಾಗಲಿಲ್ಲ. ಆಗ ಪ್ರಹ್ಲಾದನ ದೇಹವನ್ನು ಕಡಿಕಡಿದು ಕುಸಿಬಿದ್ದ ಆ ಕೃಷ್ಣಸರ್ಪಗಳು ರಾಕ್ಷಸೇಶ್ವರನ ಬಳಿಗೆ ಬಂದು ''ದೈತ್ಯೇಶ್ವರಾ, ನಮ್ಮ ಹಲ್ಲು ಮುರಿದವು, ರತ್ನಗಳು ಒಡೆದವು, ಹೆಡೆಗಳು ಸಿಡಿದವು, ಎದೆ ನಡುಗುತ್ತಿದೆ, ಇಷ್ಟಾದರೂ ಈ ಪ್ರಹ್ಲಾದನ ಮೈಯ್ಯ ತೊಗಲು ಕೂಡ ಸೀಳಿಲ್ಲ. ಆದ್ದರಿಂದ ನಮ್ಮಿಂದ ಈ ಕೆಲಸವಾಗುವುದಿಲ್ಲ. ನಮಗೆ ಬೇರೆ ಏನಾದರೂ ಕಾರ್ಯವನ್ನು ಮಾಡಲು ಅಪ್ಪಣೆಯಾಗಬೇಕು'' ಎಂದು ನುಡಿದವು.

## ದಿಗ್ಗಜಗಳು ಮುಗ್ಗರಿಸಿದವು

ಆಗ ಹಿರಣ್ಯಕಶ್ಯಪುವು ಪ್ರಹ್ಲಾದನನ್ನು ಕೊಲ್ಲಲು ದಿಗ್ಗಜಗಳಿಗೆ ಅಪ್ಪಣೆ ಇತ್ತನು. ಕೂಡಲೇ ಆ ದಿಗ್ಗಜಗಳು ಕೋಡುಗಲ್ಲಿನಂತಿರುವ ತಮ್ಮ ಕೋರೆದಾಡೆಗಳಿಂದ

ಪ್ರಹ್ಲಾದನನ್ನು ಮೇಲಕ್ಕೆ ಎತ್ತಿ, ನೆಲಕ್ಕೆ ಒಗೆದು, ತಮ್ಮ ದಂತಾಗ್ರದಿಂದ ತಿವಿದು ತಿಕ್ಕಿದವು. ಆದರೆ ಗೋವಿಂದ ನಾಮಸ್ಮರಣೆಯನ್ನು ಮಾಡುವ ಆ ಬಾಲಕನ ಎಳೆದೊಗಲಿನಲ್ಲಿ ಈ ಗಜಾಘಾತಗಳಿಂದ ಯಾವ ಗಾಯವೂ ಆಗಲಿಲ್ಲ. ಆ ದಿಗ್ಗಜಗಳ ದಾಡೆಗಳೇ ಅವನ ಎದೆಗೆ ಬಡೆದು ಬೆಂಡಿನಂತೆ ಒಡೆದುತುಂಡಾಗಿ ಬಿದ್ದವು.

## ಪ್ರಹ್ಲಾದನ ಅಗ್ನಿದಿವ್ಯ

''ನೈನಂ ದಹತಿ ಪಾವಕಃ''

ದಂತ ಭಗ್ನವಾದ ಆ ದಿಗ್ಗಜಗಳು ಸೋತು ಸರಿದ ಬಳಿಕ ಹಿರಣ್ಯಕಶ್ಯಪುವು ಪ್ರಹ್ಲಾದನಿಗೆ ಬದುಕಿದಾಗಲೇ ಅಗ್ನಿ ಸಂಸ್ಕಾರ ಮಾಡಲಿಕ್ಕೆ ಹೇಳಿದನು. ಕೂಡಲೇ ದುಷ್ಟ ದೈತ್ಯರು ಭಯಂಕರವಾದ ಚಿತೆಯೊಂದನ್ನು ಒಟ್ಟಿ, ಕೊಳ್ಳಿ ಕೊಟ್ಟು ಆ ಉರಿಯುವ ಬೆಂಕಿಯ ಬಣಿವೆಯಲ್ಲಿ ಈ ಬಾಲಕನನ್ನು ಬೀಸಿ ಒಗೆದರು.

ಈಗಲೂ ಹರಿಸ್ಮರಣೆ ತನ್ನ ಮಹಿಮೆಯ ಪವಾಡವನ್ನು ಮೆರೆಯಿತು. ದಗದಗಿಸುವ ಬೆಂಕಿಯು ಚಂದನ ಪಂಕದಂತೆ ತಣ್ಣಗಾಯಿತು. ಕಿಚ್ಚಿನ ತಳಿಗೆಯಲ್ಲಿ ಕುಳಿತ ಆ ಭಗವದ್ಭಕ್ತನಿಗೆ ಕಮಲ ಕೋಶದಲ್ಲಿ ತಂಗಿದಂತಾಯಿತು. ಉರಿಯುವ ಅಗ್ನಿ ದೇವನ ಜ್ವಾಲಜಿವ್ಹೆಗಳು ಚಾಮರ ಬೀಸಿದಂತೆ ತಂಗಾಳಿಯನ್ನು ಸೂಸ ತೊಡಗಿದವು. ಪುಟಕ್ಕಿಕ್ಕಿದ ಬಂಗಾರದಂತೆ ಪ್ರಹ್ಲಾದನು ಈ ಅಗ್ನಿಸ್ನಾನದಿಂದ ಮತ್ತಿಷ್ಟು ಉಜ್ವಲಾಂಗನಾಗಿ ತಂದೆಗೆ ಹರಿಯ ಮಹಿಮೆಯನ್ನು ತಿಳಿಸಿ ಹೇಳಿದನು. ''ತಾತ, ನಮ್ಮ ನಿಮ್ಮಂಥವರಿಗೆ ಕೊಲ್ಲಲಿಕ್ಕೂ ಅಧಿಕಾರವಿಲ್ಲ. ಸಾಯಲಿಕ್ಕೂ ಶಕ್ತಿ ಇಲ್ಲ. ಕಾಯುವವನೇ ಕೊಲ್ಲಬಲ್ಲ. ಕೊಲ್ಲಬಲ್ಲವನೇ ಕಾಯಬಲ್ಲ. ಮಾನವರು ಅಥವಾ ದಾನವೇಂದ್ರನಾದ ನೀನು ಕೂಡ ಎಷ್ಟು ಪ್ರಯತ್ನಿಸಿದರೂ ಯಾರನ್ನು ಕೊಲ್ಲಲಾರೆ ಎಂಬುದು ಈ ನನ್ನ ದೃಷ್ಟಾಂತದಿಂದಲೇ ಸಿದ್ಧವಾಗಲಿಲ್ಲವೇ ! ಅವನು ಕಾಯ ಹೊರಟಾಗ ನೀವೆಂತು ನನ್ನನ್ನು ಕೊಲ್ಲಬಲ್ಲಿರಿ ! ಕೊಲ್ಲಲಿಕ್ಕೂ ಕಾಯಲಿಕ್ಕೂ ಆ ಪರಮೇಶ್ವರನೊಬ್ಬನೇ ಸಮರ್ಥನು ಎಂಬುವದು ಈಗಾದರೂ ನಿನಗೆ ಮನದಟ್ಟಾಯಿತೇ! ಬಾಲಕನಾದ ನನ್ನ ಮಾತಿನಲ್ಲಿ ಏನಾದರೂ ತಪ್ಪಿದ್ದರೆ ಕ್ಷಮಿಸಬೇಕು. ತಾವೇ ಯೋಚಿಸಿನೋಡಬೇಕು. ಯಾವ ಹರಿಯ ನಾಮಸ್ಮರಣೆಯ ಪ್ರಭಾವದಿಂದ ಬೆಂಕಿಯು ತಣ್ಣಗಾಯಿತೋ, ವಿಷ ಅಮೃತವಾಯಿತೋ, ಶಸ್ತ್ರಪ್ರಹಾರವು ಗಾಯಗೊಳಿಸಲಿಲ್ಲವೋ ಅಂಥ ಶ್ರೀ ಹರಿಯ ದಿವ್ಯನಾಮದ ಮಹಾಮಹಿಮೆಯನ್ನು ಪ್ರತ್ಯಕ್ಷ ಕಂಡ ಬಳಿಕಾದರೂ, ಪ್ರಮಾಣಿಸಿ ನೋಡಿದ ಬಳಿಕವಾದರೂ ವಸ್ತು ತತ್ವವನ್ನು ಒಪ್ಪುವುದು ಸೂಕ್ತವಲ್ಲವೇ ? ಈ ನನ್ನ ಮಾತುಗಳಲ್ಲಿ ಯಾವುದಾದರೂ ಅನುಚಿತ ಅಸಂಬದ್ಧ ನುಡಿಗಳಿದ್ದರೆ ಹಿರಿಯರಾದ ತಾವು ಕ್ಷಮಿಸಬೇಕೆಂದು ಬಿನ್ನವಿಸುತ್ತೇನೆ' ಎಂದು ನುಡಿದು ತಂದೆಗೆ ವಿನಯದಿಂದ ವಂದಿಸಿ ಆ ದೈತ್ಯಕಂದನು ತಲೆಬಾಗಿ ನಿಂತನು.

## ಶಂಡಾಮರ್ಕರ ಶಾಲೆಯಲ್ಲಿ

ಆಗ ಶುಕ್ರಾಚಾರ್ಯರ ಮಕ್ಕಳಾದ ಶಂಡಾಮರ್ಕ ಪ್ರಭೃತಿಗಳು ಕೋಪದಿಂದ ತಾಪಗೊಂಡ ಆ ಅಸುರರ ಅರಸನಿಗೆ ''ಪ್ರಭು! ಶಾಂತರಾಗಿರಿ, ಎಷ್ಟಾದರೂ ಪ್ರಹ್ಲಾದನು

ಇನ್ನೂ ಎಳೆ ಮಗುವಲ್ಲವೇ! ಈ ಚಿಕ್ಕ ಮಗನು ನಿಮ್ಮ ಕೋಪ ಶಾಸನಗಳಿಗೆ ತಕ್ಕವನಲ್ಲ. ನಾವು ಇವನಿಗೆ ಇನ್ನೂ ಬುದ್ಧಿ ಹೇಳಿ ಸರಿಯಾದ ದಾರಿಗೆ ತರಲಿಕ್ಕೆ ಯತ್ನಿಸುತ್ತೇವೆ. ನಮ್ಮ ಗುರೂಪದೇಶಕ್ಕೆ ಹಣಿಯದೆ, ಒಳ್ಳೇ ಮಾತಿಗೆ ಮಣಿಯದೇ ಇವನು ಆ ಹರಿಭಕ್ತಿಗೆ ಜೋತು ಬಿದ್ದರೆ ಮಾತ್ರ ಆ ಬಳಿಕ ನಾವೇ ಇವನ ಮೇಲೆ ಭಯಂಕರ ಮಾರಿಯನ್ನು ಬಿಟ್ಟು ಸಾಯ ಹೊಡೆಯುತ್ತೇವೆ'' ಎಂದು ವಿಜ್ಞಾಪಿಸಿಗೊಂಡರು. ಗುರುಬಂಧುಗಳ ಈ ಸಲಹೆ ಸೂಚನೆಗಳನ್ನು ಒಪ್ಪಿ ಹಿರಣ್ಯಕಶ್ಯಪುವು ಕೆಂಡದ ಹೊಂಡದಲ್ಲಿ ಕುಳ್ಳಿರಿಸಿದ ಪ್ರಹ್ಲಾದನನ್ನು ಸೇವಕರಿಂದ ಹೊರತೆಗೆಯಿಸಿ ಶಂಡಾಮರ್ಕರಲ್ಲಿಗೆ ಕಳಿಸಿಕೊಟ್ಟನು. ಅಲ್ಲಿ ಗುರುಗಳು ಇವನಿಗೆ ಪರಿಪರಿಯಿಂದ ಉಪದೇಶ ಗೈಯುತ್ತಿದ್ದರು. ಆದರೆ ಗುರುಗಳ ಪಾಠಕ್ರಮದ ನಡುವೆ ಬಿಡುವು ದೊರೆತಾಗೆಲ್ಲ ಪ್ರಲ್ಹಾದನು ತನ್ನ ಸಹಪಾಠಿಗಳಾದ ದೈತ್ಯಬಾಲಕರಿಗೆ ಅಧ್ಯಾತ್ಮ ಜ್ಞಾನದ ಉಪದೇಶಗಳನ್ನು ಮಾಡುತ್ತಲಿದ್ದನು.

## ಪ್ರಹ್ಲಾದ ಉಪದೇಶಿಸಿದ ಪ್ರಮೇಯ

''ಪುನರಪಿ ಜನನಂ ಪುನರಪಿ ಮರಣಂ''

ದೈತ್ಯಪುತ್ರರೇ! ನನ್ನ ಮಾತನ್ನು ಆಲಿಸಿರಿ. ಇದರಲ್ಲಿ ನನಗಾವ ಲಾಭ ಲೋಭವೂ ಇಲ್ಲ. ಇದ್ದ ವಸ್ತುಸ್ಥಿತಿಯನ್ನು ತುಸು ವಿಶ್ಲೇಷಣಮಾಡಿ ನೋಡಿರಿ. ಈ ಪ್ರಪಂಚದಲ್ಲಿ ಹುಟ್ಟಿದ ಪ್ರಾಣಿಗಳಿಗೆಲ್ಲ ಬಾಲ್ಯ ತಾರುಣ್ಯಗಳು ಕಟ್ಟಿಟ್ಟದ್ದು. ಅನಂತರ ಮುಪ್ಪೂ ತಪ್ಪಿದ್ದಲ್ಲ. ಇವುಗಳ ತಾಪತ್ರಯದ ತಿರುಗಣಿಯಲ್ಲಿ ತೊಳಲಾಡುತ್ತಿರುವಾಗಲೇ ಮೃತ್ಯುವು ಜಪ್ಪಿಸಿ ಜೀವನ ಮೇಲೆ ಎರಗುತ್ತದೆ. ಪ್ರಾಣಿಯ ಬಾಳಿನ ಗೋಳು ಮರಣದಿಂದಲೂ ಮುಕ್ತಾಯಗೊಳ್ಳುವುದಿಲ್ಲ. ಮತ್ತೆ ಕಷ್ಟಪಡಲು ಹುಟ್ಟಿಬರಬೇಕು. ಪುನಃ ನೋವಿನ ನಂಜಿನಲಗಿಗೆ ನಾಲಿಗೆ ತೀಡಬೇಕು. ಸಾವಿನ ಸುಳಿಸೆಳವುಗಳಲ್ಲಿ ಸಿಕ್ಕು ಸಂಕಟಪಡಬೇಕು. ಮಾನವರ ಬದುಕಿನ ತುಂಬ ತುಂಬಿದ್ದು ಬರೀ ದುಃಖ ಮಾತ್ರ. ಸಂಸಾರವೆಲ್ಲವೂ ದುಃಖಮಯ. ವಿವೇಕದ ಕಣ್ಣು ಕುರುಡಾಗಿ ಅರಿವುಗೆಟ್ಟ ಮನುಷ್ಯ ಬಾಳಿನಲ್ಲಿಯ ಗೋಳನ್ನೂ ಕೂಡ ಸುಖವೆಂದೇ ಭ್ರಮಿಸುತ್ತಾನೆ ಅಂತೆಯೇ ಅದರಲ್ಲಿ ರಮಿಸುತ್ತಾನೆ. ಕಸದ ಕುಂಡದಂತಿರುವ ಈ ಶರೀರವನ್ನು ರಸದ ಕಾರಂಜಿಯೆಂದು ಭಾವಿಸುತ್ತಾನೆ. ಮಲಮೂತ್ರಾಶಯವಾದ ಕಾಯವನ್ನು ಕಂಪಿಂಪುಗಳ, ಸೊಂಪು ಸಡಗರಗಳ ತಂಪಿನಾಗರವೆಂದು ಬಗೆಯುತ್ತಾನೆ.

## ದುಃಖದ ನೆಲೆಯಲ್ಲಿ ಸುಖದ ಸೆಲೆಯನ್ನು ಹುಡುಕುವ ಮಾನವನ ಮಂಗಬುದ್ಧಿ

ಇಂಥ ದುಃಖದ ನೆಲೆಯಲ್ಲಿಯೂ ಸುಖದ ಸೆಲೆ ಕಾಣುವ ಬುದ್ಧಿಯು ನರಕಯಾತನೆಯನ್ನೂ ನಾಕ ಸುಖವೆಂದೇ ಭ್ರಮಿಸುತ್ತದೆ. ಚಳಿಯಲ್ಲಿ ನಡುಗುವವನಿಗೆ ಬೆಂಕಿಯನ್ನು ಬಿಗಿದಪ್ಪ ಬೇಕೆನಿಸುವದು ಆದರೆ ಬಿಸಿಲು ಬೇಗುದಿ ಗೊಂಡವರಿಗೆ ಕೆಂಡವನ್ನು ಕಂಡರೂ ಸಂತಪವಾಗುವುದು ಹಸಿದವನಿಗೆ ಅನ್ನದ ಹಂಬಲ, ಉಂಡವನಿಗೆ ಊಟ ಒಂದು ಕಾಟವೆನಿಸುವದು. ಬಾಯಾರಿ ಬಳಲಿದವನಿಗೆ ನೀರು ಅಮೃತ. ಮಳೆಯಲ್ಲಿ ನೆನೆಯುವವನಿಗೆ ನೀರೆಂದರೆ ಮೈ ನಡುಗುವುದು. ಒಂದೇ ವಸ್ತು ಮನುಷ್ಯನಿಗೆ ಒಂದು

ಸಂದರ್ಭದಲ್ಲಿ ಇಷ್ಟವೂ ಮತ್ತೊಮ್ಮೆ ಅನಿಷ್ಟವೂ ಎನಿಸುವದು. ಸುಖದುಃಖಗಳು ವಸ್ತುನಿಷ್ಠವಲ್ಲ ಪರಿಸ್ಥಿತಿ ಪರತಂತ್ರವಾದವುಗಳು. ನಮ್ಮ ಬಯಕೆ ಬೇಡಿಕೆಗಳು ಹೆಚ್ಚಿದಂತೆ ಅವುಗಳ ವ್ಯಾಪತಾಪಗಳೂ ಬೆಳೆದು ಭೂತಾಕಾರವಾಗಿ ನಿಲ್ಲುತ್ತವೆ. ಮನುಷ್ಯನು ಸ್ನೇಹ ಮೋಹಗಳಿಗೆ ಬಲಿಯಾಗಿ ಪ್ರೇಮಸಂಬಂಧಗಳನ್ನು ಬೆಳೆಸಿದಷ್ಟೂ ಎದೆಯಲ್ಲಿ ದುಃಖದ ಕುಣಿಗಳನ್ನು ತೋಡಿದಂತೆ. ಮನೆಯಲ್ಲಿ ನಡೆದ ದುಃಖದ ದುರ್ಘಟನೆಗಳು ಮನಸ್ಸಿನಲ್ಲಿಯೂ ಮೂಡಿಬಿಡುತ್ತವೆ. ಕಾಲಾಂತರದಲ್ಲಿ ಅವು ಕುಳ್ಳುಕಟ್ಟಿಗೆ ಇಲ್ಲದಿದ್ದರೂ ಗುಟ್ಟಾಗಿ ಎದೆಯನ್ನು ಸುಡುತ್ತವೆ. ಬಾಳಿನ ತುಂಬ ಗೋಳು. ಬದುಕಿನುದ್ದಕ್ಕೂ ಬೇಗುದಿ, ಎದೆಗುದಿ. ಸಂಸಾರ ಸಮುದ್ರದ ತುಂಬ ತೇರೈಸಿ ತೂರಿ ಬರುವ ದುಃಖದ ಹೆದ್ದೆರೆಗಳ ಹೊಡೆತದಿಂದ ಪಾರಾಗಲಿಕ್ಕೆ ಇರುವ ಏಕೈಕ ಉಪಾಯ ನಾರಾಯಣ. ಅವನ ಚರಣಗಳಿಗೆ ಶರಣು ಹೋದರೆ ಅವನ ಕೃಪೆ ನಮ್ಮನ್ನು ಸಂಕಟಗಳ ಸಪ್ತಸಾಗರಗಳಿಂದ ಪಾರುಮಾಡುವದು.

## ಚಿಕ್ಕವರೇ ಅಧ್ಯಾತ್ಮ ಸಾಧನೆಗೆ ತಕ್ಕವರು

ಮಿತ್ರರೇ, ''ನಾವಿನ್ನೂ ಚಿಕ್ಕವರು, ಈಗಾಗಲೇ ಏಕೆ ಈ ತಾತ್ವಿಕ ವಿಚಾರಗಳ ತೊಡಕು'' ಎಂದು ಧರ್ಮದ ವಿಷಯದಲ್ಲಿ ಉದಾಸೀನರಾಗಬೇಡಿರಿ. ಮನುಷ್ಯನ ಬಾಲ್ಯವು ಬರೀ ಊಟ ಆಟಗಳಲ್ಲಿಯೂ, ತಾರುಣ್ಯವು ಬೇಟ ಕೂಟಗಳಲ್ಲಿಯೂ ಕಳೆದು ಹೋಗುತ್ತದೆ. ವಾರ್ಧಕ್ಯದಲ್ಲಿಯಂತೂ ಏನು ಮಾಡಲಿಕ್ಕೂ ಶಕ್ತಿ ಇಲ್ಲದೆ ಚಿಂತೆಯಿಂದಲೇ ಕೊರಗಿ ಹೋಗುತ್ತಾನೆ. ಆದುದರಿಂದ ವಿವೇಕಿಯಾದವನು ಬಾಲ್ಯದಲ್ಲಿಯೇ ತನ್ನ ಆತ್ಮ ಸಾಧನೆಯನ್ನು ಮಾಡಿಕೊಳ್ಳಬೇಕು. ತಡಿಗಡಿಗಳಿಲ್ಲದ ಈ ಸಂಸಾರವೆಂಬ ಕಡಲಿನಲ್ಲಿ ಸಂತಸದ ತೆರೆಗಳು ಏಳುವದು ತೀರ ವಿರಳ. ಈ ದುಃಖದ ಆಗರದಿಂದ ನಮ್ಮನ್ನು ಕಡೆಹಾಯಿಸಿ ಕಾಪಾಡುವದು ಭಗವತ್ಕೃಪೆಗೆ ಮಾತ್ರ ಸಾಧ್ಯ. ಆ ದಯಾಘನನು ಒಲಿದ ಬಳಿಕ ದೊರಕದ ವಸ್ತುವು ಯಾವದು! ಧರ್ಮ, ಅರ್ಥ, ಕಾಮ, ಮೊದಲಾದವುಗಳು ಮಾತ್ರವಲ್ಲದೆ ಮೋಕ್ಷರೂಪವಾದ ಫಲವೂ ಕೂಡ ಆ ಕರುಣೆಯ ಕಲ್ಪವೃಕ್ಷವನ್ನು ಆಶ್ರಯಿಸಿದವರ ಕೈಗೆ ಸುಲಭವಾಗಿ ದೊರಕುವದು.'' ಪ್ರಹ್ಲಾದನ ಈ ವೇದಾಂತ ಪ್ರವಚನದ ಪ್ರಭಾವವು ಕಿರಿಯರ ಮೇಲಲ್ಲದೆ ಎಷ್ಟೋ ಹಿರಿಯ ದಾನವರ ಮನಸ್ಸಿನ ಮೇಲೂ ಆಯಿತು. ಇದನ್ನು ತಿಳಿದ ಅಸುರರ ಅರಸನು ಕ್ರೋಧ ಸಂತಪ್ತನಾಗಿ ತನ್ನ ಅಡಿಗೆಯವರನ್ನು ಕರೆದು ಪ್ರಹ್ಲಾದನಿಗೆ ವಿಷವಿಕ್ಕುವಂತೆ ಅಪ್ಪಣೆ ಮಾಡಿದನು.

## ''ವಿಷಮಪ್ಯಮೃತಂ ಕ್ವಚಿದ್ ಭವೇತ್''

ದೈತದೊರೆಯ ಅಣತಿಯಂತೆ ಪಾಚಕರು ಅತ್ಯಂತ ಉಗ್ರವಾದ ವಿಷವನ್ನು ಬೆರಿಸಿ ಪ್ರಹ್ಲಾದನಿಗೆ ಉಣಬಡಿಸಿದರು. ಭಕ್ತ ವರೇಣ್ಯನಾದ ಪ್ರಹ್ಲಾದನು ಭಗವಂತನ ನಾಮಸ್ಮರಣೆಯನ್ನು ಮಾಡುತ್ತ ಆ ಅನ್ನವನ್ನು ಅಭಿಮಂತ್ರಣಗೈದು ವಿಷಸಹಿತವಾಗಿಯೇ ಊಟ ಮಾಡಿದನು. ಘೋರವಾದ ಹಾಲಾಹಲ ವಿಷದ ಅರ್ಕವನ್ನೇ ತೆಗೆದು ಎಲ್ಲ ಭಕ್ಷ್ಯಗಳಲ್ಲಿ ಮಿಶ್ರಣ ಮಾಡಿ ಬಡಿಸಿದ್ದರೂ ಅವನ್ನೆಲ್ಲ ಯಥೇಚ್ಛವಾಗಿ ತಿಂದು ತೇಗಿದ

ಆ ರಾಜಕುಮಾರನ ಮೇಲೆ ಆ ವಿಷದ ಪರಿಣಾಮವೇನು ಆಗಲಿಲ್ಲ. ಹರಿನಾಮವು ಹಾಲಾಹಲದ ಪ್ರಾಣಾಪಹರಣದ ಶಕ್ತಿಯನ್ನೇ ಹರಣ ಮಾಡಿಬಿಟ್ಟಿದ್ದಿತು. ಇಂಥ ಉಲ್ಬಣವಾದ ಕಾಲಕೂಟವನ್ನು ಪಚನಮಾಡಿಕೊಂಡು ನಿರ್ವಿಕಾರನಾಗಿ ನಿಶ್ಚಿಂತೆಯಿಂದ ನಾಮಸ್ಮರಣೆಯನ್ನು ಮಾಡುತ್ತ ನಿಂತುಕೊಂಡಿದ್ದ ಆ ಪ್ರಹ್ಲಾದನನ್ನು ಕಂಡು ಅರಮನೆಯ ಅಡಿಗೆಯ ಭಟ್ಟರೆಲ್ಲ ಗಾಬರಿಗೊಂಡು ಮಹಾರಾಜನಿಗೆ ನಮಿಸಿ ''ದೈತ್ಯರಾಜ, ನಿನ್ನ ಮಗನಿಗೆ ಅತ್ಯುಗ್ರವಾದ ಹಾಲಾಹಲ ವಿಷವನ್ನೇ ಉಣಬಡಿಸಿದೆವು. ಆದರೆ ಅವನು ಅನ್ನದ ಜೊತೆಗೆ ಆ ಗರಳವನ್ನು ಜೀರ್ಣಿಸಿಗೊಂಡಿದ್ದಾನೆ.'' ಎಂದು ತಿಳಿಸಿದರು. ಇದನ್ನು ಕೇಳಿ ಸಂಭ್ರಾಂತನಾದ ಹಿರಣ್ಯಕಶ್ಯಪುವು ''ಓಹೋ! ದಾನವ ಪುರೋಹಿತರೇ! ಕೂಡಲೇ ಈ ಪ್ರಹ್ಲಾದನನ್ನು ಕೊಂದು ಹಾಕಲಿಕ್ಕಾಗಿ ಹೆಮ್ಮಾರಿಯನ್ನು ನಿರ್ಮಾಣಮಾಡಿ ಇವನ ಮೇಲೆ ಪ್ರಯೋಗಿಸಿರಿ. ತಡಮಾಡಬೇಡಿರಿ ಬೇಗ ಬಿಡಿರಿ'' ಎಂದು ಚೀರಿಕೊಂಡನು.

## ಬೆಂಕಿಯ ಬೊಂಬೆ, ಕೃತ್ಯೆಯ ದೊಂಬೆ

ದೈತ್ಯರಾಜನ ಆಜ್ಞೆಯಿಂದ ಹೌಹಾರಿ ದೈತ್ಯಕುಲದ ಉಪಾಧ್ಯಾಯರು ಪ್ರಹ್ಲಾದನಿಗೆ ಬಗೆಬಗೆಯಿಂದ ಬುದ್ಧಿ ಹೇಳಿ ಈ ಅಧ್ಯಾತ್ಮದ ಮಾರ್ಗದಿಂದ ತಿರುಗಿಸಲು ಪ್ರಯತ್ನಪಟ್ಟರು. ಆ ದೈತ್ಯ ಕುವರನು ಅದನ್ನೆಲ್ಲ ಕೇಳಿಕೊಂಡು ತನ್ನ ಗುರುಗಳಿಗೆ ಹರಿಭಕ್ತಿಯ ತಿರುಮಂತ್ರವನ್ನು ಹೇಳಿದಾಗ ಆ ಅಸುರಾಚಾರ್ಯರು ಸ್ವಯಂ ಕ್ರುದ್ಧ ಕ್ಷುಬ್ಧರಾಗಿ ಬೆಂಕಿಯ ಬೊಂಬೆಯೊಂದನ್ನು ತಮ್ಮ ಮಂತ್ರದಿಂದ ನಿರ್ಮಿಸಿದರು. ಉರಿಯ ಮಾಲೆಗಳನ್ನೇ ಉಗುಳುವ ಆ ಮಹಾಮಾರಿಯು ಹೆಜ್ಜೆ ಇಟ್ಟ ನೆಲ ಕುಸಿಯಿತು. ಸ್ಥಲ ನಡುಗಿತು. ಉರಿಮೋರೆಯ ಆ ಕರಾಳ ಕೃತ್ಯೆಯು ಸಿಟ್ಟಿನಿಂದ ತ್ರಿಶೂಲವನ್ನು ಎತ್ತಿ ಪ್ರಹ್ಲಾದನ ಎದೆಗೆ ಚುಚ್ಚಿತು. ವೇಗದಿಂದ ಬೀಸಿದ ಶೂಲವು ಅವನ ವಕ್ಷಸ್ಥಳಕ್ಕೆ ಬಡಿದು ನೂರು ತುಂಡಾಗಿ ನೆಲದ ಮೇಲೆ ಬಿದ್ದಿತು. ಮುಕುಂದನ ಮೂರ್ತಿಯನ್ನು ಒಳಗೆ ನಿಲ್ಲಿಸಿಕೊಂಡು ಮನಸ್ಸಿನ ಮೇಲೆ ವಜ್ರಾಯುಧವು ಬಿದ್ದರೂ ಪುಡಿ ಪುಡಿಯಾಗಿ ಹೋಗುವಾಗ ಇಂಥ ಶೂಲ ನಾಲಗಳ ಪಾಡೇನು! ಪಾಪ ಲೇಪವಿಲ್ಲದ ''ಪಾಪ'' ಪ್ರಹ್ಲಾದನ ಮೇಲೆ ಘೋರ ಮಾರಿಯನ್ನು ಕಳುಹಿಸಿದ ಆ ಪುರೋಹಿತನ ಮೇಲೆಯೇ ಅದು ತಿರುಗಿ ಬಿದ್ದಿತು. ಆ ಅಗ್ನಿ ಪಿಶಾಚಿಯು ದೈತ್ಯ ಪುರೋಹಿತರ ಸುತ್ತ ಮುತ್ತ ಜ್ವಾಲೆಗಳ ಜಾಲವನ್ನು ಹಮ್ಮಿ ಹಣೆದು ಅವರನ್ನೇ ಹುರಿಯಹತ್ತಿತು. ಕೆನ್ನಾಲಿಗೆಯಿಂದ ಗುರುಗಳನ್ನು ತಿಕ್ಕಿ ಮುಕ್ಕುತ್ತಿರುವ ಆ ಬೆಂಕಿಯ ಶಂಖಿಣಿಯನ್ನು ನೋಡಿ ಪ್ರಹ್ಲಾದನ ಎದೆ ಕರಗಿ ಅವನು ಭಗವಂತನಲ್ಲಿ ಮೊರೆ ಇಟ್ಟನು. ''ಕೃಷ್ಣ, ಕರಾಳ ಕೃತ್ಯೆಯ ಅಗ್ನಿತಾಂಡವದಲ್ಲಿ ಬೆಂದು ಬೂದಿಯಾಗುತ್ತಲಿರುವ ಈ ಬ್ರಾಹ್ಮಣರನ್ನು ರಕ್ಷಿಸು''. ಆಗ ಕೂಡಲೇ ಆ ಉರಿಯುವ ಹೆಮ್ಮಾರಿಯು ಕಣ್ಮರೆಯಾಯಿತು.

## ಆಣೆಯಿಟ್ಟು ಅಗ್ನಿಸ್ನಾನ ತಪ್ಪಿಸಿದ

ಇದರಿಂದ ಪ್ರಹ್ಲಾದನ ಹೃದಯದ ಹಿರಿಮೆಯು ಚೆನ್ನಾಗಿ ವ್ಯಕ್ತವಾಯಿತು. ಒಂದು ಅಗ್ನಿ ಮೂರ್ತಿಯನ್ನು ನಿರ್ಮಿಸಿ ಅದರಲ್ಲಿ ಜೀವಜ್ವಾಲೆಯನ್ನು ತುಂಬಿ ತನ್ನನ್ನು

ಸುಡಲೆಳಿಸಿದ ಶಂಡಾಮರ್ಕರು ಅದೇ ಕೃತ್ಯೆಯ ಕಿಚ್ಚಿನಲ್ಲಿ ಹುರಪಳಿಸಿ ಹೋಗುವಾಗ ಪ್ರಹ್ಲಾದನು ತನ್ನ ಪುಣ್ಯವನ್ನೆಲ್ಲ ಪಣಕ್ಕೆ ಹಚ್ಚಿದ.

೧) ಶ್ರೀ ಹರಿಯು ವಿಶ್ವವ್ಯಾಪ್ತನಾದದ್ದು ನಿಜವಾದ ಪಕ್ಷದಲ್ಲಿ

೨) ನನಗೆ ವಿಷವಿಕ್ಕಿ, ಬೆಂಕಿ ಕೊಟ್ಟು, ಕೊಲ್ಲಲೆಳಸಿದ ಎಲ್ಲ ವೈರಿಗಳ ವಿಷಯ ದಲ್ಲಿಯೂ ದ್ವೇಷ ದುರ್ಭಾವನೆಗಳು ನನ್ನಲ್ಲಿ ಮೂಡದಿದ್ದುದು ನಿಜವಾದಲ್ಲಿ ಈ ಬ್ರಾಹ್ಮಣರು ಈ ಕೃತ್ಯದ ಕೈಯಿಂದ ಪಾರಾಗಲಿ'' ಎಂದು ಶಪಥಪೂರ್ವಕವಾಗಿ ನುಡಿದು ತನ್ನ ಪುಟ್ಟ ಕೈಗಳನ್ನು ಆ ದುಷ್ಟ ದೈತ್ಯಾಚಾರ್ಯರ ಮೈಮೇಲೆ ಆಡಿಸಿದ. ಆ ಬಾಲ ಭಕ್ತನ ಅಮೃತ ಹಸ್ತದ ಸ್ಪರ್ಶ ಮಾತ್ರದಿಂದಲೇ ದಗ್ಧದೇಹರಾದ ಶಂಡಾಮರ್ಕರ ಉರಿಬೇನೆಯೆಲ್ಲವೂ ಶಾಂತವಾಗಿ ಅವರು ಸಂತಸದುಂಬಿ ಎದ್ದು ನಿಂತರು. ಮತ್ತು ತಮ್ಮನ್ನು ಜೀವಸಹಿತವಾಗಿಯೇ ಹೋಳಿಯಾಡಹೊರಟ ಹೆಮ್ಮಾರಿಯಿಂದ ಬದುಕಿಸಿ ಜೀವದಾನ ಮಾಡಿದ ಪ್ರಹ್ಲಾದನನ್ನು ಹೊಗಳಿ ಹೃದಯದುಂಬಿ ಹರಿಸಿದರು.

## ಮಾಟವೋ ! ಮಂತ್ರಪಾಠವೋ ! ಹುಡುಗಾಟವೋ !

ಇದನ್ನು ಕೇಳಿ ನಿರಾಶನಾದ ಹಿರಣ್ಯಕಶ್ಯಪುವು ಪ್ರಹ್ಲಾದನನ್ನು ಕರೆದು ''ಮಗು ಇದೇನು ಮಂತ್ರವೋ ! ಮಾಟವೋ ! ಅಥವಾ ನಿನ್ನ ಸ್ವಾಭಾವಿಕ ಶಕ್ತಿಯೋ ! ನನಗಂತೂ ಇದೇನೋ ಪವಾಡದಂತೆ ತೋರುತ್ತದೆ?'' ಎಂದು ಕೇಳಿದನು.

## ಇದೆಲ್ಲವೂ ದೇವರ ಆಟ

ಆಗ ಪ್ರಹ್ಲಾದನು ವಿನಯದಿಂದ ತಂದೆಯನ್ನು ವಂದಿಸಿ ''ತಂದೆ ! ನನ್ನಲ್ಲಿ ಮಂತ್ರ ಮಾಟಗಳಾವವೂ ಇಲ್ಲ. ಸಹಜಶಕ್ತಿಯೂ ಇಲ್ಲ. ಯಾರ ಹೃದಯದಲ್ಲಿ ಹರಿ ನೆಲಸಿ ನಿಂದಿರುವನೋ ಅವರ ಗೈಮೆಯೆಲ್ಲವೂ ಒಂದುಪವಾಡವೇ ಆಗಿರುತ್ತದೆ. ಇನ್ನೊಬ್ಬರಿಗೆ ಕೇಡಕನ್ನು ಎಂದಿಗೂ ಬಯಸದೆ ನಾನು ಚಿತ್ತದಲ್ಲಿ ನಿರಂತರವೂ ಅಚ್ಯುತನನ್ನು ನೆನೆಯುತ್ತೇನೆ. ಆದ್ದರಿಂದ ಆ ನಾರಾಯಣನು ನನ್ನ ಮನದಲ್ಲಿ ಮೂಡಿಬಿಟ್ಟಿದ್ದಾನೆ. ಇದೆಲ್ಲವೂ ಆ ಭಗವಂತನ ಮಹಿಮೆ'' ಎಂದು ನುಡಿದನು.

## ಬೆಟ್ಟದಿಂದ ಬಿದ್ದರೂ ಪೆಟ್ಟಾಗದ ಪುಟ್ಟ ಮಗು

ಅದನ್ನು ಕೇಳಿ ದೈತ್ಯರಾಜನ ಕೋಪವು ಮತ್ತೆ ಕೆರಳಿ ಕಿಚ್ಚನ್ನು ಕಾರಿತು. ತನ್ನ ಕಿಂಕರನನ್ನು ಕರೆದು ಅವನು '' ಈ ಕುಲಾಂಗಾರನನ್ನು ಈ ಎತ್ತರವಾದ ಪರ್ವತ ಶಿಖರದ ಮೇಲೆ ಕಟ್ಟಿದ ನಮ್ಮ ಅರಮನೆಯ ಚಂದ್ರಶಾಲೆಯ ತುದಿಮಾಳಿಗೆಯ ಮೇಲಿಂದ ಕೆಳಗೆ ನೂಕಿಸಿ ಬಿಡಿರಿ'' ಎಂದು ಶಾಸನಗೈದ. ಅದರಂತೆ ದಾನವರು ಪ್ರಹ್ಲಾದನನ್ನು ಗಿರಿಶಿಖರಾಗ್ರದ ಪ್ರಸಾದದ ತುಟ್ಟ ತುದಿಯ ಮೇಲಿಂದ ನೆಲಕ್ಕೆ ತಳ್ಳಿ ಬಿಟ್ಟರು. ಆ ಮುಗಿಲು ಮಾಳಿಗೆಯಿಂದ ದೈತ್ಯರು ದೂಡಿದಾಗ ಆ ದಾನವ ಕುಮಾರನು ಬಾಯಿಂದ ಭಗವಂತನನ್ನು ನೆನೆಯುತ್ತ ಹೃದಯದಲ್ಲಿಯೂ ಅವನ ಮೂರ್ತಿಯನ್ನೇ ಧ್ಯಾನಿಸುತ್ತಲಿದ್ದ. ಹರಿಧ್ಯಾನಿಯು ಗಿರಿಶಿಖರದಿಂದ ಉರುಳುತ್ತಿರುವುದನ್ನು ನೋಡಿ

ಎದೆಕರಗಿದ ಭೂಮಿತಾಯಿಯು ಮೂರ್ತಿಮಂತಾಗಿ ಎದ್ದು ಓಡಿಬಂದು ಅವನನ್ನು ಎತ್ತಿಕೊಂಡಳು. ಅಷ್ಟು ಎತ್ತರದ ಮೇಲಿಂದ ಬಿದ್ದರೂ ಪ್ರಹ್ಲಾದನ ಯಾವ ಅವಯವಕ್ಕೂ ಪೆಟ್ಟಾಗಲಿಲ್ಲ. ನೋವೂ ಉಂಟಾಗಲಿಲ್ಲ. ಅವನು ಅಕ್ಷತನಾಗಿ ಸುರಕ್ಷಿತನಾಗಿ ಮರಳಿ ಮನೆಗೆ ಬಂದು ನಿಂತ.

## ಮಾಯಾ ಕೋಲಾಹಲ ಮಾಯವಾಯಿತು

ಅದನ್ನು ಕಂಡು ತಲೆಕೆಟ್ಟ ಹಿರಣ್ಯಕಶ್ಯಪು ಮಹಾಮಾಯಾವಿಯಾದ ಶಂಬರಾಸುರನನ್ನು ಕರೆದು ಹೇಗಾದರೂ ಮಾಡಿ ಪ್ರಹ್ಲಾದನನ್ನು ಕೊಲ್ಲ ಹೇಳಿದನು. ನೂರಾರು ಬಗೆಯಾದ ಶಂಬರನ ಘೋರಮಾಯೆಗಳು ಆ ಬಾಲಭಕ್ತನನ್ನು ಮುಕುರಿದವು. ಈಗಲೂ ಆ ದೈತ್ಯಕುಮಾರ ಚಿತ್ತದಲ್ಲಿ ಮತ್ತೆ ಮತ್ತೆ ಮಧುಸೂದನನನ್ನು ನೆನೆಯುತ್ತಲೇ ಇದ್ದ. ಶಂಬರನ ಬಗೆಗೂ ಅವನ ಮನಸ್ಸಿನಲ್ಲಿ ದ್ವೇಷವಿದ್ದಿಲ್ಲ, ಕೂಡಲೇ ಈ ಅಸುರಭಕ್ತನ ರಕ್ಷಣೆಗಾಗಿ ದೇವದೇವನ ಸುದರ್ಶನ ಚಕ್ರವು ಹರಿಯ ಆಜ್ಞೆಯಂತೆ ಅಲ್ಲಿಗೆ ಬಂದಿತು. ಉರಿಯ ಹಾರವನ್ನು ತೂರಾಡುತ್ತ ಬಂದ ಆ ಸುದರ್ಶನ ಚಕ್ರವು ಶಂಬರನ ಮಾಯೆಗಳನ್ನೆಲ್ಲ ಕಣ್ಣು ಮಿಟಿಕಿಸುವಷ್ಟರಲ್ಲಿ ಮಣ್ಣುಗೂಡಿಸಿ ಬಿಟ್ಟಿತು.

## ಗಾಳಿಗಳ ದಾಳಿ

ಅನಂತರ ಆ ರಾಕ್ಷಸರ ರಾಜನು ಘೋರ ಗಾಳಿಗಳಿಗೆ ಅಪ್ಪಣೆಗೈದನು. ಆಗ ದಾರುಣವಾದ ದೆವ್ವಗಾಳಿ, ಸುಂಟರಗಾಳಿ, ಬಿರುಗಾಳಿಗಳೆಲ್ಲವೂ ಕೂಡಿ ಪ್ರಹ್ಲಾದನನ್ನು ಹಾರಿಸಿ ತೃಣದಂತೆ ತೂರಾಡಿ ಒಗೆದು ಒಣಗಿಸಿಬಿಡಬೇಕೆಂದು ಬಂದು ಭೋರಾಡಿದವು. ಆದರೆ ಪ್ರಹ್ಲಾದನ್ನು ಮಂದರ ಬೆಟ್ಟವನ್ನು ಎತ್ತಿದ ಗೋವಿಂದನನ್ನು ಹೃದಯದಲ್ಲಿ ಧ್ಯಾನಿಸಿದನು. ಅವನ ಎದೆಗೂಡಿನಲ್ಲಿ ಬೀಡುಬಿಟ್ಟ ಭಗವಂತನು ಆ ಎಲ್ಲ ಚಂಡಮಾರುತ, ಭೂತವಾತ, ಝುಂಝುವಾತಗಳನ್ನು ಕುಡಿದು ಕರಗಿಸಿ ಬಿಟ್ಟನು, ಹೀಗೆ ಶ್ರೀ ಹರಿಯ ಕೃಪೆಯಿಂದ ಮಾಯೆಗಳೆಲ್ಲ ಮಾಯವಾಗಿ, ಗಾಳಿಗಳೆಲ್ಲವೂ ತಾವೇ ಹಾಳಾಗಿ ಹೋದ ಬಳಿಕ ಪ್ರಹ್ಲಾದನು ಮರಳಿ ಗುರುಗಳ ಮನೆಗೆ ಬಂದನು.

## ವಿದ್ಯೆಯ ದೊಂಬರಾಟ, ಕಲೆಯ ವಿಡಂಬನೆ

ಗುರುಗೃಹದಲ್ಲಿ ಶಂಡಾಮರ್ಕರು ಪ್ರಹ್ಲಾದನಿಗೆ ಶುಕ್ರನೀತಿ ರಾಜ್ಯಶಾಸ್ತ್ರಗಳ ಪಾಠ ಹೇಳಿದರು. ಮತ್ತೊಂದು ದಿನ ಹಿರಣ್ಯಕಶ್ಯಪುವು ಮಗನನ್ನು ಕರೆದು ಅವನು ಕಲಿತ ರಾಜನೀತಿಯ ಬಗೆಗೆ ವಿಚಾರಿಸಿದನು. ಅದಕ್ಕೆ ಪ್ರಹ್ಲಾದನು ಶಾಂತ ಸ್ವರದಲ್ಲಿ "ಗುರುಗಳೇನೋ ನನಗೆ ದಂಡನೀತಿಯನ್ನು ಉಪದೇಶಿಸಿದ್ದಾರೆ. ಆದರೆ ನನಗಂತೂ ಅದರಲ್ಲಿ ಯಾವ ತಥ್ಯವೂ ಕಾಣಲಿಲ್ಲ. ಯಾವ ಸತ್ಯವೂ ಗೋಚರವಾಗಲಿಲ್ಲ. ರಾಜನೀತಿಯಲ್ಲಿ ಸಾಮ, ದಾನ, ಭೇದ, ದಂಡ, ಎಂಬ ನಾಲ್ಕು ಉಪಾಯಗಳಿಂದ ವೈರಿಗಳನ್ನು ವಶಪಡಿಸಿಕೊಳ್ಳಬೇಕೆಂದು ಸೂಚನೆ ಮಾಡಲಾಗಿದೆ. ಆದರೆ ಎಲ್ಲರಲ್ಲಿಯೂ ಒಬ್ಬನೇ ಪರಮಾತ್ಮನು ಇರುವಾಗ ಎಲ್ಲರೂ ಮಿತ್ರರೇ ಸರಿ. ನಮಗೆ ಶತ್ರುಗಳೆಲ್ಲಿದ್ದಾರೆ! ಪ್ರಪಂಚದ ತುಂಬ

ಪರಮಾತ್ಮನೇ ವ್ಯಾಪ್ತನಾಗಿದ್ದಾನೆ ಎಂದು ನಂಬಿದವರು ಎಂದೂ ಯಾರನ್ನು ದ್ವೇಷಿಸಬಾರದು. ಚರಾಚರ ಪ್ರಾಣಿಗಳ ದೇಹಗಳೆಲ್ಲವೂ ದೇವನ ದೇಗುಲಗಳು ಎಂದು ಬಗೆದವನಿಗೆ ವೈರಿಗಳೇ ಇಲ್ಲದಾಗ ಅವರನ್ನು ವಶಪಡಿಸಿಗೆಲ್ಲುವ ಅಥವಾ ಕೊಲ್ಲುವ ಉಪಾಯಗಳನ್ನು ಸೂಚಿಸುವ ಈ ರಾಜನೀತಿಯಲ್ಲಿ ಏನು ಅರ್ಥವಿದೆ! ಆದುದರಿಂದ ಇಂಥ ಅನರ್ಥಕಾರಿಯಾದ ವಿದ್ಯೆ ವಿದ್ಯೆಯೇ ಅಲ್ಲ. ಮೋಕ್ಷದ ಮಾರ್ಗವನ್ನು ತೋರಿಸುವದೇ ನಿಜವಾದ ವಿದ್ಯೆ, ಉಳಿದೆಲ್ಲ ವಿದ್ಯೆಗಳೂ ಮಾನವೀಯ ಹೃದಯದ ಹುಚ್ಚು ಹಂಬಲ, ಹುಂಬತನಗಳನ್ನು ಮಾತು ಕೃತಿಗಳಲ್ಲಿ ಪ್ರತಿಬಿಂಬಿಸುವ ಕಲಾವಿಡಂಬನೆಗಳೇ ಸರಿ. ಆದುದರಿಂದ ಇದನ್ನೆಲ್ಲ ತೊರೆದು ನನ್ನಲ್ಲಿರುವ ಹರಿಯೇ ಅನ್ಯರಲ್ಲಿಯೂ ಇರುವನೆಂದು ತಿಳಿದು, ತನ್ನಂತೆ ಪರರ ಬಗೆದು ಭಗವಂತನನ್ನು ಆರಾಧಿಸುವದೇ ದುಃಖನಿವಾರಣೆಯ ಏಕಮಾತ್ರ ಉಪಾಯ'' ಎಂದು ಹೇಳಿದನು.

## ಸಮುದ್ರತಳದಲ್ಲಿ ಸಂಧ್ಯಾವಂದನೆ

ಪ್ರಹ್ಲಾದನ ಅರ್ಥಗರ್ಭಿತವಾದ ಈ ಹಿತನುಡಿಗಳನ್ನುಕೇಳಿ ಹಿರಣ್ಯಕಶ್ಯಪುವಿನ ಸಹನೆ ಮೀರಿತು. ಕೂಡಲೇ ಅವನು ತನ್ನ ರಾಜಗದ್ದುಗೆಯಿಂದ ಎದ್ದು ಬಂದು ಪ್ರಹ್ಲಾದನ ಎದೆಗೆ ಒದ್ದು ತನ್ನ ಕೈಗೆ ಕೈತಿಕ್ಕಿ ಹುಬ್ಬು ಗಂಟಿಕ್ಕಿ ಗರ್ಜಿಸಿದನು. ''ಎಲೋ ವಿಪ್ರಚಿತ್ತಿ, ಅರೇ ರಾಹು ! ಬೇಗ ಬನ್ನಿ. ಈ ದುಷ್ಟನನ್ನು ಈಗಲೇ ನಾಗಪಾಶಗಳಿಂದ ಹೆಡಮುರಿಕೆ ಕಟ್ಟಿ ಗಟ್ಟಿಯಾಗಿ ಬಿಗಿದು ಸಮುದ್ರ ಆಳದಲ್ಲಿ ಮುಳುಗಿಸಿಬಿಡಿರಿ.'' ಅಸುರಾಧೀಶನ ಈ ಆಜ್ಞೆಯನ್ನು ಮನ್ನಿಸಿ ದೈತ್ಯರು ಆ ಬಾಲಭಕ್ತನನ್ನು ಹಾವು ಹಗ್ಗಗಳಿಂದ ಬಲವಾಗಿ ಬಿಗಿದು ಕಡಲಿನ ನಡುನೀರಿಗೆ ನೂಕಿದರು. ಅದರಿಂದ ಸಾಗರದ ನೀರು ಉಕ್ಕೇರಿ ತುಳಕಿ ತೂರಾಡಿ ಮೇರೆ ಮೀರಿ ಹೊರಚೆಲ್ಲಿತು. ನೆಲತುಂಬ ನೀರೇನೀರಾಯಿತು. ಅದನ್ನು ಕಂಡ ಹಿರಣ್ಯಕಶ್ಯಪುವು ''ದೈತ್ಯರೇ ! ಹಾವುಗಳಿಗೆ ಹಣಿಯದ, ಕಾಲಕೂಟಕ್ಕೆ ಮಣಿಯದ ಬೆಂಕಿಯಿಂದ ಸಾಯದ, ಈ ಪ್ರಹ್ಲಾದ ಸಮುದ್ರದಿಂದಲೂ ಮೇಲೆದ್ದು ಬರಬಹುದು. ಆದುದರಿಂದ ಅವನಿನ್ನೂ ಸಮುದ್ರದ ತಳದಲ್ಲಿದ್ದಾಗಲೇ ಆ ಸಾಗರದಲ್ಲಿ ದೊಡ್ಡ ದೊಡ್ಡ ಗುಡ್ಡಗಳನ್ನು ತಂದೊಟ್ಟಿ ಎಲ್ಲಿಯೂ ಸಂದು ಬಿಡದಂತೆ ಕಡಲಿನೊಡಲನ್ನು ಭದ್ರವಾಗಿ ಅದ್ರಿಗಳಿಂದ ಛಿದ್ರವಿಲ್ಲದಂತೆ ಜಡಿದು ಮುಚ್ಚಿಬಿಡಿರಿ. ಶರಧಿಯ ತಳದಲ್ಲಿ ಪರ್ವತಗಳ ಬುಡದಲ್ಲಿ ಸಾವಿರಾರು ವರ್ಷ ಸಿಕ್ಕು, ಕೈ ಕಾಲು ಮುರಿದು, ಉಸಿರುಗಟ್ಟಿ ಆ ಪ್ರಹ್ಲಾದನು ಸತ್ತು ಹೋಗಲಿ'' ಎಂದು ಗುಡುಗಿದನು. ಅದರಂತೆ ದೈತ್ಯರು ಸಾಗರ ಗರ್ಭದಲ್ಲಿ ನಾಗಪಾಶಗಳಿಂದ ಕೈಕಾಲು ಕಟ್ಟಿ ಪ್ರಹ್ಲಾದನನ್ನು ಒಗೆದು ಆ ಸಮುದ್ರ ತಳವನ್ನೆಲ್ಲ ಕುಲಾದ್ರಿಗಳಿಂದ ಭದ್ರವಾಗಿ ಬೆಸೆದು ಮುಚ್ಚಿಹಾಕಿಬಿಟ್ಟರು. ಇಂಥ ಇರುಕು ಬಿರುಕಿನಲ್ಲಿ ಅಂಧಕಾರ ಕೂಪದಲ್ಲಿ ಬಂಧಿತನಾಗಿ ಬಿದ್ದಿದ್ದರೂ ಪ್ರಹ್ಲಾದನು ಮಿಡಕಲಿಲ್ಲ. ತನ್ನ ಪೂಜಾ

ಅಸ್ಥಿಕಗಳನ್ನು ಬಿಡಲಿಲ್ಲ. ಅಸ್ಥಿಕದ ಹೊತ್ತಾದಾಗ ಇದ್ದಲ್ಲಿಯೇ, ಮುದ್ದೆಯಾಗಿ ಬಿದ್ದಲ್ಲಿಯೇ ಭಗವಂತನನ್ನು ಭಜನೆ ಮಾಡತೊಡಗಿದ.

"ನಮಸ್ತೇ ಪುಂಡರೀಕಾಕ್ಷ ನಮಸ್ತೇ ಪುರುಷೋತ್ತಮ
ನಮಸ್ತೆ ಸರ್ವಲೋಕಾತ್ಮನ್ ನಮಸ್ತೇ ತಿಗ್ಮ ಚಕ್ರಿಣೇ॥
ನಮೋ ಬ್ರಹ್ಮಣ್ಯದೇವಾಯ ಗೋ ಬ್ರಾಹ್ಮಣ ಹಿತಾಯ ಚ
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥

## "ಈಶನೊಲಿದರೆ ಪಾಶವುಳಿವುದೇ !"

ಹೀಗೆ ಅನನ್ಯಭಾವದಿಂದ ಆ ದೈತ್ಯ ಕುವರನು ಶ್ರೀ ಹರಿಯನ್ನು ಸ್ತುತಿಸತೊಡಗಿದಾಗ ಒಮ್ಮೆಲೆ ಅವನ ಮೈಗೆ ಬಿಗಿದ ನಾಗಪಾಶವು ಹರಿಯಿತು. ಬಂಧ ಬಿರಿಯಿತು. ಸಮುದ್ರವು ಮೊರೆಯಿತು. ತೆರೆಗಳು ತೂರಾಡಿದವು. ಭೂಮಿಯು ಕಂಪಿಸಿತು. ಮೀನು ಮೊಸಳೆಗಳು ಕಂಗೆಟ್ಟು ಕುದಿದವು. ಅವನ ಮೇಲೆ ಒಟ್ಟಿದ ಬೆಟ್ಟಗಳು ತಾಕಲಾಡಿದವು. ಅವುಗಳನ್ನೆಲ್ಲ ಸರಿಸಿ ಪ್ರಹ್ಲಾದನು ಹೊರಬಂದನು. ಮತ್ತೆ ಹರಿಯನ್ನು ಮೈಮರೆತು ಧ್ಯಾನಮಾಡಹತ್ತಿದನು.

ಯಃ ಸ್ಥೂಲ ಸೂಕ್ಷ್ಮ ಪ್ರಕಟ ಪ್ರಕಾಶೋ ।
ಯಃ ಸರ್ವಭೂತೋ ನ ಚ ಸರ್ವಭೂತಃ ॥

ವಿಶ್ವಂ ಯತಶ್ಚೈತದವಿಶ್ವಹೇತೋಃ ।
ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥

ವ್ಯಕ್ತಾವ್ಯಕ್ತವಾದ ಪ್ರಪಂಚದ ಮೂಲನಾಗಿ ಅಭಿವ್ಯಕ್ತವಾದ ಮಹಿಮೆಯುಳ್ಳ ಪುರುಷೋತ್ತಮನಿಗೆ ನನ್ನ ವಂದನೆ. ಅವನು ಸಮಸ್ತ ವಿಶ್ವಕ್ಕೆಲ್ಲ ಪ್ರೇರಕನೂ ಕಾರಕನೂ ಆಗಿದ್ದುದರಿಂದ ವಿಶ್ವರೂಪಿಯೇ ಆಗಿದ್ದರೂ ವಿಶ್ವದಿಂದ ಅಂತ್ಯಂತ ಭಿನ್ನವೇ ಆಗಿದ್ದಾನೆ ಈ ಜಗತ್ತಿಗೆ ಅವನು ಉಪಾದಾನನಾಗದಿದ್ದರೂ ಅವನೇ ಮೂಲಕಾರಣನಾಗಿದ್ದಾನೆ. ಅವನಿಗೆ ಕರ್ತೃತ್ವದ ಲೇಪವು ಇಲ್ಲದ್ದರಿಂದ ಅವನು ಸರ್ವಕರ್ತನಾದರೂ 'ಅಕರ್ತ'ನೂ ಆಗಿದ್ದಾನೆ. ಇಂಥ ಜ್ಞಾನಸ್ವರೂಪಿಯೂ ಕ್ಷರಾಕ್ಷರ ಪುರುಷರಿಗಿಂತ ಶ್ರೇಷ್ಠನೂ ಆದ ಆ ಪರಮಾತ್ಮನಿಗೆ ನನ್ನ ನಮಸ್ಕಾರವಿರಲಿ." ಎಂದು ಮುಂತಾಗಿ ಬಗೆ ಬಗೆಯಿಂದ ಆ ಬಾಲಭಕ್ತನು ಭಗವಂತನನ್ನು ಕೊಂಡಾಡುತ್ತಾ ತನ್ನ ಅಸ್ತಿತ್ವವನ್ನೇ ಮರೆತು ಪರಮಾತ್ಮನಲ್ಲಿಯೇ ಲೀನನಾಗಿ ಹೋದಾಗ ಅವನ ಸ್ತುತಿಮತಿ ನತಿನುತಿಗಳಿಂದ ಒಲಿದು ಪ್ರಸನ್ನನಾದ ಪರಮಾತ್ಮನು ಅಲ್ಲಿಯೇ ಪ್ರಹ್ಲಾದನ ಎದುರು ಪ್ರತ್ಯಕ್ಷನಾಗಿ ನಿಂತನು. ಸಾಕ್ಷಾತ್ ಜಗದೀಶ್ವರನೇ ಮೂರ್ತಿಮಂತಾಗಿ ಎದುರಿಗೆ ಬಂದು ನಿಂತುಕೊಂಡಾಗ ಪ್ರಹ್ಲಾದನಿಗೆ ಏನು ಮಾಡಬೇಕು ತಿಳಿಯಲಿಲ್ಲ. ಎಂತು ನುಡಿಯಬೇಕು ಹೊಳೆಯಲಿಲ್ಲ. ಅವನು ಬಾಯಿಯಿಂದ ಬರೀ "ವಿಷ್ಣವೇನಮಃ ವಿಷ್ಣವೇನಮಃ" "ವಿಷ್ಣುವಿಗೆ ವಂದನೆ ವಿಷ್ಣುವಿಗೆ ವಂದನೆ" ಎಂದೆನ್ನುತ್ತ ನಿಂತುಕೊಂಡನು.

## ದೇವನು ಪ್ರಸನ್ನನಾದರೆ ಯಾವದು ದುರ್ಲಭ !

ಆಗ ಭಗವಂತನು ಸ್ನೇಹದುಂಬಿದ ದನಿಯಿಂದ ''ಪ್ರಹ್ಲಾದ, ನಿನ್ನ ಅಚ್ಛಿನ್ನ ಭಕ್ತಿಗೆ ನಾನು ಮೆಚ್ಚಿಬಂದಿದ್ದೇನೆ. ನಿನ್ನತಪಸ್ಸಿಗೆ ಪ್ರಸನ್ನನಾಗಿ ನಿಂತಿದ್ದೇನೆ. ನೀನು ಬಯಸಿದ ವರವನ್ನು ಕೊಡುತ್ತೇನೆ. ಬೇಕಾದ ವರ ಕೇಳು'' ಎಂದು ನುಡಿದನು.

## ಪ್ರಹ್ಲಾದನ ಎರಡು ಬಯಕೆಗಳು

ಅದನ್ನು ಕೇಳಿ ಪ್ರಹ್ಲಾದನು ಸಂತಸದಿಂದ ಬಾಗಿ ''ಭಗವಾನ್, ನಾನು ಯಾವದೇ ಜನ್ಮಜಾತಿಯಲ್ಲಿ ಜನಿಸಿರಲಿ, ಎಲ್ಲಿಯೇ ಇರಲಿ, ಆದರೆ ನಿನ್ನ ಮೇಲಿನ ಭಕ್ತಿಗೆ ಮಾತ್ರ ಎಂದಿಗೂ ಕೊರತೆಯಾಗಬಾರದು. ನನ್ನ ಅಚ್ಯುತ ಭಕ್ತಿಗೆ ಎಲ್ಲಿಯೂ ಯಾವ ಕಾಲದಲ್ಲಿಯೂ ಚ್ಯುತಿಯು ಬಾರದಂತಿರಲಿ, ಮತ್ತು ಅವಿವೇಕಿಗಳಾದ ವಿಷಯಲಂಪಟರಿಗೆ ವಿಷಯ ಸುಖದ ಉಪಭೋಗದಲ್ಲಿ ಇರುವಷ್ಟು ಅನುರಕ್ತಿ ಆಸಕ್ತಿಗಳು ನನಗೆ ನಿನ್ನಲ್ಲಿ ನಿರಂತರವೂ ನಿರಂತರವಾಗಿ ಇರಲಿ.

## ''ಕಾಡಿದ ತಂದೆಗೆ ಕೇಡನು ಬಯಸದೆ ಬೇಡಿದ ಹರಿಯಲಿ ಸದ್ಗತಿಯ''

ಅವನ ಈ ಎರಡೂ ವರಗಳನ್ನು 'ತಥಾಸ್ತು' ಎಂದು ಕರುಣಿಸಿದ ಬಳಿಕ ಆ ಪರಮಾತ್ಮನು ''ಪ್ರಹ್ಲಾದ, ಮತ್ತೇನಾದರೂ ನಿನ್ನ ಬಯಕೆ ಇದ್ದರೆ ತಿಳಿಸು'' ಎಂದು ಹೇಳಿದನು. ಅದಕ್ಕೆ ಪ್ರಹ್ಲಾದನು ಕೈ ಜೋಡಿಸಿ ''ಸ್ವಾಮಿ, ನಿನ್ನ ಭಕ್ತನಾದ ನನ್ನನ್ನು ನನ್ನ ತಂದೆಯು ಹಾವು ಕಡಿಸಿ, ಬೆಂಕಿಯಿಂದ ಸುಡಿಸಿ' ಶಸ್ತ್ರಗಳಿಂದ ಹೊಡಿಸಿ, ಗಿರಿಶಿಖರದಿಂದ ದೂಡಿಸಿ, ಉಗ್ರ ವಿಷವನ್ನು ಊಡಿಸಿ, ಮಾಯೆ ಮಾಟ ಮಾಡಿಸಿ, ಇನ್ನೂ ಬಗೆಬಗೆಯಿಂದ ಕಾಡಿಸಿ ಪರಿಪರಿಯಿಂದ ಪೀಡಿಸಿ, ಕೊಲ್ಲಲು ಪ್ರಯತ್ನಿಸಿದ್ದ. ಹರಿಭಕ್ತರ ದ್ರೋಹವು ಮಹಾ ಅನರ್ಥಕಾರಿಯಾದುದರಿಂದ ಆ ಪಾಪದಿಂದ ನನ್ನ ತಂದೆಯ ಸಚ್ಚೇತನವು ಮುಕ್ತವಾಗಬೇಕು. ಅವರ ಎಲ್ಲ ಪಾಪಗಳೂ ಪರಿಹಾರ ವಾಗಬೇಕು ಎಂದು ಬೇಡಿಕೊಂಡನು.

ಅದನ್ನು ಕರುಣಾಶಾಲಿಯಾದ ಪರಮಾತ್ಮನು ದಯಪಾಲಿಸಿ ''ಮತ್ತೆ ಏನು ವರ ಬೇಕು ಕೇಳು'' ಎಂದನು. ಆಗ ಪ್ರಹ್ಲಾದನು ''ಸ್ವಾಮಿ, ನಿನ್ನಲ್ಲಿನಿರಂತರವಾದ

**''ನಾಥ ಯೋನಿಸಹಸ್ರೇಷು ಯೇಷು ಕೇಷು ವ್ರಜಾಮ್ಯಹಂ**
**ತೇಷು ತೇಷ್ವಚ್ಯುತಾ ಭಕ್ತಿರಚ್ಯುತಾಸ್ತು ಸದಾ ತ್ವಯಿ ॥**

**ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ**
**ತ್ವಾಮನುಸ್ಮರತಃ ಸಾ ಮೇ ಹೃದಯಾನ್ನಾಪಸರ್ಪತು ॥**

ಶಾಶ್ವತ ಭಕ್ತಿ ಪ್ರದಾನರೂಪವಾದ ಶ್ರೇಷ್ಠವರದಿಂದಲೇ ನಾನು ಕೃತಕೃತ್ಯನಾಗಿದ್ದೇನೆ. ನಿಜವಾದ ಹರಿಭಕ್ತನಿಗೆ ಧರ್ಮ ಅರ್ಥ ಕಾಮ ಮುಂತಾದ ಯಾವ ಪುರುಷಾರ್ಥವೂ ಬೇಕಿಲ್ಲ. ನಾಲ್ಕನೇಯ ಪುರುಷಾರ್ಥವಾದ ಮುಕ್ತಿಯಂತೂ ಭಕ್ತಿಯ ಕೈಕೂಸಾಗಿ ಭಕ್ತನಿಗೆ ಸುಲಭವಾಗಿ ದೊರಕುತ್ತದೆ.'' ಎಂದು ನುಡಿದನು ಆಗ ಶ್ರೀ ವಿಷ್ಣುವು

''ಪ್ರಹ್ಲಾದ, ನನ್ನಲ್ಲಿಯೇ ನಿಶ್ಚಲವಾದ ಭಕ್ತಿಯಿಂದ ಚಿತ್ತವಿಟ್ಟು ಚಿಂತನ ಮಾಡುವ ನೀನು ನನ್ನ ಅನುಗ್ರಹದಿಂದ ಕೊನೆಗೆ ದಿವ್ಯ ಮೋಕ್ಷವನ್ನು ಪಡೆಯುವೆ'' ಎಂದು ಹೇಳಿ ಪರಮಾತ್ಮನು ಅಲ್ಲಿಂದ ಅದೃಶ್ಯನಾದನು. ಜಗದೀಶ್ವರನು ಒಮ್ಮೆಲೇ ಅಂತರ್ಧಾನವನ್ನು ಹೊಂದಿದ ಬಳಿಕ ಪ್ರಹ್ಲಾದ ಅಲ್ಲಿಂದ ನೇರವಾಗಿ ತನ್ನ ತಂದೆಯ ಬಳಿಗೆ ಬಂದು ಆನಂದದಿಂದ ವಂದಿಸಿ, ವಿನಯದಿಂದ ಬಾಗಿ ಕೈ ಮುಗಿದು ನಿಂತನು.

## ''ಪಶ್ಚಾತ್ತಾಪದಲ್ಲಿ ಬೆಂದ. ಪ್ರೇಮರಸದಲ್ಲಿ ಮಿಂದ''

ಇಷ್ಟರಲ್ಲಿ ಹಿರಣ್ಯಕಶ್ಯಪುವಿಗೂ ಮಗನ ಮೇಲೆ ತಾನು ಮಾಡಿದ ಕ್ರೌರ್ಯ, ಕಟುಕತನದ ಕೃತಿಗಳಿಂದಾಗಿ ಪಶ್ಚಾತ್ತಾಪವಾಗಿದ್ದಿತು. ತಾನೇ ಕುಳಿತು ತನ್ನ ಹೊಟ್ಟೆಯ ಮಗನನ್ನು ಕೊಲ್ಲಲಿಕ್ಕಾಗಿ ರಚಿಸಿದ ಅನೇಕ ಮೃತ್ಯುತಂತ್ರಗಳಿಂದ ಸುರಕ್ಷಿತವಾಗಿ ಪಾರಾಗಿ ಬಂದ ಪುತ್ರನನ್ನು ಕಂಡು ಆ ದೈತ್ಯರಾಜನ ಹೃದಯವು ಸಂತಸಗೊಂಡಿತು. ಕಣ್ಣು ಕಂಬನಿದುಂಬಿತು. ಬಂದ ಮಗನನ್ನು ಅವನು ಅಂತಃಕರಣದಿಂದ ಬರಸೆಳೆದು ಬಿಗಿದಪ್ಪಿ ಮೈತುಂಬ ಕೈಯಾಡಿಸುತ್ತ ''ಮಗು, ಈ ಕ್ರೂರ ತಂದೆಯ ಕೈಯಿಂದ ಪಾರಾಗಿ ಬದುಕಿ ಬಂದೆಯಾ!'' ಎಂದು ನುಡಿದು ಮತ್ತೆ ಮತ್ತೆ ಮೈದಡವಿ ಮುದ್ದಾಡಿದನು. ಪ್ರಹ್ಲಾದನ ಮೇಲಿನ ಸಿಟ್ಟು ಸಿಡುಕುಗಳೆಲ್ಲ ಮಾಯವಾಗಿ ಹಿರಣ್ಯಕಶ್ಯಪುವಿಗೆ ಅವನ ಮೇಲೆ ಪೂರ್ಣ ಪ್ರೀತಿಯು ಉತ್ಪನ್ನವಾಗಿದ್ದಿತು. ತಾನೆಸಗಿದ ಕಠೋರ ಕೃತ್ಯಗಳಿಗಾಗಿ ಅವನಲ್ಲಿ ಅನುತಾಪವು ಉಂಟಾಗಿತ್ತು. ಪ್ರಹ್ಲಾದನಾದರೂ ತನ್ನ ತಂದೆಯು ಹಿಂದೆ ತನ್ನ ಮೇಲೆ ಗೈದ ಯಾವದೇ ಅತ್ಯಾಚಾರ ಹತ್ಯಾಚಾರಗಳನ್ನು ಮನದಲ್ಲಿಯೂ ತಾರದೆ 'ತಂದೆಯೆಂಬ ಭಕ್ತಿಯಿಂದ ನಿತ್ಯನಿರಂತರವೂ ಅವನ ಸೇವಾ ಶುಶ್ರೂಷಾದಿಗಳನ್ನು ಮಾಡುತ್ತಲೇ ಇದ್ದನು. ಅವನ ಪಿತೃಭಕ್ತಿ, ಪಿತೃಸೇವಾ, ಹರಿಭಕ್ತಿ, ಹರಿಸೇವಾದಿ ಸ್ವಧರ್ಮಾಚರಣೆಗೆ ಎಂದೂ ವ್ಯತ್ಯಯವು ಬರಲಿಲ್ಲ. ಮುಂದೆ ಕೆಲಕಾಲವು ಕಳೆದ ಬಳಿಕ ಶ್ರೀ ವಿಷ್ಣುವು ಹಿರಣ್ಯಕಶ್ಯಪುವನ್ನು ಅರ್ಧ ಮಾನವ ಅರ್ಧ ಸಿಂಹದ ಆಕಾರವುಳ್ಳ ನರಸಿಂಹ ರೂಪವನ್ನು ಧರಿಸಿಗೊಂಡು ಬಂದು ಸಂಹಾರ ಮಾಡಿದನು.

## ದೈತ್ಯ ಸಿಂಹಾಸನದ ಮೇಲೆ ದೈವೀ ಪುರುಷ

ಅನಂತರ ಆ ಅಸುರ ಸಾಮ್ರಾಜ್ಯದ ಸಿಂಹಾಸನದ ಮೇಲೆ ಪ್ರಹ್ಲಾದನೇ ಅಧಿರಾಜನಾಗಿ ಕುಳಿತು ರಾಜ್ಯದಲ್ಲೆಲ್ಲ ಧರ್ಮಚಕ್ರವು ಪ್ರವರ್ತಿತವಾಗುವಂತೆ ಮಾಡಿದನು. ಈ ರಾಜಭೋಗದಿಂದ ಅವನ ಪ್ರಾರಬ್ಧ ಕರ್ಮವು ಸವೆಯಿತು. ಅನೇಕ ಧರ್ಮಕರ್ಮಾನುಷ್ಠಾನದಿಂದ ಅವನ ಪುಣ್ಯವೃದ್ಧಿಯೂ ಆಯಿತು. ಸಂತಾನ ಸಂಪತ್ತು ಯಾವುದಕ್ಕೂ ಕೊರತೆಯಾಗಲಿಲ್ಲ. ಕೋಶವು ದ್ರವ್ಯದಿಂದ ತುಂಬಿತ್ತು. ಮನೆತುಂಬ ಮಕ್ಕಳು ಮೊಮ್ಮಕ್ಕಳು ನಲಿದಾಡುತ್ತಿದ್ದರು.

## ಭೋಗ ಭೂಮಿಯಿಂದ ತ್ಯಾಗ ತಪಸ್ಸಿಗೆ

ಇಷ್ಟೆಲ್ಲ ಸುಖಸಂಪದ ಸೌಭಾಗ್ಯಗಳ ಸುಗ್ಗಿಯ ಹಿಗ್ಗು ಹಿಗ್ಗುತ್ತಲಿದ್ದಾಗಲೇ ಒಮ್ಮೆಲೇ ಪ್ರಹ್ಲಾದನಿಗೆ ವೈರಾಗ್ಯ ಮೂಡಿ ಎಲ್ಲವನ್ನು ತೊರೆದು ಸರ್ವಸಂಗಪರಿತ್ಯಾಗ

ಮಾಡಿ ಭಗವಂತನ ಧ್ಯಾನ ಮಾಡಹತ್ತಿದನು. ಬಂಧಕವಾದ ಪುಣ್ಯ ಪಾಪಗಳೆಲ್ಲವೂ ಲೋಪವಾದವು. ಹೀಗೆ ನಿರಂತರ ಧ್ಯಾನರೂಪವಾದ ತಪಸ್ಸಿನಿಂದ ಅವನು ಕೊನೆಗೆ ಪರಮಾತ್ಮನ ಪ್ರಸಾದವನ್ನು ಪಡೆದು ಮೋಕ್ಷವನ್ನು ಹೊಂದಿದನು.

ಮೈತ್ರೇಯ, ಪ್ರಹ್ಲಾದನು ದೈತ್ಯನಾದರೂ ಮಹಾಭಗವದ್ಭಕ್ತನಾಗಿದ್ದನು. ಅವನ ಪುಣ್ಯಪ್ರಭಾವವು ಅಸ್ವಾದೃಶವಾಗಿದ್ದಿತು. ಮಹಾ ಮಹಿಮೋಪೇತನಾದ ಈ ಭಗವದ್ಭಕ್ತನ ಚರಿತ್ರೆಯನ್ನು ಪುಣ್ಯದಿನ ಪರ್ವಕಾಲಗಳಲ್ಲಿ ಹೇಳಿ ಕೇಳಿದವರಿಗೆ ಗೋದಾನದ ಪುಣ್ಯವು ಬರುವದಲ್ಲದೆ ಅವರ ಮೇಲೆ ಶ್ರೀ ಹರಿಯು ಸುಪ್ರೀತನಾಗಿ ಪ್ರಹ್ಲಾದನನ್ನು ಕಾಪಾಡಿದಂತೆ ಅವರನ್ನು ಎಲ್ಲ ಸಂಕಟಗಳಿಂದಲೂ ರಕ್ಷಿಸುತ್ತಾನೆ.

## ಪ್ರಹ್ಲಾದನ ಪೀಳಿಗೆ

ಪ್ರಹ್ಲಾದನ ಸಹೋದರನಾದ ಸಂಲ್ಹಾದನಿಗೆ ಆಯುಷ್ಮಾನ್, ಶಿಬಿ, ಮತ್ತು ಬಾಷ್ಕಳ ಎಂದು ಮೂವರು ಮಕ್ಕಳು. ಪ್ರಹ್ಲಾದನಿಗೆ ವಿರೋಚನ ಎಂಬ ಮಗನಿದ್ದ. ಆ ವಿರೋಚನನ ಪುತ್ರನೇ ಬಲಿಚಕ್ರವರ್ತಿ. ಈ ಬಲಿರಾಜನಿಗೆ ನೂರು ಜನ ಪುತ್ರರು ಅವರಲ್ಲಿ ಬಾಣಾಸುರನೇ ಜೇಷ್ಠ ಪುತ್ರ. ಹಿರಣ್ಯಕಶ್ಯಪುವಿನ ಸಹೋದರನಾದ ಹಿರಣ್ಯಾಕ್ಷನಿಗೆ ಪೂತನಾ, ಶಕುನಿ, ಭೂತ ಸಂತಾಪನ, ಮಹಾನಾಭ, ಮಹಾಬಾಹು, ಕಾಲನಾಭ ಎಂದು ಮುಂತಾಗಿ ಮಕ್ಕಳಿದ್ದರು.

## ದಾನವ ಕುಲವು ದಾಂಗುಡಿಯಿಟ್ಟಿತು

ಕಶ್ಯಪಋುಷಿಯ ಮತ್ತೊಬ್ಬ ಮಡದಿಯಾದ ದನುದೇವಿಯಿಂದ ಅನೇಕ ದಾನವರು ಜನಿಸಿದರು, ದ್ವಿಮೂರ್ಧ, ಶಂಬರ, ತಾರಕ, ಸ್ವರ್ಭಾನು, ವೃಷಪರ್ವ, ಪುಲೋಮ ಮುಂತಾದವರು ದನುವಿನ ಮಕ್ಕಳು. ಹಿರಣ್ಯಕಶ್ಯಪುವಿನ ಸೋದರಿ ಸಿಂಹಿಕೆಯನ್ನು ಮದುವೆಯಾದ ವಿಪ್ರಚಿತ್ತಿಯೂ ವಾತಾಪಿ, ಇಲ್ವಲ, ನಮುಚಿ, ಖಸೃಮ, ನರಕ, ವ್ಯಂಗ, ಶಲ್ಯ, ವಕ್ರಯೋಧಿ, ಮೊದಲಾದ ಅನೇಕ ಮಕ್ಕಳನ್ನು ಪಡೆದು ದಾನವ ಕುಲವನ್ನು ಅಭಿವೃದ್ಧಿಪಡಿಸಿದನು. ಅಸುರರಾಜ ವೃಷಪರ್ವನಿಗೆ ಶರ್ಮಿಷ್ಠೆ ಎಂಬ ಮಗಳಿದ್ದಳು. ವೈಶ್ವಾನರನಿಗೆ ಉಪದಾನವಿ, ಹಯಶಿರಸ್, ಪುಲೋಮಾ ಮತ್ತು ಕಾಲಕಾ ಎಂಬ ನಾಲ್ವರು ಹೆಣ್ಣು ಮಕ್ಕಳಿದ್ದರು. ಅವರಲ್ಲಿ ಪುಲೋಮಾ ಮತ್ತು ಕಾಲಕೆಯರನ್ನು ಮಹರ್ಷಿ ಕಶ್ಯಪರಿಗೆ ಮದುವೆ ಮಾಡಿಕೊಡಲಾಯಿತು. ಅವರಿಂದ ಅರವತ್ತು ಸಾವಿರ ದಾನವರು ಜನಿಸಿದರು. ಅವರಿಗೆ ಪೌಲೋಮರು ಕಾಲಕೇಯರು ಎಂದು ಹೆಸರಾಯಿತು.

## ತಾಮ್ರೆಯ ಹೊಟ್ಟೆಯ ಪುಣ್ಯ

ಕಶ್ಯಪಋುಷಿಯ ತಾಮ್ರಾ ಎಂಬ ಹೆಂಡತಿಯಿಂದ ಶುಕೀ, ಶ್ಯೆನೀ, ಹಂಸೀ, ಸುಗ್ರೀವಿ, ಗೃಧ್ರಿ, ಶುಚಿ ಎಂಬ ಆರು ಹೆಣ್ಣುಮಕ್ಕಳು ಹುಟ್ಟಿದರು. ಈ ಕಶ್ಯಪ ಕುಮಾರಿಯರಿಂದಲೇ ಪಶುಪಕ್ಷಿ ಪ್ರಪಂಚವೆಲ್ಲವೂ ಸಮೃದ್ಧವಾಗಿ ಬೆಳೆದು ಭೂಮಂಡಲವನ್ನು ತುಂಬಿ ತುಳುಕಿಸಿತು. ಶುಕಿಯು ಗಿಳಿ ಗೂಗೆ ಮತ್ತು ಕಾಗೆಗಳನ್ನು ಹೆತ್ತಳು. ಶ್ಯೇನಿಯು

ಗಿಡಗಗಳನ್ನು ಹಡೆದಳು. ಹಂಸಿಯು ವಂಶವೇ ಹಂಸಗಳು. ಗೃಧ್ರಿಗೆ ಹದ್ದುಗಳೇ ಸಂತಾನ, ಕುದುರೆ, ಕತ್ತೆ, ಒಂಟೆಗಳು ಸುಗ್ರೀವೀಯ ಮಕ್ಕಳು. ಉಳಿದೆಲ್ಲ ಪಕ್ಷಿಗಳೂ ಶುಚಿಯ ಸಂತತಿಯೇ ಎಂದು ಹೇಳಬಹುದು. ಹೀಗೆ ತಾಮ್ರಾ ಎಂಬ ಕಶ್ಯಪ ಕುಟುಂಬಿನಿಯಿಂದ ಪಕ್ಷಿಪ್ರಪಂಚವು ಬೆಳೆಯಿತು. ಕಶ್ಯಪರ ಮಗದೊಬ್ಬ ಮಡದಿ ವಿನತೆಗೆ ಗರುಡ, ಅರುಣ ಎಂಬ ಇಬ್ಬರು ಸುಪ್ರಸಿದ್ಧರಾದ ಮಕ್ಕಳಾದರು. ಹಕ್ಕಿಗಳ ಒಡೆಯನಾದ ಗರುಡನು ಹಾವುಗಳನ್ನು ಮುಕ್ಕಿ ಹಸಿವನ್ನು ಹಿಂಗಿಸಿಕೊಳ್ಳುತ್ತಾನೆ.

## "ಹುರುಡುಗಟ್ಟ ಹಕ್ಕಿ ಹಾವು ಹೆತ್ತಮುನಿಯ ಹೆಂಡಿರು"

ಸುರಸಾ ಎಂಬ ಇನ್ನೊಬ್ಬ ಕಶ್ಯಪಕಾಂತೆಯಿಂದ ಹತ್ತು ಹೆಡೆಯ ಸಾವಿರ ಹಾವುಗಳೇ ಹುಟ್ಟಿ ಹರಿದು ಹೊರಬಂದವು. ಸುರಸೆಯ ಸವತಿ ಕದ್ರೂವಿಗೂ ಸಾವಿರ ಸರ್ಪಗಳು ಸಂತಾನವಾಗಿ ಜನಿಸಿದವು. ಅವರಲ್ಲಿ ಶೇಷ, ವಾಸುಕಿ, ತಕ್ಷಕ, ಶಂಖ, ಶ್ವೇತ, ಕಂಬಳ, ಅಶ್ವತರ, ಕರ್ಕೋಟಕ, ಧನಂಜಯ, ಮುಂತಾದ ಪನ್ನಗೇಶ್ವರರು ಪ್ರಸಿದ್ಧರಾಗಿದ್ದಾರೆ. ಕಶ್ಯಪಕುಮಾರರಾದ ಈ ಎಲ್ಲ ಕಾಲಸರ್ಪಗಳೂ ಭಾರೀವಿಷಾರೀ ಪ್ರಾಣಿಗಳಾಗಿದ್ದು ಲೋಕಕಂಟಕಗಳಾದುದರಿಂದ ಜಗತ್ ಕ್ಷೇಮಾಕಾಂಕ್ಷಿಯಾದ ಗರುಡನು ಅವುಗಳನ್ನು ತನ್ನ ಜಾತಿಯ ಆಹಾರವನ್ನಾಗಿ ಮಾಡಿಕೊಂಡಿದ್ದಾನೆ.

## ಕಶ್ಯಪಕುಲದ ಹಲವು ಕುಡಿಗಳು, ಕೆಲವು ಕಿಡಿಗಳು

ಕ್ರೋಧವಶಾ ಎಂಬ ಕಶ್ಯಪ ಕಾಮಿನಿಗೆ ಕ್ರೋಧವಶರೆಂಬ ಕ್ರೂರ ರಕ್ಕಸರ ಸಂತತಿಯು ಜನಿಸಿತು. ಮಾಂಸ ತಿನ್ನುವ ಜಲಚರ, ಸ್ಥಲಚರ, ಖೇಚರ, ಪಶು ಪಕ್ಷಿಗಳೆಲ್ಲ ಈ ಕ್ರೋಧವಶೆಯ ಸಂತಾನವೇ. ಮತ್ತೊಬ್ಬ ಕಶ್ಯಪಕಾಂತೆಯಾದ ಸುರಭಿಯಿಂದ ಆಕಳು, ಎತ್ತು, ಎಮ್ಮೆ, ಮುಂತಾದವುಗಳು ಜನಿಸಿದವು. ಇರಾ ಎಂಬ ಕಶ್ಯಪ ಕುಟುಂಬಿನಿಯಿಂದ ಗಿಡಬಳ್ಳಿ, ಹುಲ್ಲು ಹಸಿರು ಮುಂತಾದ ಸ್ಥಾವರಗಳ ಉತ್ಪತ್ತಿಯಾಯಿತು. ಖಶಾ ಎಂಬ ಕಶ್ಯಪ ಪತ್ನಿಯಿಂದ ಯಕ್ಷರಾಕ್ಷಸರೂ, ಮುನಿ ಎಂಬ ಮಾನಿನಿಯಿಂದ ಅಪ್ಸರೆಯರೂ, ಅರಿಷ್ಟಾದೇವಿಯಿಂದ ಗಂಧರ್ವರೂ ಹುಟ್ಟಿಬಂದರು. ಅಂತೂ ಸ್ಥಾವರ ಜಂಗಮಾತ್ಮಕವಾದ ಜಗತ್ತೆಲ್ಲವೂ ಕಶ್ಯಪ ಸೃಷ್ಟಿಯೇ ಆಗಿದೆ. ಇವರ ಮಕ್ಕಳು ಮೊಮ್ಮಕ್ಕಳು ಪ್ರಪಂಚವನ್ನೇ ತುಂಬಿದ್ದಾರೆ. ಇದೆಲ್ಲವೂ ಸ್ವಾರೋಚಿಷ ಮನ್ವಂತರದಲ್ಲಿ ನಡೆದ ಸೃಷ್ಟಿಯ ಕತೆಯಾಯಿತು. ಪ್ರಕೃತ ವೈವಸ್ವತ ಮನ್ವಂತರ ಸೃಷ್ಟಿಕ್ರಮವನ್ನು ಹೇಳುತ್ತೇನೆ ಕೇಳು. ಹಿಂದೆ ವರುಣದೇವನು ಯಜ್ಞಗೈಯ್ಯುತ್ತಲಿದ್ದಾಗ ಬ್ರಹ್ಮದೇವರು ಹೋಮಮಾಡುತ್ತಲೇ ಸೃಷ್ಟಿಯನ್ನೂ ಪ್ರಾರಂಭಿಸಿದರು. ಆಗ ಬ್ರಹ್ಮದೇವರ ಸಂಕಲ್ಪ ಮಾತ್ರದಿಂದಲೇ ಏಳು ಜನ ಮಾನಸಪುತ್ರರು ಉತ್ಪನ್ನರಾದರು. ಆ ಬ್ರಹ್ಮಪುತ್ರರೇ ಸಪ್ತಋಷಿಗಳಾದರು.

## ಸೇವೆಯ ಹಿಂದೆ ಹಾವಿನ ಹೆಡೆ

ಈ ಮನ್ವಂತರದಲ್ಲಿಯೂ ದೇವದೈತ್ಯರಲ್ಲಿ ಯಥಾಪ್ರಕಾರ ಮನಸ್ತಾಪವೆಸಗಿ ಯುದ್ಧ ಮಸಗಿತು. ಆ ಘೋರ ಯುದ್ಧದಲ್ಲಿ ದೈತ್ಯರು ಸತ್ತು ಅವರ ವಂಶವು

ಧ್ವಂಸವಾಯಿತು. ಆಗ ದೈತ್ಯರ ತಾಯಿಯಾದ ದಿತಿದೇವಿಗೆ ಬಹಳ ದುಃಖವಾಗಿ ಅವಳು ತನ್ನ ಪತಿ ಕಶ್ಯಪ ಋಷಿಗಳ ಆಶ್ರಮಕ್ಕೆ ಬಂದು ಅವರನ್ನು ಸರ್ವವಿಧದಿಂದಲೂ ಸೇವಿಸಿ ಒಲಿಸಿಕೊಂಡಳು. ಅವಳ ಸೇವಾಭಾವದಿಂದ ಸಂತುಷ್ಟ ಮಾನಸರಾದ ಕಶ್ಯಪರು ಅವಳಿಗೆ ''ಬೇಕಾದ ವರಬೇಡು'' ಎಂದು ಹೇಳಿದರು. ಇಂಥ ಸಂಧಿ ಸಂಧರ್ಭಗಳಿಗಾಗಿಯೇ ಕಾಯುತ್ತಲಿದ್ದ ದಿತಿಯು ಕಶ್ಯಪರಿಗೆ ಕೈ ಮುಗಿದು ''ದೇವೇಂದ್ರನನ್ನು ಕೊಲ್ಲಲು ಸಮರ್ಥನಾದ ಓರ್ವ ಶೂರ ಪುತ್ರನನ್ನು ಕರುಣಿಸಬೇಕು'' ಎಂದು ಕೇಳಿಕೊಂಡಳು.

## ''ನೂರು ವರ್ಷ ವ್ರತವಮಾಡು ಶೂರ ಸುತನು ಜನಿಸುವ''

ಅದಕ್ಕೆ ಕಶ್ಯಪರು ''ಇಂದ್ರನನ್ನು ಕೊಲ್ಲ ಬಲ್ಲ ಬಲಿಷ್ಠ ಪುತ್ರನು ಉತ್ಪನ್ನನಾಗಬೇಕಾದರೆ ನೀನು ಒಂದು ನೂರು ವರ್ಷ ಕಠಿಣವಾದ ವ್ರತ ಆಚಾರ ವಿಚಾರ ನಿಯಮ ನಿಷ್ಠಳಾಗಿರಬೇಕು. ನೀನು ಅತ್ಯಂತ ಶುಚಿರ್ಭೂತಳಾಗಿ ಜಾಗರೂಕತೆಯಿಂದ ಈ ಗರ್ಭವನ್ನು ನೂರು ವರುಷ ಧರಿಸಿದ್ದಾದರೆ ನಿನಗೆ ಇಂದ್ರನಿಗೂ ಮಾರಕನಾದ ಮಗನು ಜನಿಸುವನು'' ಎಂದು ವರವಿತ್ತು ಗರ್ಭಾಧಾನ ಮಾಡಿ ದೂರದ ಅರಣ್ಯಕ್ಕೆ ತಪಸ್ಸಿಗಾಗಿ ತೆರಳಿದರು.

## ಹುಷಾರ ಹೆಣ್ಣು, ಮೈತುಂಬ ಕಣ್ಣು

ಈ ಸುದ್ದಿಯು ಸುರರಾಜನ ಕಿವಿಗೆ ತಲುಪಿತು. ಕಶ್ಯಪರ ವರ ವ್ಯರ್ಥವಾಗಲಾರದೆಂಬುದು ಇಂದ್ರನಿಗೆ ಗೊತ್ತು. ದಿತಿದೇವಿಯ ಶತವಾರ್ಷಿಕ ವ್ರತಾಚಾರದಲ್ಲಿ ಎಲ್ಲಿಯಾದರೂ ಲೋಪವನ್ನು ಗುರುತಿಸಿ ಅವಳ ಆ ಗರ್ಭವನ್ನು ದುರ್ಬಲ ಗೊಳಿಸಬೇಕೆಂದು ಹೊಂಚು ಹಾಕಿ ಅವನು ದಿತಿಯ ಆಶ್ರಮಕ್ಕೆ ಬಂದನು. ''ತಾಯಿ, ನಾನು ನಿನ್ನ ಸೇವೆಗಾಗಿ ಬಂದಿದ್ದೇನೆ'' ಎಂದು ಹೇಳಿ ಅವಳ ಸೇವೆಯನ್ನು ಮಾಡಹತ್ತಿದನು. ಅವಳ ಧರ್ಮ, ಕರ್ಮ, ಆಚಾರ, ಅನುಷ್ಠಾನ ಯಾವುದರಲ್ಲಿ ಯಾದರೂ ಪ್ರಮಾದದಿಂದ ತಪ್ಪಾಗಬಹುದೇನೋ ಎಂದು ಶಚೀಪತಿಯು ತೊಂಬತ್ತು ವರ್ಷ ಜಪಿಸಿ ಕುಳಿತನು. ಆದರೆ ದಕ್ಷಳಾದ ದಿತಿದೇವಿಯು ಅತ್ಯಂತ ಜಾಗರೂಕತೆಯಿಂದ ಇದ್ದು ಯಾವುದೇ ಶೌಚಾಚಾರ ವಿಧಿನಿಯಮಗಳಿಗೆ ಇನಿತೂ ಲೋಪವಾಗಲಿ ವ್ಯತ್ಯಾಸವಾಗಲಿ ಬಾರದಂತೆ ನಡೆದುಕೊಳ್ಳುತ್ತಲಿದ್ದಳು. ಸಹಸ್ರಾಕ್ಷನು ಮೈತುಂಬ ಕಣ್ಣು ಮಾಡಿಕೊಂಡು ಅವಳ ಪ್ರತಿಯೊಂದು ಅನುಷ್ಠಾನ ಆಚರಣೆಗಳನ್ನು ಪರಿಕಿಸುತ್ತಿದ್ದ. ನೂರು ವರುಷ ಕಳೆಯಬಂದರೂ ಎಲ್ಲಿಯೂ ಕುಂದು ಕಾಣದೆ ಕಂಗೆಟ್ಟು ಕುಳಿತಿದ್ದ.

## ''ಚೂರು ತಪ್ಪಿನಿಂದ ಗರ್ಭ ಚೂರುಚೂರು ಆಯಿತು''

ಒಂದು ದಿನ ತುಂಬು ಗರ್ಭಿಣಿಯಾದ ದಿತಿದೇವಿಯು ರಾತ್ರಿ ಜಲಬಾಧೆ ಪೂರೈಸಿ ಕಾಲು ತೊಳೆಯದೇ ಮರೆತು ಹಾಗೆ ಹಾಸಿಗೆಯ ಮೇಲೆ ಮಲಗಿಬಿಟ್ಟಳು. ಸುರರಾಜನು ಅವಳಿಗೆ ಒಳ್ಳೇ ಗಾಢವಾಗಿ ನಿದ್ದೆ ಬರುವಂತೆ ಮಾಡಿದನು. ಇಂಥ ಪ್ರಮಾದವು ಘಟಿಸುವ ಸಮಯವನ್ನೇ ಕಾಯುತ್ತ ಕುಳಿತ ಇಂದ್ರನು ಸೂಕ್ಷ್ಮ ರೂಪದಿಂದ ಅವಳ ಉದರದಲ್ಲಿ ಹೊಕ್ಕು ವಜ್ರಾಯುಧದಿಂದ ಗರ್ಭಕ್ಕೆ ಹೊಡೆದು ಏಳು ಹೋಳುಮಾಡಿದನು. ವಜ್ರದ

ಏಟಿಗೆ ದಿತಿಯ ಗರ್ಭಪಿಂಡವು ಒಡೆದು ಏಳು ತುಂಡಾಗಿ ಅಳತೊಡಗಿತು. 'ಅಳಬೇಡ' (ಮಾ ರೋದೀಃ) 'ಅಳಬೇಡ' ಎಂದು ಹೇಳುತ್ತಲೇ ಇಂದ್ರನು ದಿತಿಗರ್ಭದ ಆ ಏಳು ತುಂಡುಗಳಿಗೆ ಪುನಃ ವಜ್ರದಿಂದ ಪೆಟ್ಟುಕೊಟ್ಟು ಪ್ರತಿಯೊಂದು ಪಿಂಡವನ್ನು ತುಂಡರಿಸಿ ಏಳೇಳು ಹೋಳುಗಳನ್ನಾಗಿ ಕೊಚ್ಚಿ ಕತ್ತರಿಸಿ ಹಾಕಿದನು. ಹೀಗೆ ಒಟ್ಟು ದಿತಿದೇವಿಯ ಗರ್ಭವು ಇಂದ್ರನ ವಜ್ರ ಪ್ರಹಾರದಿಂದ ನವಲತ್ತೊಂಬತ್ತು ಭಾಗವಾಯಿತು. ಇಂದ್ರನು ಅವುಗಳನ್ನು "ಮಾ ರೋದೀಃ" ಎಂಬ ಶಬ್ದವನ್ನು ನುಡಿದು ಸಂತೈಸಿದ್ದರಿಂದ ಅವರಿಗೆಲ್ಲ ಮರುತರು ಎಂಮ ಹೆಸರಾಯಿತು. ದಿತಿದೇವಿಯ ಅನವಧಾನ ಅಥವಾ ಶೌಚಲೋಪ ನಿಮಿತ್ತದಿಂದ ಇಂದ್ರನ ಶತ್ರುಗಳಾಗ ಬೇಕಾದವರು ಇಂದ್ರನ ಮಿತ್ರರಾಗಿ ಅದಿತಿ ಕುಮಾರರೆಲ್ಲರೂ ಮರುದ್ಗಣ ಎಂಬ ಹೆಸರಿನಿಂದ ದೇವತಾಪಕ್ಷದಲ್ಲಿ ಸೇರ್ಪಡೆಯಾಗಿ ಬಿಟ್ಟರು.

## ಅಳಿಯಲಾರದ ಅರಸರು

ಪೃಥುರಾಜನ ಪಟ್ಟಾಭಿಷೇಕವಾದ ಬಳಿಕ ಬ್ರಹ್ಮದೇವರು ಸ್ಥಾವರಜಂಗಮಾತ್ಮಕವಾದ ಪ್ರಪಂಚವನ್ನೆಲ್ಲ ವಿಭಾಗ ಮಾಡಿ ಒಂದೊಂದು ಭಾಗಕ್ಕೆ ಒಬ್ಬೊಬ್ಬರನ್ನು ಅಧಿಪತಿಗಳನ್ನಾಗಿ ನಿಯಮಿಸಿದರು.

ಗ್ರಹ, ನಕ್ಷತ್ರ, ಬ್ರಾಹ್ಮಣ, ವನಸ್ಪತಿ, ಗಿಡಬಳ್ಳಿ, ಹೋಮಹವನ, ತಪಸ್ಸು ಇವುಗಳಿಗೆಲ್ಲ ಚಂದ್ರನನ್ನು ರಾಜನನ್ನಾಗಿ ನಿಯಮಿಸಿದರು. ಜಗತ್ತಿನಲ್ಲಿಯ ರಾಜರೆಲ್ಲರಿಗೂ ಕುಬೇರನನ್ನು ಅಧಿರಾಜನೆಂದು ನಿಯಮಿಸಿದರು. ಆದರಿಂದ ಅವನು ರಾಜರ ರಾಜ ಎಂದು ಹೆಸರಾದ. ಇದರಂತೆ ನೀರಿಗೆ ವರುಣ, ಆದಿತ್ಯರಿಗೆ ವಿಷ್ಣು, ವಸುಗಳಿಗೆ ಅಗ್ನಿ, ಪ್ರಜಾಪತಿಗಳಿಗೆ ದಕ್ಷ, ದೇವತೆಗಳಿಗೆ ಇಂದ್ರ, ದೈತ್ಯರಿಗೆ ಪ್ರಹ್ಲಾದ, ಪಿತೃಗಳಿಗೆ ಯಮ, ಆನೆಗಳಿಗೆ ಐರಾವತ, ಪರ್ವತಗಳಿಗೆ ಮೇರು, ಪಕ್ಷಿಗಳಿಗೆ ಗರುಡ, ರುದ್ರರಿಗೆ ಶಿವ, ಕುದುರೆಗಳಿಗೆ ಉಚ್ಚೈಶ್ರವ, ಗೋಗಳಿಗೆ ನಂದಿ, ಮೃಗಗಳಿಗೆ ಸಿಂಹ, ವನಸ್ಪತಿಗಳಿಗೆ ಅತ್ತಿಯ ಗಿಡ, ಹೀಗೆ ಒಂದೊಂದು ವಿಭಾಗಕ್ಕೆ ಒಬ್ಬೊಬ್ಬರು ರಾಜರು ಎಂದು ವ್ಯವಸ್ಥೆ ಮಾಡಿದರು.

## ದಿಕ್ಕುಗಳ ದೇವತೆಗಳು

ಅನಂತರ ನಾಕು ದಿಕ್ಕುಗಳಿಗೂ ಬ್ರಹ್ಮದೇವರು ಒಬ್ಬೊಬ್ಬ ದಿಕ್ಪಾಲಕರನ್ನು ನಿಯೋಜಿಸಿದರು. ಪೂರ್ವದಿಕ್ಕಿಗೆ ವೈರಾಜನ ಪುತ್ರನಾದ ಸುಧನ್ವ, ದಕ್ಷಿಣಕ್ಕೆ ಕರ್ದಮ ಪ್ರಜಾಪತಿಯ ಮಗ ಶಂಖಪದ, ಪಶ್ಚಿಮದಿಕ್ಕಿಗೆ ರಜಸನ ತನಯ ಕೇತು ಮಂತ, ಉತ್ತರ ದಿಕ್ಕಿಗೆ ಪರ್ಜನ್ಯನ ಮಗ ಹಿರಣ್ಯರೋಮನು ಒಡೆಯನೆಂದು, ನಿರ್ಧರಿಸಿದರು. ಸಪ್ತದ್ವೀಪ ಮತ್ತು ಪುರ ಗ್ರಾಮ ಧಾಮಗಳಿಂದ ಕಿಕ್ಕಿರಿದು ತುಂಬಿರುವ ಈ ಭೂಮಂಡಲವನ್ನು ಬ್ರಹ್ಮದೇವರಿಂದ ನಿಯುಕ್ತರಾದ ಈ ಎಲ್ಲ ರಾಜರು ಧರ್ಮದಿಂದ ಯಾವ ಆತಂಕವಿಲ್ಲದೇ ಇಂದಿಗೂ ಪಾಲಿಸುತ್ತಲಿದ್ದಾರೆ. ಜಗದ್ರಕ್ಷಣೆಗೆ ಕಾರಣರಾದ ಈ ಎಲ್ಲ ರಾಜರು ಶ್ರೀ ವಿಷ್ಣುವಿನ ಒಂದೊಂದು ಅಂಶಭೂತವಾದ ಒಂದೊಂದು ವಿಭೂತಿ ರೂಪಗಳೇ ಆಗಿರುತ್ತವೆ. ಪಾಲನವು ವಿಷ್ಣುವಿನ ಧರ್ಮ, ದೇವ, ದೈತ್ಯ, ಮಾನವ, ಪಶು,

ಪಕ್ಷಿ, ನಕ್ಷತ್ರ, ನಾಗ ಮುಂತಾದ ಚರಾಚರ ಪ್ರಪಂಚದ ರಾಜರು, ನೇತಾರರು, ಮುಂದಾಳುಗಳೇ ಮುಂತಾದವರೆಲ್ಲರೂ ವಿಷ್ಣುವಿನ ಅಂಶಭೂತರೇ ಆಗಿದ್ದಾರೆ.

## ಶ್ರೀ ವಿಷ್ಣುವಿನ ಚತುರ್ಮುಖ ಚಟುವಟಿಕೆಗಳು

ಸೃಷ್ಟಿಯು ಅವನದೇ ಕರ್ಮ, ಸಂರಕ್ಷಣೆ ಅವನದೇ ಧರ್ಮ, ಸಂಹಾರ ಅವನದೇ ಕಾರ್ಯ. ಸತ್ವ ರಜಸ್ ತಪಸ್ಸುಗಳು ಅವನ ಈ ಲೋಕ ಲೀಲೆಯ ಉಪಕರಣಗಳು. ಈ ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳನ್ನೆಲ್ಲ ಆ ಭಗವಂತನು ಚತುಮೂರ್ತಿಯಾಗಿ ನಾಲ್ಕು ರೂಪಗಳಿಂದ ಮಾಡುತ್ತಾನೆ. ಸೃಷ್ಟಿಯ ಪ್ರಾರಂಭದಲ್ಲಿ ಅವ್ಯಕ್ತನಾದ ಪರಬ್ರಹ್ಮ ಚತುರ್ಮುಖ ಬ್ರಹ್ಮರೂಪದಿಂದ ಸುವ್ಯಕ್ತನಾಗುತ್ತಾನೆ. ಇದು ಶ್ರೀ ವಿಷ್ಣುವಿನ ಸೃಷ್ಟಿ ಕಾರಣವಾದ ಪ್ರಥಮ ರೂಪ. ದಕ್ಷ ಮರೀಚಿ ಮುಂತಾದ ಪ್ರಜಾವೃದ್ಧಿಗೆ ಕಾರಣರಾದ ಪ್ರಜಾಪತಿಗಳು ಪರಮಾತ್ಮನ ಎರಡನೆಯ ಸರ್ಜಕ ರೂಪ. ಈ ಸೃಷ್ಟಿ ವ್ಯಾಪಾರಕ್ಕೆ ಅನುಕೂಲವಾದ ಕಾಲಖಂಡ ಮೂರನೆಯ ರೂಪ. ಸೃಷ್ಟಿಯ ಪ್ರವಾಹದಲ್ಲಿ ಈಸ ಬೀಳುವ ಪ್ರಾಣಿಗಳೆಲ್ಲವೂ ನಾಲ್ಕನೇ ರೂಪ. ಇವು ರಜೋಗುಣವನ್ನು ಅಧಿಕರಿಸಿ ಸೃಷ್ಟಿ ಪ್ರವೃತ್ತನಾದ ಪರಮಾತ್ಮನ ನಾಲ್ಕು ರೂಪಗಳಾಗಿರುತ್ತವೆ. ಇದರಂತೆ ಸತ್ವಗುಣವನ್ನು ಆಶ್ರಯಿಸಿ ಸಂರಕ್ಷಣ ಮಾಡುವ ಭಗವಂತನ ರೂಪಗಳೂ ನಾಕು. ಸಾಕ್ಷಾದ್ ವಿಷ್ಣು ಅವನ ಸಂರಕ್ಷಕವಾದ ಪ್ರಥಮ ರೂಪ. ಆ ಮನ್ವಂತರದ ಅಧಿಪತಿಗಳಾದ ಮನು, ಮನುಕುಮಾರ, ಇಂದ್ರಾದಿ ದೇವತೆಗಳು ಮುಂತಾದವರೆಲ್ಲರೂ ಅವನ ಎರಡನೇ ರಕ್ಷಕ ರೂಪ. ಇದಕ್ಕೆ ಅನುಕೂಲವಾದ ಸ್ಥಿತಿ ಕಾಲ ಮೂರನೇ ರೂಪ. ರಕ್ಷ್ಯರಾದ ಜೀವಿಗಳಲ್ಲಿ ನಿಯಾಮಕವಾಗಿ ಅವರನ್ನು ರಕ್ಷಿಸುತ್ತಿರುವುದು ನಾಲ್ಕನೇ ರೂಪ.

ಇದರಂತೆ ಭಗವಂತನ ಸಂಹಾರಕ ರೂಪಗಳೂ ನಾಕು. ಮಹಾರುದ್ರದೇವರು ಭಗವಂತನ ಪ್ರಥಮ ಸಂಹಾರಕ ರೂಪ. ಅಗ್ನಿ, ಯಮ ಮುಂತಾದವರು ಎರಡನೇ ಅಂಶ. ವಿನಾಶೋನ್ಮುಖವಾದ ಕಾಲ ಮೂರನೇ ಅಂಶ. ನಷ್ಟವಾಗುತ್ತಿರುವ ಪ್ರಾಣಿಗಳು ನಾಕನೇ ಅಂಶ. ಹೀಗೆ ಭಗವಂತನ ಸಂಹಾರಕ ಮುಖಗಳೂ ನಾಕು. ಹೀಗೆ ಚತುರ್ಮೂತಿಯಾಗಿ ಆ ಪರಮಪುರುಷ ಪರಮಾತ್ಮನಾದ ಶ್ರೀ ವಿಷ್ಣುವೇ ಈ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಾದಿ ಸರ್ವ ವ್ಯಾಪಾರಗಳನ್ನು ಮಾಡುತ್ತಲಿರುತ್ತಾನೆ. ಒಟ್ಟಾರೆ ಸೃಷ್ಟಿ ಕಾರಣರಾದ ಬ್ರಹ್ಮ ದಕ್ಷಾದಿಗಳು, ಸೃಷ್ಟಿಕಾಲ, ಜೀವರ ಸ್ಥಿತಿ ಕಾರಣರಾದ ವಿಷ್ಣು, ಮನು, ಸ್ಥಿತಿಕಾಲ, ಪ್ರಾಣಿವರ್ಗ, ಸಂಹಾರ ಕಾರಣರಾದ ರುದ್ರ, ಯಮ, ವಿನಾಶಕಾಲ, ಜೀವಕೋಟಿ, ಇವೆಲ್ಲವೂ ಚತುರ್ಮೂತಿಯಾದ ಪರಮಾತ್ಮನ ಒಂದೊಂದು ವಿಭೂತಿರೂಪಗಳೇ ಆಗಿರುತ್ತವೆ.

ಈ ಪ್ರಪಂಚದ ಪ್ರಾರಂಭದಿಂದ ಪ್ರಳಯ ಕಾಲದವರೆಗೂ ಸೃಷ್ಟಿಕ್ರಿಯೆ ನಡದೇ ಇರುತ್ತದೆ. ಬ್ರಹ್ಮದೇವರಿಂದ ಈ ಸರ್ಜನ ವ್ಯಾಪಾರದ ಉದ್ಘಾಟನೆಯಾಗಿ ಮುಂದೆ ಮರೀಚಿ ಮುಂತಾದ ಪ್ರಜಾಪತಿಗಳು ಅದನ್ನು ಮುಂದುವರಿಸಿದರು. ಅನಂತರ ಇಂದಿಗೂ ಆ ಪ್ರಜೋತ್ಪಾದನೆಯ ಕಾರ್ಯವನ್ನು ಎಲ್ಲ ಜೀವಜಂತುಗಳು ಕ್ಷಣ ಕ್ಷಣಕ್ಕೂ ಮಾಡುತ್ತಲೇ ಇವೆ.

## "ಕಾಲಃ ಸರ್ವಸ್ಯ ಕಾರಣಮ್"

ಉಳಿದೆಲ್ಲ ಸಾಹಿತ್ಯ ಸಲಕರಣೆಗಳಿದ್ದರೂ ಕಾಲ ಬಾರದೇ ಯಾವದೂ ಹುಟ್ಟಲಾರದು. ಸೃಷ್ಟಿಕಾಲವು ಬಾರದಿದ್ದಾಗ ಬ್ರಹ್ಮದೇವರಾಗಲಿ ಮರೀಚಿ ಮುಂತಾದ ಪ್ರಜಾಪತಿಗಳಾಗಲಿ ಉಳಿದ ಪ್ರಾಣಿಗಳಾಗಲಿ ಏನನ್ನೂ ಹುಟ್ಟಿಸಲಾರವು. ಆದುದರಿಂದ ಕಾಲನಾಮಕ ಭಗವದ್ರೂಪವು ಎಲ್ಲದಕ್ಕೂ ಕಾರಣವಾದಂತೆ ಸೃಷ್ಟಿಗೂ ಕಾರಣವಾಗಿದೆ. ಇದರಂತೆ ಸ್ಥಿತಿರೂಪಗಳೂ ನಾಕು, ಸಂಹಾರಕರೂಪಗಳೂ ನಾಕು ಎಂದು ತಿಳಿಯಬೇಕು.

## ಹೆತ್ತದ್ದೆಲ್ಲ ಹರಿಯ ರೂಪ, ಕೊಂದದ್ದೆಲ್ಲ ಕೃಷ್ಣ ರೂಪ

ಜಗತ್ತಿನಲ್ಲಿಯ ಎಲ್ಲ ಕ್ರಿಮಿಕೀಟ ಪಶುಪಕ್ಷಿ ನರ ನಾಗ ಮುಂತಾದ ಚಿಕ್ಕ ದೊಡ್ಡ ಪ್ರಾಣಿಗಳು ಮರಿ ಹಾಕಿ ಮೊಟ್ಟೆಯಿಟ್ಟು ಮಕ್ಕಳನ್ನು ಹೆರುವುದುಂಟು. ಇಂಥ ಕ್ಷುಲ್ಲಕ ಸೃಷ್ಟಿಗೆ ಕಾರಣಗಳಾದ ಕ್ಷುದ್ರ ಜಂತುಗಳು ಕೂಡ ಭಗವಂತನ ಸರ್ಜನ ಕಾರಣವಾದ ವಿಭೂತಿ ರೂಪಗಳೇ. ಇದರಂತೆ ಈ ಚರಾಚರಾತ್ಮಕವಾದ ವಿಶ್ವಗಳಲ್ಲಿ ಯಾವದಾದರೂ ಒಂದು ಪ್ರಾಣಿಯು ಇನ್ನೊಂದನ್ನು ಕೊಂದರೆ ಅಲ್ಲಿ ಪರಮಾತ್ಮನ ಸಂಹಾರ ಕಾರಣವಾದ ರುದ್ರರೂಪವಿದೆ ಎಂದು ಭಾವಿಸಬೇಕು. ಯಾಕೆಂದರೆ ಆ ಪ್ರಭುವಲ್ಲದೆ ಅನ್ಯರಾರೂ ಹುಟ್ಟಿಸಲಾರರು, ರಕ್ಷಿಸಲಾರರು, ಕೊಲ್ಲಲಾರರು. ಹುಟ್ಟಿಸುವವನೂ ಅವನೇ ಕಾಯುವವನೂ ಅವನೇ, ಕೊಲ್ಲುವವನೂ ಅವನೇ, ಸತ್ವ ರಜಸ್ ತಮಸ್ ಎಂಬ ಮೂರು ಗುಣಗಳ ಸಂಬಂಧದಿಂದ ಸೃಷ್ಟಿಕಾಲ, ಸ್ಥಿತಿಕಾಲ ಸಂಹಾರ ಕಾಲಾದಿ ಕಾಲತ್ರಯದಲ್ಲಿ ಮೂರು ವಿಧವಾದ ಬೇರೆ ಬೇರೆ ಪ್ರವೃತ್ತಿಗಳು ಅವನಲ್ಲಿ ಆದದ್ದನ್ನು ನಾವು ಕಾಣುತ್ತೇವೆ. ಹೀಗೆ ಗುಣಸಂಬಂಧದಿಂದ ತ್ರಿಗುಣಾತ್ಮಕವಾದ ಸೃಷ್ಟಿಯನ್ನು ಅವನು ಮಾಡಿದರೂ ಅವನಿಗೆ ಈ ಗುಣಗಳ ಲೇಪವಿಲ್ಲ. ಅವನು ಗುಣಾತೀತ. ಜ್ಞಾನಮಯವಾದ ಅವನ ಸ್ವರೂಪವು ಸ್ವಯಂ ವೇದ್ಯ ಎಂದರೆ - ಅವನೊಬ್ಬನಿಂದಲೇ ತಿಳಿಯಲರ್ಹವಾಗಿದೆ. ಭಗವಂತನ ಈ ದಿವ್ಯ ಸ್ವರೂಪವೂ ಕೂಡ ನಾಕುಬಗೆಯಾಗಿದೆ.

## "ನಾರಾಯಣ ನಾಲ್ಕು ನಿಲುವು"

**ಮೈತ್ರೇಯ** - ಪರಮಾತ್ಮನ ನಾಕು ವಿಧವಾದ ಆ ಸ್ವರೂಪವನ್ನುದಯವಿಟ್ಟು ತಿಳಿಸಬೇಕು.

**ಪರಾಶರ** - ನಮ್ಮ ಉದ್ದೇಶವನ್ನು ಸಾಧಿಸಲಿಕ್ಕಾಗಿ ಬೇಕಾಗುವ ಉಪಕರಣಗಳಿಗೆ ಸಾಧನ ಎಂದೂ, ಸಾಧಿಸಬೇಕಾದ ಗುರಿಗೆ ಸಾಧ್ಯ ಎಂದೂ ಕರೆಯುತ್ತಾರೆ. ಮೋಕ್ಷವನ್ನು ಅಪೇಕ್ಷಿಸುವ ಸಾಧಕನಿಗೆ ಪರಬ್ರಹ್ಮವು ಸಾಧ್ಯವೆನಿಸಿದರೆ ಆ ಬ್ರಹ್ಮ ಪ್ರಾಪ್ತಿಗೆ ಸಾಧಕಗಳಾದ ಯಮ ನಿಯಮ ಪ್ರಾಣಾಯಾಮಾದಿಗಳು ಸಾಧನವಾಗುತ್ತವೆ. ಸಾಧಕನು ಮೋಕ್ಷೋಪಯೋಗಿಯಾದ ಶ್ರವಣ ಮನನಾದಿಗಳಿಂದ ಸಂಪಾದಿಸಿದ ಬ್ರಹ್ಮಜ್ಞಾನವು ಜ್ಞಾನರೂಪಿಯಾದ ಆ ಪರಮಾತ್ಮನ ಒಂದು ಅಂಶ. ಸರ್ವಸಂಗವನ್ನುತೊರೆದು ಅತ್ಯಂತ

ಕಷ್ಟಕರವಾದ ಸಾಧನಾನುಷ್ಠಾನದಲ್ಲಿ ಯೋಗಿಯು ಆಸಕ್ತನಾಗಿ ತನ್ಮಯತೆಯನ್ನು ಸಾಧಿಸಿ ಭಗವತ್ಪಾದೈಕತಾನಲೀನ ಮಾನಸನಾಗಿ ತಪಂಗೈಯುವಾಗ ಅವನ ಧ್ಯಾನ ಗೋಚರವಾಗುವ ಬ್ರಹ್ಮಸ್ವರೂಪವು ಎರಡನೇ ರೂಪ. ಅನಂತರ ಈ ಸಾಧ್ಯ ಸಾಧನೆಗಳೆರಡೂ ಏಕರೂಪವಾಗುತ್ತವೆ. ಭಕ್ತಿಯು ಜ್ಞಾನರೂಪವೇ ಆಗಿಬಿಡುತ್ತದೆ. ಈ ಫಲ ಸಾಧನೆಗಳ ಐಕ್ಯವಸ್ಥೆಯಲ್ಲಿ ಕಾಣುವ ಭಗವದ್ರೂಪವೇ ತೃತೀಯರೂಪ. ಕೊನೆಗೆ ಮುಕ್ತಾವಸ್ಥೆಯಲ್ಲಿ ಗೋಚರವಾಗುವ ಸರ್ವತ್ರ ವ್ಯಾಪ್ತವೂ ಮನೋ ವಾಚಾಮಗೋಚರವೂ ಸರ್ವವಿಲಕ್ಷಣವೂ ಜ್ಞಾನಾನಂದಮಯವೂ ಆದ ಭಗವಂತನ ಸರ್ವೋತ್ತಮ ರೂಪವೂ ನಾಲ್ಕನೇ ರೂಪ. ಅದು ನಿರುಪಮ, ನಿರಂಜನ, ಅದು ಅಜ್ಞೇಯ, ವಿಜ್ಞೇಯ, ಅದು ಶಾಂತ ಶುದ್ಧ. ಅದು ಭಯಾತೀತ ದೋಷರಹಿತ. ಹೀಗೆ ಯೋಗಿಪ್ರಾಪ್ಯವಾದ ಭಗವತ್ ಸ್ವರೂಪವು ನಾಕುಬಗೆಯಾಗಿದೆ. ಇಂಥ ಚತುರ್ಮೂರ್ತಿಯಾದ ನಾರಾಯಣನ ಪರಮಪದವನ್ನು ಹೊಂದಿದ ಜ್ಞಾನಿಯ ಬಂಧಕ ಕರ್ಮಗಳೆಲ್ಲ ಕ್ಷೀಣವಾದದ್ದರಿಂದ ಅವನು ತಿರುಗಿ ಸಂಸಾರಕ್ಕೆ ಬರಲಾರ.

## ಪರಬ್ರಹ್ಮದ ಎರಡು ಮುಖಗಳು

ಆ ಜಗದೀಶ್ವರನು ಎರಡು ರೂಪಗಳಿಂದ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದ್ದಾನೆ. ಅವುಗಳಲ್ಲಿ ಒಂದು ಕ್ಷರ ಇನ್ನೊಂದು ಅಕ್ಷರ. ಒಂದು ಮೂರ್ತ ಇನ್ನೊಂದು ಅಮೂರ್ತ. ಜಗದಂತರ್ಯಾಮಿಯಾದ ಪರಮಾತ್ಮನ ಪರಬ್ರಹ್ಮರೂಪವು ಅಕ್ಷರವೂ ಅಮೂರ್ತವೂ ಆಗಿದೆ. ಅವನಿಂದ ವ್ಯಾಪ್ತವಾದ ಈ ಬ್ರಹ್ಮಾಂಡವೆಲ್ಲವೂ ಆ ಪರಬ್ರಹ್ಮನ ಮೂರ್ತರೂಪ, ಕ್ಷರರೂಪ. ಒಂದೆಡೆ ಬೆಳಗುವ ದೀಪದ ಬೆಳಕು ಸುತ್ತೆಲ್ಲ ಹರಡುವಂತೆ ಆ ಪರಬ್ರಹ್ಮನ ಶಕ್ತಿಯು ಜಗದಂಡ ಮಂಡಲವನ್ನೆಲ್ಲ ತುಂಬಿ ವಿಜೃಂಭಿಸುತ್ತದೆ. ಭಗವಂತನು ಸರ್ವತ್ರ ವ್ಯಾಪ್ತನಾಗಿದ್ದರೂ ಅಧಿಷ್ಠಾನಭೇದದಿಂದ ಅಭಿವ್ಯಕ್ತಿಯಲ್ಲಿಯೂ ಅಂತರವಾಗುತ್ತದೆ. ಬ್ರಹ್ಮ, ವಿಷ್ಣು, ಮಹೇಶರು ಆ ಪರಬ್ರಹ್ಮದ ಮುಖ್ಯ ಅಧಿಷ್ಠಾನಗಳು. ಅನಂತರ ದೇವತೆಗಳಲ್ಲಿಯೂ ದಕ್ಷಾದಿ ಪ್ರಜಾಪತಿಗಳಲ್ಲಿಯೂ ಅದಕ್ಕಿಂತ ಕಡಿಮೆ ಅಭಿವ್ಯಕ್ತಿ. ಅವರಿಗಿಂತ ಮಾನವರಲ್ಲಿ ಅಲ್ಪ ಸನ್ನಿಧಾನ. ಮಾನವರಿಗಿಂತ ಪಶುಪಕ್ಷಿ, ಕ್ರಿಮಿಕೀಟ ಮುಂತಾದ ಜಂತುಗಳಲ್ಲಿ ಅತ್ಯಲ್ಪತರವಾದ ಭಗವದಭಿವ್ಯಕ್ತಿ ಇರುತ್ತದೆ. ಗಿಡ ಬಳ್ಳಿಗಳಲ್ಲಿ ಆ ಶಕ್ತಿಯ ಅತ್ಯಂತ ಕನಿಷ್ಠ ಅಭಿವ್ಯಕ್ತಿ ಇರುವುದೆಂದು ತಿಳಿಯಬೇಕು. ಜನನ ಮರಣದ ಚಕ್ರದಲ್ಲಿ ಸಿಕ್ಕು ನುಚ್ಚು ನೂರಾಗುವ ಈ ಜಗತ್ತೆಲ್ಲವೂ ಮೂಲರೂಪದಿಂದ ಅನಾದಿನಿತ್ಯವಾಗಿದೆ. ವ್ಯಕ್ತಿಯು ನಾಶವನ್ನು ಹೊಂದಿದರೂ ಶಕ್ತಿ ಶಾಶ್ವತವಾಗಿರುತ್ತದೆ. ಈ ಎಲ್ಲ ಶಕ್ತಿಗಳ ಮೂಲ ಸ್ತ್ರೋತ್ರವೆಂದರೆ ಶ್ರೀಮನ್ನಾರಾಯಣನೇ ಆಗಿದ್ದಾನೆ. ಇದೇ ಪರಮಾತ್ಮನ ಮೂಲರೂಪ. ಈ ಮೂಲ ಶಕ್ತಿಯ ಮುಖ್ಯ ಅಭಿವ್ಯಕ್ತಿಯೆಂದರೆ ಮಹಾವಿಷ್ಣುವೊಬ್ಬನೇ.

ಶಿವಬ್ರಹ್ಮಾದಿಗಳು ಆ ಶಕ್ತಿಯ ಅಭಿವ್ಯಕ್ತವಾದ ಒಂದೊಂದು ರೂಪಗಳಾದರೂ ಅವೆಲ್ಲವೂ ಆ ಪರಾಶಕ್ತಿಯ ಭಿನ್ನಾಂಶಗಳು. ವಿಷ್ಣು ಮಾತ್ರ ಆ ವಿರಾಟ್ ಶಕ್ತಿಯ

ಮೂರ್ತಿಮಂತ ಸ್ವಸ್ವರೂಪನಾಗಿದ್ದಾನೆ. ಅವನ ದಿವ್ಯಕರ ಚರಣಾದ್ಯುಪೇತವಾದ ಸಾಕಾರ ರೂಪವನ್ನೇ ಜ್ಞಾನಿಗಳು ಕಂಡು ಕೊಂಡಾಡುತ್ತಾರೆ. ಈ ಕ್ಷರಾಕ್ಷರ ಪ್ರಪಂಚವನ್ನೆಲ್ಲ ಅವನೇ ಧರಿಸಿದ್ದಾನೆ. ಪ್ರಕೃತಿ ಪುರುಷಮಯವಾದ ಈ ವಿಶ್ವವು ಆಯುಧ ಮತ್ತು ಆಭರಣಗಳ ರೂಪದಿಂದ ಅವನ ಮೈಯಲ್ಲಿ ನೆಲಸಿದೆ.

## ಆಯುಧಗಳೇ ಆಭರಣಗಳಾದ ಬಗೆ

**ಮೈತ್ರೇಯ** :- ಆಭರಣ ಆಯುಧ ರೂಪಗಳಿಂದ ಆ ಪರಮಾತ್ಮನು ಈ ಪ್ರಪಂಚವನ್ನೆಲ್ಲ ಹೇಗೆ ಧರಿಸಿದ್ದಾನೆ? ದಯವಿಟ್ಟು ತಿಳಿಸಬೇಕು.

**ಪರಾಶರ** :- ಭಗವಂತನ ಕೊರಳಲ್ಲಿ ಹೊಳೆಯುವ ದಿವ್ಯಕೌಸ್ತುಭ ರತ್ನವೆಂದರೆ ನಿರ್ಮಲವಾದ ಚತುರ್ಮುಖ ಪುರುಷನೇ ಸರಿ. ತನ್ನ ಶ್ರೀ ವತ್ಸ ಚಿನ್ಹದ ರೂಪದಿಂದ ಮೂಲ ಪ್ರಕೃತಿಯನ್ನೇ ಆ ಪರಮಾತ್ಮನು ತನ್ನ ಎದೆಯಲ್ಲಿ ಧರಿಸಿದ್ದಾನೆ ಬುದ್ಧಿ ತತ್ವಾಭಿಮಾನಿಯಾದ ಪವಮಾನದೇವನನ್ನು ಗದಾರೂಪದಿಂದಲೂ, ತಾಮ ಸಾಹಂಕಾರವನ್ನು ಕೈಯಲ್ಲಿಯ ಶಂಖರೂಪದಿಂದಲೂ, ರಾಜಸಾಹಂಕಾರವನ್ನು ಶಾರ್ಙ್ಗಬಿಲ್ಲಿನ ರೂಪದಿಂದಲೂ ಆ ಪರಮೇಶ್ವರನು ಧಾರಣಮಾಡಿದ್ದಾನೆ. ವಾಯು ವೇಗ ಚಪಲತೆವುಳ್ಳ ಚಿತ್ತ ತತ್ವವು ಚಕ್ರರೂಪದಿಂದ ಹರಿಯ ಹಸ್ತದಲ್ಲಿ ಹೊಳೆಯುತ್ತಿದೆ. ಪಂಚಭೂತ ಪಂಚತನ್ಮಾತ್ರಗಳು ವೈಜಯಂತೀಮಾಲೆಯಾಗಿ ಅವನ ವಕ್ಷಸ್ಥಲದಲ್ಲಿ ಮಿಂಚುತ್ತವೆ.

ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಅವನ ಕೈಯಲ್ಲಿ ಬಾಣಗಳಾಗಿ ಶೋಭಿಸುತ್ತಿವೆ. ವಿದ್ಯಾರೂಪವಾದ ಜ್ಞಾನವೇ ಅವನ ಕೈಯಲ್ಲಿ ಖಡ್ಗ. ಅವಿದ್ಯೆಯೇ ಢಾಲು ಹೀಗೆ ಪ್ರಕೃತಿ, ಪುರುಷ, ಬುದ್ಧಿ, ಅಹಂಕಾರ, ಮನಸ್ಸು ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಪಂಚಮಹಾಭೂತಗಳು, ವಿದ್ಯಾವಿದ್ಯೆಗಳು ಇವೆಲ್ಲವುಗಳನ್ನೂ ಆ ಪರಮೇಶ್ವರನು ತನ್ನ ದೇಹದಲ್ಲಿಯೇ ಆಯುಧಾಭರಣಾದಿ ರೂಪಗಳಿಂದ ಧರಿಸಿದ್ದಾನೆ.

## ಕಾಲಃ ಕಲಯತಾಮಹಂ

ನಿಮಿಷ, ಮುಹೂರ್ತ, ಸಂಜೆ, ಮುಂಜಾವು, ದಿನ ರಾತ್ರಿ, ಮಾಸ, ಋತು, ಪಕ್ಷ, ವರ್ಷ ಮುಂತಾದ ಕಾಲಕಲೆಗಳೆಲ್ಲ ಕಾಲರೂಪಿಯಾದ ಪರಮಾತ್ಮನ ಅಂಶಗಳೇ. ಅದರಂತೆ ಭೂಮಿ, ಅಂತರಿಕ್ಷ, ಸ್ವರ್ಗ, ಮಹರ್ಲೋಕ, ಜನೋಲೋಕ, ತಪೋಲೋಕ, ಹಾಗೂ ಸತ್ಯಲೋಕಾದಿ ಏಳು ಲೋಕಗಳನ್ನು ಲೋಕ ಮೂರ್ತಿಯಾದ ಅವನೇ ವ್ಯಾಪಿಸಿ ಧರಿಸಿರುತ್ತಾನೆ.

## ಶಬ್ದ ಬ್ರಹ್ಮ

ಇದೇ ರೀತಿಯಾಗಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಮಹಾಭಾರತ, ಧನುರ್ವೇದ, ಆಯುರ್ವೇದ, ಗಂಧರ್ವವೇದ, ಉಪನಿಷತ್, ಶಿಕ್ಷಾ ಕಲ್ಪ, ನಿರುಕ್ತ, ಛಂದಸ್ಸು, ವ್ಯಾಕರಣ, ಜ್ಯೋತಿಷ್ಯ,ಮನ್ವಾದಿಸ್ಮೃತಿಗಳು, ಶಾಸ್ತ್ರಗ್ರಂಥಗಳು, ಸಾಹಿತ್ಯ, ಸಂಗೀತ ಮುಂತಾದ ಶಬ್ದ ಪ್ರಪಂಚವೆಲ್ಲವೂ ಶಬ್ದಮೂರ್ತಿ ಧರನಾದ

ಶ್ರೀಮನ್ನಾರಾಯಣ ಒಂದೊಂದು ರೂಪಗಳೇ ಆಗಿರುತ್ತವೆ. ಒಟ್ಟಾರೆ ನಮ್ಮ ಕಣ್ಣಿಗೆ ಕಾಣುವ ಮತ್ತು ಕಾಣದಿರುವ ಮೂರ್ತಾಮೂರ್ತ ಪದಾರ್ಥಗಳು ಎಲ್ಲಿಯೇ ಇರಲಿ, ಹೇಗಾದರೂ ಇರಲಿ ಅವೆಲ್ಲವೂ ಪರಮಾತ್ಮನ ಲೀಲಾ ವಿಭೂತಿ ಚಿದ್ವಿಲಾಸಗಳಾಗಿವೆ.

''ನನ್ನಲ್ಲಿ ಅಂತರ್ಗತನಾಗಿರುವ ಹರಿಯು ಅಹೇಯನಾದುದರಿಂದ ಅಹಂಶಬ್ಧ ವಾಚ್ಯನಾಗಿದ್ದಾನೆ. ಈ ಜಗತ್ತಿನ ಸರ್ವವಸ್ತುಗಳಿಗೂ ಸತ್ತಾಪ್ರದನಾಗಿ ಸರ್ವತ್ರ ವ್ಯಾಪ್ತನಾದುದರಿಂದ ಅವನೇ ಸರ್ವಭೂತಮಯನೂ ಆಗಿದ್ದಾನೆ. ಕಾರ್ಯಕಾರಣ ರೂಪವಾದ ಪ್ರಪಂಚದಲ್ಲಿ ಆವನನ್ನು ಬಿಟ್ಟು ಯಾವುದೂ ಹುಟ್ಟಲಾರದು. ಯಾವುದೂ ಬಿಟ್ಟು ಬಾಳಲಾರದು. ಅವನೇ ಜಗದಾಧಾರ'' ಎಂದು ಯಾರು ನಂಬಿ ನಡೆವರೋ ಅವರು ಸಂಸಾರದಲ್ಲಿ ರಾಗದ್ವೇಷಾದಿಗಳಿಗೆ ಪಕ್ಕಾಗಿ ಆದಿವ್ಯಾಧಿಗಳಿಗೆ ಬಲಿಯಾಗುವುದಿಲ್ಲ.

ಮೈತ್ರೇಯ, ಶ್ರೀ ವಿಷ್ಣು ಪುರಾಣದ ಪ್ರಥಮ ಅಂಶವನ್ನು ನಾನು ಈವರೆಗೆ ನಿನಗೆ ಹೇಳಿದ್ದಾಯಿತು. ಇದನ್ನು ಕೇಳಿದವರ ಎಲ್ಲ ಪಾಪಗಳೂ ಲೋಪವಾಗುತ್ತವೆ. ಪುಷ್ಕರ ಕ್ಷೇತ್ರದಲ್ಲಿ ಹನ್ನೆರಡು ವರ್ಷ ಕಾರ್ತಿಕ ಸ್ನಾನ ಮಾಡುವುದರಿಂದ ಬರುವ ಫಲ ಪುಣ್ಯವು ಈ ವಿಷ್ಣು ಪುರಾಣ ಶ್ರವಣದಿಂದಲೇ ಪ್ರಾಪ್ತವಾಗುತ್ತದೆ. ಇಲ್ಲಿ ಹೇಳಿದ, ದೇವ, ಋಷಿ, ಪಿತೃ, ಗಂಧರ್ವ, ಯಕ್ಷ ಮುಂತಾದವರ ಜನನ ಚರಿತ್ರೆಗಳನ್ನು ಕೇಳಿದವರಿಗೆ ಆ ದೇವ ಋಷಿಗಳು ಪ್ರಸನ್ನರಾಗಿ ಫಲಕೊಡುವರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಪ್ರಥಮ ಅಂಶ ಸಂಪೂರ್ಣ*

## ದ್ವಿತೀಯ ಅಂಶ

**ಮೈತ್ರೇಯ** - ಪೂಜ್ಯರೇ ಸ್ವಾಯಂಭುವ ಮನುವಿನ ಇಬ್ಬರು ಮಕ್ಕಳಾದ ಪ್ರಿಯವ್ರತ ಉತ್ತಾನ ಪಾದರಲ್ಲಿ ಎರಡನೆಯ ಉತ್ತಾನ ಪಾದನ ಪುತ್ರನಾದ ಧ್ರುವನ ವಿಷಯವನ್ನೂ ಅವನ ವಂಶವು ಹಬ್ಬಿದ ಬಗೆಯನ್ನೂ ತಿಳಿಸಿದಿರಿ. ಆದರೆ ಹಿರಿಯನಾದ ಪ್ರಿಯವ್ರತ ಮಹಾರಾಜನ ಕುಲದ ಬಳ್ಳಿಯು ಚೆಲ್ವರಿದ ಕ್ರಮವನ್ನು ತಾವು ಹೇಳಲಿಲ್ಲ. ಅದನ್ನು ದಯವಿಟ್ಟು ತಿಳಿಸಬೇಕು.

**ಪರಾಶರ** - ಪ್ರಿಯವ್ರತನು ಕರ್ದಮ ಪ್ರಜಾಪತಿಯ ಕನ್ನೆಯ ಕೈ ಹಿಡಿದು ಹತ್ತು ಗಂಡು ಎರಡು ಹೆಣ್ಣು, ಒಟ್ಟು ಹನ್ನೆರಡು ಮಕ್ಕಳನ್ನು ಪಡೆದನು. ಸಮ್ರಾಟ್, ಕುಕ್ಷಿ ಎಂದು ಪ್ರಿಯವ್ರತ ಪುತ್ರಿಯರ ಹೆಸರು. ಅವನ ದಶಕುಮಾರರೂ ಒಳ್ಳೇ ಮೇಧಾವಿಗಳು. ಶೂರರು, ಆದರೂ ವಿನಯ ಸಂಪನ್ನರು. ಅಗ್ನೀಧ್ರ, ಅಗ್ನಿಬಾಹು, ವಪುಷ್ಮಾನ್, ದ್ಯುತಿಮಾನ್, ಮೇಧಾ, ಮೇಧಾತಿಥಿ, ಭವ್ಯ, ಸವನ, ಸುಪುತ್ರ, ಕೊನೆಯವನೇ ಜ್ಯೋತಿಷ್ಮಾನ್. ಜ್ಯೋತಿರ್ಗಣಿತ ವಿದ್ಯೆಯ ಅಂತಪಾರಗಳನ್ನು ಬಲ್ಲ ಅವನಿಗೆ ಆ ಹೆಸರು ಅನ್ವರ್ಥಕವಾಗಿದ್ದಿತು. ಇವರೆಲ್ಲರೂ ತಮ್ಮ ಬಲ ಪೌರುಷದಿಂದ ಹೆಸರಾಂತವರೇ.

### ''ಹೆತ್ತ ಹತ್ತು ಮಕ್ಕಳಲ್ಲಿ ಮುತ್ತಿನಂಥ ಮೂವರು''

ಅವರಲ್ಲಿ ಮೇಧಾ, ಅಗ್ನಿಬಾಹು ಮತ್ತು ಸುಪುತ್ರ ಎಂಬ ಈ ಮೂವರು ಮಕ್ಕಳು ಯೋಗಾಸಕ್ತರಾಗಿದ್ದರು. ಅವರಿಗೆ ತಮ್ಮ ಹಿಂದಿನ ಜನ್ಮ ಜಾತಿಗಳ ನೆನಪು ಅಚ್ಚಳಿಯದೇ ಉಳಿದಿತ್ತು. ಅವರ ಮನಸ್ಸು ದೊಡ್ಡದು. ದಿವ್ಯಯೋಗಿಗಳಾದ ಅವರು ತಮ್ಮ ತಂದೆಯಿಂದ ವಾರಸಾನಾತೆಯಿಂದ ತಮಗೆ ಬರಬಹುದಾದ ಅಧಿಕಾರ ಅರಸೊತ್ತಿಗೆಗಳಿಗೆ ಆಶೆ ಪಡಲಿಲ್ಲ. ಎಷ್ಟೇ ಕಾರ್ಯಗಳನ್ನು ಮಾಡಿದರೂ ತಿಳಿಮನದ ಅವರು ಎಂದೂ ಪ್ರತಿಫಲವನ್ನು ಬಯಸಲಿಲ್ಲ. ಆದರೆ ಕರ್ತವ್ಯ ಕರ್ಮಗಳನ್ನೂ ಎಂದೂ ಬಿಡಲಿಲ್ಲ. ಯೋಗವೃತ್ತಿಯನ್ನು ಅವಲಂಬಿಸಿದ ಅವರಿಗೆ ಭೋಗದತ್ತ ಪ್ರವೃತ್ತಿಯೇ ಇರಲಿಲ್ಲ. ತ್ಯಾಗವೇ ಅವರ ಜೀವನದ ಉಸಿರು.

### ''ಸಪ್ತರಾಜ ಕುಮಾರೈಸ್ತೈಃ ಸಪ್ತದ್ವೀಪಾ ವಸುಂಧರಾ''

ಆದುದರಿಂದ ಪ್ರಿಯವ್ರತ ಮಹಾರಾಜನು ಆ ಮೂವರನ್ನು ಬಿಟ್ಟು ಉಳಿದ ಏಳುಜನ ಮಕ್ಕಳಿಗೆ ತನ್ನ ಸಾಮ್ರಾಜ್ಯವನ್ನು ಹಂಚಿಕೊಟ್ಟನು. ಅವನು ಅಂದು ಹಂಚಿಕೊಟ್ಟ ಏಳು ರಾಜ್ಯಗಳೇ ಇಂದು ಸಪ್ತದ್ವೀಪಗಳೆಂದು ಪ್ರಸಿದ್ಧವಾಗಿವೆ. ಪ್ರಿಯವ್ರತನು ಆಗ್ನೀಧ್ರನಿಗೆ ಜಂಬೂ ದ್ವೀಪವನ್ನು ಕೊಟ್ಟನು. ಮೇಧಾತಿಥಿಗೆ ಪ್ಲಕ್ಷ ದ್ವೀಪವನ್ನಿತ್ತನು. ಕುಶದ್ವೀಪದಲ್ಲಿ ಜ್ಯೋತಿಷ್ಮಂತನಿಗೆ ಪಟ್ಟಗಟ್ಟಿದ. ಶಾಲ್ಮಲಿ ದ್ವೀಪಕ್ಕೆ ವಪುಷ್ಮಂತನನ್ನುದೊರೆಯಾಗಿಸಿದ. ದ್ಯುತಿಮಂತನಿಗೆ ಕ್ರೌಂಚ ದ್ವೀಪವನ್ನು ಆಳಲಿಕ್ಕೆ ಅಪ್ಪಣೆಯಿತ್ತ. ಶಾಕದ್ವೀಪಕ್ಕೆ ಭವ್ಯನನ್ನು ಶಾಸಕನೆಂದು ನಿಯಮಿಸಿದ. ಪುಷ್ಕರ ದ್ವೀಪದ ಆಡಳಿತವನ್ನು ಸವನನಿಗೆ ಒಪ್ಪಿಸಿದ.

## ಜಂಬೂ ದ್ವೀಪದಲ್ಲಿ ಒಂಬತ್ತು ವಿಭಾಗ

ಅವರಲ್ಲಿ ಜಂಬೂ ದ್ವೀಪದ ದೊರೆಯಾದ ಆಗ್ನೀಧ್ರನಿಗೆ ಒಂಭತ್ತು ಜನ ಪುತ್ರರು. ನಾಭಿ, ಕಿಂಪುರುಷ, ಹರಿವರ್ಷ, ಇಲಾವ್ರತ, ರಮ್ಯ, ಹಿರಣ್ವಾನ್, ಕುರು, ಭದ್ರಾಶ್ವ, ಕೇತುಮಾಲ ಎಂದು. ತಂದೆ ಆಗ್ನೀಧ್ರನು ಆ ಜಂಬೂದ್ವೀಪದಲ್ಲಿಯ ದಕ್ಷಿಣಭಾಗದ ಹಿಮವರ್ಷವನ್ನು ತನ್ನ ನಾಭಿ ಎಂಬ ಮಗನಿಗೆ ಕೊಟ್ಟನು. ಅದಕ್ಕೇ ಈಗ ಭಾರತ ವರ್ಷ ಎಂದು ಕರೆಯುತ್ತಾರೆ. ಅವರಂತೆ ಕಿಂಪುರುಷನಿಗೆ ಹೇಮಕೂಟವನ್ನೂ, ಹರಿವರ್ಷನಿಗೆ ನೈಷಧ ವರ್ಷವನ್ನೂ, ಇಲಾವ್ರತನಿಗೆ ಮಧ್ಯದಲ್ಲಿ ಮೇರುಪರ್ವತವಿರುವ ಇಲಾವ್ರತ ಖಂಡವನ್ನೂ, ರಮ್ಯನಿಗೆ ನೀಲಾಚಲದ ಸುತ್ತ ಮುತ್ತಲಿನ ಭೂಖಂಡವನ್ನೂ, ಹಿರಣ್ವಾನನಿಗೆ ಅವರ ಮೇಲ್ಗಡೆಯ ಶ್ವೇತವರ್ಷವನ್ನೂ, ಶೃಂಗವಾನ ಪರ್ವತದ ಉತ್ತರ ಭಾಗವನ್ನು ಕುರುರಾಜನಿಗೂ, ಭದ್ರಾಶ್ವನಿಗೆ ಮೇರು ಪೂರ್ವಭಾಗವನ್ನೂ, ಕೇತುಮಾಲನಿಗೆ ಗಂಧಮಾದನ ವರ್ಷವನ್ನೂ ಆಳಲಿಕ್ಕೆಂದು ಹಂಚಿಕೊಟ್ಟು ಈ ಎಲ್ಲ ತನ್ನ ನವಪುತ್ರರನ್ನು ಒಂದೊಂದು ಪೃಥ್ವೀಮಂಡಲಕ್ಕೆ ಅಧಿರಾಜರನ್ನಾಗಿ ಮಾಡಿದನು ಹೀಗೆ ತನ್ನ ನವಪುತ್ರರಿಗೆ ನವಖಂಡ ಪೃಥ್ವೀಯನ್ನು ವಿಭಾಗಿಸಿ ಕೊಟ್ಟ ಬಳಿಕ ವಿರಕ್ತನಾದ ಆಗ್ನೀಧ್ರ ಮಹಾರಾಜನು ತಪಂಗೈಯಲಿಕ್ಕೆಂದು ಪರಮ ಪವಿತ್ರವಾದ ಶಾಲಾಗ್ರಾಮ ಕ್ಷೇತ್ರಕ್ಕೆ ತೆರಳಿದನು.

## ''ಉಳಿದ ಎಂಟು ವರ್ಷಗಳಲ್ಲಿ ಹರ್ಷ ವರ್ಷ ನಿತ್ಯವುಂಟು''

ಮಹಾಮುನೇ, ನಾವಿರುವ ಈ ಹಿಮವರ್ಷ ಅಥವಾ ಭಾರತ ವರ್ಷವನ್ನು ಬಿಟ್ಟು ಉಳಿದ ಕಿಂಪುರುಷ ಮುಂತಾದ ಎಂಟು ವರ್ಷ' - ಭೂಖಂಡಗಳಲ್ಲಿ ಸುಖಸಂಪದಗಳ ಸಮೃದ್ಧಿ ಬಹಳ. ಆ ನೆಲದಲ್ಲಿ ನೆಲಿಸಿದವರಿಗೆ ಪ್ರಯತ್ನವಿಲ್ಲದೇ ಫಲಪ್ರಾಪ್ತಿ. ಬಯಸಿದ ಭೋಗ ವಿಲಾಸಗಳೆಲ್ಲ ಕಷ್ಟಪಡದೆ ಕೈಗೆಟಕುವವು. ಅಲ್ಲಿಯ ಜನರನ್ನು ಮುಪ್ಪು ಮೂಸುವುದಿಲ್ಲ. ತಾರುಣ್ಯ ಮಾಸುವುದಿಲ್ಲ, ಸಾವು ಅವರ ಬಳಿ ಸುಳಿಯುವುದಿಲ್ಲ. ಅಲ್ಲಿ ಧರ್ಮಾಧರ್ಮಗಳ ಗೊಂದಲವಿಲ್ಲ. ಹಿರಿತನದ ಹಗರಣವಿಲ್ಲ. ಕಿರಿತನದ ಕಾಟವಿಲ್ಲ. ಆ ದೇಶದ ಜನರ ಹೆಗಲಮೇಲೆ ವಿಧಿ ತನ್ನ ಯುಗದ ನೊಗವನ್ನೇ ಹೇರಿಲ್ಲ. ಅವೆಲ್ಲ ಸುಖದ ದೇಶಗಳು.

## ''ನಮ್ಮ ಭಾರತ ನಾಡು, ಸುಖ ದುಃಖಗಳ ಬೀಡು''

ಹಿಮವರ್ಷ ಎಂದು ಹೆಸರಾದ ಈ ಭಾರತ ವರ್ಷಕ್ಕೆ ಆಗ್ನೀಧ್ರ ಕುಮಾರನಾದ ನಾಭಿ ಮಹಾರಾಜನೇ ಮೊದಲನೇ ಅರಸು ಆಗಿದ್ದನು. ಅವನಿಗೆ ಮೇರುದೇವಿಯಿಂದ ಋಷಭ ಎಂಬ ಮಗನು ಜನಿಸಿದನು. ಅವನು ಭಗವದವತಾರಿ. ಆ ಋಷಭ ದೇವನಿಗೆ ನೂರು ಜನ ಮಕ್ಕಳು. ಅವರಲ್ಲಿ ಭರತ ಹಿರಿಯ. ಆ ಋಷಭ ದೇವ ಸ್ವಯಂ ದೇವಾಧಿದೇವ. ಧರ್ಮರಾಜ್ಯದ ಚಕ್ರವು ಸುರಳೀತ ಉರುಳಲಿಕ್ಕೆ ಅವನಿಂದಲೇ ಮೊದಲಾಯಿತು. ಅವನು ಮಾಡಿದ ಯಜ್ಞಯಾಗಗಳಿಗೆ ಲೆಕ್ಕವಿಲ್ಲ.

## ಶರಣರ ಯೋಗ್ಯತೆ ಮರಣದಲ್ಲಿ

ಆ ಋಷಭರಾಜನು ಬಹು ಕಾಲ ಧರ್ಮ ಶಾಸನವನ್ನು ನಡೆಸಿ ಕೊನೆಗೆ ತನ್ನ ಮಗ ಭರತನನ್ನು ನಾಡಿನ ದೊರೆಯನ್ನಾಗಿ ಮಾಡಿ ತಾನು ತಪಸ್ಸಿಗೆ ತೆರಳಿದ. ಅವನು ಅಲ್ಲಿಂದ ನಡೆದು ನೇರವಾಗಿ ಗಂಡಕೀ ನದಿಯ ದಂಡೆಯಲ್ಲಿರುವ ಪುಲಹಾಶ್ರಮಕ್ಕೆ ಐತಂದ. ಅಲ್ಲಿ ಘೋರ ತಪದ ನೋಂಪಿಯನಾಂತು ನಿಂದ. ವಾನಪ್ರಸ್ಥಾಶ್ರಮದ ನಿಯಮ ನಿಷ್ಠುರ ನಡೆಯಲ್ಲಿಯೇ ಯಾಗಯೋಗಗಳನ್ನು ನಡೆಸಿದ ಕಠೋರ ತಪದಿಂದಾಗಿ ಅವನ ಕಾಯ ಕೊರಗಿತು. ಒಣಗಿ ಸೊರಗಿತು. ಕೊನೆಗೆ ಬರೀ ಎಲವಿನ ಹಂದರವಾಗಿ ಉಳಿದ ಅವನ ಮೈದೊಗಲಿನ ತುಂಬ ನರಗಳ ಬಲೆಗಳು ಪೋಣಿಸಿದ್ದು ಎದ್ದು ಕಾಣಿಸುತ್ತಿತ್ತು. ತನ್ನ ದೇಹದ ತೊಗಲಿನ ಅರಿವೇ ಇಲ್ಲದವನಿಗೆ ತೊಟ್ಟ ಅರಿವೆಯ ಪರಿವೆ ಎಲ್ಲಿ ಬರಬೇಕು! ಮುಖದಲ್ಲಿ ಶಾಲಿಗ್ರಾಮವನ್ನಿಟ್ಟು ತಪಂಗೈಯುತ್ತಲೇ ಆ ಋಷಭದೇವನು ನಿರ್ವಾಣ ಹೊಂದಿದನು.

ಋಷಭದೊರೆ ಕಾಡಿಗೆ ಹೋಗುವ ಮುನ್ನ ಈ ನಾಡಿನ ಅಧಿಕಾರ ಸೂತ್ರವನ್ನೆಲ್ಲ ಭರತನಿಗೆ ಒಪ್ಪಿಸಿದ್ದ. ಅದೇ ಕಾರಣ ಈ ದೇಶಕ್ಕೆ "ಭಾರತವರ್ಷ" ಎಂಬ ಹೆಸರು ಬರಲಿಕ್ಕೆ. ಭರತನ ಶಾಸನ ಧರ್ಮಶಾಸನ. ಹೋಮಹವನಗಳೆಂದರೆ ಅವನಿಗೆ ಅಚ್ಚುಮೆಚ್ಚು. ತಂದೆಯಂತೆ ಅವನಿಗೂ ಯಜ್ಞಯಾಗವೆಂದರೆ ಅತಿ ಉತ್ಸಾಹ.

ಆದುದರಿಂದ ಅವನ ಆಡಳಿತದಲ್ಲಿ ಅವೇ ಹೆಚ್ಚು. ಆ ಭರತ ಮಹಾರಾಜನಿಗೆ ಸುಮತಿ ಎಂಬ ಮಗ. ಅವನೂ ತಂದೆ ತಾತರಂತೆ ಧರ್ಮಕ್ಕೆ ಕೈವಾರಿ. ಭರತನು ತನ್ನ ಧರ್ಮ ಪುತ್ರನಿಗೆ ರಾಜ್ಯಶ್ರೀಯನ್ನು ಒಪ್ಪಿಸಿ ತಾನು ಕಾಡಿನ ದಾರಿ ಹಿಡಿದ. ಶಾಲಿಗ್ರಾಮ ಕ್ಷೇತ್ರಕ್ಕೆ ನಡೆದ. ಅಲ್ಲಿ ಯೋಗ ಸಮಾಧಿಯಲ್ಲಿ ನಿಂತು ಭಗವಂತನನ್ನು ಚಿಂತನ ಮಾಡುತ್ತಲೇ ದೇಹಯಾತ್ರೆ ಮಾಡಿದ. ಮುಂದೆ ಅವನು ಯೋಗಿಗಳ ಕುಲದಲ್ಲಿ ಬ್ರಾಹ್ಮಣನಾಗಿ ಮರಳಿ ಹುಟ್ಟಿದ. ಮೈತ್ರೇಯ, ಅವನ ಪುನರ್ಜನ್ಮದ ಪವಿತ್ರ ಕತೆಯನ್ನು ಮುಂದೆ ನಿನಗೆ ನಾನು ಚಿತ್ತರಿಸಲಿದ್ದೇನೆ.

ಅನಂತರ ಸುಮತಿಯು ಇಂದ್ರದ್ಯುಮ್ನ ಎಂಬ ಮಗನನ್ನು ಪಡೆದ. ಪರಮೇಷ್ಠಿಯು ಇಂದ್ರದ್ಯುಮ್ನನ ಮಗ. ಅವನಿಗೆ ಪ್ರತಿಹಾರ ಪುತ್ರ. ಪ್ರತಿಹಾರನಿಂದ ಪ್ರತಿಹರ್ತಾ, ಅವನಿಗೆ ಭವ, ಭವನಿಂದ ಉದ್ಗೀಥ, ಉದ್ಗೀಥನಿಗೆ ಪ್ರಸ್ತಾವ, ಅವನಿಗೆ ಪೃಥು, ಪೃಥುವಿಗೆ ನಕ್ತ, ನಕ್ತನ ಮಗ ಗಯ, ಗಯನಿಂದ ವಿರಾಟ್, ಅವನಿಗೆ ಮಹಾವೀರ್ಯ, ಅವನ ಮಗ ಧೀಮಾನ್, ಅವನಿಗೆ ಮಹಾಂತ, ಮಹಾಂತನಿಗೆ ಮನಸ್ಯು, ಮನಸ್ಯುನಿಂದ ತ್ವಷ್ಟ, ತ್ವಷ್ಟನ ಮಗ ವಿರಜ, ಅವನಿಗೆ ರಜ, ಮಕ್ಕಳಾಗಿ ಜನಿಸಿದರು. ರಜನ ಮಗ ಶತಜಿತ್‌ನಿಗೆ ಹುಟ್ಟಿದ ಮಕ್ಕಳು ನೂರು. ಅವರಲ್ಲಿ ವಿಷ್ವಗ್‌ಜ್ಯೋತಿ ಪ್ರಮುಖ. ಈ ನೂರು ಸಾವಿರವಾಗಿ, ಕುಲ ಕವಲೊಡೆದು ಮಾನವವಂಶ ವಿಸ್ತಾರಗೊಂಡಿತು. ಈ ಎಲ್ಲ ಮನುಕುಲದ ಮರಿಗಳು ನವಖಂಡ ಭಾರತ ಮಂಡಲದ ತುಂಬ ಹರಡಿ ಹಬ್ಬಿದವು. ಈ ಕುಲದ ಕುಡಿಮಿಡಿಗಳಾದ ನರವೀರರೇ ಕೃತ ತ್ರೇತಾ ದ್ವಾಪರ ಕಲಿ ಮುಂತಾದ

ಯುಗಯುಗಗಳಲ್ಲಿ ಭರತ ಭೂಮಿಯನ್ನು ಆಳುತ್ತ ಬಂದಿದ್ದಾರೆ. ಇಂತು ಎಪ್ಪತ್ತೊಂದು ಯುಗಗಳ ಕಾಲಚಕ್ರವು ಉರುಳುತ್ತ ಬಂದಿದೆ. ವಾರಾಹ ಕಲ್ಪದಲ್ಲಿಯ ಮೊದಲನೇ ಮನ್ವಂತರದ ಅಧಿಪತಿಯಾದ ಸ್ವಾಯಂಭುವ ಮನ್ವಂತರದ ವಂಶವಿಸ್ತಾರವನ್ನು ನಿಮಗೆ ನಾನು ತಿಳಿಸಿದಂತಾಯಿತು.

## ಭೂಗೋಲದ ಎತ್ತರ ಬಿತ್ತರ

**ಮೈತ್ರೇಯ -** ಪೂಜ್ಯರೇ, ತಮ್ಮ ಮುಖದಿಂದ ಸ್ವಾಯಂಭುವ ಮನುವಿನ ವಂಶದ ಬಳ್ಳಿ ಬಿತ್ತರಗೊಂಡ ಬಗೆ ಕೇಳಿ ಸಂತಸವಾಯಿತು. ಈಗ ಈ ತಿರೆಯ ಹರವು ಹಬ್ಬುಗೆಯ ಬಗೆಗೆ ಕೇಳಿ ತಿಳಿದುಕೊಳ್ಳುವ ಬಯಕೆ ನನಗೆ. ಈ ಪೊಡವಿಯ ಒಡಲಿನಲ್ಲಿ ಅಡಗಿದ ಪುರ ಗ್ರಾಮ, ಮೊರೆಯುವ ಕಡಲು, ಹರಿಯುವ ನದಿ, ಮೆರೆಯುವ ಬೆಟ್ಟ, ತಲೆಯೆತ್ತಿದ ನಡುಗಡ್ಡೆ, ಗುಡ್ಡ ಗಿಡ, ಧರೆ, ತೊರೆ, ಬನ ಬಯಲು ಮುಂತಾದವುಗಳ ಪ್ರಮಾಣ ಪರಿಮಾಣ; ಆಕಾರ ಪ್ರಕಾರ, ಕಾರ್ಯಕಾರಣ, ನೆಲೆ ನಿಲವುಗಳನ್ನು ಅರಿಯುವ ಆಸೆ ಮೂಡಿದೆ ನನ್ನಲ್ಲಿ. ತಾವು ಬಣ್ಣಿಸಿ ತಿಳಿಸಬೇಕು.

**ಪರಾಶರ -** ಮೈತ್ರೇಯ, ಈ ಭೂಮಂಡಲದ ಬಡಾವಣೆಯ ಬಗೆಯನ್ನು ವಿಸ್ತಾರಪೂರ್ವಕವಾಗಿ ಬಿತ್ತರಿಸಿ ಬಣ್ಣಿಸಲಿಕ್ಕೆ ನೂರು ವರುಷಗಳೂ ಸಾಲವು ಶಕ್ಯವಾದಷ್ಟು ಸಂಕ್ಷೇಪದಲ್ಲಿ ನಿನಗೆ ಈ ಭುವನ ಮಂಡಲವು ಬೆಳೆದ ಬಗೆಯನ್ನು ಅರುಹುವೆ, ಜಂಭೂ ಪ್ಲಕ್ಷ, ಶಾಲ್ಮಲ, ಕುಶ, ಕ್ರೌಂಚ, ಶಾಕ, ಮತ್ತು ಪುಷ್ಕರ ಎಂಬ ಈ ಏಳು ದ್ವೀಪಗಳನ್ನು ಬೇರೆ ಬೇರೆ ಏಳು ಕಡಲುಗಳು ಸುತ್ತುವರಿದು ಮೊರೆಯುತ್ತಲಿವೆ. ಈ ಸಪ್ತಸಾಗರಗಳಲ್ಲಿ ಜಂಬೂ ದ್ವೀಪವನ್ನು ಉಪ್ಪು ಸಮುದ್ರವು ಆವರಿಸಿದೆ. ಕಬ್ಬಿನರಸದ ಕಡಲು ಪ್ಲಕ್ಷದ್ವೀಪವನ್ನು ಸುತ್ತಿದೆ. ಶಾಲ್ಮಲ ನಡುಗಡ್ಡೆಯನ್ನು ಸುರೆಯ ಸಾಗರವು ಬಳಸಿ ನಿಂದಿದೆ. ಕುಶದ್ವೀಪದ ದಂಡೆ ತೀಡುವದು ತುಪ್ಪದ ಸಮುದ್ರದ. ಕ್ರೌಂಚದ್ವೀಪದ ತಡಿಗುಂಟ ಹಾಲ್ಗಡಲು ತುಳುಕಿದೆ. ಪುಷ್ಕರದ್ವೀಪದ ಅಂಚಿನಗುಂಟ ಜೇಂಗಡಲು ತರಂಗಿಸಿದೆ.

## ಜಂಬೂ ದ್ವೀಪದಲ್ಲಿ ಬಂಗಾರದ ಬೆಟ್ಟ

ಈ ಏಳು ನಡುಗಡ್ಡೆಗಳ ನಡುವೆ ಇದೆ ನಮ್ಮ ಈ ಜಂಬೂದ್ವೀಪ. ಇದರ ನಟ್ಟನಡುವೆ ನಿಂತಿದೆ ಬಂಗಾರದ ಬೆಟ್ಟ ಎಂದು ಹೆಸರಾದ ಮೇರು ಪರ್ವತ. ಇದರ ಎತ್ತರ ಎಂಬತ್ನಾಲ್ಕುಸಾವಿರ ಹರದಾರಿ. ನೆಲದೊಡಲಿನಲ್ಲಿ ಇದ್ದು ಹೊಕ್ಕು ಹೂತು ಹೋದದ್ದು ಹದಿನಾರು ಸಾವಿರ ಯೋಜನ. ಈ ಬೃಹತ್ತರ ಬೆಟ್ಟದ ಬೆನ್ನು ಭಾಗದ ಹರವು ಮೂವತ್ತೆರಡು ಸಾವಿರ ಯೋಜನದಷ್ಟಿದೆ. ಈ ತೆರನಾಗಿ ಮೇರುಗಿರಿಯು ಭೂತಲ ಕಮಲದ ಮಧ್ಯಕೋಶದಂತಿದೆ. ಈ ಮೇರುಗಿರಿಯ ದಕ್ಷಿಣಕ್ಕೆ ಮೊದಲು ಭಾರತವರ್ಷ, ನಂತರ ಕಿಂಪುರುಷವರ್ಷ, ಆದರಾಚೆ ಹರಿ ವರ್ಷಗಳಿವೆ. ಉತ್ತರಕ್ಕೆ ರಮ್ಯಕ ಹಿರಣ್ಮಯ, ಉತ್ತರ ಕುರುದೇಶಗಳಿವೆ. ಇವೆಲ್ಲ ಒಂಬತ್ತು ಸಾವಿರ ಯೋಜನ ವಿಸ್ತಾರವುಳ್ಳವುಗಳಾಗಿವೆ. ಇವೆಲ್ಲವುಗಳ ನಡುವೆ ಇಲಾವ್ರತ ಖಂಡವಿದೆ. ಆದರ ನಡುವೆ

ಸುಮೇರು ಎಂಬ ಕನಕಾಚಲವಿದೆ. ಈ ಬಂಗಾರದ ಬೆಟ್ಟವು ಬುಗರೆಯಂತೆ ಮೇಲೆ ಹರವಾಗಿದ್ದು ಕೆಳಗೆ ಬಂದಂದತೆ ಸಣ್ಣದಾಗುತ್ತ ಬರುತ್ತದೆ. ಆದುದರಿಂದ ಅದು ಎಂದಾದರೂ ವಾಲಿ ಬೀಳಬಹುದೆಂಬ ಭೀತಿಯಿಂದಲೋ ಏನೋ ಇದರ ಸುತ್ತುಮುತ್ತು ನಾಕು ಗಟ್ಟಿ ಬೆಟ್ಟಗಳನ್ನು ಭಗವಂತ ಕಟ್ಟಿದಂತಿದೆ. ಪೂರ್ವಕ್ಕೆ ಮಂದರಾಚಲ, ದಕ್ಷಿಣದಲ್ಲಿ ಗಂಧಮಾದನ, ಪಶ್ಚಿಮಕ್ಕೆ ವಿಪುಲ, ಉತ್ತರ ದಿಕ್ಕಿನಲ್ಲಿ ಸುಪಾರ್ಶ್ವ ಎಂದು ಹತ್ತು ಹತ್ತು ಯೋಜನ ಎತ್ತರವಾದ ಗಿರಿಗಳು ಎದ್ದು ನಿಂತಿವೆ. ಈ ನಾಕೂ ಬೆಟ್ಟಗಳ ತುಟ್ಟ ತುದಿಯಲ್ಲಿ ನೀರಲ ಗಿಡ, ಆಲದ ಮರ, ಕದಂಬ ವೃಕ್ಷ, ಪೀಪಲ ವೃಕ್ಷಗಳು ಈ ಕುಲಾಚಲಗಳ ಬಾವುಟಗಳಂತೆ ತಲೆಯೆತ್ತಿವೆ. ನಾಕೂ ಹೆಮ್ಮರಗಳ ಉದ್ದಳತೆ ಹನ್ನೊಂದು ನೂರು ಯೋಜನ.

## ಗಿರಿಯಂಥ ಮರ, ಗಜದಂಥ ಫಲ

ಮೈತ್ರೇಯ, ಇವುಗಳಲ್ಲಿ (ಜಂಬೂವೃಕ್ಷ) ನೀರಲಮರದ ನಿಮಿತ್ತದಿಂದ ನಮ್ಮ ದೇಶಕ್ಕೆ ಜಂಬೂ ದ್ವೀಪ ಎಂದು ಹೆಸರು ಬಂದಿದೆ. ಇದರ ಹಣ್ಣುಗಳೆಲ್ಲ ಆನೆಯ ಆಕಾರದವು. ಈ ಗಜಗಾತ್ರದ ಹಣ್ಣು ಕೆಳಗೆ ಬಿದ್ದಾಗ ಅದರ ಹೆಬ್ಬಂಡೆಯಂತಹ ತುಡು ತುಣುಕುಗಳು ಎಲ್ಲ ಕಡೆಗೆ ಚಿಮ್ಮಿ ಚೆಲ್ಲುವರಿಯುವವು. ಅವುಗಳಿಂದ ಬಸಿದು ಬಂದ ರಸ ಒಂದು ದೊಡ್ಡ ನದಿಯಾಗಿ ಹರಿಯುತ್ತಲಿದೆ. ಅದಕ್ಕೆ ಜಂಬೂ ನದಿಯೆಂದು ಹೆಸರು. ಈ ನೀರಲ ನದಿಯ ಸೀಕರಣೆಯ ರಸವನ್ನು ಕುಡಿದವರಿಗೆ ಮುಪ್ಪು ಅಡರುವದಿಲ್ಲ. ಬೆವರು ಬರುವದಿಲ್ಲ. ಅದರಲ್ಲಿ ಮುಳುಗು ಹಾಕಿದರೆ ಮೈ ದುರ್ನಾತ ಇರುವುದಿಲ್ಲ. ಈ ಜಂಬೂ ನದಿಯ ತಡಿಗುಂಟಿ ತಂಗಾಳಿಗೆ ಒಣಗಿ ರೇವು ಬಿಟ್ಟ ಮಿದುಮಣ್ಣೇ ''ಜಾಂಬೂನದ'' ಎಂಬ ಹೆಸರಿನಿಂದ ಬಂಗಾರವಾಗುತ್ತದೆ. ಮೇರು ಪರ್ವತ ಪೂರ್ವಕ್ಕೆ ಭದ್ರಾಶ್ವವರ್ಷ, ಪಶ್ಚಿಮಕ್ಕೆ ಕೇತು ಮಾಲ ವರ್ಷ. ಇವೆರಡರ ನಡುವೆ ಇಲಾವೃತ ವರ್ಷ. ಇದರ ನಾಕೂ ದಿಕ್ಕಿನಲ್ಲಿ ಚೈತ್ರರಥ, ಗಂಧಮಾದನ, ವೈಭ್ರಾಜ, ನಂದನ ಎಂಬ ನಾಕು ಉಪವನಗಳೂ, ಅರುಣೋದ, ಮಹಾಭದ್ರ, ಅಸಿತೋದ, ಮಾನಸ ಎಂಬ ನಾಕು ಸರೋವರಗಳೂ ಕಂಗೊಳಿಸುತ್ತವೆ.

## ಗಂಗಾವತರಣ

ಮೇರು ಪರ್ವತದ ಮೇಲೆ ಅಂತರಿಕ್ಷದಲ್ಲಿ ಕಂಗೊಳಿಸುವುದೇ ಬ್ರಹ್ಮಪುರಿ. ಹದಿನಾಕು ಸಾವಿರ ಯೋಜನದಷ್ಟಿದೆ. ಅದರ ಹರಹು. ಅದರ ಸುತ್ತಲಿನ ದಶದಿಶೆಗಳಲ್ಲಿ ಇಂದ್ರನೇ ಮೊದಲಾದ ಅಷ್ಟ ದಿಕ್ಪಾಲಕರ ಹೆಸರಾಂತ ನಗರಗಳಿವೆ. ಹರಿಯ ಅಡಿಯಿಂದ ಹರಿದು ಹೊಮ್ಮಿ ಬಂದ ದೇವಗಂಗೆ ತನ್ನ ತಣ್ಣೀರಿನ ತೆರೆ ತುಂತುರುಗಳಿಂದ ತಂಗದಿರನ ತಿಂಗಳಲೋಕದ ಅಂಗಳವನ್ನು ತೊಳೆದು ಈ ಬ್ರಹ್ಮಪುರಿಯ ಮೇಲೆ ಸುರಿದು ತಂಪೆರೆಯುತ್ತದೆ. ಅಲ್ಲಿಂದ ಈ ದೇವನದಿಯು ಕವಲೊಡೆದು ನಾಕು ನಿಟ್ಟಿಗೆ ಹರಿದು ಹೋಗಿದೆ. ನಾಕು ದಿಕ್ಕಿಗೆ ಹರಿದ ದೇವ ಗಂಗೆಯ ಸ್ರೋತಸಗಳಿಗೆ ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂದು ಹೆಸರು.

## ಸುರನದಿಯ ಸಮುದ್ರ ಯಾತ್ರೆ

ಅವುಗಳಲ್ಲಿ ಸೀತಾ ಎಂಬ ಸುರನದಿಯ ಶಾಖಾತರಂಗಿಣಿಯು ಮೂಡಲ ನಿಟ್ಟಿನಲ್ಲಿ ಬಾನಗುಂಟ ಹರಿದು, ಬೆಟ್ಟದಿಂದ ಬೆಟ್ಟಕ್ಕೆ ಧುಮುಕುತ್ತ ಭದ್ರಾಶ್ವ ವರ್ಷದ ಕಾಡುನಾಡುಗಳನ್ನು ದಾಟಿ ಕಡಲಿಗೆ ಕೂಡುತ್ತದೆ. ಅದೇ ಮಂದಾಕಿನಿಯ ಇನ್ನೊಂದು ಶಾಖೆ ಅಲಕನಂದೆಯು ತೆಂಕಣದಿಕ್ಕಿಗೆ ತಿರುಗಿ ಭಾರತಕ್ಕೆ ಬಂದು ಏಳು ಕವಲೊಡೆದು ತನ್ನ ಸಪ್ತ ಸ್ರೋತಸ್ಸುಗಳಿಂದ ಈ ಪುಣ್ಯ ಭೂಮಿಯನ್ನು ತೊಳೆದು ತೋಯಿಸಿ ಸಮುದ್ರ ಸಂಗಮವನ್ನು ಪಡೆಯುತ್ತದೆ. ಆ ಬಾಂದೊರೆಯ ಚಕ್ಷು ಎಂಬ ಝರಿಯು ಪಡುವಲ ನಿಟ್ಟಿನಲ್ಲಿ ನುಗ್ಗಿ ಅನೇಕ ಬಯಲುಗಳನ್ನು ತುಳುಕಾಡಿಸಿ ಕೊನೆಗೆ ಕಡಲಿನಾಳದಲ್ಲಿ ಅಡುಗುತ್ತದೆ. ಗಂಗೆಯ ಕೊನೆಯ ಕವಲುಹೊಳೆಯಾದ ಭದ್ರೆಯು ಪಾಶ್ಚಿಮಾತ್ಯ ಪರ್ವತಾವಳಿಗಳನ್ನೆಲ್ಲ ಕೊರೆದು ಹರಿದು ಪಾರಾಗಿ ಕೇತುಮಾಲಖಂಡದ ತುಂಬೆಲ್ಲ ತೋಯುತಾಂಡವ ಗೈದು ನೀರಾಟವಾಡಿ ಕೊನೆಗೆ ಸಮುದ್ರ ಗರ್ಭವನ್ನು ಸೇರುತ್ತದೆ. ವಿಶ್ವರೂಪದಿಂದ ಎಲ್ಲೆಡೆಗೂ ವಾಸಮಾಡಿದ ವಿಷ್ಣುವು ಭದ್ರಾಶ್ವ ವರ್ಷದಲ್ಲಿ ಹಯಗ್ರೀವ ರೂಪದಿಂದ ಹೊಳೆಯುತ್ತಾನೆ. ಕೇತುಮಾಲದಲ್ಲಿ ಅವನ ವರಾಹ ರೂಪದ ವೈಭವ ನಡೆದಿದೆ. ಭಾರತ ವರ್ಷದಲ್ಲಿ ಕೂರ್ಮರೂಪದಿಂದ ನೆಲೆಸಿದ್ದಾನೆ.

## ಧರ್ಮಕ್ಷೇತ್ರವಾದ ಭಾರತ

ಮೈತ್ರೇಯ, ಹಿಮಾಚಲ ಬೆಟ್ಟದ ಮಾಲೆಗಳನ್ನು ಬೆನ್ನಿಗೆ ಹಾಕಿಕೊಂಡು ದಕ್ಷಿಣ ಸಮುದ್ರದ ತಡಿಯವರೆಗೂ ಮೈಚಾಚಿದ ಮಹಾರಾಷ್ಟ್ರವೇ ಭಾರತವರ್ಷ. ಇಲ್ಲಿರುವ ಜನರೇ ಭಾರತೀಯರು. ಇದರ ಅಗಲ ಒಂಬತ್ತುಸಾವಿರ ಯೋಜನ. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ ಮತ್ತು ಪಾರಿಯಾತ್ರ ಇವು ಏಳು ಇಲ್ಲಿಯ ಕುಲಪರ್ವತಗಳು. ಒಳ್ಳೇ ಕರ್ಮಮಾಡುವ ಸಾಧುಜೀವಿಯು ಮೋಕ್ಷಕ್ಕೆ ಹೋಗುವದು ಈ ಭಾರತ ಭೂಮಿಯಲ್ಲಿ ಸಾಧನಾನುಷ್ಠಾನದಿಂದಲೇ. ಅದರಂತೆ ಪಾಪಿಜೀವವು ಈ ಭರತಖಂಡದಲ್ಲಿಯೇ ದುಷ್ಕೃತ್ಯಗಳನ್ನು ಆಚರಿಸಿ ನರಕದ ಮುಖ ಕಾಣುವದು. ಭೂಮಂಡಲದಲ್ಲಿಯ ಭಾರತದ ಹೊರತಾಗಿ ಬೇರಾವ ಭೂಖಂಡದಲ್ಲಿಯೂ ಕರ್ಮಕಲಾಪಗಳ ವಿಧಿ ಒತ್ತಾಯವಿಲ್ಲ. ಧರ್ಮಕರ್ಮಗಳೆಲ್ಲ ಇಲ್ಲಿ ಮಾತ್ರ.

ಕೃತ, ತ್ರೇತಾ, ದ್ವಾಪರ ಕಲಿ ಎಂಬ ಈ ಚತುರ್ಯುಗ ಚಕ್ರ ಉರುಳುವದು ಈ ದೇಶದಲ್ಲಿ ಮಾತ್ರ. ಇದು ಸಾಧನಭೂಮಿ. ದೇವಮುನಿಗಳು ತಪಃ ಸ್ವಾಧನೆಗಾಗಿ ಇಲ್ಲಿಗೇ ಬರುತ್ತಾರೆ. ಮಹಾಪುರುಷರೆಲ್ಲ ಬಂದು ಇಲ್ಲಿಯೇ ಯಜ್ಞಯಾಗ ಮಾಡುತ್ತಾರೆ. ಯಾರೇ ಆಗಲಿ ಸಾಧನವಿಲ್ಲದೇ ಸಿದ್ಧಿ ಪಡೆಯುವಂತಿಲ್ಲ. ಆ ಸಾಧನ ಭರತ ಭೂಮಿಯಲ್ಲಿ ಮಾತ್ರ. ಆದುದರಿಂದಲೇ ಎಲ್ಲ ಸಾಧಕ ಜೀವಿಗಳು ಈ ಭಾರತದಲ್ಲಿ ಬದುಕನ್ನು ಬಯಸಿ ಬರುತ್ತಾರೆ. ಇಲ್ಲಿ ಧಾನಧರ್ಮ ಮಾಡುತ್ತಾರೆ. ಯಜ್ಞ ತಪಗಳನ್ನು ಆಚರಿಸುತ್ತಾರೆ. ಇದರಿಂದ ಯಜ್ಞಪುರುಷನಾದ ಶ್ರೀ ವಿಷ್ಣುವನ್ನು ಒಲಿಸಿಗೊಂಡು

ಆತ್ಮೋದ್ಧಾರದ ದಾರಿ ಹಿಡಿಯುತ್ತಾರೆ. ಇಂಥ ಸದವಕಾಶ ಬೇರೆ ಭೂಖಂಡದಲ್ಲಿ ಇಲ್ಲ. ಆದುದರಿಂದ ಎಲ್ಲ ದ್ವೀಪಗಳಲ್ಲಿ ಜಂಬೂ ದ್ವೀಪವು ಶ್ರೇಷ್ಠವಾಗಿದೆ. ಈ ಜಂಬೂ ದ್ವೀಪದಲ್ಲಿಯೂ ಭರತಖಂಡವು ಸರ್ವ ಶ್ರೇಷ್ಠವಾಗಿದೆ. ಯಾಕೆಂದರೆ ಇದು ಕರ್ಮ ಭೂಮಿ. ಉಳಿದವುಗಳೆಲ್ಲ ಭೋಗ ಭೂಮಿ. ಇಲ್ಲಿ ಜನಿಸಿದವರನ್ನು ದೇವತೆಗಳೂ ಕೂಡ ಹೊಗಳುತ್ತಾರೆ.

**"ಗಾಯಂತಿ ದೇವಾಃ ಕಿಲ ಗೀತಕಾನಿ ಧನ್ಯಾಸ್ತು ತೇ ಭಾರತ ಭೂಮಿ ಭಾಗೇ।**
**ಸ್ವರ್ಗಾಪವರ್ಗಾಸ್ಪದ ಮಾರ್ಗಭೂತೇ ಭವಂತಿ ಭೂಯಃ ಪುರುಷಾಃ ಸುರತ್ವಾತ್॥**

**ಕರ್ಮಾಣ್ಯಸಂಕಲ್ಪಿತ ತತ್ಫಲಾನಿ ಸನ್ಯಸ್ಯ ವಿಷ್ಣೌ ಪರಮಾತ್ಮ ಭೂತೇ।**
**ಅವಾಪ್ಯ ತಾಂ ಕರ್ಮಮಹೀಮನಂತೇ ತಸ್ಮಿನ್ ಲಯಂ ಯೇ ತ್ವಮಲಾಃ ಪ್ರಯಾಂತಿ॥**

*(ವಿಷ್ಣು ಪುರಾಣ 2/3/ 24 - 25)*

"ಭರತ ಖಂಡದಲ್ಲಿ ಜನಿಸಿದವರು ಧನ್ಯರು. ಈ ಕರ್ಮ ಭೂಮಿಯಲ್ಲಿ ಜನಿಸಿ ಯಾವ ಫಲವನ್ನೂ ಬಯಸದೇ ಸತ್ಕರ್ಮಗಳನ್ನು ಅನುಷ್ಠಾನ ಮಾಡಿ ಶ್ರೀ ಹರಿಗೆ ಭಕ್ತಿಯಿಂದ ಅರ್ಪಿಸುವದರಿಂದ ಅವರಿಗೆ ಸುರರಿಗಿಂತ ಸುಲಭವಾಗಿಯೇ ಪರಮ ಪದ ಪ್ರಾಪ್ತಿಯಾಗುತ್ತದೆ. ಸ್ವರ್ಗ ಅಪವರ್ಗ ಎರಡರ ಮಾರ್ಗಗಳೂ ಇಲ್ಲಿಯ ಸಾಧಕರ ಎದುರು ಮುಕ್ತದ್ವಾರಗಳಾಗಿ ತೆರೆದಿಟ್ಟಿವೆ. ಇವರೇ ಧನ್ಯರೆಂದು" ಬಣ್ಣಿಸಿದ್ದಾರೆ ದೇವಪುರದ ಭಾವಿಕರು.

ಮೈತ್ರೇಯ ! ಈ ಜಂಬೂ ದ್ವೀಪದ ಲಕ್ಷ ಯೋಜನ ವಿಸ್ತಾರವಾದ ಒಳಮೈಗಾತ್ರವನ್ನು ಸಂಕ್ಷೇಪವಾಗಿ ನಾನು ನಿನಗೆ ನಿರೂಪಿಸಿದೆ. ಈ ನವ ಖಂಡ ಭೂಖಂಡದ ಹೊರಗೂ ಕೂಡ ಲಕ್ಷ ಯೋಜನೆ ವಿಸ್ತೀರ್ಣವಾದ ಕ್ಷಾರ ಸಮುದ್ರವು ತನ್ನ ಉಪ್ಪು ನೀರಿನ ಕಪ್ಪು ತೆರೆಗಳಿಂದ ಈ ಭೂಭಾಗವನ್ನು ಹಿಡಿದಪ್ಪಿ ಘೋರಾಕಾರದಿಂದ ಘೂರ್ಮಿಸುತ್ತಲಿದೆ.

## ಭಾರತದ ಜೀವನಾಡಿಗಳಾದ ನದಿಗಳು

ಈ ಭಾರತ ವರ್ಷದಲ್ಲಿ ಒಂಭತ್ತು ಭೂಭಾಗಗಳಿವೆ. ಇಂದ್ರದ್ವೀಪ, ಕಶೇರು, ತಾಮ್ರಪರ್ಣ, ಗಭಸ್ತಿಮಾನ್, ನಾಗದ್ವೀಪ, ಸೌಮ್ಯ, ಗಂಧರ್ವ, ವಾರುಣ, ಇವುಗಳಲ್ಲಿ ಕೊನೆಯದಾದ ವಾರುಣ ಖಂಡವು ಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಇದರ ದಕ್ಷಿಣೋತ್ತರ ವ್ಯಾಸ ಸಾವಿರ ಯೋಜನ. ಇದರಲ್ಲಿಯ ಹಿಮಾಲಯ ಗಿರಿಯಿಂದ ಚಂದ್ರಭಾಗಾ ಶತದ್ರು ಎಂಬ ಎರಡು ನದಿಗಳು, ಪಾರಿಯಾತ್ರ ಪರ್ವತದಿಂದ ವೇದ, ಸ್ಮೃತಿ ಎಂಬ ನದಿಗಳೂ, ವಿಂಧ್ಯಾಚಲದಿಂದ ನರ್ಮದಾ ಸುರಸಾ ತೊರೆಗಳೂ ಋಕ್ಷ ಗಿರಿಯಿಂದ ತಾಪೀ, ಪಯೋಷ್ಣೀ, ನಿರ್ವಿಂಧ್ಯಾದಿ ಹೊಳೆಗಳೂ ಹುಟ್ಟಿ ಹರಿದಿವೆ. ಇದರಂತೆ ಗೋದಾವರಿ, ಭೀಮರಥೀ, ಕೃಷ್ಣವೇಣಿ, ಮುಂತಾದ ಪುಣ್ಯ ಪಯಸ್ವಿನೀಗಳು ಸಹ್ಯ ಪರ್ವತದಿಂದ ಜನಿಸಿವೆ. ಕೃತಮಾಲಾ, ತಾಮ್ರಪರ್ಣೀ ನದಿಗಳು ಮಲಯಾಚಲದಿಂದ,

ಮಹೇಂದ್ರಾಚಲದಿಂದ ತ್ರಿಸಾಮಾ, ಆರ್ಯಕುಲ್ಯಾ ಶುಕ್ತಿಮಾನ್ ಗಿರಿಯಿಂದ ಋಷಿಕುಲ್ಯಾ. ಕುಮಾರೀ ಮುಂತಾದ ನದಿಗಳು ಉದ್ಭವಿಸಿರುತ್ತವೆ. ಈ ಅನೇಕಾನೇಕನದೀ ಉಪನದಿಗಳ ತಡಿಗಡಿಗಳಲ್ಲಿ ಕುರು ಪಾಂಚಾಲ, ಕಾಮ ರೂಪ, ಪುಂಡ್ರ, ಕಳಿಂಗ, ಮಗಧ, ಸೌರಾಷ್ಟ್ರ, ಶೂರ, ಆಭೀರ, ಕಾರೂಷ, ಮಾಲವ, ಹೂಣ, ಸಾಲ್ವ, ಸೈಂಧವ, ಅಂಬಷ್ಠ, ಪಾರಸೀಕ ಮುಂತಾದ ಅನೇಕ ದೇಶಗಳ ಭಿನ್ನ ಭಿನ್ನ ಜಾತಿ ಜನಾಂಗಗಳ ಜನರು ವಾಸ ಮಾಡಿದ್ದಾರೆ. ಇವುಗಳ ನೀರನ್ನು ಕುಡಿದು ನಲಿದಿದ್ದಾರೆ.

## ಪುಣ್ಯವಂತರ ನಾಡು ಪ್ಲಕ್ಷದ್ವೀಪ

ಪ್ಲಕ್ಷದ್ವೀಪದ ಉದ್ದಗಲ ಜಂಬೂದ್ವೀಪದ ಎರಡುಪಟ್ಟು, ಆ ದ್ವೀಪದ ದೊರೆ ಮೇಧಾತಿಥಿಗೆ ಏಳು ಮಕ್ಕಳು. ಅವರಲ್ಲಿ ಹಿರಿಯ ಶಾಂತಹಯ, ಕಿರಿಯ ಧ್ರುವ. ನಡುವೆ ಶಿಶಿರ, ಸುಖೋದಯ, ಆನಂದ, ಶಿವ, ಕ್ಷೇಮಕ, ಇವರೆಲ್ಲರೂ ಅವರವರ ಹೆಸರಿನ ವರ್ಷ ಅರ್ಥಾತ್ ದೇಶಗಳಿಗೆ ಅಧಿರಾಜರಾಗಿ ಆಳಿದರು. ಈ ಏಳು ರಾಜ ಕುಮಾರರ ರಾಜ್ಯಗಳ ಗಡಿಗಳನ್ನು ಗುರುತಿಸಲು ಅಲ್ಲಿ ಗೋಮೇದ, ಚಂದ್ರ, ನಾರದ, ದುಂದುಭಿ, ಸೋಮಕ, ಸುಮನಾ, ಮತ್ತು ವೈಭ್ರಾಜ ಎಂದು ಏಳು ಕುಲಗಿರಿಗಳು ಕಂಗೊಳಿಸುತ್ತಲಿವೆ. ಈ ನಾಡಿನಲ್ಲಿ ದೇವತೆಗಳೂ, ಗಂಧರ್ವರೂ, ಅಥವಾ ಪಾಪ ಮಾಡದ ಪುಣ್ಯಪುರುಷರೂ ವಾಸ ಮಾಡುತ್ತಾರೆ. ಪಾಪಿಗಳಿಗೆ ಇಲ್ಲಿ ಪ್ರವೇಶವಿಲ್ಲ. ಇಲ್ಲಿ ಪ್ರವಿಷ್ಟರಾದವರಿಗೆ ದುಃಖದ ದರ್ಶನವಿಲ್ಲ. ಚಿಂತೆಗೆ ಇಲ್ಲಿ ಆಸ್ಪದ ಇಲ್ಲ. ಬೇನೆಯೆಂದರೆ ಇಲ್ಲಿ ಗೊತ್ತಿಲ್ಲ. ಇಲ್ಲಿ ಯಾವಾಗಲೂ ಸುಖದ ಸುಗ್ಗಿ.

ಇಲ್ಲಿಯ ಮುಖ್ಯ ನದಿಗಳು ಅನುತಪ್ತಾ, ಶಿಖೀ, ವಿಪಾಶಾ, ತ್ರಿದಿವಾ, ಅಕ್ಲಮಾ, ಅಮೃತಾ ಮತ್ತು ಸುಕೃತಾ. ಇವಲ್ಲದೇ ಚಿಕ್ಕಪುಟ್ಟ ತೊರೆ ಝರಿಗಳೋ ಸಾವಿರಾರು. ಗಿರಿಗ್ರಾಮಗಳಿಗಂತೂ ಲೆಕ್ಕವಿಲ್ಲ. ಇಲ್ಲಿಯ ಜನರ ಆಯುರ್ಮಾನ ಐದುಸಾವಿರ ವರ್ಷ. ನಡು ಜೀವನದಲ್ಲಿ ಎಂದೂ ಸಾವು ಎರಗುವದಿಲ್ಲ. ದುಃಖ ದುರ್ಘಟನೆಗಳು ಜರಗುವದಿಲ್ಲ. ವರ್ಣಾಶ್ರಮ ವಿಭಾಗವನ್ನು ಅನುಸರಿಸಿ ಅಹಿಂಸಾ, ಸತ್ಯ ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ, ಎಂಬ ಐದು ಧರ್ಮಗಳನ್ನು ಜನರು ಅನುಸರಿಸುತ್ತಾರೆ. ನಮ್ಮಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ಜಾತಿಗಳಿದ್ದಂತೆ ಆ ಪ್ಲಕ್ಷ ದ್ವೀಪದಲ್ಲಿಯೂ ಆರ್ಯಕ, ಪರರ ವಿದಿಶ್ಯ, ಭಾವೀ ಎಂಬ ನಾಲ್ಕು ಜಾತಿಗಳುಂಟು. ಇವರೆಲ್ಲರೂ ಸರ್ವೇಶ್ವರನಾದ ಶ್ರೀ ಹರಿಯನ್ನು ಸೋಮರೂಪದಿಂದ ಯಜ್ಞಯಾಗಗಳ ದ್ವಾರಾ ಉಪಾಸನೆ ಮಾಡುತ್ತಾರೆ ಜಂಬೂಗಿಡದಂಥ ಘನ ಆಕಾರದ ಪ್ಲಕ್ಷ ಗಿಡವಿದ್ದು. ಆದರಿಂದಲೇ ಪ್ಲಕ್ಷದ್ವೀಪವೆಂದು ಅದಕ್ಕೆ ಹೆಸರು ಬಂದಿದೆ. ಆ ದ್ವೀಪದ ಹೊರಮೈಯನ್ನು ಸುತ್ತುಹಾಕಿರುವದು ಉಪ್ಪು ನೀರಿನ ಕಪ್ಪು ಸಮುದ್ರವಲ್ಲ. ಸಕ್ಕರೆ ಪಾಕದ ಸಿಹಿ ರಸದ ಕಬ್ಬಿನರಸದ ಹಾಲ್ಗಡಲು.

## ಮದ್ಯದ ಸಮುದ್ರದ ಮಧ್ಯದಲ್ಲಿ ಶಾಲ್ಮಲಿ ದ್ವೀಪ

ಶಾಲ್ಮಲಿ ದ್ವೀಪದ ಅರಸು ವೀರನಾದ ವಪುಷ್ಮಾನ್. ಅವನಿಗೂ ಏಳು ಜನ ಮಕ್ಕಳು.

ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾಸ, ಸುಪ್ರಭ ಎಂದು ಶ್ವೇತವರ್ಷ, ಜೀಮೂತವರ್ಷ ಮುಂತಾದ ಅವರವರ ಹೆಸರಿನ ವರ್ಷ ನಾಡುಗಳೇ ಅವರವರ ಅಂಕಿತದಲ್ಲಿರುವ ರಾಜ್ಯಗಳು. ಅಲ್ಲಿಯೂ ಕುಮುದ, ಉನ್ನತ, ಬಲಾಹಕ, ದ್ರೋಣಾಚಲ, ಕಂಕ, ಮಹಿಷ, ಕಕುದ್ಮಾನ್ ಎಂಬ ಏಳು ಹೆಬ್ಬೆಟ್ಟಗಳುಂಟು. ಇವೆಲ್ಲ ಕುಲಾಚಲಗಳು ಮುತ್ತು ರತ್ನಗಳ ಗಣಿಗಳಿಂದಲೂ ಅಮೂಲ್ಯ ಔಷಧಿ ವನಸ್ಪತಿಗಳಿಂದಲೂ ತುಂಬಿವೆ. ಮತ್ತು ಇಲ್ಲಿ ಯೋನಿ, ತೋಯಾ, ಚಂದ್ರಾ, ಮುಕ್ತಾ, ವಿಮೋಚಿನಿ, ನಿವೃತ್ತಿ ಎಂಬ ಏಳು ಪುಣ್ಯ ನದಿಗಳಿವೆ.

ಇಲ್ಲಿ ಕಪಿಲ, ಅರುಣ, ಪೀತ ಮತ್ತು ಕೃಷ್ಣ ಎಂಬ ನಾಕು ವರ್ಣದ ಜನರು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಾಗಿ ಇದ್ದಾರೆ. ಇವರೆಲ್ಲರೂ ಬೇರೆ ಬೇರೆ ಇದ್ದು ತಮ್ಮ ವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನ ಮಾಡುತ್ತಾರೆ. ಇಲ್ಲಿಯ ಕಪಿಲ ವರ್ಣದ ಬ್ರಾಹ್ಮಣರು ಯಜ್ಞಾಶ್ರಯನಾದ ಮುಖ್ಯ ಪ್ರಾಣಾಂತರ್ಗತ ಪರಮಾತ್ಮನ ಪ್ರಾಣರೂಪವನ್ನು ಹೋಮ ಹವನಗಳಿಂದ ಆರಾಧಿಸುತ್ತಾರೆ. ಈ ರಮ್ಯದ್ವೀಪದಲ್ಲಿ ದೇವತೆಗಳ ಆವಾಸವಿದೆ. ಶಾಲ್ಮಲ ಗಿಡದಿಂದ ಇದಕ್ಕೆ ಅದರ ಹೆಸರು ಬಂದಿದೆ. ಈ ದ್ವೀಪವನ್ನು ಮದ್ಯದ ಮಹಾ ಸಮುದ್ರವು ಬಳಸಿಗೊಂಡು ನಿಂತಿದೆ. ಈ ಸುರಾ ಸಮುದ್ರವು ಈ ದ್ವೀಪದ ಇಮ್ಮಡಿ ವ್ಯಾಸವುಳ್ಳ ಕುಶ ದ್ವೀಪದಿಂದ ಪರಿವೇಷ್ಟಿತವಾಗಿದೆ.

## ತುಪ್ಪದ ಸಾಗರದಲ್ಲಿ ತೇಲುವ ದರ್ಭದ ದ್ವೀಪ

ಕುಶ ದ್ವೀಪದ ಒಡೆಯ ಜ್ಯೋತಿಷ್ಮಂತನಿಗೆ ಉದ್ಭಿದ, ವೇಣುಮಾನ್, ವೈರಥ ಲಂಬನ, ಧೃತಿ, ಪ್ರಭಾಕರ ಮತ್ತು ಕಪಿಲ ಎಂದು ಸಪ್ತ ಪುತ್ರರು. ಅವರು ತಮ್ಮ ತಮ್ಮ ಹೆಸರಿನ ವರ್ಷಗಳನ್ನು ಆಳುತ್ತಾರೆ. ಇಲ್ಲಿಯೂ ದಾನವ, ಮಾನವ, ದೇವ, ಗಂಧರ್ವ, ಯಕ್ಷ, ಕಿನ್ನರ ಮುಂತಾದವರು ನೆಲಿಸಿದ್ದಾರೆ. ದಮೀ, ಶುಷ್ಮೀ, ಸ್ನೇಹ, ಮಂದೇಹ ಎಂಬ ನಾಕುವರ್ಣದ ಜನ ತಮ್ಮ ಪ್ರಾರಬ್ಧವನ್ನು ಸವೆಯಿಸಲಿಕ್ಕಾಗಿ ಇಲ್ಲಿ ಕರ್ಮ ಮಾಡುತ್ತಲಿರುತ್ತಾರೆ. ಇಲ್ಲಿ ಮುಖ್ಯವಾಗಿ ಬ್ರಹ್ಮರೂಪಿಯಾದ ಜನಾರ್ದನನ ಸೇವೆಯು ಅಧಿಕವಾಗಿ ನಡೆಯುವದು. ಇಲ್ಲಿ ವಿದ್ರುಮ, ಹೇಮಶೈಲ, ದ್ಯುತಿಮಾನ್, ಪುಷ್ಪವಾನ್, ಕುಶೇಶಯ, ಹರಿ ಮತ್ತು ಮಂದರಾಚಲ ಎಂದು ಏಳು ಗುರು ಗಿರಿಗಳು ತಲೆ ಎತ್ತಿ ನಿಂತಿವೆ. ಮತ್ತು ಧೂತಪಾಪಾ, ಶಿವಾ, ಪವಿತ್ರಾ, ಸಮ್ಮತಿ, ವಿದ್ಯುತ್, ಅಂಭಾ, ಮಹೀ ಎಂದು ಸಪ್ತ ಸಿಂಧುಗಳು ಹರಿದು ನಾಡನ್ನು ಪಾವನಗೊಳಿಸುತ್ತವೆ. ಅಲ್ಲಿಯ ಒಂದು ದರ್ಭೆಯ ಗಿಡದಿಂದಲೇ ಇದಕ್ಕೆ ಕುಶದ್ವೀಪ ಎಂಬ ಹೆಸರು ಬಂದಿದೆ. ತುಪ್ಪದ ಸಮುದ್ರವು ಈ ತೃಣ ದ್ವೀಪವನ್ನು ದುಂಡುವರಿದು ಆವರಿಸಿದೆ.

## ಕೆನೆಯ ಕಡಲಿನಲ್ಲಿ ಕ್ರೌಂಚದ್ವೀಪ

ಇದರಂತೆ ಕ್ರೌಂಚ ದ್ವೀಪದಲ್ಲಿ ದೊರೆ ದ್ಯುತಿಮಾನನ ಕುಶಲ, ಮಂದಗ, ಉಷ್ಣ, ಪೀವರ, ಅಂಧಕಾರಕ, ಮುನಿ, ದುಂದುಭಿ, ಎಂಬ ಏಳು ಮಕ್ಕಳಿಂದ ಸಪ್ತ ಖಂಡಗಳಾಗಿವೆ. ಅಲ್ಲಿ ಕ್ರೌಂಚ, ವಾಮನ, ಅಂಧಕಾರಕ, ಸ್ವಹಿನೀ, ದಿವಾವೃತ್,

ಪುಂಡರೀಕವಾನ್, ದುಂದುಭಿ ಎಂಬ ಸಪ್ತ ಕುಲಾದ್ರಿಗಳೂ ಗೌರೀ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಜವಾ, ಕ್ಷಾಂತಿ, ಪುಂಡರೀಕಾ, ಎಂಬ ಏಳು ನದಿಗಳೂ ಕಂಗೊಳಿಸುತ್ತಲಿವೆ. ಇಲ್ಲಿಯ ಪುಷ್ಕರ, ಪುಷ್ಕಲ, ಧನ್ಯ ಮತ್ತು ತಿಷ್ಯ ಎಂಬ ನಾಕು ವರ್ಣದ ಜನರು ರುದ್ರರೂಪಿಯಾದ ಸಂಕರ್ಷಣನನ್ನು ಪೂಜಿಸುತ್ತಾರೆ. ಇದನ್ನು ಮೊಸರಿನ ಕೆನೆಯ ಸಮುದ್ರವು ಸುತ್ತುಗಟ್ಟಿದೆ.

## ದುಗ್ಧ ಸಿಂಧುವಿನ ನಡುವಿರುವ ತರಕಾರಿ ನಡುಗಡ್ಡೆ

ಶಾಕದ್ವೀಪದ ಸಮ್ರಾಟ್ ಭವ್ಯನಿಗೆ ಏಳು ಜನ ಸುಕುಮಾರರು, ಜಲದ ಕುಮಾರ, ಸುಕುಮಾರ, ಮರೀಚಕ, ಸುಮೋದ, ಮೌದಾಕಿ, ಮಹಾದ್ರುಮ ಎಂಬ ಹೆಸರಿನ ಈ ಸಪ್ತ ಸತ್ಪುತ್ರರು ತಮ್ಮ ನಾಮಾಂಕಿತ ದೇಶಗಳಿಗೆ ದೊರೆಗಳಾಗಿದ್ದಾರೆ. ಈ ಏಳು ರಾಜ್ಯಗಳನ್ನು ವಿಂಗಡಿಸುವ ಗಡಿಗುಡ್ಡಗಳು ಉದಯಾಚಲ, ಜಲಾಧಾರ, ರೈವತಕ, ಶ್ಯಾಮ, ಅಸ್ತಾಚಲ, ಅಂಭಕೇಯ ಮತ್ತು ಕೇಸರಿ ಎಂಬ ಹೆಸರಿನಿಂದ ಖ್ಯಾತಿ ಪಡೆದಿವೆ. ಅಲ್ಲಿಯ ಶಾಕವೃಕ್ಷದ ಸುಗಂಧಗಾಳಿ ಬಡಿದರೇ ಸಾಕು ದೇವ ಗಂಧರ್ವರೂ ಕೂಡ ಹಿಗ್ಗಿ ಹೂವಾಗುತ್ತಾರೆ. ಅಲ್ಲಿ ಹರಿಯುವ ಅಸಂಖ್ಯವಾದ ನದ ನದಿಗಳಲ್ಲಿ ಕುಮಾರೀ, ನಲಿನೀ, ಧೇನುಕಾ, ಇಕ್ಷು, ವೇಣುಕಾ, ಸುಕುಮಾರೀ ಗಭಸ್ತೀ ಎಂಬ ಸಪ್ತಸ್ರೋತಸ್ವಿನೀಗಳು ಪ್ರಧಾನವಾಗಿವೆ. ಇಲ್ಲಿ ವಂಗ, ಮಾಗಧ, ಮಾನಸ, ಮಂದ ಎಂಬ ಚಾತುರ್ವರ್ಣ್ಯದ ಜನರು ಸವಿತೃ ಮಂಡಲ ಮಧ್ಯವರ್ತಿಯಾದ ನಾರಾಯಣನನ್ನು ಆರಾಧಿಸುತ್ತಾರೆ. ಪುಣ್ಯದ ಭಾಂಡಾರವು ಕರಗಿ ಸ್ವರ್ಗದಿಂದ ಕೆಳಗುರುಳಿದ ಜನರು ಇಲ್ಲಿ ನಿಂತು ಭಗವದುಪಾಸನೆಗೈಯುತ್ತಾರೆ. ಈ ಶಾಕದ್ವೀಪದ ಸುತ್ತ ಹಾಲ್ಗಡಲು ಮೊರೆಯುತ್ತಲಿದೆ.

## ರೋಗ ರಾಗ ರಹಿತವಾದ ಪುಷ್ಕರ ದ್ವೀಪ

ಪುಷ್ಕರ ದ್ವೀಪದ ಪ್ರಭು ಸವನನಿಗೆ ಮಾತ್ರ ಇಬ್ಬರೇ ಮಕ್ಕಳು. ಅವರ ಹೆಸರು. ಮಹಾವೀರ, ಘಾತಕಿ. ಅವರ ಹೆಸರಿಗನುಗುಣವಾಗಿ ಅಲ್ಲಿ ಮಹಾ ವೀರಖಂಡ ಘಾತಕೀಖಂಡ ಎಂದು ಎರಡೇ ರಾಜ್ಯಗಳಾಗಿವೆ. ಪುಷ್ಕರ ದ್ವೀಪದಲ್ಲಿ ಕುಲ ಶೈಲವೂ ಕೂಡ ಒಂದೇ ಇದೆ. ಅದರ, ಹೆಸರು ಮಾನಸೋತ್ತರ. ಅದರ ಅಗಲ ಐವತ್ತುಸಾವಿರ ಯೋಜನ, ಉದ್ದಳತೆಯೂ ಅಷ್ಟೇ. ಈ ಬೃಹದ್ ಬೆಟ್ಟವು ಆ ದ್ವೀಪವನ್ನು ಸರಿಯಾಗಿ ನಟ್ಟನಡುವೆ ಕೊರೆದು ಇಬ್ಭಾಗವನ್ನಾಗಿ ಮಾಡುತ್ತದೆ. ಆದುದರಿಂದಲೇ ಇಲ್ಲಿ ಆದದ್ದು ಎರಡೇ ರಾಜ್ಯ ಖಂಡಗಳು. ಇಲ್ಲಿಯ ಜನರ ಆಯುಃ ಪರಿಮಿತಿ ಹತ್ತು ಸಾವಿರ ವರ್ಷ. ರೋಗ, ರಾಗ, ದುಃಖ ದ್ವೇಷ ಈ ದ್ವೀಪದ ಹತ್ತಿರವೂ ಸುಳಿಯಲಾರವು. ಇಲ್ಲಿ ದೇವದೈತ್ಯರು ನೆಲಿಸಿದ್ದಾರೆ. ಇಲ್ಲಿ ನೆಲೆ ನಿಂತ ಮಾನವರಿಗೂ ದೇವತೆಗಳ ಸಮಾನರೂಪ, ಸಮಾನವೇಷ, ಸಮನಾದ ಕಾಂತಿ. ಇಲ್ಲಿ ಜಾತಿ ವಿಭಾಗವಿಲ್ಲ ಕಾಮ್ಯ ಕರ್ಮಗಳನ್ನು ಯಾರು ಮಾಡುವದಿಲ್ಲ. ಇಲ್ಲಿ ವೇದ ಚೋದನೆ ಇಲ್ಲ. ವಿಧಿ ನಿಯಮಗಳ ನಿರ್ಬಂಧವಿಲ್ಲ. ಇದೊಂದು ನೆಲದ ಮೇಲಿನ ಸ್ವರ್ಗ. ಆ ದ್ವೀಪದಲ್ಲಿ ಒಂದು ಆಲದ ಮರದಲ್ಲಿ ಬ್ರಹ್ಮ ಸನ್ನಿಧಿ ಇದೆ. ಅದನ್ನು ದೇವದಾನವರು ಪೂಜಿಸುತ್ತಾರೆ. ಇದರ ಸುತ್ತು

ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾಸ, ಸುಪ್ರಭ ಎಂದು ಶ್ವೇತವರ್ಷ, ಜೀಮೂತವರ್ಷ ಮುಂತಾದ ಅವರವರ ಹೆಸರಿನ ವರ್ಷ ನಾಡುಗಳೇ ಅವರವರ ಅಂಕಿತದಲ್ಲಿರುವ ರಾಜ್ಯಗಳು. ಅಲ್ಲಿಯೂ ಕುಮುದ, ಉನ್ನತ, ಬಲಾಹಕ, ದ್ರೋಣಾಚಲ, ಕಂಕ, ಮಹಿಷ, ಕಕುದ್ಮಾನ್ ಎಂಬ ಏಳು ಹೆಬ್ಬೆಟ್ಟಗಳುಂಟು. ಇವೆಲ್ಲ ಕುಲಾಚಲಗಳು ಮುತ್ತು ರತ್ನಗಳ ಗಣಿಗಳಿಂದಲೂ ಅಮೂಲ್ಯ ಔಷಧಿ ವನಸ್ಪತಿಗಳಿಂದಲೂ ತುಂಬಿವೆ. ಮತ್ತು ಇಲ್ಲಿ ಯೋನಿ, ತೋಯಾ, ಚಂದ್ರಾ, ಮುಕ್ತಾ, ವಿಮೋಚಿನಿ, ನಿವೃತ್ತಿ ಎಂಬ ಏಳು ಪುಣ್ಯ ನದಿಗಳಿವೆ.

ಇಲ್ಲಿ ಕಪಿಲ, ಅರುಣ, ಪೀತ ಮತ್ತು ಕೃಷ್ಣ ಎಂಬ ನಾಕು ವರ್ಣದ ಜನರು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಾಗಿ ಇದ್ದಾರೆ. ಇವರೆಲ್ಲರೂ ಬೇರೆ ಬೇರೆ ಇದ್ದು ತಮ್ಮ ವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನ ಮಾಡುತ್ತಾರೆ. ಇಲ್ಲಿಯ ಕಪಿಲ ವರ್ಣದ ಬ್ರಾಹ್ಮಣರು ಯಜ್ಞಾಶ್ರಯನಾದ ಮುಖ್ಯ ಪ್ರಾಣಾಂತರ್ಗತ ಪರಮಾತ್ಮನ ಪ್ರಾಣರೂಪವನ್ನು ಹೋಮ ಹವನಗಳಿಂದ ಆರಾಧಿಸುತ್ತಾರೆ. ಈ ರಮ್ಯದ್ವೀಪದಲ್ಲಿ ದೇವತೆಗಳ ಆವಾಸವಿದೆ. ಶಾಲ್ಮಲ ಗಿಡದಿಂದ ಇದಕ್ಕೆ ಅದರ ಹೆಸರು ಬಂದಿದೆ. ಈ ದ್ವೀಪವನ್ನು ಮದ್ಯದ ಮಹಾ ಸಮುದ್ರವು ಬಳಸಿಗೊಂಡು ನಿಂತಿದೆ. ಈ ಸುರಾ ಸಮುದ್ರವು ಈ ದ್ವೀಪದ ಇಮ್ಮಡಿ ವ್ಯಾಸವುಳ್ಳ ಕುಶ ದ್ವೀಪದಿಂದ ಪರಿವೇಷ್ಟಿತವಾಗಿದೆ.

## ತುಪ್ಪದ ಸಾಗರದಲ್ಲಿ ತೇಲುವ ದರ್ಭದ ದ್ವೀಪ

ಕುಶ ದ್ವೀಪದ ಒಡೆಯ ಜ್ಯೋತಿಷ್ಮಂತನಿಗೆ ಉದ್ಭಿದ, ವೇಣುಮಾನ್, ವೈರಥ ಲಂಬನ, ಧೃತಿ, ಪ್ರಭಾಕರ ಮತ್ತು ಕಪಿಲ ಎಂದು ಸಪ್ತ ಪುತ್ರರು. ಅವರು ತಮ್ಮ ತಮ್ಮ ಹೆಸರಿನ ವರ್ಷಗಳನ್ನು ಆಳುತ್ತಾರೆ. ಇಲ್ಲಿಯೂ ದಾನವ, ಮಾನವ, ದೇವ, ಗಂಧರ್ವ, ಯಕ್ಷ, ಕಿನ್ನರ ಮುಂತಾದವರು ನೆಲಿಸಿದ್ದಾರೆ. ದಮೀ, ಶುಷ್ಮೀ, ಸ್ನೇಹ, ಮಂದೇಹ ಎಂಬ ನಾಕುವರ್ಣದ ಜನ ತಮ್ಮ ಪ್ರಾರಬ್ಧವನ್ನು ಸವೆಯಿಸಲಿಕ್ಕಾಗಿ ಇಲ್ಲಿ ಕರ್ಮ ಮಾಡುತ್ತಲಿರುತ್ತಾರೆ. ಇಲ್ಲಿ ಮುಖ್ಯವಾಗಿ ಬ್ರಹ್ಮರೂಪಿಯಾದ ಜನಾರ್ದನನ ಸೇವೆಯು ಅಧಿಕವಾಗಿ ನಡೆಯುವದು. ಇಲ್ಲಿ ವಿದ್ರುಮ, ಹೇಮಶೈಲ, ದ್ಯುತಿಮಾನ್, ಪುಷ್ಪವಾನ್, ಕುಶೇಶಯ, ಹರಿ ಮತ್ತು ಮಂದರಾಚಲ ಎಂದು ಏಳು ಗುರು ಗಿರಿಗಳು ತಲೆ ಎತ್ತಿ ನಿಂತಿವೆ. ಮತ್ತು ಧೂತಪಾಪಾ, ಶಿವಾ, ಪವಿತ್ರಾ, ಸಮ್ಮತಿ, ವಿದ್ಯುತ್, ಅಂಭಾ, ಮಹೀ ಎಂದು ಸಪ್ತ ಸಿಂಧುಗಳು ಹರಿದು ನಾಡನ್ನು ಪಾವನಗೊಳಿಸುತ್ತವೆ. ಅಲ್ಲಿಯ ಒಂದು ದರ್ಭೆಯ ಗಿಡದಿಂದಲೇ ಇದಕ್ಕೆ ಕುಶದ್ವೀಪ ಎಂಬ ಹೆಸರು ಬಂದಿದೆ. ತುಪ್ಪದ ಸಮುದ್ರವು ಈ ತೃಣ ದ್ವೀಪವನ್ನು ದುಂಡುವರಿದು ಆವರಿಸಿದೆ.

## ಕೆನೆಯ ಕಡಲಿನಲ್ಲಿ ಕ್ರೌಂಚದ್ವೀಪ

ಇದರಂತೆ ಕ್ರೌಂಚ ದ್ವೀಪದಲ್ಲಿ ದೊರೆ ದ್ಯುತಿಮಾನನ ಕುಶಲ, ಮಂದಗ, ಉಷ್ಣ, ಪೀವರ, ಅಂಧಕಾರಕ, ಮುನಿ, ದುಂದುಭಿ, ಎಂಬ ಏಳು ಮಕ್ಕಳಿಂದ ಸಪ್ತ ಖಂಡಗಳಾಗಿವೆ. ಅಲ್ಲಿ ಕ್ರೌಂಚ, ವಾಮನ, ಅಂಧಕಾರಕ, ಸ್ವಹಿನೀ, ದಿವಾವೃತ್,

ಪುಂಡರೀಕವಾನ್, ದುಂದುಭಿ ಎಂಬ ಸಪ್ತ ಕುಲಾದ್ರಿಗಳೂ ಗೌರೀ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಜವಾ, ಕ್ಷಾಂತಿ, ಪುಂಡರೀಕಾ, ಎಂಬ ಏಳು ನದಿಗಳೂ ಕಂಗೊಳಿಸುತ್ತಲಿವೆ. ಇಲ್ಲಿಯ ಪುಷ್ಕರ, ಪುಷ್ಕಲ, ಧನ್ಯ ಮತ್ತು ತಿಷ್ಯ ಎಂಬ ನಾಕು ವರ್ಣದ ಜನರು ರುದ್ರರೂಪಿಯಾದ ಸಂಕರ್ಷಣನನ್ನು ಪೂಜಿಸುತ್ತಾರೆ. ಇದನ್ನು ಮೊಸರಿನ ಕೆನೆಯ ಸಮುದ್ರವು ಸುತ್ತುಗಟ್ಟಿದೆ.

## ದುಗ್ಧ ಸಿಂಧುವಿನ ನಡುವಿರುವ ತರಕಾರಿ ನಡುಗಡ್ಡೆ

ಶಾಕದ್ವೀಪದ ಸಮ್ರಾಟ್ ಭವ್ಯನಿಗೆ ಏಳು ಜನ ಸುಕುಮಾರರು, ಜಲದ ಕುಮಾರ, ಸುಕುಮಾರ, ಮರೀಚಕ, ಸುಮೋದ, ಮೌದಾಕಿ, ಮಹಾದ್ರುಮ ಎಂಬ ಹೆಸರಿನ ಈ ಸಪ್ತ ಸತ್ಪುತ್ರರು ತಮ್ಮ ನಾಮಾಂಕಿತ ದೇಶಗಳಿಗೆ ದೊರೆಗಳಾಗಿದ್ದಾರೆ. ಈ ಏಳು ರಾಜ್ಯಗಳನ್ನು ವಿಂಗಡಿಸುವ ಗಡಿಗುಡ್ಡಗಳು ಉದಯಾಚಲ, ಜಲಾಧಾರ, ರೈವತಕ, ಶ್ಯಾಮ, ಅಸ್ತಾಚಲ, ಅಂಭಕೇಯ ಮತ್ತು ಕೇಸರಿ ಎಂಬ ಹೆಸರಿನಿಂದ ಖ್ಯಾತಿ ಪಡೆದಿವೆ. ಅಲ್ಲಿಯ ಶಾಕವೃಕ್ಷದ ಸುಗಂಧಗಾಳಿ ಬಡಿದರೇ ಸಾಕು ದೇವ ಗಂಧರ್ವರೂ ಕೂಡ ಹಿಗ್ಗಿ ಹೂವಾಗುತ್ತಾರೆ. ಅಲ್ಲಿ ಹರಿಯುವ ಅಸಂಖ್ಯವಾದ ನದ ನದಿಗಳಲ್ಲಿ ಕುಮಾರೀ, ನಲಿನೀ, ಧೇನುಕಾ, ಇಕ್ಷು, ವೇಣುಕಾ, ಸುಕುಮಾರೀ ಗಭಸ್ತೀ ಎಂಬ ಸಪ್ತಸ್ರೋತಸ್ವಿನೀಗಳು ಪ್ರಧಾನವಾಗಿವೆ. ಇಲ್ಲಿ ವಂಗ, ಮಾಗಧ, ಮಾನಸ, ಮಂದ ಎಂಬ ಚಾತುರ್ವರ್ಣ್ಯದ ಜನರು ಸವಿತೃ ಮಂಡಲ ಮಧ್ಯವರ್ತಿಯಾದ ನಾರಾಯಣನನ್ನು ಆರಾಧಿಸುತ್ತಾರೆ. ಪುಣ್ಯದ ಭಾಂಡಾರವು ಕರಗಿ ಸ್ವರ್ಗದಿಂದ ಕೆಳಗುರುಳಿದ ಜನರು ಇಲ್ಲಿ ನಿಂತು ಭಗವದುಪಾಸನೆಗೈಯುತ್ತಾರೆ. ಈ ಶಾಕದ್ವೀಪದ ಸುತ್ತ ಹಾಲ್ಗಡಲು ಮೊರೆಯುತ್ತಲಿದೆ.

## ರೋಗ ರಾಗ ರಹಿತವಾದ ಪುಷ್ಕರ ದ್ವೀಪ

ಪುಷ್ಕರ ದ್ವೀಪದ ಪ್ರಭು ಸವನನಿಗೆ ಮಾತ್ರ ಇಬ್ಬರೇ ಮಕ್ಕಳು. ಅವರ ಹೆಸರು. ಮಹಾವೀರ, ಘಾತಕಿ. ಅವರ ಹೆಸರಿಗನುಗುಣವಾಗಿ ಅಲ್ಲಿ ಮಹಾ ವೀರಖಂಡ ಘಾತಕೀಖಂಡ ಎಂದು ಎರಡೇ ರಾಜ್ಯಗಳಾಗಿವೆ. ಪುಷ್ಕರ ದ್ವೀಪದಲ್ಲಿ ಕುಲ ಶೈಲವೂ ಕೂಡ ಒಂದೇ ಇದೆ. ಅದರ, ಹೆಸರು ಮಾನಸೋತ್ತರ. ಅದರ ಅಗಲ ಐವತ್ತುಸಾವಿರ ಯೋಜನ, ಉದ್ದಳತೆಯೂ ಅಷ್ಟೇ. ಈ ಬೃಹದ್ ಬೆಟ್ಟವು ಆ ದ್ವೀಪವನ್ನು ಸರಿಯಾಗಿ ನಟ್ಟ ನಡುವೆ ಕೊರೆದು ಇಬ್ಭಾಗವನ್ನಾಗಿ ಮಾಡುತ್ತದೆ. ಆದುದರಿಂದಲೇ ಇಲ್ಲಿ ಆದದ್ದು ಎರಡೇ ರಾಜ್ಯ ಖಂಡಗಳು. ಇಲ್ಲಿಯ ಜನರ ಆಯುಃ ಪರಿಮಿತಿ ಹತ್ತು ಸಾವಿರ ವರ್ಷ. ರೋಗ, ರಾಗ, ದುಃಖ ದ್ವೇಷ ಈ ದ್ವೀಪದ ಹತ್ತಿರವೂ ಸುಳಿಯಲಾರವು. ಇಲ್ಲಿ ದೇವದೈತ್ಯರು ನೆಲಿಸಿದ್ದಾರೆ. ಇಲ್ಲಿ ನೆಲೆ ನಿಂತ ಮಾನವರಿಗೂ ದೇವತೆಗಳ ಸಮಾನರೂಪ, ಸಮಾನವೇಷ, ಸಮನಾದ ಕಾಂತಿ. ಇಲ್ಲಿ ಜಾತಿ ವಿಭಾಗವಿಲ್ಲ ಕಾಮ್ಯ ಕರ್ಮಗಳನ್ನು ಯಾರು ಮಾಡುವದಿಲ್ಲ. ಇಲ್ಲಿ ವೇದ ಚೋದನೆ ಇಲ್ಲ. ವಿಧಿ ನಿಯಮಗಳ ನಿರ್ಬಂಧವಿಲ್ಲ. ಇದೊಂದು ನೆಲದ ಮೇಲಿನ ಸ್ವರ್ಗ. ಆ ದ್ವೀಪದಲ್ಲಿ ಒಂದು ಆಲದ ಮರದಲ್ಲಿ ಬ್ರಹ್ಮ ಸನ್ನಿಧಿ ಇದೆ. ಅದನ್ನು ದೇವದಾನವರು ಪೂಜಿಸುತ್ತಾರೆ. ಇದರ ಸುತ್ತು

ಮುತ್ತು ಸಿಹಿನೀರಿನ ಸಾಗರವು ಆವರಿಸಿದೆ. ಸಿಹಿನೀರಿನ ಸಮುದ್ರದ ಸುತ್ತಲೂ ಅದರ ಇಮ್ಮಡಿ ಬಂಗಾರದ ಭೂಮಿ ಹರಡಿದೆ. ಆದರೆ ಅದು ಜನಶೂನ್ಯ, ಜಂತುವರ್ಜಿತ. ಅದರಾಚೆ ಹತ್ತು ಸಾವಿರ ಯೋಜನ ಎತ್ತರ ಬಿತ್ತರವುಳ್ಳ ಲೋಕಾಲೋಕ ಪರ್ವತವಿದೆ. ಅದರ ಮುಂದೆ ಆ ಶೈಲಶ್ರೇಣಿಯನ್ನು ತುಂಬ ಹಬ್ಬಿಕೊಂಡು ದಟ್ಟ ಕಾರ್ಗತ್ತಲೆ ಹಬ್ಬಿದೆ. ಆ ಘನಾಂಧಕಾರವು ಬ್ರಹ್ಮಾಂಡ ಕಟಾಹದಿಂದ ಪರಿವೇಷ್ಟಿತವಾಗಿದೆ. ಈ ಬ್ರಹ್ಮಾಂಡ ಕಟಾಹ, ಸಪ್ತದ್ವೀಪ, ಸಪ್ತಸಮುದ್ರ, ಸಪ್ತಪರ್ವತಗಳಿಂದ ತುಂಬಿ ತೊನೆದಾಡುವ ಸಮಗ್ರ ಭೂಮಂಡಲದ ಪರಿಮಾಣವು ಐವತ್ತು ಕೋಟಿ ಯೋಜನವಾಗಿದೆ. ಪಂಚಮಹಾ ಭೂತಗಳಲ್ಲಿ ಆಕಾಶಾದಿಗಳಿಗಿಂತ ಪೃಥ್ವಿಯ ಗುಣಗೌರವಗಳು ಅಧಿಕವಾಗಿವೆ. ಈ ಪೃಥ್ವೀ ಮಂಡಲವು ಉಳಿದೆಲ್ಲ ಲೋಕಗಳಿಗೂ ಆಧಾರಭೂತವಾಗಿದೆ.

## ಕೆಳಗಿನ ಲೋಕಗಳ ಮೇಲ್ಮೆ

ವಿಪ್ರವರ್ಯ, ಈ ವರೆಗೆ ನಾನು ನಿನಗೆ ಬಿತ್ತರಿಸಿದ್ದು ಭೂಮಂಡಲದ ಅಗಲ ಗಾತ್ರವನ್ನು ಮಾತ್ರ. ಇದರ ಎತ್ತರವೂ ಕೂಡ ಎಪ್ಪತ್ತು ಸಾವಿರ ಯೋಜನದಷ್ಟಿದೆ. ಈ ಭೂಮಿಯ ಕೆಳಗೆ ಅತಲ, ವಿತಲ, ನಿತಲ, ಗಭಸ್ತಿಮತ್, ಮಹಾತಲ, ಸುತಲ, ಪಾತಲ ಎಂಬ ಏಳು ಲೋಕಗಳಿವೆ. ಈ ಎಲ್ಲ ಅಧೋ ಲೋಕಗಳು ಒಂದಕ್ಕಿಂತ ಒಂದು ಹತ್ತು ಸಾವಿರ ಯೋಜನ ದೂರದಲ್ಲಿ ಭೂಗರ್ಭದ ಒಳಕೆಳಗೆ ಉಂಟು. ಈ ಎಲ್ಲ ಲೋಕಗಳಲ್ಲಿ ಅಸಂಖ್ಯ ಸುಂದರ ಮಂದಿರಗಳೂ ಬಂಗಾರದ ಬೆಟ್ಟಗಳೂ ಶೋಭಿಸುತ್ತವೆ. ಅಲ್ಲಿ ವಾಸಿಸುವವರು ದೈತ್ಯ ದಾನವ ಯಕ್ಷ ರಕ್ಷ ಜಾತಿಯವರು. ಅದರಲ್ಲಿಯೂ ಅಲ್ಲಿ ಹಾವುಗಳ ಹಾರಾಟವೇ ಹೆಚ್ಚು. ಮುಖ್ಯವಾಗಿ ಇವು ನಾಗಲೋಕಗಳು. ಇಲ್ಲಿ ಎಲ್ಲೆಡೆ ಹರಿದಾಡುವ ಹಾವುಗಳ ಹೆಡೆ ಮುಡಿಗಳಲ್ಲಿ ಅನರ್ಘ್ಯ ರತ್ನಗಳು ಹೊಳೆಯುತ್ತಿರುತ್ತವೆ. ಹಿಂದೊಮ್ಮೆ ನಾರದರು ಪಾತಾಳಲೋಕಕ್ಕೆ ಬಂದು ಇಲ್ಲಿಯ ಸೊಬಗನ್ನು ಕಣ್ಣಾರೆ ಕಂಡು ದೇವಲೋಕದ ಜನರಿಗೆ ''ಸ್ವರ್ಗಕ್ಕಿಂತ ಪಾತಾಲಲೋಕವೇ ಸುಂದರವಾಗಿದೆ.'' ಎಂದು ತಿಳಿಸಿದರಂತೆ. ರತ್ನ ಪ್ರಭೆಯಿಂದ ರಂಜಿಸುವ ಈ ಪಾತಾಲ ಪುರಿಯಲ್ಲಿ ಮಿಂಚಿನ ಮೂರುತಿಗಳಂತೆ ಸಂಚರಿಸುವ ನಾಗಕನ್ಯೆಯರನ್ನು ಕಂಡಾಗ ಮುಕ್ತಜೀವನಕ್ಕೂ ಮರಳಿ ಸಂಸಾರಕ್ಕೆ ಇಳಿಯಬೇಕೆನಿಸುವದು.

## ಬೆಳದಿಂಗಳಂಥ ಬಿಸಿಲು, ಚಳಿಯಿಲ್ಲದ ಚಂದ್ರಿಕೆ.

ಇಲ್ಲಿ ಹಗಲು ಸೂರ್ಯನ ಕಿರಣಗಳು ಬೀರುವದು ಬೆಳಕನ್ನು ಮಾತ್ರ. ಬಿಸಿಲಿನಲ್ಲಿ ಇಲ್ಲಿ ಎಂದೂ ಯಾರ ಮೈಯಿಂದಲೂ ಬೆವರು ಬಸಿಯುವದಿಲ್ಲ. ರಾತ್ರಿ ಚಂದ್ರ ಮಂಡಲದಿಂದ ಚಿಮ್ಮಿಬರುವದು ಚಂದ್ರ ಜ್ಯೋತ್ಸ್ನೆ ಮಾತ್ರ. ಚಳಿಯಲ್ಲ. ಕಂಗಳಿಗೆ ಅಪ್ಯಾಯನವೆನಿಸುವಂತೆ ಈ ಲೋಕದ ಅಂಗಳ ತುಂಬ ತಿಂಗಳ ಬೆಳಕು. ಅಂಗಗಳಿಗೆ ಹಿತವೆನಿಸುವಷ್ಟೇ ತಂಗಾಳಿ. ಮೈಗೆ ಬೆಚ್ಚಗೆನಿಸುವಷ್ಟೇ ಬಿಸಿಲು. ಅಲ್ಲಲ್ಲಿ ಸುಂದರ ಸರೋವರಗಳು, ಹೂವಿನ ಹಂದರಗಳುಳ್ಳ ಉಪವನಗಳು, ತಿಳಿನೀರಿನ ಹೊಳೆಗಳೂ,

ತಾವರೆ ಬನಗಳು, ತುಂಬಿಗಳ ಗೀತಗುಂಜನ, ಕೋಗಿಲೆಗಳ ಮಧುರಾಲಾಪದ ರಂಜನ, ಮೈತ್ರೇಯ, ಈ ಕೆಳಲೋಕಗಳಲ್ಲಿ ಹೊತ್ತು ಹೋದದ್ದೇ ಗೊತ್ತಾಗುವದಿಲ್ಲ. ಈ ನಾಗಲೋಕದ ನಾಗರಿಕರು ಉಟ್ಟ ಬಟ್ಟೆ ಸ್ವಚ್ಛ. ತೊಟ್ಟ ಆಭರಣ ಸುಂದರ, ಮೈಗಿಟ್ಟ ಲೇಪನ ಸುಗಂಧ ಸೂಸುತ್ತವೆ.

## ಪಾತಾಳದ ಪುಣ್ಯ, ಸಮಸ್ತ ಜಗದಾಧಾರನಾದ ಅನಂತ

ಈ ಸಪ್ತ ಪಾತಾಳ ಲೋಕಗಳ ಕೆಳಗೆ ಜಗದಾಧಾರವಾಗಿ ಶ್ರೀ ವಿಷ್ಣುವಿನ ಶೇಷ ರೂಪವಿದೆ. ಅವನ ಮಹಿಮೆಯನ್ನು ದೇವದಾನವರಲ್ಲಿ ಯಾರೂ ಬಣ್ಣಿಸಲಾರರು. ಅವನನ್ನು ಅನಂತನೆಂದು ಕರೆಯುತ್ತಾರೆ ಸಿದ್ಧ ತಾಪಸರೆಲ್ಲ. ಅವನ ಹೆಡೆಗಳು ಹತ್ತುನೂರು. ಅವುಗಳ ಮೇಲೆ ಸ್ವಸ್ತಿಕ ಚಿನ್ಹ. ಆ ಪಣೆ ಮಣಿಗಳ ರತ್ನಕಾಂತಿಗಳಿಂದ ದಶದಿಕ್ಕುಗಳೂ ಜ್ಯೋತಿರ್ಮಯವಾಗಿ ಜಗಮಗಿಸುತ್ತವೆ. ಅವನು ಉಟ್ಟದ್ದು ನೀಲಾಂಬರ, ತೊಟ್ಟದ್ದು ಬಿಳಿ ಹಾರಗಳು, ತಲೆಯ ಮೇಲೆ ಕಿರೀಟ, ಅವನು ಒಂದು ಕೈಯಲ್ಲಿ ನೇಗಿಲ ಹಿಡಿದು ಇನ್ನೊಂದು ಕೈಯಿಂದ ಒನಕೆ ಎತ್ತಿದ್ದಾನೆ. ಶೋಭೆಯು ಸ್ವಯಂ ಸಾಕಾರವಾಗಿ ಶರೀರಗೊಂಡು ಅವನ ಸೈವೆಗೈಯುತ್ತದೆ. ವಾರುಣೀದೇವಿ ಅವನ ಕೈಂಕರ್ಯಕ್ಕಾಗಿ ಕೈ ಕಟ್ಟಿಕೊಂಡು ನಿಂತಿದ್ದಾಳೆ. ಕಲ್ಪಗಳ ಕೊನೆಗಾಲದಲ್ಲಿ ಈ ಆದಿಶೇಷನ ಮುಖಗಳೆಲ್ಲ ನಂಜಿನ ನಾಲಿಗೆ ತೆರೆದು ಉರಿಯ ತೆರೆಗಳನ್ನು ಉಗುಳುತ್ತವೆ. ಆಗ ಸಂಕರ್ಷಣ ನಾಮಕವಾದ ರುದ್ರ ರೂಪವು ಇವನ ಬಾಯಿಂದ ಹೊರಹೊಮ್ಮಿ ಮೂರು ಲೋಕಗಳನ್ನೇ ಕಬಳಿಸುತ್ತದೆ. ಇಂಥ ಶೇಷ ದೇವನು ಅಶೇಷ ಭೂಮಂಡಲವನ್ನೆಲ್ಲ ತನ್ನ ತಲೆಯ ಮೇಲೆ ಕಿರೀಟದಂತೆ ಲೀಲೆಯಿಂದ ಧಾರಣ ಮಾಡಿ ಪಾತಾಲ ತಲದಲ್ಲಿ ರಾರಾಜಿಸುತ್ತಿದ್ದಾನೆ. ಈ ಆದಿಶೇಷನು ಎಂದಾದರೂ ಆಕಳಿಸಿದರೆ ಸಾಕು. ಶೈಲ ಸಮುದ್ರ ಸಹಿತವಾದ ಭೂಮಿಯೆಲ್ಲ ನಡುಗಿ ಭೂಕಂಪದಿಂದ ಜಗತ್ತಿನಲ್ಲಿ ಮಹಾ ಕೋಲಾಹಲವಾಗಿ ಹೋಗುತ್ತದೆ. ಅವನ ತಲೆಯ ಮೇಲೆ ಹದಿನಾಕು ಲೋಕಗಳ ಸಾಲು ಒಂದು ಮಾಲೆಯಿರಿಸಿದಂತಿದೆ. ಹಿಂದೆ ಇವನ ಆರಾಧನೆಯಿಂದ ಮಹರ್ಷಿ ಗರ್ಗಮುನಿಯು ಗ್ರಹನಕ್ಷತ್ರಾದಿ ಜ್ಯೋತಿರ್ಮಂಡಲದ ವಿಜ್ಞಾನವನ್ನೂ ಶಕುನ ಅಪಶಕುನ ಹೇಳುವ ಫಲಜ್ಯೋತಿಷ್ಯವನ್ನೂ ಕಲಿತು ಧನ್ಯನಾದನು.

## ಪಾಪಿಗಳಿಗಾಗುವ ಘೋರ ನರಕಗಳು

ವಿಪ್ರೋತ್ತಮ ! ಈ ನೆಲ ಹಾಗೂ ನೀರುಗಳ ಕೆಳಗೆ ನರಕಲೋಕವಿದೆ. ಘೋರಪಾತಕ ಗೈದ ಕ್ರೂರ ಪಾಪಿಗಳು ಬೀಳುವದು ಅದರಲ್ಲಿಯೇ. ದುಷ್ಟಚೇತನಗಳಿಗೆ ಯಮಯಾತನೆಗಳನ್ನು ಉಣ್ಣ ಹಚ್ಚುವ ಘೋರ ನರಕಗಳು ನಾನಾ ಬಗೆಯಾಗಿವೆ. ರೌರವ, ಸೂಕರ, ರೋಧ, ತಾಲ, ವಿಶಸನ, ಮಹಾಜ್ವಾಲ, ತಪ್ತಕುಂಭ, ಲವಣ, ವಿಲೋಹಿತ, ರುಧಿರಾಂಬ, ವೈತರಣಿ, ಕೃಮೀಶ, ಕೃಮಿಭೋಜನ, ಅಸಿಪತ್ರವನ, ಕೃಷ್ಣ ಲಾಲಾಭಕ್ಷ, ದಾರುಣ, ಪೂಯವಹ, ಪಾಪ, ವನ್ಹಿಜ್ವಾಲ, ಅಧಃಶಿಲಾ, ಸಂದಂಶ, ಕಾಲಸೂತ್ರ, ಅವೀಚಿ ಶ್ವಭೋಜನ, ಅಪ್ರತಿಷ್ಠ ಮತ್ತು ಅಪ್ರಚಿ ಎಂದು ಮುಂತಾಗಿ.

ಇವಲ್ಲದೇ ಯಮ ಶಾಸನದಂತೆ ವಿಧಿಸಲಾದ ಭಯಂಕರ ದಂಡ ಶಿಕ್ಷೆಗಳನ್ನು ಜೀವಿಗಳ ಅನುಭವಕ್ಕೆ ತರುವ ಇನ್ನೂ ಭೀಕರ ನರಕಗಳು ಉಂಟು. ಅಲ್ಲೆಲ್ಲ ಪಾಪಿಗಳನ್ನು ಬೆಂಕಿಯಿಂದ ಬೆದರಿಸಿ, ಅಸ್ತ್ರಗಳಿಂದ ಹೆದರಿಸಿ ಗೋಳಾಡಿಸುವ ಕ್ರೂರಕ್ರಮಗಳುಂಟು.

## ಯಾವ ಪಾಪಕ್ಕೆ ಯಾವ ನರಕ !

ಕೊಟ್ಟ ಸಾಕ್ಷಿ ನುಡಿದವ ರೌರವ ನರಕಕ್ಕೆ ಹೋಗುತ್ತಾನೆ. ಗರ್ಭಪಾತ ಮಾಡಿಸಿದವನೂ, ಹಸುವನ್ನು ಹಿಂಸಿಸಿದವನೂ, ಊರುಗಳನ್ನು ಹಾಳುಗೈದವನೂ ರೋಧ ನರಕದಲ್ಲಿ ಬೀಳುತ್ತಾರೆ. ಇನ್ನೊಬ್ಬರಿಗೆ ಉರಲು ಹಾಕಿದವ, ಸೆರೆಗುಡುಕ, ಬ್ರಾಹ್ಮಣರ ತಲೆಗಡುಕ, ಚಿನ್ನ ಕದ್ದವ, ಮತ್ತು ಇವರ ಸಂಗಡಿಗರೂ ಸೂಕರ ನರಕದಲ್ಲಿ ನವೆಯುವರು. ವೈಶ್ಯ ಕ್ಷತ್ರಿಯರ ಹಂತಕ, ಗುರುಪತ್ನಿಯೊಡನೆ ಸರಸಕ್ಕಿಳಿದವ, ಭಗಿನಿಯನ್ನು ಭೋಗಿಸಿದವ, ರಾಜ್ಯದ ರಾಯಭಾರಿಯನ್ನು ಕೊಂದವ ಇವರೆಲ್ಲ ತಪ್ತಕುಂಡ ಎಂಬ ನರಕದ ಕುದಿಯುವ ಕೊಪ್ಪರಿಗೆಯಲ್ಲಿ ಬಿದ್ದು ಬೇಯುವರು. ಹೆಣ್ಣುಗಳನ್ನು ಮಾರುವವರನ್ನೂ, ನಂಬಿದವರ ಕುತ್ತಿಗೆ ಕೊಯ್ಯುವವರನ್ನೂ, ತಪ್ತ ಲೋಹ ನರಕದಲ್ಲಿ ಕಾದ ಕಬ್ಬಿಣದ ಕಂಬಗಳಿಗೆ ಕಟ್ಟಿ ಹೊಡೆಯುತ್ತಾರೆ. ಸೊಸೆಯ ಜೊತೆಗೆ ಶೃಂಗಾರ ಮಾಡುವವನನ್ನು ಮಹಾಜ್ವಾಲ ನರಕದ ಉರಿಯ ತೆರೆಗಳಲ್ಲಿ ಬೇಯಿಸುವರು. ಗುರುವಿಗೆ ತಿರುಗಿ ಬಿದ್ದ ಎದುರಾಡಿದವರೂ, ಕೀಳು ಹೆಣ್ಣಿನೊಡನೆ ಕೂಡಿದವರೂ, ಲವಣ ನರಕದಲ್ಲಿ ಕೊಳೆಯುತ್ತಾರೆ. ಕಳವು ಮಾಡಿದವನು ವಿಲೋಹಿತ ನರಕಕ್ಕೆ ಬೀಳುತ್ತಾನೆ. ದೇವ ಬ್ರಾಹ್ಮಣರ ದ್ವೇಷ ಮಾಡುವವ, ಶ್ರಾದ್ಧ ಕರ್ಮಗಳನ್ನು ಅಳಿಯುವವನೂ ಕೃಮಿಭಕ್ಷ ನರಕಕ್ಕೆ ಎಳೆಸುತ್ತಾನೆ. ದುರುದ್ದೇಶದಿಂದ ಯಜ್ಞಮಾಡುವವ ಕೃಮೀಶ ನರಕದಲ್ಲಿ ಹುಳ ಹುಪ್ಪಡಿ ತಿಂದು ಗೋಳಾಡುತ್ತಾನೆ. ದೇವರಿಗೆ ನೈವೇದ್ಯ ತೋರಿಸದೇ ಪಿತೃತರ್ಪಣವೀಯದೇ, ಬಂದ ಅತಿಥಿಗಳನ್ನು ಬಿಟ್ಟು ತಾನೇ ಮೊದಲು ಊಟ ಮಾಡಿದರೆ ಲಾಲಾಭಕ್ಷ ಎಂಬ ನರಕವಾಗುವುದು. ಅದರಲ್ಲಿ ಬರೀ ಜೊಲ್ಲು ನೆಕ್ಕಿಯೇ ಜೀವಿಸಬೇಕಾಗುವದು. ದುಷ್ಟರಿಂದ ದುಡ್ಡನ್ನು ತೆಗೆದುಕೊಂಡರೆ ಅಧಿಕಾರವಿಲ್ಲದವರಿಂದ ಯಜ್ಞಮಾಡಿಸಿದರೆ, ಪಂಚಾಂಗ ಹೇಳಿ ಹಣ ಕೇಳಿದರೆ, ಅಧೋಮುಖ ನರಕವಾಗುತ್ತದೆ. ಬಳಗದವರನ್ನೆಲ್ಲ ಬಿಟ್ಟು ಏಕಾಕಿಯಾಗಿ ತಿಂದು ತೇಗಿದರೆ, ಉಪ್ಪು ಎಣ್ಣೆ, ಮಾಂಸ, ಅನ್ನ, ಆಹಾರ ಪದಾರ್ಥಗಳನ್ನು ಮಾರಾಟ ಮಾಡಿದರೆ, ಪೂಯವಹ ನರಕದಲ್ಲಿ ಯಮ ಯಾತನೆಯನ್ನು ಭೋಗಿಸಬೇಕಾಗುವದು. ಮೀನು ಹಿಡಿದು ಮಾರಿದರೆ, ವಿಷವಿಕ್ಕಿದರೆ, ಕುಂಟಲಗಿತ್ತಿತನ ಮಾಡಿದರೆ, ಮನೆ ಮಾರುಗಳಿಗೆ ಕೊಳ್ಳಿ ಕೊಟ್ಟರೆ, ಗೆಳೆಯರನ್ನು ಘಾತಗೈದರೆ, ಸೆರೆ ಮಾರಿದರೆ, ರುಧಿರಾಂಬ ಎಂಬ ಉಗ್ರ ನರಕದಲ್ಲಿ ಬೀಳಬೇಕಾಗುವದು. ಹೋಮಹವನಗಳಿಗೆ ವಿಘ್ನವೊಡ್ಡಿದವರೂ, ಗ್ರಾಮಧಾಮಗಳನ್ನು ಹಾಳುಗೆಡುವವರೂ ವೈತರಣಿ ಎಂಬ ನರಕಕ್ಕೆ ಹೋಗುವರು. ಹಸ್ತಮೈಥುನಾದಿ ದುಶ್ಚಟಗಳಿಗೆ ಬಲಿಯಾದವರೂ, ಶಾಸ್ತ್ರ ಸಂಪ್ರದಾಯಗಳನ್ನು ಮೀರಿ ನಡೆದವರೂ, ಕಪಟ ವಂಚನೆಗೈಯ್ಯುವವರೂ ಕೃಷ್ಣ ನರಕದಲ್ಲಿ ಬಿದ್ದು ಒದ್ದಾಡುವರು. ಕಾರಣವಿಲ್ಲದೆ ಕಾಡು ಕಡಿದು ಗಿಡಬಳ್ಳಿಗಳನ್ನು

ಹಾಳುಮಾಡುವವರಿಗೆ ಅಸಿಪತ್ರವನದಲ್ಲಿ ಘೋರಕಷ್ಟ ಕಾದಿದೆ. ಆಡು ಕುರಿಗಳ ವ್ಯಾಪಾರ ಮಾಡಿ ಕಟುಕರ ಕೈಗೆ ಕೊಡುವವರೂ, ಬೇಡರೂ ವನ್ಹಿಜ್ವಾಲ ನರಕದಲ್ಲಿ ಹುರುಪಳಿಸಿ ಹೋಗುವರು. ವ್ರತನಿಯಮಗಳನ್ನು ಬಿಟ್ಟು ವರ್ಣಾಶ್ರಮಾಚಾರಗಳಿಂದ ಭ್ರಷ್ಟರಾದವರು ಸಂದಂಶ ಎಂಬ ನರಕದಲ್ಲಿ ಕಚ್ಚಿಕೊಲ್ಲಲ್ಪಡುವರು. ಬ್ರಹ್ಮಚಾರಿಗೆ ಪಾಪವಾಸನೆಯಿಂದ ವೀರ್ಯಪಾತವಾದರೆ ಶ್ವಭೋಜನ ಎಂಬ ನರಕವಾಗುತ್ತದೆ.

ಇದರಂತೆ ಇನ್ನೂ ಸಹಸ್ರ ಸಹಸ್ರ ನರಕಗಳಿವೆ ಪಾಪಿಗಳಿಗೆ ದುಷ್ಕರ್ಮ ಗೈದದ್ದಕ್ಕೆ ಬಗೆ ಬಗೆಯ ಕಷ್ಟ ಯಾತನೆಗಳನ್ನು ನೀಡಲು. ಮೇಲೆ ಹೇಳಿದ್ದಲ್ಲದೆ ಇನ್ನೂ ಅನೇಕ ತರಹದ ಪಾಪಕೃತ್ಯ, ಅನ್ಯಾಯ ಮಾಡಿದವರಿಗೆ ಈ ಘೋರ ನರಕದಲ್ಲಿ ತಮ್ಮ ಪಾಪದ ಫಲವನ್ನು ಉಣ್ಣಬೇಕಾಗುವದು. ಪಾಪಿಗಳು ಈ ನರಕಗಳಲ್ಲಿ ನಿರ್ದಿಷ್ಟ ಕಾಲದವರಗೆ ಕಷ್ಟಪಟ್ಟು ಉಗ್ರಯಾತನೆಗಳನ್ನು ಭೋಗಿಸಿದ ಬಳಿಕ ಮತ್ತೆ ಗಿಡಗಂಟಿ, ಕ್ರಿಮಿಕೀಟ, ಜಲಚರ ಸ್ಥಲಚರ, ಪಶುಪಕ್ಷಿ, ಮಾನವ ದಾನವ, ದೇವಧಾರ್ಮಿಕ ಏನಾದರೂ ಆಗಿ ಜನಿಸುವರು. ಆಗ ಸತ್ಕರ್ಮ ಮಾಡಿದವರು ಒಳ್ಳೇ ದಾರಿ ಹಿಡಿದು ಉದ್ಧಾರ ಹೊಂದುವರು. ಪುನಃ ಪಾಪ ಕೃತ್ಯಮಾಡಿದವರು ಮತ್ತೆ ನರಕಗಳಲ್ಲಿ ಬೀಳುವರು.

## ನರಕದಿಂದ ಪಾರಾಗಲು ನರರಿಗಿರುವ ಏಕೈಕ ಉಪಾಯ

ಬೇರೆ ಬೇರೆ ಪಾಪಗಳಿಗೆ ಋಷಿಮುನಿಗಳು ವೇದಾರ್ಥಗಳನ್ನು ಪರ್ಯಾಲೋಚನೆ ಮಾಡಿ ಪ್ರಾಯಶ್ಚಿತ್ತಗಳನ್ನು ಹೇಳಿದ್ದಾರೆ. ಮನುಸ್ಮೃತಿಮುಂತಾದ ಶ್ರೌತ ಸ್ಮಾರ್ತ ಗ್ರಂಥಗಳಲ್ಲಿ ಅಪರೋಕ್ಷ ಜ್ಞಾನಿಗಳಾದ ಹಿಂದಿನ ಹಿರಿಯರು ಹೇಳಿದ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರೆ ಪಾಪದ ಹೊರೆ ಎಷ್ಟೋ ಕಡಿಮೆಯಾಗಿ ನರಕದ ಭಯವೂ ತಗ್ಗುತ್ತದೆ. ಆದರೆ ಮೈತ್ರೇಯ, ಪಾಪಕರ್ಮಗಳಿಂದ ನಿಜವಾದ ಪಶ್ಚಾತ್ತಾಪವಾದ ಜೀವಕ್ಕೆ ಸರಿಯಾದ ಪ್ರಾಯಶ್ಚಿತ್ತವೆಂದರೆ ಶ್ರೀ ವಿಷ್ಣುವಿನ ನಾಮ ಸ್ಮರಣವೊಂದೇ ಎಂದು ಹೇಳಬಹುದು. ಬೈಗುಬೆಳಗು, ಹಗಲು ಇರುಳುಗಳಲ್ಲೆಲ್ಲ ಹರಿನಾಮ ಸ್ಮರಣೆಯಿಂದ ಪಾಪದ ರಾಶಿಯೆಲ್ಲವೂ ಸವೆದು ಸಣ್ಣಾಗುತ್ತದೆ. ಬೆಟ್ಟದಷ್ಟು ಪಾತಕಮಾಡಿದ್ದರೂ ಹರಿಧ್ಯಾನದಿಂದ ಅದೆಲ್ಲ ಸುಟ್ಟು ಬೂದಿಯಾಗಿ ಮೋಕ್ಷ ಪಟ್ಟಕ್ಕೆ ಮಾನವ ಅರ್ಹನಾಗುತ್ತಾನೆ. ವಾಸ್ತವಿಕವಾಗಿ ಇಂಥ ಹರಿಭಕ್ತರಿಗೆ ಸ್ವರ್ಗಾದಿ ಲೋಕಗಳೂ ಕೂಡ ಅಡ್ಡಿ ಆತಂಕವೆನಿಸುತ್ತವೆ. ಮತ್ತೆ ಹುಟ್ಟು ಸಾವುಗಳ ಸೆಳವಿನಲ್ಲಿ ತಳ್ಳುವ, ಸ್ವರ್ಗಪದವೆಲ್ಲಿ! ಶಾಶ್ವತ ಮೋಕ್ಷವನ್ನು ಕೊಡುವ 'ವಾಸುದೇವ' ನಾಮದ ಜಪವೆಲ್ಲಿ! ಆದುದರಿಂದ ವಿಷ್ಣುವಿನ ನಾಮವನ್ನು ನಿರಂತರ ಭಜನ ಮಾಡುವದೇ, ಈ ನರಕಗಳ ನೋವು ನರಳಾಟಗಳಿಂದ ಪಾರಾಗಲಿಕ್ಕೆ ನರಮಾತ್ರರಿಗೆ ಇರುವ ಏಕೈಕ ಉಪಾಯವಾಗಿದೆ.

## ಖಗೋಲದ ಖಚಿತ ವಿಜ್ಞಾನ

**ಮೈತ್ರೇಯ -** ಮಹಾಮುನಿಗಳೇ ! ಭುವರ್ಲೋಕ ಮೊದಲಾದ ಊರ್ಧ್ವಲೋಕಗಳ ಸ್ಥಿತಿಮಿತಿ, ಪ್ರಮಾಣ ಪರಿಮಾಣಗಳನ್ನು ತಮ್ಮ ಬಾಯಿಂದ ಕೇಳಬೇಕೆಂದು ನನ್ನ ಬಯಕೆ. ನನ್ನ ಜಿಜ್ಞಾಸೆಯನ್ನು ತಾವು ತಣಿಸಬೇಕು.

**ಪರಾಶರ** - ಸೂರ್ಯನ ಬೆಳಕು ಬೀಳುವವರೆಗೆ, ಚಂದ್ರನ ತಿಂಗಳ ಕಾಂತಿ ಸೂಸುವವರೆಗೆ ಭೂಮಂಡಲದ ವ್ಯಾಪ್ತಿ. ಭುವರ್ಲೋಕದ ಹರವು ತಿರುವುಗಳೂ ಕೂಡ ಭೂಲೋಕದಷ್ಟೇ. ನೆಲದಿಂದ ಒಂದು ಲಕ್ಷ ಯೋಜನದ ಮೇಲೆ ಸೂರ್ಯಮಂಡಲ. ಅದರಿಂದ ಲಕ್ಷ ಯೋಜನ ಅಂತರದಲ್ಲಿ ಚಂದ್ರ ಮಂಡಲ ಇದೆ. ಚಂದ್ರನಿಂದ ನೂರು ಸಾವಿರಯೋಜನೆಗಳ ಮೇಲೆ ನಕ್ಷತ್ರ ಮಂಡಲವು ಬೆಳಗುತ್ತದೆ. ನಕ್ಷತ್ರ ಮಂಡಲದಿಂದ ಎರಡು ಲಕ್ಷ ಯೋಜನೆಗಳ ಅಂತರದ ಆಚೆ ಬುಧ, ಅವನಿಂದ ಮತ್ತೆ ಅಷ್ಟೇ ಅಂತರದ ಮೇಲೆ ಶುಕ್ರ, ಶುಕ್ರನ ಮೇಲೆ ಅಷ್ಟೇ ದೂರದಲ್ಲಿ ಗುರು, ಮತ್ತೆರಡು ಲಕ್ಷ ಯೋಜನೆಗಳ ಮೇಲೆ ಶನಿ, ಅನಂತರ ಮತ್ತೊಂದು ಲಕ್ಷ ಯೋಜನ ಅವಕಾಶದಲ್ಲಿ ಸಪ್ತರ್ಷಿ ಮಂಡಲ, ಅವರ ಮೇಲೆ ಒಂಭತ್ತು ಸಾವಿರ ಯೋಜನೆಗಳ ಆಚೆ ಜ್ಯೋತಿಶ್ಚಕ್ರದ ಹೊಕ್ಕಳದಂತಿರುವ ಧ್ರುವ ಮಂಡಲವು ಬೆಳಗುತ್ತಲಿವೆ.

## ಮುಗಿಲಿನ ಏಣಿ, ಲೋಕಗಳ ಶ್ರೇಣಿ

ಧ್ರುವಲೋಕದಿಂದ ಕೋಟಿ ಯೋಜನ ಎತ್ತರದಲ್ಲಿ ಮಹರ್ಲೋಕವಿದೆ. ಅಲ್ಲಿ ಪ್ರಳಯ ಕಾಲದವರೆಗೆ ಬದುಕಿ ಇರುವ ಭೃಗು ಮುನಿಯೇ ಮೊದಲಾದ ಧೀರ್ಘ ಜೀವಿಗಳಾದ ಸಿದ್ಧರು ವಾಸಿಸುತ್ತಾರೆ. ಅದರ ಮೇಲೆ ಮತ್ತೆರಡು ಕೋಟಿ ಯೋಜನ ಮೇಲಕ್ಕೆ ಹೋದರೆ ಜನೋಲೋಕವಿದೆ. ಅಲ್ಲಿ ಬ್ರಹ್ಮದೇವರ ಮಾನಸ ಪುತ್ರರಾದ ಸನಕಾದಿಗಳು ವಸತಿ ಹಾಕಿದ್ದಾರೆ. ಅಲ್ಲಿಂದ ಎಂಟು ಕೋಟಿ ಯೋಜನದ ಮೇಲೆ ತಪೋಲೋಕವಿದೆ. ಅಲ್ಲಿ ವೈರಾಜ ಎಂಬ ಹೆಸರಿನ ದೇವಗಣವು ಬೀಡುಬಿಟ್ಟಿದೆ. ಅಲ್ಲಿಂದ ಹನ್ನೆರಡು ಕೋಟಿ ಯೋಜನ ಎತ್ತರದ ಮೇಲೆ ಸತ್ಯಲೋಕವುಂಟು. ಅದಕ್ಕೆ ಬ್ರಹ್ಮಲೋಕ ಎಂದೂ ಹೆಸರು. ಎಂದೂ ಸಾಯದಿರುವ ಅಮರ ಜೀವಿಗಳೆಲ್ಲ ಅಲ್ಲಿ ನೆಲೆನಿಂತಿವೆ.

## ಕೃತಕ - ಅಕೃತಕ - ಕೃತಕಾಕೃತಕ ಲೋಕಗಳು

ನೆಲದಲ್ಲಿ ನಿಂತ ಜೀವ ಜಂತುಗಳಿಗೆ ನಡೆದಾಡಲಿಕ್ಕೆ ಬರುವ ಸ್ಥಳಕ್ಕೆ ಭೂಲೋಕ ಎನ್ನುತ್ತಾರೆ. ಈ ಪೃಥ್ವೀ ಮಂಡಲ ಮತ್ತು ಸೂರ್ಯ ಮಂಡಲಗಳ ನಡುವಿನ ಲೋಕವೇ ಭುವರ್ಲೋಕ. ಇಲ್ಲಿ ಇರುವವರು ಸಿದ್ಧರು ಮತ್ತು ಮಹಾಮುನಿಗಳು. ಸೂರ್ಯಗ್ರಹ ಹಾಗೂ ಧ್ರುವ ನಕ್ಷತ್ರಗಳ ನಡುವಿನ ಹದಿನಾಕು ಲಕ್ಷ ಯೋಜನಗಳ ಅಂತರ ಅಥವಾ ಆಕಾಶಾವಕಾಶವನ್ನೇ ಸ್ವರ್ಲೋಕ ಎಂದು ಹೆಸರಿಸಿದ್ದಾರೆ. ಭೂಃ ಭುವಃ, ಸ್ವಃ ಇವು ಮೂರು ಲೋಕಗಳು ಕೃತಕವೆಂದೂ ಜನ, ತಪಃ, ಸತ್ಯ ಈ ಮೂರು ಲೋಕಗಳು ಅಕೃತಕವೆಂದು ಹೇಳುತ್ತಾರೆ. ನಡುವಿರುವದೇ ಮಹರ್ಲೋಕ. ಇದಕ್ಕೆ ಕೃತಕಾಕೃತಕ ಎಂದು ಕರೆಯುತ್ತಾರೆ. ಕಲ್ಪಾಂತ ಕಾಲದಲ್ಲಿ ಇಲ್ಲಿಯ ಜನರು ಮಾತ್ರ ಸಾಯುತ್ತಾರೆ. ಈ ಲೋಕಕ್ಕೆ ಏನೂ ಆಗುವುದಿಲ್ಲ. ಆದುದರಿಂದಲೇ ಇದು ಕೃತಕಾಕೃತಕ.

**ಮೈತ್ರೇಯ** - ಹೀಗೆ ಮೇಲೆ ಏಳು ಕೆಳಗೆ ಏಳು ಒಟ್ಟು ಹದಿನಾಕು ಲೋಕಗಳಿಂದ ಒಡಗೂಡಿದ ಈ ಬ್ರಹ್ಮಾಂಡವು ಬಳವಲ ಕಾಯಿಯಂತೆ ಮೇಲೆ ಕೆಳಗೆ ಸುತ್ತೆಲ್ಲ ಪರಟೆ ಅಥವಾ ತೆಂಗಿನ ಚಿಪ್ಪಿನಂತಹ ದಪ್ಪ ತೊಗಟೆ (ಕಟಾಹ) ಯಿಂದ ವೇಷ್ಟಿತವಾಗಿದೆ. ಈ ಇಡೀ ಬ್ರಹ್ಮಾಂಡವೆಲ್ಲ ತನ್ನ ಸುತ್ತ ಹತ್ತು ಪಟ್ಟು ಹೆಚ್ಚಾದ ನೀರಿನಿಂದ ಆವರಿಸಲ್ಪಟ್ಟಿದೆ.

ಆ ನೀರು ಅಗ್ನಿಯ ಆವರಣದಿಂದ, ಅಗ್ನಿ ವಾಯುವಿನಿಂದ, ವಾಯು ಆಕಾಶದಿಂದ, ಆಕಾಶವು ಭೂತಕಾರಣವಾದ ಅಹಂಕಾರದಿಂದ, ಅಹಂಕಾರವು ಮಹತ್ತತ್ವದಿಂದ, ಮಹತ್ತತ್ವವು ಪ್ರಧಾನದಿಂದ, ಆವೃತ್ತವಾಗಿದೆ. ಈ ಪ್ರಧಾನ ತತ್ವವೇ ಜಗತ್ತಿಗೆ ಕಾರಣವಾದ ಅಪಾರ ಪ್ರಕೃತಿಯೆನಿಸುತ್ತದೆ. ಆ ಪ್ರಧಾನವನ್ನು ಸ್ವಪ್ರಕಾಶನಾದ ಪುರುಷ ವ್ಯಾಪಿಸಿದ್ದಾನೆ. ಈ ಪ್ರಧಾನ, ಪ್ರಕೃತಿ, ಪುರುಷ ಎಲ್ಲರೂ ವಿಷ್ಣು ಶಕ್ತಿಯಿಂದ ಆವರಿಸಲ್ಪಟ್ಟಿದ್ದಾರೆ. ಪ್ರಲಯ ಕಾಲದಲ್ಲಿ ಈ ಎಲ್ಲ ತತ್ವಗಳೂ ವಿಶಕಲಿತವಾಗಿ ಇರಲಿಕ್ಕೂ, ಸ್ಥಿತಿ ಕಾಲದಲ್ಲಿ ಅವೆಲ್ಲವುಗಳು ಸಮುಚಿತ ಹೊಂದಾಣಿಕೆಗೂ, ಸೃಷ್ಟಿಕಾಲದಲ್ಲಿ ಕಾರ್ಯೋನ್ಮುಖ ಪ್ರಕ್ಷೋಭಣೆಗೂ ಶ್ರೀ ವಿಷ್ಣುವಿನ ಪರಾಶಕ್ತಿಯೇ ಮುಖ್ಯ ಮೂಲ ಕಾರಣವಾಗಿದೆ.

## ಸೂರ್ಯ ಸಿದ್ಧಾಂತ

ಮೈತ್ರೇಯ - ನಾನು ಈ ವರೆಗೆ ನಿನಗೆ ಬ್ರಹ್ಮಾಂಡದ ಸ್ಥಿತಿಗತಿಗಳ ಬಗೆಗೆ ಹೇಳಿದೆ. ಈಗ ಸೂರ್ಯನೇ ಮೊದಲಾದ ಗ್ರಹಗಳ ಸ್ಥಿತಿ, ಗತಿ ಮಿತಿಗಳ ವಿಷಯವನ್ನು ನಿರೂಪಿಸುವೆ. ಹಗಲು ಇರುಳುಗಳ ವ್ಯವಸ್ಥೆಗೆ ಸೂರ್ಯನೇ ಕಾರಣ. ವಾಸ್ತವಿಕವಾಗಿ ವಿಚಾರಿಸಿದರೆ ಸೂರ್ಯ ದೇವನಿಗೆ ಉದಯವೂ ಇಲ್ಲ. ಅಸ್ತವೂ ಇಲ್ಲ. ಯಾವ ಲೋಕಕ್ಕೆ ಅವನು ಮೊದಲು ಕಣ್ಣಿಗೆ ಕಾಣುವನೋ ಆಗ ಸೂರ್ಯ ಉದಯನಾದ ಎನ್ನುವರು ಅವನು ಕಣ್ಮರೆಯಾದಾಗ ಅಸ್ತಮನ ಹೊಂದಿದ ಎಂದು ಹೇಳುವರು. ಈ ಉದಯಾಸ್ತಗಳೆರಡೂ ನೋಡುವವರ ದೃಷ್ಟಿನಿಷ್ಠ. ಸೂರ್ಯ ನಿಷ್ಠವಲ್ಲ. ಆ ಸೂರ್ಯಗ್ರಹ ನಿಂತಲ್ಲೇ ನಿಂತಿದೆ.

''ನೈವಾಸ್ತಮನಮರ್ಕಸ್ಯ ನೋದಯಃ ಸರ್ವದಾ ಸತಃ ।
ಉದಯಾಸ್ತಮನಾಖ್ಯಂ ಹಿ ದರ್ಶನಾದರ್ಶನಂ ರವೇಃ ॥

ಎಲ್ಲ ದ್ವೀಪಗಳಲ್ಲಿಯೂ ಮಧ್ಯಾನ್ಹ ಮತ್ತು ಮಧ್ಯರಾತ್ರಿಯ ಸಮಯಗಳಲ್ಲಿ ಸೂರ್ಯನು ಮಧ್ಯ ಆಕಾಶದಲ್ಲಿ ಸಂಮುಖನಾಗಿ ಬೆಳಗುತ್ತಿರುತ್ತಾನೆ. ಅಂದರೆ ಯಾವ ದ್ವೀಪದಲ್ಲಿ ಮಧ್ಯಾಹ್ನದಲ್ಲಿ ಸೂರ್ಯನು ಆಕಾಶದ ನಟ್ಟುನಡುವೆ ಬೆಳಗುವನೋ ಅದೇ ರೇಖಾಂಶದಲ್ಲಿರುವ ವಿರುದ್ಧ ದ್ವೀಪದಲ್ಲಿ ಮಧ್ಯರಾತ್ರಿಯ ಸಮಯವಾಗಿರುತ್ತದೆ. ಇದರಂತೆ ಒಂದು ದ್ವೀಪದಲ್ಲಿ ಉದಯವಾದಾಗ ಅದರ ಸಮರೇಖೆಯ ವಿರುದ್ಧ ಲೋಕದಲ್ಲಿ ಸೂರ್ಯಾಸ್ತವಾಗಿರುತ್ತದೆ. ಹೀಗೆ ಸೂರ್ಯೋದಯ ಸೂರ್ಯಾಸ್ತಗಳು ಭಿನ್ನಭಿನ್ನ ದ್ವೀಪಗಳಲ್ಲಿ ಎದುರು ಬದುರಾಗಿಯೇ ನಡೆಯುತ್ತವೆ.

## ಸೂರ್ಯನ ಪಯಣ ಕಾಲಗಣನೆ

ಸೂರ್ಯನು ಯಾವಾಗಲೂ ಒಂದೇ ವಿಧವಾದ ದಾರಿಯಿಂದ ಸಾಗುತ್ತಾನೆ. ಒಂದು ದಿನದಲ್ಲಿ ಹನ್ನೆರಡು ರಾಶಿಗಳ ಭೋಗಮಾಡುತ್ತಾನೆ. ಹಗಲು, ಆರು ರಾಶಿ, ರಾತ್ರಿ ಆರು ರಾಶಿ. ದಿನರಾತ್ರಿಗಳು ಹೆಚ್ಚು ಕಡಿಮೆಯಾಗುವದು ಸೂರ್ಯನ ಈ ರಾಶಿ ಚಂಕ್ರಮಣದಪರಿಣಾಮವೇ.

**೧೫ ನಿಮಿಷಗಳೆಂದರೆ = ೧ ಕಾಷ್ಠಾ, ೩೦ ಕಾಷ್ಠಾ = ೧ ಕಲಾ, ೩೦ ಕಲಾ = ೧ ಮುಹೂರ್ತ, ೩೦ ಮುಹೂರ್ತ = ೧ ದಿನ.**

ಸೂರ್ಯೋದಯದಿಂದ ಮೂರು ಮುಹೂರ್ತದ ಸಮಯ ಪ್ರಾತಃಕಾಲ, ಇದೇ ದಿನದ ಐದನೇ ಭಾಗವಾಗಿರುತ್ತದೆ. ಅನಂತರ ಮೂರು ಮುಹೂರ್ತ 'ಸಂಗವ' ಅನಂತರ ಮೂರು ಮುಹೂರ್ತ ಮಧ್ಯಾಹ್ನ. ಆ ಮೇಲೆ ಮೂರು ಮುಹೂರ್ತದ 'ಅಪರಾಹ್ನ' ಅನಂತರ 'ಸಾಯಾಹ್ನ'. ಇದೂ ಮೂರು ಮುಹೂರ್ತ ಸಮಯದ್ದಿರುವದು. ಒಂದು ಹಗಲಿನಲ್ಲಿ ಹದಿನೈದು ಮುಹೂರ್ತಗಳಿರುವವು.

ವಿಷುವ ಕಾಲದಲ್ಲಿ ಒಂದು ಹಗಲಿನಲ್ಲಿ ಸರಿಯಾಗಿ ಹದಿನೈದು ಮುಹೂರ್ತಗಳಿರುತ್ತವೆ. ಆದರೆ ದಕ್ಷಿಣಾಯನ ಉತ್ತರಾಯಣ ಕಾಲದಲ್ಲಿ ಇದರಲ್ಲಿ ಕ್ರಮೇಣ ಹೆಚ್ಚು ಕಡಿಮೆಯಾಗುವದು. ಉತ್ತರಾಯಣದಲ್ಲಿ ಹಗಲು ರಾತ್ರಿಯ ಕೆಲವು ಕಲೆಗಳನ್ನು ನುಂಗಿ ದೊಡ್ಡದಾದರೆ, ದಕ್ಷಿಣಾಯಣದಲ್ಲಿ ರಾತ್ರಿ ಹಗಲಿನ ಕೆಲ ಮುಹೂರ್ತಗಳನ್ನು ಕಸಿದು ಕೊಬ್ಬುತ್ತದೆ. ಶರತ್ ಮತ್ತು ವಸಂತ ಋತುಗಳ ನಡುವೆ ಸೂರ್ಯನು ತುಲಾ ಅಥವಾ ಮೇಷ ರಾಶಿಗೆ ಇದ್ದಾಗ ವಿಷುವ ಕಾಲವು ಪ್ರಾಪ್ತವಾಗುತ್ತದೆ. ಆಗ ದಿನ ರಾತ್ರಿಗಳು ಸಮನಾಗಿರುತ್ತವೆ. ಸೂರ್ಯನ ಕರ್ಕ ರಾಶಿಗೆ ಬಂದಾಗ ದಕ್ಷಿಣಾಯನ, ಮಕರ ರಾಶಿಗೆ ಬಂದಾಗ ಉತ್ತರಾಯಣ ಎಂದು ಹೇಳುತ್ತಾರೆ.

## ವಿಷುವ ಕಾಲ

ಮೈತ್ರೇಯ, ಮೂವತ್ತು ಮುಹೂರ್ತಗಳು ಕೂಡಿ ಒಂದು ಹಗಲಿರುಳು ಆಗುತ್ತದೆ ಎಂದು ಈ ಮೊದಲು ನಾನು ತಿಳಿಸಿದ್ದೆ. ಇಂಥ ಹಗಲಿರುಳು ಹದಿನೈದಾದರೆ ಒಂದು ಪಕ್ಷವೆನಿಸುವದು. ಎರಡು ಪಕ್ಷವಾದರೆ ಒಂದು ತಿಂಗಳು, ಎರಡು ತಿಂಗಳು ಕೂಡಿ ಒಂದು ಋತು. ಮೂರು ಋತು ತಿರುಗಿದರೆ ಒಂದು ಅಯನ, ಎರಡು ಅಯನ ಕೂಡಿ ಒಂದು ವರ್ಷವಾಗುತ್ತದೆ. ಸೂರ್ಯನು ಕೃತ್ತಿಕಾ ನಕ್ಷತ್ರದ ಆದಿ - ಮೇಷ ರಾಶಿಯ ಕೊನೆಯ ಭಾಗದಲ್ಲಿಯೂ ಮತ್ತು ಚಂದ್ರನು ವಿಶಾಖಾ ನಾಕನೇ ಅಂಶ ವೃಶ್ಚಿಕದ ಆರಂಭದಲ್ಲಿದ್ದಾಗಲೂ ಮತ್ತು ಸೂರ್ಯನು ವಿಶಾಖಾದ ಮೂರನೇ ಭಾಗ ತುಲಾದ ಅಂತಿಮ ಭಾಗವನ್ನು ಭೋಗಿಸುತ್ತಿರುವಾಗ, ಚಂದ್ರನು ಕೃತ್ತಿಕೆಯ ಪ್ರಥಮ ಭಾಗ ಮೇಷರಾಶಿಯ ಕೊನೆಯಲ್ಲಿದ್ದ ಸಮಯಕ್ಕೆ ವಿಷುವಕಾಲ ಎನ್ನುವರು. ಇಂದು ಅತ್ಯಂತ ಪವಿತ್ರವಾದ ಪರ್ವಕಾಲವಾಗಿದ್ದು ಈಗ ದೇವ, ಬ್ರಾಹ್ಮಣ, ಮತ್ತು ಪಿತೃಗಳನ್ನು ಉದ್ದೇಶಿಸಿ ಮಾಡಿದ ದಾನವು ಅನಂತ ಪುಣ್ಯ ಫಲವನ್ನು ಕೊಡುತ್ತದೆ. ಯಜ್ಞಯಾಗಾದಿಗಳನ್ನು ಮಾಡುವವರು ಕಲಾ, ಕಾಷ್ಠಾ ಮುಹೂರ್ತ, ದಿನ, ರಾತ್ರಿ, ಪಕ್ಷ ಮುಂತಾದ ಕಾಲಕಲೆಗಳನ್ನು ಸರಿಯಾಗಿ ಎಣಿಸಿ ಗುಣಿಸಿ ಉತ್ತಮ ಮುಹೂರ್ತವನ್ನು ನಿರ್ಧರಿಸಬೇಕಾಗುತ್ತದೆ. ರಾಕಾ, ಅನುಮತಿ ಎಂದು ಹುಣ್ಣಿಮೆ ಎರಡು ಬಗೆಯಾಗಿದೆ. ಕುಹೂ, ಸಿನೀವಾಲೀ ಎಂದು ಅಮಾವಾಸ್ಯೆಯೂ ಇಬ್ಬಗೆಯಾಗಿದೆ. ಷೋಡಶಕಲೆಗಳಿಂದ ಪೂರ್ಣನಾದ ಚಂದ್ರನು ಉದಿಸಿದರೆ ಆ ಹುಣ್ಣಿವೆ 'ರಾಕಾ' ಎನಿಸುತ್ತದೆ. ಒಂದು ಕಲೆ ಕಡಿಮೆ ಇದ್ದರೆ ಅದು ಅನುಮತಿ

ಪೂರ್ಣಿಮಾ. ಇವರಂತೆ ಚಂದ್ರನ ಒಂದು ಕಲೆಯ ದರ್ಶನವಾಗುವ ಅಮಾವಾಸ್ಯೆ ಸಿನೀವಾಲಿ' ಇದು ಚತುರ್ದಶೀಯುಕ್ತವಾಗಿರುತ್ತದೆ. ಸರ್ವಥಾ ಚಂದ್ರದರ್ಶನ ವಿಲ್ಲದಿದ್ದರೆ ಅಂಥ ಅಮಾವಾಸ್ಯೆಗೆ ಕುಹೂ ಎಂದು ಕರೆಯುವರು.

## ''ತದ್ವಿಷ್ಣೋಃ ಪರಮಂ ಪದಂ''

ಸಪ್ತರ್ಷಿ ಮಂಡಲದಿಂದ ಉತ್ತರಕ್ಕೆ ಬಹು ಎತ್ತರದಲ್ಲಿ ಶ್ರೀ ವಿಷ್ಣುವಿನ ಮೂರನೆಯ ದಿವ್ಯಧಾಮವಿದೆ. ಈ ತೇಜೋಮಯವಾದ ವಿಷ್ಣು ಪದವನ್ನು ಆಧರಿಸಿಗೊಂಡು ಧ್ರುವಮಂಡಲವಿದೆ. ಇದನ್ನು ಆಶ್ರಯಿಸಿ ನಕ್ಷತ್ರಮಂಡಲ, ಅದನ್ನಾಧರಿಸಿ ಮೇಘಮಂಡಲ, ಅದನ್ನಾಶ್ರಯಿಸಿ ವೃಷ್ಟಿ ಆಗುತ್ತದೆ. ಹೀಗೆ ಜಗತ್ತಿನ ವೃಷ್ಟಿ ತುಷ್ಟಿಗಳಿಗೆಲ್ಲ ವಿಷ್ಣುಪದವೇ ಮುಖ್ಯ ಕಾರಣ. ಈ ವಿಷ್ಣುಪದದಿಂದಲೇ ಗಂಗೆಯ ಉಗಮ. ವಿಷ್ಣುವಿನ ಎಡಕಾಲಿನ ಬೆರಳು ತುದಿಯಿಂದ ಉರುಳಿದ ಈ ನೀರನ್ನು ಧ್ರುವ ತನ್ನ ತಲೆಯಿಂದ ಹೊತ್ತಿದ್ದಾನೆ. ಸಪ್ತರ್ಷಿಗಳು ತಮ್ಮ ಜಡೆಗೊಡಗಳಿಂದ ಈ ಪುಣ್ಯ ಜಲವನ್ನು ಎತ್ತಿದ್ದಾರೆ. ಈ ದಿವ್ಯ ತೊರೆಯ ತೆರೆ ತುಂತುರುಗಳು ತಗಲಿದಾಗ ಕ್ಷಯ ಹಿಡಿದ ಚಂದ್ರಮಂಡಲದ ಕಾಂತಿ ಕೊನರಿತು. ಮೊದಲಿಗಿಂತ ಹೆಚ್ಚಿನ ಚೆಲುವು ಚಿಗುರಿತು. ಇಂತು ಚಂದ್ರಲೋಕವನ್ನು ತೊಳೆದು ತುಳುಕಿದ ಆ ತೀರ್ಥ ಜಲವು ಮೇರುಗಿರಿಯ ನೆತ್ತಿಗೆ ಧೀಂಕಿಟ್ಟಿತು. ಅಲ್ಲಿಂದ ಅಲಕನಂದಾ, ಸೀತಾ, ಚಕ್ಷು, ಭದ್ರಾ ಎಂದು ನಾಕು ನಾಲೆಗಳಾಗಿ ಹರಿದಳು ದೇವಗಂಗೆ. ಅದರಲ್ಲಿ ಅಲಕನಂದೆಯನು ಭಗವಾನ್ ಶಂಕರನು ನೂರುವರ್ಷ ತನ್ನ ತಲೆಯಲ್ಲಿ ಇರಿಸಿ ಧನ್ಯನಾದ. ಶಿವ ಜಟಾಜೂಟದಿಂದ ಹೊರಬಿದ್ದ ಆ ಅಲಕನಂದೆಯ ಒಂದು ಧಾರೆಯು ಪಾತಾಳದವರೆಗೂ ಹರಿದು, ಅಲ್ಲಿ ಉರಿದು ಬಿದ್ದ ಸಗರ ಕುಮಾರರ ಬೂದಿ ಬೀದಿಯ ಮೇಲೆ ಹಾದು ಹೋಯಿತು. ಎಲುವು ಬೂದಿಗಳು ಮಂದಾಕಿನಿಯ ನೀರಿನಲ್ಲಿ ನೆನ್ದು ಮಿಂದ ಮಾತ್ರಕ್ಕೆ ಅರವತ್ತುಸಾವಿರ ಸಗರ ಕುಮಾರರೆಲ್ಲರೂ ಸ್ವರ್ಗಕ್ಕೆ ನಡೆದರು. ಈ ದೇವ ನದಿಯ ಸ್ನಾನದಿಂದ ಪುಣ್ಯ, ಪಾನದಿಂದ ತೃಪ್ತಿ. ತರ್ಪಣದಿಂದ ಪಿತೃಗಳಿಗೆ ಶತಾನಂದ ಪ್ರಾಪ್ತಿ. ಇದರ ದಂಡೆಯ ಮೇಲೆ ನಿಂತು ಮಾಡಿದ ಹಿರಿಯ ಧ್ಯಾನದಿಂದಂತೂ ಮುಕ್ತಿ. ಸಾವಿರಾರು ಮೈಲುಗಳಾಚೆ ನಿಂತು. ''ಗಂಗಾ ಗಂಗಾ'' ಎಂದು ಕೂಗಿದರೂ ಸಾಕು ಎಲ್ಲ ಪಾಪಗಳೂ ಬಿಟ್ಟು ಹೋಗುತ್ತವೆ. ಇದ್ದರೆ ಸುಟ್ಟು ಹೋಗುತ್ತವೆ. ಇಂಥ ಗಂಗೆ ಹುಟ್ಟಿದ್ದು ಹರಿಯ ಮೂರನೇ ಸ್ಥಾನವಾದ ಆ ವಿಷ್ಣು ಪದದಿಂದಲೇ.

## ನಕ್ಷತ್ರ ಗುಚ್ಛ, ಶಿಂಶುಮಾರ ಪುಚ್ಛ

ಮೈತ್ರೇಯ, ಮೇಲಿನ ನೀಲ ಮುಗಿಲಿನಲ್ಲಿ ನಾರಾಯಣನ ನಕ್ಷತ್ರ ರೂಪವೊಂದಿದೆ. ಚೇಳಿನ ಆಕಾರದ ಚಿಕ್ಕದೊಡ್ಡ ಚಿಕ್ಕೆಗಳ ಚಂದವಾದ ಆ ಗುಚ್ಛಕ್ಕೆ ಶಿಂಶುಮಾರ ಚಕ್ರ ಎಂದು ಹೆಸರು. ಈ ಚಿಕ್ಕೆಗಳ ಚೇಳಿನ ಕೊಂಡಿಯ ತಾಣವೇ ಧ್ರುವನ ನೆಲೆ. ಇದರ ಮೇಲಿಂದಲೇ ನಾವು ತಿಳಿಯಬಹುದು ಅವನ ಭಗವದ್ಭಕ್ತಿಯ ಬೆಲೆ. ಧ್ರುವ ತಿರುಗಿದಾಗ ರವಿ ಚಂದ್ರರು ತಿರುಗುತ್ತಾರೆ. ಅದರಿಂದ ಸಮಗ್ರ ನಕ್ಷತ್ರ ಮಂಡಲವೇ ಸುತ್ತ

ತೊಡಗುತ್ತದೆ. ಸೂರ್ಯ, ಚಂದ್ರ, ಚಿಕ್ಕೆ, ಉಳಿದೆಲ್ಲ ಗ್ರಹ, ನಕ್ಷತ್ರ, ನೀಹಾರಿಕೆಗಳೆಲ್ಲವೂ ವಾಯು ಸೂತ್ರದಿಂದ ಧ್ರುವ ಮಂಡಲಕ್ಕೆ ಬಿಗಿಯಲ್ಪಟ್ಟಿವೆ. ಈ ಶಿಂಶುಮಾರ ಚಕ್ರದ ಹೃದಯದ ಸ್ಥಾನ ನಾರಾಯಣನ ನೆಲೆಯಾಗಿದೆ. ಅವನೇ ಇದಕ್ಕೆ ಆಧಾರ. ಉತ್ತಾನ ಪಾದನ ಮಗ ಧ್ರುವ ಘೋರ ತಪಂಗೈದು ಈ ಚಿಕ್ಕೆಯ ಗೊಂಚಲಿನ ಅಂಚಿನಲ್ಲಿ ಸ್ಥಾನ ಪಡೆದಿದ್ದಾನೆ. ಶಿಂಶುಮಾರ ಚಕ್ರಕ್ಕೆ ಆಧಾರ ಭೂತನಾದ ನಾರಾಯಣನೇ ಶಿಶುಧ್ರುವನಿಗೂ ಆಧಾರ. ಆ ಧ್ರುವ ಸೂರ್ಯನಿಗೆ ಆಧಾರ. ಅವನಲ್ಲಿ ಭಗವಂತನ ಭಾನು ಎಂಬ ರೂಪ ಸನ್ನಿಹಿತವಾಗಿದೆ. ಆ ಸೂರ್ಯ ಜಗತ್ತಿನ ಆಧಾರ. ಯಾಕೆಂದರೆ ಸೂರ್ಯನು ತನ್ನ ಕಿರಣಗಳಿಂದ ಭೂಮಿಯಲ್ಲಿಯ ನೀರನ್ನೆಲ್ಲ ಹೀರಿ ಮೋಡ ರೂಪದಿಂದ ಮತ್ತೆ ಮರಳಿಸುತ್ತಾನೆ. ನೆಲದೆದೆಗೆ ಅದರಿಂದ, ಮಳೆ, ಬೆಳೆ, ಗಿಡಬಳ್ಳಿ, ಉಣಿಸು, ತಿನಿಸು, ಕಳೆಕಾಂತಿ, ನಲಿವು, ಗೆಲವು. ಹೀಗೆ ಜಗದಾಧಾರ ಸೂರ್ಯ, ಸೂರ್ಯನಿಗೆ ಧ್ರುವ, ಧ್ರುವನಿಗೆ ಶಿಂಶುಮಾರ ಚಕ್ರ ಆಧಾರ. ಅದಕ್ಕೆ ಶ್ರೀಮನ್ನಾರಾಯಣನೇ ಆಧಾರ. ಅಂತೂ ಅವನೇ ಜಗದಾಧಾರ ಎಂದು ಸಿದ್ಧ.

**"ತನ್ನ ಮೈಯ್ಯ ತಿನ್ನಲಿತ್ತು ಕರಗಿ ಹೋದ ಚಂದಿರ ಸೋತು ಸವೆದು ಸುಂದರ"**

ಬ್ರಾಹ್ಮಣೋತ್ತಮ, ಸೂರ್ಯನಿಂದ ಮಳೆ ಬೆಳೆಗಳ ಮುಖಾಂತರ ಮಾನವರಿಗೆ ತೃಪ್ತಿಯಾದಂತೆ ದೇವತೆಗಳೂ ಪಿತೃಗಳೂ ಕೂಡ ಅವನಿಂದ ಪೋಷಣೆ ಪಡೆದು ತೃಪ್ತರಾಗುತ್ತಾರೆ. ಸೂರ್ಯನ 'ಸುಷುಮಾ' ಎಂದು ಎಂಬ ಕಿರಣಗಳು ಸೊರಗಿ ಸೋತುಹೋದ ಶೀತಮರೀಚಿ ಚಂದ್ರಗೆ ಪೋಷಣೆಯನ್ನು ಒದಗಿಸಿ ಪುಷ್ಟನನ್ನು ಮಾಡುತ್ತವೆ. ಇದರಿಂದ ಶುಕ್ಲಪಕ್ಷದಲ್ಲಿ ಚಂದ್ರನ ಚೆಲುಬಿಂಬವು ಮತ್ತೆ ಮೈದುಂಬಿ ಮಿನುಗುತ್ತದೆ. ಅನಂತರ ಕೃಷ್ಣಪಕ್ಷದಲ್ಲಿದೇವತೆಗಳು ಒಂದೊಂದಾಗಿ ಚಂದ್ರನ ಅಮೃತಮಯವಾದ ಕಲೆಗಳನ್ನು ಪಾನಮಾಡಹತ್ತುತ್ತಾರೆ. ಆ ಬಳಿಕ ಚಂದ್ರನು ಕ್ರಮೇಣ ಕಲಾಹೀನನಾದಾಗ ಚತುರ್ದಶಿಯ ನಂತರ ಅಳಿದುಳಿದ ಎರಡುಕಲೆಗಳನ್ನು ಪಿತೃಗಳು ಕುಡಿದು ತೃಪ್ತರಾಗುತ್ತಾರೆ. ಕಳೆದುಹೋದ ಕಲಾಧರನ ಅಮೃತ ಕಲೆಗಳೆಲ್ಲ ಕಡಿಮೆಯಾದ ಬಳಿಕ ಶುಕ್ಲಪಕ್ಷದಲ್ಲಿ ಭರತಿ ಮಾಡುವ ಹೊಣೆ ಸೂರ್ಯನದು. ಅವನು ಹಾಗೆ ಚಂದ್ರಕಲೆಗಳನ್ನು ಚಿಗುರಿಸದಿದ್ದರೆ ದೇವತೆಗಳಿಗೆ ಉಪವಾಸ ವನವಾಸವಾದೀತು. ಅಮೃತವೇ ಅವರಿಗೆ ಆಹಾರವಲ್ಲವೇ! ಮೂವತ್ತು ಮೂರು ಕೋಟಿ ದೇವತೆಗಳು ಚಂದ್ರನ ಕಲೆ ಕುಡಿದು ಕಿರಣ ತಿಂದು ಬದುಕಬೇಕು. ಇವರಿಗೆಲ್ಲ ಚಂದ್ರಮಂಡಲವೇ ದೊಡ್ಡ ಉಗ್ರಾಣ. ಆ ಅನ್ನಕೋಶಕ್ಕೆ ಆಹಾರ ಸಾಮಗ್ರಿಯನ್ನು ನಿರಂತರ ಒದಗಿಸುವವ ಸೂರ್ಯ. ಪಿತೃಗಳಿಗೂ ಅವನೇ ಅನ್ನದಾತಾ. ಮಾನವರಿಗೂ ಬೆಳಕು, ಭೋಜನ, ಬದುಕು ಎಲ್ಲ ಅವನಿಂದಲೇ.

## ಅಮಾವಾಸ್ಯೆಯ ಚಂದ್ರ

ಕೃಷ್ಣಪಕ್ಷ ಚತುರ್ದಶಿಯ ಮಾರನೇ ದಿನ ಎರಡೇ ಕಲೆಗಳು ತನ್ನಲ್ಲಿ ಉಳಿದಾಗ ಕ್ಷೀಣನಾದ ಚಂದ್ರನು ಸೂರ್ಯಮಂಡಲದಲ್ಲಿ ಪ್ರವೇಶಿಸುತ್ತಾನೆ. ಆಗ ಅವನು 'ಅಮಾ'

ಎಂಬ ಕಿರಣದಲ್ಲಿ ವಾಸಿಸುತ್ತಾನೆ. ಆದುದರಿಂದಲೇ ಆ ದಿನಕ್ಕೆ 'ಅಮಾವಾಸ್ಯಾ' ಎಂದು ಹೆಸರು. ಅಂದು ರಾತ್ರಿ ಅವನು ಮೊದಲು ನೀರಿನಲ್ಲಿ, ನಂತರ ಗಿಡಬಳ್ಳಿ ವನಸ್ಪತಿಗಳಲ್ಲಿ ಇದ್ದು ಆಮೇಲೆ ಸೂರ್ಯನಲ್ಲಿ ಸಂಕ್ರಾಂತನಾಗುತ್ತಾನೆ. ಆದುದರಿಂದಲೇ ಅಮಾವಾಸ್ಯೆ ದಿನ ಎಲೆ ಮರಗಳಲ್ಲಿ ಚಂದ್ರನ ಸನ್ನಿಧಾನವಿರುವದರಿಂದ ಕಳ್ಳಿಕಂಟ ಕಡಿಯಬಾರದು, ಎಲೆ ಹರಿಯಬಾರದು, ಬಳ್ಳಿ ತರಿಯಬಾರದು, ಮರ ಮುರಿಯಬಾರದು ಎಂದು ಶಾಸ್ತ್ರದ ಆದೇಶ ಹಾಗೆ ಮಾಡಿದಲ್ಲಿ ಬ್ರಹ್ಮಹತ್ಯಾಪಾಪ ತಗಲುವದು. ಚಂದ್ರ ದ್ವಿಜರಾಜನಾದುದರಿಂದ ಇದೇ ಕಾರಣಕ್ಕಾಗಿ ಅಮಾವಾಸ್ಯೆ ತುಳಸೀ ದಳವನ್ನು ಕೂಡ ಹರಿಯಬಾರದೆಂದು ವಿಧಿಸಿದ್ದಾರೆ.

## ಕಲೆಗಳನ್ನು ಕುಡಿಯದವರಿಲ್ಲ, ಬೆಳದಿಂಗಳಿಂದ ಬೆಳೆಯದವರಿಲ್ಲ

ಅಂದು ಬಸಿದುಳಿದ ಚಂದ್ರಕಲೆಯನ್ನು ಮಧ್ಯಾನ್ಹದ ನಂತರ ಪಿತೃಗಳು ತಿಂದು ತೃಪ್ತರಾಗುತ್ತಾರೆ. ಸೌಮ್ಯ, ಬರ್ಹಿಷದ, ಅಗ್ನಿಷ್ವಾತ್ತ ಎಂಬ ಮೂರು ಪಿತೃಗಣದವರು ಅಮಾವಾಸ್ಯೆಯ ದಿನ ಚಂದ್ರಕಿರಣಗಳಿಂದ ಸೋಸಿ ಬಂದ ಸುಧೆಯನ್ನು ಕುಡಿದು ಮತ್ತೆ ಮರುತಿಂಗಳ ಅಮಾವಾಸ್ಯೆಯವರೆಗೆ ತೃಪ್ತಿಯಿಂದ ಇರುತ್ತಾರೆ. ಹೀಗೆ ದ್ವಿಜರಾಜನಾದ ಚಂದ್ರನು ಶುಕ್ಲಪಕ್ಷದಲ್ಲಿ ದೇವತೆಗಳನ್ನೂ, ಕೃಷ್ಣಪಕ್ಷದಲ್ಲಿ ಪಿತೃಗಳನ್ನು, ಪೋಷಣಗೈದು ಇಬ್ಬರಿಗೂ ತೋಷಣವನ್ನು ಉಂಟು ಮಾಡಿ ತನ್ನ ಅಮೃತಮಯವಾದ ಜಲಕಣಗಳಿಂದ ಲತಾ, ವೃಕ್ಷ, ಋಷಧಿ, ಸಸ್ಯ, ಧಾನ್ಯಾದಿಗಳಿಗೆ ಪೋಷಣೆಯನ್ನು ಒದಗಿಸಿ ಅದರಿಂದ ಪಶು, ಪಕ್ಷಿ, ಕ್ರಿಮಿ, ಕೀಟ, ಮಾನವ ಪರ್ಯಂತ ಎಲ್ಲ ಪ್ರಾಣಿಗಳಿಗೂ ಉಪಕಾರಗೈಯುತ್ತಾನೆ. ಈ ಚಂದ್ರನಿಗೆ ಇಂಥ ಶಕ್ತಿ ಸೂರ್ಯನಿಂದ, ಸೂರ್ಯನಿಗೆ ಧ್ರುವನಿಂದ, ಧ್ರುವನಿಗೆ ಹರಿಯಿಂದ, ಒಟ್ಟು ಎಲ್ಲರ ಪೋಷಣ ತೋಷಣಗಳು ಪರಮಾತ್ಮನಿಂದ ಆಗುತ್ತವೆ.

## ''ಚಿಕ್ಕೆಯ ಬಳಗದ ಓತೀಕಾಟ ಕಳೆವುದು ನೋಡಿದರೆಲ್ಲರ ಕಾಟ''

ಭಗವಂತನ ಸನ್ನಿಧಾನದಿಂದ ಮಹಿತವಾದ ಶಿಂಶುಮಾರ ಚಕ್ರ ಎಂಬ ನಕ್ಷತ್ರ ಪುಂಜವನ್ನು ರಾತ್ರಿ ದರ್ಶನ ಮಾಡುವದರಿಂದ ಸಕಲ ಪಾಪಗಳು ದೂರವಾಗುತ್ತವೆ. ಓತೀಕಾಟ ಆಕಾರದ ಈ ನಕ್ಷತ್ರದ ಮಸ್ತಕದ ಮೇಲೆ ಚಿಬುಕದಂತಿದ್ದುದೇ ಧ್ರುವನ ತಂದೆ ಉತ್ತಾನಪಾದ. ಅದರ ಕೆಳಗಿದ್ದುದೇ ಯಜ್ಞ. ತಲೆಯ ಸ್ಥಾನದಲ್ಲಿ ಧರ್ಮ, ಎದೆಯಲ್ಲಿ ನಾರಾಯಣ, ಮುಂದಿನ ಎರಡು ಅಂಗಾಲುಗಳಲ್ಲಿ ಅಶ್ವಿನೀ ದೇವತೆಗಳು, ಕಾಲುಗಣಿಕೆಗಳಲ್ಲಿ ವರುಣ ಮತ್ತು ಅರ್ಯಮರು. ಅಗ್ನಿ, ಮಹೇಂದ್ರ, ಕಶ್ಯಪ, ಮತ್ತು ಧ್ರುವರು ಅದರ ಪುಚ್ಛದಲ್ಲಿ ಪ್ರತಿಷ್ಠಿತರಾಗಿರುವರು. ಇದರ ಪುಚ್ಛಭಾಗದಲ್ಲಿ ಬಾಲಲೀಲೆಯಾಡುವ ನಾಲ್ಕು ನಕ್ಷತ್ರಗಳು ಎಂದು ಅಸ್ತವಾಗುವದಿಲ್ಲ.

ಮೈತ್ರೇಯ, ಇಂತು ನಾನು ನಿನಗೆ ಪೃಥಿವೀ ಮಂಡಲ, ಜ್ಯೋತಿರ್ಮಂಡಲ, ದ್ವೀಪ, ಪರ್ವತ, ಸಮುದ್ರ, ನದಿ, ನಗರ ಮುಂತಾದವುಗಳ ಸಂಸ್ಥಾನ, ಸನ್ನಿವೇಶ, ಸ್ವರೂಪಗಳ ಬಗೆಯನ್ನು ಚಿತ್ತರಿಸಿದೆ. ಇಲ್ಲಿ ಬಣ್ಣಿಸಿದ ಮೂರು ಲೋಕಗಳ ಬೇರೆ ಬೇರೆ ಸ್ಥಾನಗಳಲ್ಲಿ

ಜೀವನು ತಿರುಗುತ್ತಲಿರುತ್ತಾನೆ. ಅದಕ್ಕೆ ಕಾರಣ! ಅವರ ಕರ್ಮ, ಪ್ರಾರಬ್ಧ, ಇದನ್ನು ತಿಳಿದು ವಿವೇಕಿಗಳಾದವರು ತ್ರಿಭುವನ ತಲದಲ್ಲಿ ಎಲ್ಲೆಲ್ಲಿಯೋ ತೂರಾಡಿ ಕಳ್ಳೆಮಿಳ್ಳೆ ಆಡಿಸುವ ಬಂಧಕ ಕರ್ಮಗಳನ್ನು ಮಾಡದೇ ಶ್ರೀವಾಸುದೇವನನ್ನು ನಿರಂತರ ಧ್ಯಾನ ಮಾಡಿ ಅವನ ಪಾದಗಳಲ್ಲಿಯೇ ಲೀನರಾಗಬೇಕು. ಅಂಥ ಮನುಷ್ಯನಿಗೆ ಈ ಲೋಕಭ್ರಮಣೆ ಇಲ್ಲ.

## ''ಭರತ ರಾಜನ ಚರಿತ, ಬಹು ಕುತೂಹಲ ಭರಿತ''

**ಮೈತ್ರೇಯ** - ಪೂಜ್ಯರೇ, ಭರತ ಚಕ್ರವರ್ತಿಯು ಮನೆಮಾರು, ಸಿರಿ ಸಾಮ್ರಾಜ್ಯಗಳನ್ನು ತೊರೆದು ಶಾಲಿಗ್ರಾಮ ಕ್ಷೇತ್ರದಲ್ಲಿ ತಪಂಗೈದ. ಇಂಥ ಪಾವನತೆಯ ನೆಲಯಲ್ಲಿ ನಿಂತು ನೋಂಪಿಯನಾಂತು, ನಿರಂತರ ಹರಿಯ ಚಿಂತನಗೈದರೂ ಅದೆಂತು ಅವನಿಗೆ ಮುಕುತಿ ದೊರೆಯಲಿಲ್ಲ! ಅವನು ಮತ್ತೆ ಬ್ರಾಹ್ಮಣನಾಗಿ ಜನಿಸಿದನೆಂದಿರಲ್ಲವೇ! ಅದೇಕೆ! ವಿಪ್ರನಾದ ಬಳಿಕ ಅವನು ನಡೆದುದೆಂತು! ಇದನ್ನೆಲ್ಲ ಅರಿಯಲು ನನಗೇನೋ ಕುತೂಹಲ. ತಾವು ದಯಮಾಡಬೇಕು.

**ಪರಾಶರ** - ಮೈತ್ರೇಯ, ಬಗೆಯಲ್ಲಿ ಭಗವಂತನನ್ನು ಹೊತ್ತು ಭರತ ದೊರೆ ಬಹುಕಾಲ ಆ ಶಾಲಿಗ್ರಾಮ ಕ್ಷೇತ್ರದಲ್ಲಿ ತಪಸ್ಸನ್ನು ಆಚರಿಸುತ್ತಲೇ ಇದ್ದ. ಆ ಭರತ ಗುಣವಂತರಲ್ಲಿ ಗರಿಷ್ಠ. ಅಹಿಂಸೆಯ ಆದರ್ಶ ಸಾಧಕ. ಮನಸ್ಸನ್ನು ಜಗಿಹಿಡಿಯುವಲ್ಲಿಯಂತೂ ಕೊನೆಯ ಸಿದ್ಧಿಯನ್ನೇ ಪಡೆದ್ದಿನಾತ. ''ಯಜ್ಞಪತಿಯೇ! ನಿನಗೆ ನಮಸ್ಕಾರ. ಗೋವಿಂದ! ನಿನಗೆ ವಂದನೆ. ನಾರಾಯಣ! ನಿನಗೆ ನಮೋನಮಃ. ಕೇಶವ! ಕೈಮುಗಿದೆ. ಕೃಷ್ಣ! ಕಾಲಿಗೆ ಬಿದ್ದೆ. ವಾಸುದೇವ! ನಮಸ್ಕಾರ'' ಎಂದು ಎಡೆಬಿಡದೆ ಭಗವಂತನ ಹೆಸರುಗಳನ್ನು ಅಡಿಗಡಿಗೆ ಉಚ್ಚರಿಸುತ್ತಿದ್ದ ಆ ಅರಸ. ಕನಸಿನಲ್ಲಿಯೂ ಬೇರೆ ನೆನೆಸುತ್ತಿದ್ದಿಲ್ಲ. ಭೋಗವನ್ನು ತೊರೆದ. ತ್ಯಾಗವನ್ನು ಆದರಿಸಿದ. ಯೋಗವನ್ನು ಸಾಧಿಸಿದ. ತಪವನ್ನು ಆಚರಿಸಿದ. ಅವನಿಗೆ ಬೇರೆ ಉದ್ದೇಶವೇ ಇದ್ದಿಲ್ಲ. ಅವನ ಬಾಳು ಭಗವಂತನಿಗೆ ಮೀಸಲು. ತನಗಾಗಿ ಅವನೇನೂ ಮಾಡಲಾರ. ಕೈ ಅಲುಗಾಡಿಸುವದೂ ದೇವರ ಪೂಜೆಗಾಗಿ. ಅವನ ಕಾಲು ಚಲಿಸುವದು ಬನದಲ್ಲಿ ಹೂ ಹರಿಯಲಿಕ್ಕಾಗಿ ತುಳಸಿ ತರಲಿಕ್ಕಾಗಿ ಮಾತ್ರ. ಅವನ ಕರ್ಮ ಎಲ್ಲವೂ ಧರ್ಮ. ಇದೇ ಅವನ ಬದುಕಿನ ಮರ್ಮ.

## ''ಬಂದಿತೊಂದು ಅಲ್ಲಿ ಚಿಗರಿ, ದೊರೆಯ ಪ್ರಾರಬ್ಧ ಚಿಗುರಿ''

ಅವನೊಂದು ದಿನ ಗಂಡಕೀ ನದಿಗೆ ಸ್ನಾನಕ್ಕೆ ತೆರಳಿದ. ಅದರ ಪುಣ್ಯಜಲದಲ್ಲಿ ಮಿಂದ. ಅದರ ತಡಿಯೆಡೆಯಲ್ಲಿ ಕುಳಿತು ಜಪ ಮಾಡಿದ. ಅದೇ ವೇಳೆಯಲ್ಲಿ ಎರಳೆಯೊಂದು ಆ ತೀರ ಸಾರಿತು. ಅದಕ್ಕೆ ತುಂಬ ಬಾಯಾರಿಕೆ, ಮೇಲೆ ತುಂಬಿದ ಬಸುರಿ. ಅದು ಅಲ್ಲಿಗೆ ಒಂಟಿಯಾಗಿಯೇ ನೀರಿಗಾಗಿ ಧಾವಿಸಿತ್ತು. ನಡುನೀರಿಗೆ ಬಂದು ಆ ಚಿಗರೆ ನದಿಗೇ ಬಾಯಿ ಹಚ್ಚಿತು. ಸರ್‍ರೆಂದು ನೀರನ್ನು ಹೀರಿತು. ಅಯ್ಯೋ ಅಷ್ಟರಲ್ಲಿ ಗುಡುಗು! ಭಯಂಕರ ಸಿಂಹನಾದ! ವನವೆಲ್ಲ ದುಮ್ ದುಮಿಸಿತು. ಪ್ರಾಣಿಗಳೆಲ್ಲ ನಡುಗಿ ಹೋದವು. ಪಾಪ ಆ ಹೆಣ್ಣು ಚಿಗರೆ ಹೆದರಿ ಹೌಹಾರಿತು. ಬೆದರಿ ಟಣ್ಣನೆ ನೀರಿನಿಂದ ಮೇಲೆ ಜಿಗಿಯಿತು. ದಡಕ್ಕೆ ನೆಗೆಯಿತು. ನೀರಿಗಿಂತ ಎತ್ತರ ಆ ತೀರ.

ಈಯಲಾಗಿತ್ತು ಆ ಎರಳೆ. ಅದು ಹೆದರಿ ಹಾರಿದಾಗ ನೀರಿನಲ್ಲಿಯೇ ಜಾರಿ ಬಿದ್ದಿತು ಅದರ ಗರ್ಭ. ಜೀವವು ಎಲ್ಲಕ್ಕಿಂತ ಪ್ರಿಯವಲ್ಲವೇ! ಸಿಂಹದ ಹೆದರಿಕೆಯಿಂದ ಬೆದರಿ ಚೆದುರಿದ ಜಿಂಕೆ ಹಾರಿ ದಂಡೆ ಏರಿ ಓಡಿತು. ಆದರೆ ತಾಯಿ ಜಿಂಕೆ ತೀರ ಏರುವಾಗ, ಹೆದರಿ ಮೇಲೆ ಹಾರುವಾಗ, ನೀರಿಗೆ ಜಾರಿಬಿದ್ದ ಎರಳೆಯ ಮರಿಯು ನದಿಯ ಪ್ರವಾಹದಲ್ಲಿ ತೇಲಹತ್ತಿತ್ತು. ದಂಡೆಯಲ್ಲಿ ಜಪ ಮಣಿ ತಿರುಗಿಸುತ್ತಲಿದ್ದ ಭರತ ದೊರೆ ನೋಡಿದ. ತೊರೆಯ ತೆರೆ ತೊಟ್ಟಿಲಲ್ಲಿ ತೂಗಾಡುತ್ತಿತ್ತು ಜಿಂಕೆಯ ಪುಟ್ಟ ಮರಿ. ಸೆಳವು ಸೆಳೆಯುತ್ತಿತ್ತು. ತಟ್ಟನೆ ಭರತ ದೊರೆ ಜಪಮಾಲೆ ಬಿಟ್ಟ. ನೀರಿನಲ್ಲಿ ಸಾಗರಬಿದ್ದು ನದಿಯ ನಡುವೆ ನೀರು ಗುಟಕರಿಸುವ ಆ ಎಳೆ ಎರಳೆಯನ್ನು ಎತ್ತಿದ. ಮೇಲೆ ಬಂದ. ತೀರಕ್ಕೆ ತಂದ. ತಾಯಿ ಜಿಂಕೆ ಬರುವದೇನೋ ಎಂದು ಆಚೀಚೆ ನೋಡಿದ.

ಆದರೆ ಎಲ್ಲಿಯ ತಾಯಿ! ಸಿಂಹ ಗರ್ಜನೆಯಿಂದ ಎದೆ ಒಡೆದುಕೊಂಡು ತಾಯಿ ಚಿಗರೆ ಹೆದರಿ ಹಾರಿದಾಗಲೇ ಅದರ ಬಸಿರು ಬಿದ್ದಿತ್ತು. ಬೆದರಿ ಎತ್ತರದ ತೀರ ಏರಬೇಕೆಂದು ಜೋರಿನಿಂದ ಜಿಗಿದಾಗ ಅದರ ಪ್ರಾಣವೇ ನೆಗೆದು ಹೋಯಿತು. ಅದು ಅಲ್ಲಿಯೇ ದಂಡೆಯ ಬಳಿ ಸತ್ತು ಬಿದ್ದಿತು. ರಾಜನಿಗೆ ಯೋಚನೆಗಿಟ್ಟಿತು. ತಾಯಿ ಜೀವ ಮೃತ್ಯುವಿನ ಬಾಯಲ್ಲಿ,ತಾಯಿಯಿಲ್ಲದ ತಬ್ಬಲಿ ಜಿಂಕೆ ತನ್ನ ಕೈಯಲ್ಲಿ. ಈಗೇನು ಮಾಡಬೇಕು! ಈ ಮರಿಯನ್ನು ಒಗೆಯುವದೇ! ವೈಯ್ಯುವುದೇ! ಪರದೇಶಿ ಮರಿ. ''ಪರೋಪಕಾರಾರ್ಥಮಿದಂ ಶರೀರಂ'' ಇದೂ ಒಂದು ಭಗವತ್ಸೇವೆ ಆಗಲಿ. ಎಂದು ಚಿಗರೆ ಮರಿಯನ್ನು ಆಶ್ರಮಕ್ಕೆ ತಂದ.

## ''ತಾಯಿಯಿಲ್ಲದ ಹರಿಣ, ತೆರೆಯಿತಂತಃಕರಣ''

ತಾನಾಗಿ ಕರೆತಂದ ಬಳಿಕ ಸರಿಯಾಗಿ ಉಪಚಾರಮಾಡಬೇಡವೇ! ಅದಕ್ಕೆ ತಾಯಿ ಇಲ್ಲ ಎನಿಸಬಾರದು. ದಯೆಯೇ ಧರ್ಮದ ಮೂಲ. ಸರಿ, ನಡೆಯಿತು ಆರೈಕೆ. ಸಾಗಿತು ಉಪಚಾರ ತಾನೇ ತಾಯಿ ಆದ. ಹೊಟ್ಟೆ ನೇತ್ತಿ ನೋಡಿದ. ಎತ್ತಿ ಮುದ್ದಾಡಿದ, ದೊರೆಯ ನಲುಮೆಯ ರಕ್ಷೆಯಲ್ಲಿ ಚಿಗುರೆಯ ಬದುಕು ಚಿಗುರಿತು. ಮೃಗ ಮತ್ತು ಮಹಾರಾಜರಲ್ಲಿ ಒಲವಿನ ದಾರ ಹುರಿಗೊಂಡಿತು. ಜಿಂಕೆ ದೊಡ್ಡದಾಗಿ ಆಶ್ರಮದ ಅಂಗಳದಲ್ಲಿ ಹಾರಾಡಿತು. ನೆರೆಹೊರೆಯ ಬನಗಳಲ್ಲಿ ಓಡಾಡಿತು. ದೂರ ಹೋದರೂ ಮತ್ತೆ ಸಾರಿ ರಾಜನ ಬಳಿಗೇ ಬರುತ್ತಿತ್ತು ಆ ತರಳ ಎರಳೆ. ಸ್ನೇಹದ ಸೂತ್ರವನ್ನು ಇದ್ದಲ್ಲಿಂದ ಜಗ್ಗುತ್ತಿತ್ತು. ಅದನ್ನು ನೋಡಿದಾಗೆಲ್ಲ ಅರಸನ ಅಂತಃಕರಣ ಪ್ರೀತಿಯಿಂದ ಹಿಗ್ಗುತ್ತಿತ್ತು. ಅದರ ಸೇವೆಗಾಗಿ ಜಪ ಅನ್ಹಿಕಗಳ ಸಂಕೋಚ ಮಾಡಿದ.ತಪಸ್ಸನ್ನು ತ್ಯಜಿಸಿದ. ಸಮಾಧಿಯಂತೂ ಸಂಪುಷ್ಟಕ್ಕೆ ಬಂದಿತು. ಹಗಲಿರುಳು ಚಿಗರೆಯದೇ ಚಿಂತೆ. ಯಾವಾಗಲೂ ಅದರೊಡನೆಯೇ ಒಡನಾಟ. ಬೇರಾವ ಕೆಲಸಕ್ಕೂ ಅವನಿಗೆ ಮನಸ್ಸೇಬಾರದು. ಅಡವಿಗೆ ಅದು ಆಡ ಹೋದಾಗ ಅದನ್ನೇ ಕಾಯುತ್ತ ಕುಳಿತಿರುತ್ತಿದ್ದ. ಬಂದ ಕೂಡಲೇ ಅದನ್ನು ತಬ್ಬಿಕೊಂಡು ಉಬ್ಬಿ ಉತ್ಸಾಹಗೊಂಡು ಆ ಚಿಗರೆಯೊಡನೆ ಚೆಲ್ಲಾಟವಾಡುತ್ತಿದ್ದ. ಅವನ ಚಿತ್ತದ ತುಂಬ ಚಿಗರೆಯದೇ ಚಿತ್ರ.

## ಮಾಯಾಮೃಗ

ಆದರೆ ಇದೇನು ವಿಚಿತ್ರ! ಭರತ ದೊಡ್ಡ ರಾಜ. ಅವನಿಗಾವುದೂ ಕೊರತೆ ಇಲ್ಲ. ಬಂಗಾರದಂಥ ಮಕ್ಕಳು, ಶೃಂಗಾರ ಸ್ವಪ್ನದಂತಿದ್ದ ಮಡದಿ, ಸಾರ್ವಭೌಮಸಿರಿ, ಪ್ರೀತಿಯ ಬಳಗ, ಬಯಸಿದ ಭಾಗ್ಯ, ಮುತ್ತಿನಂಥ ಸಂಸಾರ, ಇಷ್ಟೆಲ್ಲ ಇದ್ದರೂ ದೇವರನ್ನು ಒಲಿಸಬೇಕೆಂದು ಅದೆಲ್ಲವನ್ನೂ ತೊರೆದು ಕಾಡಿಗೆ ನಡೆದಿದ್ದ. ಆದರೆ ಮಾಯೆ ಬಿಡಲಿಲ್ಲ. ಅದು ಅವನ ಬೆಂಬತ್ತಿ ತಾನು ಕಾಡಿಗೆ ಬಂದಿತು. ಅಲ್ಲಿ ಅವನನ್ನು ಚಿಗರೆಯ ರೂಪದಿಂದ ಕಾಡಹತ್ತಿತ್ತು. ಹೊಟ್ಟೆಯ ಮಕ್ಕಳನ್ನು ತೊರೆದ ದೊರೆ ಹರಿಣದ ಮರಿಯನ್ನು ಹಚ್ಚಿಕೊಂಡ ಊರು ಬಿಟ್ಟು ದೂರ ಬಂದರೂ ಸ್ನೇಹದ ನಂಟು ಮತ್ತೆ ಕರುಳಿನ ಸುರುಳಿಗೆ ಅಂಟಿಕೊಂಡಿತು. ಚಿಗರೆಯರೂಪದಿಂದ ಅವನ ಚಿತ್ತದಲ್ಲಿ ಮೋಹ ಮಮತೆಗಳು ಮತ್ತೆ ಚಿಗರಿ ಹೋಗರೇರಿ ನಿಂತವು. ಒಂದು ಕ್ಷಣವೂ ಅವನಿಗೆ ಆ ಚಿಗರೆ ಬಿಟ್ಟಿರಲಿಕ್ಕಾಗುತ್ತಿದ್ದಿಲ್ಲ.

## ಜಿಂಕೆ, ಶಂಕೆ

ಕಾಡಿಗೆ ಆಡಲು ಹೋದ ಅದು ಮನೆಗೆ ಮರಳಲಿಕ್ಕೆ ತಡವಾದರೆ ರಾಜನಿಗೆ ಚಿಂತೆ, ಇಲ್ಲದ ಶಂಕೆ. ಆ ಜಿಂಕೆಯನ್ನು ಹುಲಿ ಹಿಡಿಯಿತೇ! ತೋಳ ತಡೆಯಿತೇ! ಸಿಂಹ ಹೊಡೆಯಿತೇ! ಅವನ ಚಿಂತೆಗೆ ಅಂತವಿಲ್ಲ ಪಾರವಿಲ್ಲ.

## ಮೃಗದ ಶೋಕದಿಂದ ಕಾವ್ಯವೇ ಉಗಮವಾಯಿತು.

ಎರಳೆ ಮನೆಗೆ ಮರಳಲು ವಿಳಂಬವಾದಾಗ ಅವನಿಗೆ ದುಃಖ ತುಂಬಿ ಬರುವದು. ಕಂಬನಿ ಕೋಡಿಯೊಡೆವುದು. ಹೃದಯದ ಹಂಬಲ ಹಾಡಾಗಿ ಹೊಮ್ಮುವದು. "ಆ ಮೃಗ ನನ್ನ ಮಗು. ಅದು ಹುಟ್ಟಿದ್ದು ನನ್ನ ಎದೆಯನ್ನು ತಣಿಸಲಿಕ್ಕಾಗಿಯೇ. ತನ್ನ ಕೋಡಿನ ತುದಿಯಿಂದ ಅದು ನನ್ನ ತೋಳನ್ನು ತುರಿಸಿದಾಗ ಆಹಾ ನನಗೆಷ್ಟು ಆನಂದ! ಅದು ಇನ್ನೆಂದಾದರೂ ಬಂದು ನೇಹದಿಂದ ನನ್ನ ಮೈ ನೆಕ್ಕೀತೇ! ಕೋಡಿನ ಕೊನೆಯಿಂದ ನನ್ನ ತೋಳಿಗೆ ತಿಕ್ಕೀತೇ! ಅದು ತನ್ನ ಪುಟ್ಟ ಹೆಜ್ಜೆ ಇಟ್ಟ ನೆಲ ನಿಪುಣ ಕೈ ನಕ್ಷೆ ಬಿಡಿಸಿದಂತೆ ಎಷ್ಟು ಸುಂದರವಾಗಿ ಕಾಣುತ್ತದೆ! ಅದರ ಬಾಯಲ್ಲಿ ಇದೀಗ ಹಲ್ಲು ಒಡೆಯುತ್ತಲಿವೆ. ಆದರೆ ತನ್ನ ಅರಗಚ್ಚ ಹಲ್ಲಿನಿಂದ ಅದು ಕಚ್ಚಿದ ಹುಲ್ಲುಕಡ್ಡಿಗಳ ಗರಿಕೆ ಮಾತ್ರ ಮುರಿದು ಅವು ಚಂಡಿಕೆ ಇಲ್ಲದ ಚಿಕ್ಕ ವಟುಗಳಂತೆ ಕಾಣುತ್ತವೆ. ಎಲ್ಲಿ ಆ ನನ್ನ ಹುಲ್ಲೆ ಮರಿ! ಅದು ಇನ್ನೆಂದಾದರೂ ನನ್ನ ಗುಡಿಸಲಿಗೆ ಮರಳೀತೇ! ಅದನ್ನು ಕಂಡು ನನ್ನ ದೃಷ್ಟಿ ಅರಳೀತೇ!" ಎಂದು ಮುಂತಾಗಿ ಅವನ ಮನ ಮಿಡಿಯುತ್ತಿತ್ತು. ಎದೆ ತುಡಿಯುತ್ತಿತ್ತು.

ಅದು ಎದುರು ಬಂದಾಗ ಅವನ ಮುಖ ಅರಳಿ ಕಂಗಳಲ್ಲಿ ಸಂತಸದ ಗೆರೆ ಗುರುತು ತೋರುತ್ತಿತ್ತು. ಆ ಚಿಗರೆ ಪಕ್ಕದಲ್ಲಿದ್ದಾಗ ಅವನ ಚಿತ್ತ ಗರಿಗೆದರಿ ಶಾಂತಿ ಸಮಾದಾನ ಪಡೆಯುತ್ತಿತ್ತು. ಒಟ್ಟಾರೆ ಆ ಚಕ್ರವರ್ತಿಯ ಚೇತನ ಆ ಚಿಗರೆಯನ್ನು ನೆರಳಾಗಿ ಮರುಳಾಗಿ ಅನುಸರಿಸುತ್ತಿತ್ತು. ಅವನ ಜಪ ಹಾಳಾಯಿತು. ತಪ ಬೀಳಾಯಿತು. ಅವನ ವೈರಾಗ್ಯ ಅಳಿಯಿತು. ಹಗಲಿರುಳು ಅದರದೇ ಧ್ಯಾನ.

## ''ಮರಣ ಕಾಲದಲ್ಲಿ ಶರಣ, ಮಾಡುತಿದ್ದ ಹರಿಣ ಸ್ಮರಣ''

ಕೊನೆಗೆ ಅವನಿಗೆ ಸಾವು ಸಮೀಪಿಸಿತು. ಹರಿಣವನ್ನು ಬಿಟ್ಟು ಹೋಗಲು ಅವನ ಹರಣ ತಳಮಳಿಸಿತು. ''ಅಯ್ಯೋ, ನಾನು ಸತ್ತರೆ ಈ ಕೂಸಿನ ಗತಿಯೇನು?'' ಎಂದು ಮಮ್ಮಲ ಮರಗಿದ. ಸಾಯುವಾಗ ಅವನ ಕಣ್ಣು ಆ ಚಿಗರೆಯಲ್ಲಿಯೇ ನೆಟ್ಟಿತ್ತು. ಅವನ ಚಿತ್ತದಲ್ಲಿಯೂ ಚಿಗರೆಯು ಚಿತ್ರವೇ ಕಟ್ಟಿತ್ತು. ಹೀಗೆ ಜಿಂಕೆಯ ವಾಸನೆಯಿಂದಲೇ ಅವನು ಜನ್ಮ ನೀಗಿದ.

## ಹರಿಯ ಸ್ಮರಣೆ ಬಿಟ್ಟು ಭರತ, ಹರಿಣ ಸ್ಮರಣ ಗೈದನು, ತಾನೆ ಚಿಗರೆಯಾದನು

ಮರಣ ಕಾಲದ ಸ್ಮರಣ. ಅವನನ್ನು ಬಿಟ್ಟೀತೇ! ಆ ಅಂತ್ಯ ಕಾಲದ ವಾಸನೆಯಿಂದ ಆ ಭರತ ಚಕ್ರವರ್ತಿಯು ಕಾಲಂಜರಗಿರಿಯಲ್ಲಿ ಚಿಗರೆಯಾಗಿಯೇ ಜನಿಸಿದ. ಕಾಲಂಜರ ಬೆಟ್ಟ ಜಂಬೂಮಾರ್ಗದಲ್ಲಿಯ ಒಂದುದಟ್ಟಡವಿ. ಅಲ್ಲಿ ಚಿಗರೆಯಾಗಿ ಜನಿಸಿ ಚಕ್ರವರ್ತಿ ಅಲೆಯುತ್ತಿದ್ದ. ಎಷ್ಟಾದರೂ ಪೂರ್ವ ಜನ್ಮದಲ್ಲಿ ಜಪತಪ ಮಾಡಿದ ಜೀವವಲ್ಲವೇ ! ಆ ಪುಣ್ಯದಿಂದ ಆ ಚಿಗರೆಗೆ ಈ ಜನ್ಮದಲ್ಲಿಯೂ ಹಿಂದಿನ ಜನ್ಮದ ನೆನಹು ಅಚ್ಚಳಿಯದೇ ಉಳಿದಿತ್ತು. ತಾನು ಹಿಂದೆ ಚಕ್ರವರ್ತಿಯಾಗಿ ಎಲ್ಲವನ್ನೂ ತೊರೆದಿದ್ದರೂ ಚಿಗರೆಯನ್ನು ಅತಿಯಾಗಿ ಹಚ್ಚಿಕೊಂಡದ್ದರಿಂದ ತಾನು ಈಗ ಚಿಗರೆಯಾಗಿಯೇ ಹುಟ್ಟ ಬೇಕಾಯಿತು ಎಂಬುದು ಅದಕ್ಕೆ ಚೆನ್ನಾಗಿ ತಿಳಿದಿತ್ತು. ಅದಕ್ಕೆ ಈಗ ಸರಿಯಾಗಿ ಬುದ್ಧಿ ಭೆಟ್ಟಿಯಾಯಿತು. ಆದುದರಿಂದ ಆ ಹರಿಣವು ಯಾರನ್ನು ಹಚ್ಚಿ ಕೊಳ್ಳಲಿಲ್ಲ. ಅಂದಿನ ವೈರಾಗ್ಯ ಇಂದು ಮತ್ತೆ ಮರುಕಳಿಸಿತು. ಈಗ ಆ ಮೃಗ ಮುನಿಯಾಯಿತು. ಮನೆ ಮರೆಯಿತು. ತಾಯಿಯನ್ನು ತೊರೆಯಿತು. ಓಡಿ ಮತ್ತೆ ಆ ಶಾಲಿಗ್ರಾಮ ಕ್ಷೇತ್ರಕ್ಕೆ ಐತಂದಿತು. ಪುಲಹಾಶ್ರಮವನ್ನು ಪ್ರದಕ್ಷಿಣೆ ಗೈಯುವ ಪುಣ್ಯತೀರ್ಥದಲ್ಲಿ ಮಿಂದಿತು. ಒಣಗಿದ ಎಲೆಗಳನ್ನು ತಿಂದಿತು. ಮತ್ತೆ ತಪಸ್ಸಿಗೆ ನಿಂದಿತು. ಅದರಿಂದ ಅದರ ಹರಿಣ ಪ್ರಾರಬ್ಧ ಸವೆಯಿತು. ಅದರ ಬಗೆ ತಿಳಿಗಟ್ಟಿತು. ಕೊನೆಗೆ ಅದು ಜಿಂಕೆ ಜನ್ಮವನ್ನು ನೀಗಿತು.

## ''ಬಹೂನಾಂ ಜನ್ಮನಾಂ ಅಂತೇ ಜ್ಞಾನವಾನ್''

ಅನಂತರ ಸದಾಚಾರಿಗಳ ಪವಿತ್ರ ವಂಶದಲ್ಲಿ ಆ ಚಿಗರೆ ಬ್ರಾಹ್ಮಣನಾಗಿ ಹುಟ್ಟಿತು. ಆ ವಂಶ ಯೋಗಿಗಳ ವಂಶ. ಅವರ ನಡೆ ಶುದ್ಧ. ನುಡಿ ಸತ್ಯ ಬದ್ಧ. ಅಲ್ಲಿ ಜನಿಸಿದ ಈ ಬ್ರಾಹ್ಮಣ ಶಿಶುವಿನ ಬಾಳಿನ ಬಗೆಯೇ ಬೇರೆಯಾಯಿತು. ಅವನು ಯಾವಾಗಲೂ ಅಂತರ್ಮುಖಿ. ಎಲ್ಲಿಯೋ ಚಿತ್ತ. ನೋಡಲು ಉನ್ಮತ್ತ. ಆದರೆ ತುಂಬಿದ ಕೊಡ. ಸರ್ವ ಶಾಸ್ತ್ರಾರ್ಥಗಳೂ ಅವನ ಅರಿವಿನ ಆಳತೆಯಲ್ಲಿ ಅಡಗಿವೆ. ಜ್ಞಾನ ವಿಜ್ಞಾನಗಳ ಎಲ್ಲ ಕ್ಷೇತ್ರಗಳನ್ನೂ ಅವನ ಪತ್ರಿಭೆ 'ಕ್ಷ' ಕಿರಣ ಬೀರಿ ಬೆಳಗಿತ್ತು. ''ಸರ್ವ ಪ್ರಾಣಿಗಳ ಅಂತರ್ಗತವಾದ ಭಗವದ್ರೂಪ ಒಂದು. ಅದು ಪ್ರಕೃತಿಗಿಂತ ಹಿರಿದು. ಎಲ್ಲ ದೇವತೆಗಳಿಗಿಂತ ದೊಡ್ಡದು'' ಎಂಬ ಮಾತನ್ನು ಕಂಡುಕೊಂಡಿದ್ದ ಆ ಬ್ರಹ್ಮವಟು. ಇದರಿಂದ ಅವನು ಅರಿಯಬೇಕಾದದ್ದನ್ನೆಲ್ಲ ಅರಿತಂತಾಗಿತ್ತು. ಬೇರೆ ಉಪದೇಶವೇ ಅವನಿಗೆ ಬೇಕಿರಲಿಲ್ಲ.

ತಂದೆಯ ಒಲುಮೆಯಿಂದ ಅವನಿಗೆ ಮುಂಜವೆ ಆಯಿತು. ಪುರೋಹಿತರ ಜುಲುಮೆಯಿಂದ ಜನಿವಾರ ಬಂದಿತು. ಆದರೆ ಜನರ ಕಣ್ಣಿಗೆ ಕಾಣುವಂತೆ ಸೌಟು ಹಿಡಿಯಲಿಲ್ಲ. ತಟ್ಟೆ ಹಿಡಿಯಲಿಲ್ಲ. ತೀರ್ಥ ಕುಡಿಯಲಿಲ್ಲ. ತಂದೆ ಕೊನೆಗೆ ಅವನನ್ನು ಗುರುಕುಲಕ್ಕೆ ಅಟ್ಟಿದ 'ಅಲ್ಲಿಯಾದರೂ ಈ ತನ್ನ ಮದಡ ಮಗನಿಗೆ ಬುದ್ಧಿ ಬರಲಿ' ಎಂದು.

## ಹುಚ್ಚನ ವೇಷದಲ್ಲಿ ಅತ್ಯುಚ್ಚ ಜ್ಞಾನಮೂರ್ತಿ

ಅಲ್ಲಿ ಗುರುಗಳು ಹೇಳಿದ್ದು ಇವನ ಪಿಂಡಕ್ಕೇ ಹಿಡಿಯಲಿಲ್ಲ. ಅವರ ಶಬ್ದಗಳತ್ತ ಇವನ ಗಮನವೇ ಇಲ್ಲ. ಅವರು ಬಹಳ ಒತ್ತಾಯದಿಂದ ಬೈದು, ಗದರಿಸಿ ಕೇಳಿದಾಗ ಯದ್ವಾ ತದ್ವಾ ಉತ್ತರ. ಅಸಂಬದ್ಧ ಪ್ರಲಾಪ. ಗುರುಗಳು ಬೇಸತ್ತು 'ಹುಚ್ಚ' ಎಂದು ಅವನ ಕೈಬಿಟ್ಟರು. ಯಾವಾಗಲೂ ಇವನ ಮೈ ಹೊಲಸು. ಕೊಳೆಯಾದ ಬಟ್ಟೆ, ಕೆದರಿದ ಕೂದಲು, ಮುದುರಿದ ಮುಖ, ಹಲ್ಲು ತಿಕ್ಕುವಂತಿಲ್ಲ. ಮೋರೆ ತೊಳೆಯುವಂತಿಲ್ಲ. ಹತ್ತಿರ ಬಂದರೆ ಮಲಿನತೆಯ ಮೊತ್ತವನ್ನೇ ಹೊತ್ತು ತಂದಂತೆ. ಇವನನ್ನು ಕಂಡರೇ ಊರವರಿಗೆ ಅಸಹ್ಯ. ಅವನನ್ನು ಅವಮಾನಿಸುವದೆಂದರೆ ಎಲ್ಲರಿಗೂ ಉಬ್ಬು, ಮಕ್ಕಳಿಗೂ ಹಿಗ್ಗು. ಎಲ್ಲರಿಗೂ ಆಟ. ಅವನಿಗೂ ಅದು ಕಾಟವಲ್ಲ. ಇದೇ ಅವರ ಮೋಜು.

ಹಿರಣ್ಯಗರ್ಭನ ಹಿತನುಡಿ ಅವನಿಗೆ ಗೊತ್ತು. ''ನಿಜವಾದ ಯೋಗಿಗೆ ಮಾನ ಮಾಡಿದರೆ ದೊಡ್ಡ ಹಾನಿ. ಗೌರವವೇ ಅವನನ್ನು ರೌರವಕ್ಕೆ ಎಳೆಯುವದು. ಅವಮಾನವೆ ಅವನಿಗೆ ಸನ್ಮಾನ ಯೋಗಿಯು ಧರ್ಮದ ದಾರಿ ಬಿಡದೆ ಹುಚ್ಚನಂತೆ ನಟಿಸಬೇಕು. ಮೂರ್ಖನಂತೆ ಪಠಿಸಬೇಕು. ಯಾರನ್ನು ಹಚ್ಚಿಕೊಳ್ಳಬಾರದು. ಅವನನ್ನು ಕಂಡರೆ ಅವಮಾನಿಸಬೇಕೆಂದು ಜನರಿಗೆ ಬುದ್ಧಿ ಹುಟ್ಟುವಂತಿರಬೇಕು ಅವನ ಚರ್ಯೆ.'' ಈ ಉಪದೇಶ ಇಡಿಯಾಗಿಯೇ ಅವನ ನಡೆನುಡಿಗಳಲ್ಲಿ ಇಳಿದಿತ್ತು. ಅವನೊಬ್ಬ ಹುಚ್ಚ ಎಂದು ಎಲ್ಲರೂ ಭಾವಿಸಿದ್ದರು. ಶಕ್ಯವಾದಷ್ಟು ಎಲ್ಲರೂ ಅವನನ್ನು ಅವಮಾನಿಸಿದ್ದರು. ಆದರೆ ಅವನು ಮಾತ್ರ ಸ್ಥಿತಪ್ರಜ್ಞ. ಸಿಕ್ಕಿದ್ದನ್ನು ಮುಕ್ಕಿ ಬಿಡುತ್ತಿದ್ದ. ಅಕ್ಕಿ ಜೋಳ, ಕಾಳು - ಕಡ್ಡಿ ಹುಲ್ಲು, ಹಣ್ಣು, ಭತ್ತ, ತರಕಾರಿ ಯಾವದಾದರೇನು! ಹಸಿಯೋ ಬಿಸಿಯೋ! ದೊರೆತದ್ದನ್ನೆಲ್ಲ ನುಂಗಿ ನುರಿಸಿ ಬಿಡುತ್ತಿದ್ದ. ಮುಂದೆ ಒಂದು ದಿನ ಅವನ ತಂದೆ ಸತ್ತ. ಬಂಧುಗಳು ಇವನಿಗೇಕೆ ಮೃಷ್ಟಾನ್ನ ಬಡಿಸುವರು! ಕದನ್ನ ಇಕ್ಕಿದರು. ತಂಗಳನ್ನ ಬಡಿಸಿದರು. ಆದರೆ ಅದನ್ನೇ ತಕರಾರಿಲ್ಲದೇ ತಿಂದು ತೇಗಿದ ಈ ಭೂಪ. ಅವರು ನೀಡಿದ ಕೂಳು ಕಸಕ್ಕಿಂತ ಕೀಳು. ಅಷ್ಟಾದರೂ ಊಟ ಹಾಕಿದ ಮೇಲೆ ಇವನನ್ನು ಹಾಗೇ ಏಕೆ ಬಿಡಬೇಕು ಎಂದಿತು ಅವರ ಬಂಧು ಬುದ್ಧಿ. ಆದರೆ ಈ ಹೆಡ್ಡ ಮಡ್ಡನಿಂದ ಏನು ಕೆಲಸಮಾಡಿಸಿಕೊಳ್ಳಬೇಕು! ಕೊನೆಗೆ ಅವರು ಅವನನ್ನು ಹೊಲ ಕಾಯಲಿಕ್ಕೆ ಹಚ್ಚಿದರು. ಅವನು ದನ ಜನ ಯಾರನ್ನು ಹೊಡೆದು ಹೆದರಿಸದಿದ್ದರೂ ಮಾನವನ ಗೊಂಬೆಗಿಂತ ಜೀವಂತ ಮನುಷ್ಯನನ್ನೇ ಕೂಡಿಸಿದರೆ ಹಕ್ಕಿ ಹಸು ಹೆದರಿ ತಾವಾಗಿ ಬರಲಿಕ್ಕಿಲ್ಲ ಎಂದು ಭಾವಿಸಿ ಅವನನ್ನು ಹೊಲಕ್ಕೆ ಅಟ್ಟಿ ಹಾಕಿದರು. ಎಲ್ಲಿ ಏನು ಈ ಅವಧೂತನಿಗೆ!

ಕೂಡಿಸಿದಲ್ಲಿ ಕೂಡುತ್ತಿದ್ದ. ಹಾಕಿದ್ದನ್ನು ಉಣ್ಣುತ್ತಿದ್ದ. ಹೇಳಿದ್ದನ್ನು ಕೇಳುತ್ತಿದ್ದ. ಇಂಥ ಬಂಧು ಸಿಕ್ಕದ್ದು ಭಾಗ್ಯವೆಂದರು ಬಳಗದವರು. ಸಂಬಳವಿಲ್ಲದೇ ತುಂಬ ದುಡಿಸಿಕೊಳ್ಳುತ್ತಿದ್ದರು. ಬರೀ ಕೂಳಿಗೆ ಇಂಥ ಆಳು ಹೇಗೆ ದೊರಕೀತು ! ಎಂದು ತಾವು ಉಂಡು ಮಿಕ್ಕಿದ್ದನ್ನೂ ಹೊತ್ತಿದ್ದನ್ನೂ ಹಳಸಿದ್ದನ್ನೂ ಅವನಿಗೆ ಈಡಾಗಿ ಬಡಿಸುತ್ತಿದ್ದರು. ಎಷ್ಟು ಹಾಕಿದರೂ ಅವನು ಬೇಡವೆನ್ನುತ್ತಿರಲಿಲ್ಲ. ಏನು ಹಾಕಿದರೂ ಎಲ್ಲವನ್ನು ಉಂಡು ಪಚನಮಾಡಿಕೊಂಡು ಹೃಷ್ಟಪುಷ್ಟನಾಗಿಯೇ ಅಲೆದಾಡುತ್ತಿದ್ದ. ಕೆಟ್ಟ ಕೂಳು ಹಾಕಿ ಅವನಿಂದ ಬಿಟ್ಟೀ ಕೆಲಸ ಮಾಡಿಸಿಕೊಳ್ಳದವರೇ ಇರಲಿಲ್ಲ. ಇಂಥ ತಲೆಕೆಟ್ಟಂತೆ ತಿರುಗಾಡುವ ಅವಸ್ಥೆಯಲ್ಲಿಯೂ ಅವನಿಂದಾದ ಪರೋಪಕಾರ ಅಷ್ಟಿಷ್ಟಲ್ಲ. ಒಂದು ರಾತ್ರಿ ಬಂಧುಗಳು ಅವನನ್ನು ಹೊಲಕಾಯಲಿಕ್ಕೆ ಕೂಡಿಸಿದ್ದರು.

## ''ಕೂಲಿ ಇಲ್ಲದ ಆಳು, ಕಾಳೀದೇವಿಗೆ ಕೂಳು''

ಇದೇ ಸಮಯದಲ್ಲಿ ಪಾಂಚಾಲದೇಶದ ದೊರೆಯ ಸಾರಥಿಯು ಕಾಳೀದೇವಿಗೆ ನರಬಲಿ ಕೊಡಬೇಕೆಂದು ಬಯಸಿ ಒಂದು ಪುರುಷ ಪಶುವನ್ನು ಹುಡುಕುತ್ತಿದ್ದ. ಅವನ ಕಣ್ಣಿಗೆ ಹೊಲ ಕಾಯುವ ಜಡಭರಿತ ಕಾಣಿಸಿದ. ಮೈ ತುಂಬಿಕೊಂಡ ಆಸಾಮಿ. ಹಣೆಯ ಮೇಲೆ ಅಂಗಾರ ಅಕ್ಷತೆ ಇಲ್ಲ. ಮೈಮೇಲೆ ದ್ವಾದಶನಾಮವಿಲ್ಲ. ಇವನು ಬ್ರಾಹ್ಮಣನಾಗಿರಲಿಕ್ಕಿಲ್ಲವೆಂದು ಭಾವಿಸಿದ ಆ ಸಾರಥಿ. ಬ್ರಹ್ಮಹತ್ಯೆಯ ಭಯವಿಲ್ಲ. ದಪ್ಪ ದೇಹದ ಈ ಕಾಳಿಯ ಬಲಿಯಾಗಲು ಒಪ್ಪುತ್ತಾನೆ ಎಂದು ಎಣಿಸಿ ಅವನನ್ನು ಎಳೆದುಕೊಂಡು ಕಾಳಿಯ ಗುಡಿಗೆ ನಡೆದರು. ಅವಧೂತನಾದ ಜಡಭರತ. ಕರೆದಲ್ಲಿಗೆ ನಡೆದ. ಅವನನ್ನು ಬಲಿಕೊಡುವ ಪಶುವನ್ನಾಗಿ ಮಾಡಿದರು. ಮೊದಲು ಮೈ ತೊಳೆದರು. ಬಟ್ಟೆ ಬರೆ ಉಡಿಸಿದರು. ವಸ್ತ್ರ ಒಡವೆ ತೊಡಿಸಿದರು. ಬಲಿಯಾಗಲಿರುವ ಪಶುವನ್ನು ಅಲಂಕಾರ ಮಾಡುವಂತೆ ಇವನನ್ನೂ ವಿಧಿ ಪೂರ್ವಕವಾಗಿ ಶೃಂಗರಿಸಿದರು. ಅವನನ್ನು ಕಡಿಯಲಿಕ್ಕೆ ಎಲ್ಲ ತಯಾರಿ ಮಾಡಿ ಕಾಳಿಕಾದೇವಿಯ ಎದುರು ತಂದರು. ಆ ಜಡಭರತನಿಗೋ ಇತ್ತ ಲಕ್ಷ್ಯವೇ ಇಲ್ಲ.

## ''ಭಕ್ತನ ರಕ್ತವ ಕೊಳ್ಳದೆ ಕಾಳಿ, ನಡುಗಿದಳಲ್ಲಿಯೇ ಭೀತಿಯ ತಾಳಿ''

ಅವನು ಹೃದಯದಲ್ಲಿ ಹರಿಯನ್ನು ಹೊತ್ತಿದ್ದ. ಮನಸ್ಸಿನಲ್ಲಿ ಮುಕುಂದನನ್ನು ಅನನ್ಯ ಭಕ್ತಿಯಿಂದ ನೆನೆಯುತ್ತಲಿದ್ದ. ಅವನನ್ನು ದೇವಿಯ ಮೂರ್ತಿಯೆದುರು ಕರೆತಂದಾಗ ಕಾಳೀದೇವಿಗೇ ದಿಗ್ಭ್ರಮೆಯಾಯಿತು. ಅವನ ಹೃದಯ ಪೀಠದಲ್ಲಿ ಹರಿ ಮಿಂಚುತ್ತಲಿರುವುದು ಅವಳಿಗೆ ಗೋಚರಿಸಿತು. ಅಂಥ ಭಗವದ್ಭಕ್ತನ ನೆತ್ತರವನ್ನು ತನಗೆ ನೀಡ ಬಂದದ್ದನ್ನು ಕಂಡು ಅವಳಿಗೆ ಕೋಪ ಕೆರಳಿತು. ಕೂಡಲೇ ಅವಳು ತನ್ನ ಕೈ ಖಡ್ಗವನ್ನು ಝಳಪಿಸಿ ಆ ರಾಜದೂತನ ಕೊರಳನ್ನು ಕತ್ತರಿಸಿದಳು. ನೆತ್ತರು ಎತ್ತರ ಚಿತ್ತರ ಚಿಮ್ಮಿತು. ದೇವಿಯು ಆ ನೀಚನ ನೆತ್ತರ ಹೀರಿ ತಣಿದಳು. ಅವಳ ಬೆಂಬಲಿಗರೂ ಸಾರಥಿಯ ಪರಿವಾರದವರು ಕೊಬ್ಬಿದ ದೇಹದಿಂದ ಬೀಸಿದ ಬಿಸಿ ರಕುತವನ್ನು ಕಂಟಮಟ ಕುಡಿದು ಕುಣಿದರು. ಭಗವಂತನ ದಯೆಯಿಂದ ಜಡ ಭರತ ಬಲಿಯಾಗದೇ ಬದುಕಿದ.

## "ಈಡು ದೇಹದ ಗುಂಡ, ಬೂದಿ ಮುಚ್ಚಿದ ಕೆಂಡ"

ಮತ್ತೊಂದು ದಿನ ಸೌವೀರ ದೇಶದ ಸಾಮ್ರಾಟ ಕಾಡಿನಲ್ಲಿ ಪಯಣ ಬೆಳಸಿದ್ದ. ಅರಸನ ಅಂದಣ ಹೊರಲು ವಾಹಕ ಒಬ್ಬ ಕಡಿಮೆ ಬಿದ್ದಿದ್ದ. ರಾಜದೂತ ಹುಡುಕುತ್ತಲಿದ್ದ. ಅವನ ಕಣ್ಣಿಗೆ ಜಡಭರತ ಬಿದ್ದ. ಆ ಧಾಂಡಿಗ ಯೋಗ್ಯ ಆಸಾಮಿ ಅರಸರ ಪಲ್ಲಕ್ಕಿ ಹೊರಲಿಕ್ಕೆ, ಎಂದುಕೊಂಡ ಆ ರಾಜದೂತ. ಅವನನ್ನು ಹಿಡಿದು ತಂದು ಹೂಡಿದ. ಅವನಿಗೆ ತಿಳಿಯದು ಅದು ಬೂದಿ ಮುಚ್ಚಿದ ಕೆಂಡ ಎಂದು. ಜಡಭರತನ ಹೆಗಲ ಮೇಲೆ ನಿಜವಾಗಿಯೂ ಬಹಳ ಜಡವಾದ ಪಲ್ಲಕ್ಕಿಯ ನೊಗ ಬಂದು ಕುಳಿತಿತು. ಉಳಿದ ಹತ್ತೆಂಟು ಜನ ವಾಹಕರೊಡನೆ ಜಡಭರತ ರಾಜ ಪಲ್ಲಕ್ಕಿಯನ್ನು ಹೊತ್ತು ನಡೆದ. ಒಳಗೆ ಕುಳಿತ ಅರಸನಿಗೋ ಅವನ ಯೋಗ್ಯತೆ ತಿಳಿಯದು. ಅವನ ದೊರೆಗೆ ಸಂಸಾರದಲ್ಲಿ ಅಸಾರತೆಯ ಬುದ್ಧಿ ಹುಟ್ಟಿತ್ತು. ಅವನು ಆಧ್ಯಾತ್ಮ ಗುರುವಿನ ಅನ್ವೇಷಣೆಯಲ್ಲಿ ಹೊರಟಿದ್ದ. ಅವನ ಕತೆಯೇ ಬೇರೆ.

## "ಬಾಳು ಗೋಳಿನ ಕೊನೆಯ ಅರಿಸ ಹೊರಟಿಹ ಅರಸ"

ಇಕ್ಷುಮತೀ ನದಿಯ ನೀರು ಕಬ್ಬಿನ ರಸದಷ್ಟು ಸಿಹಿ. ಅದರ ದಂಡೆಯ ಮೇಲೆ ಕಂಗೊಳಿಸುತ್ತಿದೆ ಕಪಿಲ ಮುನಿಯ ಆಶ್ರಮ. ಸೌವೀರ ದೇಶದ ಸಮ್ರಾಟನಿಗೆ ಸಂಸಾರ ಸಾಕು ಎನಿಸಿದೆ. ಈ ಪ್ರಪಂಚದಲ್ಲಿ ಎಲ್ಲ ಕಡೆಗೂ ಅವನಿಗೆ ಗೋಚರಿಸಿದ್ದು ಬರೀ ದುಃಖ. ಈ ಗೋಳಿನ ಬಾಳಿನಲ್ಲಿ ಶ್ರೇಯ ಎಂಬುದುಂಟೇ ! ಇದ್ದರೆ ಅದಾವುದು ! ಅದು ದೊರಕುವ ಬಗೆ ಹೇಗೆ ! ಇದನ್ನು ಅವನಿಗೆ ತಿಳಿಯಬೇಕಾಗಿದ್ದಿತು. ಈ ಬಾಳಿನ ಒಗಟ ಒಡೆಯ ಬಲ್ಲವ ಆ ಕಾಲದಲ್ಲಿ ಕಪಿಲಋಷಿಯೊಬ್ಬನೇ. ಅದನ್ನು ತಿಳಿದ ಸೌವೀರದ ದೊರೆ ಈಗ ಅವನನ್ನು ಅರಿಸಿಕೊಂಡು ಹೊರಟಿದ್ದ. ದಾರಿಯಲ್ಲಿ ಜಡಭರತ ಅವನಿಗೆ ಅಂದಣ ಹೊರುವ ಬೋಯಿಯಾಗಿ ದೊರೆತ.

## "ಹೃದಯದಲ್ಲಿ ಹರಿಯ ಹೊತ್ತ, ಎತ್ತೊ ಚಿತ್ತ, ಕಣ್ಗೆ ಮತ್ತ, ಕರೆಯ ಬಂದು ಹೆಗಲನಿತ್ತ"

ಜಡಭರತನ ಪ್ರಾರಬ್ಧ ಇನ್ನೂ ಸವೆದಿರಲಿಲ್ಲ. ಅದಕ್ಕಾಗಿ ಮೋಕ್ಷ ಧರ್ಮವನ್ನು ಕೇಳಲಿಕ್ಕೆಂದು ಕಪಿಲರ ಆಶ್ರಮಕ್ಕೆ ಹೊರಟ ಸೌವೀರ ನರೇಶನ ಅಂದಣಕ್ಕೆ ಅವನು ಹೆಗಲು ಹಚ್ಚಿದ. ಕೂಲಿಯ ಆಳುಗಳ ಜೊತೆಗೆ ಪಲ್ಲಕ್ಕಿ ಹೊತ್ತು ತಾನು ಹೆಜ್ಜೆ ಹಾಕಿದ. ಆದರೆ ಅವನು ತನ್ನ ಕಾಲಿನ ಕೆಳಗೆ ಸಿಕ್ಕು ಹುಳಹುಪ್ಪಡಿ ಸಾಯಬಾರದೆಂದು ಜಪ್ಪಿಸಿ ಹೆಜ್ಜೆ ಇರಿಸುತ್ತಿದ್ದ. ಒಂದು ಬಿಲ್ಲಿನಳತೆಯ ನೆಲವನ್ನು ಮೊದಲು ನಿರುಕಿಸಿ ಅಲ್ಲಿ ಯಾವ ಕ್ರಿಮಿ ಕೀಟ ಇಲ್ಲವೆಂದು ಖಾತ್ರಿಮಾಡಿಕೊಂಡು ಬಳಿಕವೇ ಅಲ್ಲಿ ಹಿಂದಿನ ಹೆಜ್ಜೆ ಕಿತ್ತು ಮುಂದಿನ ಹೆಜ್ಜೆ ಇಡುತ್ತಿದ್ದ. ಉಳಿದ ವಾಹಕರು ಯಾವ ವಿಚಾರವೂ ಇಲ್ಲದೇ ಲಗುಬಗೆಯಿಂದ ಹೆಜ್ಜೆ ಹಾಕುತ್ತಿದ್ದರು. ಆದರೆ ಜಡಭರತನು ನೆಲ ನೋಡಿ ವಿಚಾರ ಮಾಡಿ ನಡೆಯತೊಡಗಿದಾಗ ಎಲ್ಲರಿಗೂ ತಡೆಯುಂಟಾಗಿ ಪಲ್ಲಕ್ಕಿ ಗಲ್ಲಿಸಿದಂತಾಯಿತು.

ಕುಳಿತಲ್ಲಿಯೇ ಅತ್ತಿತ್ತ ಎಳೆದಾಡಿದಂತಾಗಿ ರಾಜನು ಗದರಿಸಿದ ''ವಾಹಕರೇ, ಇದೇನು ! ಹೀಗೇಕೆ ಪಲ್ಲಕ್ಕಿಯನ್ನು ಅಡ್ಡಾದಿಡ್ಡಿ ಜಗ್ಗಾಡಿದಂತೆ ನಡೆಯುತ್ತಲಿದ್ದೀರಿ ! ಚೆನ್ನಾಗಿ ಹೊತ್ತುಕೊಂಡು ನಡೆಯಿರಿ.''

ಹೆದರಿದ ಬೋಯಿಗಳು ಎಚ್ಚರದಿಂದ ನಡೆಯಹತ್ತಿದರು. ಆದರೆ ಜಡಭರತ ಮಾತ್ರ ಯಾಥಾ ಪ್ರಕಾರ ಹೆಗಲ ಮೇಲೆ ಅಂದಣ ಹೇರಿದೆ ಎಂಬ ಅರಿವಿಲ್ಲದವನಂತೆ ನೆಲವನ್ನು ನಿರುಕಿಸುತ್ತ ನಿದಾನವಾಗಿಯೇ ಹೆಜ್ಜೆಗಳನ್ನು ಎತ್ತಿ ಇಡುತ್ತಿದ್ದ. ಮತ್ತೆ ಪಲ್ಲಕ್ಕಿಯ ತೂಗಾಟ ಬೋಯಿಗಳ ಜಗ್ಗಾಟ, ಅರಸನಿಗೆ ಕುಳಿತಲ್ಲಿಯೇ ಕುಲಿಕಾಟ. ಆಚೀಚೆ ಹೊರಳಿ ಉರುಳಿದಂತೆ ಅನುಭವ. ಮತ್ತೆ ಸಾವರಿಸಿಗೊಂಡು ಗದರಿದ ''ಇದೇನು ಹುಡುಗಾಟ ! ಮನಬಂದಂತೆ ನಡೆಯುತ್ತಲಿರುವಿರಾ !'' ಭಯಭ್ರಾಂತರಾದ ಬೋಯಿಗಳು ನಡುಗುತ್ತ ನುಡಿದರು. ''ಬುದ್ಧಿ, ನಾವೇನೋ ಸರಿಯಾಗಿಯೇ ನಡೆಯುತ್ತಲಿದ್ದೇವೆ, ಆದರೆ ಈ ಹೊಸಬ ಮನುಷ್ಯ ಮಾತ್ರ ನಡೆಯಲ್ಲಿ ನಿಧಾನ ಮಾಡಿ ಎಲ್ಲರಿಗೂ ಹೆಜ್ಜೆ ತಪ್ಪಿಸುತ್ತಿದ್ದಾನೆ. ತಪ್ಪು ಅವನದು ನಮ್ಮದಲ್ಲ.'' ರಾಜ ಜಡಭರತನೆಡೆಗೆ ತಿರುಗಿದ. ಅವನು ತುಂಬಿಕೊಂಡ ಮೈ ಕೈ ನೋಡಿದ. ನಕ್ಕು ನುಡಿದ. ''ಏನಯ್ಯಾ ! ಬಹಳ ದಣಿವಾಯಿತೇ ! ನೀನು ನಡೆದದ್ದು ಹತ್ತು ಹೆಜ್ಜೆ. ಇಷ್ಟಕ್ಕೇ ಆಯಾಸವಾಯಿತೇ ! ನೋಡಲಿಕ್ಕೆ ತುಂಬ ತೋರವಾಗಿ ಕಾಣುತ್ತೀ. ಇಂಥ ಪುಷ್ಟ ದೇಹಕ್ಕೆ ನನ್ನ ಪಲ್ಲಕ್ಕಿಯನ್ನು ಹತ್ತು ಜನರೊಂದಿಗೆ ಹೊತ್ತು ಇಷ್ಟು ನಡೆದ ಮಾತ್ರಕ್ಕೆ ಭಾರೀ ಶ್ರಮವಾಯಿತೇ !''

## ಅರೆಹುಚ್ಚನ ಮಾತಿನ 'ಮುಂಡಿಗೆ'

''ಮಹಾರಾಜ, ನಾನು ಪುಷ್ಟನಾಗಿಲ್ಲ. ನಿನ್ನ ಪಲ್ಲಕ್ಕಿಯನ್ನೂ ನಾನು ಹೊತ್ತಿಲ್ಲ. ನಾನು ದಣಿದಿಲ್ಲ. ಹೊರುವ ಆಯಾಸವನ್ನು ನಾನು ಸಹನ ಮಾಡಿಕೊಳ್ಳುವ ಪ್ರಮೇಯವೇ ಇಲ್ಲ.'' ಅವಧೂತನಂತೆ ನುಡಿದ ಆ ಅರೆಹುಚ್ಚ. ರಾಜನಿಗೆ ಅಚ್ಚರಿಯಾಯಿತು. ಕೌತುಕಪಟ್ಟು ಕೇಳಿದ ''ನಾನು ಪುಷ್ಟನಾಗಿಲ್ಲ ಎಂದು ಹೇಳುತ್ತೀಯ. ಆದರೆ ನೀನು ದಪ್ಪ ದಾಂಡಿಗನಾಗಿದ್ದುದು ಪ್ರತ್ಯಕ್ಷವಾಗಿದೆಯಲ್ಲ! ಈ ಪಲ್ಲಕ್ಕಿ ನಿನ್ನ ಹೆಗಲ ಮೇಲಿದ್ದುದು ಕಣ್ಣಿಗೇ ಕಾಣುವುದು. ನಾನು ಪಲ್ಲಕ್ಕಿ ಹೊತ್ತಿಲ್ಲವೆಂದು ಹೇಗೆ ಹೇಳುವೆ ! ಮತ್ತು ಭಾರ ಹೊತ್ತ ದೇಹಕ್ಕೆ ಶ್ರಮ ಆಗದಿರುತ್ತದೆಯೇ ! ಪ್ರತ್ಯಕ್ಷ ಆದ ಶ್ರಮವನ್ನು ಅಪಲಾಪ ಮಾಡುತ್ತಿರುವಿಯಲ್ಲ!''

## ರಾಜನ ಪ್ರಶ್ನೆಗೆ ಜಡಭರತ ಉತ್ತರಿಸಿದ

ಜಡಭರತ :- ''ರಾಜನೇ, ನಿನ್ನ ಕಣ್ಣಿಗೆ ಕಂಡದ್ದನ್ನು ಮಾತ್ರ ಹೇಳು. ''ನೀನು ಪಲ್ಲಕ್ಕಿಯನ್ನು ಹೊತ್ತಿರುವೆ. ನಿನ್ನ ಹೆಗಲ ಮೇಲೆ ಪ್ರತ್ಯಕ್ಷ ಪಲ್ಲಕ್ಕಿ ಇದೆ'' ಎಂದು ನನಗೆ ಹೇಳಿದೆಯಲ್ಲ! ಇದೆಲ್ಲವೂ ಸುಳ್ಳು. ತುಸು ವಿಚಾರಿಸಿ ನೋಡು. ನೆಲದ ಮೇಲೆ ನನ್ನ ಎರಡು ಕಾಲುಗಳಿವೆ. ಕಾಲಿನ ಮೇಲೆ ಮೊಣಕಾಲಿನ ಗಣಿಕೆಗಳು ! ಮೊಣಕಾಲಿನ ಮೇಲೆ ತೊಡೆಗಳಿವೆ. ತೊಡೆಯ ಮೇಲೆ ಹೊಟ್ಟೆಯನ್ನು ಹೇರಿದೆ.

ಹೊಟ್ಟೆಯನ್ನು ಆಧರಿಸಿ ಎದೆ ನಿಂತಿದೆ.ಆ ಎದೆಯ ಮೇಲೆ ಹೆಗಲು. ಹೆಗಲಿನ ಮೇಲೆ ಪಲ್ಲಕ್ಕಿ ಇಟ್ಟಿದೆ. ಈ ಹೆಗಲು ಪಲ್ಲಕ್ಕಿ ಹೊತ್ತರೆ ನನಗೇಕೆ ಶ್ರಮವಾಗಬೇಕು.!

ಪಲ್ಲಕ್ಕಿಯಲ್ಲಿ ನಿನ್ನದು ಎನ್ನಲಾಗುವ ರಾಜನ ದೇಹವು ಇದೆ. 'ನಾನು' ಕೆಳಗೆ ನೆಲದ ಮೇಲೆ ನಿಂತಿದ್ದೇನೆ. ''ನಿನ್ನ ಅಂದಣವನ್ನು ನಾನು ಹೊತ್ತಿದ್ದೇನೆ'' ಎನ್ನುವ ಮಾತು ಕೂಡ ಮಿಥ್ಯೆಯಾಗಿದೆ. ಅಲ್ಲಿ ಕುಳಿತ ನಿನ್ನನ್ನೂ ಇಲ್ಲಿ ನಿಂತ ನನ್ನನ್ನೂ ಪಂಚಮಹಾಭೂತಗಳು ಧರಿಸಿರುತ್ತವೆ. ಗುಣಗಳ ಪ್ರವಾಹ ಪತಿತವಾದ ಆ ಸತ್ವಾದಿಗುಣಗಳು ಕರ್ಮಾಧೀನವಾಗಿವೆ. ಆ ಜೀವನ ಕರ್ಮಗಳು ಅವಿದ್ಯಾ ಮೂಲಕವಾಗಿವೆ. ಈ ಅವಿದ್ಯಾ ನಿವೃತ್ತಿಗೆ ಕಾರಣನಾದ ಪರಮಾತ್ಮನಂತೂ ಶುದ್ಧ. ನಾಶರಹಿತ, ಗುಣ ತ್ರಯಾತೀತ. ಎಲ್ಲ ಪ್ರಾಣಿಗಳ ಅಂತರ್ಯಾಮಿಯಾದ ಆ ಪರಮಾತ್ಮನಿಗಂತೂ ವೃದ್ಧಿ ಇಲ್ಲ, ಹ್ರಾಸಾದಿಗಳಿಲ್ಲ. ಅಂದ ಬಳಿಕ ನೀನು ಪುಷ್ಟನಾಗಿರುವಿ' ಎಂದು ನೀನು ಯಾವ ಯುಕ್ತಿಯಿಂದ ಹೇಳುವೆ ? ಈ ಆತ್ಮವು ಕೊಬ್ಬುವದೂ ಇಲ್ಲ. ಕೊರಗುವದೂ ಇಲ್ಲ. ಸೊಕ್ಕುವದೂ ಇಲ್ಲ. ಸೊರಗುವುದೂ ಇಲ್ಲ. ಆದುದರಿಂದ ನೀನು ದಪ್ಪ ಧಾಂಡಿಗನಾಗಿರುವಿ' ಎಂದು ನುಡಿದ ಮಾತು ಸುಳ್ಳಾಗಿದೆ. ಮತ್ತು ನೆಲದ ಮೇಲೆ ನನ್ನ ಕಾಲು, ಕಾಲಿನ ಮೇಲೆ ಮೊಣಕಾಲು, ಮೊಣಕಾಲ ಮೇಲೆ ತೊಡೆ, ತೊಡೆಯ ಮೇಲೆ ಟೊಂಕ, ಟೊಂಕದ ಮೇಲೆ ಹೊಟ್ಟೆ, ಹೊಟ್ಟೆಯ ಮೇಲೆ ಎದೆ, ಎದೆಯಮೇಲೆ ಹೆಗಲು ಇದ್ದು ಅದರ ಮೇಲೆ ಪಲ್ಲಕ್ಕಿ ಇದೆ. ಆ ಪಲ್ಲಕ್ಕಿಯ ಭಾರವು ನನ್ನ ಮೇಲೆ ಇರುವುದಾದರೆ ನಿನ್ನ ಮೇಲೆ ಏಕೆ ಇಲ್ಲ! ನೀನು ಬೇರೆ ಈ ಪಲ್ಲಕ್ಕಿ ಹೊತ್ತವ ಬೇರೆಯಾದುದರಿಂದ ನಿನಗೆ ಭಾರವಿಲ್ಲವಾದರೆ ಇಲ್ಲಿ ನಾನು ಬೇರೆ ಈ ಪಲ್ಲಕ್ಕಿ ಹೊತ್ತು ನನ್ನ ಈ ದೇಹ ಬೇರೆಯಾದುದರಿಂದ ನನಗೂ ಭಾರವಿಲ್ಲ. ಭಿನ್ನವಾದರೂ ಭಾರ ಹೊತ್ತಂತಾದರೆ ನಿನಗೇಕೆ ಆ ಭಾರ ಎನಿಸಬಾರದು? ಇದೇ ನ್ಯಾಯದಿಂದ ಪ್ರಪಂಚದಲ್ಲಿ ಗುಡ್ಡ ಕಲ್ಲು ಕಾಡು ನಾಡುಗಳೆ ಹೊತ್ತ ಭಾರ ಎಲ್ಲರಿಗೂ ಎನಿಸಬೇಕಾಯಿತು. ಹಾಗೆ ಆಗದಿರುವುದಕ್ಕೆ ಆ ಪ್ರಾಕೃತಿಕ ಪದಾರ್ಥಗಳಿಗೂ ಜೀವಾತ್ಮರಿಗೂ ಇರುವ ಸ್ವಾಭಾವಿಕ ಭೇದವೇ ಕಾರಣವಾಗುವದಾದರೆ ಅದೇ ಕಾರಣದಿಂದ ಈ ದೇಹದಿಂದ ಭಿನ್ನನಾದ ನನಗೆ ದೇಹವು ಪಲ್ಲಕ್ಕಿ ಹೊತ್ತರೂ ಆಯಾಸವಾಗಲಿಕ್ಕೆ ಏನು ಕಾರಣವಿದೆ? ನಿಷ್ಕಾರಣವಾಗಿ 'ನಿನಗೆ ಆಯಾಸವಾಗಿದೆ' ಎಂದು ನೀನು ಹೇಳಿದ್ದು ತಪ್ಪು.''

ಹೀಗೆ ನುಡಿದ ಜಡಭರತ ಮೌನ ತಾಳಿದ. ಅವನ ಮಾತು ಕೇಳಿದಾಗಲೇ ಮಹಾರಾಜನಿಗೆ ತಿಳಿದು ಹೋಯಿತು. 'ಇದೊಂದು ಮಹಾಚೇತನ' ಎಂದು ಕೂಡಲೇ ಅವನು ಅಂದಣದಿಂದ ಕೆಳಗೆ ಧುಮುಕಿದ. ಆ ಪುಣ್ಯಾತ್ಮನ ಪಾದಹಿಡಿದ. ತನ್ನ ತಪ್ಪಿನ ಅರಿವಾಗಿ ತತ್ತರಿಸುತ್ತ ನುಡಿದ.

ರಾಜ :- ''ಮಹಾರಾಯ, ಮೊದಲು ಆ ಪಲ್ಲಕ್ಕಿಯನ್ನು ಬಿಡು. ಈಚೆಗೆ ಬಾ, ದಯಮಾಡಿ ಅದಕ್ಕೆ ನೀನು ಹೆಗಲು ಹಚ್ಚಬೇಡ. ನೀನಾವನೋ ಸತ್ಪುರುಷನಿರುವೆ. ಹುಚ್ಚನ ವೇಷದಲ್ಲಿ ಬರಲು ಕಾರಣವೇನು !''

**ಜಡಭರತ** :- ಮಹಾರಾಜ, ನಾನು ಯಾರು ಎನ್ನುವುದನ್ನು ಏನೆಂದು ಹೇಳಲಿ! ಜೀವಿಗಳ ಭೋಗಾದೃಷ್ಟಕ್ಕೆ ಅನುಗುಣವಾಗಿ ಬರುಹೋಗುವ ಕ್ರಿಯೆ ನಡೆದಿರುತ್ತದೆ. ಪುಣ್ಯ ಕಾರ್ಯಮಾಡಿದವರು ಸುಖವನ್ನು, ಪಾಪಕಾರ್ಯ ಮಾಡಿದವರು ದುಃಖವನ್ನೂ ಅನುಭವಿಸಬೇಕಾಗುವುದು. ಜೀವಿಗಳಿಗೆ ಈ ಸುಖ ದುಃಖಗಳ ಅನುಭವವನ್ನು ತಂದು ಕೊಡಲಿಕ್ಕಾಗಿ ಪಾಂಚಭೌತಿಕ ಶರೀರವು ಪ್ರಾಪ್ತವಾಗುತ್ತದೆ. ಈ ಜಗತ್ತಿನಲ್ಲಿಯ ಎಲ್ಲ ಪ್ರಾಣಿಗಳೂ ನಾವು ಹಿಂದೆ ಗೈದ ಪುಣ್ಯ ಪಾಪಗಳ ಫಲವನ್ನು ಭೋಗಿಸಲಿಕ್ಕಾಗಿ ಲೋಕದಲ್ಲಿ ಅತ್ತಿತ್ತ ಅಲೆದಾಡುತ್ತಲಿರುವರು. ಅಂದ ಬಳಿಕ ''ನೀನು ಇಲ್ಲಿ ಬಂದ ಕಾರಣ ಏನು'' ಎಂದು ಬೇರೆ ಕಾರಣವನ್ನು ಏನು ಕೇಳುತ್ತೀ?

**ಮಹಾರಾಜ** :- ''ಬ್ರಹ್ಮನ್, ತಾವು ಹೇಳಿದ್ದು ನಿಜ. ಜೀವಿಗಳು ಮಾಡಿದ ಧರ್ಮಾಧರ್ಮಗಳೇ ಎಲ್ಲದಕ್ಕೂ ಕಾರಣ. ಅವರವರ ಪುಣ್ಯಪಾಪಗಳ ಫಲೋಪಭೋಗಕ್ಕಾಗಿಯೇ ಪ್ರಾಣಿಗಳು ಒಂದು ದೇಹದಿಂದ ದೇಹಾಂತರಕ್ಕೆ ಪಯಣ ಬೆಳೆಸುತ್ತವೆ. ಇದೆಲ್ಲ ಸರಿ. ಆದರೆ ತಾವು ಯಾರು ಎಂಬ ನನ್ನ ಪ್ರಶ್ನೆಗೆ ನಾನು ಎಂದು ಉತ್ತರ ಕೊಡಲಿಕ್ಕೆ ಆಗುವುದಿಲ್ಲ ಎಂದು ಹೇಳಿದಿರಲ್ಲವೇ! ಅದೇಕೇ! ನೀವು ಹೇಳಿದಂತೆಯೇ ಪ್ರಾರಬ್ಧ ವಶದಿಂದ ಬಂದ ಈ ದೇಹದ ಒಡೆಯನಾದ ಆತ್ಮನು 'ನಾನು' ಎಂದು ಹೇಳಬಹುದಲ್ಲವೇ! ಆತ್ಮನಲ್ಲಿ 'ಅಹಂ' 'ನಾನು' ಎಂಬ ಶಬ್ದವನ್ನು ಪ್ರಯೋಗಿಸಿದರೆ ಏನೂ ತಪ್ಪಿಲ್ಲವಷ್ಟೇ!''

**ಜಡಭರತ** :- ನಿಜವಾದ ಆತ್ಮನಲ್ಲಿ 'ಅಹಂ' ನಾನು ಎಂಬ ಶಬ್ದವನ್ನು ಉಪಯೋಗಿಸಿದರೆ ದೋಷವಿಲ್ಲವೆಂಬುದೇನೋ ನಿಜ. ಆದರೆ ಆತ್ಮನಲ್ಲದ್ದರಲ್ಲಿ 'ಅಹಂ' ಎಂಬ ಶಬ್ದವನ್ನು ಉಚ್ಚರಿಸುವದೂ ತಪ್ಪು. ಹಾಗೆ ತಿಳಿಯುವದೂ ತಪ್ಪು. ಈಗ 'ಅಹಂ' ಎಂಬ ಶಬ್ದವನ್ನು ಉಚ್ಚರಿಸುವವರಾರು! ನಾಲಿಗೆ, ಹಲ್ಲು, ತುಟಿ, ನಾಲಿಗೆಯ ಮೇಲಿನ ಅಂಗಳ ಇವೆಲ್ಲ ಕೂಡಿ 'ಅಹಂ' ಎಂಬ ಶಬ್ದವನ್ನು ಉಚ್ಚರಿಸುತ್ತವೆ. ಆದರೆ 'ಅಹಂ' ಎನ್ನುವ ಇವಾವೂ ಆತ್ಮವಾಗಿಲ್ಲ. ಇವೆಲ್ಲವೂ 'ಅಹಂ' ಎಂಬ ಶಬ್ದವು ಉದಿಸಿ ಬರಲಿಕ್ಕೆ ಕಾರಣವಾಗಿವೆ. ಅಥವಾ ಇವೆಲ್ಲವುಗಳ ಸಹಾಯದಿಂದ ವಾಣಿಯು 'ಅಹಂ' ಎನ್ನುತ್ತದೆ. ಆದರೆ ಅದು ಕೂಡ 'ಅಹಂ' ಪದಾರ್ಥವಲ್ಲ. ಆದುದರಿಂದ 'ಅಹಂ' ಎಂದರೆ ನಾನು ಎಂದು ಹೇಗೆ ಹೇಳಲಿ! ಆದುದರಿಂದಲೇ 'ನೀನು ಪುಷ್ಟನಾಗಿರುವಿ' ಎಂದು ನೀನಾದರೂ ನನಗೆ ಹೇಗೆ ಹೇಳಬಲ್ಲೆ! ರಾಜನ್, ಕೈ ಕಾಲು ತಲೆಗಳಿಂದ ಕೂಡಿದ ಮಾನವನ ಈ ದೇಹ ಪಿಂಡವು ಅವನ ಜೀವದಿಂದ ಅತ್ಯಂತ ಭಿನ್ನವಾಗಿದೆ. ಅಂದ ಬಳಿಕ 'ನಾನು' ಎಂದು ಎಲ್ಲಿ ಶಬ್ದವನ್ನು ಪ್ರಯೋಗಿಸಲಿ!

## ಆತ್ಮನಿಗೆ ಯಾವ ಉಪಾಧಿ?

ಆತ್ಮ ಭೇದದಿಂದ ಈ ರಾಜ ರಂಕ ಭೇದವಾಗಿದೆಯೆಂದೂ ಹೇಳಲಿಕ್ಕೆ ಬರುವುದಿಲ್ಲ. ಯಾಕೆಂದರೆ ಆತ್ಮನಿಗಂತೂ ಯಾವ ಭೇದ, ತಾರತಮ್ಯಗಳಿಲ್ಲ. ಪಶು ಆತ್ಮ, ವೃಕ್ಷಾತ್ಮ, ಪಕ್ಷ್ಯಾತ್ಮ, ರಾಜನ ಆತ್ಮ, ಸೇವಕ ಆತ್ಮ, ಎಂದು ಮುಂತಾಗಿ ಆತ್ಮನಿಗೆ ಶಾಶ್ವತವಾದ

ಉಪಾಧಿಗಳಿಲ್ಲ. ಅವನಿಗೆ ಆಗಾಗ ಬಂದ ದೇಹಗಳ ಮೂಲಕವಾಗಿಯೇ ಮನುಷ್ಯ, ಪಶು, ಪಕ್ಷಿ, ದೇವ, ದಾನವ, ಗಿಡ, ಗಂಟಿ, ಎಂದು ಮುಂತಾಗಿ ಗುರುತಿಸಬೇಕಾಗುವುದು. ಈ ದೇಹಗಳೋ ಕರ್ಮಾಧೀನವಾಗಿ ಬಂದಿವೆ. ಮತ್ತೆ ಮುಂದೆ ಬೇರೆ ಬೇರೆ ಪಶು ಪಕ್ಷಿ, ಅರಸ, ಆಳು, ದಾಸ, ದೇವ, ವೃಕ್ಷ, ವರಾಹ ಮುಂತಾದ ದೇಹಗಳು ಇವೇ ಜೀವಗಳಿಗೆ ಬರಲಿಕ್ಕುಂಟು. ಆದುದರಿಂದ ಈ ಜೀವಕ್ಕೆ ಇದಾವುದೂ ವಾಸ್ತವಿಕವಲ್ಲ. ಎಂದೂ ಯಾವ ಕಾಲಕ್ಕೂ ಯಾವ ಕಾರಣದಿಂದಲೂ ಬದಲಾಗದೇ ಏಕರೂಪವಾಗಿರುವುದೇ ವಾಸ್ತವಿಕವೆನಿಸುವುದು. ಜೀವನಿಗೆ 'ಇವ ರಾಜ, ಇವ ಸೇವಕ, ಇದು ಪಶು, ಪಕ್ಷಿ, ಇದು ಬ್ರಾಹ್ಮಣ, ಇದು ನಾನು, ಇದು ನೀನು ಎಂದು ಕೊರೆದು ಖಚಿತಗೊಳಿಸಿ ಹೇಳಲಿಕ್ಕೆ ಯಾವ ವಾಸ್ತವಿಕ ಉಪಾಧಿಯುಂಟು !

## ನಿನ್ನನ್ನು ಏನೆಂದು ಕರೆಯಲಿ !

ಮತ್ತು ರಾಜನ್, ನೀನು ಈ ಎಲ್ಲ ಜನರಿಗೂ ಈ ದೇಶಕ್ಕೂ ರಾಜ. ನಿನ್ನ ತಂದೆಗೆ ಮಗ. ನಿನ್ನ ಮಗನಿಗೆ ಅಪ್ಪ. ನಿನ್ನ ವೈರಿಗೆ ಶತ್ರು. ಹೆಂಡತಿಗೆ ಗಂಡ. ಅಂದ ಬಳಿಕ ನಿನ್ನನ್ನು ನಾನು ಏನೆಂದು ಕರೆಯಲಿ ! ವಾಸ್ತವಿಕವಾಗಿ ನೀನಾರು ! ಗಂಡನೋ ! ಮಗನೋ ! ತಂದೆಯೋ ! ಮಿತ್ರನೋ ! ಶತ್ರುವೋ ! ಹಾಗೂ ನೀನು ತಲೆಯೋ ? ಕೊರಳೋ ? ಹೊಟ್ಟೆಯೋ ? ಕೈಯೋ ? ಕಾಲೋ ? ಯಾರು ನೀನು ? ಇವೇ ನೀನೋ ? ನಿನ್ನವೇ ಇವುಗಳೋ ? ಅಥವಾ ಇವುಗಳೇ ನೀನೋ ! ಏನು ? ಏಕೆ ? ನಿಜವಾಗಿ ನೋಡಿದರೆ ಇದಾವುದೂ ನೀನು ಅಲ್ಲ. ಇವೆಲ್ಲವುಗಳಿಂದ ನೀನು ಭಿನ್ನವೇ ಆಗಿರುವಿ. ಅದರಂತೆ ನಾನೂ ಇವುಗಳಿಂದ ಭಿನ್ನವೇ ಆಗಿರುವೆನು. ಅಂದ ಬಳಿಕ 'ಅಹಂ' ಎಂದು ನಾನು ಎಲ್ಲಿ ಶಬ್ದವನ್ನು ಉಚ್ಚರಿಸಲಿ? ಇದರಂತೆ ನೀನಾದರೂ ಲಕ್ಷವಿತ್ತು ಸಾವಧಾನವಾಗಿ 'ನಾನು ಯಾರು' ಎಂಬುದನ್ನು ವಿಚಾರಿಸಿ ನೋಡು. ಅಂದರೆ ನಿನಗೆ ಆತ್ಮತತ್ವವನ್ನು ಪೃಥಕ್ಕರಿಸಿ 'ಅಹಂ' ಎಂದು ಉತ್ತರ ಹೇಳದೇ ಕುಳಿತಿರುವ ನನ್ನ ಅಭಿಪ್ರಾಯದ ಅರ್ಥವು ಚೆನ್ನಾಗಿ ಆಗಲಿಕ್ಕೆ ಸಾಕು.''

ಜಡಭರತನ ಅರ್ಥಗರ್ಭಿತವಾದ ಮಾತುಗಳನ್ನು ಕೇಳಿ ಸೌವೀರದೊರೆಯ ತಲೆ ತಾನಾಗಿ ತಗ್ಗಿತು. ಅವನು ವಿನಯದಿಂದ ಬಾಗಿ ಕೇಳಿದ.

''ಮಹಾತ್ಮರೇ, ತಾವು ಹೇಳಿದ ಮಾತು ನಿಜವಾಗಿಯೂ ಅರ್ಥಪೂರ್ಣವಾಗಿರುತ್ತದೆ. ಪರಮಾರ್ಥತತ್ವವನ್ನು ಬಲ್ಲ ಪುಣ್ಯಾತ್ಮರೇ, ನಿಮ್ಮ ವಿಚಾರ ಧಾರೆಯನ್ನು ಕೇಳಿ ತಿಳಿದು ಪರಮಾರ್ಥವನ್ನು ತಿಳಿಯಬೇಕೆಂದು ಜಿಜ್ಞಾಸೆ ಹುಟ್ಟಿದೆ. ಈ ತತ್ವಾರ್ಥದ ತಿರುಳನ್ನು ತಿಳಿಯಬೇಕೆಂಬ ಹವ್ಯಾಸದಿಂದಲೇ ನಾನು ಈ ಮೊದಲೇ ಮನೆ ಬಿಟ್ಟು ಹೊರಟಿದ್ದೇನೆ.

## ''ಕಪಿಲನನ್ನು ಕಾಣ ಹೊರಟು ಕಪಿಯ ಕಾರ್ಯ ಮಾಡಿದೆ''

ಭಗವಾನ್ ಕಪಿಲ ಋಷಿಯು ಸಾಕ್ಷಾತ್ ಶ್ರೀ ಹರಿಯ ಅವತಾರೀ ಪುರುಷ. ಜನರ ಅಜ್ಞಾನವನ್ನು ಪರಿಹರಿಸಲಿಕ್ಕಾಗಿಯೇ ಇದು ಅವನ ಜ್ಞಾನಕಾರ್ಯಾರ್ಥ ಅವತಾರ. ಪಾಮರರಿಗೆ ಪ್ರಮೇಯವನ್ನು ತಿಳಿಸಲಿಕ್ಕಾಗಿಯೇ ಈ ನೆಲದೆದೆಗೆ ಇಳಿದು ಬಂದ ಆ ಜಗದೀಶ್ವರನನ್ನು ಒಮ್ಮೆ ಕಂಡು ಕೇಳಬೇಕೆಂದು ಸಂಕಲ್ಪಿಸಿದ್ದೆ ''ಸ್ವಾಮಿ, ಈ ಜಗತ್ತಿನಲ್ಲಿ

ನಿಜವಾದ ಶ್ರೇಯಸ್ಸು ಯಾವುದು ? ಪರಮಾರ್ಥ ಯಾವುದು ? ಎಂದು. ಆದರೆ ಇದೀಗ ನಿಮ್ಮ ಜಾಣ್ನುಡಿಗಳನ್ನು ಕೇಳಿದ ಬಳಿಕ ನಿಮ್ಮಿಂದಲೇ ನಿಜವಾದ ಪರಮಾರ್ಥವನ್ನು ತಿಳಿದುಕೊಳ್ಳಬೇಕೆಂದು ಚಿತ್ತವು ತವಕಿಸುತ್ತದೆ. ನೀವು ಇಷ್ಟು ಹೊತ್ತಿನವರೆಗೆ ನುಡಿದ ಮಾತುಗಳನ್ನು ಆಲಿಸಿದಾಗ ನನ್ನ ಜ್ಞಾನದ ಹಸಿವನ್ನು ತಣಿಸಲಿಕ್ಕಾಗಿ ಸಾಕ್ಷಾತ್ ಆ ಕಪಿಲದೇವನೇ ನಿಮ್ಮ ರೂಪದಿಂದ ಇಲ್ಲಿಗೆ ಬಂದಂತೆನಿಸುವುದು. ಸ್ವಾಮಿ, ತಾವು ಅರಿವಿನ ಆಗರ. ಜ್ಞಾನದ ಅಲೆಗಳ ಸಾಗರ. ನಿಮ್ಮ ಅಡಿದಾವರೆಗಳಿಗೆ ಎರಗಿದ ನನಗೆ 'ಪರಮ ಶ್ರೇಯಸ್ಸು ಯಾವುದರಿಂದಾಗುವುದು ? ನಿರೂಪಿಸಬೇಕು. ರತ್ನ ಬೆಲೆಯನ್ನು ಅರಿಯದ ಕೋತಿಯಂತೆ ತಮ್ಮ ಯೋಗ್ಯತೆ ತಿಳಿಯದ ನಾನು ತಮ್ಮನ್ನು ಈ ಅಂದಣ ಹೊರಲಿಕ್ಕೆ ಹಚ್ಚಿದೆ. ಕ್ಷಮಿಸಿ ಮತ್ತು ಜ್ಞಾನೋಪದೇಶ ಮಾಡಿರಿ !' ಪಾರಮಾರ್ಥಿಕವಾದ ಶ್ರೇಯಸ್ಸಾವದು ?

## ಶ್ರೇಯಸ್ಸು, ಪರಮಾರ್ಥ ಎರಡೂ ವಿರುದ್ಧ

ಅದನ್ನು ಕೇಳಿ ಜಡಭರತನು ''ರಾಜನ್ ಪರಮಾರ್ಥವನ್ನು ತಿಳಿಯ ಬಯಸಿ ಶ್ರೇಯಸ್ಸು ಯಾವುದು ಎಂದು ಪ್ರಶ್ನೆ ಮಾಡುತ್ತಲಿರುವಿ. ಆದರೆ ಇಲ್ಲಿಯ ಶ್ರೇಯಸ್ಸಾಗಲಿ ಪ್ರೇಯಸ್ಸಾಗಲಿ ಯಾವುದೂ ಪಾರಮಾರ್ಥಿಕವಾಗಿಲ್ಲ. ಕೆಲವರು ದೇವರನ್ನು ಆರಾಧಿಸಿ ಸಿರಿ ಸೌಭಾಗ್ಯವನ್ನು ಬಯಸುತ್ತಾರೆ. ಹಲವರು ಮಕ್ಕಳನ್ನು ಬಯಸುತ್ತಾರೆ. ಮತ್ತೆ ಕೆಲವರು ರಾಜ್ಯವನ್ನು ಅಪೇಕ್ಷಿಸುತ್ತಾರೆ. ಇವರೆಲ್ಲ ಇದೇ ಶ್ರೇಯಸ್ಸು ಎಂದು ತಿಳಿದಿರುತ್ತಾರೆ. ಮತ್ತೆ ಕೆಲವು ಧಾರ್ಮಿಕರು ಸ್ವರ್ಗಾದಿ ಫಲವನ್ನು ತಂದು ಕೊಡುವ ಯಜ್ಞ ಯಾಗಾದಿಗಳನ್ನು ಮಾಡಿ ಅದೇ ಶ್ರೇಯಸ್ಸು ಎಂದು ಬಗೆಯುವರು.

## ನಿಜವಾದ ಶ್ರೇಯಸ್ಸು

ಆದರೆ ಇದಾವದೂ ಪರಮಶ್ರೇಯಸ್ಸಲ್ಲ. ಮಾನವನ ನಿಜವಾದ ಶ್ರೇಯಸ್ಸೆಂದರೆ ಪರಮಾತ್ಮನ ಸಂಯೋಗ ಮಾತ್ರ. ಈ ಯಜ್ಞ ಯಾಗಾದಿ ಕಾರ್ಯಗಳನ್ನು ಫಲೇಚ್ಛೆ ಇಲ್ಲದೆ ಭಗವದರ್ಪಣ ಬುದ್ಧಿಯಿಂದ ಮಾಡಿದರೆ ಇವೆಲ್ಲವೂ ಶ್ರೇಯಸ್ಸಾಧನವೆನಿಸುತ್ತವೆ.

## ನಿಜವಾದ ಪರಮಾರ್ಥ

ಇದರಂತೆ ಧನ, ಪುತ್ರ, ರಾಜ್ಯ, ಧರ್ಮ, ಕರ್ಮಗಳಾವೂ 'ಪರಮಾರ್ಥ' ಎನಿಸುವುದಿಲ್ಲ. ಧನವೇ ಮನುಷ್ಯನಿಗೆ ಪರಮಾರ್ಥ ಎನಿಸಿದ್ದರೆ ಭೋಗ ವಿಲಾಸ ಸಾಮಗ್ರಿಗಳಾಗಿ ಮಾನವರು ಆ ಹಣವನ್ನು ಹೀಗೇಕೆ ತೂರುತ್ತಿದ್ದರು ! ಹೆಂಡಿರು ಮಕ್ಕಳಿಗಾಗಿ ಬೇಕಾದಷ್ಟು ದುಡ್ಡನ್ನು ಏಕೆ ಸೂರೆ ಮಾಡುತ್ತಿದ್ದರು. ಧಾರ್ಮಿಕ ಮನುಷ್ಯರಾದರೂ ಧರ್ಮಕಾರ್ಯಕ್ಕಾಗಿ ದ್ರವ್ಯವನ್ನು ಏಕೆ ವೆಚ್ಚಮಾಡುತ್ತಿದ್ದರು ! ಆದುದರಿಂದ ಧನವು ಪರಮಾರ್ಥವಲ್ಲ. ಇದರಂತೆ ರಾಜ್ಯಾದಿಗಳೂ ಪರಮಾರ್ಥವಲ್ಲ. ಅವೆಲ್ಲವೂ ನಾಶವಾಗುವ ಸಂಭವವುಂಟು. ಹ್ರಾಸ ವಿನಾಶವಾಗುವ ಅಸ್ಥಿರ ವಸ್ತು ಪರಮಾರ್ಥ ಎನಿಸಲಾರದು. ಅದರಂತೆ ಪುತ್ರಾದಿಗಳೂ ಪರಮಾರ್ಥವಾಗಲಾರವು. ಪಶು, ಪಕ್ಷಿ, ದನ, ಕರು ಮುಂತಾದವುಗಳಲ್ಲಿಯೂ ಮಾನವರಲ್ಲಿಯೂ ಪ್ರತಿಕ್ಷಣವೂ

ಬೇಕೆಂದರೂ ಬೇಡವೆಂದರೂ ಲಕ್ಷ ಕೋಟಿ ಸಂಖ್ಯೆಯಲ್ಲಿ ಹುಟ್ಟುತ್ತಲೇ ಇರುವ ಅಸಂಖ್ಯ ಜೀವಜಂತುಗಳೆಲ್ಲ ಪುರುಷಾರ್ಥ ಎನ್ನಬೇಕಾದೀತು. ಇದರಂತೆ ಋಗಾದಿ ವೇದ ಮಂತ್ರಗಳಿಂದ ಮಾಡುವ ಯಜ್ಞಯಾಗಾದಿಗಳೂ ಪರಮಾರ್ಥವಲ್ಲ. ಯಾಕೆಂದರೆ ದರ್ಭೆ, ತುಪ್ಪ, ಕಟ್ಟಿಗೆ (ಸಮಿಧಾ) ಸೌಟು ಮುಂತಾದ ನಶ್ವರ ವಸ್ತುಗಳಿಂದ ಮಾಡಿದ ಹೋಮ ಹವನಗಳೂ ಆದರಿಂದ ಪ್ರಾಪ್ತವಾಗುವ ಸ್ವರ್ಗಾದಿ ಫಲಗಳೂ ನಶ್ವರವೇ ಆಗಿರುವುದರಿಂದ ಇವಾವೂ ಪರಮಾರ್ಥವಾಗಲು ಸಾಧ್ಯವಿಲ್ಲ. ಫಲಾಶಾರಹಿತವಾದ ಧರ್ಮ ಕರ್ಮವೇ ಪರಮಾರ್ಥ ಎನ್ನಲೂಬಾರದು. ಈ ತರಹದ ನಿಷ್ಕಾಮ ಕರ್ಮದ ಮುಖ್ಯ ಫಲವು ಮೋಕ್ಷವಾದುದರಿಂದ ಇದು ಮೋಕ್ಷಸಾಧನವಾಯಿತು. ಆದುದರಿಂದ ಅದು ಪರಮಾರ್ಥವಾಗಲಾರದು. ಹಾಗಾದರೆ ಆ ಮೋಕ್ಷವೇ ಪರಮಾರ್ಥ ಎಂದರೆ ಅದು ಪರಮಾತ್ಮನ ಪ್ರಸಾದದಿಂದಲೇ ಲಭ್ಯವಾಗಿದೆ. ಅವನು ಕೊಟ್ಟರೆ ಉಂಟು. ಇಲ್ಲದಿದ್ದರೆ ಇಲ್ಲ. ಇನ್ನೊಬ್ಬರ ಇಚ್ಛಾನಿಚ್ಛಾಗಳ ಮೇಲೆ ಅವಲಂಬಿಸಿದ ಮೋಕ್ಷವೂ ಪರಮಾರ್ಥವಲ್ಲ. ಇನ್ನು ಪ್ರತಿಯೊಂದು ಜೀವನ ದೇಹದಲ್ಲಿ ಜೀವನಿಂದ, ಜೀವನ ದೇಹಗಳಿಂದ ಭಿನ್ನವಾಗಿ ಇರುವ ಭಿನ್ನ ಭಿನ್ನ ಪರಮಾತ್ಮರುಗಳೇ ಪರಮಾತ್ಮ ಎನ್ನೋಣ ಎಂದರೆ ಆ ಪರಮಾರ್ಥವು ಭಿನ್ನ ಭಿನ್ನವಾಗಿರಲಾರದು. ಹಾಗಾದರೆ ಜೀವಾತ್ಮ ಪರಮಾತ್ಮರ ಐಕ್ಯ ಅಥವಾ ತಾದಾತ್ಮ್ಯ ಯೋಗವೇ ಪರಮಾರ್ಥ ಎಂದರೆ ಇದಂತೂ ಅತ್ಯಂತ ಅಸಂಭಾವಿತ. ಒಂದು ವಸ್ತು ಇನ್ನೊಂದು ವಸ್ತು ಎಂದು ಆಗಲಾರದು.

. "ಪರಮಾತ್ಮಾನುನೋರ್ಯೋಗಃ ಪರಮಾರ್ಥ ಇತೀಷ್ಯತೆ
ಮಿಥ್ಯೈತದನ್ಯದ್ರ್ವ್ಯಂ ಹಿ ನೈತಿ ತದ್ರ್ವ್ಯತಾಂ ಯತಃ॥

## ಪರಮಾತ್ಮನೇ ಪರಮಾರ್ಥ

ಆದುದರಿಂದ ನಿಜವಾದ ಪರಮಾರ್ಥ ವಸ್ತು ಯಾವುದು ಎನ್ನುವುದನ್ನು ಹೇಳುತ್ತೇನೆ ಕೇಳು. ಏಕಮೇವ ಅದ್ವಿತೀಯನಾದ, ಸರ್ವತ್ರ ವ್ಯಾಪ್ತನಾದ, ದೋಷರಹಿತನಾದ ಪರಮಾತ್ಮನೇ ನಿಜವಾದ ಪರಮಾರ್ಥನಾಗಿದ್ದಾನೆ. ಭಿನ್ನ ಭಿನ್ನ ಪ್ರಾಣಿಗಳ ಅಸಂಖ್ಯ ಶರೀರದಲ್ಲಿ ಇದ್ದರೂ ಆ ಪರಮಾತ್ಮನು ಒಬ್ಬನೇ ಆಗಿದ್ದಾನೆ ಎಂಬ ಜ್ಞಾನವೇ ಪರಮಾರ್ಥ ಜ್ಞಾನವಾಗಿದೆ. ಭಿನ್ನ ಭಿನ್ನ ದೇಹದ್ಯಧಿಷ್ಠನಗಳಲ್ಲಿರುವ ಪರಮಾತ್ಮನ ರೂಪಗಳು ಭಿನ್ನ ಭಿನ್ನ ಎಂದು ತಿಳಿಯುವವರು ನಿಜವಾದ ತತ್ವಜ್ಞಾನಿಗಳೇ ಅಲ್ಲ. ಪೊಳ್ಳು ಬಿದಿರುಗಳಲ್ಲಿ ಪ್ರವೇಶಿಸಿ ಗಾಳಿಯು ಷಡ್ಜಾದಿ ಬೇರೆ ಬೇರೆ ರಾಗತಾನಗಳನ್ನು ಹೊರಡಿಸುವಂತೆ ಒಬ್ಬನೇ ಪರಮಾತ್ಮನು ಎಲ್ಲ ಕಡೆಗೂ ತುಂಬಿಕೊಂಡಿದ್ದು ಪ್ರತಿಯೊಬ್ಬ ಪ್ರಾಣಿಯ ಶರೀರದಲ್ಲಿ ಸೂಕ್ಷ್ಮಪ್ರವಿಷ್ಟನಾಗಿ ಬೇರೆ ಬೇರೆ ಜೀವರಿಗೆ ಅವರವರ ಕರ್ಮಾನುಸಾರ ಭಿನ್ನ ಭಿನ್ನ ಭೋಗ ದೇಹಗಳನ್ನು ಕೊಟ್ಟು ಬಗೆ ಬಗೆಯ ಕಾರ್ಯಗಳನ್ನು ಮಾಡಿಸುತ್ತ ಇರುತ್ತಾನೆ." ಜಡಭರತನ ಈ ತತ್ವ ವಿವೇಕವನ್ನು ಕೇಳಿ ವೀರನರೇಶನು ಮೂಕನಾದನು. ಅವನು ಹೇಳಿದ ಪರಾಪರ ಈ ತತ್ವವಿವೇಚನೆಯನ್ನೇ ಅವನು ಇನ್ನೂ ಮೌನದಿಂದ ಮೆಲುಕು ಹಾಕುತ್ತಿದ್ದನು. ಅವನಿಗೆ ಆ ಭಗವತ್ತತ್ವವನ್ನು ಇನ್ನೂ ತಿಳಿಯಾಗಿ ತಿಳಿಸಿಕೊಡುವ ಉದ್ದೇಶದಿಂದ ಜಡಭರತನು ಮತ್ತೆ ತನ್ನ ಮಾತನ್ನು ಮುಂದುವರಿಸಿದನು.

## ವಿಕ್ಷಿಪ್ತ ಗುರು. ವಿಚಿತ್ರ ಶಿಷ್ಯ

''ಬ್ರಹ್ಮದೇವರಿಗೆ ಋಭು ಎಂಬ ಮಗನಿದ್ದ. ತತ್ವಾರ್ಥಗಳ ರಹಸ್ಯವೆಲ್ಲವೂ ಅವನಿಗೆ ಸ್ವಾಭಾವಿಕವಾಗಿ ತಿಳಿದಿತ್ತು. ಪುಲಸ್ತ್ಯ ಮಹರ್ಷಿಯ ಪುತ್ರನಾದ ನಿದಾಘನು ಋಭುವಿನ ಶಿಷ್ಯನಾದ. ಇಂಥ ಬ್ರಹ್ಮರ್ಷಿಯ ಕುಮಾರನಿಗೆ ಋಭುವು ಅತ್ಯಂತ ಸಂತೋಷದಿಂದ ಪಾಠ ಹೇಳಿ ಅವನಿಗೆ ಎಲ್ಲ ಜ್ಞಾನವಿಜ್ಞಾನಗಳ ತಿರುಳನ್ನು ತಿಳಿಸಿ ಹೇಳಿದನು. ನಿದಾಘನಿಗೆ ಜ್ಞಾನ ಪ್ರಪಂಚದ ತಲತುದಿಗಳೆಲ್ಲದರ ತಿಳವುಂಟಾಗಿತ್ತು. ಅವುಗಳ ತಂತ್ರ, ತಿರುವು, ಸುಳಿವು, ಹೊಳವುಗಳೆಲ್ಲದರದೂ ಚೆನ್ನಾಗಿ ಪರಿಚಯವಾಗಿತ್ತು. ಆದರೆ ಸರ್ವತ್ರ ಅನೇಕಾನೇಕ ಅಧಿಷ್ಠಾನಗಳಲ್ಲಿರುವ ಭಗವದ್ರೂಪಗಳೆಲ್ಲವೂ ಒಬ್ಬ ಪರಮಾತ್ಮನೇ ಆಗಿರುತ್ತವೆ ಎಂಬ ಮಾತು ಇನ್ನೂ ಅವನಿಗೆ ಖಚಿತವಾಗಿ ಬುದ್ಧ್ಯಾರೂಢವಾಗಿದ್ದಿಲ್ಲ. ಅವನ ಈ ಅದ್ವೈತ ವಾಸನೆಯು ಅಲಗಾಡುತ್ತಲಿರುವುದು ಅವನ ಗುರು ಋಭುವಿನ ಲಕ್ಷಕ್ಕೆ ಬಂದಿತು. ಅವನಿಗೆ ಹೇಗಾದರೂ ಮಾಡಿ ಧೃಡತರವಾದ ಭಗವದ್‌ಜ್ಞಾನವನ್ನು ಉಂಟು ಮಾಡಿಕೊಡಬೇಕೆಂದು ಅವನ ಗುರು ಋಭುಋಷಿಯು ಸಂಕಲ್ಪಿಸಿದ.

## ಅವನು ಮರೆತ, ಇವನು ಅರಿತ

ದೇವಿಕಾ ಎಂಬ ನದಿಯ ದಡದಲ್ಲಿ ವೀರನಗರ ಒಂದು ಸುಂದರ ಪಟ್ಟಣ. ಆ ನಗರಿಯನ್ನು ನಿರ್ಮಿಸಿದವರು ಮಹರ್ಷಿ ಪುಲಸ್ತ್ಯರು. ಅದರ ಸುತ್ತು ಮುತ್ತು ಸುಂದರ ಬನ. ಹಸಿರು ಕುಸುರು. ಎಲ್ಲೆಡೆಗೂ ಸೊಬಗಿನ ಸುಗ್ಗಿ. ಈ ರಮಣೀಯತೆಯ ಸಮೃದ್ಧಿಯ ಒಡಲಿನಲ್ಲಿ ಬಹುಕಾಲದ ಹಿಂದೆ ಪುಲಸ್ತ್ಯಮುನಿ ಕೂಡಿಸಿದ ಆ ನಗರದಲ್ಲಿ ನಿದಾಘವಾಸಿಸುತ್ತಾನೆ. ಇವನೇ ಆ ಋಭು ಮುನಿಯ ಪ್ರಾಜ್ಞ ಶಿಷ್ಯ. ಈ ಗುರು ಶಿಷ್ಯರು ಭೇಟಿಯಾಗಿ ಇಂದಿಗೆ ಸಾವಿರ ವರ್ಷಗಳು ಸಂದಿವೆ. ಇಬ್ಬರೂ ತಪೋಬಲದಿಂದ ದೀರ್ಘಾಯುಷ್ಯ ಪಡೆದಿದ್ದಾರೆ. ಒಂದು ದಿನ ತನ್ನ ಶಿಷ್ಯನನ್ನು ಕಾಣಬೇಕೆಂಬ ತವಕ ಉಂಟಾಯಿತು ಋಭುಋಷಿಗೆ. ಅವನು ನೇರವಾಗಿ ವೀರನಗರಕ್ಕೆ ಐತಂದ. ತನ್ನ ಮನೆಯ ಬಾಗಿಲಿಗೆ ಋಭು ಬಂದಾಗ ನಿದಾಘ ವೈಶ್ವದೇವ ಬಲಿಹರಣಗಳನ್ನು ಮಾಡಿ ಮುಗಿಸಿ ಕಾಗೆಗೆ ಬಲಿ ಇತ್ತ, ಅತಿಥಿಗಳ ದಾರಿ ಕಾಯುತ್ತಲಿದ್ದ. ಸಮಯಕ್ಕೆ ಸರಿಯಾಗಿ ಬಂದ ಅತಿಥಿಯನ್ನು ಕಂಡು ನಿದಾಘನಿಗೆ ಸಂತೋಷವಾಯಿತು. ಅವನನ್ನು ಆನಂದದಿಂದ ಸ್ವಾಗತಿಸಿದ. ಈ ಗುರು ಶಿಷ್ಯರು ಭೇಟಿಯಾಗಿ ಸಾವಿರಾರು ವರ್ಷಗಳು ಕಳೆದುಹೋಗಿದ್ದವು. ಗುರುಕುಲ ಬಿಟ್ಟು ಬಳಿಕ ನಿದಾಘ ಗುರುವಿನ ಮುಖವನ್ನೇ ಕಂಡುದಿಲ್ಲ. ಆದುದರಿಂದ ಅವನಿಗೆ ಗುರುವಿನ ಗುರುತೇ ಹತ್ತಲಿಲ್ಲ. ಆದರು ಮಧ್ಯಾಹ್ನ ಸಮಯದಲ್ಲಿ ಅನಾಯಸವಾಗಿ ಬಾಗಿಲ ಬಳಿ ಬಂದ ಆ ಅತಿಥಿಯನ್ನು ಅತ್ಯಾದರದಿಂದ ನಿದಾಘ ಸ್ವಾಗತಿಸಿದ. ಅರ್ಘ್ಯ ನೀಡಿದ. ಕೈ ಹಿಡಿದು ಸಂಭ್ರಮದಿಂದ ಮನೆಯೊಳಗೆ ಕರೆದುಕೊಂಡು ಹೋದ. ಭಕ್ತಿಯಿಂದ ಕಾಲು ತೊಳೆದ ಪ್ರೀತಿಯಿಂದ ಅಸನದ ಮೇಲೆ ಕೂಡಿಸಿದ. ಪ್ರಶಸ್ತವಾದ ಎಲೆ ಬಡಿಸಿ ಕೈ ಮುಗಿದು ''ಊಟ ಮಾಡಬೇಕು'' ಎಂದು ಬಾಗಿ ಬಿನ್ನವಿಸಿದ.

## "ಕರೆಯದೆ ಬಂದ, ಮೃಷ್ಟಾನ್ನ ಬಡಿಸು ಎಂದ"

ಆದಕ್ಕೆ ಆ ಬಂದ ಬ್ರಾಹ್ಮಣ ಅನ್ನವನ್ನು ಮುಟ್ಟದೆ ಮನೆಯೊಡೆಯ ನಿದಾಘನಿಗೆ ಪ್ರಶ್ನೆ ಹಾಕಿದ. "ಬ್ರಾಹ್ಮಣೋತ್ತಮ, ನಿನ್ನ ಮನೆಯಲ್ಲಿ ಏನೇನು ಅನ್ನವಿದೆ ಮೊದಲು ಹೇಳು. ನನಗೆ ಕೆಟ್ಟ ಊಟ ಸೇರುವುದಿಲ್ಲ. ಕಾಡು ಕೂಳು ಆಗುವುದಿಲ್ಲ. ಒಳ್ಳೇದನ್ನು ಮಾತ್ರ ನಾನು ಸ್ವೀಕರಿಸುತ್ತೇನೆ." ಆಗ ನಿದಾಘ ವಿನಯದಿಂದ ಕೈ ಜೋಡಿಸಿ "ಪೂಜ್ಯರೆ, ನನ್ನ ಮನೆಯಲ್ಲಿ ಅನ್ನ, ರೊಟ್ಟಿ,ಬೇಳೆ ಪೂರಿಗಳನ್ನು ಮಾಡಿದೆ. ಇವುಗಳಲ್ಲಿ ತಮಗೆ ರುಚಿಸಿದ್ದನ್ನು ಸ್ವೀಕರಿಸಬೇಕು" ಎಂದು ನುಡಿದ. ಅದಕ್ಕೆ ಆ ಅತಿಥಿಯು ನಿರ್ಭಯದಿಂದ "ಅಯ್ಯಾ ! ಬ್ರಾಹ್ಮಣ ! ಇದೆಲ್ಲವೂ ಕದನ್ನ. ಇಂಥ ಕೆಟ್ಟ ಕೂಳು ತಿಂದು ನನಗೆ ಅಭ್ಯಾಸವಿಲ್ಲ. ಏನಾದರು ಮೃಷ್ಟಾನ್ನವಿದ್ದರೆ ನೀಡು. ಸಿಹಿಯಾದ ಪಾಯಸವಿಲ್ಲವೇ ! ಹಲ್ವಾ, ಒಡೆ, ಹೋಳಿಗೆ ಆದರೂ ನಡೆದೀತು" ಎಂದು ಕೇಳಿದ. ಆಗ ನಿದಾಘನು ತನ್ನ ಮಡದಿಯನ್ನು ಕೂಗಿದ. "ಪ್ರಿಯೇ, ನಮ್ಮ ಮನೆಯಲ್ಲಿ ಇರುವ ಅತ್ಯಂತ ರುಚಿಕರವಾದ ಪದಾರ್ಥಗಳಿಂದ ಒಳ್ಳೇ ಸವಿಸವಿಯಾದ ಭಕ್ಷ್ಯಭೋಜ್ಯಗಳನ್ನು ಮಾಡಿ ಈ ಅತಿಥಿಗೆ ಬಡಿಸು" ಎಂದು ಅಪ್ಪಣೆಯಿತ್ತನು. ಅದರಂತೆ ಆ ಪತಿವ್ರತೆಯು ಕೂಡಲೇ ರುಚಿಕರವಾದ ಮೃಷ್ಟಾನ್ನ ಪಕ್ವಾನ್ನಗಳನ್ನು ಮಾಡಿ ಆ ಬ್ರಾಹ್ಮಣನಿಗೆ ಬಡಿಸಿದಳು. ಆಗ ಋಭುಮುನಿಯು ಆ ಸವಿಯಾದ ಭಕ್ಷ್ಯಭೋಜ್ಯಗಳನ್ನು ಯಥೇಚ್ಛವಾಗಿ ಉಂಡು ತಿಂದು ತಣಿದನು. ಆಗ ನಿದಾಘನು ಅವನಿಗೆ ಕೈ ಮುಗಿದು "ವಿಪ್ರೋತ್ತಮರೇ ಈ ಊಟದಿಂದ ತಮಗೆ ತೃಪ್ತಿಯಾಯಿತೇ ! ಇದರಿಂದ ತಮ್ಮ ಮನಸ್ಸಿಗೆ ಸಂತೋಷವಾಗಿದೆಯಷ್ಟೇ ! ತಮ್ಮ ಊರು ಯಾವುದು ! ತಾವೀಗ ಎಲ್ಲಿಗೆ ಹೊರಟಿರುವುದು ! ಎಲ್ಲಿಂದ ತಾವಿಲ್ಲಿಗೆ ಬರೋಣವಾಯಿತು !" ಎಂದು ಕೇಳಿದನು. ನಿದಾಘನ ಉಪಚಾರದ ಮಾತಿಗೆ ಋಭುಋಷಿ ಕೊಟ್ಟ ಉತ್ತರ ವಿಚಿತ್ರವಾಗಿತ್ತು.

## "ಮಾಡಿದ್ದೆಲ್ಲ ತಿಂದ, ಉಂಡೇ ಇಲ್ಲ ಎಂದ"

"ಬ್ರಾಹ್ಮಣ, ಹಸಿವು ಆದ ಮನುಷ್ಯ ಊಟ ಮಾಡಿದರೆ ತೃಪ್ತಿಯಾಗುತ್ತದೆ. ನನಗೆ ಹಸಿವೆಯೇ ಹುಟ್ಟಿಲ್ಲ. ಅಂದ ಬಳಿಕ ನನಗೆ ತೃಪ್ತಿಯಾಗುವ ಮಾತೆಲ್ಲಿ ಬಂತು ! ಜಠರಾಗ್ನಿಯಿಂದ ದೇಹ ಘಟಕವಾಗಿರುವ ಪಾರ್ಥಿವ ಧಾತುಗಳು ಕ್ಷೀಣವಾದಾಗ ಹಸಿವೆಯಾಗುತ್ತದೆ. ಜಲಮಯಧಾತು ಕ್ಷೀಣವಾದಾಗ ನೀರಡಿಕೆಯಾಗುತ್ತದೆ. ಈ ಹಸಿವು ಮತ್ತು ಬಾಯಾರಿಕೆ ದೇಹದ ಧರ್ಮಗಳು. ಇವೆರಡೂ ನನಗೆ ಸಂಬಂಧವಿಲ್ಲ. ಆದುದರಿಂದಲೇ ನನಗೆ ಎಂದಿಗೂ ಹಸಿವೆಯೇ ಆಗುವುದಿಲ್ಲ. ಆ ಕಾರಣದಿಂದಾಗಿ ನಾನು ನಿತ್ಯತೃಪ್ತನೇ ಇದ್ದೇನೆ. ನಿನ್ನ ಮನೆಯ ಊಟದಿಂದ ನನಗೇನು ಹೊಸ ತೃಪ್ತಿಯಾಗಬೇಕಾಗಿದೆ ! ಮತ್ತು "ನಿಮಗೆ ಸಂತೋಷವಾಯಿತೇ?" ಎಂದು ನೀನು ಪ್ರಶ್ನಿಸಿದೆ. ಆದರೆ ಸಂತೋಷ, ಸಮಾಧಾನ ಸ್ವಾಸ್ಥ್ಯ ಮುಂತಾದವುಗಳೆಲ್ಲ ಮನಸ್ಸಿನ ಧರ್ಮಗಳು. ಮನಸ್ಸಿಗೆ ಸಂಬಂಧ ಪಟ್ಟ ಧರ್ಮಗಳಾದದ್ದರಿಂದ ಈ ವಿಷಯದಲ್ಲಿ

ಮನಸ್ಸನ್ನೇ ವಿಚಾರಿಸಿರಿ. ನನ್ನನ್ನೇಕೆ ! ''ನೀನು ಇರುವದೆಲ್ಲಿ? ಎಲ್ಲಿಂದ ಬಂದೆ ! ಎಲ್ಲಿಗೆ ಹೋಗುವುದು ? ಎಂಬ ಅಭಿಪ್ರಾಯದಿಂದ ನೀನು ಮಾಡಿದಪ್ರಶ್ನೆಗಳು ನಿರರ್ಥಕವೇ ಆಗಿವೆ''. ಜೀವಾತ್ಮನಿಗಂತೂ ಎಲ್ಲಿಯೂ ಹೋಗಲಿಕ್ಕೂ ಬರಲಿಕ್ಕೂ ಸ್ವಾತಂತ್ರ್ಯವಿಲ್ಲ. ಪರಮಾತ್ಮನೇ ಸರ್ವತ್ರ ವ್ಯಾಪ್ತನಾಗಿದ್ದಾನೆ. ಅವನು ಎಲ್ಲಿಂದಲೂ ಬರುವುದಿಲ್ಲ ಎಲ್ಲಿಗೂ ಹೋಗುವುದಿಲ್ಲ. ಮತ್ತು ಸರ್ವಗತನಾಗಿರುವವನಿಗೆ ಎಲ್ಲಿ ಇರುತ್ತೀ ?, ಎಂದು ಹೇಗೆ ಕೇಳುವುದು ! ಆದುದರಿಂದ ನಿನ್ನ ಈ ಮೂರು ಪ್ರಶ್ನೆಗಳು ಅಸಂಗತವಾಗಿವೆ. ವಾಸ್ತವಿಕವಾಗಿ ವಿಚಾರಿಸಿ ನೋಡಿದರೆ ನೀನು ನೀನಲ್ಲ, ನಾನು ನಾನಲ್ಲ, ಅವರು ಅವರಲ್ಲ, ನಾವೆಲ್ಲರೂ ಆ ಪರಮಾತ್ಮನ ಪಡಿನೆಳಲಿದ್ದಂತೆ. ನಮ್ಮ ನಿಮ್ಮ ಅಳಿವು, ಉಳಿವು, ಗತಿ, ಮತಿ ಎಲ್ಲವೂ ಅವನ ಇಚ್ಛೆ ಅವನು ಕುಣಿಸಿದಂತೆ ಕುಣಿಯುವುದು. ಅವನು ಆಡಿಸಿದಂತೆ ಆಡುವುದು. ಇವಿಷ್ಟೇ ನಮ್ಮ ಕಾರ್ಯ. ವಸ್ತು ಸ್ಥಿತಿ ಹೀಗಿರುವಾಗ ನಾನು ನೀನು ಅಸ್ಮಿತೆಗೆ ಅವಕಾಶವೆಲ್ಲಿ!

## ಅನ್ನದಲ್ಲಿ ರುಚಿ ಯಾವುದು ! ಶುಚಿ ಯಾವುದು ?

ಮತ್ತು ''ಪಕ್ವಾನ್ನವನ್ನೇ ಉಣ್ಣಲಿಕ್ಕೆ ಹಾಕು. ನನಗೆ ಕದನ್ನ ಸೇರುವುದಿಲ್ಲ'' ಎಂದು ಮುಂತಾಗಿ ನಾನು ಹೇಳಿದ್ದೆಲ್ಲವೂ ನಿನ್ನನ್ನು ಪರೀಕ್ಷಿಸಲಿಕ್ಕಾಗಿಯೇ! ''ಮಧುರ ಭಕ್ಷ್ಯಗಳನ್ನುಮಾತ್ರ ಬಡಿಸು'' ಎಂದು ನಾನೆಂದಾಗ ಇದಕ್ಕೆ ನಿನ್ನ ಪ್ರತಿಕ್ರಿಯೆ ಎಂತಾಗಬಹುದೆಂಬುದನ್ನು ನನಗೆ ನೋಡಬೇಕಾಗಿದ್ದಿತು. ಬ್ರಾಹ್ಮಣೋತ್ತಮ, ನಿಜ ನುಡಿಯಬೇಕೆಂದರೆ ಊಟಮಾಡುವವನಿಗೆ ರುಚಿ ಏನು ! ಅರುಚಿ ಏನು ! ಎಂಥ ರುಚಿಕರವಾದ ಪಕ್ವಾನ್ನವಾದರೂ ಒಂದೆರಡು ಗಂಟೆ ಅಥವಾ ದಿನಗಳಲ್ಲಿ ಹಳಸಿ ಕೆಟ್ಟ ಕಹಿಯಾಗಿ ಹೋಗುವುದು. ಈಗ ಕಹಿ ಒಗರು ಇದ್ದುದು ಕಾಲಾಂತರದಲ್ಲಿ ಕಳತು, ಪಣ್ಣಾಂಡು ರುಚಿಕರವಾಗುತ್ತದೆ. ಈಗ ಒಳ್ಳೇ ಸವಿ ಕಟ್ಟಾದ ತಿಂಡಿತೀರ್ಥಗಳು ಕಾಲಾಂತರದಲ್ಲಿ ಕೆಟ್ಟು ಕೊಳೆತು ಹಳತು ವಿಷವಾಗುತ್ತವೆ. ಎಷ್ಟೋ ವಸ್ತುಗಳು ನಾಲಿಗೆಗೆ ರುಚಿಯಾದರೂ ದೇಹಕ್ಕೆ ಅಪಾಯಕಾರಕಗಳಾಗಿ ಅಪಥ್ಯವೆನಿಸುತ್ತವೆ. ಕಹಿಯಿದ್ದರೂ ಎಷ್ಟೋ ವಸ್ತುಗಳು ದೇಹಕ್ಕೆ ಪೋಷಕವಾಗಿ. ತಿನ್ನಲಿಕ್ಕೆ ರುಚಿಕರವಾಗಿರುತ್ತವೆ. ಹಿಂದೆ ಮುಂದೆ ಈಗ ಮೂರು ಕಾಲದಲ್ಲಿಯೂ ಕೆಡದೇ ಕಹಿಯಾಗದೇ ಸವಿಯಾಗಿಯೇ ಇರುವ ಭಕ್ಷ್ಯವಾವುದು ! ಭೋಜ್ಯವಾವುದು ! ಈ ದೃಷ್ಟಿಯಿಂದ ಮಾನವರು ತಿನ್ನುವ ಪದಾರ್ಥಗಳೆಲ್ಲವೂ ಕಸವೇ, ರಸವಲ್ಲ.

## ಮಣ್ಣಿನ ಗೋಡೆಗೆ ಸೆಗಣೆಯ ಸಾರಣೆಯೇ ಸರಿ

ಆದರೆ ಮಣ್ಣಿನ ಮನೆಯನ್ನು ಮತ್ತೆ ಮಣ್ಣಿನಿಂದಲೇ ಮೆತ್ತಿದಾಗ ಅದು ಗಟ್ಟಿಯಾಗುವಂತೆ ಮನುಷ್ಯರ ಈ ಪಾರ್ಥಿವ ದೇಹವು ಪಾರ್ಥಿವ ಪರಮಾಣುಗಳಿಂದ ರೂಪಗೊಂಡ ಅಕ್ಕಿ, ಬೇಳೆ, ಜೋಳ, ಗೋದಿ, ತುಪ್ಪ, ಎಣ್ಣೆ ಹಾಲೂ, ಮೊಸರು, ಹಣ್ಣು, ಬೆಲ್ಲ, ಮುಂತಾದ ಪದಾರ್ಥಗಳಿಂದ ಪುಷ್ಟವಾಗುತ್ತದೆ. ಇದರಲ್ಲಿ ಕದನ್ನವಾವುದು ! ಮೃಷ್ಟಾನ್ನವಾವುದು ! ಇದನ್ನೆಲ್ಲ ಅರಿತು ಮಾನವನು

ಸಮದೃಷ್ಟಿಯುಳ್ಳವನಾಗಬೇಕು. ಅದರಿಂದಲೇ ಮೋಕ್ಷ." ತನ್ನ ಮನೆಗೆ ಬಂದ ಅತಿಥಿ ಋಭುಮುನಿಯು ಹೇಳಿದ ನುಡಿಗಳು ನಿಜವಾಗಿಯೂ ಪಾರಮಾರ್ಥಿಕವಾಗಿದ್ದವು. ಮನೆಯೊಡೆಯ ನಿದಾಘ ಸಾಮಾನ್ಯನಾಗಿದ್ದಿಲ್ಲ. ಅವನದು ಹರಿತ ಬುದ್ಧಿ, ಹದಗೊಂಡ ಮನಸ್ಸು. ಅಂತೆಯೇ ಋಭು ಪ್ರಭುವಿನ ಮಾತಿನ ಮಲಕಿನಲ್ಲಿಯೂ ಅವಿತು ಆತು ನಿಂತ ಅಂತರಾರ್ಥವನ್ನು ಸರಿಯಾಗಿ ಗ್ರಹಿಸಿತು ಅವನ ಸಂಸ್ಕಾರವಂತ ಮನಸ್ಸು. ಕೂಡಲೇ ಅವನು ಋಭುವಿನ ಚರಣಗಳಿಗೆ ತಲೆಚಾಚಿದ. ಕೈ ಮುಗಿದು ಕೇಳಿದ "ಸ್ವಾಮಿ, ನಿಮ್ಮ ನುಡಿಗಳಿಂದ ನನ್ನ ಮನದಲ್ಲಿ ಮನೆಮಾಡಿದ ಮೋಹವೆಲ್ಲ ಅಳಿಯಿತು. ನನ್ನ ಮೇಲೆ ದಯೆ ದೋರಬೇಕು. ತಾವು ಯಾರು! ಹೇಳಿರಿ"

**ಆಗ ಋಭು ಮುನಿ ಉತ್ತರಿಸಿದ :-**

"ನಾನು ನಿನ್ನ ಗುರು, ಋಭು, ನಿನಗೆ ದಿವ್ಯವಾದ ಪ್ರಜ್ಞೆಯನ್ನು ದಾನ ಮಾಡೋಣ ಎಂದೇ ಬಂದೆ. ನಿಜವಾದ ಪರಮಾರ್ಥ ವಿಚಾರವನ್ನು ನಿನಗೆ ತಿಳಿಸಿದ್ದಾಯಿತು. ಈ ಪ್ರಪಂಚದಲ್ಲಿ ವಾಸುದೇವನೊಬ್ಬನೇ ಮುಖ್ಯ, ಸರ್ವಕರ್ತ, ಸರ್ವಸತ್ತಾಪ್ರದ ಅವನನ್ನು ಬಿಟ್ಟರೆ 'ನಾನು' ಎಂದು ಎದೆ ತಟ್ಟಿ ಹೇಳಿಕೊಂಡು ಬಾಳಿ ಬದುಕಬಲ್ಲ ವಸ್ತು ಬೇರೆ ಇಲ್ಲ" ಇದನ್ನು ಕೇಳಿ ಗುರುಭಕ್ತನಾದ ನಿದಾಘ ಅವರಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. ಶ್ರದ್ಧೆಯಿಂದ ಅವನ ಚರಣತೊಳೆದು ಗುರುಪೂಜೆಗೈದ. ಅನಂತರ ಋಭು ಸ್ವೇಚ್ಛೆಯಿಂದ ಅಲ್ಲಿಂದ ತೆರಳಿದ.

## ಸಾವಿರ ವರ್ಷದ ಬಳಿಕ

ಮತ್ತೆ ಸಾವಿರ ವರ್ಷಗಳು ಉರುಳಿದವು. ಋಭುಗುರುವಿಗೆ ಮತ್ತೊಮ್ಮೆ ತನ್ನ ಶಿಷ್ಯ ನಿದಾಘನಿಗೆ ಹೆಚ್ಚಿನ ತಿಳುವಳಿಕೆಯನ್ನು ನೀಡಬೇಕೆಂದು ಬಯಕೆಯಾಯಿತು. ಹೊರಟೇ ಬಿಟ್ಟ. ನೇರವಾಗಿ ನಿದಾಘನಿದ್ದ ಊರಿಗೆ ಬಂದ ಊರ ಹೊರಗೇ ಋಭುವಿಗೆ ಶಿಷ್ಯನ ಭೇಟಿಯಾಯಿತು.

## ಗುರುವಿನ ಆಟ, ಶಿಷ್ಯನಿಗೆ ಪಾಠ

ಅಂದು ಆ ಊರಿನಲ್ಲಿ ಭಾರೀ ಸಂಭ್ರಮ. ಆ ದೇಶದ ದೊರೆ ಅದೇ ದಿನ ಆ ನಗರವನ್ನು ಮೊದಲುಬಾರಿ ಪ್ರವೇಶಿಸಲಿದ್ದ. ಅವನ ಸ್ವಾಗತಕ್ಕಾಗಿ ಊರ ಹೊರಗೆ ಪ್ರಚಂಡ ಜನದಟ್ಟಣೆ ಸೇರಿದ್ದಿತು. ಆನೆಯ ಮೇಲೆ ಅಂಬಾರಿ ಹಾಕಿ ಮಹಾರಾಜರ ಜಂಬೂಸವಾರಿ ಹೊರಟದ್ದಿತು. ಅದನ್ನು ನೋಡಬೇಕೆಂದು ಕಿಕ್ಕಿರಿದು ತುಂಬಿದ ಜನಸ್ತೋಮದಲ್ಲಿ ವಿಚಿತ್ರ ನೂಕು ನುಗ್ಗಲು. ಭಾರೀ ಸದ್ದು, ಭಯಂಕರ ಗದ್ದಲ. ನಿದಾಘನು ಹೂ ತುಳಸಿ ಅರಳೀ ಕಟ್ಟಿಗೆಗಳನ್ನು ತರಬೇಕೆಂದು ಬೆಳಗಿನ ಜಾವದಲ್ಲಿಯೇ ಎದ್ದು ಕಾಡಿಗೆ ಹೋಗಿದ್ದ. ಬರುವಷ್ಟರಲ್ಲಿ ಊರ ಮುಂದೆ ಜನಸಾಗರ ಮೇರೆ ಮೀರಿ ಮೊರೆಯುತ್ತಿತ್ತು. ಏಕಾಂತ ಭಕ್ತನಾದ ನಿದಾಘನಿಗೋ ಗದ್ದಲ ಗಲಾಟೆಯೆಂದರೆ ಆಗುತ್ತಿದ್ದಿಲ್ಲ. ಆದರೇನು! ನಿರ್ವಾಹವೇ ಇಲ್ಲ. 'ಜನರೆಲ್ಲರೂ ಹೋಗಲಿ' ಎಂದು ಅವನು ಒಂದು ಬೀದಿಯ ಬದಿ ಮೂಲೆ ಹಿಡಿದು ಆತು ನಿಂತ. ಕಾಡಿನಲ್ಲಿ ನಡೆದು ಕಾಲು ಸೋತಿದ್ದವು. ಬಿಸಿಲು ಬಡೆದು ಆತ ಬಸವಳಿದಿದ್ದ. ಬಾಯಾರಿಕೆಯಿಂದ ಗಂಟಲು

ಸೇರುತ್ತಿತ್ತು. ಹಸಿವೆಯಿಂದ ಹೊಟ್ಟೆಯಲ್ಲಿ ಕಸಿವಿಸಿಯಾಗುತ್ತಿತ್ತು. ಆದರೂ ಆ ಗುಂಪಿಗೆ ಹೆದರಿ ಅವನು ದೂರವೇ ನಿಂತಿದ್ದ. ಕೈಯಲ್ಲಿ ದರ್ಭೆ, ಅರಳಿ ಕಟ್ಟಿಗೆ ಹಿಡಿದು ಬಿಸಿಲಿಗೆ ಬೆಂದು ಬೆಂಡಾಗಿ ದೂರ ಸಿಡಿದು ನಿಂತ ನಿದಾಘನನ್ನು ದೂರಿಂದಲೇ ಕಂಡು ಗುರುತು ಹಿಡಿದ ಋಭುಮುನಿ. ಆದರೆ ನಿದಾಘನಿಗೆ ಮಾತ್ರ ಗುರುವಿನ ಗುರುತು ಹತ್ತಲಿಲ್ಲ. ಸಾವಿರ ವರ್ಷದ ಮೇಲಾಗಿದ್ದಿತು ಅವನು ತನ್ನ ಗುರುವಿನ ಮುಖ ಕಂಡು.

## ಗುರುವಿನ ಲೀಲೆ, ಪ್ರಶ್ನೆಗಳ ಮಾಲೆ

ಆದರೆ ಋಭುಋಷಿಯು ಮಾತ್ರ ಚೆನ್ನಾಗಿ ಶಿಷ್ಯನ ಗುರುತು ಹಿಡಿದು ಮಾತನಾಡಿಸಿದ ''ಬ್ರಾಹ್ಮಣ, ನೀನೇಕೆ ಇಷ್ಟು ದೂರ ಸಿಡಿದು ನಿಂತಿರುವೆ?''

''ವಿಪ್ರ, ಈ ದೇಶದ ಅರಸು ಈ ಊರಿಗೆ ಬಂದಿದ್ದಾನೆ. ಇದೆಲ್ಲವೂ ಅವನ ಸ್ವಾಗತದ ಸಂಭ್ರಮ, ಆ ಗಲಾಟೆಯನ್ನು ತಪ್ಪಿಸಲಿಕ್ಕಾಗಿ ನಾನಿಲ್ಲಿ ದೂರ ಸರಿದು ನಿಂತಿದ್ದೇನೆ.'' ಎಂದು ಹೇಳಿದನು ನಿದಾಘ. ಋಭುವಿನ ಪ್ರಶ್ನೆ ಮುಂದೆ ಚಾಚಿತು. ''ಈ ಗದ್ದಲದಲ್ಲಿ ರಾಜನು ಯಾರು ! ಜನರು ಯಾರು !'' ''ಬೆಟ್ಟದಂತೆ ಎತ್ತರವಾದ ಆ ಆನೆಯನ್ನು ಏರಿದವನೇ ಮಹಾರಾಜ. ಕೆಳಗಿದ್ದವರೆಲ್ಲರೂ ಅವನ ಪ್ರಜೆಗಳು'' ಎಂದುತಿಳಿಸಿಕೊಟ್ಟ ನಿದಾಘ. ''ಇಲ್ಲಿ ಆನೆ ಯಾವುದು ಅರಸ ಯಾರು !'' ಋಭು ಮತ್ತೆ ಸವಾಲು ಹಾಕಿದ. ''ಮೇಲೆ ಕುಳಿತವನೇ ಅರಸ. ಅವನ ಕೆಳಗೆ ಇದ್ದು ಅವನನ್ನು ಹೊತ್ತದ್ದೇ ಆನೆ'' ''ಮೇಲೆ ಎಂದರೆ ಏನು ? ಕೆಳಗೆ ಎಂದರೆ ಏನು? ಮತ್ತೂ ಪ್ರಶ್ನಿಸಿದ ಆ ಗಟ್ಟಿ ಬ್ರಾಹ್ಮಣ. ''ನೀನು ಹೇಗಾದರೂ ಉತ್ತರ ಹೇಳಿದರೆ ಸಾಲದು ನನಗೆ ಅರ್ಥವಾಗುವ ರೀತಿಯಲ್ಲಿ ಉತ್ತರ ಹೇಳು'' ತನ್ನ ಪ್ರಶ್ನೆಗೆ ಪುರವಣಿಯೊಂದನ್ನು ಮೇಲೆ ಜೋಡಿಸಿದ.

## ಪ್ರಶ್ನೋತ್ತರದ ಪ್ರಾತ್ಯಕ್ಷಿಕ ಪ್ರಯೋಗ

ಇವನ ಈ ಪ್ರಶ್ನೆಗಳ ಕೋಟಿಗಳನ್ನು ಕೇಳಿಯೇ ನಿದಾಘನಿಗೆ ತಲೆ ಹಿಡಿದಿತ್ತು. ಕೂಡಲೇ ಅವನು ಹಾರಿಬಂದು ತನ್ನ ಎದುರಿಗಿರುವ ಋಭುಮುನಿಯನ್ನು ಬಗ್ಗಿಸಿ ಅವನ ಮೇಲೆ ಜಿಗಿದು ಹತ್ತಿದ. ಋಭುವಿನ ಬಾಗಿದ ಬೆನ್ನಿನ ಮೇಲೆ ಸವಾರಿ ಮಾಡಿ ''ಇಕೋ ನೋಡು. ಇದು ಮೇಲೆ, ಅದು ಕೆಳಗೆ. ನಾನು ಕುಳಿತಿದ್ದು ಮೇಲೆ. ನೀನು ಬಗ್ಗಿದ್ದು ಕೆಳಗೆ. ಇದರಂತೆ ಅಲ್ಲಿ ಮೇಲೆ ಕುಳಿತವನು ಮಹಾರಾಜ. ಅವನ ಕೆಳಗೆ ಬಗ್ಗಿದ್ದೇ ಆನೆ. ಈ ನನ್ನ ನಿನ್ನ ದೃಷ್ಟಾಂತದಿಂದಾದರೂ ತಿಳಿಯಿತೇ ಮೇಲೆಂದರೇನು ಕೆಳಗೆಂದರೇನು ! ಮಹಾರಾಜನಂತೆ ನಾನು ಮೇಲಿರುವೆ ಆನೆಯಂತೆ ನೀನು ಕೆಳಗಿರುವೆ.'' ಎಂದು ದೃಷ್ಟಾಂತ ಪೂರ್ವಕವಾಗಿ ತೋರಿಸಿ ಹೇಳಿದ. ಗುರುವಿನ ಪ್ರಶ್ನೆಗೆ ಪೂರ್ಣ ವಿರಾಮವೇ ಇರಲಿಲ್ಲ.

''ನೀನೆಂದರೆ ಯಾರು? ನಾನೆಂದರೆ ಯಾರು?'' ಮಿಂಚಿ ಬಂದಿತು ಮತ್ತೊಂದು ಮಾರ್ಮಿಕ ಪ್ರಶ್ನೆ. ಹೀಗೆ ಈ ಪ್ರಶ್ನೆ ಮಾಲಿಕೆ ಆನೆಯಿಂದ ಆತ್ಮಮೀಮಾಂಸೆಗೆ ಬಂದಿಳಿದ ಕೂಡಲೇ ನಿದಾಘನಿಗೆ ತಿಳಿದುಹೋಯಿತು ಇವನು ತನ್ನ ಗುರುವಾದ ಋಭು ಎಂದು. ತಕ್ಷಣ ಅವನು ಬೆನ್ನ ಮೇಲಿಂದ ಟಣ್ಣನೇ ಕೆಳಗೆ ಧುಮುಕಿದ. ಗುರುವಿನ ಪಾದಕ್ಕೆ ಅಡ್ಡ ಬಿದ್ದ. ಅವನ ಎರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಿದ. ಗದ್ಗದ ಕಂಠದಿಂದ ನುಡಿದ ''ಪೂಜ್ಯರೇ, ತಾವು ಬೇರಾರೂ ಆಗದೇ ನನ್ನ ಗುರುಗಳಾದ ಆಚಾರ್ಯ

ಋಭುಮುನಿಗಳೇ. ಇದರಲ್ಲಿ ಸಂದೇಹವೇ ಇಲ್ಲ. ಉಳಿದವರಾರೂ ಇಷ್ಟು ಅಭಿಮಾನ ತ್ಯಾಗ ಮಾಡಿ ಆತ್ಮಜ್ಞಾನವನ್ನು ಮೈಗೂಡಿಸಿಕೊಂಡಿರಲಾರರು. ಆನೆ, ಅರಸ, ಸ್ವಾಮಿ ಸೇವಕ, ಸರ್ವತ್ರ ಇದ್ದು ಸರ್ವ ವ್ಯಾಪಾರಗಳನ್ನೂ ನಡೆಸುವ ಪರಮಾತ್ಮನೇ ಭಿನ್ನ ಭಿನ್ನ ಅಧಿಷ್ಠಾನಗಳಲ್ಲಿರುವ ಆ ಭಗವದ್ರೂಪಗಳೆಲ್ಲ ಒಂದು. ಇಷ್ಟು ತಿಳಿಯಾದ ಅದ್ವೈತ ಸಂಸ್ಕಾರವು ಯಾರ ಮನಸ್ಸಿಗೆ ಉಂಟು ! ನನ್ನ ಉದ್ಧಾರಕ್ಕಾಗಿ ನನ್ನ ಗುರುಗಳಾದ ಋಭು ಆಚಾರ್ಯರೇ ತಾವು ಇಲ್ಲಿಗೆ ದಯಮಾಡಿಸಿದ್ದೀರಿ.''

## ಶಾಸ್ತ್ರ ಶುದ್ಧ ಅದ್ವೈತಾನುಭವ

ಆಗ ಆ ಆಚಾರ್ಯರು ತಾವು ಋಭುಮುನಿ ಎಂದು ಒಪ್ಪಿಕೊಂಡರು. ''ವತ್ಸ, ಹಿಂದೆ ನೀನು ಮಾಡಿದ ಸೇವೆಯನ್ನು ನಾನು ಮರೆತಿಲ್ಲ. ನಿನ್ನ ಜ್ಞಾನದ ಹಸಿವನ್ನು ತಿಳಿದ ನಾನು ಆಗಾಗ ಬಂದು ನಿನ್ನ ಆತ್ಮಜ್ಞಾನದ ಅರಿವು ಮರವು - ಮಮತೆಗಳಿಂದ ಮಸಕಾಗದಿರಲಿ ಎಂದು ನಿನಗೆ ಮತ್ತೆ ಮತ್ತೆ ಉಪದೇಶಮಾಡಿ ಹೋಗುತ್ತೇನೆ. ಸರ್ವ ಪ್ರಾಣಿಗಳಲ್ಲಿಯೂ ಸತ್ತಾಪ್ರದನಾಗಿ ಚೇಷ್ಟಕವಾಗಿ ಪರಮಾತ್ಮನೇ ವಾಸವಾಗಿದ್ದಾನೆ. ಅದರಲ್ಲಿ ನಮ್ಮ ನಿಮ್ಮ ಕರ್ತೃತ್ವವೇನಿಲ್ಲ. ಇದ್ದ ಕರ್ತೃತ್ವವೆಲ್ಲವೂ ತದೇಕನಿಷ್ಠ ಈ ಅನುಸಂಧಾನವೇ ಶಾಸ್ತ್ರ ಶುದ್ಧವಾದ ಅದ್ವೈತಾನುಸಂಧಾನ. ಇದನ್ನು ನಿನಗೆ ತಿಳಿಸಿದ್ದೇನೆ.'' ಈ ರೀತಿಯಾಗಿ ಅದ್ವೈತಸಾರವನ್ನು ಉಪದೇಶಿಸಿ ಋಭು ಅಲ್ಲಿಂದ ತೆರಳಿದ. ಅನಂತರ ನಿದಾಘನು ಎಲ್ಲ ಕಡೆಗೂ ಪರಮಾತ್ಮನ ಕೈವಾಡವನ್ನೇ ಕಂಡ. ಬೇರಾರ ಕರ್ತೃತ್ವವೂ ಅವನಿಗೆ ಗೋಚರಿಸಲಿಲ್ಲ. ಅಂಥ ಅದ್ವೈತೋಪಾಸನೆಯಿಂದ ನಿದಾಘನು ಮೋಕ್ಷವನ್ನು ಪಡೆದ. ಸೌವೀರರಾಜ್ಯದ ಅಧಿಪತಿಯೇ, ನೀನಾದರೂ ಆ ನಿದಾಘನಂತೆ ಮಿತ್ರರನ್ನೂ ಬಂಧುಗಳನ್ನೂ ವೈರಿಗಳನ್ನೂ ಸಮನಾಗಿಯೇ ಕಾಣು. ದೇಹಾಭಿಮಾನ ಬಿಡು. ಎಲ್ಲ ಕಡೆ ಭಗವಂತ ವಾಸವಾಗಿದ್ದಾನೆ ಎಂದು ತಿಳಿ. ಭ್ರಾಂತಿ ದೃಷ್ಟಿಯುಳ್ಳವರ ಕಣ್ಣಿಗೆ ರಾಮ, ಕೃಷ್ಣ, ಕಪಿಲ, ಬುದ್ಧ, ಪರಶುರಾಮ, ವ್ಯಾಸ, ಮುಂತಾಗಿ ಭಿನ್ನ ಭಿನ್ನ ರೂಪಗಳು ಕಂಡರೂ ಅವೆಲ್ಲವೂ ವಾಸ್ತವಿಕವಾಗಿ ಒಂದು. ಒಂದೇ ಆಕಾಶವು ಬಿಳಿದಾಗಿಯೂ ನೀಲವಾಗಿಯೂ ತೋರುವುದಿಲ್ಲವೇ ! ಇದೂ ಹಾಗೇ. ಒಟ್ಟಾರೆ ನಾನು ನೀನು ಹಾಗೂ ಉಳಿದೆಲ್ಲದರಿಂದ ತುಂಬಿದ ಈ ಪ್ರಪಂಚವೆಲ್ಲವೂ ಭಗವನ್ಮಯವಾಗಿದೆ. ಇದೇ ನಿಜವಾದ ಆತ್ಮ ಸ್ವರೂಪ. ಇದನ್ನು ಬಿಟ್ಟು ಬೇರೆ ವಿಧವಾದ ತಿಳುವಳಿಕೆ ಭ್ರಾಂತಿ ಮೋಹ. ಅದನ್ನು ಬಿಡು. ಇದನ್ನು ಹಿಡಿ'' ಎಂದು ಅವಧೂತನಾದ ಜಡಭರತನು ಉಪದೇಶಿಸಿದ. ಇದನ್ನು ತಿಳಿದು ಸೌವೀರ ನರೇಶ ಪರಮಾತ್ಮನೇ ಪರಮಾರ್ಥ ಎಂದು ಬಗೆದ. ಅದರಂತೆ ಉಪಾಸನೆ ಮಾಡಿದ. ಬ್ರಾಹ್ಮಣನಾಗಿ ಜನಿಸಿದ ಜಡಭರತನಿಗಾದರೂ ತನ್ನ ಹಿಂದಿನ ಜನ್ಮಗಳ ನೆನಪು ಅಚ್ಚಳಿಯದೇ ಉಳಿದಿತ್ತು. ಆದುದರಿಂದಲೇ ಈ ಜನ್ಮದಲ್ಲಿ ಅವನು ಅಸಂಗನಾಗಿ ಆತ್ಮೋಪಾಸನೆಯನ್ನು ಮಾಡಿದ. ದಿವ್ಯಜ್ಞಾನಯೋಗದಿಂದ ಭಕ್ತಿಭರಿತನಾಗಿ ಭಗವದಾರಾಧನೆ ಮಾಡಿ ಅದೇ ಬ್ರಾಹ್ಮಣ ಜನ್ಮದಿಂದಲೇ ಉದ್ಧಾರಹೊಂದಿದ ಮುಕ್ತಿ ಪಡೆದ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ದ್ವಿತೀಯಾಂಶವು ಸಂಪೂರ್ಣ*

—o—

# ಮೂರನೇ ಅಂಶ

## ಮೊದಲಿನ ಏಳು ಮನ್ವಂತರಗಳ ಆಡಳಿತಗಾರರ ಪರಿಚಯ

**ಮೈತ್ರೇಯ** - ಗುರುಗಳೇ, ತಾವು ಈವರೆಗೆ ಈ ಭೂಗೋಲ ಖಗೋಲ ವಿಷಯಗಳನ್ನು ಬಣ್ಣಿಸಿದಿರಿ. ದೇವತೆಗಳ ಮತ್ತು ಋಷಿಗಳ ಚರಿತೆಗಳನ್ನು ನಮಗೆ ತಿಳಿಸಿದಿರಿ. ವರ್ಣಾಶ್ರಮದ ವಿಚಾರ, ಜೀವಜಂತುಗಳ ಸೃಷ್ಟಿಕ್ರಮ ಎಲ್ಲವೂ ತಮ್ಮಿಂದ ಚೆನ್ನಾಗಿ ಬಿತ್ತರಿಸಲ್ಪಟ್ಟಿತು. ತಾವು ಹೇಳಿದ ಪ್ರಹ್ಲಾದ ಕತೆಯಂತೂ ಸಾಕಷ್ಟು ವಿಸ್ತಾರವಾಗಿದ್ದಿತು. ಈಗ ನಾನು ತಮ್ಮ ಬಾಯಿಯಿಂದ ಮನ್ವಂತರಗಳು ಸಮಾಚಾರವನ್ನು ಕೇಳಬೇಕೆಂದಿದ್ದೇನೆ. ಯಾವ ಮನ್ವಂತರಕ್ಕೆ ಯಾರು ಒಡೆಯರು ! ಅವರೆಷ್ಟು ಜನ ಮನು ಮಹಾರಾಜರು ! ಪ್ರತಿ ಮನ್ವಂತರದಲ್ಲಿಯೂ ಸ್ವರ್ಗ ಸಿಂಹಾಸನವನ್ನು ಏರುವ ಬೇರೆ ಬೇರೆ ಇಂದ್ರರು ಯಾರು ಯಾರು ! ಇವನ್ನೆಲ್ಲ ಅರಿಯಬೇಕೆಂಬ ಆಶೆ ನನಗೆ. ಅದೂ ತಮ್ಮ ಮುಖದಿಂದಲೇ.

**ಪರಾಶರ** - ಮೈತ್ರೇಯ ಒಟ್ಟು ಮನ್ವಂತರಗಳು ಹದಿನಾಲ್ಕು. ಅದರಲ್ಲಿ ಈಗ ಕಳೆದು ಹೋದ ಮನ್ವಂತರಗಳು ಆರು. ಈಗ ನಡೆಯುತ್ತಲಿರುವುದೇ ಏಳನೆಯ ಮನ್ವಂತರ. ಇದು ವೈವಸ್ವತ ಮನ್ವಂತರ. ಇನ್ನು ಮುಂದೆ ಮತ್ತೆ ಏಳು ಮನ್ವಂತರಗಳು ಬರಲಿವೆ. ಈಗ ಪ್ರಚಲಿತವಾದ ವೈವಸ್ವತ ಮನ್ವಂತರದ ಹಿಂದೆ ಸ್ವಾಯಂಭುವ ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ಎಂದು ಆರು ಮನ್ವಂತರಗಳು ಆಗಿ ಹೋದವು. ಅವುಗಳಲ್ಲಿ ಮೊದಲನೆಯದಾದ ಸ್ವಾಯಂಭುವ ಮನ್ವಂತರದ ದೇವತೆ, ಮನು, ಮನುಕುಮಾರ, ಸಪ್ತರ್ಷಿ ಮೊದಲಾದವರ ಬಗೆಗೆ ನಾನು ಕಲ್ಪಾದಿಯ ಸೃಷ್ಟಿಕ್ರಮವನ್ನು ವಿವರಿಸುವಾಗ ಪ್ರಥಮ ಅಂಶದಲ್ಲಿಯೇ ಹೇಳಿಬಿಟ್ಟಿದ್ದೇನೆ.

### ಸ್ವಾರೋಚಿಷ ಮನ್ವಂತರ

ಅನಂತರ ಎರಡನೇಯದಾದ ಸ್ವಾರೋಚಿಷ ಮನ್ವಂತರದ ಋಷಿದೇವತೆಗಳ ಬಗೆಗೆ ಈಗ ಹೇಳುತ್ತೇನೆ. ಈ ಮನ್ವಂತರದಲ್ಲಿ ಪಾರಾವತರು ಮತ್ತು ತುಷಿತರು ದೇವತಾ ಪಟ್ಟಕ್ಕೆ ಏರಿದ್ದರು. ಮಹಾ ಬಲಿಷ್ಠನಾದ ವಿಷಶ್ಚಿತ್ ಎನ್ನುವವ ಇಂದ್ರ ಪದವಿಯನ್ನು ಹೊಂದಿದ್ದನು. ಊರ್ಜ, ಸ್ತಂಭ, ಪ್ರಾಣ, ವಾತ, ವೃಷಭ, ನಿರಿಯ, ಪರೀವಾನ್ ಎಂಬುವ ಏಳು ಮಹಾಮುನಿಗಳು ಸಪ್ತರ್ಷಿಗಳಾಗಿದ್ದರು. ಚೈತ್ರ, ಕಿಂಪುರುಷ ಮುಂತಾದ ಸ್ವಾರೋಚಿಷನ ಹತ್ತು ಜನ ಮಕ್ಕಳು ಮನುಕುಮಾರರಾಗಿ ಇಡೀ ಮನ್ವಂತರದ ಚಕ್ರವನ್ನು ಋಷಿದೇವತಾ ಸಹಾಯದಿಂದ ಉರುಳಿಸಿದರು.

ಮೂರನೇ ಮನ್ವಂತರಕ್ಕೆ ಒಡೆಯ ಉತ್ತಮ. ಸ್ವರ್ಗದ ಗದ್ದುಗೆಯ ಮೇಲೆ ಸುಶಾಂತಿ ಎಂಬ ಇಂದ್ರ ಆಗ ಕುಳಿತುಕೊಳ್ಳುವನು ಕುಳಿತಿರುವನು. ಆಗ ಹನ್ನೆರಡು ದೇವತೆಗಳ ಐದು ಗುಂಪು ದೇವತಾಕಾರ್ಯ ಕೈಗೊಂಡಿತ್ತು. ಆ ಐದು ದೇವತಾಗಣಗಳಿಗೆ

ಸುಧಾಮ, ಸತ್ಯ, ಜಪ, ಪ್ರತರ್ದನ, ವಶವರ್ತಿ, ಎಂದು ಹೆಸರು. ವಸಿಷ್ಠರ ಏಳು ಮಕ್ಕಳೇ ಆಗ ಸಪ್ತರ್ಷಿಗಳು. ಅಜ, ಪರಶು, ದೀಪ್ತಿ, ಮುಂತಾದವರು ಮನುಕುಮಾರರು.

ನಾಲ್ಕನೇಯ ತಾಮಸಮನ್ವಂತರದಲ್ಲಿ ಸುಪಾರ, ಸತ್ಯ, ಹರಿ, ಸುಧೀ ಎಂಬ ನಾಲ್ಕು ದೇವತೆಗಳ ಗುಂಪುಗಳುಂಟು ಒಂದೊಂದು ಗುಂಪಿನಲ್ಲಿ ಇಪ್ಪತ್ತೇಳು ದೇವತೆಗಳಿರುವರು. ನೂರು ಅಶ್ವಮೇಧಯಾಗ ಮಾಡಿದ ಶಿಬಿರಾಜನು ಆಗ ಇಂದ್ರಪಟ್ಟದಲ್ಲಿ ಅಭಿಷಿಕ್ತನಾಗಿದ್ದನು. ಆ ತಾಮಸಮನ್ವಂತರದಲ್ಲಿರುವ ಸಪ್ತರ್ಷಿಗಳೆಂದರೆ ಜ್ಯೋತಿರ್ಧಾಮ, ಪೃಥು, ಕಾವ್ಯ, ಚೈತ್ರ, ಅಗ್ನಿ, ವನಕ ಮತ್ತು ಪೀವರ ಮನುಮಹಾರಾಜನಿಗೆ ನರ, ಖ್ಯಾತಿ, ಕೇತುರೂಪ, ಜಾನು, ಸಂಘ ಮುಂತಾದ ಮಕ್ಕಳಿದ್ದರು.

ಐದನೇಯ ರೈವತ ಮನ್ವಂತರದಲ್ಲಿ ವಿಭು ಎಂಬುವ ಇಂದ್ರ, ರೈವತ ಎಂಬುವ ಮನು. ಅಮಿತಾಭ, ಭೂತರಯ, ವೈಕುಂಠ, ಸುಮೇಧ ಎಂಬ ನಾಕು ದೇವತಾಗಣಗಳು ಪ್ರತಿಯೊಂದು ಗಣದಲ್ಲಿ ಘಟಕರಾದ ದೇವತೆಗಳು ಇಪ್ಪತ್ತೇಳು. ಈ ಮನ್ವಂತರದಲ್ಲಿ ಹಿರಣ್ಯರೋಮ, ವೇದಶ್ರೀ, ಊರ್ಧ್ವಬಾಹು, ವೇದಬಾಹು, ಸುಧಾಮ, ಪರ್ಜನ್ಯ ಮತ್ತು ಮಹಾಮುನಿ ಎಂಬ ಏಳು ಮಹರ್ಷಿಗಳೇ ಸಪ್ತರ್ಷಿಗಳೆಂದು ಕರೆಯಲ್ಪಡುತ್ತಾರೆ. ಬಲಬಂಧು, ಸಂಭಾವ್ಯ, ಸತ್ಯಕ, ಮುಂತಾದ ರೈವತಕನ ಚಿರಂಜೀವರ ಸಾರ್ವಭೌಮ ಶಾಸನವನ್ನು ನಡೆಸುತ್ತಿದ್ದರು.

## ಒಂದೇ ಕುಟುಂಬದಲ್ಲಿ ನಾಲ್ಕು ಮನುಗಳು

ಸ್ವಾರೋಚಿಷ, ಉತ್ತಮ, ತಾಮಸ, ರೈವತ ಈ ನಾಲ್ವರೂ ಮನ್ವಂತರಾಧಿಪತಿಗಳಾದ ಮನುಗಳು ಪ್ರಿಯವ್ರತ ಮಹಾರಾಜನ ವಂಶದವರೇ ಆಗಿದ್ದಾರೆ. ಆದಿರಾಜನಾದರೂ ಋಷಿ ಕಲ್ಪನಾದ ಆ ಪ್ರಿಯವ್ರತನು ತಪಸ್ಸಿನಿಂದ ಶ್ರೀ ವಿಷ್ಣುವನ್ನು ಆರಾಧನೆ ಮಾಡಿ ಒಲಿಸಿಗೊಂಡು ಅವನ ದಯೆಯಿಂದ ಈ ನಾಲ್ಕುಮನ್ವಂತರಾಧಿಪತಿಗಳನ್ನು ಪುತ್ರರನ್ನಾಗಿ ಪಡೆದನು.

ಆರನೇ ಮನ್ವಂತರಕ್ಕೆ ಚಾಕ್ಷುಷ ಎಂಬ ಮನು ಅಧಿಪತಿಯಾಗಿದ್ದ. ಆಗ ಸ್ವರ್ಗ ಸಿಂಹಾಸನವನ್ನು ಏರಿದವ ಮನೋಜನ ಎಂಬ ಹೆಸರಿನ ಇಂದ್ರದೇವ. ಅಪ್ಯ,ಪ್ರಸೂತ, ಭವ್ಯ, ಪೃಥುಕ, ಲೇಖ ಐದು ದೇವಗಣಗಳು, ಪ್ರತಿಯೊಂದು ಸುರಗಣವು ಎಂಟೆಂಟು ದೇವತಾ ಘಟಿತವಾಗಿದೆ. ಸುಮೇಧ, ವಿರಜ, ಹವಿಷ್ಮಾನ್ ಉತ್ತಮ, ಮಧು, ಅತಿನಾಮ; ಸಹಿಷ್ಣು ಎಂಬುವವರೇ ಆಗ ಸಪ್ತರ್ಷಿಗಳಾಗಿದ್ದರು. ಚಾಕ್ಷುಷ ಮನುವಿನ ಊರು, ಪೂರು, ಶತದ್ಯುಮ್ನ ಮುಂತಾದ ಪ್ರಚಂಡ ಪರಾಕ್ರಮಿಗಳಾದ ಪುತ್ರರು ಶಾಸನ ಸೂತ್ರಗಳನ್ನು ಚಾಲನ ಮಾಡುತ್ತಿದ್ದರು.

## ಪ್ರಕೃತ ಮನ್ವಂತರದ ಶಾಸಕ ಮಂಡಲ

ಮೈತ್ರೇಯ, ಪ್ರಕೃತ ನಡೆದಿರುವ ಏಳನೆಯದೇ ವೈವಸ್ವತ ಮನ್ವಂತರ. ಇಲ್ಲಿ ಸೂರ್ಯದೇವನ ಸುತ ಶ್ರಾದ್ಧದೇವನೇ ಮನು ಮಹಾರಾಜನಾಗಿದ್ದಾನೆ. ವರ್ಚಸ್ಸಿನಲ್ಲಿ ಅವನೊಂದು ಕಾಂತಿಯ ಮೊಟ್ಟೆ. ಅವನ ಬುದ್ಧಿ ಒಳ್ಳೇ ಬುದ್ಧಿ. ಈಗ ಪುರಂದರನೇ

ಇಂದ್ರ. ಆದಿತ್ಯ, ವಸು, ರುದ್ರ ಮುಂತಾದ ದೇವತೆಗಳಲ್ಲಿ ಬೇರೆ ಬೇರೆ ವರ್ಗಗಳುಂಟು. ಈ ನಮ್ಮ ಮನ್ವಂತರದಲ್ಲಿ ವಸಿಷ್ಠ, ಕಾಶ್ಯಪ, ಅತ್ರಿ, ಜಮದಗ್ನಿ, ಗೌತಮ, ವಿಶ್ವಾಮಿತ್ರ, ಮತ್ತು ಭರದ್ವಾಜ ಎಂಬ ಏಳು ಮಹಾನುಭಾವರು ಸಪ್ತರ್ಷಿಗಳಾಗಿದ್ದಾರೆ. ಈ ವೈವಸ್ವತ ಮನುವಿನ ಇಕ್ಷ್ವಾಕು, ನೃಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ಅರಿಷ್ಟ ಕರೂಷ, ಮತ್ತು ಪೃಷಧ್ರ ಎಂಬ ಮನು ಪುತ್ರರು ಶಾಸಕರಾಗಿದ್ದಾರೆ. ಇವರೆಲ್ಲರೂ ಧರ್ಮನಿಷ್ಠರು. ಕೀರ್ತಿಶಾಲಿಗಳು. ಈ ಎಲ್ಲ ಮನ್ವಂತರಗಳಲ್ಲಿ ಜನಿಸಿದ ಜೀವಕೋಟಿಯನ್ನು ನಿಜವಾಗಿ ರಕ್ಷಿಸುವುದು ಭಗವಾನ್ ಶ್ರೀ ಕೃಷ್ಣನ ಸತ್ವಗುಣ. ಉತ್ಕರ್ಷಿಣಿಯಾದ ಪರಾಶಕ್ತಿಯೇ ಪ್ರತಿಯೊಂದು ಮನ್ವಂತರದಲ್ಲಿಯೂ ಒಂದೊಂದು ರೂಪದಿಂದ ಅವತಾರ ಮಾಡಿದ ಆ ಮಹಾವಿಷ್ಣುವು ಜಗತ್ ಪಾಲನಗೈಯುತ್ತಾನೆ.

## ''ಸಂಭವಾಮಿ ಯುಗೇ ಯುಗೇ''

ಸ್ವಾಯಂಭುವ ಮನ್ವಂತರದಲ್ಲಿ ಭಗವಾನ್ ಶ್ರೀ ವಿಷ್ಣುವು ಆಕೂತಿದೇವಿಯಲ್ಲಿ ಯಜ್ಞನಾಮಕನಾಗಿ ಜನಿಸಿದನು. ಎರಡನೆಯ ಸ್ವಾರೋಚಿಷ ಮನ್ವಂತರದಲ್ಲಿ ತುಷಿತ ಎಂಬ ದೇವಗಣದೊಂದಿಗೆ ಅಜಿತ ಎಂಬ ಹೆಸರಿನಿಂದ ತುಷಿತಾದೇವಿಯಿಂದ ಉದಿಸಿ ಬಂದನು. ಉತ್ತಮ ಎಂಬ ಮೂರನೆಯ ಮನ್ವಂತರದಲ್ಲಿ ಸತ್ಯ ಎಂಬ ದೇವಗಣದೊಂದಿಗೆ ಸತ್ಯಾದೇವಿಯಿಂದ ಸತ್ಯನಾಮಕನಾಗಿಯೇ ಅವತರಿಸಿದನು.

ನಾಲ್ಕನೆಯ ಮನ್ವಂತರವಾದ ತಾಮಸ ಮನ್ವಂತರದಲ್ಲಿ ಪರಮಾತ್ಮ ಮತ್ತೆ ಅವತರಿಸಿ ಬಂದ. ಈ ಅವತಾರದಲ್ಲಿ ಅವನ ಜನನಕ್ಕೆ ನಿಮಿತ್ತಳಾದ ತಾಯಿಯ ಹೆಸರು ಹರಿ. ಹುಟ್ಟಿದ ಮಗನ ಹೆಸರೂ ಹರಿ. ಅವನ ಒಡಹುಟ್ಟಿದವರಾದ ದೇವತಾ ಗಣವೂ ಹರಿ ಗಣವೇ. ರೈವತನಾಮಕವಾದ ಪಂಚಮ ಮನ್ವಂತರದಲ್ಲಿ ಭಗವಂತ ಪ್ರಾದುರ್ಭೂತನಾದದ್ದು ಸಂಭೂತಿದೇವಿಯಿಂದ. ರೈವತನಾಮಕರಾದ ದೇವಕುಲ ಅವನ ಒಡನಾಡಿಗಳು. ಚಾಕ್ಷುಷ ಮನ್ವಂತರದಲ್ಲಿ ಶ್ರೀ ಹರಿಯ ವೈಕುಂಠ ಎಂಬ ಅವತಾರ. ಆಗ ಅವನ ತಾಯ್ತನದ ಸೌಭಾಗ್ಯ ಪಡೆದವಳು ವಿಕುಂಠಾದೇವಿ. ಅವನ ಒಡಹುಟ್ಟಿದ ದೇವತೆಗಳಿಗೂ ವೈಕುಂಠಗಣವೆಂದೇ ಹೆಸರು. ನಾವು ಬದುಕಿದ ಈ ವೈವಸ್ವತ ಮನ್ವಂತರದಲ್ಲಿ ಆ ವಿಷ್ಣು ಭಗವಾನನು ಕಶ್ಯಪ ಕುಮಾರನಾಗಿ ದೇವಮಾತೆ ಅದಿತಿ ದೇವಿಯಿಂದ ವಾಮನಾವತಾರ ಮಾಡಿದ್ದಾನೆ. ಮೂರು ಅಡಿ ನೆಲವನ್ನು ಬಲಿರಾಜನಿಂದ ಯಾಚಿಸಿ ಪಡೆದು ತ್ರಿವಿಕ್ರಮ ರೂಪಧರಿಸಿ ಮೂರು ಲೋಕಗಳನ್ನೇ ವ್ಯಾಪಿಸಿದ ವಿರಾಟ ಮೂರ್ತಿ ಅವನು ಇಂದ್ರನಿಗೆ ಸಾಮ್ರಾಜ್ಯವನ್ನಿತ್ತ. ಮೂರು ಲೋಕದ ಸಂಕಟ ಕಳೆದ ದುಃಖವಳಿದ. ಹೀಗೆ ಏಳೂ ಮನ್ವಂತರಗಳಲ್ಲಿಯೂ ಏಳು ಅವತಾರ ಮಾಡಿ ಆ ಮನ್ವಂತರದ ಜೀವರಾಶಿಯನ್ನೆಲ್ಲ ಆ ಪರಮಾತ್ಮನೇ ಬೆಳೆಸುತ್ತಾನೆ. ಕಾಯುತ್ತಾನೆ. ಇಡೀ ವಿಶ್ವವನ್ನೆಲ್ಲ ತುಂಬ ತುಂಬಿ ಒಳಹೊಕ್ಕು ವಿಶೇಷ ರಕ್ಷಣೆಮಾಡುವುದರಿಂದ ಅವನಿಗೆ ವಿಷ್ಣು ಎಂದು ಹೆಸರಾಗಿದೆ. ಉಳಿದೆಲ್ಲ ದೇವತೆಗಳೂ ಮನುಕುಮಾರರೂ ಸಪ್ತರ್ಷಿಗಳೂ ದೇವೇಂದ್ರನೂ ಮತ್ತಿತರ ಲೋಕಪಾಲಕರೂ ಆ ವಿಷ್ಣುವಿನ ಒಂದೊಂದು ವಿಭೂತಿ ರೂಪಗಳೇ.

## ಮುಂದೆ ಬರುವ ಏಳು ಮನ್ವಂತರಗಳು

**ಮೈತ್ರೇಯ** - ವಿಪ್ರೋತ್ತಮ, ಹಿಂದೆ ಆಗಿ ಹೋದ ಏಳು ಮನ್ವಂತರಗಳ ಇತಿಹಾಸವನ್ನು ತಾವು ತಿಳಿಸಿದಿರಿ. ಮುಂಬರುವ ಮನ್ವಂತರಗಳ ವಿಷಯವನ್ನು ನನಗೆ ಹೇಳಬೇಕು. ಅದಕ್ಕೂ ಮೊದಲು ಪ್ರಕೃತ ಮನ್ವಂತರದ ಅಧಿಪತಿಯಾದ ವೈವಸ್ವತಮನುವಿನ ಚರಿತ್ರವನ್ನು ಸಾದ್ಯಂತವಾಗಿ ನಿರೂಪಿಸಬೇಕು.

## ಸೂರ್ಯನ ಸಂಸಾರ

**ಪರಾಶರ** - ದೇವತೆಗಳ ಬಡಿಗ ವಿಶ್ವಕರ್ಮನಿಗೆ ಸಂಜ್ಞಾ ಎಂಬ ಮಗಳು. ಆ ಬಡಿಗ ತನ್ನ ಕನ್ಯೆಯನ್ನು ಸೂರ್ಯನಿಗೆ ಧಾರೆಯೆರೆದು ಕೊಟ್ಟಿದ್ದ. ಸಂಜ್ಞೆಗೆ ಸೂರ್ಯನಿಂದ ಹುಟ್ಟಿದ ಮಕ್ಕಳು ಮೂರು. ಮನು, ಯಮ, ಯಮೀ. ತರುಣನಾದ ಸವಿತೃದೇವನ ತೇಜಸ್ಸು ದಿನ ದಿನಕ್ಕೆ ಬೆಳೆಯುತ್ತಲಿತ್ತು. ಆದರೆ ಅವನ ಈ ತೇಜಃಪ್ರಕರ್ಷ ಅವನ ಮಡದಿಗೆ ತಾಳದಾಯಿತು. ಗಂಡನೇನೋ ತೇಜಃಪುಂಜ. ಆದರೆ ಹತ್ತಿರ ಬಂದರೆ ಉರಿಯುವ ಪುಂಜು. ಅವನ ಜೊತೆಗೆ ಸರಸರವೆಂದರೆ ಅವಳಿಗೆ ಅಗ್ನಿಚುಂಬನ. ದೇಹಾಲಿಂಗನ ಜ್ವಾಲಾವಿಲಾಸ. ಕೆಂಡದ ಉಂಡೆಯಂತಿರುವ ಈ ಗಂಡನ ಜೊತೆಗೆ ಪ್ರಣಯ ಪ್ರಸಂಗದ ಅಗ್ನಿದಿವ್ಯವನ್ನು ದಿನದಿನವೂ ಇನ್ನು ತನ್ನಿಂದ ತಡೆಯಲಿಕ್ಕಾಗದೆಂದೂ ತಿಳಿದು ಸಂಜ್ಞಾದೇವಿಯು ಹೊರಟು ನಡೆದಳು. ಅಲ್ಲಿಂದ ಹೋಗುವಾಗ ಅವಳು ತನ್ನ ನೆರಳಿನಲ್ಲಿ ಜೀವಕಳೆ ತುಂಬಿದಳು. ಆ ತನ್ನ ಛಾಯೆಗೆ ''ನೀನು ನಾನೇ ಆಗಿ ನನ್ನ ಪತಿ ಸೂರ್ಯದೇವನ ಜೊತೆಗೆ ಸಂಸಾರ ಮಾಡು'' ಎಂದು ಹೇಳಿ ಗುಟ್ಟಾಗಿ ಅಲ್ಲಿಂದ ತಪಸ್ಸಿಗೆ ತೆರಳಿದಳು.

## ಹೆಣ್ಣಿನ ನೆರಳು, ಗಂಡು ಮರಳು

ಸಂಜ್ಞೆಯ ಛಾಯೆ - ನೆರಳು ಅವಳಂತೆ ಇರುವುದು ಸಹಜ. ಆದುದರಿಂದ ಸೂರ್ಯನಿಗೆ ಸಂದೇಹವೇ ಬರಲಿಲ್ಲ. ಅವನು ಛಾಯೆಯನ್ನು ಸಂಜ್ಞೆಯೆಂದೇ ಬಗೆದ. ನಿಸ್ಸಂದೇಹವಾಗಿ ಅವಳೊಡನೆ ಕೂಡಿದ. ಸರಸವಿಲಾಸ ಮಾಡಿದ. ಮತ್ತೆ ಮೂವರು ಮಕ್ಕಳನ್ನು ಪಡೆದ. ಎರಡು ಗಂಡು ಒಂದು ಹೆಣ್ಣು. ಹಿರಿಯ ಮಗನೇ ಶನಿ. ಎರಡನೆಯವ ಮತ್ತೊಬ್ಬ ಮನು. ಮೂರನೇಯವಳೇ ಹೆಣ್ಣು ಮಗಳಾದ ತಪತೀ. ಛಾಯಾದೇವಿಯು ತನಗೆ ಮಕ್ಕಳಾಗುವವರೆಗೆ ತನ್ನ ಸವತಿಯ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದಳು. ತನಗೂ ಮೂರು ಮಕ್ಕಳಾದ ಬಳಿಕ ಸಂಜ್ಞೆಯ ಹುಡುಗರನ್ನು ಅಸಡ್ಡೆಯಿಂದ ನೋಡಲಿಕ್ಕೆ ಪ್ರಾರಂಭವಾಯಿತು. ತನ್ನ ಮಕ್ಕಳೂ ಸಂಜ್ಞೆಯ ಮಕ್ಕಳೂ ಚಿಕ್ಕಂದು ಬಡೆದಾಡಿದಾಗ ಅವಳು ತನ್ನ ಹೊಟ್ಟೆಯ ಮಕ್ಕಳ ಪಕ್ಷವಹಿಸಿ ಸಂಜ್ಞೆಯ ಮಗನಾದ ಯಮನಿಗೆ ಶಾಪಕೊಟ್ಟು ಬಿಟ್ಟಳು.

## ''ತನ್ನ ಮಗನಿಗೆ ಪಾಪ, ತಾಯಿ ಕೊಡುವಳೆ ಶಾಪ''!

ಪ್ರಸಂಗ ಶಾಪಕೊಡುವಷ್ಟು ವಿಕೋಪಕ್ಕೆ ಬಂದಾಗ ಸೂರ್ಯ ಯಮ ಇಬ್ಬರಿಗೂ ಸಂಶಯ ಬಂದಿತು. ಹಡೆದ ತಾಯಿ ಮಕ್ಕಳಿಗೆ ಎಂದಾದರೂ ಕೇಡು ಬಯಸಿ ಶಾಪ

ಕೊಡುವುದುಂಟೇ! ಇವಳು ಶನಿಯ ತಾಯಿಯೇ ಆಗಿರಲಿಕ್ಕಿಲ್ಲ ಎಂದು ಸಂದೇಹ ಬಂದು ಸೂರ್ಯ ಗದರಿಸಿ ಕೇಳಿದ. ''ನೀನಾರು?''

## ಛಾಯಾ - ಮಾಯಾ

ಆಗ ಛಾಯಾದೇವಿಯು ನಡೆದ ಸಮಾಚಾರ ತಿಳಿಸಿದಳು. ''ಬೆಂಕಿಯ ಬೆಟ್ಟದಂತಿರುವ ನಿಮ್ಮ ಉರಿಯ ಅಪ್ಪುಗೆಯಿಂದ ತಪ್ಪಿಸಿಕೊಳ್ಳಲಿಕ್ಕಾಗಿ ಅವಳು ನನ್ನನ್ನಿಲ್ಲಿ ಇರಿಸಿ ತಪಸ್ಸಿಗೆ ತೆರಳಿದ್ದಾಳೆ'' ಎಂದು ಹೇಳಿದಳು. ತನ್ನ ಮಡದಿಯ ಪ್ರತಿರೂಪಳಾದ ಆ ನೆರಳ ನಾರಿಯಿಂದ ಪತ್ನಿ ಪಲ್ಲಟದ ಸುದ್ದಿ ಕೇಳಿದ ಸೂರ್ಯನಿಗೆ ಈ ನೆರಳಿನೊಂದಿಗೆ ಮರುಳಾಟ ಸಾಕು ಎನಿಸಿತು. ತನ್ನ ಪತ್ನಿಯ ತಿರುಳ ರೂಪವನ್ನೇ ಕಾಣಬೇಕೆಂಬ ತವಕ ಹೆಚ್ಚಾಯಿತು ಅವನಿಗೆ, ಕೂಡಲೇ ಜಗಚ್ಚಕ್ಷುವಾದ ಅವನು ದಿವ್ಯ ದೃಷ್ಟಿಯಿಂದ ತನ್ನ ಮಡದಿ ಮೂಲಮೈಯಿಂದ ತಪಂಗೈಯುತ್ತಿರುವ ತಾಣವನ್ನು ಗೊತ್ತು ಹಚ್ಚಿ ಅಲ್ಲಿಗೆ ಧಾವಿಸಿದನು. ಅನಿಂದ್ಯ ಸುಂದರಿಯಾದ ಅವಳು ತನ್ನ ಹೆಣ್ತನದ ಚೆಲುವು ಕಂಡವರ ಕಣ್ಣು ಕೋರೈಯಿಸಿ ಚಿತ್ತ ವಿಕಾರವನ್ನು ಉಂಟು ಮಾಡುವುದೇ ಬೇಡ ಎಂದು ಕಾಮಿನೀ ರೂಪ ಬಿಟ್ಟು ಕುದುರೆ ರೂಪ ತೊಟ್ಟಿದ್ದಳು. ಮನಸ್ಸಿನಲ್ಲಿ ಸೂರ್ಯನಾರಾಯಣನನ್ನೇ ನಿರಂತರ ಧ್ಯಾನ ಮಾಡುತ್ತಿದ್ದಳು. ಅವಳ ಪತಿಭಕ್ತಿಯನ್ನು ಕಂಡು ಪ್ರೀತನಾದ ದಿವಾಕರನು ತಾನು ಗಂಡು ಕುದುರೆಯ ರೂಪ ತೊಟ್ಟು ಅವಳೊಡನೆ ಕೂಡಿದನು. ಆಗ ಆ ಅಶ್ವದಂಪತಿಗಳಿಂದ ಅವಳಿ ಮಕ್ಕಳೀರ್ವರು ಜನಿಸಿದರು. ಅವರೇ ಅಶ್ವಿನೀ ದೇವತೆಗಳು. ಅವರ ರಾಗರತಿಯ ಫಲವಾಗಿ ಪುಟ್ಟಿದ ಕೊನೆಯ ಮಗನೇ ರೇತಸ. ಅನಂತರ ರವಿದೇವನು ತನ್ನ ಮಡದಿಗೆ ಮೂಲರೂಪ ತೊಡಿಸಿ ಮರಳಿ ಮನೆಗೆ ಕರೆತಂದನು. ಸಂಜ್ಞಾದೇವಿಯ ತಂದೆ ವಿಶ್ವಕರ್ಮನು ಮಗಳ ಮನೆಯಲ್ಲಿ ನಡೆದ ಈ ಅವಾಂತರ ತಿಳಿದು ಅಲ್ಲಿಗೆ ಬಂದು ನೋಡಿದ. ಅಳಿಯ ಬೆಂಕಿಯ ಬಣಿವೆ. ಮಗಳೋ ಬೆಣ್ಣೆಯ ಬೊಂಬೆ. ಒಂದು ಅಗ್ನಿ ಮೂರ್ತಿ. ಇನ್ನೊಂದು ಮೇಣದ ಗೊಂಬೆ. ಈ ಸಿಡಿಲು ಮೊಗ್ಗೆಗಳ ಯೋಗವೆಂತು! ರಾಗವೆಂತು! ಭೋಗವೆಂತು! ಕೊನೆಗೆ ಅವನಿಗೊಂದು ಯುಕ್ತಿ ಹೊಳೆಯಿತು. ಅವನು ಸ್ವರ್ಗಲೋಕದ ಬಡಿಗನಲ್ಲವೇ! ಪ್ರಭೆಯ ಪರ್ವತದಂತಿರುವ ತನ್ನ ಅಳಿಯನನ್ನು ಹಿಡಿದು ತಂದು ತನ್ನ ಗಾಡಕ್ಕೆ ಏರಿಸಿದ. ಬೆಂಕಿಯ ಬೆಟ್ಟದಂತಿರುವ ಸೂರ್ಯನ ಬೃಹದಾಕಾರವು ಸಾಣೆಗೆ ಹಿಡಿದು ತೀಡಿದಾಗ ಸವೆದು ಸಣ್ಣದಾಯಿತು. ಕಾವು ಕಡಿಮೆಯಾಗಿ ಶರೀರ ಸೌಮ್ಯವಾಯಿತು. ಕಿಚ್ಚಿನ ಕುಲುಮೆಯಂತಿರುವ ಅವನ ವಿರಾಟ್ ಕಾಯದ ಹೆಚ್ಚಿನ ಭಾಗವನ್ನೆಲ್ಲ ಕೊರೆದು ತೆಗೆದು ಎಂಟನೆಯ ಒಂದು ಅಂಶಕ್ಕೆ ಇಳಿಸಿದನು. ಶ್ರೀ ವಿಷ್ಣುವಿನ ಸಂಕಲ್ಪದಂತೆ ವಿಶ್ವಕರ್ಮನು ವೈಷ್ಣವೀಯ ತೇಜೋಂಶದಿಂದ ಕೂಡಿದ ಸೂರ್ಯ ಮಂಡಲವನ್ನು ಸಾಣೆ ಹಿಡಿಯುವ ಬೃಹದ್ಯಂತ್ರಕ್ಕೆ ಏರಿಸಿದಾಗ ಆ ತೇಜೋಗೋಲಕದ ಭಾಗಗಳು ಕಡಿದು ಕತ್ತರಿಸಿ ತುಂಡು ತುಣುಕುಗಳಾಗಿ ನೆಲಕ್ಕೆ ಬಿದ್ದವು. ಆ ಕೆಂಡದ ಹೆಬ್ಬಂಡೆಯನ್ನು ಕೊರೆಯತೊಡಗಿದಾಗ ಉದುರಿ ಬಿದ್ದ ತೇಜಸ್ಸಿನ ಖಂಡ ತುಂಡುಗಳನ್ನು ಕೂಡಿಸಿ ವಿಶ್ವಕರ್ಮನು ವಿಷ್ಣುವಿನ

ಸುದರ್ಶನ ಚಕ್ರವನ್ನು ಮಾಡಿದನು. ಶಂಕರನ ತ್ರಿಶೂಲಾಯುಧವನ್ನೂ ಅದರಿಂದಲೇ ರಚಿಸಿದನು. ಉಳಿದ ಅದರ ತೇಜಸ್ಸು ಣುಕಗಳಿಂದ ಸ್ಕಂದನ ಶಕ್ತಿ ಆಯುಧವನ್ನು ನಿರ್ಮಿಸಿದನು. ಅದರಿಂದ ಸಿಡಿದು ಬಂದ ಅವೇ ಬೆಳಕಿನ ಸೆಳಕುಗಳಿಂದ ಕುಬೇರನ ಪುಷ್ಪಕ ವಿಮಾನವನ್ನು ತಯಾರಿಸಿದನು. ಇಷ್ಟೆಲ್ಲ ಆಗಿ ಉಳಿದ ಆ ಅಗ್ನಿ ಪಿಂಡದ ಛಿನ್ನ ವಿಚ್ಛಿನ್ನವಾದ ಕಿಡಿ ಪುಡಿಗಳಿಂದ ಉಳಿದ ದೇವತೆಗಳ ಶಸ್ತ್ರಾಸ್ತ್ರಗಳನ್ನು ಪುಟಕ್ಕಿಟ್ಟು ತೇಜಸ್ತೀಕ್ಷ್ಣವಾಗುವಂತೆ ಮಾಡಿದನು.

## ಸವತಿ ಮಕ್ಕಳಲ್ಲಿ ವಿಲಕ್ಷಣ ಸಾಮ್ಯ

ದಿವಾಕರನಿಗೆ ಸಂಜ್ಞೆಯಿಂದ ಮೊದಲು ಮೂರು ಮಕ್ಕಳಾದಂತೆ (ಸಂಜ್ಞೆಯು) ಛಾಯೆಯಿಂದಲೂ ಮೂವರು ಮಕ್ಕಳಾಗಿದ್ದರು. ಸಂಜ್ಞೆಯ ಹೊಟ್ಟೆಯಿಂದಲು ಒಬ್ಬ ಮನು-ಛಾಯೆಯ ಹೊಟ್ಟೆಯಿಂದಲೂ ಒಬ್ಬ ಮನು. ಈ ಸಣ್ಣ ಮನು. ತನ್ನ ಅಣ್ಣ ಮನುವನ್ನೇ ಎಲ್ಲದರಲ್ಲಿಯೂ ಹೋಲುತ್ತಿದ್ದ. ಅದೇ ಕಣ್ಣು, ಅದೇ ಬಣ್ಣ, ಅದೇ ಮೋರೆ, ಎಲ್ಲವೂ ತದ್ರೂಪ. ಆದುದರಿಂದ ಅವನಿಗೆ ಸಾವರ್ಣಿಮನು ಎಂದು ಹೆಸರು ಬಂದಿತು. ಇನ್ನು ಮುಂಬರುವ ಮನ್ವಂತರಕ್ಕೆ ಈ ಸಾವರ್ಣಿಯೇ ಅಧಿಪತಿಯಾಗಿ ಬರಲಿರುವನು. ಆಗ ಸುತಪ, ಅಮಿತಾಭ ಮುಖ್ಯರು ದೇವತಾ ಪಟ್ಟದಲ್ಲಿ ಇರುವರು. ಈ ದೇವತೆಗಳ ಒಂದೊಂದು ಗುಂಪಿನಲ್ಲಿ ಇಪ್ಪತ್ತರಂತೆ ದೇವತೆಗಳ ಸಮಾವೇಶ ವಾಗಿರುವುದು. ಈ ಆಗಾಮಿ ಮನ್ವಂತರದಲ್ಲಿ ದೀಪ್ತಿಮಾನ್, ಗಾಲವ, ರಾಮ, ಕೃಪ ದ್ರೋಣಾಚಾರ್ಯರ ಮಗ ಅಶ್ವತ್ಥಾಮ, ಹಾಗೂ ನನ್ನ ಮಗನಾದ ವ್ಯಾಸ ಮತ್ತು ಋಷ್ಯಶೃಂಗ ಇವರೇಳು ಜನ ಸಪ್ತರ್ಷಿಗಳಾಗಿ ಶೋಭಿಸುವರು.

## ಮೂರಡಿ ನೆಲದಾನವಿತ್ತು, ಮೂರು ಲೋಕಕ್ಕೆ ಒಡೆಯನಾದ ಬಲಿ

ಆ ಯುಗದಲ್ಲಿ ವಿರೋಚನನ ಮಗ ಬಲಿರಾಜನೇ ಇಂದ್ರನಾಗುವನು. ಇಂದು ಕೆಳಗೆ ಪಾತಾಳದ ತಳದಲ್ಲಿದ್ದ ಅವನು ಮುಂದೆ ಮೇಲಿನ ಸ್ವರ್ಗಾದಿಲೋಕಗಳಿಗೆ ಒಡೆಯನಾಗುವನು. ಇವೆಲ್ಲವು ವಾಮನ ರೂಪಿಯಾದ ವಿಷ್ಣುವಿಗೆ ಮೂರಡಿ ನೆಲವನ್ನು ದಾನ ನೀಡಿದ್ದರ ಫಲ. ಈ ಸಾವರ್ಣಿ ಮನುವಿನಪುತ್ರರಾದ ವಿರಜ, ಉರ್ವರೀವಾನ್ ಮತ್ತು ನಿರ್ಮೋಕ ಮುಂತಾದವರು ಸಾಮ್ರಾಜ್ಯ ಶಾಸಕರಾಗುವರು.

ಒಂಭತ್ತನೆಯ ಮನ್ವಂತರವೇ ದಕ್ಷಸಾವರ್ಣಿ ಮನ್ವಂತರ. ಪಾರ, ಸುಧರ್ಮ, ಮರೀಚಿಗರ್ಭ ಎಂಬ ದೇವತೆಗಳ ಸಂಘಗಳು ಆಗ ತಲೆಯೆತ್ತುತ್ತವೆ. ಒಂದೊಂದು ಸಂಘದಲ್ಲಿ ಹನ್ನೆರಡು ದೇವತೆಗಳು. ಆ ದೇವತಾ ಸಂಘಗಳಿಗೆಲ್ಲ ಅದ್ಭುತ ಎಂಬ ಹೆಸರಿನ ದೇವೇಂದ್ರನು ಅಧಿರಾಜನಾಗಿರುವನು. ಆಗ ಸವನ, ದ್ಯುತಿಮಾನ್, ಭವ್ಯ, ವಸ್ತು, ಸಪ್ತರ್ಷಿ ಪದದಲ್ಲಿ ಕಂಗೊಳಿಸುವರು. ಈ ದಕ್ಷಸಾವರ್ಣಿಯ ಮಕ್ಕಳು ಧೃತಕೇತು, ದೀಪ್ತಿಕೇತು, ಪಂಚಹಸ್ತ, ನಿರಾಮಯ ಮೊದಲಾದವರು ಮಹಾರಾಜರಾಗಿ ಮೆರೆಯಲಿರುವರು. ಬ್ರಹ್ಮ ಸಾವರ್ಣಿ ಮನ್ವಂತರವೇ ಹತ್ತನೆಯದು. ಸುಧಾಮ, ವಿಶುದ್ಧ ಎಂಬ ದೇವತಾಗಣಗಳು. ಒಂದೊಂದರಲ್ಲಿರುವ ಸುರರಸಂಖ್ಯೆ ನೂರು. ಅವರಿಗೆ ಶಾಂತಿ

ಎಂಬ ಇಂದ್ರನೇ ಪ್ರಭುವಾಗಿರುವನು. ಆ ಸುರಪತಿ ಮಹಾಬಲಿಷ್ಠ. ಇನ್ನು ಆಗ ಆಗಲಿರುವ ಸಪ್ತರ್ಷಿಗಳನ್ನು ತಿಳಿಸುವೆನು ಕೇಳು. ಹವಿಷ್ಮಾನ್, ಸುಕೃತ, ಸತ್ಯ, ತಪೋಮೂರ್ತಿ, ನಾಭಾಗ, ಅಪ್ರತಿಮೌಜ, ಸತ್ಯಕೇತು ಇವರೇ ಆ ಸಪ್ತರ್ಷಿಗಳು, ಸುಕ್ಷೇತ್ರ, ಉತ್ತಮ, ಭೂರಿಷೇಣ, ಮುಂತಾದ ಬ್ರಹ್ಮಸಾವರ್ಣಿಯ ತನುಜರು ಪೃಥ್ವೀ ಮಂಡಲವನ್ನು ಆಗ ಪರಿಪಾಲನ ಮಾಡುವರು.

ಹನ್ನೊಂದನೆಯ ಮನು ಧರ್ಮಸಾವರ್ಣಿ ಅವನ ಮನ್ವಂತರದಲ್ಲಿ ವಿಹಂಗಮ, ಕಾಮಗಮ, ನಿರ್ವಾಣರತಿ ಎಂಬ ಅಮರ ಗಣಗಳು ಅಧಿಕಾರದಲ್ಲಿರುವರು. ಒಂದೊಂದು ಗಣದಲ್ಲಿ ಮೂವತ್ತು ದೇವತಾ ಸದಸ್ಯರಿರುವರು. ವೃಷ ಎಂಬ ಇಂದ್ರನು ಆಗಿನ ಸುರಸಿಂಹಾಸನವನ್ನು ಏರುವನು. ನಿಸ್ವರ, ಅಗ್ನಿತೇಜ, ವಪುಷ್ಮಾನ್, ಘಲಣಿ, ಅರುಣಿ, ಹವಿಷ್ಮಾನ್, ಅನಘ, ಪ್ರಭೃತಿಗಳೇ ಈ ಹನ್ನೊಂದನೆಯ ಮನ್ವಂತರದ ಸಪ್ತರ್ಷಿಗಳು. ಸರ್ವತ್ರಗ, ಸುಧರ್ಮ, ದೇವಾನೀಕ ಮುಂತಾದ ಮನುಕುಮಾರರು ಪೊಡವಿಯಾಣ್ಮರಾಗಿ ಶಾಸನ ಮಾಡುವರು.

ಹನ್ನೆರಡನೆಯ ಮನ್ವಂತರಕ್ಕೆ ರುದ್ರದೇವರ ಮಗನಾದ ಸಾವರ್ಣಿ ಮನುವೇ ನಿಯಾಮಕ. ಅಂದಿನ ಇಂದ್ರ ಋತುಧಾಮ. ಆ ಕಾಲದಲ್ಲಿ ಹರಿತ, ರೋಹಿತ, ಸುಮನಾ, ಸುಕರ್ಮ ಮತ್ತು ಸುರಾಫ ಎಂಬ ಐದು ಪ್ರದಾನ ಸುರಸಂಘಗಳುಂಟು. ಪ್ರತಿಯೊಂದು ಸಂಘಕ್ಕೂ ಹತ್ತು ಜನ ಸುರಪುರದ ನಾಗರಿಕರು ಸದಸ್ಯರಾಗಿರುವರು. ಈ ಮನ್ವಂತರದ ಸಪ್ತರ್ಷಿಗಳೆಲ್ಲರೂ ತಪೋಮೂರ್ತಿಗಳೇ. ಇದು ಅವರ ಹೆಸರಿನ ಮೇಲಿಂದಲೇ ಸುಸ್ಪಷ್ಟವಾಗುವುದು. ತಪಸ್ವೀ, ಸುತಪಾಃ, ತಪೋಮೂರ್ತಿ, ತಪೋರತಿ, ತಪೋಧೃತಿ, ದ್ಯುತಿ, ಮತ್ತು ತಪೋಧನ, ಈ ಏಳು ಮಹಾಮುನಿಗಳು ಆಗ ಸಪ್ತರ್ಷಿಗಳಾಗಿ ಬೆಳಗುವರು. ದೇವಾನ್, ಉಪದೇವ, ದೇವಶ್ರೇಷ್ಠ ಮುಂತಾದ ಮನುಪುತ್ರರು ದೊಡ್ಡ ದೊಡ್ಡ ಮಹಾರಾಜರಾಗಿ ಭೂಮಿಯನ್ನು ಆಳಲಿರುವರು. ಅವರೆಲ್ಲರೂ ಒಳ್ಳೇ ಬಲಿಷ್ಠರು.

ಹದಿಮೂರನೆಯ ಮನ್ವಂತರ ರುಚಿ ಮನ್ವಂತರ. ಸುತ್ರಾಮ, ಸುಧಾಮ, ಸುಕರ್ಮ ಎಂಬ ಅಮರ ಗಣಗಳು ಮೂವತ್ತುಮೂರು ಸುರರಿಂದ ಘಟಿತವಾಗಿರುತ್ತವೆ. ಮಹಾ ಬಲಿಷ್ಠನಾದ ದಿವಸ್ಪತಿಯೇ ಆ ಮನ್ವಂತರದ ಇಂದ್ರ. ಆ ರುಚಿಮನ್ವಂತರದಲ್ಲಿ ನಿರ್ಮೋಹ, ತತ್ವದರ್ಶಿ, ನಿಷ್ಪ್ರಕಂಪ್ಯ, ನಿರುತ್ಸುಕ, ಧೃತಿಮಾನ್, ಅವ್ಯಯ, ಕೊನೆಯವನಾಗಿ ಸುತಪ ಎಂಬ ಮುನಿಗಳು ಸಪ್ತರ್ಷಿ ಸ್ಥಾನದಲ್ಲಿರುವರು. ಚಿತ್ರಸೇನ, ವಿಚಿತ್ರ ಮುಂತಾದ ಮನುವಿನ ಮಕ್ಕಳು ಮಹಾರಾಜಾಧಿರಾಜರಾಗಿ ಆಗ ಆಳುವರು. ಕೊನೆಯ ಮನ್ವಂತರಕ್ಕೆ ಭೌಮನು ಮನು. ಅಂದಿನ ಇಂದ್ರ ಶುಚಿ. ದೇವತಾಗಣಗಳು ಐದು. ಚಾಕ್ಷುಷ, ಪವಿತ್ರ, ಕನಿಷ್ಠ, ಭ್ರಾಜಿಕ, ವಾಚಾವೃದ್ಧ ಎಂದು. ಸಪ್ತರ್ಷಿಗಳ ಹೆಸರು ಕೇಳು. ಅಗ್ನಿಬಾಹು ಶುಚಿ, ಶುಕ್ರ, ಮಾಗಧ, ಅಗ್ನೀಧ್ರ, ಯುಕ್ತಜಿತ. ಭೌಮಮನುವಿನ ಊರು, ಗಂಭೀರ. ಬುದ್ಧಿ ಮುಂತಾದ ಮಕ್ಕಳು ಈ ಕೊನೆಯ ಮನ್ವಂತರದಲ್ಲಿ ಮಹೀಮಂಡಲವನ್ನು ಪಾಲಿಸುತ್ತಾರೆ.

## ಸಪ್ತರ್ಷಿಗಳ ಕಾರ್ಯ

ಪ್ರತಿಯೊಂದು ಚತುರ್ಯುಗದ ಕೊನೆಗೆ ವೇದಧರ್ಮಕ್ಕೆ ಲೋಪ ಬರುತ್ತದೆ. ಆಗ ಆ ಕಾಲದ ಸಪ್ತರ್ಷಿಗಳು ಮೇಲಿಂದ ಇಳಿದು ಭೂಲೋಕಕ್ಕೆ ಬಂದು ಮತ್ತೆ ವೇದೋದ್ಧಾರ ಮಾಡಿ ಧರ್ಮ ಸ್ಥಾಪನೆಯನ್ನು ಮಾಡುತ್ತಾರೆ. ಪ್ರತಿ ಮನ್ವಂತರದ ಪ್ರಾರಂಭದಲ್ಲಿ ಎಲ್ಲ ಕೃತ್ಯಾದಿಯುಗಗಳ ಆದಿಯಲ್ಲಿ ಮನು ಮಹಾರಾಜನು ಸ್ಮೃತಿಗ್ರಂಥವನ್ನು ಬರೆದು ಧರ್ಮಮಾರ್ಗವನ್ನು ತೋರುತ್ತಾನೆ. ದೇವತೆಗಳು ಆ ಮನ್ವಂತರಗಳ ಕೊನೆಯವರೆಗೆ ಯಜ್ಞಭಾಗವನ್ನು ಸ್ವೀಕರಿಸಿ ಮಳೆ ಬೆಳೆಗಳಿಂದ ಜೀವಿಗಳನ್ನು ಪೋಷಿಸುತ್ತಾರೆ. ಮತ್ತು ಆ ಮನುವಿನ ವಂಶದಲ್ಲಿ ಜನಿಸಿದವರಿಂದ ಪೊಡವಿಯ ಪಾಲನವು ಮಾಡಲ್ಪಡುತ್ತದೆ. ಹೀಗೆ ಮನು, ಸಪ್ತರ್ಷಿ, ದೇವಗಣ, ಇಂದ್ರ, ಮನುಪುತ್ರರಾದ ರಾಜರು ಇವರೆಲ್ಲರೂ ಪ್ರತಿಯೊಂದು ಮನ್ವಂತರಗಳಲ್ಲಿ ಅಧಿಕಾರಿಗಳಾಗಿರುತ್ತಾರೆ. ಇಂಥ ಹದಿನಾಲ್ಕು ಮನ್ವಂತರಗಳು ತಿರುಗಿದಾಗ ಸಾವಿರ ಯುಗದ ಅವಧಿಯ ಒಂದು ಕಲ್ಪವು ಪೂರ್ಣವಾದಂತೆ. ಇಷ್ಟೇ ಸಮಯ ರಾತ್ರಿ. ಈ ರಾತ್ರಿಯಲ್ಲಿ ಬ್ರಹ್ಮಸ್ವರೂಪಿಯಾದ ಭಗವಂತನು ವಿಶ್ವವನ್ನೆಲ್ಲ ಕಬಳಿಸಿ ತನ್ನ ಉದರದಲ್ಲಿ ಇರಿಸಿಗೊಂಡು ಕಲ್ಪಾಂತ ಕಾಲದ ಕಡಲಿನಲ್ಲಿ ಆದಿಶೇಷ ಎಂಬ ಹಾವಿನ ಮಂಚದಲ್ಲಿ ಪವಡಿಸುತ್ತಾನೆ. ಪ್ರತಿ ಕಲ್ಪದ ಆದಿಯಲ್ಲಿ ಸ್ವಯಂ ನಾಶರಹಿತನಾದ ಪ್ರಬುದ್ಧ ಶ್ರೀ ಹರಿಯು ರಜೋಗುಣವನ್ನು ಸ್ವೀಕರಿಸಿ ಮತ್ತೆ ಸೃಷ್ಟಿಯನ್ನು ಪ್ರಾರಂಭಿಸುತ್ತಾನೆ. ಮನು, ಮನುಪುತ್ರ, ಇಂದ್ರ, ಸಪ್ತರ್ಷಿ, ದೇವತಾಗಣಗಳೆಲ್ಲವೂ ಸ್ಥಿತಿ ಹೇತುವಾದ ಆ ಭಗವಂತನ ಒಂದೊಂದು ಪಾಲಕ ಅಂಶಗಳೇ ಆಗಿವೆ. ಈ ಚತುರ್ಯುಗಗಳಲ್ಲೆಲ್ಲ ಸ್ವಯಂ ಪರಮಾತ್ಮನು ಕಪಿಲ, ದತ್ತಾತ್ರೇಯ, ವೇದವ್ಯಾಸಾದಿ ಅವತಾರಗಳನ್ನು ಎತ್ತಿ ದುಷ್ಟ ನಿಗ್ರಹವನ್ನು ಮಾಡಿ ಜ್ಞಾನೋಪದೇಶದಿಂದ ಜಗದುದ್ಧಾರಗೈಯುತ್ತಾನೆ. ಕೊನೆಗೆ ಕಲ್ಕಿಸ್ವರೂಪದಿಂದ ದುಷ್ಟರನ್ನು ಶಾಸನಮಾಡುತ್ತಾನೆ. ಹೀಗೆ ಹುಟ್ಟಿಸುವುದು ಕಾಯುವುದು ಕೊಲ್ಲುವುದು ಈ ಮೂರನ್ನು ಮಾಡುವವ ಆ ಪರಮಾತ್ಮನೊಬ್ಬನೇ ಅನ್ಯರಾರೂ ಅಲ್ಲ.

## ಮುನೀನಾಮಪ್ಯಹಂ ವ್ಯಾಸಃ

**ಮೈತ್ರೇಯ** - ಪೂಜ್ಯರೇ, ಪ್ರತಿಯುಗದಲ್ಲಿ ಭಗವಾನ್ ಶ್ರೀ ಹರಿಯು ವೇದ ವಿಭಾಗವನ್ನು ಮಾಡುವದೆಂತು ! ಯುಗ ಯುಗಗಳಲ್ಲಿ ಬಗೆ ಬಗೆಯಾಗಿ ತೋರುವ ವ್ಯಾಸರು ಯಾರು ! ವೇದಗಳ ಶಾಖೆಗಳು ಯಾವು ! ಎಷ್ಟು ! ಅರುಹಬೇಕು.

**ಪರಾಶರ** - ಮೈತ್ರೇಯ, ಈ ವೇದ ವೃಕ್ಷದ ಟೊಂಗೆಗಳೋ ಸಾವಿರ. ಅದನ್ನೆಲ್ಲ ವಿಸ್ತಾರದಿಂದ ಹೇಳುವುದು ನನ್ನ ಆಳವಿಗೆ ಮೀರಿದ ಮಾತು. ಪ್ರತಿದ್ವಾಪರದಲ್ಲಿಯೂ ಸಾಕ್ಷಾತ್ ಶ್ರೀ ಹರಿಯೇ ವೇದವ್ಯಾಸ ರೂಪದಿಂದ ಅವತಾರ ಮಾಡಿ ವೇದಗಳನ್ನು ವಿಭಾಗ ಮಾಡುತ್ತಾನೆ. ಯಾಕೆಂದರೆ ಮಾನವರ ಶಕ್ತಿ ಅಲ್ಪ. ಮತಿ ಮಿತ, ಜನರ ಈ ಅಲ್ಪತೆಯನ್ನು ಕಂಡೇ ಎಲ್ಲರ ಹಿತಕ್ಕಾಗಿ ಶ್ರೀ ವ್ಯಾಸರು ವೇದಗಳನ್ನು ವಿಭಜಿಸುವರು.

ಯಾವ ರೂಪದಿಂದ ವಿಷ್ಣುವು ಒಂದಾಗಿದ್ದ ವೇದವನ್ನು ವಿಭಾಗ ಮಾಡುವನೋ ಅದೇ ವೇದವ್ಯಾಸ ಅವತಾರ. ಮುನಿ ಮೈತ್ರೇಯ, ಈ ವೈವಸ್ವತ ಮನ್ವಂತರದಲ್ಲಿಯ ಇಪ್ಪತ್ತೆಂಟು ದ್ವಾಪರ ಯುಗಗಳಲ್ಲಿ ಬೇರೆ ಬೇರೆ ಇಪ್ಪತ್ತೆಂಟು ಮಹರ್ಷಿಗಳು ವೇದ ವಿಭಾಗ ಮಾಡಿದ್ದಾರೆ. ಅವರೆಲ್ಲರ ಹೆಸರು ಹೇಳುವೆ ಕೇಳು (ಈ ಎಲ್ಲ ವ್ಯಾಸರಲ್ಲಿಯೂ ವೇದವ್ಯಾಸದೇವರ ವಿಶೇಷ ಸನ್ನಿಧಾನವಿದ್ದು ಇಪ್ಪತ್ತೆಂಟನೇ ದ್ವಾಪರದಲ್ಲಿ ಸ್ವಯಂ ಪರಮಾತ್ಮನೇ ವೇದವ್ಯಾಸನಾಗಿ ಅವತರಿಸುತ್ತಾನೆ).

ಮೊದಲನೇ ದ್ವಾಪರದಲ್ಲಿ ಸ್ವಯಂ ಬ್ರಹ್ಮದೇವರೇ ವೇದ ವಿಭಾಗಮಾಡಿದರು. ಆ ಬಳಿಕ ಎರಡನೇ ದ್ವಾಪರದಲ್ಲಿ ಪ್ರಜಾಪತಿ, ಮೂರನೇ ದ್ವಾಪರದಲ್ಲಿ ಶುಕ್ರಾಚಾರ್ಯ, ನಾಕನೇ ದ್ವಾಪರದಲ್ಲಿ ಬ್ರಹಸ್ಪತ್ಯಾಚಾರ್ಯ ವೇದ ವಿಭಾಗ ಮಾಡಿದರು. ಅದರಂತೆ ಮುಂದೆ ಒಂದೊಂದು ದ್ವಾಪರದಲ್ಲಿ ಸೂರ್ಯ, ಯಮ, ಇಂದ್ರ, ವಸಿಷ್ಠ, ಸಾರಸ್ವತ, ತ್ರಿಧಾಮ, ತ್ರಿಶಿಖ, ಭರದ್ವಾಜ, ಅಂತರಿಕ್ಷ, ವರ್ಣೀ, ತ್ರಯ್ಯಾರುಣ, ಧನಂಜಯ, ಕ್ರತುಂಜಯ, ಜಯ, ಭರದ್ವಾಜ, ಗೌತಮ, ಹರ್ಯಾತ್ಮ, ವಾಜಶ್ರವ, ತೃಣಬಿಂದು, ಋಕ್ಷ, ಅನಂತರ ನನ್ನ ತಂದೆಯಾದ ಶಕ್ತಿಮುನಿ ವ್ಯಾಸರಾದರು. ಆ ಬಳಿಕ ನಾನು ವ್ಯಾಸನಾಗಿದ್ದೆ. ನನ್ನ ಅನಂತರ ಜಾತುಕರ್ಣನ ನಂತರ ನನ್ನ ಮಗನಾದ ಕೃಷ್ಣದ್ವೈಪಾಯನನು ವ್ಯಾಸನಾಗಿದ್ದಾನೆ. ಹೀಗೆ ಇಪ್ಪತ್ತೆಂಟು ವ್ಯಾಸರು ಹಿಂದೆ ಆಗಿ ಅಷ್ಟು ಸಲ ವೇದ ವಿಭಾಗ ಮಾಡಿದ್ದಾರೆ. ಇನ್ನು ಮುಂದಿನ ದ್ವಾಪರದಲ್ಲಿ ದ್ರೋಣ ಪುತ್ರನಾದ ಅಶ್ವತ್ಥಾಮನು ವ್ಯಾಸ ಪದವಿಗೆ ಬರಲಿರುವನು. ಸರ್ವವೇದವೂ ಓಂ ಕಾರಾರ್ಥ ರೂಪವಾಗಿದೆ. ಅಕಾರ ಉಕಾರ ಮಕಾರಾತ್ಮಕವಾದ ಆ ಓಂಕಾರದ ಅರ್ಥ ಸರ್ವ ಗುಣ ಪರಿಪೂರ್ಣನಾದ ಪರಬ್ರಹ್ಮನೇ ಆಗಿದ್ದಾನೆ ಅರ್ಥಾತ್ ಸರ್ವ ವೇದಾರ್ಥನೂ ಆ ಪರಮಾತ್ಮನೇ ಆಗಿದ್ದಾನೆ. ಅವನು ಸರ್ವವೇದಮಯ. ಅವನೇ ಋಙ್ಮಯ, ಯಜುರ್ಮಯ, ಮೂಲತಃ ಏಕರೂಪವಾದ ವೇದಮಯನಾದ ಅವನು ಮತ್ತೆ ಋಗಾದಿ ಭೇದದಿಂದ ವಿಭಜನ ಹೊಂದಿದ. ಆ ವಿಭಾಗವನ್ನೂ ತಾನೇ ಮಾಡಿದ. ಮತ್ತೆ ಶಾಖೋಪ ಶಾಖೆಗಳ ಮುಖಾಂತರ ವೇದವನ್ನು ವಿಸ್ತಾರ ಗೈದವನೂ ಅವನೇ. ಆ ಸರ್ವ ವೇದ ಮತ್ತು ಅವುಗಳ ಶಾಖೋಪಶಾಖೆಗಳಿಂದ ಮುಖ್ಯ ಪ್ರತಿಪಾದ್ಯ ಆ ಭಗವಂತನೇ. ಅವುಗಳ ಜ್ಞಾನಪ್ರದ, ಜ್ಞಾನಸ್ವರೂಪ, ಜ್ಞಾನಿ ಎಲ್ಲವೂ ಅವನೇ ಆಗಿದ್ದಾನೆ.

## ವೇದಶಾಖೆಗಳ ವಿಸ್ತರಣೆ

ಪರಾಶರ - ವೇದವು ಮೂಲದಲ್ಲಿ ಒಂದು. ಆದರೆ ಆದ ಶಾಖೆಗಳು ಅನಂತ. ಅಸಂಖ್ಯ. ಅದರ ಚರಣ ನಾಕು. ಅದರ ಮಂತ್ರಗಳೋ ಲಕ್ಷೋಪಲಕ್ಷ. ಆದುದರಿಂದಲೇ ಜನರಿಗೆ ಬಯಸಿದ್ದನ್ನು ನೀಡುವ ಅಗ್ನಿಹೋತ್ರಾದಿ ಹತ್ತು ವಿಧವಾದ ಯಜ್ಞಗಳು ಪ್ರವೃತ್ತವಾದವು. ಇಪ್ಪತ್ತೆಂಟನೆಯ ದ್ವಾಪರದಲ್ಲಿ ಸಾಕ್ಷಾದ್ ಭಗವದವತಾರ ಭೂತನಾದ ನನ್ನ ಮಗ ಶ್ರೀ ಕೃಷ್ಣದ್ವೈಪಾಯನನು ಮೂಲದಲ್ಲಿ ಒಂದೇ ವಿಧವಾದ ಆ ವೇದವನ್ನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ

ಎಂದು ನಾಕು ಬಗೆಯಾಗಿ ವಿಭಾಗ ಮಾಡಿದನು. ಅದನ್ನು ನೋಡಿಯೇ ಉಳಿದೆಲ್ಲ ವ್ಯಾಸರೂ ಅದರಂತೆಯೇ ತಾವೂ ಚತುರ್ವಿಧವಾಗಿಯೇ ವೇದ ವಿಭಾಗಗೈದರು. ಯಾಕೆಂದರೆ ಕೃಷ್ಣದ್ವೈಪಾಯನ ಸಾಕ್ಷಾತ್ ನಾರಾಯಣನೇ ಸರಿ.

"ಕೃಷ್ಣ ದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ
ಕೋऽಹ್ಯನ್ಯೋ ಭುವಿ ಮೈತ್ರೇಯ ಮಹಾಭಾರತಕೃದ್ಭವೇದ್ ॥

ಭಗವಾನ್ ನಾರಾಯಣನಲ್ಲದೇ ಮಹಾಭಾರತದಂಥ ಹೆಬ್ಬೊತ್ತಿಗೆಯನ್ನು ಯಾರು ಬರೆಯಬಲ್ಲರು! ಈ ದ್ವಾಪರದಲ್ಲಿ ಸಕಲ ವೇದಗಳನ್ನು ವಿಭಾಗಿಸಿದವ ಈ ಕೃಷ್ಣದ್ವೈಪಾಯನನೇ. ಅವನು ನನ್ನ ಮಗ. ವಸ್ತುತಸ್ತು ಅದು ಪರಚೇತನ. ಬ್ರಹ್ಮ ಬಂದು ಅವನನ್ನು ವೇದ ವಿಭಾಗ ಮಾಡಬೇಕೆಂದು ಕೇಳಿಕೊಂಡು. ಸರಿ ವ್ಯಾಸ, ವೇದರಾಶಿಯನ್ನೆಲ್ಲ ನಾಕು ವಿಧವಾಗಿ ವಿಭಜಿಸಿ ಇಟ್ಟ.

## ಚತುರರಾದ ಚತುಃಶಿಷ್ಯರು

ಭಗವಾನ್ ಬಾದರಾಯಣರಿಗೆ ಅನೇಕ ಜನ ಶಿಷ್ಯರು. ಅವರಲ್ಲಿ ನಾಲ್ವರು ಗುರುವಿನ ದಯೆಯಿಂದ ಮಹಾ ವೇದ ಪಾರಂಗತರು. ಅವರದು ಒಳ್ಳೇ ಚುರುಕು ಬುದ್ಧಿ. ಅವರನ್ನು ವಿಶೇಷಾಧ್ಯಯನಕ್ಕಾಗಿ ವ್ಯಾಸಗುರು ಆರಿಸಿಗೊಂಡ. ಅವರಲ್ಲಿ ಪೈಲಮುನಿಗೆ ಋಗ್ವೇದ ರಹಸ್ಯವನ್ನು ಉಪದೇಶಿಸಿದ. ವೈಶಂಪಾಯನನಿಗೆ ಯಜುರ್ವೇದದ ವಿಶೇಷಗಳನ್ನು ಬೋಧಿಸಿದ. ಸಾಮವೇದವನ್ನು ಜೈಮಿನಿಗೆ ಪಾಠಹೇಳಿ ಪಾರಂಗತನನ್ನಾಗಿ ಮಾಡಿದ. ಇವರಲ್ಲದೇ ವ್ಯಾಸರಿಗೆ ಸೂತಜಾತಿಯವನಾದ ಬೇರೊಬ್ಬ ಶಿಷ್ಯನಿದ್ದ. ಅವನ ಬುದ್ಧಿ ಬಹಳ ಹರಿತ ಅವನಿಗೆ ಇತಿಹಾಸ ಮತ್ತು ಪುರಾಣಗಳನ್ನೆಲ್ಲ ಕಲಿಸಿದರು. ವ್ಯಾಸರ ಈ ಸೂತಜಾತಿಯ ಶಿಷ್ಯನ ಹೆಸರು ರೋಮಹರ್ಷಣ. ಪೂರ್ವಕಾಲದಲ್ಲಿ ಯಜುರ್ವೇದವೂ ಒಂದೇ ಆಗಿದ್ದಿತು. ಅದನ್ನು ಶ್ರೀವ್ಯಾಸರು ನಾಲ್ಕು ವಿಧವಾಗಿ ವಿಭಾಗ ಮಾಡಿದ ಬಳಿಕ ಚಾತುರ್ಹೋತ್ರದ ಪದ್ಧತಿಯಿಂದ ಯಜ್ಞಾನುಷ್ಠಾನ ಗೈಯುವ ವ್ಯವಸ್ಥೆಯನ್ನೂ ಏರ್ಪಡಿಸಿದರು. ಮತ್ತು ಯಜುರ್ವೇದದಿಂದ ಅಧ್ವರ್ಯುವಿನ ಕರ್ಮವನ್ನು ಋಗ್ವೇದದಿಂದ ಹೋತೃವಿನ ಕರ್ಮವನ್ನೂ, ಅಥರ್ವವೇದದಿಂದ ಬ್ರಹ್ಮಾನು ಕರ್ಮವನ್ನೂ ಗೊತ್ತು ಪಡಿಸಿದರು. ಅನಂತರ ಅನಂತ ವೇದರಾಶಿಯಿಂದ ಭಗವಂತನ ಸ್ತೋತ್ರ ಮಾಡತಕ್ಕ ಕೆಲವು ಮಂತ್ರ ಋಕ್ಕು ಎತ್ತಿ ಋಗ್ವೇದವನ್ನು ರಚಿಸಿದರು. ಯಜ್ಞಕ್ಕೆ ಉಪಯುಕ್ತವಾದ ಹಲ ಕೆಲವು ಮಂತ್ರ ತಂತ್ರಗಳನ್ನು ಸೇರಿಸಿ ಯಜುರ್ವೇದವನ್ನೂ ರಚಿಸಿದರು. ಅಥರ್ವವೇದದಿಂದ ರಾಜಕಾರ್ಯದ ವ್ಯವಸ್ಥೆಯನ್ನು ಮಾಡಿದರು. ಹೀಗೆ ಮೊದಲು ಒಂದಾದ ವೇದದ ಗಿಡವು, ಟೊಂಗೆ, ಟಿಸಿಲು, ಗುಡಿ ಮಿಡಿಗಳಿಂದ ದಾಂಗುಡಿಯಿಟ್ಟು ಬೆಳೆದು ಈಗ ದೊಡ್ಡದೊಂದು ವೈದಿಕ ಉಪವನವೇ ರೂಪುಗೊಂಡಿದೆ. ಶ್ರೀ ವ್ಯಾಸರ ಶಿಷ್ಯನಾದ ಪೈಲಮುನಿಯು ಋಗ್ವೇದವನ್ನು ಎರಡು ಭಾಗ ಮಾಡಿ ಇಂದ್ರಪ್ರಮಿತಿ ಮತ್ತು ಬಾಷ್ಕಲ ಎಂಬ ತನ್ನ ಶಿಷ್ಯರಿಗೆ ಕಲಿಸಿದನು. ಬಾಷ್ಕಲನು ತಾನು ಓದಿದ ಆ ಋಕ್ ಶಾಖೆಯನ್ನು ಮತ್ತೆ ನಾಕು ವಿಧವಾಗಿ ವಿಂಗಡಿಸಿ ಶಿಷ್ಯರಿಗೆ ಪಾಠ ಹೇಳಿದನು.

ಬಾಷ್ಕಲ ಶಾಖೆಯ ಈ ನಾಲ್ಕೂ ಪ್ರತಿಶಾಖೆಗಳನ್ನು ಅವನ ಬೋಧ್ಯ, ಅಗ್ನಿಮಾಢಕ, ಯಜ್ಞ್ಯವಲ್ಕ್ಯ, ಪರಾಶರ ಎಂಬ ನಾಕು ಶಿಷ್ಯರು ಅಧ್ಯಯನ ಮಾಡಿದರು.

ಮೈತ್ರೇಯ, ಪೈಲರ ಮತ್ತೊಬ್ಬ ಶಿಷ್ಯನಾದ ಇಂದ್ರ ಪ್ರಮಿತಿಯು ತನ್ನ ಸಂಹಿತೆಯನ್ನು ತನ್ನ ಮಗನಾದ ಮಹಾತ್ಮ ಮಾಂಡೂಕೇಯನಿಗೆ ಬೋಧಿಸಿದ. ಅವನು ತನ್ನ ಶಿಷ್ಯರಿಗೆ, ಅವರು ತಮ್ಮ ಶಿಷ್ಯರಿಗೆ ಹೀಗೆ ಪ್ರಸಾರವಾಗುತ್ತ ನಡೆಯಿತು. ಮುಂದೆ ಶಾಕಲ್ಯವೇದ ಮಿತ್ರನು ಈ ಇಂದ್ರ ಪ್ರಮಿತಿ ಶಾಖೆಯನ್ನು ಅಧ್ಯಯನ ಮಾಡಿ ಅದನ್ನು ಮತ್ತೆ ಐದು ವಿಧವಾಗಿ ವಿಂಗಡಿಸಿದನು. ಈ ಪಂಚ ಪ್ರಕಾರವಾದ ವೇದಸಂಹಿತಾ ಶಾಖೆಗಳನ್ನು ಶಾಕಲ್ಯ ವೇದಮಿತ್ರನ ಮುದ್ಗಲ, ಗೋಮುಖ, ವಾತ್ಸ್ಯ, ಶಾಲೀಯ ಮತ್ತು ಶರೀರ ಎಂಬ ಐವರು ಶಿಷ್ಯರು ಗ್ರಹಣ ಮಾಡಿದರು. ಈ ವೇದಮಿತ್ರರಿಗೆ ಇನ್ನೂ ಒಬ್ಬ ಶಿಷ್ಯನಿದ್ದ. ಶಾಕಪೂರ್ಣ ಅವನೂ ಪ್ರಗಾಢ ಪಂಡಿತ. ಅವನು ಮೂರು ವೇದ ಸಂಹಿತೆಗಳನ್ನು ರಚಿಸಿದ. ಅರ್ಥಾತ್ ಅಧ್ಯಯನಕ್ಕೆ ಅನುಕೂಲವಾಗುವಂತೆ ಮಂತ್ರಗಳನ್ನು ಹೊಂದಿಸಿದ. ಕ್ರೌಂಚ, ವೈತಾಲಿಕ, ಬಲಾತ ಎಂಬ ದೊಡ್ಡ ಮುನಿಗಳು ಈ ಶಾಕಪೂರ್ಣನಲ್ಲಿ ಶಿಷ್ಯತ್ವವನ್ನು ವಹಿಸಿ ಅವನ ಈ ಮೂರು ವೇದ ಸಂಹಿತೆಗಳನ್ನು ಅಧ್ಯಯನ ಮಾಡಿದರು.

ಶಾಕಪೂರ್ಣನು 'ನಿರುಕ್ತ' ಎಂಬ ಗ್ರಂಥವನ್ನು ರಚಿಸಿದನು. ವೇದ ವೇದಾಂಗ ಪಾರಂಗತನಾದ ಯಾಸ್ಕಾಚಾರ್ಯನು ಈ ಶಾಕಪೂರ್ಣನ ಶಿಷ್ಯನ್ನಾಗಿ ಅದೇ ನಿರುಕ್ತ ಗ್ರಂಥವನ್ನು ಪರಿಷ್ಕರಿಸಿದನು. ಆದುದರಿಂದ ಅವನು ನಿರುಕ್ತಕಾರನೆಂದು ಪ್ರಸಿದ್ಧನಾದನು. ಇದರಂತೆ ಬಾಷ್ಕಲನೂ ಮೂರು ಬೇರೆ ವೇದ ಸಂಹಿತೆಗಳನ್ನು ಮಾಡಿ ಕಾಲಾಯನಿ, ಗಾರ್ಗ್ಯ, ಕಥಾಜವ ಎಂಬ ಮೂವರು ಚತುರ ಮತಿಗಳಾದ ಶಿಷ್ಯರಿಗೆ ಕಲಿಸಿದನು. ಹೀಗೆ ವೇದವೃಕ್ಷವು ಶಾಖಾ ಪ್ರತಿಶಾಖಾ ಮುಖಾಂತರ ಕೊನರಿ ಕವಲೊಡೆಯುತ್ತ ಈಗೊಂದು ಕೊನೆಯಿಲ್ಲದ ಶ್ರುತಿಕಾನನವೇ ಆಗಿದೆ. ಈ ಎಲ್ಲ ಋಕ್ ಶಾಖಾ ಪ್ರವರ್ತಕರಿಗೆ 'ಬಹ್ವೃಚರು' ಎಂದು ಕರೆಯುತ್ತಾರೆ.

## ಶುಕ್ಲಯಜುರ್ವೇದ ಮತ್ತು ಅದರ ಶಾಖೆಗಳು ಬಿತ್ತರಗೊಂಡ ಬಗೆ

ಶ್ರೀ ವೇದವ್ಯಾಸರ ಇನ್ನೊಬ್ಬ ಶಿಷ್ಯ ವೈಶಂಪಾಯನರು ಯಜುರ್ವೇದದ ಇಪ್ಪತ್ತೇಳು ಶಾಖೆಗಳನ್ನು ರಚಿಸಿ ತಮ್ಮ ಶಿಷ್ಯರಿಗೆ ಕಲಿಸಿದರು. ವೈಶಂಪಾಯನರಲ್ಲಿ ಅಧ್ಯಯನ ಮಾಡುವ ಅನೇಕ ಶಿಷ್ಯರಲ್ಲಿ ಬ್ರಹ್ಮರಾತರ ಪುತ್ರ ಯಾಜ್ಞವಲ್ಕ್ಯರೂ ಒಬ್ಬರು. ಅವರು ಧರ್ಮದ ಮರ್ಮ ಬಲ್ಲವರು. ಮೇಲಾಗಿ ಒಳ್ಳೇ ಗುರುಭಕ್ತರು. ಒಂದು ದಿನ ಆ ಕಾಲದ ಮಹಾ ಮಹಾ ಮುನಿಗಳೆಲ್ಲರೂ ಸೇರಿ ಮೇರು ಪರ್ವತದಲ್ಲಿ ಋಷಿ ಸಮ್ಮೇಳನ ಒಂದನ್ನು ಕರೆದಿದ್ದರು. ಈ ಮಹರ್ಷಿ ಪರಿಷತ್ತಿಗೆ ಯಾವನಾದರೂ ಋಷಿಯು ಬಾರದಿದ್ದರೆ ಅವನಿಗೆ ಏಳು ಇರುಳು ಉರುಳುವಷ್ಟರಲ್ಲಿ ಬ್ರಹ್ಮಹತ್ಯೆಯ ದೋಷವು ತಗಲುವದೆಂದು ಋಷಿಗಳೆಲ್ಲರೂ ಘೋಷಿಸಿದ್ದರು. ಅದರಂತೆ ಅಂದಿನ ಆ ಮೇರುಪರ್ವತದ ಶಿಖರ ಸೀಮೆಯಲ್ಲಿ ನೆರೆದ ಋಷಿ ಸಭೆಗೆ ಋಷಿಮುನಿಗಳೆಲ್ಲರೂ ಉಪಸ್ಥಿತರಿದ್ದರು. ಆದರೆ

ವೈಶಂಪಾಯನರಿಗೊಬ್ಬರಿಗೆ ಮಾತ್ರ ಮೇರು ಶೃಂಗದ ಅಂಗಣದಲ್ಲಿ ನಡೆದ ಆ ಋಷಿ ಪರಿಷತ್ತಿಗೆ ಹೋಗುವದಾಗಲಿಲ್ಲ. ಮತ್ತು ಒಮ್ಮೆ ಅಕಸ್ಮಾತ್ ಅವರ ಕಾಲಿನ ತುದಿ ತಾಗಿ ಅವರ ಸೋದರಳಿಯನೊಬ್ಬನು ತಕ್ಷಣ ಮರಣವನ್ನಪ್ಪಿದ.

## ಬ್ರಹ್ಮರ್ಷಿಗೆ ಬ್ರಹ್ಮಹತ್ಯೆ ತಗಲಿದಾಗ

ಇದರಿಂದ ಮನನೊಂದ ವೈಶಂಪಾಯನರು ತಮ್ಮ ಎಲ್ಲ ಶಿಷ್ಯರನ್ನು ಕರೆದು ''ಶಿಷ್ಯರೇ, ನನಗಂತೂ ಬ್ರಹ್ಮಹತ್ಯೆಯ ದೋಷ ತಗಲಿದೆ. ನೀವೆಲ್ಲರೂ ನನಗೆ ಅಂಟಿದ ಈ ಪಾತಕ ಪರಿಹಾರಕ್ಕಾಗಿ ಜಪತಪ ವ್ರತಾನುಷ್ಠಾನ ಮಾಡಿರಿ'' ಎಂದು ಹೇಳಿದರು. ಆಗ ಅವರ ಶಿಷ್ಯ ಯಾಜ್ಞವಲ್ಕ್ಯರು ಎದ್ದು ''ಪೂಜ್ಯರೇ, ಈ ಚಿಲ್ಲರೆ ಬ್ರಾಹ್ಮಣರಿಂದ ಏನಾಗುವದು ! ಇವರಲ್ಲಿರುವ ಬ್ರಹ್ಮತೇಜವೇ ಅತ್ಯಲ್ಪ. ಇದರಿಂದ ಅವರಿಗೆ ಶ್ರಮ ಮಾತ್ರ ನಿಜ. ತಮ್ಮ ಪಾಪ ಲೋಪವಾಗದು. ನಿಮ್ಮ ಬ್ರಹ್ಮಹತ್ಯೆಯ ಪಾತಕವನ್ನು ತೊಡೆದು ಹಾಕಲಿಕ್ಕೆ ಬೇಕಾದರೆ ನಾನು ವ್ರತ ಮಾಡುತ್ತೇನೆ'' ಎಂದು ನುಡಿದರು. ಯಾಜ್ಞವಲ್ಕ್ಯರ ಈ ಧಾರ್ಷ್ಟ್ಯವನ್ನು ಕಂಡು ವೈಶಂಪಾಯನರಿಗೆ ಸಿಟ್ಟು ಬಂದಿತು.

''ಯಾಜ್ಞವಲ್ಕ್ಯ! ಇವರೆಲ್ಲರೂ ತೇಜೋಹೀನರೆಂದು ಹೇಳುತ್ತಿರುವೆ. ನಿಜವಾಗಿ ಇವರೆಲ್ಲರೂ ಬ್ರಹ್ಮನನ್ನು ಅರಿತವರು. ವೇದಾಧ್ಯಯನದಲ್ಲಿ ನುರಿತವರು. ಇಂಥ ಬ್ರಾಹ್ಮಣ ಪುಂಗವರು ವರ್ಚಃಶೂನ್ಯರೆಂದು ಹೇಳುವದು ಬ್ರಹ್ಮದ್ರೋಹ. ಇವರ ಯೋಗ್ಯತೆಯನ್ನು ಅರಿಯದೇ ನಾನು ಅವರಿಗೆ ವ್ರತ ಮಾಡಲಿಕ್ಕೆ ಹೇಳುತ್ತೇನೆಯೇ ! ನಾನು ಅಜ್ಞನೇ ! ನೀನು ನನ್ನನ್ನು ಧಿಕ್ಕರಿಸಿದೆ. ಒಳ್ಳೇ ಬ್ರಾಹ್ಮಣರನ್ನು ತಿರಸ್ಕರಿಸಿದೆ. ಇಂಥ ಶಿಷ್ಯ ನನಗೆ ಬೇಕಿಲ್ಲ. ಈವರೆಗೆ ನೀನು ನನ್ನಿಂದ ಓದಿದ್ದನ್ನೆಲ್ಲ ಬಿಟ್ಟು ಬಿಡು. ವಾಪಾಸು ಕೊಟ್ಟು ಬಿಡು ಎಂದು ಕೆರಳಿ ನುಡಿದರು. ಆಗ ಯಾಜ್ಞವಲ್ಕ್ಯರು ''ಬ್ರಾಹ್ಮಣೋತ್ತಮರೆ, ನಾನು ನಿಮ್ಮ ಮೇಲಿನ ಭಕ್ತಿಯಿಂದ, ನಿಮ್ಮ ಸೇವೆಯನ್ನು ಮಾಡಬೇಕೆಂಬ ಹಂಬಲದಿಂದ ಹಾಗೆ ನುಡಿದದ್ದು. ನಿಮ್ಮನ್ನಾಗಲಿ ಆ ಬ್ರಾಹ್ಮಣರನ್ನಾಗಲಿ ಅವಮಾನಿಸುವ ಉದ್ದೇಶ ನನಗಿರಲಿಲ್ಲ. ನನಗೂ ಇನ್ನು ನಿಮ್ಮಲ್ಲಿ ಓದು ಸಾಕು. ನಿಮ್ಮ ಅಪ್ಪಣೆಯಂತೆ ನಿಮ್ಮಲ್ಲಿ ಕಲಿತು ಓದಿದ್ದನ್ನು ಇದೋ ಈಗಲೇ ಮರಳಿ ಕೊಟ್ಟು ಬಿಡುವೆ'' ಎಂದು ಹೇಳಿ ವಾಂತಿಮಾಡಿಕೊಂಡರು. ವೈಶಂಪಾಯನರಲ್ಲಿ ಅವರು ಅಧ್ಯಯನ ಮಾಡಿದ ಯಜುರ್ವೇದವೆಲ್ಲವೂ ಆ ವಮನದಲ್ಲಿ ಹೊರಬಿದ್ದಿತು. ಹಿಂದೆ ಯಾಜ್ಞವಲ್ಕ್ಯರು ಓದಿದ ವೇದ ವಾಙ್ಮಯವೇ ಅದಾಗಿದ್ದಿತು. ಗುರುವಿನಿಂದ ಪಡೆದದ್ದನ್ನು ಮರಳಿ ಗುರುವಿಗೇ ಒಪ್ಪಿಸಿ ಮನಬಂದತ್ತ ನಡೆದ ಆ ಮಹಾಮುನಿ.

## ''ಯಾಜ್ಞವಲ್ಕ್ಯರು ಕಕ್ಕಿದರು, ಮುನಿಗಳು ಅದನ್ನು ಹೆಕ್ಕಿದರು. ಜ್ಞಾನಾಮೃತವೆನೆ ನೆಕ್ಕಿದರು''

ಜ್ಞಾನಿಗಳು ತಾವು ಕಲಿತದ್ದನ್ನು ಮರಳಿ ಒಪ್ಪಿಸುವದರ ಒಂದು ಬಗೆಯೇ ಯಾಜ್ಞವಲ್ಕ್ಯರ ಈ ಉದ್ವಮನದಲ್ಲಿ ಹೊರಬಿದ್ದಿತು. ಅದನ್ನು ಕಂಡು ಋಷಿಮುನಿಗಳು

ಕೂಡಲೇ ತಿತ್ತಿರಿ ಪಕ್ಷಿಗಳಾಗಿ ಯಾಜ್ಞವಲ್ಕ್ಯರ ಆ ವೇದೋದ್ವಮನವನ್ನು ಪರಿಗ್ರಹಿಸಿದರು. ಆದುದರಿಂದ ಆ ಯಜುಃ ಶಾಖೆಗೆ ತೈತ್ತಿರೀಯ ಶಾಖೆ ಎಂದು ಹೆಸರಾಯಿತು. ವೈಶಂಪಾಯನರ ಬ್ರಹ್ಮಹತ್ಯೆಯ ಪರಿಹಾರಕ್ಕಾಗಿ ವ್ರತವನ್ನು ಆಚರಿಸಿದ ಶಿಷ್ಯರು ಚರಕಾಧ್ವರ್ಯುಗಳೆಂದು ಹೆಸರಾದರು. ಇತ್ತ ಯಾಜ್ಞವಲ್ಕ್ಯರು ಗುರುಕುಲದಿಂದ ತೆರಳಿ ಪ್ರಾಣಾಯಾಮ ಪರಾಯಣರಾಗಿ ಸೂರ್ಯನನ್ನು ಬಗೆಬಗೆಯಾಗಿ ಸ್ತೋತ್ರ ಮಾಡಿದರು.

## ಯಾಜ್ಞವಲ್ಕ್ಯ ಕೃತ ಸೂರ್ಯಸ್ತುತಿ

''ನಮಃ ಸವಿತ್ರೇ ದ್ವಾರಾಯ ಮುಕ್ತೇರಮಿತತೇಜಸೇ ।
ಋಗ್‌ಯಜುಃ ಸಾಮಭೂತಾಯ ತ್ರಯೀ ಧಾಮ್ನೇ ಚ ತೇ ನಮಃ ॥

ಕಲಾ ಕಾಷ್ಠಾನಿಮೇಷಾದಿ ಕಾಲಜ್ಞಾನಾತ್ಮರೂಪಿಣೇ।
ಧ್ಯೇಯಾಯ ವಿಷ್ಣು ರೂಪಾಯ ಪರಮಾಕ್ಷರ ರೂಪಿಣೇ ॥

ನಮೋಽಗ್ನೀಷೋಮಭೂತಾಯ ಜಗತಃ ಕಾರಣಾತ್ಮನೇ ।
ಭಾಸ್ಕರಾಯ ಪರಂತೇಜಃ ಸೌಷಮ್ನ ರುಚಿ ಬಿಭ್ರತೇ ॥

ಭಿಭರ್ತಿ ಯಃ ಸುರಗಣಾನ್ ಆಪ್ಯಾಯೇಂದುಂ ಸ್ವರಶ್ಮಿಭಿಃ ।
ಸ್ವಧಾಮೃತೇನ ಚ ಪಿತ್ರನ್ ತಸ್ಮೈ ತೃಪ್ತ್ಯಾತ್ಮನೇ ನಮಃ ॥

ಹಿಮಾಂಬುಘರ್ಮ ವೃಷ್ಟೀನಾಂ ಕರ್ತಾ ಭರ್ತಾ ಚ ಯಃ ಪ್ರಭುಃ ।
ತಸ್ಮೈ ತ್ರಿಕಾಲರೂಪಾಯ ನಮಃ ಸೂರ್ಯಾಯ ವೇಧಸೇ ॥

ಅಪಹಂತಿ ತಮೋ ಯಶ್ಚ ಜಗತೋಽಸ್ಯ ಜಗತ್ಪತಿಃ ।
ಸತ್ವಧಾಮ ಧರೋ ದೇವೋ ನಮಸ್ತಸ್ಮೈ ವಿವಸ್ವತೇ ॥

ಸತ್ಕರ್ಮಯೋಗ್ಯೋ ನ ಜನೋ ನೈವಾಪಃ ಶುದ್ಧಿಕಾರಣಂ
ಯಸ್ಮಿನ್ನನುದಿತೇ ತಸ್ಮೈ ನಮೋ ದೇವಾಯ ಭಾಸ್ವತೇ ॥

ಸ್ಪೃಷ್ಟೋ ಯದಂಶುಭಿರ್ಲೋಕಃ ಕ್ರಿಯಾಯೋಗ್ಯೋ ಹಿ ಜಾಯತೆ ।
ಪವಿತ್ರತಾ ಕಾರಣಾಯ ತಸ್ಮೈ ಶುದ್ಧಾತ್ಮನೇ ನಮಃ ॥

ನಮಃ ಸವಿತ್ರೇ ಸೂರ್ಯಾಯ ಭಾಸ್ಕರಾಯ ವಿವಸ್ವತೇ ।
ಆದಿತ್ಯಾಯಾದಿಭೂತಾಯ ದೇವಾದೀನಾಂ ನಮೋ ನಮಃ ॥

ಹಿರಣ್ಮಯಂ ರಥಂ ಯಸ್ಯ ಕೇತವೋಽ ಮೃತವಾಜಿನಃ ।
ವಹಂತಿ ಭುವನಾಲೋಕ ಚಕ್ಷುಷಂ ತಂ ನಮಾಮ್ಯಹಂ ॥

ಅಪರಿಮಿತವಾದ ತೇಜಸ್ಸಿನ ನಿಧಿಯೂ ಮೋಕ್ಷದ ದ್ವಾರಭೂತನೂ, ಋಗ್ ಯಜಃ ಸಾಮಾದಿ ವೇದ ಸ್ವರೂಪಭೂತನೂ ಆದ ಸೂರ್ಯದೇವ, ನಿನಗೆ ನಮ್ಮ ನಮಸ್ಕಾರ. ಸುಷ್ಮ್ನ ಎಂಬ ದಿವ್ಯ ತೇಜಸ್ಸನ್ನು ಧರಿಸಿದ ಭಾಸ್ಕರದೇವ, ನೀನೇ ಅಗ್ನಿ ಮತ್ತು ಚಂದ್ರರಿಗೆ ಕಾಂತಿಪ್ರದ. ಪರಮ ಅಕ್ಷರನಾದ ಶ್ರೀ ವಿಷ್ಣುವಿನ ತೇಜೋವಿಭೂತಿಯೇ ನೀನಾಗಿದ್ದು ನಿನ್ನ ಈ ಸವಿತೃ ಮಂಡಲ ಮಧ್ಯವರ್ತಿಯಾದ ಆ ನಾರಾಯಣನ ದಿವ್ಯರೂಪವೇ ಕಾಲನಿಯಾಮಕವಾಗಿ ಕಲಾಕಾಷ್ಠಾ ನಿಮೇಷಾದಿ ಕಾಲಜ್ಞಾನಕ್ಕೆ ಕಾರಣವಾಗಿರುತ್ತದೆ. ಕಿರಣಗಳಿಂದ ಚಂದ್ರಮಂಡಲಕ್ಕೆ ಕಾಂತಿ ಪೂರ್ಣಮಾಡಿ ಆ ಕಾಂತಿ ಸುಧೆಯ ಮೂಲಕವಾಗಿ ದೇವತೆಗಳನ್ನೂ, ಸ್ವಧಾ ಎಂಬ ಅಮೃತದಿಂದ ಪಿತೃಗಳನ್ನೂ ತೃಪ್ತಿಗೊಳಿಸತಕ್ಕ ನಿನಗೆ ನನ್ನ ವಂದನೆ ಇರಲಿ.

ಹಿಮ, ನೀರು, ಕಾವು, ಮಳೆಗಳನ್ನಿತ್ತು ಜಗತ್ತನ್ನು ಪೋಷಿಸುವವನೂ, ಮತ್ತು ಚಳಿಗಾಲ, ಬೇಸಿಗೆ ಕಾಲ, ಮಳೆಗಾಲ ಮುಂತಾದ ಋತು ಚಕ್ರಕ್ಕೆ ನಿಯಾಮಕನೂ, ಭೂತ ಭವಿಷ್ಯ ವರ್ತಮಾನ ಮುಂತಾದ ಕಾಲರೂಪನೂ ಆದ ಸೂರ್ಯ ದೇವನಿಗೆ ನಮಸ್ಕಾರ. ಜಗತ್ತಿನಲ್ಲಿಯ ಕತ್ತಲೆಯನ್ನು ಕಳೆಯುವ ಜಗದೊಡೆಯನ ಸತ್ಯ ಮೂರ್ತಿಯಂತಿದ್ದ ದಿವ್ಯ ರೂಪಕ್ಕೆ ವಂದನೆ. ಯಾರ ಉದಯವಿಲ್ಲದಿದ್ದರೆ ಜನರಿಗೆ ಪುಣ್ಯ ಕರ್ಮಗಳನ್ನು ಮಾಡಲಿಕ್ಕೆ ಅಧಿಕಾರವೇ ಹುಟ್ಟುವುದಿಲ್ಲವೋ, ಮತ್ತು ಯಾರ ಕಿರಣ ಚರಣ ಸ್ಪರ್ಶವಿಲ್ಲದೇ ಈ ವಿಶ್ವದಲ್ಲಿ ಕ್ರಿಯಾ ಯೋಗ್ಯತೆಯೇ ಉಂಟಾಗುವುದಿಲ್ಲವೋ ಅಂಥ ಪಾವಿತ್ರ್ಯದ ಮೂಲಕಾರಣವಾದ ಶುದ್ಧಿಯ ದೇವತೆಗೆ ನನ್ನ ಪ್ರಣಾಮವಿರಲಿ. ಸವಿತಾ, ಸೂರ್ಯ, ಭಾಸ್ಕರ, ವಿವಸ್ವಾನ್ ಮುಂತಾದ ಅನ್ವರ್ಥಕನಾಮನಿಗೆ ನಮೋ ನಮಃ। ಅಮರ ಕುದುರೆಗಳು ಎಳೆವ ಹೊಂದೇರನ್ನು ಹತ್ತಿ ಜಗದಂಡ ಮಂಡಲವನ್ನೆಲ್ಲ ಕಣ್ಣಿನಿಂದ ಕಾಣುವ ಸೂರ್ಯದೇವನನ್ನು ನಾನು ವಂದಿಸುತ್ತೇನೆ.''

ಯಾಜ್ಞವಲ್ಕ್ಯರ ಈ ಸ್ತೋತ್ರವನ್ನು ಕೇಳಿ ಸೂರ್ಯ ಪ್ರಸನ್ನನಾದ. ಕುದುರೆಯ ರೂಪದಿಂದ ಪ್ರತ್ಯಕ್ಷನಾದ. ನಿನ್ನ ಬಯಕೆ ಏನು ! ಎಂದು ಸಂತಸದಿಂದ ಕೇಳಿದ. ಆಗ ತನ್ನ ಇಷ್ಟ ದೇವತೆಯ ಎದುರು ಅಡ್ಡ ಬಿದ್ದು ಕೈ ಮುಗಿದು ಕೇಳಿಕೊಂಡ ಯಾಜ್ಞವಲ್ಕ್ಯ. ''ನನ್ನ ಗುರು ವೈಶಂಪಾಯನರಿಗೆ ಗೊತ್ತಿರದ ಯಜುರ್ವೇದವನ್ನು ನನಗೆ ಕರುಣಿಸು'' ಎಂದು. ದಿವಾಕರ ಆ ಭಕ್ತನ ಬಯಕೆಯನ್ನು ಕೂಡಲೇ ಈಡೇರಿಸಿದ. ಆವರೆಗೆ ಎಲ್ಲಿಯೂ ಮೀಸಲು ಮುರಿಯುದ 'ಅಯಾತಯಾಮ' ಎನಿಸಿದ ವೇದ ಮಂತ್ರಗಳನ್ನು ಉಪದೇಶಿಸಿದ. ಈ ಮೊದಲು ಈ ಭೂಲೋಕದಲ್ಲಿ ಯಾರ ಕಿವಿಗೂ ಆ ಮಂತ್ರ ಬಿದ್ದಿದ್ದಿಲ್ಲ. ಅವನ ಗುರು ವೈಶಂಪಾಯನರಿಗೂ ಅವು ಗುರುತಿರಲಿಲ್ಲ. ಇಂಥ ತಾಜಾ ಮಂತ್ರಗಳನ್ನು ವಾಜಿ ರೂಪದಿಂದ ಸೂರ್ಯದೇವನು ಕರುಣಿಸಿದ್ದರಿಂದ ಈ ಸಂಹಿತೆಗೆ ವಾಜಸನೇಯ ಸಂಹಿತೆ ಎಂದು ಹೆಸರಾಯಿತು. ಮತ್ತು ಇದನ್ನು ಓದಿದ ಋಷಿಮುನಿಗಳೆಲ್ಲರೂ ವಾಜಿಗಳೆಂದು ಪ್ರಖ್ಯಾತರಾದರು. ಈ ವಾಜಸನೇಯ ಸಂಹಿತೆ ಕಾಣ್ವ ಮೊದಲಾದ ಹದಿನೈದು ಶಾಖೆಗಳಿಂದ ಒಡಗೂಡಿದ್ದು ಇವೆಲ್ಲವೂ ಯಜ್ಞವಲ್ಕ್ಯ ಶಾಖೆಗಳೆಂದು ಕರೆಯಲ್ಪಡುತ್ತವೆ.

## ಸಾಮವೇದದ ಶಾಖಾಭೇದ

ಪರಾಶರ - ಶ್ರೀ ವ್ಯಾಸರ ಶಿಷ್ಯ ಜೈಮಿನಿ ಮುನಿಗಳು ಸಾಮವೇದದ ಶಾಖಾ ವಿಭಾಗಮಾಡಿದರು. ಆ ಬಗೆಯನ್ನು ಆಲಿಸು; ಜೈಮಿನ್ಯಾಚಾರ್ಯರಿಗೆ ಸುಮಂತು ಪುತ್ರನಾಗಿದ್ದ. ಅವನ ಮಗ ಸುಕರ್ಮ. ಅವರಿಬ್ಬರೂ ಮಹಾಮೇಧಾವಿಗಳು ಸಾಮವೇದದ ಒಂದೊಂದು ಶಾಖೆಯನ್ನು ಇಬ್ಬರೂ ಕಲಿತು ಪಾರಂಗತರಾದರು. ಸುಮಂತು ಸುತನಾದ ಸುಕರ್ಮನು ಸಾಮವೇದ ಸಂಹಿತೆಯನ್ನು ಸಾವಿರ ಬಗೆಯಾಗಿ ವಿಂಗಡಿಸಿದನು. ಈ ಬೃಹತ್ ಸಂಹಿತೆಯನ್ನು ಹಿರಣ್ಯನಾಭ ಮತ್ತು ಪೌಷ್ಯಿಂಜಿ ಎಂಬ ಇಬ್ಬರು ಪ್ರತಿಭಾಶಾಲಿ ಶಿಷ್ಯರು ಮಾತ್ರ ಅದೆಲ್ಲವನ್ನು ಸರಿಯಾಗಿ ಓದಿ ಸ್ವಾಧೀನ ಮಾಡಿಕೊಂಡರು. ಅದು ಅವರ ಆಚರಿಸಿದ ಮಹಾ ವ್ರತದ ಪುಣ್ಯಪ್ರಭಾವ.

## ವೇದಾಚಾರ್ಯನ ಶಿಷ್ಯವೈಭವ

ಕೋಸಲ ದೇಶದ ವೇದಾಚಾರ್ಯನಾದ ಹಿರಣ್ಯನಾಭ ತಾನು ಓದಿ ಸ್ವಾಧೀನ ಪಡಿಸಿಕೊಂಡ ಸಾಮವೇದವನ್ನು ಪಾಠ ಹೇಳತೊಡಗಿದಾಗ ನಾಲ್ಕು ದಿಕ್ಕುಗಳಿಂದಲೂ ವಿದ್ಯಾರ್ಥಿಗಳು ಓದಲಿಕ್ಕೆ ಬಂದರು. ಅವರ ಸಂಖ್ಯೆ ಹತ್ತು ಸಾವಿರದ ಅಂಚಿಗೆ ತಲುಪಿತ್ತು. ಕೇವಲ ಉತ್ತರ ದೇಶದ ಛಾತ್ರರೇ ಐದಾರು ಸಾವಿರ. ಅವರಲ್ಲಿ ಐದುನೂರು ಜನರು ಛಾತ್ರರು ಮಹಾಪಂಡಿತರಾಗಿ 'ಉದೀಚ್ಯ ಸಾಮಗರು' ಎಂದು ಹೆಸರುವಾಸಿಯಾದರು. ಅದರಂತೆ ಪೂರ್ವದೇಶದಿಂದ ಬಂದ ಅನೇಕಾನೇಕ ಛಾತ್ರರಲ್ಲಿಯೂ ಐದು ನೂರು ಜನರು ವೇದ ವಿಶಾರದರಾದರು. ಅವರು 'ಪ್ರಾಚ್ಯಸಾಮಗರು' ಎಂದು ಪ್ರಸಿದ್ಧರಾದರು. ಸುಕರ್ಮ ಮುನಿಯ ಮತ್ತೊಬ್ಬ ಶಿಷ್ಯನಾದ ಪೌಷ್ಯಿಂಜಿಗೂ ನಾಕು ಜನ ಶಿಷ್ಯರು ಲೋಗಾಕ್ಷಿ, ಕೌಥುಮಿ, ಕಕ್ಷೀವಾನ್, ಲಾಂಗಲಿ ಎಂದು. ಈ ಎಲ್ಲ ಶಿಷ್ಯರು ಸಾಮವೇದವನ್ನು ಶಾಖೋಪಶಾಖೆಯಾಗಿ ಬಿತ್ತರಿಸುತ್ತ ಹೋದರು. ಹಿರಣ್ಯನಾಭನ ಶಿಷ್ಯನಾದ ಕೃತಿ ಎಂಬ ವೇದ ವಿದ್ವಾಂಸನು ಇಪ್ಪತ್ತುನಾಲ್ಕು ಸಾಮ ಸಂಹಿತೆಗಳನ್ನು ಶಿಷ್ಯರಿಗೆ ಪಾಠ ಹೇಳಿದನು. ಅವರೆಲ್ಲರೂ ತಾವು ಓದಿದ ಸಾಮವೇದವನ್ನು ಬೆಳಿಸಿದರು. ಹೀಗಾಗಿ ಸಾಮವೇದವು ಅನೇಕ ಮುಖವಾಗಿ ಚೆಲ್ವರದು ಪಲ್ಲವಿಸಿ ನಿಂದಿದೆ. ಅಥರ್ವವೇದವನ್ನು ತೇಜೋಭಾಸುರನಾದ ಸುಮಂತು ಮುನಿಯು ಮೊದಲು ತನ್ನ ಶಿಷ್ಯ ಕಬಂಧನಿಗೆ ಪಾಠ ಹೇಳಿ ಕಲಿಸಿದ. ಅದನ್ನು ಕಬಂಧನು ಎರಡು ವಿಧವಾಗಿ ವಿಭಾಗಿಸಿ ದೇವಾದರ್ಶ, ಪಥ್ಯ ಎಂಬ ಇಬ್ಬರು ಶಿಷ್ಯರಿಗೆ ಕರುಣಿಸಿದ. ದೇವಾದರ್ಶನಿಗೆ ನಾಲ್ವರು ಶಿಷ್ಯರು. ಮೇಧ, ಬ್ರಹ್ಮಬಲಿ, ಶೌಲ್ಕಾಯನಿ, ಪಿಪ್ಪಲಾದ ಎಂದು. ಪಥ್ಯನಿಗೂ ಮೂವರು ಶಿಷ್ಯರು ಜಾಬಾಲಿ, ಕುಮುದಾದಿ, ಶೌನಕ. ಈ ಪಥ್ಯ ಶಿಷ್ಯನಾದ ಶೌನಕನು ತಾನು ಓದಿದ ಅಥರ್ವ ಸಂಹಿತೆಯನ್ನು ಎರಡು ಬಗೆಯಾಗಿ ವಿಭಜಿಸಿ ಒಂದನ್ನು ಬಭ್ರುವಿಗೂ ಮತ್ತೊಂದನ್ನು ಸೈಂಧವನಿಗೂ ಬೋಧಿಸಿದನು. ಆ ಸೈಂಧವನಲ್ಲಿ ಮುಂಜಿ ಕೇಶನು ಓದಿ ಅಭ್ಯಾಸ ಮಾಡಿ ವೇದ ವಿದ್ವಾಂಸನೆನಿಸಿದನು. ಈ ಮುಂಜಿಕೇಶನು ಮೊದಲು ದ್ವೇಧಾವಿಭಕ್ತವಾದ ತನ್ನ ಸಂಹಿತೆಯನ್ನು ಮತ್ತೆ ಐದು ವಿಧವಾಗಿ ವಿಂಗಡಿಸಿದನು.

ನಕ್ಷತ್ರಕಲ್ಪ, ವೇದಕಲ್ಪ, ಸಹಿಂತಾಕಲ್ಪ, ಅಂಗಿರಸಕಲ್ಪ, ಶಾಂತಿಕಲ್ಪ ಎಂದು ಈ ಐದು ವಿಕಲ್ಪಗಳು ಅರ್ಥವರ್ಣ ಸಂಹಿತೆಯಲ್ಲಿಯೇ ಅತ್ಯಂತ ಶ್ರೇಷ್ಠವಾಗಿವೆ. ವೇದವ್ಯಾಸರು ಹಿಂದಿನ ಪುರಾಣಗಳ ಯಥಾರ್ಥ ನಿರೂಪಣೆಯಲ್ಲಿ ಮಹಾನಿಪುಣರು. ಅವರು ಪುರಾಣ ಸಂಹಿತೆಯನ್ನು ರಚಿಸಿ ತಮ್ಮ ಶಿಷ್ಯನಾದ ರೋಮಹರ್ಷಣನಿಗೆ ಬೋಧಿಸಿದರು. ಅವ ಸೂತಜಾತಿಯವ. ಆದರೂ ಯೋಗ್ಯತೆಯನ್ನು ಗುರುತಿಸಿ ಭಗವಾನ್ ಬಾದರಾಯಣರು ಪುರಾಣ ಸಂಹಿತೆಯನ್ನು ಅವನಿಗೆ ಕರುಣಿಸಿದರು. ಆಸೂತಾಚಾರ್ಯನಿಗೂ ಆರು ಶಿಷ್ಯರು ಸುಮತಿ, ಅಗ್ನಿವರ್ಚ, ಮಿತ್ರಾಯು, ಶಾಂಸಪಾಯನ, ಅಕೃತವ್ರಣ, ಮತ್ತು ಸಾವರ್ಣಿ ಎಂದು. ಕಶ್ಯಪಗೋತ್ರದ ಅಕೃತವ್ರಣ, ಸಾವರ್ಣಿ ಮತ್ತು ಶಾಂಸಪಾಯನ ಈ ಮೂವರು ಮತ್ತೆ ಪುರಾಣ ಸಂಹಿತಾ ಕಾರಕರಾದರು. ಆ ಮೂರು ಸಂಹಿತೆಗಳನ್ನು ರೋಮಹರ್ಷಣನ ಸಂಹಿತೆಯೇ ಮೂಲವಾಗಿದ್ದಿತು. ಈ ನಾಲ್ಕು ಪುರಾಣ ಸಂಹಿತೆಗಳ ಸಾರ ತೆಗೆದೇ ನಾನಿಲ್ಲಿ ಈ ವಿಷ್ಣು ಪುರಾಣವನ್ನು ರಚಿಸಿದ್ದೇನೆ.

## ಹದಿನೆಂಟು ಮಹಾ ಪುರಾಣಗಳು

ಒಟ್ಟು ಪುರಾಣಗಳು ಹದಿನೆಂಟು ೧) ಬ್ರಹ್ಮಪುರಾಣ ೨) ಪದ್ಮಪುರಾಣ ೩) ವಿಷ್ಣುಪುರಾಣ ೪) ಶಿವಪುರಾಣ ೫) ಭಾಗವತ ೬) ನಾರದ ೭) ಮಾರ್ಕಂಡೇಯ ೮) ಅಗ್ನಿಪುರಾಣ ೯) ಭವಿಷ್ಯ ೧೦) ಬ್ರಹ್ಮವೈವರ್ತ ೧೧) ಲಿಂಗ ೧೨) ವಾರಾಹ ೧೩) ಸ್ಕಂದ ೧೪) ವಾಮನ ೧೫) ಕೂರ್ಮ ೧೬) ಮಚ್ಛ್ಯ ೧೭) ಗರುಡ ೧೮) ಬ್ರಹ್ಮಾಂಡ, ಇವು ಅಷ್ಟಾದಶ ಮಹಾಪುರಾಣಗಳು ಎಂದು ಕರೆಯಲ್ಪಡುತ್ತವೆ. ಇವಲ್ಲದೇ ಇನ್ನೂ ಅನೇಕ ಉಪಪುರಾಣಗಳು ಉಂಟು. ಇವುಗಳಲ್ಲಿ ಬ್ರಹ್ಮಪುರಾಣವೇ ಮೊಟ್ಟ ಮೊದಲನೇಯ ಪುರಾಣವೆಂದು ತಿಳಿಯಲ್ಪಡುತ್ತದೆ. ಎಲ್ಲ ಪುರಾಣಗಳಲ್ಲಿ ಸೃಷ್ಟಿ, ಪ್ರಳಯ, ದೇವ ಮಾನವರ ವಂಶ ವಿಸ್ತಾರ, ಮನ್ವಂತರಗಳಲ್ಲಿಯ ಘಟನೆಗಳು ಮತ್ತು ಬೇರೆ ಬೇರೆ ವಂಶದಲ್ಲಿ ಜನಿಸಿದ ಜನರ ಚರಿತ್ರೆಗಳು ನಿರೂಪಿಸಲ್ಪಡುತ್ತವೆ. ಪ್ರಕೃತ ವಿಷ್ಣುಪುರಾಣವು ಪದ್ಮ ಪುರಾಣದ ನಂತರ ಶ್ರೀ ವಿಷ್ಣುವಿನ ಮಹಾ ಮಹಿಮೆಯನ್ನು ತಿಳಿಸಲಿಕ್ಕಾಗಿ ಪ್ರವೃತ್ತವಾಗಿದೆ. ಇಲ್ಲಿಯ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರಗಳ ಕಥೋಪಕಥನ ಎಲ್ಲದರಲ್ಲಿಯೂ ವಿಷ್ಣುವಿನ ಗರಿಮೆ ಹಾಸು ಹೊಕ್ಕಾಗಿ ಹೆಣೆದುಕೊಂಡು ಬಂದಿದೆ. ಇದೇ ಇದರ ವೈಶಿಷ್ಟ್ಯ. ವಿದ್ಯೆಗಳು ಹದಿನಾಲ್ಕು. ನಾಲ್ಕುವೇದ, ಆರು ವೇದಾಂಗ, ಹತ್ತು ನ್ಯಾಯಶಾಸ್ತ್ರ, ಧರ್ಮಶಾಸ್ತ್ರ, ಮೀಮಾಂಸಾ ಶಾಸ್ತ್ರ, ಮತ್ತು ಪುರಾಣ ಇವು ನಾಲ್ಕು, ಎಲ್ಲ ಕೂಡಿ ಚತುರ್ದಶ ವಿದ್ಯೆಗಳಾಗಿವೆ. ಇದಕ್ಕೆ ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಮತ್ತು ಅರ್ಥಶಾಸ್ತ್ರ ಈ ನಾಲ್ಕು ವಿದ್ಯೆಗಳನ್ನು ಸೇರಿಸಿದರೆ ಪುರಾಣದಂತೆ ವಿದ್ಯೆಗಳೂ ಹದಿನೆಂಟಾಗುತ್ತವೆ. ಋಷಿಗಳು ಮೂರು ಬಗೆಯವರಿದ್ದಾರೆ. ಬ್ರಹ್ಮರ್ಷಿ, ದೇವರ್ಷಿ, ರಾಜರ್ಷಿ, ಎಂದು ಋಷಿಗಳೇ ವೇದ ವೃಕ್ಷದ ಶಾಖೋಪಶಾಖಾಭೇದದಿಂದ ಆದ ಬೆಳವಣಿಗೆಗೆ ಕಾರಣರಾಗಿದ್ದಾರೆ. ಎಲ್ಲ ಮನ್ವಂತರಗಳಲ್ಲಿಯೂ ಇದೇ ತೆರನಾಗಿ ವೇದವು ಶಾಖಾಭೇದದಿಂದ ಭಿನ್ನ ಭಿನ್ನವಾಗಿ

ವೃದ್ಧಿಂಗತವಾದರೂ ಮೂಲಭೂತವಾದ ಪ್ರಾಜಾಪತ್ಯ ಶ್ರುತಿಯು ಮಾತ್ರ ನಿತ್ಯವೂ ಏಕ ವಿಧವೇ ಆಗಿರುತ್ತದೆ. ಇವೆಲ್ಲವೂ ಅದರ ವಿಕಲ್ಪ ಎಂದು ತಿಳಿಯಬೇಕು.

## ಯಮಗೀತಾ

**ಮೈತ್ರೇಯ** - ಗುರುಗಳೇ, ಈ ಪ್ರಪಂಚದಲ್ಲಿಯ ಸಂಸಾರಿ ಪ್ರಾಣಿಗಳೆಲ್ಲರೂ ಕರ್ಮವಶರಾಗಿ ಸಂಸಾರಕ್ಕೆ ಬಂದು ಆಯುಷ್ಯವು ತೀರಿದ ಬಳಿಕ ಯಮಲೋಕಕ್ಕೆ ಹೋಗುತ್ತಾರೆ. ಅಲ್ಲಿ ವಿಚಿತ್ರವಾದ ಘೋರ ಯಮಯಾತನೆಗಳನ್ನು ಅನುಭವಿಸಿ ಮತ್ತೆ ಜನಿಸುವರು. ಮತ್ತೆ ಕರ್ಮಾಚರಣೆ, ಪುನಃ ನರಕಯಾತನೆ. ಈ ಚಕ್ರವು ನಿರಂತರವೂ ತಿರುಗುತ್ತಲೇ ಇರುವುದು. ಇದೇ ಸರಿಯಾದ ಶಾಸ್ತ್ರಗಳ ನಿರ್ಣಯವಷ್ಟೇ! ಆದರೆ ಸ್ವಾಮಿ, ಯಮಪಾಶದಿಂದ ಬಿಡುಗಡೆಯಾಗಲಿಕ್ಕೆ ಅಥವಾ ಯಮಪುರಿಗೆ ಹೋಗದಂತಿರಲಿಕ್ಕೆ ಏನಾದರೂ ಉಪಾಯವುಂಟೋ!

**ಪರಾಶರ** - ಮುನಿವರ, ಹಿಂದೆ ಪಂಚಪಾಂಡವರಲ್ಲಿ ನಾಲ್ಕನೆಯವನಾದ ನಕುಲನು ಕುರುಕುಲ ಪಿತಾಮಹರಾದ ಭೀಷ್ಮಾಚಾರ್ಯರಿಗೆ ಇದೇ ಪ್ರಶ್ನೆ ಕೇಳಿದ್ದ. ಅದಕ್ಕೆ ಭೀಷ್ಮರು ಹೇಳಿದ ಉತ್ತರವನ್ನೇ ನಿನಗೆ ಹೇಳುತ್ತೇನೆ ಕೇಳು.

**ಭೀಷ್ಮ** - ನಕುಲ, ಒಂದೊಮ್ಮೆ ಯಮದೇವರಿಗೂ ಅವರ ದೂತರಿಗೂ ಒಂದು ಸಂಭಾಷಣೆ ನಡೆಯಿತಂತೆ. ಆ ಸಂದರ್ಭದಲ್ಲಿ ಆ ಯಮಪಟ್ಟಣದಲ್ಲಿ ಯಮನ ಶಿಕ್ಷೆಯನ್ನು ಅನುಭವಿಸುತ್ತಿದ್ದ ಒಂದು ಜೀವದ ಕಿವಿಗೆ ಆ ಸಂಭಾಷಣೆ ಬಿದ್ದಿತು. ಮುಂದೆ ಆ ಜೀವವು ಯಮ ಶಿಕ್ಷೆಯನ್ನು ಅನುಭವಿಸಿ ಮರಳಿ ಭೂಲೋಕಕ್ಕೆ ಬಂದಿತು. ಅದರ ಪೂರ್ವ ಕರ್ಮಾನುಸಾರವಾಗಿ ಆ ಜೀವವು ಕಲಿಂಗ ದೇಶದಲ್ಲಿ ಒಬ್ಬ ಬ್ರಾಹ್ಮಣನಾಗಿ ಜನಿಸಿತು. ಜನ್ಮಾಂತರದಲ್ಲಿ ಮಾಡಿದ ಪುಣ್ಯ ವಿಶೇಷದಿಂದ ಆ ಕಲಿಂಗ ಬ್ರಾಹ್ಮಣನಿಗೆ ಹಿಂದಿನ ಜನ್ಮಗಳ ನೆನಪು ಅಚ್ಚಳಿಯದೇ ಉಳಿದಿತ್ತು. ಯಮ ಪಟ್ಟಣದಲ್ಲಿ ಯತನಾಮಯ ಶರೀರದಿಂದ ಯಮಶಿಕ್ಷೆಯನ್ನು ಅನುಭವಿಸುವಾಗ ಯಮ ಹಾಗೂ ಯಮದೂತರ ನಡುವೆ ನಡೆದ ಸಂಭಾಷಣೆಯೂ ಅವನಿಗೆ ಚೆನ್ನಾಗಿ ನೆನಪಿನಲ್ಲಿ ಉಳಿದಿತ್ತು. ಕಲಿಂಗ ದೇಶದ ಜನ್ಮಾಂತರದ ಸ್ಮರಣೆಯುಳ್ಳ ಆ ಬ್ರಾಹ್ಮಣನು ಹಿಂದೊಮ್ಮೆ ಹಸ್ತಿನಾವತೀ ಪಟ್ಟಣಕ್ಕೆ ಬಂದಿದ್ದನು. ಅವನಿಗೆ ನನಗೂ ಗೆಳೆತನ ಬೆಳೆಯಿತು. ಒಂದು ದಿನ ನಾನು ಅವನಿಗೆ ''ನಿನ್ನ ಜನ್ಮಾಂತರದ ನೆನಹುಗಳನ್ನು ಹೇಳು'' ಎಂದು ಕೇಳಿದೆ. ಅದಕ್ಕೆ ನನ್ನ ಆ ಕಲಿಂಗ ಮಿತ್ರನು ಸಂಯಮನೀಪುರದಲ್ಲಿ ಜರುಗಿದ ಯಮ ಮತ್ತು ಯಮದೂತರ ಸಂವಾದವನ್ನು ಯಥಾವತ್ತಾಗಿ ನಿರೂಪಿಸಿದನು. ''ಒಂದು ದಿನ ಯಮದೇವರ ಆದೇಶದಂತೆ ಒಬ್ಬ ಯಮದೂತನು ಕೈಯಲ್ಲಿ ಮರಣಪಾಶವನ್ನು ಪಿಡಿದು ಭೂಲೋಕದೆಡೆಗೆ ಹೊರಟನು. ಆಗ ಯಮದೇವನು ಅವನನ್ನು ಹತ್ತಿರ ಕರೆದು ಅವನ ಕಿವಿಯಲ್ಲಿ ಪಿಸುಮಾತಿನಲ್ಲಿ ಉಸುರಿದನು.

"ಸ್ವ ಪುರುಷಮಭಿವೀಕ್ಷ್ಯ ಪಾಶಹಸ್ತಃ ।
ವದತಿ ಯಮಃ ಕಿಲ ತಸ್ಯ ಕರ್ಣ ಮೂಲೇ ॥

ಪರಿಹರ ಮಧುಸೂದನ ಪ್ರಪನ್ನಾನ್ ।
ಪ್ರಭುರಹಮನ್ಯನೃಣಾಮವೈಷ್ಣವಾನಾಂ ॥

ಅಹಮಮರವರಾರ್ಚಿತೇನ ಧಾತ್ರಾ ।
ಯಮ ಇತಿ ಲೋಕ ಹಿತಾಹಿತೇ ನಿಯುಕ್ತ ಃ ॥

ಹರಿಗುರು ವಶಗೋಽಸ್ಮಿ ನ ಸ್ವತಂತ್ರಃ ।
ಪ್ರಭವತಿ ಸಂಯಮನೇ ಮಮಾಪಿ ವಿಷ್ಣುಃ ॥

ಹರಿಮಮರ ವರಾರ್ಚಿತಾಂಘ್ರಿಂ ।
ಪ್ರಣಮತಿ ಯಃ ಪರಮಾರ್ಥತೋ ಹಿ ಮರ್ತ್ಯಃ ॥

ತಮಪಗತಸಮಸ್ತಪಾಪ ಬಂಧಂ ।
ವ್ರಜ ಪರಿಹೃತ್ಯ ಯಥಾಗ್ನಿ ಮಾಜ್ಯಸಿಕ್ತಂ ॥

ದೂತ, ನೀನು ಜಗತ್ತಿನಲ್ಲಿಯ ಜನರನ್ನು ತರುವಾಗ ಒಂದು ಮಾತನ್ನು ಮಾತ್ರ ಬಹಳ ಲಕ್ಷದಲ್ಲಿಡಬೇಕು. ಶ್ರೀ ಹರಿಯನ್ನು ನಂಬಿ ನೆಚ್ಚಿದವರ ತಂಟೆಗೇ ನೀನು ಹೋಗತಕ್ಕದ್ದಲ್ಲ. ಯಾಕೆಂದರೆ ವಿಷ್ಣು ಭಕ್ತರ ಮೇಲೆ ನನಗೆ ಏನೂ ಅಧಿಕಾರವಿಲ್ಲ. ಅವನಿಂದ ವಿಮುಖರಾದ ಪಾಪಿಗಳ ಮೇಲೆ ಮಾತ್ರ ನನಗೆ ಸಂಪೂರ್ಣ ಶಾಸನ ಮಾಡುವ ಶಕ್ತಿ ಉಂಟು. ನಾನೇನೋ ಬ್ರಹ್ಮದೇವರಿಂದ ಲೋಕ ಶಾಸಕನಾಗಿ ನಿಯಮಿಸಲ್ಪಟ್ಟಿದ್ದೇನೆ. ನನ್ನನ್ನು ನಿಯಮಿಸಿದ ಬ್ರಹ್ಮನೂ ಕೂಡ ಸುರನಾಯಕರಿಗೆಲ್ಲ ಪೂಜ್ಯನಾದದ್ದೂ ನಿಜ. ಎಲ್ಲರನ್ನು ನಿಯಮನ ಮಾಡಲಿಕ್ಕಾಗಿಯೇ ಯಮ ಎಂದು ನನ್ನನ್ನು ನಿಯಮಿಸಿದ್ದಾಗಿದೆ. ಆದರೂ ನಾನು ಅಸ್ವತಂತ್ರ. ನನ್ನ ಮೇಲೆ ನನ್ನನ್ನು ನಿಯಮಿಸಿದ ಬ್ರಹ್ಮದೇವ ವಾಯುದೇವರು ಅವರ ಮೇಲೆ ಸಾಕ್ಷಾತ್ ಶ್ರೀಹರಿಯೂ ನಿಯಮಕರಾಗಿದ್ದಾರೆ. ನಾನು ಆ ಹರಿ ಗುರುಗಳಿಗೆ ಅಧೀನನಾಗಿದ್ದೇನೆ. ನಾನು ಯಮನಾದರೆ ನನ್ನ ಸಂಯಮ ಮಾಡುವವ ಶ್ರೀ ವಿಷ್ಣು. ಆದುದರಿಂದ ದೇವಾಧಿದೇವತೆಗಳೂ ನಮಿಸುವಂತೆ ಶ್ರೀ ಹರಿಯನ್ನು ಯಾರು ನಿಜವಾದ ಭಕ್ತಿಯಿಂದ ನಮಿಸುತ್ತಾರೋ ಅಂಥ ಪುಣ್ಯಾತ್ಮರ ಸುತ್ತು ಮುತ್ತು ಕೂಡ ನೀನು ಸುಳಿಯಬೇಡ. ನಾರಾಯಣನನ್ನು ನೆನೆದವರಲ್ಲಿ ಪಾಪವು ಹುಡುಕಿದರೂ ಸಿಗುವುದಿಲ್ಲ. ಅಂಥ ಹರಿಭಕ್ತರ ಹತ್ತಿರ ನೀನು ಹೋಗುವುದೆಂದರೆ ದೀಪದ ಹುಳ ಬೆಂಕಿಯ ಉರಿಗೆ ಹಾಯ್ದಂತೆಯೇ ಸರಿ. ಸರ್ವಾತ್ಮನಾ ವಿಷ್ಣು ಭಕ್ತರ ಬಳಿಗೆ ಹೋಗಬೇಡ." ಒಡೆಯನ ಈ ಮಾತು ಕೇಳಿ ಕೈಯಲ್ಲಿ ಪಾಶವಿಡಿದು ನಿಂತ ದೂತ ಬೆಸಗೊಂಡ. "ಪ್ರಭು, ಹಾಗಾದರೆ 'ಇಂಥವ ಹರಿಭಕ್ತ' ಎಂದು ನಾನು ತಿಳಿಯುವದೆಂತು! ಹರಿಯೇನೋ ಸರ್ವನಿಯಾಮಕ ಸರಿ. ಆದರೆ ಆ ಹರಿಭಕ್ತನನ್ನು ಗುರುತಿಸುವ ಕ್ರಮವನ್ನು ಹೇಳಿರಿ" ಎಂದು.

## ಅದಕ್ಕೆ ಯಮದೇವರು ಇಂತು ನುಡಿದರು

"ನ ಚಲತಿ ನಿಜವರ್ಣ ಧರ್ಮತೋ ಯಃ ।
ಸಮಮತಿರಾತ್ಮ ಸುಹೃದ್ವಿಪಕ್ಷಪಕ್ಷೇ ॥
ನ ಹರತಿ ನ ಚ ಹಂತಿ ಕಿಂಚಿದುಚ್ಚೈಃ ।
ಸಿತಮನಸಂ ತಮವೇಹಿ ವಿಷ್ಣು ಭಕ್ತಮ್ ॥ ॥೧॥

ಅಂತಃಕರಣ ಶುದ್ಧಿಯುಳ್ಳವನೇ ನಿಜವಾದ ವಿಷ್ಣು ಭಕ್ತ. ಅವನೆಂದಿಗೂ ತನ್ನ ಜಾತಿ ಧರ್ಮಗಳ ಕಟ್ಟು ಕಟ್ಟಳೆಗಳ ಮೇರೆ ಮೀರಿ ನಡೆಯುವುದಿಲ್ಲ. ಶತ್ರುಗಳನ್ನು ಮಿತ್ರರಂತೆಯೇ ಕಾಣುತ್ತಾನೆ. ಹೆರವರ ವಸ್ತುವನ್ನು ಅಪಹರಿಸುವುದಿಲ್ಲ. ಇನ್ನೊಬ್ಬರನ್ನು ಹಿಂಸಿಸುವುದಿಲ್ಲ. ಒಬ್ಬರ ಮನಸ್ಸನ್ನೂ ಕೂಡ ನೋಯಿಸುವುದಿಲ್ಲ. ಇಂಥವನೇ ಹರಿಭಕ್ತನೆನಿಸುವನು.

ಕಲಿಕಲುಷಮದೇನ ಯಸ್ಯ ನಾತ್ಮಾ
ವಿಮಲ ಮತೇರ್ಮಲಿನೀ ಕೃತಸ್ತಮೇನಂ ॥
ಮನಸಿ ಕೃತಜನಾರ್ದನಂ ಮನುಷ್ಯಂ
ಸತತಮವೇಹಿ ಹರೇರತೀವ ಭಕ್ತಮ್ ॥ ॥೨॥

ಕಲಿಯ ಮಲದಿಂದ ಕಲುಷಿತವಾಗಬಾರದು ಮನಸ್ಸು. ಇಂಥ ನಿರ್ಮಲ ಮನಸ್ಸಿನಲ್ಲಿ ನಿರಂತರವೂ ನಾರಾಯಣನನ್ನು ನೆನೆಯುವವನೇ ನಿಜವಾದ ಹರಿಭಕ್ತ

ಕನಕಮಪಿ ರಹಸ್ಯವೇಕ್ಷ್ಯ ಬುದ್ಧ್ಯಾ ।
ತೃಣಮಿಮ ಯಃ ಸಮವೇತಿ ವೈ ಪರಸ್ವಮ್ ॥
ಭಗವತಿ ಚ ಭಗವತ್ಯನನ್ಯ ಚೇತಾಃ
ಪುರುಷವರ ತಮವೇಹಿ ವಿಷ್ಣು ಭಕ್ತಂ ॥ ॥೩॥

ಹೆರವರ ಸೊತ್ತಾದ ಹೊನ್ನ ಹಣ ಹುಲ್ಲೆಂದು ಭಾವಿಸಿ ಭಗವಂತನನ್ನು ಬಿಡದೇ ಧ್ಯಾನಿಸುವವ ವಿಷ್ಣು ಭಕ್ತ ಎಂದು ತಿಳಿ

ಸ್ಫಟಕಗಿರಿ ಶಿಲಾಮಲಃ ಕ್ವ ವಿಷ್ಣುಃ ।
ಮನಸಿ ನೃಣಾಂ ಕ್ವ ಮತ್ಸರಾದಿ ದೋಷಃ ॥
ನ ಹಿ ತುಹಿನಮಯೂಖರಶ್ಮಿ ಪುಂಜೋ
ಭವತಿ ಹುತಾಶದೀಪ್ತಿಜೇ ಪ್ರತಾಪೇ ॥ ॥೪॥

ಅಸೂಯೆ ಮುಂತಾದ ದೋಷಗಳಿಂದ ಹೊಲಸಾದ ಮನಸ್ಸೆಲ್ಲಿ ! ಸ್ಫಟಿಕ ಗಿರಿಯಲ್ಲಿಯ ಶುಭ್ರ ಶಿಲೆಯಂತೆ ಸ್ವಚ್ಛನಾದ ಶ್ರೀ ಹರಿಯೆಲ್ಲಿ ! ಅಂಥ ದೂಷಿತ ಸ್ಥಳದಲ್ಲಿ ಹರಿ ನಿಲ್ಲಲಾರ. ಬೆಂಕಿಯ ಕಿಚ್ಚು ತನ್ನ ಕೆಂಡ ಕೆದರಿದಲ್ಲಿ ಬೆಳದಿಂಗಳು ಸೂಸುವ ಚಂದ್ರನ ತಂಬೆಳಗು ತಂಗಬಹುದೇ !

**ವಿಮಲ ಮತಿರಮತ್ಸರಃ ಪ್ರಶಾಂತ :**
**ಶುಚಿ ಚರಿತೋಽಖಿಲ ಸತ್ವ ಮಿತ್ರಭೂತಃ ॥**
**ಪ್ರಿಯಹಿತವಚನೋಽಸ್ತಮಾಯೋ**
**ವಸತಿ ಸದಾ ಹೃದಿ ತಸ್ಯ ವಾಸುದೇವಃ ॥** ॥೫॥

ಮತಿಯಲ್ಲಿ ಮಲವಿರದ, ಮನದಲ್ಲಿ ಮತ್ಸರ ವಿರದ, ಶಾಂತಿವೃತ್ತಿಯ, ಶುದ್ಧಚಾರಿತ್ರ್ಯವುಳ್ಳ, ಸವಿನುಡಿಯುವ, ಸರ್ವ ಪ್ರಾಣಿಗಳಲ್ಲಿ ಮೈತ್ರೀ ಭಾವವನ್ನು ತಳೆದಿರುವ ಸಜ್ಜನರ ಮನಸ್ಸಿನಲ್ಲಿ ವಾಸುದೇವನು ಸರ್ವದಾ ವಾಸಿಸುತ್ತಾನೆ

**ವಸತಿ ಹೃದಿ ಸನಾತನೇ ಚ ತಸ್ಮಿನ್**
**ಭವತಿ ಪುಮಾನ್ ಜಗತೋಽಸ್ಯ ಸೌಮ್ಯರೂಪಃ ॥**
**ಕ್ಷಿತಿರಸಮತಿರಮ್ಯಮಾತ್ಮನೋಽಂತಃ**
**ಕಥಯತಿ ಚಾರುತಯೈವ ಶಾಲಪೋತಃ ॥** ॥೬॥

ಬಗೆಯಲ್ಲಿ ಭಗವಂತ ಮೂಡಿದ್ದು ಮಾನವರ ಮೋರೆಯ ಮೇಲೆಯೇ ಕಂಡು ಬರುತ್ತದೆ. ಹೃದಯದಲ್ಲಿ ಹರಿ ತುಂಬಿದಾಗ ಮುಖದಲ್ಲಿ ಮಿಂಚು ಮೂಡಿ ಶಾಂತಿ ಕಾಂತಿ ಕಂಗೊಳಿಸುತ್ತವೆ. ಸಸ್ಯಶ್ಯಾಮಲವಾದ ಭೂಮಿಯ ಹಸಿರು ಕುಸುರು ನೆಲದೊಡಲಿನಲ್ಲಿ ಸೂಸುವ ರಸಾರ್ದತೆಯನ್ನು ಎತ್ತಿ ಸಾರುವುದಿಲ್ಲವೇ!

**ಯಮನಿಯಮ ವಿಧೂತಕಲ್ಮಷಾಣಾಂ ।**
**ಅನುದಿನಮಚ್ಯುತಸಕ್ತ ಮಾನಸಾನಾಂ ॥**
**ಅಪಗತಮದಮಾನ ಮತ್ಸರಾಣಾಂ ।**
**ತ್ಯಜ ಭಟ ದೂರತರೇಣ ಮಾನವಾನಾಂ ॥** ॥೭॥

ದೂತ, ಯಮ ನಿಯಮ ಮುಂತಾದವುಗಳಿಂದ ಪಾಪಗಳನ್ನೆಲ್ಲ ಕಳೆದುಕೊಂಡು ನಿರಂತರವೂ ಅಚ್ಯುತನಲ್ಲಿ ಮನಸ್ಸನ್ನು ಇಟ್ಟಂಥ, ಮದ, ಮಾನ, ಮತ್ಸರಮುಂತಾದ ದೋಷಗಳಿಲ್ಲದ ಪುಣ್ಯಾತ್ಮರನ್ನು ಕಂಡು ನೀವು ದೂರ ಹಾಯಬೇಕು.

**ಹೃದಿ ಹೃದಿ ಭಗವಾನನಾದಿರಾಸ್ತೇ ।**
**ಹರಿರಸಿಶಂಖಗದಾಧರೋಽವ್ಯಯಾತ್ಮಾ ॥**
**ತದಘಮಘವಿಘಾತ ಕರ್ತೃ ಭಿನ್ನಂ**
**ಭವತಿ ಕಥಂ ಸತಿ ಚಾಂಧಕಾರಮರ್ಕೇ ॥** ॥೮॥

ಶಂಖ, ಚಕ್ರ, ಗದಾಧಾರಿಯಾದ ಹರಿಯು ಹೃದಯದಲ್ಲಿದ್ದಾಗ ಅಲ್ಲಿ ಪಾಪವೆಂತು ಉಳಿದೀತು! ಸೂರ್ಯ ಬೆಳಗುವಾಗ ಕತ್ತಲೆ ಉಳಿದೀತೇ! ಪಾಪನಾಶಕನಾದ ಅವನಿಂದ ಎಲ್ಲ ಪಾತಕಗಳೂ ಪರಿಹಾರವಾಗುವವು.

ಹರತಿ ಪರಧನಂ ನಿಹಂತಿ ಜಂತೂನ್
ವದತಿ ತಥಾನೃತ ನಿಷ್ಠುರಾಣಿ ಯಶ್ಚ ॥
ಅಶುಭ ಜನಿತ ದುರ್ಮದಸ್ಯ ಪುಂಸಃ
ಕಲುಷಮತೇರ್ಹೃದಿ ತಸ್ಯ ನಾಸ್ತ್ಯನಂತಃ ॥ ॥೯॥

ಹೆರವರ ಹಣವನ್ನು ಕದಿಯುವವನಲ್ಲಿ, ಪ್ರಾಣಿಗಳನ್ನು ಹಿಂಸೆ ಮಾಡುವವನಲ್ಲಿ, ಹುಸಿ ನುಡಿಯುವವನಲ್ಲಿ, ಕೆಟ್ಟ ಕೆಲಸಗೈದು ಗರ್ವಿಷ್ಠನಾದವನಲ್ಲಿ, ಬುದ್ಧಿ ಕೆಟ್ಟವನಲ್ಲಿ ಅನಂತ ಎಂದೂ ಹೃದಯವಾಸ ಮಾಡಲಾರ.

ನ ಸಹತಿ ಪರಸಂಪದಂ ವಿನಿಂದಾಂ ।
ಕಲುಷಮತಿಃ ಕುರುತೇ ಸತಾಮಸಾಧುಃ ॥
ನ ಯಜತಿ ನ ದದಾತಿ ಯಶ್ಚ ಸಂತಂ
ಮನಸಿ ನ ತಸ್ಯ ಜನಾರ್ದನೋಽ ಧಮಸ್ಯ ॥ ॥೧೦॥

ಮತ್ತೊಬ್ಬರು ಸಿರಿವಂತರಾದರೆ ಅಸೂಯೆಯಿಂದ ತುಂಬಿ ಕುದಿದು ಹೋಗುವ ದುಷ್ಟರ ಮನಸ್ಸಿನಲ್ಲಿ ಭಗವಂತ ಮನೆ ಮಾಡುವುದಿಲ್ಲ. ಅದರಂತೆ ಸಜ್ಜನರನ್ನು ಹೀಗಳೆಯುವ ದುರ್ಬುದ್ಧಿಯಲ್ಲಿ ಅವನಿಗೆ ಎಡೆಯಿಲ್ಲ. ಸತ್ಪುರುಷರಿಗೆ ಬೇಕಾದ್ದನ್ನು ಕೊಟ್ಟು ಪೂಜಿಸುವುದೇ ಭಗವಂತನ ಪೂಜೆಯೂ ಅಹುದು. ಇವೆರಡನ್ನೂ ಮಾಡದವ ಅಧಮ, ಅಂಥಲ್ಲಿ ಅವನಿಲ್ಲ.

ಪರಮಸುಹೃದಿ ಬಾಂಧವೇ ಕಲತ್ರೇ ।
ಸುತತನಯಾ ಪಿತೃಮಾತೃ ಭೃತ್ಯವರ್ಗೇ ॥
ಶಠಮತಿರುಪಯಾತಿ ಯೋಽರ್ಥ ತೃಷ್ಣಾಂ
ತಮಧಮಚೇಷ್ಟಮವೇಹಿ ನಾಸ್ಯ ಭಕ್ತಮ್ ॥ ॥೧೧॥

ಬಂಧು, ಇರಲಿ, ಬಳಗ ಇರಲಿ, ಮಿತ್ರ ನಿರಲಿ, ಅದೇಕೆ ಮಗ, ಮಗಳು ತಾಯಿ ತಂದೆ, ನೌಕರ, ಎಲ್ಲರಿಂದಲೂ ಹಣವನ್ನು ದೋಚಿಕೊಳ್ಳುವ ದುಷ್ಟ ಹರಿಭಕ್ತನಲ್ಲ. ಅವನೊಬ್ಬ ಅಧಮ ಮನುಷ್ಯ ಎಂದು ತಿಳಿ.

ಅಶುಭ ಮತಿರಸತ್ ಪ್ರವೃತ್ತಿಸಕ್ತಃ ।
ಸತತಮನಾರ್ಯಕುಶೀಲ ಸಂಗ ಮತ್ತಃ ॥
ಅನುದಿನ ಕೃತ ಪಾಪಬಂಧಯುಕ್ತಃ ।
ಪುರುಷ ಪಶುರ್ನಹಿ ವಾಸುದೇವ ಭಕ್ತಃ ॥ ॥೧೨॥

ಕೆಟ್ಟ ಬುದ್ಧಿ, ದುಷ್ಟಕಾರ್ಯಗಳಲ್ಲಿ ಆಸಕ್ತಿ, ಮತ್ತು ಶೀಲ ಭ್ರಷ್ಟರ ಸಹವಾಸ, ಮೇಲೆ ಅನುದಿನವೂ ಪಾಪ ಕೃತ್ಯಗಳ ಆಚರಣೆಯನ್ನು ತಪ್ಪದೇ ಮಾಡುವ ಮನುಷ್ಯ ಪುರುಷನಲ್ಲ ಪಶು. ಅವನು ವಾಸುದೇವ ಭಕ್ತ ಹೇಗಾಗುವನು !

ಸಕಲಮಿದಮಹಂ ಚ ವಾಸುದೇವಃ
ಪರಮ ಪುಮಾನ್ ಪರಮೇಶ್ವರಃ ಸ ಏಕಃ
ಇತಿ ಮತಿರ ಚಲಾ ಭವತ್ಯನಂತೇ
ಹೃದಯಗತೇ ವ್ರಜ ತಾನ್ ವಿಹಾಯ ದೂರಾತ್ ॥ ॥೧೩॥

''ನಾನು ಮತ್ತು ಇದೆಲ್ಲ ಪ್ರಪಂಚವೂ ಆ ಹರಿಯ ಅಧೀನ. ನಾನು ಅವನ ಪಡಿನೆಳಲು. ಅವನು ನುಡಿಸಿದರೆ ನುಡಿವೆ, ಕುಣಿಸಿದರೆ ಕುಣಿವೆ. ''ಈ ಜಗತ್ತಿನಲ್ಲಿ ಸರ್ವ ಶ್ರೇಷ್ಠನೆಂದರೆ ವಾಸುದೇವನೊಬ್ಬನೇ'' ಎಂಬ ತಿಳುವಳಿಕೆಯು ಯಾರ ಹೃದಯದಲ್ಲಿ ನಿರೂಢ ವಾಗಿದೆಯೋ ಅಲ್ಲಿ ಹರಿಸನ್ನಿಹಿತನಾಗಿರುತ್ತಾನೆ. ನೀನು ಅವರ ಹತ್ತಿರ ಹೋಗಬೇಡ.

ಕಮಲ ನಯನ ವಾಸುದೇವ ವಿಷ್ಣೋ ।
ಧರಣಿ ಧರಾಚ್ಯುತ ಶಂಖ ಚಕ್ರಪಾಣೇ ॥
ಭವ ಶರಣಮಿತೀರಯಂತಿ ಯೇ ವೈ
ತ್ಯಜ ಭಟ ದೂರತರೇಣ ತಾನಪಾಪಾನ್ ॥ ॥೧೪॥

''ಕಮಲನೇತ್ರ, ವಾಸುದೇವ, ವಿಷ್ಣೋ, ಭೂಧರ, ಅಚ್ಯುತ, ಶಂಖಪಾಣಿ, ಚಕ್ರಧರ, ಸ್ವಾಮಿ ಶ್ರೀ ಹರೇ ನನಗೆ ನೀನೇ ಶರಣು, ನಿನ್ನನ್ನೇ ನಾನು ನಂಬಿದ್ದೇನೆ'' ಎಂದು ಮುಂತಾಗಿ ಯಾರು ದೇವರಲ್ಲಿ ಮೊರೆ ಇಟ್ಟಿರುವರೋ ಅಂಥ ಪಾಪ ದೂರರಾದ ಪುಣ್ಯಪುರುಷರನ್ನು ನೀನೂ ದೂರವೇ ಬಿಟ್ಟು ಬಿಡು.

ವಸತಿ ಮನಸಿ ಯಸ್ಯ ಸೋಽ ವ್ಯಯಾತ್ಮಾ।
ಪುರುಷವರಸ್ಯ ನ ತಸ್ಯ ದೃಷ್ಟಿಪಾತೇ ॥
ತವ ಗತಿರಥವಾ ಮಮಾಸ್ತಿ ಚಕ್ರ
ಪ್ರತಿಹತ ವೀರ್ಯಬಲಸ್ಯ ಸೋಽನ್ಯಲೋಕ್ಯಃ ॥ ॥೧೫॥

ಸಕಲ ವಿಧ ನಾಶ ರಹಿತನಾದ ಆ ವಿಷ್ಣುವು ಯಾರ ಹೃದಯದಲ್ಲಿ ತಂಗಿರುವನೋ ಅಂಥ ಭಗವದ್ಭಕ್ತರ ಮೇಲೆ ನಿನ್ನದೇಕೆ ನನ್ನದೂ ಕೂಡ ಏನೂ ಆಟಸಾಗದು. ಅವರು ಕಣ್ಣಾಡಿಸಿದಲ್ಲೆಲ್ಲ ಹರಿ ಸುದರ್ಶನ ಚಕ್ರ ಸುತ್ತಾಡಿ ನಮ್ಮನ್ನೆಲ್ಲ ದೂರಕ್ಕಟ್ಟುತ್ತದೆ. ಆದುದರಿಂದ ಅಂಥವರ ಹತ್ತಿರ ಹೋಗಬೇಡ. ಅವರು ಇಲ್ಲಿ ಬರುವವರಲ್ಲ ಅವರು ಹೋಗುವ ಲೋಕವೇ ಬೇರೆ. ಅದು ವೈಕುಂಠ''

ಹೀಗೆ ಯಮಧರ್ಮನು ತನ್ನ ಕಿಂಕರನಿಗೆ ಗುಟ್ಟಾಗಿ ಹೇಳಿದ್ದನ್ನು ಪಾರಬ್ಧವಶಾತ್ ಆಗ ಯಮಲೋಕದಲ್ಲಿ ಯಾತನೆಯನ್ನು ಭೋಗಿಸುತ್ತಿದ್ದ ಕಲಿಂಗ ಬ್ರಾಹ್ಮಣನು ಕೇಳಿ ಜನ್ಮಾಂತರ ಸ್ಮರಣೆಯ ಬಲದಿಂದ ನೆನಪಿಟ್ಟು ನನಗೆ ರಹಸ್ಯವಾಗಿ ಹೇಳಿದ್ದನ್ನು. ನಕುಲ, ಅದನ್ನೇ ನಾನು ನಿನ್ನ ಪ್ರಶ್ನೆಗೆ ಉತ್ತರ ರೂಪವಾಗಿ ತಿಳಿಸಿದ್ದೇನೆ. ಇದರ ಮೇಲಿಂದ ಸಂಸಾರದ ಕಡಲಿನಿಂದ ಪಾರುಗಾಣಿಸುವವನು ಆ ಶ್ರೀ ಹರಿಯೊಬ್ಬನೇ ಎಂಬುದು ಸ್ಪಷ್ಟವಾಗುವುದು. ಶ್ರೀ ವಿಷ್ಣುವನ್ನು ನಂಬಿದವರಿಗೆ ಯಮನೂ ಕೂಡ ಏನೂ ಮಾಡಲಾರ.

ಪರಾಶರ :- ಹೀಗೆ ಭೀಷ್ಮರು ಹೇಳಿದ ಯಮಗೀತೆಯನ್ನು ಕೇಳಿ ನಕುಲನಿಗೆ ಸಮಾಧಾನವಾಯಿತು. ಮೈತ್ರೇಯ, ನಿನ್ನ ಪ್ರಶ್ನೆಗೂ ಅದು ಸರಿಯಾದ ಉತ್ತರವಾಗಿದೆಯೆಂದು ನಾನಿಲ್ಲಿ ಹೇಳಿದ್ದಾಯಿತು. ಮತ್ತೇನು ನಿನ್ನ ಜಿಜ್ಞಾಸೆ?

## ಸಗರರಾಜನ ಪ್ರಶ್ನೆ ಔರ್ವಋಷಿಯ ಉತ್ತರ

ಮೈತ್ರೇಯ :- ಪೂಜ್ಯರೇ, ಆ ವಿಷ್ಣುವನ್ನು ಆರಾಧಿಸುವುದು ಹೇಗೆ? ಅವನು ಆರಾಧನೆಯಿಂದ ದೊರೆಯುವ ಫಲವೇನು?

ಪರಾಶರ :- ಹಿಂದೆ ಇಕ್ಷ್ವಾಕು ವಂಶದ ಸಗರ ಮಹಾರಾಜನು ಔರ್ವ ಋಷಿಗೆ ಇದೆ ಪ್ರಶ್ನೆ ಕೇಳಿದ್ದ. ಅದಕ್ಕೆ ಆ ಔರ್ವಮುನಿ ಹೇಳಿದ ಉತ್ತರವನ್ನೇ ನಾನು ನಿನಗೆ ತಿಳಿಸುತ್ತೇನೆ.

ಔರ್ವಮುನಿ :- ಶ್ರೀ ವಿಷ್ಣುವನ್ನು ಪೂಜಿಸಿದರೆ ಈ ಭೂಲೋಕದಲ್ಲಿ ಮಾನವರ ಮನೋರಥಗಳೆಲ್ಲವೂ ಸಿದ್ಧಿಸುವವು. ಸ್ವರ್ಗಲೋಕ ಪ್ರಾಪ್ತಿಯಾಗಿ ಅಲ್ಲಿಯೂ ಸುರಸಂಭಾವಿತವಾದ ಸ್ಥಾನಮಾನಗಳು ದೊರಕುವವು. ಇಷ್ಟು ಮಾತ್ರವಲ್ಲದೇ ಪರಮ ಪುರುಷಾರ್ಥವಾದ ಮೋಕ್ಷವೂ ಕೂಡ ಶ್ರೀ ಹರಿಯ ಆರಾಧನೆಯಿಂದ ದೊರಕುವುದು. ಒಟ್ಟಾರೆ ಆ ಅಚ್ಯುತನನ್ನು ಆರಾಧಿಸಿದರೆ ಇಚ್ಛಿಸಿದ ಫಲ ಬೇಡಿದಾಗ ದೊರಕುವುದು. ಬಯಸಿದಷ್ಟು ದೊರಕುವುದು. ಇನ್ನು ಹರಿಯನ್ನು ಆರಾಧಿಸುವುದು ಹೇಗೆ ಎಂದು ನಿನ್ನ ಎರಡನೇ ಪ್ರಶ್ನೆ ಅದರ ಉತ್ತರವನ್ನು ಆಲಿಸು.

## ಮಾನವೀಯ ಧರ್ಮ, ಮಾಡಬೇಕಾದ ಕರ್ಮ

ಪ್ರತಿಯೊಬ್ಬ ಮನುಷ್ಯರು ತಮ್ಮ ತಮ್ಮ ವರ್ಣಾಶ್ರಮಕ್ಕೆ ವಿಹಿತವಾದ, ಜಾತಿ ಧರ್ಮಗಳಿಗೆ ಉಚಿತವಾದ ಧರ್ಮಕರ್ಮಗಳನ್ನು ಮಾಡುತ್ತಲಿರಬೇಕು. ಸ್ವವಿಹಿತ ಕರ್ಮಾಚರಣೆ ಹೊರತು ಹರಿಯನ್ನು ಒಲಿಸುವ ಸಾಧನ ಬೇರೊಂದಿಲ್ಲ. ಯಜ್ಞ ಮಾಡುವವರು ಯಜ್ಞ ಮಾಡಿದರೆ ವಿಷ್ಣುವನ್ನು ಪೂಜಿಸಿದಂತೆಯೇ. ಬ್ರಾಹ್ಮಣಪಾಠ ಪ್ರವಚನಾದಿಗಳನ್ನು ಮಾಡಿದರೆ ವಿಷ್ಣುವಿನ ಆರಾಧನೆಗೈದಂತೆಯೇ. ಕ್ಷತ್ರಿಯ ಯುದ್ಧಮಾಡಿ ದುಷ್ಟನಿಗ್ರಹ ಗೈದು ನ್ಯಾಯವಾಗಿ ರಾಜ್ಯವಾಳಿದರೆ ಅದೇ ಹರಿಪೂಜೆ. ಜಪಮಾಡುವವ ಜಪಮಾಡಿದರೆ ಹರಿಯನ್ನು ಒಲಿಸಿದಂತೆಯೇ. ಇದರಂತೆ ಹಿಂಸಕನು ಯಾವುದೇ ಪ್ರಾಣಿಯನ್ನು ಹಿಂಸೆ ಮಾಡಿದರೂ ಹರಿಯ ಹಿಂಸೆ ಮಾಡಿದಂತೆಯೇ. ಯಾಕೆಂದರೆ ಆ ದೇವನು ಸರ್ವಭೂತಮಯನಲ್ಲವೇ! ಆದುದರಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ ಎಲ್ಲ ಜಾತಿ ಜನಾಂಗದ ಜನರು ಪಾಪಾಚಾರವನ್ನು ಬಿಟ್ಟು ತಮಗೆ ವಿಹಿತವಾದ ಕರ್ಮಗಳನ್ನು ಅನುಷ್ಠಾನ ಮಾಡಬೇಕು.

## ಮಾಡಬಾರದ ಕರ್ಮ ಬಿಡಬೇಕಾದ ಅಧರ್ಮ

ಇದು ಮಾಡವುದಾಯಿತು. ಇನ್ನು ಮಾಡದೇ ಬಿಡುವದೂ ಬಹಳಷ್ಟಿದೆ. ಮತ್ತೊಬ್ಬರಿಗೆ ನೋವಾಗುವ ಯಾವ ಕೆಲಸವನ್ನೂ ಕೇಶವನು ಮೆಚ್ಚಲಾರ. ಪರನಿಂದೆಯನ್ನು ಬಿಡಬೇಕು. ಚಾಡಿ ಹೇಳುವುದನ್ನು ವರ್ಜಿಸಬೇಕು. ಸುಳ್ಳಾಡಬಾರದು. ಪರದ್ರವ್ಯ, ಪರಸ್ತ್ರೀ, ಪರಹಿಂಸೆ, ಈ ಮೂರನ್ನು ಮಾಡಬಾರದು.

## ಶ್ರೀ ಗೋವಿಂದಗೆ ಕಥಮಾನಂದ?

ಹೆರವರನ್ನು ಹೊಡೆಯದಿದ್ದರೆ ಹಿಂಸಿಸದಿದ್ದರೆ ಹರಿಗೆ ಬಲು ಹಿಗ್ಗು. ದೇವರನ್ನು ಪೂಜಿಸಿದರೆ. ಬ್ರಾಹ್ಮಣರನ್ನು ಗೌರವಿಸಿದರೆ, ಗುರುಗಳನ್ನು ಸೇವಿಸಿದರೆ ಆ ಗೋವಿಂದನಿಗೆ ಪರಮಾನಂದ. ತನ್ನಂತೆ ಪರರ ಬಗೆದರೆ, ಮತ್ತು ತನ್ನ ಮಕ್ಕಳಂತೆ ಎಲ್ಲ ಪ್ರಾಣಿಗಳನ್ನು ಪ್ರೀತಿಯಿಂದ ಕಂಡರೆ ಪ್ರಸನ್ನನಾಗುತ್ತಾನೆ ಆ ಪರಮಾತ್ಮ. ಶಾಸ್ತ್ರಗಳಲ್ಲಿ ಯಾವ ಜಾತಿ ಯಾವ ವರ್ಣ ಯಾವ ಆಶ್ರಮದವರಿಗೆ ಯಾವ ಯಾವ ಧರ್ಮ ಕರ್ಮಗಳನ್ನು ಹೇಳಿದ್ದಾರೋ ಅದರಂತೆ ನಡೆದರೆ ಶ್ರೀ ಹರಿಯು ಸುಪ್ರೀತನಾಗುತ್ತಾನೆ.

**ಮೈತ್ರೇಯ** :- ಹಾಗಾದರೆ ವರ್ಣ ಧರ್ಮ ಎಂದರೆ ಏನು? ಆಶ್ರಮ ಧರ್ಮಗಳಾವುವು? ಶಾಸ್ತ್ರಗಳಲ್ಲಿ ಏನು ಹೇಳಿದೆ?

## ಸ್ವಧರ್ಮ, ಸ್ವಕರ್ಮ

**ಪರಾಶರ** :- ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ನಾಲ್ಕೂವರ್ಣದ ಜನರಿಗೂ ಬೇರೆ ಬೇರೆಯಾದ ಧರ್ಮಕರ್ಮಗಳನ್ನು ಶಾಸ್ತ್ರದಲ್ಲಿ ಹೇಳಿದ್ದಾರೆ. ಅವುಗಳನ್ನೆಲ್ಲ ಚಿತ್ತವಿಟ್ಟು ಕೇಳು. ಬ್ರಾಹ್ಮಣನಾದವನು ಮುಖ್ಯವಾಗಿ ಸ್ವಾಧ್ಯಾಯ ಅಂದರೆ ವೇದಶಾಸ್ತ್ರಗಳನ್ನು ಸರಿಯಾಗಿ ಕಲಿತು ಜ್ಞಾನ ಸಂಪಾದನೆ ಮಾಡಬೇಕು. ಅನಂತರ ದಾನ ಕೊಡಬೇಕು. ದೇವರನ್ನು ಪೂಜಿಸಬೇಕು. ಯಜ್ಞಗಳನ್ನು ಮಾಡಬೇಕು. ಸ್ನಾನ ತರ್ಪಣಾದಿಗಳನ್ನು ನೀಡಬೇಕು. ಅಗ್ನಿಕಾರ್ಯ ಮಾಡಬೇಕು. ಅವನು ಬದುಕಲಿಕ್ಕಾಗಿ ದಕ್ಷಿಣೆ ತೆಗೆದುಕೊಂಡು ಇನ್ನೊಬ್ಬರಿಂದ ಯಜ್ಞ ಮಾಡಿಸಬೇಕು. ಅವರಾಗಿ ಸಂತೋಷದಿಂದ ಕೊಟ್ಟರೆ ದಕ್ಷಿಣೆ ತೆಗೆದುಕೊಳ್ಳಬೇಕು. ಅನ್ಯಾಯದ ದುಡ್ಡನ್ನು ದಕ್ಷಿಣೆ ಕೊಟ್ಟರೂ ಮುಟ್ಟಕೂಡದು. ನ್ಯಾಯದಿಂದಗಳಿಸಿದ್ದನ್ನು ಮಾತ್ರ ಸ್ವೀಕರಿಸಬೇಕು. ತಾನು ಕಲಿತಿದ್ದನ್ನು ಶಿಷ್ಯರಿಗೆ ಕಲಿಸಬೇಕು. ಬ್ರಾಹ್ಮಣನಾದವನು ಯಾರಿಗೂ ಎಂದೂ ಅಹಿತವನ್ನು ಎಸಗಬಾರದು. ಎಲ್ಲರಿಗೂ ಹಿತವನ್ನೇ ಮಾಡಬೇಕು. ಎಲ್ಲರೊಡನೆ ಸ್ನೇಹದಿಂದ ಇರಬೇಕು. ಈ ಸರ್ವ ಸ್ನೇಹವೇ ಬ್ರಾಹ್ಮಣನ ನಿಜವಾದ ಸಂಪತ್ತು. ಹೆರವರ ಹೊನ್ನು ರನ್ನಗಳೆಲ್ಲ ಕಲ್ಲು ಎಂದು ಬಗೆಯಬೇಕು. ಸ್ವಪತ್ನೀ ನಿಷ್ಠನಾಗಿರಬೇಕು. ಕ್ಷತ್ರಿಯನಾದವ ಬ್ರಾಹ್ಮಣರಿಗೆ ವಿಪುಲವಾಗಿ ದಾನವೀಯಬೇಕು. ಯಜ್ಞ ಮಾಡಬೇಕು. ವೇದಶಾಸ್ತ್ರ ಅಧ್ಯಯನ ಮಾಡಬೇಕು. ನಾಡನ್ನು ರಕ್ಷಿಸಿಯೇ ಕ್ಷತ್ರಿಯ ಬದುಕಬೇಕು. ದುಷ್ಟರನ್ನು ಮಣಿಸಬೇಕು. ದೊಡ್ಡವರನ್ನು ತಣಿಸಬೇಕು. ವೈಶ್ಯರು ಪಶುಗಳನ್ನು ಪಾಲಿಸಬೇಕು. ವ್ಯಾಪಾರ ಉದ್ಯೋಗಗಳನ್ನು ಬೆಳೆಸಬೇಕು. ಒಕ್ಕಲುತನವನ್ನು ಮಾಡಬೇಕು. ಅವರೂ ಅಧ್ಯಯನ ಮಾಡಬೇಕು. ದಾನ ನೀಡಬೇಕು, ಯಜ್ಞ ಮಾಡಿಸಬೇಕು, ನಿತ್ಯಕರ್ಮಗಳ ಅನುಷ್ಠಾನ ಮಾಡಬೇಕು. ಶೂದ್ರನಾದವ ಮೇಲಿನ ಮೂರು ವರ್ಣದವರಿಗೆ ಬೇಕಾಗುವ ಪದಾರ್ಥಗಳನ್ನು ಸಿದ್ಧಪಡಿಸಿ ಒದಗಿಸಿ ಅದರಿಂದ ಬಂದ ಹಣದಿಂದ ಜೀವಿಸಬೇಕು. ಒಡೆಯನನ್ನು ಸೇವಿಸಬೇಕು. ಅಮಂತ್ರಕ ಯಜ್ಞಯಾಗ ಮಾಡಬೇಕು. ಕಳವು ಮಾಡಬಾರದು. ಸಜ್ಜನರ ಸಹವಾಸ ಮಾಡಬೇಕು.

ಪಾಕಯಜ್ಞವು ಅವರಿಗೆ ಪ್ರಶಸ್ತ. ಪಿತೃಶ್ರಾದ್ಧಾದಿಗಳನ್ನು ತಮಗೆ ಹೇಳಿದ ವಿಧಿಯಿಂದ ಮಾಡಬೇಕು. ಮತ್ತು ಮೇಲಿನ ಮೂರು ವರ್ಣದವರಿಂದಲೂ ಸೇವಾಲಬ್ಧವಾದ ದ್ರವ್ಯವನ್ನು ತೆಗೆದುಕೊಂಡು ತನ್ನ ಕುಟುಂಬ ರಕ್ಷಣೆ ಮಾಡಬೇಕು. ಋತುಕಾಲದಲ್ಲಿ ಸ್ವಸ್ತ್ರೀ ಗಮನ ಮಾಡಬೇಕು.

ಪ್ರಾಣಿದಯೆ ಸಹನಶೀಲತೆ, ಗರ್ವರಾಹಿತ್ಯ, ಸತ್ಯ, ಮಡಿಮೈಲಿಗೆ, ಮಧುರವಚನ, ಸ್ನೇಹಶೀಲತೆ, ಮಂಗಲಾಚರಣ, ಆಶಾತ್ಯಾಗ, ದಾನಧರ್ಮಾದಿಗಳು ಎಲ್ಲ ವರ್ಣ ಜಾತಿ ಆಶ್ರಮ, ಮತ, ಪಥ, ಪಕ್ಷದವರಿಗೂ ಸಾಮಾನ್ಯ ಧರ್ಮಗಳಾಗಿವೆ. ಸಂಕಟ ಕಾಲ ಬಂದಾಗ ಆಪದ್ಧರ್ಮ ಎಂದು ಬ್ರಾಹ್ಮಣನು ಕ್ಷತ್ರಿಯ ವೃತ್ತಿಯ್ನೂ, ವೈಶ್ಯವೃತ್ತಿಯನ್ನೂ ಅವಲಂಬಿಸಬಹುದು, ಕ್ಷತ್ರಿಯನು ವೈಶ್ಯವೃತ್ತಿಯನ್ನು ಕೈಕೊಳ್ಳಬಹುದು. ಆದರೆ ಇವರಿಬ್ಬರು ನೀಚವೃತ್ತಿಯನ್ನು ಮಾತ್ರ ಎಂದೂ ಕೈಕೊಳ್ಳಬಾರದು. ಮತ್ತು ಕರ್ಮ ಸಂಕರವನ್ನು ಮಾಡಬಾರದು.

## ಬ್ರಹ್ಮಚರ್ಯಾದಿ ಆಶ್ರಮನಿರೂಪಣೆ

**ಔರ್ವಮುನಿ:-** ಬಾಲ್ಯದಲ್ಲಿ ಮುಂಜಿವೆ (ಉಪಯನ) ಆದ ಬಳಿಕ ಬ್ರಹ್ಮಾಚಾರಿಯು ವೇದಾಧ್ಯಯನ ಮಾಡುತ್ತ ಗುರುಕುಲದಲ್ಲಿ ವಾಸ ಮಾಡಬೇಕು. ಅಲ್ಲಿ ಶೌಚ, ಆಚಾರ, ವ್ರತಗಳನ್ನು ಪಾಲನ ಮಾಡುತ್ತ ಗುರುಗಳ ಸೇವೆಮಾಡಿ ವೇದ ವೇದಾಂತ ಜ್ಞಾನವನ್ನು ಅವನು ಪಡೆಯಬೇಕು. ಎರಡು ಹೊತ್ತು ಅಗ್ನಿಕಾರ್ಯವನ್ನು ಮಾಡಬೇಕು. ಗುರುಗಳ ಅಪ್ಪಣೆ ಪಡೆದು ಮಧುಕರೀ ವೃತ್ತಿಯಿಂದ ಅನ್ನವನ್ನು ಬೇಡಿತಂದು ಉಣ್ಣಬೇಕು. ಗುರುಗಳು ಏಳುವುದಕ್ಕಿಂತ ಮೊದಲು ಎದ್ದು ಸ್ನಾನ ಮಾಡಿ ಗುರುಗಳ ಸ್ನಾನ ಪೂಜೆಗಳಿಗೆ ಅನುಕೂಲ ಮಾಡಿಕೊಡಬೇಕು. ಹೀಗೆ ನಿರಂತರ ಗುರುಗಳ ಸೇವೆಯಿಂದ ಎಲ್ಲ ವೇದ ಜ್ಞಾನವನ್ನು ಪಡೆದುಕೊಂಡು ಗುರುದಕ್ಷಿಣೆಯನ್ನು ಇತ್ತು ಅವರ ಸಮ್ಮತಿಯನ್ನು ತೆಗೆದುಕೊಂಡು ಮದುವೆಯಾಗಿ ಗ್ರಹಸ್ಥಾಶ್ರಮ ಧರ್ಮವನ್ನು ಪಾಲನಮಾಡಬೇಕು.

## ''ಧನ್ಯೋ ಗೃಹಸ್ಥಾಶ್ರಮಃ''

ವಿಧಿಪೂರ್ವಕವಾಗಿ ವಿವಾಹಮಾಡಿಕೊಂಡ ಬಳಿಕ ತನ್ನ ವಿಹಿತ ವೃತ್ತಿಯಿಂದಲೇ ಧನವನ್ನು ಸಂಪಾದನೆಮಾಡಿ, ಕೌಟುಂಬಿಕ ಭಾರವನ್ನೆಲ್ಲ ಯಥಾಶಕ್ತಿ ನಿರ್ವಹಿಸಬೇಕು. ಗೃಹಸ್ಥಾಶ್ರಮಿಯಾದವರು ತರ್ಪಣಕೊಟ್ಟು ಪಿತೃಗಳನ್ನು, ಸಂತೋಷಪಡಿಸಬೇಕು. ಅದರಂತೆ ಯಜ್ಞಗಳಿಂದ ದೇವತೆಗಳನ್ನೂ ಅಧ್ಯಯನದಿಂದ ಋಷಿಗಳನ್ನೂ, ಸಂತಾನದಿಂದ ಪ್ರಜಾಪತಿಗಳನ್ನೂ, ಆಹಾರಗಳನ್ನಿತ್ತು ಎಲ್ಲ ಪ್ರಾಣಿಗಳನ್ನೂ, ಪ್ರೇಮದಿಂದ ಎಲ್ಲ ಜಗತ್ತನ್ನೂ ಸಂತೋಷ ಪಡಿಸತಕ್ಕದ್ದು. ಬ್ರಹ್ಮಚಾರಿಗಳು ಮತ್ತು ಸನ್ಯಾಸಿಗಳೂ ಈ ಗೃಹಸ್ಥಾಶ್ರಮಿಗಳು ನೀಡಿದ ಭಿಕ್ಷಾನ್ನದಿಂದ ಬದುಕುತ್ತಾರೆ. ಆದುದರಿಂದ ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳಿಗಿಂತ ಶ್ರೇಷ್ಠವಾಗಿರುತ್ತದೆ. ಜ್ಞಾನಪ್ರಸಾರ, ತೀರ್ಥಸ್ನಾನ ಮತ್ತು ಕ್ಷೇತ್ರದರ್ಶನ, ಪೃಥ್ವೀ ಪ್ರದಕ್ಷಣೆ ಮುಂತಾದ ಉದ್ದೇಶಗಳಿಂದ ಸಂಚಾರ ಮಾಡತಕ್ಕ ಅತಿಥಿಗಳಿಗೆಲ್ಲ ಗೃಹಸ್ಥನೇ ಆಧಾರ.

ಮನೆಮಾಡಿಕೊಂಡು ಊರಲ್ಲಿರುವ ಗೃಹಸ್ಥನು ಇಂಥ ಅತಿಥಿಗಳು ಬಂದಾಗ ಆನಂದದಿಂದ ಸ್ವಾಗತ ಮಾಡಿ, ಮಧುರವಾಗಿ ಮಾತನಾಡಬೇಕು. ಅವರಿಗೆ ಊಟ, ಆಸನ, ಮತ್ತು ಮಲಗಲಿಕ್ಕೆ ಅನುಕೂಲ ಮಾಡಿಕೊಡಬೇಕು ಮತ್ತು ಯಾರ ಮನೆಯಿಂದ ಅತಿಥಿಯು ನಿರಾಶನಾಗಿ ಮರಳಿ ಹೋಗುವನೋ ಅವನ ಮನೆಯ ಯಜಮಾನನಿಗೆ ತನ್ನ ಪಾಪವನ್ನು ಕೊಟ್ಟು ಅವರ ಪುಣ್ಯವನ್ನು ಸೆಳೆದೊಯ್ಯುತ್ತಾನೆ. ನಿಜವಾದ ಗೃಹಸ್ಥಾಶ್ರಮಿಯು ಇನ್ನೊಬ್ಬರನ್ನು ಹಳಿಯಬಾರದು. ಅಹಂಕಾರವನ್ನು ತಾಳಬಾರದು. ಡಂಭಾಚಾರ ಮಾಡಬಾರದು ಇನ್ನೊಬ್ಬರನ್ನು ಹಿಂಸಿಸಬಾರದು. ಇನ್ನೊಬ್ಬರಿಗೆ ಕೇಡನ್ನು ಉಂಟು ಮಾಡಬಾರದು. ಅನ್ನದಾನ, ಪರೋಪಕಾರ, ಅತಿಥಿ ಸತ್ಕಾರ ಮುಂತಾದ ಸತ್‌ಕಾರ್ಯಗಳೇ ಗೃಹಸ್ಥಾಶ್ರಮಿಯ ಮುಖ್ಯ ಕರ್ತವ್ಯಗಳಾಗಿರುತ್ತವೆ. ವಯಸ್ಸು ಆದ ಬಳಿಕ ಗೃಹಸ್ಥನಾದವನು ಮಾಡಬೇಕಾದುದನ್ನೆಲ್ಲ ಮಾಡಿ, ಪತ್ನಿಯ ರಕ್ಷಣೆಯ ಭಾರವನ್ನು ಮಕ್ಕಳಿಗೆ ಒಪ್ಪಿಸಿ, ತಾನು ಅರಣ್ಯಕ್ಕೆ ತಪಸ್ಸಿಗಾಗಿ ತೆರಳಬೇಕು. ಆ ಪತ್ನಿಯು ಪತಿಯ ಜೊತೆಗೇ ಕಾಡಿಗೆ ಬರಲು ಸಿದ್ಧಳಿದ್ದರೆ ಅವಳನ್ನು ಕರೆದುಕೊಂಡು ತಪಶ್ಚರ್ಯೆಗಾಗಿ ಹೊರಡಬೇಕು.

## ವಾನಪ್ರಸ್ಥಾಶ್ರಮ

ಅರಣ್ಯಕ್ಕೆ ಹೋಗಿ ಅಲ್ಲಿ ಕಂದ ಮೂಲ ಫಲಗಳನ್ನು ತಿಂದು ಇರಬೇಕು. ಗಡ್ಡ ಜಡೆಗಳನ್ನು ಬೆಳೆಸಬೇಕು. ನೆಲದ ಮೇಲೆ ಮಲಗಬೇಕು. ಚರ್ಮ ಅಥವಾ ದರ್ಭಗಳಿಂದ ಹಾಸಿಗೆ ಹೊದಿಕೆಗಳನ್ನು ಮಾಡಿಕೊಳ್ಳಬೇಕು. ತ್ರಿಕಾಲ ಸ್ನಾನ, ದೇವರಪೂಜೆ, ಹೋಮ ಹವನ, ಅತಿಥಿಪೂಜೆ, ಭಿಕ್ಷೆ, ವೈಶ್ವದೇವ, ಬಲಿಹರಣ ಮುಂತಾದ ಕರ್ಮಗಳು ವಾನಪ್ರಸ್ಥಾಶ್ರಮಿಗಳಿಗೆ ವಿಹಿತವಾಗಿರುತ್ತವೆ. ಚಳಿಮಳೆ ಬಿಸಿಲು ಗಾಳಿಗಳನ್ನು ತಾಳಿಕೊಂಡು, ನಿಯತವಾಗಿ ಮುನಿವೃತ್ತಿಯಿಂದ ತಪಸ್ಸನ್ನು ಆಚರಿಸಿದರೆ ಮನುಷ್ಯರ ಎಲ್ಲ ದೋಷಗಳು ದಗ್ಧವಾಗಿ ಹೋಗುವವು. ಮತ್ತು ಶಾಶ್ವತವಾದ ಲೋಕಪ್ರಾಪ್ತವಾಗುವುದು.

## ಸನ್ಯಾಸಾಶ್ರಮ

ರಾಜನ್, ಸನ್ಯಾಸಾಶ್ರಮದ ಸ್ವರೂಪವನ್ನು ನಿರೂಪಿಸುತ್ತೇನೆ. ನಾಲ್ಕನೇ ಆಶ್ರಮವಾದ ಸನ್ಯಾಸ ಆಶ್ರಮವನ್ನು ಸ್ವೀಕರಿಸುವ ಮನುಷ್ಯನು ಮೊದಲು ಮನೆ, ಮಡದಿ, ಮಕ್ಕಳುಗಳ, ಮೋಹ, ಮಮತೆಗಳನ್ನು ಬಿಟ್ಟುಬಿಡಬೇಕು. ಅಸೂಯೆಗೆ ಇಂಬು ಗೊಡಬಾರದು. ಧರ್ಮ, ಅರ್ಥ, ಕಾಮ ಎಂಬ ತ್ರಿವರ್ಗಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ತೊರೆಯಬೇಕು. ಎಲ್ಲ ಪ್ರಾಣಿಗಳಲ್ಲಿ ಮೈತ್ರೀಭಾವವನ್ನು ಬೆಳಿಸಿಕೊಳ್ಳಬೇಕು.

## ''ಮಾ ಹಿಂಸ್ಯಾತ್ ಸರ್ವಾಭೂತಾನಿ''

ತಾಯಿಯ ಹೊಟ್ಟೆಯಿಂದ ಹುಟ್ಟಿಬಂದ, ತತ್ತಿಗಳಾಗಿ ಒಡೆದು ಹೊರಬಂದ, ಬೀಜದಿಂದ ಹುಟ್ಟಿದ, ಬೆವರಿನಿಂದ ಮೂಡಿದ, ಕಸ ಗೊಬ್ಬರದಿಂದ ಉತ್ಪನ್ನವಾದ ಮಾನವ, ಪಶು, ಕ್ರಿಮಿಕೀಟ, ಜೀವಜಂತು ಮುಂತಾದ ಯಾವ ಪ್ರಾಣಿಯನ್ನೂ ಕೈಯಿಂದ ಕೊಲ್ಲಬಾರದು. ಮೈಮುಟ್ಟಿ ಹಿಂಸಿಸಬಾರದು. ಮನಸ್ಸನ್ನು ಕೂಡಾ ನೋಯಿಸಬಾರದು. ಸನ್ಯಾಸಿಗೆ ಯಾರ ಮೋಹವೂ ಸಲ್ಲದು. ಅವನು ಸರ್ವಸಂಗವನ್ನೂ ತ್ಯಾಗಮಾಡಬೇಕು.

ಹಳ್ಳಿಯಲ್ಲಿ ಒಂದು ರಾತ್ರಿ ಒಂದು ಹಗಲು ಇರಬೇಕು. ಪಟ್ಟಣದಲ್ಲಿ ಐದು ದಿನಗಳವರೆಗೆ ವಾಸಮಾಡಬಹುದು. ಅಲ್ಲಿ ಇದ್ದಾಗಲೂ ಯಾರ ಜೊತೆಗೂ ಹೆಚ್ಚಿನ ಪ್ರೀತಿ ಅಥವಾ ದ್ವೇಷವನ್ನು ಬೆಳೆಸಬಾರದು. ಬದುಕಲಿಕ್ಕಾಗಿ ಉಚ್ಚವರ್ಣದವರ ಮನೆಗಳಲ್ಲಿ ಭಿಕ್ಷೆ ಬೇಡಬೇಕು. ಕಾಮ, ಕ್ರೋಧ, ದರ್ಪ, ಮೋಹ, ಲೋಭ ಮುಂತಾದ ದುರ್ಗುಣಗಳನ್ನು ದೂರಬಿಡಬೇಕು. ಯತಿಯಾದವನಿಗೆ ಯಾವ ವಸ್ತುವಿನಲ್ಲಿಯೂ ಮೋಹ ಮಮತೆ ಇರಕೂಡದು. ಯಾವ ಸನ್ಯಾಸಿಯು ತನ್ನ ಶರೀರದಲ್ಲಿರುವ ಜಠರಾಗ್ನಿಯನ್ನು ಉದ್ದೇಶಿಸಿ ಭಿಕ್ಷೆ ಬೇಡಿ ತಂದ ಅನ್ನವೆಂಬ ಹವಿಸ್ಸಿನಿಂದ ತನ್ನ ಮುಖದಲ್ಲಿ ಅಗ್ನಿ ನಾರಾಯಣನನ್ನು ಕುರಿತು ಹೋಮಮಾಡುವನೋ ಅಂಥ ಯತಿಯು ಅಗ್ನಿಹೋತ್ರವನ್ನು ಯಾವಜ್ಜನ್ಮ ಆಚರಿಸಿದ ಪುಣ್ಯವನ್ನು ಪಡೆಯುತ್ತಾನೆ.

ಈ ರೀತಿಯಾಗಿ ಶಾಸ್ತ್ರೋಕ್ತಾದ ಮೋಕ್ಷಾಶ್ರಮ ಅಥವಾ ಸನ್ಯಾಸಾಶ್ರಮದ ಧರ್ಮಗಳನ್ನು ಯಾವನು ಅನೂಚಾನವಾಗಿ ಆಚರಿಸುವನೋ ಅಂಥ ಬ್ರಾಹ್ಮಣನು ಸೌದೆ ಇಲ್ಲದೆ ಉರಿಯುವ ಜ್ಯೋತಿಯಂತೆ, ಶಾಂತ ಕಾಂತಿಯಿಂದ ಕಂಗೊಳಿಸುತ್ತಾನೆ. ಇಂಥ ಶುಚಿರ್ಭೂತನಾದ, ಪರಮಾತ್ಮನಲ್ಲಿಯೇ ಮನಸ್ಸನ್ನು ಇಟ್ಟಂಥ ಯತಿ ಪುಂಗವನು ಕೊನೆಗೆ ಬ್ರಹ್ಮಲೋಕವನ್ನು ಪಡೆಯುತ್ತಾನೆ.

## ವೈದಿಕ ಸಂಸ್ಕಾರಗಳು

**ಸಗರ ಮಹಾರಾಜ** - ಮುನಿವರ್ಯಾ ನಾಲ್ಕು ವರ್ಣಗಳ, ಮತ್ತೂ ನಾಲ್ಕು ಆಶ್ರಮಗಳ ಕ್ರಿಯಾ ಕಲಾಪಗಳನ್ನು ತಾವು ಈ ವರೆಗೆ ಬಿತ್ತರಿಸಿದಿರಿ. ಆದರೆ ಮಾನವರು ಮಾಡಬೇಕಾದ ನಿತ್ಯ ಕಾರ್ಯಗಳು ಯಾವುವು? ನೈಮಿತ್ತಿಕ ಕಾರ್ಯಗಳು ಯಾವವು? ಕಾಮ್ಯ ಕರ್ಮಗಳು ಯಾವುವು? ಇವುಗಳನ್ನೆಲ್ಲ ನನಗೆ ತಿಳಿಸಬೇಕು. ಭೃಗುಕುಲದಲ್ಲಿ ಶ್ರೇಷ್ಠರಾದ ನೀವು ಎಲ್ಲವನ್ನು ಬಲ್ಲಿರಿ. ನೀವು ಸರ್ವಜ್ಞ ಕಲ್ಪರು ಎಂದು ನಾನು ತಿಳಿದಿದ್ದೇನೆ. ನನಗೆ ವೈದಿಕ ಸಂಸ್ಕಾರಗಳಾದ ಜಾತಕರ್ಮ, ವಿವಾಹ ಮುಂತಾದವುಗಳ ಬಗೆಯನ್ನು ನಿರೂಪಿಸಬೇಕು.

**ಔರ್ವಮುನಿ** - ನೀನು ಕೇಳಿದ ನಿತ್ಯ ನೈಮಿತ್ತಿಕ ಕ್ರಿಯಾಕಲಾಪಗಳನ್ನು ಹೇಳುತ್ತೇನೆ. ಚಿತ್ತವಿಟ್ಟು ಕೇಳು.

## ಮಕ್ಕಳಿಗೆ ಎಂಥ ಹೆಸರಿಡಬೇಕು !

ಮಗನು ಹುಟ್ಟಿದ ಕೂಡಲೆ ತಂದೆಯು ಜಾತಕರ್ಮಾದಿ ಎಲ್ಲ ಕ್ರಿಯೆಗಳನ್ನು ಆಭ್ಯುದಯಿಕ ಶ್ರಾದ್ಧವನ್ನೂ ಮಾಡಬೇಕು. ಬ್ರಾಹ್ಮಣರ ಭೋಜನ ಮಾಡಿಸಬೇಕು. ಹತ್ತು ದಿನವಾದ ಬಳಿಕ ತಂದೆಯು ಮಗನಿಗೆ ಹೆಸರು ಇಡಬೇಕು. ಬ್ರಾಹ್ಮಣರು ಹೆಸರಿನ ಕೊನೆಗೆ ಶರ್ಮ, ಕ್ಷತ್ರಿಯರು ವರ್ಮ, ವೈಶ್ಯರು ಗುಪ್ತ, ಶೂದ್ರರು ದಾಸ, ಎಂಬ ಶಬ್ದಗಳನ್ನು ಜೋಡಿಸಬೇಕು. ಮತ್ತು ಗಂಡು ಹುಡುಗರ ಹೆಸರು ಪುರುಷ ವಾಚಕವಾಗಿದ್ದು ಯಾವದಾದರೂ ದೇವರ ಹೆಸರಾಗಿರಬೇಕು. ಉದಾಹರಣೆ - ವಿಷ್ಣು ಶರ್ಮ, ಸೋಮಶರ್ಮ, ರಾಮಶರ್ಮ, ಎಂದು ಮುಂತಾಗಿ ಬ್ರಾಹ್ಮಣರೂ,

ರವಿವರ್ಮ, ಇಂದ್ರವರ್ಮ, ಕೃತವರ್ಮ, ಮುಂತಾಗಿ ಕ್ಷತ್ರಿಯರೂ, ಚಂದ್ರಗುಪ್ತ, ವಿಷ್ಣುಗುಪ್ತ, ಮೊದಲಾಗಿ ವೈಶ್ಯರೂ ರಾಮದಾಸ, ಹರಿದಾಸ, ಕೃಷ್ಣದಾಸ, ಎಂದು ಮುಂತಾಗಿ ಶೂದ್ರರೂ ಹೆಸರಿಡುವುದು ಪ್ರಶಸ್ತವಾಗಿದೆ. ಹೆಸರು ಅರ್ಥಹೀನವಾಗಿರಬಾರದು. ಅದರಲ್ಲಿ ಅಪಶಬ್ದವಿರಕೂಡದು. ಜಿಗುಪ್ಸೆಯನ್ನು ತರುವಂಥ ಅರ್ಥ ಇರಕೂಡದು. ಅಮಂಗಳ ಧ್ವನಿಯು ಅದರಿಂದ ಹೊರಡಬಾರದು. ಸಮಾನವಾದ ಅಕ್ಷರಗಳು ಅದರಲ್ಲಿ ಇರಬೇಕು. ಹೆಸರು ಬಹಳ ಉದ್ದವಾಗಬಾರದು. ಅತೀ ಚಿಕ್ಕದೂ ಆಗಬಾರದು. ಅದರಲ್ಲಿ ಒತ್ತಕ್ಷರಗಳು ಬಹಳ ಇರಕೂಡದು. ಸುಲಭವಾಗಿ ಎಲ್ಲರಿಗೂ ಉಚ್ಚರಿಸಲಿಕ್ಕೆ ಬರುವಂತಿರಬೇಕು.

**''ನಾರ್ಥಹೀನಂ ನ ಚಾಶಸ್ತಂ ನಾಪಶಬ್ದಯುತಂ ತಥಾ ।**
**ನಾಮಂಗಲ್ಯಂ ಜಗುಪ್ಸ್ಯಂ ವಾ ನಾಮ ಕುರ್ಯಾತ್ ಸಮಾಕ್ಷರಂ ॥**
**ನಾತಿದೀರ್ಘಂ ನಾತಿಹ್ರಸ್ವಂ ನಾತಿಗುರ್ವಕ್ಷರಾನಿತ್ವಂ**
**ಸುಖೋಚ್ಚಾರ್ಯಂ ತು ತನ್ನಾಮ ಕುರ್ಯಾತ್ ಯತ್ ಪ್ರವಣಾಕ್ಷರಂ''**

ಎಂದು ಹಿಂದಿನ ಹಿರಿಯರು ಹೆಸರಿನ ಚಿಕಿತ್ಸೆ ಮಾಡಿದ್ದಾರೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಹೆಸರು ದೇವರು, ದೇವಭಕ್ತರ, ಅಥವಾ ದೊಡ್ಡವರ ಹೆಸರಾಗಿರಬೇಕು.

ಅನಂತರ ಅನ್ನ ಪ್ರಾಶನ, ಚೌಲ, ಉಪನಯನ ಮುಂತಾದ ಸಂಸ್ಕಾರಗಳನ್ನು ವೇದೋಕ್ತ ವಿಧಿಪೂರ್ವಕವಾಗಿ ಮಾಡಬೇಕು. ತದನಂತರ, ಗುರುಕುಲಕ್ಕೆ ಹೋಗಿ ಗುರುಸೇವೆ ಮಾಡಿ ವಿದ್ಯೆಯನ್ನು ಪಡೆದುಕೊಳ್ಳಬೇಕು. ಎಲ್ಲ ವಿದ್ಯೆಯನ್ನು ಪಡೆದ ಬಳಿಕ ಗುರುಗಳಿಗೆ ಯಥಾಶಕ್ತಿ ಗುರುದಕ್ಷಿಣೆಯನ್ನು ಕೊಡಬೇಕು. ಅನಂತರ ಗೃಹಸ್ಥಾಶ್ರಮಿ ಯಾಗಬೇಕೆಂಬ ಬಯಕೆ ಇದ್ದರೆ ಮದುವೆ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ನೈಷ್ಠಿಕ ಬ್ರಹ್ಮಚರ್ಯ ಸೇವೆ ಮಾಡಬೇಕು. ಇಲ್ಲವೆ ವಾನಪ್ರಸ್ಥಾಶ್ರಮವನ್ನು ಅಂಗೀಕರಿಸಬೇಕು. ಅಥವಾ ಸನ್ಯಾಸಿಯೂ ಆಗಬಹುದು. ಯಾವುದಾದರೂ ಪೂರ್ವಾಪರ ವಿಚಾರ ಮಾಡಿ ಧೃಡ ಸಂಕಲ್ಪಗೈದು ತನಗೆ ಸರಿಕಂಡ ಆಶ್ರಮವನ್ನು ಸ್ವೀಕರಿಸಬೇಕು.

## ಕನ್ಯಾ ಲಕ್ಷಣ. ಕೈಹಿಡಿಯುವ ಕನ್ನೆ ಎಂತಿರಬೇಕು !

ಗೃಹಾಸ್ಥಶ್ರಮಿಯು ಆಗುವ ಇಚ್ಛೆ ಇದ್ದರ ಒಳ್ಳೇ ಕನ್ಯೆಯನ್ನು ಮದುವೆ ಆಗಬೇಕು. ಕನ್ಯೆಯು ತನ್ನ ವಯಸ್ಸಿನ ಏಕತೃತೀಯಾಂಶ ವಯಸ್ಸಿನವಳು ಇರಬೇಕು. ಮತ್ತು ಮದುವೆಯಾಗುವ ಕನ್ಯೆಯು ಅತೀ ಕಪ್ಪು ಅಥವಾ ಅತೀ ಬೆಳ್ಳಗೆ ಇರಬಾರದು. ಕೂದಲು ಇಲ್ಲದ ಅಥವಾ ಮೈ ತುಂಬ ಕೂದಲು ಇದ್ದ ಕನ್ಯೆಯನ್ನು ಮದುವೆ ಆಗಬಾರದು. ಮತ್ತು ಕೀಳು ಕುಲದಲ್ಲಿ ಹುಟ್ಟಿದ, ರೋಗಗ್ರಸ್ತಳಾದ, ಅಂಗಹೀನಳಾದ, ಅಥವಾ ಯಾವುದಾದರೂ ಒಂದು ಅಂಗ ವಿಕೃತವಾದ, ಅಥವಾ ಹೆಚ್ಚಿನ ಅವಯವ ಉಳ್ಳ, ಬಿರುಸು ಮಾತನ್ನು ಆಡುವ ದುಷ್ಟಸ್ವಭಾವದ ಕನ್ಯೆಯನ್ನು ಕೈ ಹಿಡಿಯಬಾರದು. ಮತ್ತು ಕನ್ಯೆಯ ತಾಯಿತಂದೆಗಳಲ್ಲಿ ಏನಾದರೂ ಅನುವಂಶಿಕ ದೋಷಗಳಿದ್ದರೆ ಅಂಥ ಹುಡುಗಿಯನ್ನು ಒರಿಸಬಾರದು. ಮುಖದ ಮೇಲೆ ಮೀಶೆ ಒಡೆದು ಕಾಣುತ್ತಿದ್ದರೆ. ಅಥವಾ ಗಂಡಸಿನ

ಆಕಾರವಿದ್ದರೆ, ಧ್ವನಿಯು ಕರ್ಕಶವಿದ್ದರೆ ಅಥವಾ ಗಂಟಲ ಗುರ್ ಗುರ್ ಅನ್ನುತ್ತಿದ್ದರೆ ಕಣ್ಣು ಗುಡ್ಡೆಗಳು ತಿರುಗುತ್ತಿದ್ದರೆ ಬಹಳ ಕುಳ್ಳಾಗಿದ್ದರೆ, ಅತೀಉದ್ದವಾಗಿದ್ದರೆ, ಮತ್ತು ಮುಖವು ಕ್ರೂರವಾಗಿದ್ದರೆ ಅಂಥ ಕನ್ಯೆಯನ್ನು ಮದುವೆಯಾಗಬಾರದು.

ಬ್ರಾಹ್ಮ, ದೈವ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಎಂದು ವಿವಾಹಗಳು ಎಂಟು ವಿಧವಾಗಿವೆ. ಯಾವ ವರ್ಣದವರಿಗೆ ಯಾವ ವಿಧವಾದ ವಿವಾಹವು ವಿಹಿತವಾಗಿದೆಯೋ ಆ ಪದ್ಧತಿಯಿಂದ ಯೋಗ್ಯಳಾದ ಕನ್ಯೆಯನ್ನು ಮದುವೆ ಆಗಬೇಕು. ವಿವಾಹವಾಗಿ ಧರ್ಮಪತ್ನಿಯನ್ನು ಮಾಡಿಕೊಂಡ ಬಳಿಕ ಅವಳೊಂದಿಗೆ ಗೃಹಸ್ಥ ಧರ್ಮವನ್ನು ಶಾಸ್ತ್ರೋಕ್ತ ರೀತಿಯಿಂದ ಪರಿಪಾಲನೆ ಮಾಡಬೇಕು. ಗೃಹಸ್ಥ ಧರ್ಮವನ್ನು ಪತ್ನಿಯಿಂದ ಒಡಗೂಡಿಕೊಂಡು ಸರಿಯಾಗಿ ಆಚರಿಸಿದರೆ ಮಹಾಫಲವುಂಟು.

## ಕುಟುಂಬಿಗಳು ಪಾಲಿಸಬೇಕಾದ ಸದಾಚಾರ

**ಸಗರರಾಜ** - ಮುನಿಶ್ರೇಷ್ಠಾ, ಗ್ರಹಸ್ಥಾಶ್ರಮಿಯಾದ ಮನುಷ್ಯನಿಗೆ ಇಹಲೋಕ ಮತ್ತು ಪರಲೋಕ ಎರಡಕ್ಕೂ ಬಾಧಕವಾಗದ ಮತ್ತು ಸಾಧಕವಾಗುವ ಸದಾಚಾರವು ಯಾವುದು? ಅದನ್ನು ಕೇಳಬೇಕೆಂದು ನನ್ನ ಮನೀಷೆ.

**ಔರ್ವಮುನಿ** - ಮಹಾರಾಜ, ಸದಾಚಾರದ ಲಕ್ಷಣವನ್ನು ಹೇಳುತ್ತೇನೆ ಕೇಳು. ಸದಾಚಾರಿಯಾದ ಮಾನವನು ಎರಡೂ ಲೋಕಗಳನ್ನು ಗೆದ್ದಂತೆ. ಸದಾಚಾರ ಎಂದರೆ ಸತ್ + ಆಚಾರ. ಸತ್ ಎಂದರೆ ಸಾಧುಗಳು ಅರ್ಥಾತ್ ದೋಷವಿಲ್ಲದವರು. ಇಂಥ ಸಜ್ಜನರ ಆಚಾರವೇ ಸದಾಚಾರವೆಂದು ಕರೆಯಲ್ಪಡುತ್ತದೆ. ಸಪ್ತಮಹರ್ಷಿಗಳೂ ಮನುಗಳೂ ಪ್ರಜಾಪತಿಗಳೂ ಸದಾಚಾರವನ್ನು ಹೇಳುವವರೂ ಮಾಡುವವರೂ ಆಗಿರುತ್ತಾರೆ.

## ಸಜ್ಜನರ ದಿನಚರಿ ಹೇಗಿರಬೇಕು ?

ಬುದ್ಧಿವಂತನಾದ ಮಾನವನು ಬ್ರಾಹ್ಮ ಮುಹೂರ್ತ ಅಂದರೆ ಉಷಃಕಾಲದಲ್ಲಿ ಎದ್ದು ಧರ್ಮವನ್ನೂ, ಧರ್ಮಕ್ಕೆ ವಿರುದ್ಧವಾಗದ ಅರ್ಥವನ್ನೂ, ಇವೆರಡಕ್ಕೂ ಅವಿರೋಧವಾದ ಕಾಮವನ್ನೂ, ಮನಸ್ಸಿನಿಂದ ಚಿಂತಿಸಬೇಕು. ಆ ಮೇಲೆ ಬೆಳಗಾಗುವ ಮುನ್ನ ಎದ್ದು ಮನೆಯಿಂದ ದೂರದಲ್ಲಿ ಮಲಮೂತ್ರ ವಿಸರ್ಜನೆಯನ್ನು ಮಾಡಬೇಕು. ವಿಧಿಪೂರ್ವಕವಾಗಿ ಮೃತ್ತಿಕಾಶೌಚವನ್ನು ಮಾಡಿಕೊಳ್ಳಬೇಕು. ಮಣ್ಣು ನೀರುಗಳಿಂದ ಒಂದು ಸಲ ಲಿಂಗವನ್ನು, ಮೂರು ಬಾರಿ ಪೃಷ್ಠವನ್ನೂ, ಹತ್ತು ಸಾರೆ ಎಡಕೈಯನ್ನೂ ತೊಳೆದುಕೊಳ್ಳಬೇಕು. ಆ ಮೇಲೆ ಮತ್ತೆ ಎರಡೂ ಕೈಗಳನ್ನು ಏಳು ಸಾರೆ ಶುದ್ಧವಾದ ಮಣ್ಣು ನೀರುಗಳಿಂದ ತೊಳೆಯಬೇಕು. ಅನಂತರ ಆಚಮನ ಮಾಡಿ, ತಲೆ ಬಾಚಿಕೊಂಡು, ಮಂಗಲ ದ್ರವ್ಯಗಳನ್ನು ಹಚ್ಚಿಕೊಂಡು ಕನ್ನಡಿಯಲ್ಲಿ ನೋಡಿಕೊಂಡು ತನಗೆ ವಿಹಿತ ವೃತ್ತಿಯಿಂದ ಧರ್ಮಮಾರ್ಗದಲ್ಲಿ ಧನ ಸಂಪಾದನೆಯನ್ನು ಮಾಡುವ ಉದ್ಯೋಗ, ವ್ಯವಹಾರ ಕಾರ್ಯಗಳನ್ನು ಕೈಕೊಳ್ಳಬೇಕು. ಯಾಕೆಂದರೆ ಯಜ್ಞಯಾಗಾದಿ ದೇವತಾ ಕಾರ್ಯಗಳಾಗಲಿ, ದಾನ ಧರ್ಮಾದಿ ಪರೋಪಕಾರ ಕೆಲಸಗಳಾಗಲೀ ಕುಟುಂಬ

ಪೋಷಣೆಯಾಗಲಿ ದ್ರವ್ಯಾಧೀನವಾಗಿರುತ್ತವೆ. ಹೀಗೆ ಧನಾರ್ಜನೆಯ ಕಾರ್ಯವನ್ನು ಮುಗಿಸಿ ಮಧ್ಯಾಹ್ನದಲ್ಲಿ ನದೀ ಪುಷ್ಕರಿಣೀ ಅಥವಾ ಹಳ್ಳ, ಇದಾವದೂ ಇಲ್ಲದಿದ್ದರೆ ಬಾವಿಯಲ್ಲಿ ಸ್ನಾನಮಾಡಬೇಕು. ಅದಕ್ಕೆ ಅನುಕೂಲವಿಲ್ಲದಿದ್ದರೆ ಅಲ್ಲಿದ್ದ ನೀರನ್ನು ಎತ್ತಿ ತಂದು ಮನೆಯಲ್ಲಿಯೇ ಸ್ನಾನ ಮಾಡಬೇಕು. ಸ್ನಾನಾನಂತರದಲ್ಲಿ ಮಡಿ ವಸ್ತ್ರವನ್ನು ಉಟ್ಟು ದೇವತೆಗಳಿಗೂ ಋಷಿಗಳಿಗೂ, ಪಿತೃಗಳಿಗೂ ನೀರಿನಿಂದ ತರ್ಪಣವನ್ನು ಕೊಡಬೇಕು. ಆ ಮೇಲೆ ಮತ್ತೆ ಆಚಮನ ಮಾಡಿ ಸೂರ್ಯನಿಗೆ ಜಲಾಂಜಲಿಯನ್ನು ಕೊಡಬೇಕು. ಆಗ ಈ ಕೆಳಗಿನ ಮಂತ್ರವನ್ನು ಹೇಳಬೇಕು.

"ನಮೋ ವಿವಸ್ವತೇ ಬ್ರಹ್ಮಭಾಸ್ವತೇ ವಿಷ್ಣು ತೇಜಸೇ ॥
ಜಗತ್ಸವಿತ್ರೇ ಶುಚಯೇ ಸವಿತ್ರೇ ಕರ್ಮ ಸಾಕ್ಷಿಣೇ
ಎಂಬ ಮಂತ್ರವನ್ನು ಹೇಳಬೇಕು.

ಈ ಮಂತ್ರದಿಂದ ಸೂರ್ಯನಿಗೆ ಜಲಾಂಜಲಿಯನ್ನಿತ್ತು ತನ್ನ ಇಷ್ಟದೇವತೆಯ ಪೂಜೆಯನ್ನೂ ತನ್ನ ಗೃಹ ದೇವತೆಯ ಪೂಜೆಯನ್ನೂ ಮಾಡಬೇಕು. ನಿರ್ಮಾಲ್ಯ ವಿಸರ್ಜನೆ, ಅಭಿಷೇಕ, ಪುಷ್ಪಾರ್ಚನೆ, ಧೂಪ, ದೀಪ, ನೈವೇದ್ಯ,ಮುಂತಾದ ವಿಧಿ ವಿಧಾನಗಳಿಂದ ದೇವಪೂಜೆಯನ್ನು ಮಾಡಿ ಅನಂತರ ಅಗ್ನಿಹೋತ್ರವನ್ನು ಮಾಡಬೇಕು. ಅಗ್ನಿಹೋತ್ರದಲ್ಲಿ ಮೊದಲು ಬ್ರಹ್ಮನಿಗೂ ಆ ಬಳಿಕ ಕ್ರಮವಾಗಿ ಪ್ರಜಾಪತಿ, ಗೃಹ್ಯ ದೇವತೆ, ಕಾಶ್ಯಪ ಮತ್ತು ಅನುಮತಿ ಮುಂತಾದವರಿಗೂ ಭಕ್ತಿಯಿಂದ ಆಹುತಿಗಳನ್ನು ಕೊಡಬೇಕು. ಉಳಿದ ಹವ್ಯವನ್ನು ಪೃಥ್ವಿ ಮತ್ತು ಮೇಘಗಳ ಉದ್ದೇಶದಿಂದ ಉದಕ ಪಾತ್ರದಲ್ಲಿಯೂ ಧಾತ ವಿಧಾತರ ಉದ್ದೇಶದಿಂದ ಬಾಗಿಲದ ಎರಡೂ ಬದಿಗಳಲ್ಲಿಯೂ ಮತ್ತು ಬ್ರಹ್ಮನ ಉದ್ದೇಶದಿಂದ ಮಧ್ಯದಲ್ಲಿಯೂ ಆಹುತಿಯನ್ನು ಇಡಬೇಕು.

## ಅಹಿಂಸಾತ್ಮಕವಾದ ಬಲಿ

ಬುದ್ಧಿವಂತನಾದ ಮನುಷ್ಯನು ಪೂರ್ವ ದಕ್ಷಿಣ ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಕ್ರಮವಾಗಿ ಇಂದ್ರ, ಯಮ, ವರುಣ ಮತ್ತು ಚಂದ್ರ ಇವರಿಗಾಗಿ ಹೋಮ ಮಾಡಿ ಉಳಿದ ಸಾಮಗ್ರಿಗಳಿಂದ ಬಲಿಕೊಡಬೇಕು. ಪೂರ್ವ ಮತ್ತು ಉತ್ತರ ದಿಕ್ಕುಗಳ ನಡುವೆ ಈಶಾನ್ಯದಲ್ಲಿ ಧನ್ವಂತರಿ ಬಲಿಯನ್ನು ಇಡಬೇಕು. ನಂತರ ವೈಶ್ವದೇವ, ಬಲಿಹರಣ, ಕಾರ್ಯಗಳನ್ನು ಮಾಡಬೇಕು. ತದುತ್ತರ ಸಮಯದಲ್ಲಿ ವಾಯುವ್ಯ ಕೋಣದಲ್ಲಿ ವಾಯುವಿಗೂ ಮತ್ತು ಇತರ ಎಲ್ಲ ದಿಕ್ಕುಗಳಲ್ಲಿ ತತ್ತದಭಿಮಾನಿ ದೇವತೆಗಳಿಗೂ ಬಲಿ ಕೊಡಬೇಕು. ಇದೇ ಪ್ರಕಾರ ಬ್ರಹ್ಮ, ಅಂತರಿಕ್ಷ ಮತ್ತು ಸೂರ್ಯನಿಗೂ ಅವರ ಸ್ಥಾನಾನುಸಾರ ಬಲಿಕೊಡಬೇಕು. ಆ ಮೇಲೆ ವಿಶ್ವದೇವತೆಗಳಿಗೂ ವಿಶ್ವಭೂತಗಳಿಗೂ ವಿಶ್ವಪತಿಗಳಿಗೂ ಪಿತೃಗಳಿಗೂ ಯಕ್ಷರಿಗೂ ಯಥಾಸ್ಥಾನ ಬಲಿಗಳನ್ನು ಕೊಡಬೇಕು. ಅನಂತರ ದೇವತಾ ಆದಿಯಾಗಿ ಎಲ್ಲ ಪ್ರಾಣಿಗಳಿಗೂ ಈ ಕೆಳಗಿನ ಮಂತ್ರದಿಂದ ಬಲಿಯನ್ನು ಇಡಬೇಕು.

''ದೇವಾಃ ಮನುಷ್ಯಾಃ ಪಶವೊ ವಯಾಂಸಿ ।
ಸಿದ್ಧಾಸ್ಸಯಕ್ಷೋರಗ ದೈತ್ಯ ಸಂಘಾಃ ॥
ಪ್ರೇತಾಃ ಪಿಶಾಚಾಸ್ತರವಸ್ಸಮಸ್ತಾಃ।
ಯೇಚಾನ್ನ ಮಿಚ್ಛಂತಿ ಮಯಾತ್ರ ದತ್ತಂ ॥
''ಪಿಪೀಲಿಕಾಃ ಕೀಟ ಪತಂಗಕಾದ್ಯಾಃ ।
ಬುಭುಕ್ಷಿತಾಃ ಕರ್ಮ ನಿಬಂಧ ಬದ್ಧಾಃ॥
ಪ್ರಯಾಂತು ತೇ ತೃಪ್ತಿ ಮಿದಂ ಮದನ್ನಂ।
ತೇಭ್ಯೋ ವಿಸೃಷ್ಟಂ ಸುಖಿನೋ ಭವಂತು'' ॥
ಯೇಷಾಂ ನ ಮಾತಾ ನ ಪಿತಾ ನ ಬಂಧು
ರ್ನೈವಾನ್ನ ಸಿದ್ಧಿರ್ನ ತಥಾನ್ನಮಸ್ತಿ ॥
ತತ್ತೃಪ್ತಯೇಽನ್ನಂ ಭುವಿ ದತ್ತ ಮೇತತ್
ತೇ ಯಾಂತು ತೃಪ್ತಿಂ ಮುದಿತಾ ಭವಂತು'' ॥

''ದೇವ, ಮನುಷ್ಯ, ಪಶು, ಪಕ್ಷಿ ಸಿದ್ಧ, ಯಕ್ಷ, ಸರ್ಪ, ದೈತ್ಯ, ಪ್ರೇತ, ಪಿಶಾಚ ಮತ್ತೂ ಎಲ್ಲ ಗಿಡಗಳಿಗೂ, ಇರುವೆ, ಕ್ರಿಮಿ, ಕೀಟಗಳಿಗೂ, ಹಾಗೂ ಕರ್ಮ ಬಂಧನದಿಂದಾಗಿ ಹಸಿವೆಯಿಂದ ಆತುರವಾದ, ನನ್ನಿಂದ ಅನ್ನವನು ಅಪೇಕ್ಷಿಸುವ, ಎಲ್ಲ ಜೀವಜಂತುಗಳಿಗೂ ನಾನು ಇಲ್ಲಿ ಅನ್ನವನ್ನು ನೀಡುತ್ತೇನೆ. ಅವೆಲ್ಲವೂ ಇದರಿಂದ ತೃಪ್ತಿ ಹೊಂದಿ ಆನಂದವನ್ನು ಪಡೆಯಲಿ'' ''ಯಾರಿಗೆ ತಾಯಿ ಇಲ್ಲವೋ ತಂದೆ ಇಲ್ಲವೋ, ಬಂಧು ಇಲ್ಲವೋ, ಬಳಗ ಇಲ್ಲವೋ, ಅನ್ನಕ್ಕೆ ಗತಿ ಇಲ್ಲವೋ ಅವರೆಲ್ಲರ ತೃಪ್ತಿಗಾಗಿ ನಾನು ಇಲ್ಲಿ ನೆಲದ ಮೇಲೆ ಈ ಅನ್ನವನ್ನು ಇಟ್ಟಿದ್ದೇನೆ. ಅವರೆಲ್ಲರೂ ಇದರಿಂದ ತೃಪ್ತಿಯಾಗಿ ಸಂತೋಷವನ್ನು ಹೊಂದಲಿ''

''ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ''

ಹೀಗೆ ವಿಚಾರಮಾಡಿ ಮನುಷ್ಯನು ಸರ್ವ ಪ್ರಾಣಿಗಳ ಉಪಕಾರಕ್ಕಾಗಿ ಅನ್ನದಾನವನ್ನು ಮಾಡಬೇಕು. ಅನಂತರ ನಾಯಿ, ಚಂಡಾಲ, ಮತ್ತೂ ಹಕ್ಕಿ ಪಕ್ಷಿಗಳಿಗೂ ಮತ್ತೂ ದೀನ ದಲಿತರಿಗೂ, ಮಕ್ಕಳಿಲ್ಲದ ಅನಾಥ ಮುದುಕರಿಗೂ ಊಟ ಮಾಡಲಿಕ್ಕೆಂದು ವಿಪುಲವಾಗಿ ಒಂದು ಭಾಗ ಬಲಿಯನ್ನು ನೀಡಬೇಕು.

''ಅತಿಥಿದೇವೋ ಭವ''

ಅನಂತರ ಒಂದು ಹಸುವನ್ನು ಹಿಂಡುವ ಹೊತ್ತಿನಷ್ಟು ಸಮಯ ಮನೆಯ ಹೊರಗೆ ನಿಂತು ಅತಿಥಿಗಳ ದಾರಿಯನ್ನು ಕಾಯಬೇಕು. ಯಾರೂ ಅಥಿತಿಗಳು ಬಾರದಿದ್ದರೆ ಮನೆಯ ಒಳಗೆ ಹೋಗಿ ಯಥೇಚ್ಛವಾಗಿ ಊಟ ಮಾಡಬಹುದು. ಯಾರಾದರೂ ಅತಿಥಿಗಳು ಬಂದರೆ ಸ್ವಾಗತ ಮಾಡಿ ಸತ್ಕರಿಸಬೇಕು. ಆಸನ ಕೊಟ್ಟು ಗೌರವಿಸಬೇಕು. ಕಾಲು ತೊಳೆದು ಕೈ ಮುಗಿಯಬೇಕು. ಭಕ್ತಿಯಿಂದ ಊಟಕ್ಕೆ ಹಾಕಿ ಪ್ರೀತಿಯಿಂದ

ಮಾತನಾಡಿಸಬೇಕು. ಅವರು ಭೋಜನೋತ್ತರ ಊರಿಗೆ ಹೊರಟರೆ ಅವರನ್ನು ಊರಹೊರಗೆ ತುಸು ದೂರದವರೆಗೆ ಬೆಂಬಲಿಸಿ, ಸವಿ ಮಾತಿನಿಂದ ಅವರಿಗೆ ಸಂತೋಷವನ್ನುಂಟುಮಾಡಿ ಬೀಳ್ಕೊಡಬೇಕು. ದೇಶಾಂತರದಿಂದ ಬಂದ ಅತಿಥಿಯ ಹೆಸರು ದೆಶೆ ಗೊತ್ತಿಲ್ಲದಿದ್ದರೂ ಅವನನ್ನು ಆದರಿಸಬೇಕು. ಬಂದ ಅತಿಥಿಗೆ ''ಏನು ಓದಿರುವಿ ? ಎಷ್ಟು ಅಧ್ಯಯನವಾಗಿದೆ! ನಿನ್ನ ಆಚರಣ ಹೇಗೆ! ಕುಲ ಎಂಥದು! ಗೋತ್ರಪ್ರವರಗಳು ಏನು ?'' ಎಂದು ಮುಂತಾಗಿ ಪ್ರಶ್ನೆಗಳ ಸುರಿಮಳೆ ಮಾಡದೆ 'ಅತಿಥಿದೇವ' ಈ ಅತಿಥಿಯಲ್ಲಿ ದೇವರೇ ಬಂದು ಕೂತಿದ್ದಾನೆ' ಎಂದು ಭಾವಿಸಿ ಸ್ವಾಗತ ಸತ್ಕಾರ ಮಾಡಿ ಊಟಕ್ಕೆ ಹಾಕಬೇಕು. ಮತ್ತು ಪಿತೃಗಳನ್ನು ಉದ್ದೇಶಿಸಿ ಪ್ರತಿನಿತ್ಯವೂ ಒಬ್ಬ ಬ್ರಾಹ್ಮಣನಿಗೆ ಊಟ ಹಾಕಬೇಕು. ಆದರೆ ಈ ಪಿತೃ ಉದ್ದೇಶದ ಬ್ರಾಹ್ಮಣನು ಮಾತ್ರ ಗೊತ್ತಿಲ್ಲದವನಾಗಿರಬಾರದು.

ಕುಲ ಆಚಾರ ವಿಚಾರಗಳನ್ನೆಲ್ಲ ತಿಳಿದು ಸದಾಚಾರ ಸಂಪನ್ನನಾದ, ಸತ್ಕುಲ ಪ್ರಸೂತನಾದ, ಅನುದಿನವೂ ತನ್ನ ಮನೆಯಲ್ಲಿ ಪಂಚಮಹಾಯಜ್ಞಗಳನ್ನು ಮಾಡುತ್ತಲಿರುವ, ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನನ್ನು ಕರೆದು ''ಮನುಷ್ಯೇಭ್ಯೋಹಂತ'' ಇತ್ಯಾದಿ ಮಂತ್ರೋಚ್ಚಾರಣ ಪೂರ್ವಕವಾಗಿ ಮೊದಲೇ ಬೇರೆ ತೆಗೆದಿರಿಸಿದ 'ಹಂತಕಾರ' ಎಂಬ ಅನ್ನದಿಂದ ಊಟಮಾಡಿಸಬೇಕು. ಈ ರೀತಿಯಾಗಿ ದೇವತಾ, ಅತಿಥಿ, ಮತ್ತು ಬ್ರಾಹ್ಮಣ, ಈ ಮೂವರಿಗೂ ಭಿಕ್ಷೆಯನ್ನು ನೀಡಿ, ಯೋಗ್ಯತೆ ಇದ್ದರೆ ಸನ್ಯಾಸಿಗಳನ್ನೂ ಬ್ರಹ್ಮಚಾರಿಗಳನ್ನೂ ಬರಮಾಡಿಕೊಂಡು ಅವರ ಇಚ್ಛಾನುಸಾರ ಭೋಜನ ಮಾಡಿಸಬೇಕು. ಅತಿಥಿ, ಬ್ರಾಹ್ಮಣ, ಸನ್ಯಾಸಿ, ಬ್ರಹ್ಮಚಾರಿ, ಇವರು ನಾಲ್ವರಿಗೆ 'ಭಿಕ್ಷು' ಎಂದು ಹೆಸರು. ಅತಿಥಿಗಳು ನಿರಾಶರಾಗಿ ಮನೆಯಿಂದ ಹಿಂತಿರುಗಿದರೆ ಮನೆಯ ಒಡೆಯನಿಗೆ ಅವರ ಪಾಪಗಳೆಲ್ಲವೂ ಬರುತ್ತವೆ. ಇವನ ಪುಣ್ಯವು ಅವರಿಗೆ ಹೋಗುತ್ತದೆ. ಧಾತಾ, ಪ್ರಜಾಪತಿ, ಇಂದ್ರ, ಅಗ್ನಿ, ಅಷ್ಟವಸುಗಳು, ಮತ್ತು ಸೂರ್ಯ ಇಷ್ಟು ದೇವತೆಗಳು ಅತಿಥಿಯಲ್ಲಿ ಇದ್ದು ಯಜಮಾನನು ನೀಡಿದ ಅನ್ನವನ್ನು ಉಣ್ಣುತ್ತಾರೆ ಆದುದರಿಂದ ಅತಿಥಿಯನ್ನು ಬಿಟ್ಟು ಊಟಮಾಡಬಾರದು. ಹಾಗೆ ಉಂಡರೆ ಪಾಪವನ್ನೇ ಉಂಡಂತೆ.

## ಒಡೆಯನ ಊಟ ಕಡೆಯಲ್ಲಿ

ಹೀಗೆ ಅತಿಥಿ ಅಭ್ಯಾಗತರ ಊಟವಾದ ನಂತರ ತಮ್ಮ ಮನೆಯಲ್ಲಿ ಬೇನೆಯವರಿಗೂ, ಬಸಿರು ಹೆಂಗಸರಿಗೂ, ಮುದುಕರಿಗೂ, ಚಿಕ್ಕಮಕ್ಕಳಿಗೂ ಊಟಕ್ಕೆ ಹಾಕಬೇಕು. ಯಜಮಾನನಾದವನು ಇವರೆಲ್ಲರದೂ ಆದ ಬಳಿಕ ಕೊನೆಗೆ ಊಟ ಮಾಡಬೇಕು. ಸ್ನಾನಮಾಡದೆ ಉಂಡರೆ ಮಲವನ್ನು ತಿಂದಂತೆ. ಜಪ ಆನ್ಹಿಕವಿಲ್ಲದೆ ತಿಂದರೆ ರಕ್ತಮಾಂಸವನ್ನು ಭಕ್ಷಿಸಿದಂತೆ. ನೈವೇದ್ಯ ಇಲ್ಲದೆ ಅನ್ನವನ್ನು ಉಂಡರೆ ಮೂತ್ರ ಪಾನ ಮಾಡಿದಂತೆ. ರೋಗಿ, ಬಸಿರು ಹೆಂಗಸು, ಬಾಲಕರಿಗಿಂತ ಮೊದಲು ಉಂಡರೆ ಶೆಗಣೆಯನ್ನು ತಿಂದಂತೆ. ವೈಶ್ವದೇವ ಇಲ್ಲದೆ ಉಂಡರೆ ಹುಳ ಹುಪ್ಪಡಿಗಳನ್ನು ತಿಂದಂತೆ. ಇನ್ನೊಬ್ಬರಿಗೆ ಅನ್ನವನ್ನು ಇಕ್ಕದೆ ತಾನೇ ಮುಕ್ಕಿದರೆ ವಿಷವನ್ನೇ ನೆಕ್ಕಿದಂತೆ. ಆದುದರಿಂದ

ಸ್ನಾನ ಮಾಡಿ, ಶುಚಿರ್ಭೂತನಾಗಿ, ದೇವ ಋಷಿ, ಪಿತೃಗಳಿಗೆ ತರ್ಪಣವನ್ನು ಕೊಟ್ಟು, ಜಪಮಾಡಿ, ದೇವರನ್ನು ಪೂಜೆಗೈದು, ವೈಶ್ವದೇವ ಬಲಿಹರಣಗಳನ್ನು ಮಾಡಿ, ಅತಿಥಿ, ಬ್ರಾಹ್ಮಣ, ಗುರು ಹಿರಿಯರು, ಮಕ್ಕಳು ಮರಿಗಳನ್ನು ಮೊದಲು ಊಟಮಾಡಿಸಿ ನಂತರ ಒಡೆಯನು ತಾನು ಕೊನೆಗೆ ಊಟ ಮಾಡಬೇಕು.

## ಊಟದ ನಿಯಮಗಳು

ಊಟಕ್ಕೆ ಮೊದಲು ಕೈ ಕಾಲು ತೊಳೆದುಕೊಂಡು, ಗಂಧವನ್ನು ಧಾರಣೆ ಮಾಡಿ ನಿರ್ಮಾಲ್ಯ ಹೂ ತುಳಸಿಗಳನ್ನು ಧರಿಸಿ, ಮೈ ಮೇಲಿನ ಬಟ್ಟೆಯನ್ನು ತೆಗೆದಿಟ್ಟು, ಪೂರ್ವ ಅಥವಾ ಉತ್ತರ ದಿಕ್ಕಿಗೆ ಮುಖಮಾಡಿ ಕುಳಿತು ಪ್ರಸನ್ನವಾದ ಮನಸ್ಸಿನಿಂದ ಊಟ ಮಾಡಬೇಕು. ಉಣ್ಣುವ ಅನ್ನವು ರುಚಿಯಾಗಿರಬೇಕು. ಶುಚಿಯಾಗಿರಬೇಕು. ಆರೋಗ್ಯಕರವಾಗಿರಬೇಕು. ದೇವರಿಗೆ ನಿವೇದಿತವಾಗಿ ಪವಿತ್ರವಾಗಿರಬೇಕು. ಅದನ್ನು ಕೆಟ್ಟ ಜನರು ಬಡಿಸಬಾರದು. ಸಿಟ್ಟಿನಿಂದ ನೀಡಬಾರದು. ಉಣ್ಣುವ ಪಾತ್ರವು ಶುದ್ಧವೂ ಸ್ವಚ್ಛವೂ ಆಗಿರಬೇಕು. ಮತ್ತು ಉಣ್ಣುವ ಎಲೆ ಅಥವಾ ತಟ್ಟೆಯನ್ನು ಬೇರೆ ಆಸನ (ಕುರ್ಚಿ ಟೇಬಲ್) ಮೇಲೆ ಇಟ್ಟು ಊಟ ಮಾಡಬಾರದು. ಹೊಲಸು ಸ್ಥಳದಲ್ಲಿ ಅವೇಳೆಯಲ್ಲಿ ಗಲಾಟೆಯಲ್ಲಿ, ಊಟಮಾಡಬಾರದು. ತಂಗಳನ್ನವನ್ನು ಉಣ್ಣಬಾರದು. ಹಣ್ಣು ಕಾಯಿ, ಕಂದಮೂಲ, ಒಣಗಿದ ತರಕಾರಿ, ಮತ್ತು ಸಕ್ಕರೆ ಬೆಲ್ಲದ ಸಿಹಿ ಪಾಕದಲ್ಲಿ ಮಾಡಿದ ಪಕ್ವಾನ್ನ ಮುಂತಾದವುಗಳನ್ನು ಒಂದೆರಡು ದಿನ ಇಟ್ಟು ತಿಂದರೂ ಅವು ತಂಗಳೆನಿಸುವುದಿಲ್ಲ. ಎಲೆಯಲ್ಲಿ ಜೇನು, ಖೀರು, ಮೊಸರು, ತುಪ್ಪ, ಮತ್ತು ಅನ್ನ ಇವುಗಳನ್ನು ಚೆಲ್ಲದಂತೆ ಬೇಕಾದಷ್ಟೇ ಹಾಕಿಸಿಕೊಂಡು ಎಲ್ಲವನ್ನೂ ಉಂಡು ಏಳಬೇಕು. ಊಟಕ್ಕೆ ಕುಳಿತಾಗ ಸಿಟ್ಟಿಗೆ ಏಳಬಾರದು. ಮಾಡಿದ ಅಡುಗೆಯನ್ನು ಬೈಯ್ಯಬಾರದು. ಬಹಳ ಮಾತನ್ನು ಆಡಬಾರದು. ಊಟದ ಪ್ರಾರಂಭದಲ್ಲಿ ಪಾಯಸ ಮೊದಲಾದ ಸಿಹಿಯಾದ ನೀರು ಪದಾರ್ಥ (ದ್ರವ)ವನ್ನೂ ನಡುವೆ ಉಪ್ಪು ಕಾರ ಹುಳಿ ವ್ಯಂಜನಗಳನ್ನೂ ಕೊನೆಗೆ ಮೊಸರು ಮಜ್ಜಿಗೆ ಮುಂತಾದ ದ್ರವಪದಾರ್ಥಗಳನ್ನೂ ಊಟ ಮಾಡಬೇಕು. ಅದರಿಂದ ಬಲ ಬಂದು ಆರೋಗ್ಯವು ಸುಧಾರಿಸುತ್ತದೆ. ನಿಷಿದ್ಧ ಪದಾರ್ಥಗಳನ್ನು ತಿನ್ನಬಾರದು.

## ಉಂಡ ಅನ್ನ ಜೀರ್ಣವಾಗಲಿಕ್ಕೆ ಉಪಾಯ

ಊಟದ ಕೊನೆಗೆ ಉತ್ತರಾಪೋಶನ ತೆಗೆದುಕೊಂಡು ಎದ್ದು ಸ್ವಚ್ಛವಾಗಿ ಮೊಳಕೈವರೆಗೆ ಕೈ ಮತ್ತು ಕಾಲುಗಳನ್ನು ತೊಳೆದುಕೊಳ್ಳಬೇಕು. ಅನಂತರ ಆಚಮನ ಮಾಡಿ ಆಸನದ ಮೇಲೆ ಕುಳಿತು ದೇವರ ಧ್ಯಾನ ಮಾಡಬೇಕು.

''ವಿಷ್ಣುದತ್ತಾ ತಥೈವಾನ್ನಂ ಪರಿಣಾಮಶ್ಚ ವೈ ತಥಾ
ಸತ್ಯೇನ ತೇನ ಮದ್ಭುಕ್ತಂ ಜೀರ್ಯತ್ವನ್ನ ಮಿದಂ ತಥಾ।
ಅನ್ನಂ ಪುಷ್ಟಿಕರಂ ಚಾಸ್ತು ಮಮಾಪ್ಯವ್ಯಾಹತಂ ಸುಖಂ॥

**ಅಗಸ್ತ್ಯರಗ್ನಿರ್ವಡವಾನಲಶ್ಚ ಭುಕ್ತಂ ಮಯಾನ್ನಂ ಜರಯತ್ವಶೇಷಂ ॥**
**ಸುಖಂ ಚ ಮೇ ತತ್ ಪರಿಣಾಮಸಂಭವಂ ಯಚ್ಛಂತ್ವರೋಗೋ ಮಮ ಚಾಸ್ತು ದೇಹೇ'' ॥**

''ನನಗೆ ಉಣ್ಣಲಿಕ್ಕೆ ಈ ಅನ್ನವನ್ನು ಕೊಟ್ಟವ ವಿಷ್ಣು, ಉಣ್ಣುವ ಶಕ್ತಿಕೊಟ್ಟವ ವಿಷ್ಣು, ಉಣ್ಣುವ ಅನ್ನವೂ ವಿಷ್ಣು, ಉಂಡದ್ದನ್ನು ಪಚನ ಮಾಡಿ ದೇಹಕ್ಕೆ ಅದರ ರಸದಿಂದ ಬಲ ಪುಷ್ಟಿಗಳನ್ನು ನೀಡುವವನೂ ಅವನೇ. ಅವನ ದಯೆಯಿಂದ ಸಾನೀಗ ಉಂಡದ್ದೆಲ್ಲವೂ ಪಚನವಾಗಲಿ. ನಾನು ಉಂಡ ಅನ್ನವು ಆರೋಗ್ಯಕರವಾಗಲಿ. ಆದರಿಂದ ನನಗೆ ಸುಖವಾಗಲಿ. ಅಗಸ್ತ್ಯರಂತೆ, ವಡವಾಗ್ನಿಯಂತೆ, ನನ್ನ ಜಠರಾಗ್ನಿಯು ಉದ್ದೀಪಿತವಾಗಿ ಅದರಿಂದ ನನಗೆ ಸುಖವಾಗಲಿ. ನಾನು ಉಂಡ ಅನ್ನವು ಆರೋಗ್ಯಕರವಾಗಲಿ. ನಾನು ಭೋಜನಮಾಡಿದ್ದನ್ನೆಲ್ಲ ಜೀರ್ಣಮಾಡಲಿ. ನನ್ನ ದೇಹವು ಬೇನೆ ಬೇಸರಿಕೆ ಬಾರದಂತೆ ಸುಖ ಶಕ್ತಿಗಳನ್ನು ಪ್ರದಾನಮಾಡಲಿ.'' ಈ ಅರ್ಥದ ಈ ಪದ್ಯಗಳನ್ನು ಹೇಳಿ ಮೆಲ್ಲಮೆಲ್ಲನೇ ಹೊಟ್ಟೆಯ ಮೇಲೆ ಕೈ ಆಡಿಸಬೇಕು. ಅನಂತರ ಆಯಾಸವಾಗದ ಕಾರ್ಯಗಳನ್ನು ಮಾಡಬೇಕು. ಧರ್ಮ, ನ್ಯಾಯ, ನೀತಿಗೆ, ವಿರೋಧವಾಗದಂತೆ ಲೌಕಿಕ ಕಾರ್ಯಗಳನ್ನು ಮಾಡಬೇಕು. ಸಚ್ಛಾಸ್ತ್ರ, ಪಾಠ, ಪ್ರವಚನ, ಶ್ರವಣ, ಮನನಾದಿಗಳನ್ನು ಮಾಡುತ್ತ ಹಗಲು ಹೊತ್ತನು ಕಳೆಯಬೇಕು.

## ಸೂರ್ಯನಿಗೆ ಅರ್ಘ್ಯ ಯಾವಾಗ !

ಸೂರ್ಯಾಸ್ತವಾಗುವುದಕ್ಕಿಂತ ಮೊದಲೇ ಸಂಧ್ಯಾವಂದನೆಮಾಡಿ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು. ಪ್ರಾತಃಕಾಲ ಇನ್ನೂ ಚಿಕ್ಕೆ ಇರುವಾಗಲೇ ನಸುಕಿನಲ್ಲಿಯೇ ಸೂರ್ಯನಿಗೆ ಅರ್ಘ್ಯವನ್ನೀಯಬೇಕು. ಸೂತಕ ಉನ್ಮಾದ, ಅಥವಾ ಏನಾದರೂ ಕಠಿಣಪ್ರಸಂಗವಿಲ್ಲದೆ ಸಕಾಲದಲ್ಲಿ ಸಂಧ್ಯಾವಂದನೆಯನ್ನು ಮಾಡದೇ ಬಿಟ್ಟರೆ ಪಾಪ ಬರುತ್ತದೆ. ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುವುದು. ರಾತ್ರಿ ಕಾಲದಲ್ಲಿಯೂ ಮಾಡಿದ ಅಡಿಗೆಯನ್ನು ದೇವರಿಗೆ ನೈವೇದ್ಯ ತೋರಿಸಿ ಮಂತ್ರವಿಲ್ಲದೆ ವೈಶ್ವದೇವ ಮಾಡಿ ಬಲಿಯನ್ನು ಕೊಡಬೇಕು. ನಾಯಿ ಚಾಂಡಾಲ ಪಕ್ಷಿಗಳಿಗೆ ಬಲಿ ಇತ್ತು ಅತಿಥಿಯ ದಾರಿ ಕಾಯಬೇಕು. ಅತಿಥಿ ಬಂದರೆ ಸ್ವಾಗತ ಸತ್ಕಾರ ಮಾಡಿ ಆದರದಿಂದ ಊಟಕ್ಕೆ ಹಾಕಿ ಅವನಿಗೆ ಹಾಸಿಕೆ ಹೊದಿಕೆ ಮಲಗುವ ಏರ್ಪಾಡನ್ನು ಮಾಡಿಕೊಡಬೇಕು.

## ಶಯನ ವಿಧಿ

ಅನಂತರ ತಾನೂ ಕೈಕಾಲು ತೊಳೆದುಕೊಂಡು ಶುಚಿರ್ಭೂತನಾಗಿ ರಾತ್ರಿಯ ಊಟವನ್ನು ಮುಗಿಸಿ ಕಟ್ಟಿಗೆಯ ಮಂಚ ಅಥವಾ ಫಳಿಯ ಮೇಲೆ ಮಲಗಿ ಕೊಳ್ಳಬೇಕು. ಆ ಮಲಗುವ ಕಾಷ್ಠಶಯನವು ಮುರಕ ಇರಬಾರದು. ಅಂಕುಡೊಂಕಾಗಿರಬಾರದು. ಅದರ ಮೇಲೆ ಏನಾದರೂ ಹಾಸಿ ಪೂರ್ವ ಅಥವಾ ದಕ್ಷಿಣಕ್ಕೆ ತಲೆ ಮಾಡಿ ಮಲಗಿಕೊಳ್ಳಬೇಕು.

ಋತು ಕಾಲ ಮತ್ತು ಶುಭಕಾಲಗಳಲ್ಲಿ ಪತ್ನೀ ಸಂಗವನ್ನು ಮಾಡಬೇಕು. ಯಾವುದಾದರೂ ಕಾರಣದಿಂದ ಪತ್ನಿಯ ಖಿನ್ನಳಾಗಿದ್ದರೆ ಅವಳನ್ನು ಸಂಗ ಸುಖಕ್ಕಾಗಿ ಒತ್ತಾಯ ಪಡಿಸಬಾರದು.

## ಗಂಡಂದಿರಿಗೆ ಕಿವಿಮಾತು

ಮುಟ್ಟಾದಾಗ, ಬೇನೆ ಬಿದ್ದಾಗ ಗರ್ಭಿಣಿಯಿದ್ದಾಗ, ಹಸಿದಾಗ, ಉಂಡು ಹೊಟ್ಟೆ ಭಾರವಾದಾಗ, ಬೇಸತ್ತಾಗ, ಬೇಡವೆಂದಾಗ, ಕೋಪಗೊಂಡಾಗ, ಹೆದರಿದಾಗ ಹೆಂಡತಿಯ ಜೊತೆಗೆ ಶೃಂಗಾರ ಕೇಳಿಗೆ ಇಳಿಯಬಾರದು. ಚತುರ್ದಶಿ ಅಷ್ಟಮಿ, ಅಮಾವಾಸ್ಯಾ, ಹುಣ್ಣಿಮೆ ಮುಂತಾದ ಪರ್ವಕಾಲಗಳಲ್ಲಿ ಸ್ತ್ರೀ ಸಂಗ ಮಾಡಬಾರದು. ಎಣ್ಣೆ ಹಚ್ಚಿಕೊಂಡಾಗ, ಅಭ್ಯಂಗ ಸ್ನಾನಕಾಲದಲ್ಲಿ ಸಂಗ ಮಾಡಬಾರದು. ಮಾಂಸ ಭಕ್ಷಣ ಮಾಡಬಾರದು. ಮಾಡಿದರೆ ಮಹಾ ಪಾಪ, ನರಕ, ಮಲ-ಮೂತ್ರ ತಿಂದಂತೆ. ಇಂಥ ದಿನಗಳಲ್ಲಿ ಪೂಜಾ, ಪಾರಾಯಣ, ಪಾಠ, ಪ್ರವಚನ, ಜಪ, ತಪ, ಮುಂತಾದ ಪುಣ್ಯ ಕಾರ್ಯಗಳನ್ನು ಮಾತ್ರ ಮಾಡಬೇಕು. ಪರಸ್ತ್ರೀ ಸಹವಾಸವನ್ನು ಎಂದೂ ಮಾಡಬಾರದು. ತನ್ನ ಮಡದಿಯೊಡನೆ ಸಹವಾಸ ಮಾಡುವಾಗಲೂ ಕೂಡ ಕಾಮೋತ್ತೇಜಕವಾದ ಔಷಧ ಲೇಪನಾದಿಗಳನ್ನು ಉಪಯೋಗಿಸಕೂಡದು. ದೇವರ ಗುಡಿ, ಗುರುಗಳ ಮನೆ, ಆಶ್ರಮ, ಮಠ, ಬೀದಿ, ತೀರ್ಥ ಕ್ಷೇತ್ರ, ದನಗಳ ಕೊಟ್ಟಿಗೆ, ಸ್ಮಶಾನ, ಉಪವನ, ನದಿ, ಕೆರೆ, ಸರೋವರ, ಮನೆಯ ಅಂಗಳ ಮುಂತಾದ ಸ್ಥಳಗಳಲ್ಲಿ ಸ್ತ್ರೀ ಸಂಗವನ್ನು ಮಾಡಕೂಡದು, ಪರ್ವಕಾಲ, ಸಂಜೆ ಮುಂಜಾವು ಹಗಲು ಹೊತ್ತು, ಮತ್ತು ಮಲ ಮೂತ್ರ ಬಾಧೆಯಾದಾಗ, ಕಾಮ ವ್ಯಾಪಾರವನ್ನು ಮಾಡಬಾರದು. ಯಾಕೆಂದರೆ ಇವುಗಳಿಂದ ರೋಗರುಜಿನಗಳು ಬರುವುದಲ್ಲದೆ ಪಾಪವು ಬರುತ್ತದೆ. ಇವೆಲ್ಲ ಸಾಧಾರಣ ಪಾಪ, ಆದರೆ ಪರಸ್ತ್ರೀಗಮನ ಮಾಡಿದರೆ ಘೋರ ನರಕಾದಿ ಅನರ್ಥ ಉಂಟು. ಆದುದರಿಂದ ಪರಸ್ತ್ರೀ ಸಂಗವನ್ನು ಮನಸಾಪಿ ಮಾಡಬಾರದು. ವ್ಯಭಿಚಾರದಿಂದ ಇಲ್ಲಿ ಆಯುಷ್ಯವು ಕ್ಷೀಣವಾಗುವುದು. ಮುಂದೆ ನರಕ ಪ್ರಾಪ್ತಿ. ಆದುದರಿಂದ ಋತುಕಾಲವೇ ಇರಲಿ ಬೇರೆ ಕಾಲವೇ ಇರಲಿ ಸ್ವಸ್ತ್ರೀ ಸಹವಾಸವನ್ನು ಮಾಡುವುದೇ ವಿಹಿತ.

## ವಿಷ್ಣು ಪುರಾಣದ ಸುಭಾಷಿತ ಸಂದೇಶ ನೀತಿ ಬೋಧಕ ಮಾರ್ಮಿಕ ಮಾತುಗಳು

**ದೇವ ಗೋ ಬ್ರಾಹ್ಮಣಾನ್ ಸಿದ್ದಾನ್ ವೃದ್ಧಾಚಾರ್ಯಾನ್ ತಥಾರ್ಚಯೇತ್**
**ದ್ವಿಕಾಲಂ ಚ ನಮೇತ್ ಸಂಧ್ಯಾಂ ಅಗ್ನೀನ್ ಉಪಚರೇತ್ ತಥಾ ॥೧॥**

ಸದಾಚಾರಿಯಾದ ಮಾನವನು ದೇವರನ್ನು ಪೂಜಿಸಬೇಕು. ಹಸುಗಳನ್ನು ರಕ್ಷಿಸಬೇಕು. ಬ್ರಾಹ್ಮಣರನ್ನು ಗೌರವಿಸಬೇಕು. ಸಿದ್ಧರನ್ನೂ ಜ್ಞಾನವೃದ್ಧರನ್ನೂ ಉಪಚರಿಸಬೇಕು. ಗುರುಗಳನ್ನು ಸೇವಿಸಬೇಕು. ಎರಡೂ ಹೊತ್ತು ಸಂಧ್ಯಾವಂದನೆಯನ್ನು ಮಾಡಬೇಕು. ಅಗ್ನಿ ಕಾರ್ಯವನ್ನು ಮಾಡಬೇಕು.

**ಸದಾನುಪಹತೇ ವಸ್ತ್ರೇ ಪ್ರಶಸ್ತಾಶ್ಚ ಮಹೌಷಧೀಃ ।**
**ಗಾರುಡಾನಿ ಚ ರತ್ನಾನಿ ಬಿಭೃಯಾತ್ ಪ್ರಯತೋ ನರಃ ॥ ೨ ॥**

ಅಂಚು ಸೆರಗುಗಳುಳ್ಳ ಎರಡು ವಸ್ತ್ರಗಳನ್ನೂ, ಒಳ್ಳೆ ಔಷಧಿಗಳನ್ನೂ, ತನ್ನ ಉನ್ನತಿಗೆ ಕಾರಣವಾಗುವ ರತ್ನ ಹರಳನ್ನೂ ಧರಿಸಬೇಕು.

**ಪ್ರಸ್ನಿಗ್ಧಾಮಲಕೇಶಶ್ಚ ಸುಗಂಧಶ್ಚಾರು ವೇಷ ಧೃಕ್**
**ಸಿತಾಸ್ಸುಮನಸೋ ಹೃದ್ಯಾ ಭಿಭೃಯಾಚ್ಚ ನತಃ ಸದಾ ॥ ೩ ॥**

ಸುಂದರವಾದ ವೇಷವನ್ನು ಧರಿಸಬೇಕು. ಕೂದಲುಗಳನ್ನು ಮಿದುವಾಗಿ ಉಳಿಯುವಂತೆ ಆಗಾಗ ಎಣ್ಣೆಯನ್ನು ಸವರಬೇಕು. ದೇವರಿಗೆ ಏರಿಸಿದ ಗಂಧವನ್ನು ಹಚ್ಚಿಕೊಳ್ಳಬೇಕು. ಭಗವಂತ ನಿರ್ಮಾಲ್ಯವಾದ ಸುಗಂಧ ಪುಷ್ಪವನ್ನು ಮುಡಿಯಬೇಕು.

**ಕಿಂಚಿತ್ ಪರಸ್ವಂ ನ ಹರೇನ್ನಾಲ್ಪಮಪ್ಯಪ್ರಿಯಂ ವದೇತ್**
**ಪ್ರಿಯಂ ಚ ನಾನೃತಂ ಬ್ರೂಯಾತ್ ನಾನ್ಯದೋಷಾನುದೀರಯೇತ್ ॥ ೪ ॥**

ಪರರ ಸೊತ್ತನ್ನು ಇನಿತೂ ಅಪಹರಿಸಕೂಡದು. ಇನ್ನೊಬ್ಬರ ಮನಸ್ಸಿಗೆ ನೋವು ಆಗುವಂತಹ ಒಂದು ಮಾತನ್ನೂ ಆಡಬಾರದು. ಪ್ರಿಯವಾದರೂ ಸುಳ್ಳಾಗಿದ್ದರೆ ಅಂಥ ಮಾತನ್ನು ನುಡಿಯಬಾರದು. ಇನ್ನೊಬ್ಬರ ತಪ್ಪನ್ನು ಎಣಿಸಬಾರದು.

**ನಾನ್ಯಸ್ತ್ರಿಯಂ ತಥಾ ವೈರಂ ರೋಚಯೇತ್ ಪುರುಷರ್ಷಭ**
**ನ ದುಷ್ಟಂ ಯಾನಮಾರೋಹೇತ್ ಕೂಲಛಾಯಾಂ ನ ಸಂಶ್ರಯೇತ್ ॥ ೫ ॥**

ಹೆರವರ ಹೆಂಡಂದಿರನ್ನು ಬಯಸಬಾರದು. ಯಾರೊಡನೆಯೂ ದ್ವೇಷವನ್ನು ಬೆಳಸಬಾರದು. ದುಷ್ಟ - ಕುದುರೆ, ಇರಕ ಎತ್ತು, ಮುರಕ ಬಂಡಿ, ಅಥವಾ ಯಂತ್ರ ಕೆಟ್ಟ ವಾಹನಗಳಲ್ಲಿ ಪ್ರಯಾಣ ಮಾಡಬಾರದು ನದಿಯ ದಂಡೆಯಲ್ಲಿ ಮನೆ ಕಟ್ಟಬಾರದು.

**ವಿದ್ವಿಷ್ಟ ಪತಿತೋನ್ಮತ್ತ ಬಹು ವೈರಾದಿ ಕೀಟಕೈಃ**
**ಬಂಧಕೀ ಬಂಧಕೀ ಭರ್ತುಃ ಕ್ಷುದ್ರಾನೃತ ಕಥೈಃ ಸಹ ॥ ೬ ॥**

**ತಥಾತಿವ್ಯಯ ಶೀಲೈಶ್ಚ ಪರಿವಾದರತೈಃ ಶಟೈಃ**
**ಬುಧೋ ಮೈತ್ರೀಂ ನ ಕುರ್ವೀತ ನೈಕಃ ಪಂಥಾನಮಾಶ್ರಯೇತ್ ॥ ೭ ॥**

ಸಮಾಜವನ್ನು ಎದುರು ಹಾಕಿಕೊಂಡ ಮನುಷ್ಯ, ಅಥವಾ ಜಾತಿ ಭ್ರಷ್ಟ, ಉನ್ಮತ್ತ ಗ್ರಾಮ ಕಂಟಕ, ದಾರಿಬಿಟ್ಟು ಹೆಣ್ಣು, ಹೆಣ್ಣನ್ನು ಮಾರುವವ, ಸುಳ್ಳು ಹೇಳುವವ, ದುಂದುಗಾರ, ಲೋಕ ನಿಂದಕ, ನೀಚ, ಇಂಥ ಜನರ ಜೊತೆಗೆ ಸ್ನೇಹವನ್ನು ಮಾಡತಕ್ಕದಲ್ಲ. ದುರ್ಗಮವಾದ ಮಾರ್ಗದಲ್ಲಿ ಒಬ್ಬನೇ ಪ್ರಯಾಣ ಬೆಳೆಸಬಾರದು.

**ನಾವಗಾಹೇಜ್ಜಲೌಘಸ್ಯ ವೇಗಮಗ್ರೇ ನರೇಶ್ವರ ।**
**ಪ್ರದೀಪ್ತಂ ವೇಶ್ಮ ನ ವಿಶೇನ್ನಾರೋಹೇಚ್ಛಿಖರಂ ತರೋಃ ॥ ೮ ॥**

ನೀರಿನಲ್ಲಿ ಸೆಳವು ಇದ್ದಾಗ ಪ್ರವಾಹಕ್ಕೆ ಎದುರಾಗಿ ಈಸಬಾರದು. ಉರಿಯುವ ಮನೆಯ ಒಳಗೆ ಹೋಗಬಾರದು. ಮರದ ತುದಿಗೆ ಏರಬಾರದು.

**ನ ಕುರ್ಯಾರ್ದ್ದಂತ ಸಂಘರ್ಷಂ ಕುಷ್ಣೀಯಾಚ್ಛ ನ ನಾಸಿಕಾಮ್**
**ನಾಸಂವೃತಮುಖೊ ಜೃಂಭೇತ್ ಶ್ವಾಸಕಾಸೌ ವಿಸರ್ಜಯೇತ್ ॥೯॥**

ನಾಲ್ಕುಜನರ ಜೊತೆಗಿದ್ದಾಗ ಹಲ್ಲು ತಿನ್ನಬಾರದು. ಮೂಗನ್ನು ಕೆದರಬಾರದು. ಆಕಳಿಸುವಾಗ ಬಾಯಿ ಮುಚ್ಚಿಕೊಳ್ಳದೇ ಇರಬಾರದು. ಬಾಯಿ ತೆರೆದು ಉಸಿರಾಡಿಸಬಾರದು.

**ನೋಚ್ಚೈರ್ಹಸೇತ್ ಸಶಬ್ದಂ ಚ ನ ಮುಂಚೇತ್ ಪವನಂ ಬುಧಃ**
**ನಖಾನ್ ನ ಖಾದೇಥ್ ಭಿಂದ್ಯಾಚ್ಛ ನ ತೃಣಂ ನ ಮಹೀಂ ಲಿಖೇತ್॥೧೦॥**

ದೊಡ್ಡ ದನಿಯಿಂದ ಸದ್ದು ಮಾಡುತ್ತ ಅಟ್ಟಾಹಸ ಮಾಡಿ ನಗಬಾರದು. (ಜನಮಧ್ಯದಲ್ಲಿ) ಅಪಾನವಾಯುವನ್ನು ಬಿಡಬಾರದು. ಉಗುರು ಕಡಿಯಬಾರದು ಹುಲ್ಲು ಕಡ್ಡಿ ಕಚ್ಚಬಾರದು. ನೆಲದ ಮೇಲೆ ಬರೆಯಬಾರದು.

**ನ ಶ್ಮಶ್ರುಂ ಭಕ್ಷಯೇಲ್ಲೋಷ್ಠಂ ನ ಮೃದ್ನೀಯಾದ್ ವಿಚಕ್ಷಣಃ**
**ಜ್ಯೋತೀಂಷ್ಯಮೇಧ್ಯ ಶಸ್ತಾನಿ ನಾಭಿವೀಕ್ಷೇತ ಚ ಪ್ರಭೋ ॥೧೧॥**

ಬಾಯಲ್ಲಿ ಬೀಳುವಷ್ಟು ಮೀಶೆ ಬೆಳಸಬಾರದು. ಕಲ್ಲು ಕಟೆಯಬಾರದು. ಅಮಂಗಲ ಗ್ರಹಗಳನ್ನೂ ಹೊಲಸು ಪದಾರ್ಥಗಳನ್ನೂ ನೋಡಬಾರದು

**ನಗ್ನಾಂ ಪರಸ್ತ್ರಿಯಂ ಚೈವ ಸೂರ್ಯಂ ಚಾಸ್ತಮಯೋದಯೇ ।**
**ನ ಹುಂಕುರ್ಯಾಚ್ಛವಂ ಗಂಧಂ ಶವಗಂಧೋ ಹಿ ಸೋಮಜಃ ॥೧೨॥**

ಬಟ್ಟೆ ಕಳಚಿದ ಪರಸ್ತ್ರೀಯನ್ನು ನೋಡಬಾರದು. ಸೂರ್ಯೋದಯ ಮತ್ತು ಸೂರ್ಯಾಸ್ತಗಳನ್ನು ನಿರೀಕ್ಷಿಸಬಾರದು. ಯಾರಾದರು ಸತ್ತಾಗ ಹೆಣ ಹೊರಲು ಹಿಂಜರಿಯಬಾರದು. ಅದರ ಗಂಧದಿಂದ ಹೇಸಿಕೊಳ್ಳಬಾರದು. ಯಾಕೆಂದರೆ ಆ ಶವ ಗಂಧದಲ್ಲಿ ಸೋಮನ ಅಂಶವಿರುತ್ತದೆ.

**ಚತುಷ್ಪಥಂ ಚೈತ್ಯತರುಂ ಸ್ಮಶಾನೋಪವನಾನಿ ಚ ।**
**ದುಷ್ಟಸ್ತ್ರೀಸನ್ನಿಕರ್ಷಂ ಚ ವರ್ಜಯೇನ್ನಿಶಿ ಸರ್ವದಾ ॥೧೩॥**

ರಾತ್ರಿ ಕಾಲದಲ್ಲಿ ನಾಲ್ಕು ಬೀದಿಗಳು ಕೂಡುವಲ್ಲಿ ನಿಲ್ಲಬಾರದು. ಚೈತ್ಯ ಗಿಡದ ಕೆಳಗೆ ತಂಗಬಾರದು. ಸ್ಮಶಾನದ ಬದಿಯ ವನದಲ್ಲಿ ಪ್ರವೇಶಿಸಬಾರದು. ದುಷ್ಟ ಹೆಂಗಸರ ಹತ್ತಿರ ವಾಸ ಮಾಡಬಾರದು.

**ಪೂಜ್ಯ-ದೇವ-ದ್ವಿಜ-ಜ್ಯೋತಿ-ಚ್ಛಾಯಾಂ ನಾತಿಕ್ರಮೇದ್ ಬುಧಃ ।**
**ನೈಕಃ ಶೂನ್ಯಾಟವೀಂ ಗಚ್ಛೇತ್ ತಥಾ ಶೂನ್ಯ ಗೃಹೇ ವಸೇತ್ ॥೧೪॥**

ಪೂಜ್ಯರಾದ ದೇವತೆಗಳ, ಮತ್ತು ಬ್ರಾಹ್ಮಣರ ತೇಜಸ್ಸಿನ ನೆರಳನ್ನು ಕೂಡ ಅತಿಕ್ರಮಿಸಬಾರದು. ದಟ್ಟಡವಿಯಲ್ಲಿ ಒಬ್ಬನೇ ಹೋಗಬಾರದು. ಶೂನ್ಯ ಮಂದಿರದಲ್ಲಿ ಒಬ್ಬನೇ ವಾಸ ಮಾಡಬಾರದು.

**ಕೇಶಾಸ್ಥಿ-ಕಂಟ-ಕಾಮೇಧ್ಯ-ಬಲಿ-ಭಸ್ಮ ತುಷಾಂಸ್ತಥಾ ।**
**ಸ್ನಾನಾರ್ದ್ರಧರಣೀಂ ಚೈವ ದೂರತಃ ಪರಿವರ್ಜಯೇತ್ ॥ ॥೧೫॥**

ಎಲ್ಲವು, ಕೂದಲು ಮುಳ್ಳು, ಹೊಲಸು, ಭೂತಗಳಿಗಿಟ್ಟ ಬಲಿ, ಭಸ್ಮ, ಹೊಟ್ಟು, ಮುಂತಾದ ಕೊಳೆ ವಸ್ತುಗಳನ್ನೂ ಸ್ನಾನ ಮಾಡಿ ರೊಜ್ಜಾದ ನೆಲವನ್ನೂ ದೂರದಿಂದಲೇ ಬಿಟ್ಟು ಬಿಡಬೇಕು.

**ನಾನಾರ್ಯಾನಾಶ್ರಯೇತ್ ಕಾಂಶ್ಚಿನ್ನ ಜಿಹ್ಮಂ ರೋಚಯೇದ್ ಬುಧಃ ।**
**ಉಪಸರ್ಪೇನ್ನ ವೈ ವ್ಯಾಲಂ ಚಿರಂ ತಿಷ್ಠೇನ್ನವೋತ್ಥಿತಃ ॥೧೬॥**

ಕೀಳು ಜನರನ್ನು ಆಶ್ರಯಿಸಬಾರದು. ಕಪಟಿಗಳ ಸ್ನೇಹವನ್ನು ಮಾಡಬಾರದು. ಹಾವು ಹರಿದಾಡುವಲ್ಲಿ ಹೋಗಬಾರದು. ಎಚ್ಚರವಾದ ಬಳಿಕ ಹಾಸಿಗೆಯ ಮೇಲೆ ಬಹಳ ಹೊತ್ತು ಮಲಗಬಾರದು.

**ಅತೀವ ಜಾಗರ ಸ್ವಪ್ನೇ ತದ್ವತ್ ಸ್ನಾನಾಸನೇ ಬುಧಃ**
**ನ ಸೇವೇತ ತಥಾ ಶಯ್ಯಾಂ ವ್ಯಾಯಾಮಾಂ ಚ ನರೇಶ್ವರ ॥೧೭॥**

ಬಹಳ ನಿದ್ದೆಯನ್ನು ಮಾಡಬಾರದು. ಅತೀ ನಿದ್ದೆ ಕೆಡಬಾರದು. ದೀರ್ಘ ಕಾಲದವರೆಗೆ ಸ್ನಾನ ಮಾಡಬಾರದು. ಕುಳಿತಲ್ಲೇ ಬಹಳ ಹೊತ್ತು ಕೂಡಬಾರದು. ಬಹಳ ಹೊತ್ತು ಹಾಸಿಗೆಯ ಮೇಲೆ ಮಲಗಬಾರದು. ಅತೀ ವ್ಯಾಯಾಮವನ್ನು ಮಾಡಬಾರದು.

**ದಂಷ್ಟ್ರಿಣಃ ಶೃಂಗಿಣಶ್ಚೈವ ಪ್ರಾಜ್ಞೋ ದೂರೇಣ ವರ್ಜಯೇತ್ ।**
**ಅವಶ್ಯಾಯಂ ಚ ರಾಜೇಂದ್ರ ಪುರೋವಾತಾತಪೌ ತಥಾ ॥೧೮॥**

ಚೂಪು ಹಲ್ಲುಳ್ಳ ಪ್ರಾಣಿಗಳನ್ನು, ಉದ್ದ ಕೋಡುಳ್ಳ ಪಶುಗಳನ್ನು ಕಂಡರೆ ಬುದ್ಧಿವಂತರು ದೂರ ಹಾಯಬೇಕು. ಚಳಿಗೆ ಮೈ ಒಡ್ಡಬಾರದು. ಎದುರು ಗಾಳಿಯಲ್ಲಿ ಪ್ರಯಾಣ ಮಾಡಬಾರದು. ಎದುರು ಬಿಸಿಲನ್ನು ಬಡಿಸಿಕೊಳ್ಳಬಾರದು.

**ನ ಸ್ನಾಯನ್ನ ಸ್ವಪೇನ್ನಗ್ನೋ ನ ಚೈವೋಪಸ್ಪೃಶೇದ್ ಬುಧಃ**
**ಮುಕ್ತಕೇಶಶ್ಚ ನಾಚಾಮೇದ್ ದೇವಾದ್ಯರ್ಚಾಂ ಚ ವರ್ಜಯೇತ್ ॥೧೯॥**

ಬಟ್ಟೆ ಇಲ್ಲದೆ ಸ್ನಾನ ಮಾಡಬಾರದು. ನಗ್ನಾವಸ್ಥೆಯಲ್ಲಿ ಮಲಗಬಾರದು. ವಿವಸ್ತ್ರನಾಗಿ ಯಾವ ವಸ್ತುವನ್ನೂ ಮುಟ್ಟಬಾರದು. ಕೂದಲನ್ನು ಬಿಚ್ಚಿಕೊಂಡು ಆಚಮನ ಅಥವಾ ದೇವರ ಪೂಜೆಯನ್ನು ಮಾಡಬಾರದು.

**ಹೋಮ ದೇವಾರ್ಚನಾದ್ಯಾಸು ಕ್ರಿಯಾಸ್ವಾಚಮನೇ ತಥಾ ।**
**ನೈಕ ವಸ್ತ್ರಃ ಪ್ರವರ್ತೇತ ದ್ವಿಜವಾಚನಿಕೇ ಜಪೇ ॥೨೦॥**

ಹೋಮ ಹವನ, ದೇವರ ಪೂಜೆ, ಸಂಧ್ಯಾ ವಂದನೆ, ಜಪ, ಪುಣ್ಯಾಹವಾಚನ, ಮುಂತಾದ ಕಾರ್ಯಗಳನ್ನು ಒಂಟಿ ವಸ್ತ್ರವನ್ನು ಧರಿಸಿ ಮಾಡಬಾರದು. ಜೋಡು ಬಟ್ಟೆಗಳನ್ನು ಆಗ ಧರಿಸಬೇಕು.

**ನಾಸಮಂಜಸ ಶೀಲೈಸ್ತು ಸಹಾಸೀತ ಕಥಂಚನ**
**ಸದ್ವೃತ್ತ ಸನ್ನಿಕರ್ಷೋ ಹಿ ಕ್ಷಣಾರ್ಧಮಪಿ ಶಸ್ಯತೇ ॥ ೨೧ ॥**

ನಡತೆಯು ಸರಿ ಇಲ್ಲದ ಶೀಲಭ್ರಷ್ಟರಾದ ಜನರ ಜೊತೆಗೆ ಎಂದೂ ಸಹವಾಸ ಮಾಡಬಾರದು. ಒಳ್ಳೇ ಶೀಲವಂತರಾದ ಸಜ್ಜನರ ಸಹವಾಸದಲ್ಲಿ ಒಂದು ಅರ್ಧಕ್ಷಣವಿದ್ದರೂ ಅದು ಪ್ರಶಂಸನೀಯ ಸಂತ್ಸಂಗವೆನಿಸುತ್ತದೆ.

**ವಿರೋಧಂ ನೋತ್ತಮೈರ್ಗಚ್ಛೇನ್ನಾಧಮೈಶ್ಚ ಸದಾ ಬುಧಃ**
**ವಿವಾಹಶ್ಚ ವಿವಾದಶ್ಚ ತುಲ್ಯ ಶೀಲೈರ್ನೃಪೇಷ್ಯತೇ ॥ ೨೨ ॥**

ದೊಡ್ಡವರ ಜೊತೆಗೆ ವಿರೋಧವನ್ನು ಮಾಡಬಾರದು. ಕೀಳುಜನರ ಜೊತೆಗೂ ವಿರೋಧ ಮಾಡಬಾರದು. ವಿವಾಹ ಮತ್ತು ವಿವಾದ ಇವೆರಡನ್ನೂ ಸಮಾನ ಶೀಲರ ಜೊತೆಗೇ ಮಾಡಿದರೆ ಸರಿಹೋಗುತ್ತದೆ.

**ನಾರಭೇತ ಕಲಿಂ ಪ್ರಾಜ್ಞಃ ಶುಷ್ಕವೈರಂ ಚ ವರ್ಜಯೇತ್**
**ಅಪ್ಯಲ್ಪ ಹಾನಿಸ್ಸೋಢವ್ಯಾ ವೈರೇಣಾರ್ಥಾಗಮಂ ತ್ಯಜೇತ್ ॥ ೨೩ ॥**

ಬುದ್ಧಿವಂತ ಮನುಷ್ಯನು ಯಾರ ಜೊತೆಗೂ ಕಲಹ ಮಾಡಬಾರದು. ಶುಷ್ಕ ವೈರವನ್ನು ಬಿಟ್ಟು ಬಿಡಬೇಕು. ಅದರಿಂದ ತುಸು ಹಾನಿಯಾದರೂ ಅದನ್ನು ಸೋಸಬೇಕು. ವೈರ ಕಟ್ಟಿಕೊಂಡು ಹಣವನ್ನು ಗಳಿಸಬಾರದು.

**ಸ್ನಾತೋನಾಂಗಾನಿ ಸಂಮಾರ್ಜೇತ್ ಸ್ನಾತ ಶಾಟ್ಯಾನ ಪಾಣಿನಾ ।**
**ನ ಚ ನಿರ್ಧೂತಯೇತ್ ಕೇಶಾನ್ನಾಚಾಮೇಚ್ಚೈವ ಚೋಥ್ಥಿತಃ ॥ ೨೪ ॥**

ಸ್ನಾನ ಮಾಡಿದ ಬಳಿಕ ಉಟ್ಟ ಬಟ್ಟೆಯಿಂದಲೇ ಮೈಯನ್ನು ಒರಿಸಬಾರದು. ಬರೀ ಕೈಯಿಂದಲೂ ಮೈ ಒರಿಸಬಾರದು. ನಿಂತು ಕೂದಲನ್ನು ಜಾಡಿಸಬಾರದು ಮೈ ಒರಿಸಿಕೊಳ್ಳದೇ ಆಚಮನ ಮಾಡಬಾರದು.

**ಪಾದೇನ ನಾಕ್ರಾಮೇತ್ಪಾದಂ ನ ಪೂಜ್ಯಾಭಿಮುಖಂ ನಯೇತ್**
**ನೋಚ್ಚಾಸನಂ ಗುರೋರಗ್ರೇ ಭಜೇತಾವಿನಯಾನ್ವಿತಃ ॥ ೨೫ ॥**

ದೊಡ್ಡವರ ಎದುರಿಗೆ ಕಾಲಿನ ಮೇಲೆ ಕಾಲನ್ನು ಹಾಕಿಕೊಂಡು ಕೂಡಬಾರದು. ಅವರ ಕಣ್ಣಿಗೆ ತನ್ನ ಕಾಲನ್ನು ತೋರಿಸಬಾರದು. ಗುರುಗಳ ಎದುರು ಉಚ್ಚ ಆಸನದಲ್ಲಿ ಕೂಡಬಾರದು. ಗುರು ಹಿರಿಯರ ಜೊತೆಗೆ ವಿನಯದಿಂದಲೇ ವರ್ತಿಸಬೇಕು.

**ಅಪಸವ್ಯಂ ನ ಗಚ್ಛೇಚ್ಚ ದೇವಾಗಾರ ಚತುಷ್ಪಥಾನ್**
**ಮಾಂಗಲ್ಯ ಪೂಜ್ಯಾಂಶ್ಚ ತಥಾ ವಿಪರೀತಂ ನ ದಕ್ಷಿಣಮ್ ॥ ೨೬ ॥**

ದೇವರ ಗುಡಿ, ದೇವಭಕ್ತರು, ಮತ್ತು ಮಂಗಲ ದ್ರವ್ಯಗಳು, ನಾಲ್ಕು ರಸ್ತೆಗಳು ಕೂಡುವ ಸ್ಥಳ ಮುಂತಾದವುಗಳನ್ನು ಎಡಕ್ಕೆ ಮಾಡಿಕೊಂಡು ಹೋಗಬಾರದು. ಇವುಗಳ ವಿರುದ್ಧವಾದ ಅಮಂಗಳ ಅಪೂಜ್ಯ ವಸ್ತುಗಳನ್ನು ಬಲಕ್ಕೆ ಮಾಡಿಕೊಂಡು ಹೋಗಬಾರದು.

**ಸೋಮಾರ್ಕಾಗ್ನ್ಯಂಬು ವಾಯೂನಾಂ ಪೂಜ್ಯಾನಾಂ ಚೈವ ಸಮ್ಮುಖಂ।**
**ಕುರ್ಯಾನ್ನಿಷ್ಠೀ ವಿಣ್ಮೂತ್ರ ಸಮುತ್ಸರ್ಗಂ ನ ಪಂಡಿತ : ॥ ೨೭ ॥**

ಚಂದ್ರ, ಸೂರ್ಯ, ಬೆಂಕಿ, ನೀರು, ಗಾಳಿ ಹಾಗೂ ಪೂಜ್ಯ ವ್ಯಕ್ತಿಗಳ ಎದುರಿಗೆ ಸಂಮುಖದಲ್ಲಿ ಉಗುಳುವುದನ್ನಾಗಲೀ ಮಲ ಮೂತ್ರ ವಿಸರ್ಜನೆಯನ್ನಾಗಲಿ ಬುದ್ಧಿವಂತರಾದವರು ಮಾಡಬಾರದು.

**ತಿಷ್ಠನ್ನ ಮೂತ್ರಯೇತ್ ತದ್ವತ್ ಪಥಿಷ್ವಪಿ ನ ಮೂತ್ರಯೇತ್।**
**ಶ್ಲೇಷ್ಮ ವಿಣ್ಮೂತ್ರರಕ್ತಾನಿ ಸರ್ವದೈವ ನ ಲಂಘಯೇತ್ ॥ ೨೮ ॥**

ನಿಂತು ಮೂತ್ರ ವಿಸರ್ಜನೆ ಮಾಡಬಾರದು, ಮತ್ತು ಬೀದಿಗಳ ನಡುವೆ ಮಾಡಬಾರದು, ಮೂತ್ರ ರಕ್ತ ಕೀವು ಮೊದಲಾದವುಗಳನ್ನು ದಾಟಬಾರದು.

**ಶ್ಲೇಷ್ಮ ಶಿಂಘಾಣಕೋತ್ಸರ್ಗೋ ನಾನ್ನಕಾಲೇ ಪ್ರಶಸ್ಯತೇ ।**
**ಬಲಿ-ಮಂಗಲ-ಜಪಾದೌ-ನ ಹೋಮೇ ನ ಮಹಾಜನೇ। ॥ ೨೯ ॥**

ಊಟ, ದೇವರ ಪೂಜೆ, ಜಪ ಹೋಮ ಮತ್ತು ಮಂಗಲ ಕಾರ್ಯ ನಡೆದಾಗಲೂ ಮತ್ತು ಸುತ್ತ ಮುತ್ತ ಜನರಿದ್ದಾಗಲೂ ಉಗುಳುವುದು, ಸಿಂಬಳ ಕಳಿಯುವುದನ್ನು ಮಾಡತಕ್ಕದ್ದಲ್ಲ.

**ಯೋಷಿತೋ ನಾವಮನ್ಯೇತ ನ ಚಾಸಾಂ ವಿಶ್ವಸೇದ್ ಬುಧಃ**
**ನ ಚೈವೇರ್ಷ್ಯಾ ಭವೇತ್ತಾಸು ನ ಧಿಕ್ಕುರ್ಯಾತ್ ಕದಾಚನ ॥ ೩೦ ॥**

ಸ್ತ್ರೀಯರನ್ನು ಅವಮಾನಿಸಬಾರದು. ಅವರನ್ನು ಪೂರ್ಣ ನಂಬಲೂಬಾರದು. ಅವರನ್ನು ಕಂಡು ಅಸೂಯೆ ಪಡಬಾರದು, ಅವರನ್ನು ಎಂದೂ ತಿರಸ್ಕಾರ ಮಾಡಬಾರದು.

**ಮಾಂಗಲ್ಯ ಪುಷ್ಪ, ರತ್ನಾಜ್ಯ ಪೂಜ್ಯಾನನಭಿವಾದ್ಯ ಚ**
**ನ ನಿಷ್ಕ್ರಮೇತ್ ಗೃಹಾತ್ ಪ್ರಾಜ್ಞಸ್ಸದಾಚಾರ ಪರೋ ನರಃ ॥ ೩೧ ॥**

ಸದಾಚಾರ ಸಂಪನ್ನವಾದ ಮನುಷ್ಯನು ಮಂಗಲಕರವಾದ ಹೂಗಳನ್ನು ಏರಿಸಿ ದೇವರಿಗೆ ಹೊನ್ನು ರನ್ನದ ಆಭರಣಗಳನ್ನು ಇಡಿಸಿ, ತುಪ್ಪದ ದೀಪದಿಂದ ಮಂಗಳಾರತಿಯನ್ನು ಮಾಡದೆ, ದೇವರಿಗೆ ನಮಸ್ಕಾರ ಗೈಯದೆ, ಪೂಜ್ಯರನ್ನು ವಂದಿಸದೆ ಮನೆ ಬಿಟ್ಟು ಹೊರಬೀಳಬಾರದು.

**ಅಕಾಲಗರ್ಜಿತಾದೌ ಚ ಪರ್ವಸ್ವಾ ಶೌಚಕಾದಿಷು**
**ಅನಧ್ಯಾಯಂ ಬುಧಃ ಕುರ್ಯಾತ್ ಉಪರಾಗಾದಿಕೇ ತಥಾ ॥ ೩೨ ॥**

ಮಳೆ ಮೋಡಗಳಿಲ್ಲದ ಬರಗಾಲ ಬಿದ್ದಾಗ, ಪರ್ವಕಾಲದಲ್ಲಿ, ಅಶೌಚ ಬಂದಾಗ, ಮತ್ತು ಗ್ರಹಣ ಹಿಡಿದಾಗ ಬುದ್ಧಿವಂತರು ಅಧ್ಯಯನ ಮಾಡತಕ್ಕದ್ದಲ್ಲ ಅದು ಅನಾಧ್ಯಾಯದ ಕಾಲ.

**ಶಮಂ ನಯತಿ ಯಃ ಕ್ರುದ್ಧಾನ್ ಸರ್ವ ಬಂಧುರಮತ್ಸರೀ**
**ಭೀತಾಶ್ವಸನ ಕೃತ್ ಸಾಧುಃ ಸ್ವರ್ಗಃ ಸ್ಯಾದಲ್ಪಕಂ ಫಲಂ ॥ ೩೩ ॥**

ಅಸೂಯೆ ಇಲ್ಲದೆ ಎಲ್ಲರನ್ನೂ ಬಂಧುಗಳೆಂದು ಭಾವಿಸಿ, ಎಲ್ಲರನ್ನೂ ಸೇವಿಸಿ, ಸಿಟ್ಟಿಗೆದ್ದವರನ್ನೂ ಕೂಡ ಯಾವನು ಶಾಂತಗೊಳಿಸುವನೋ ಮತ್ತು ಅಂಜಿದವರಿಗೆ ಅಶ್ವಾಸನವನ್ನು ನೀಡುವನೊ ಅಂಥ ಮನುಷ್ಯನು 'ಸಾಧು' ಎಂದು ಅನಿಸಿಕೊಳ್ಳುತ್ತಾನೆ. ಅಂಥ ಮನುಷ್ಯನಿಗೆ ಸ್ವರ್ಗವೂ ಕೂಡ ಅಲ್ಪ ಫಲವೇ ಸರಿ.

**ವರ್ಷಾಽತಪಾದಿಷು ಛತ್ರಿ ದಂಡೀ ರಾತ್ರ್ಯಟವೀಷು ಚ**
**ಶರೀರ ತ್ರಾಣಕಾಮೋ ವೈ ಸೋಪಾನತ್ಕಃ ಸದಾ ವ್ರಜೇತ್ ॥ ೩೪ ॥**

ಮಳೆ ಬಿಸಿಲುಗಳಲ್ಲಿ ಹೊರಗೆ ಹೋಗುವುದಾದರೆ ಕೊಡೆಯನ್ನು ತೆಗೆದುಕೊಂಡೇ ಹೋಗಬೇಕು. ಕಾಡಿನಲ್ಲಿ ಮತ್ತು ರಾತ್ರಿಯಲ್ಲಿ ಸಂಚರಿಸುವುದಾದರೆ ಕೈಯಲ್ಲಿ ಬಡಿಗೆ ಹಿಡಿದುಕೊಂಡೇ ನಡೆಯಬೇಕು. ಮತ್ತು ಮನೆಬಿಟ್ಟು ಎಲ್ಲಿಹೋದರೂ ಯಾವಾಗ ಹೋದರೂ ಕಾಲಲ್ಲಿ ಪಾದರಕ್ಷೆಯನ್ನು ಹಾಕಿಕೊಂಡೇ ಹೋಗಬೇಕು ಅಂದರೆ ಅವನ ಶರೀರವು ಸುರಕ್ಷಿತವಾಗಿ ಉಳಿಯುತ್ತದೆ.

**ನೋರ್ಧ್ವಂ ನ ತಿರ್ಯಗ್‌ದೂರಂ ವಾ ನ ಪಶ್ಯನ್ ಪರ್ಯಟೇದ್ ಬುಧಃ**
**ಯುಗ ಮಾತ್ರಂ ಮಹೀಪೃಷ್ಠೇ ನರೋ ಗಚ್ಛೇದ್ ವಿಲೋಕಯನ್ ॥ ೩೫ ॥**

ಬೀದಿಯಲ್ಲಿ ನಡೆಯುವಾಗ ಮೇಲೆ ನೋಡುತ್ತ ಅಥವಾ ಹಿಂದೆ ನೋಡುತ್ತ ಅಥವಾ ಎಲ್ಲಿಯೋ ದೂರದೃಷ್ಟಿಯನ್ನು ಇರಿಸಿ ನಡೆಯಬಾರದು. ತನ್ನ ಮುಂದಿರುವ ಎರಡು ಮಾರು ನೆಲವನ್ನು ನೋಡುತ್ತ ಹೆಜ್ಜೆ ಹಾಕಬೇಕು.

**ದೋಷಹೇತೂನಶೇಷಾಂಶ್ಚ ವಶ್ಯಾತ್ಮಾ ಯೋ ನಿರಸ್ಯತಿ**
**ತಸ್ಯ ಧರ್ಮಾರ್ಥ ಕಾಮಾನಾಂ ಹಾನಿರ್ನಾಲ್ಪಾಪಿ ಜಾಯತೆ ॥ ೩೬ ॥**

ತನ್ನಲ್ಲಿ ಇರುವ ತಪ್ಪು ತಡೆಗಳನ್ನು ಕಂಡು ಹಿಡಿದು, ಅದರ ಮೂಲ ಕಾರಣವನ್ನು ದೂರ ಮಾಡಿ, ಮನಸ್ಸನ್ನು ವಶದಲ್ಲಿ ಇರಿಸಿಕೊಂಡು, ನಡೆಯುವ ಮನುಷ್ಯನ ಧರ್ಮ, ಅರ್ಥ, ಕಾಮಗಳಿಗೆ ಹಾನಿಯು ಸ್ವಲ್ಪ ಕೂಡ ಆಗುವುದಿಲ್ಲ.

**ಸದಾಚಾರರತಃ ಪ್ರಾಜ್ಞೋ ವಿದ್ಯಾವಿನಯ ಶಿಕ್ಷಿತಃ**
**ಪಾಪೇಪ್ಯಪಾಪಃ ಪುರುಷೆ ಹ್ಯಭಿಧತ್ತೆ ಪ್ರಿಯಾಣಿ ಯಃ ।**
**ಮೈತ್ರೀದ್ರವಾಂತಃಕರಣ ಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥ ೩೭ ॥**

ಯಾವನು ಅಪಕಾರ ಮಾಡಿದವನಿಗೂ ಉಪಕಾರ ಮಾಡುತ್ತಾನೋ, ಕ್ರೂರ ಮನುಷ್ಯನ ಜೊತೆಗೆ ಮಧುರವಾಗಿ ಮಾತನಾಡಿ ಅವನಿಗೆ ಪ್ರಿಯವಾದುದನ್ನು ಉಂಟು ಮಾಡುತ್ತಾನೋ ಮತ್ತು ಯಾವನ ಅಂತಃಕರಣವು ಸರ್ವದಾ ಸ್ನೇಹದಿಂದ ಕರಗಿರುತ್ತದೆಯೋ ಅಂಥ (ಭಗವಂತನಲ್ಲಿ ಭಕ್ತಿ ಮಾಡುವ) ಜನರಿಗೆ ಮುಕ್ತಿಯು ಕೈಯಲ್ಲಿಯೇ ಇದ್ದಂತೆ.

**ಯೇ ಕಾಮ ಕ್ರೋಧಲೋಭಾನಾಂ ವೀತರಾಗಾ ನ ಗೋಚರೇ**
**ಸದಾಚಾರಸ್ಥಿತಾಸ್ತೇಷಾಮನುಭಾವೈರ್ಧೃತಾ ಮಹೀ ॥ ೩೮ ॥**

ಯಾರು ಕಾಮ, ಕ್ರೋಧ, ಲೋಭಗಳನ್ನು ಬಿಟ್ಟಿರುವರೋ, ರಾಗದ್ವೇಷಗಳನ್ನು ತೊರೆದಿರುವರೋ, ಅಂಥ ಸದಾಚಾರ ಸಂಪನ್ನರಾದ ಮಹಾನುಭಾವರ ಪ್ರಭಾವದಿಂದಲೇ ಈ ಭೂಮಿಯು ನಿಂತಿರುತ್ತದೆ.

**ತಸ್ಮಾತ್ಸತ್ಯಂ ವದೇತ್ ಪ್ರಾಜ್ಞಃ ಯತ್ ಪರ ಪ್ರೀತಿ ಕಾರಣಂ**
**ಸತ್ಯಂ ಯತ್ ಪರದುಃಖಾಯ ತದಾ ಮೌನಪರೋ ಭವೇತ್ ॥ ೩೯ ॥**

ಜಾಣ ಮನುಷ್ಯನು ಇನ್ನೊಬ್ಬರಿಗೆ ಪ್ರೀತಿಯನ್ನುಂಟುಮಾಡುವ ಸತ್ಯವಾದ ವಚನವನ್ನು ನುಡಿಯಬೇಕು. ಸತ್ಯವಾದರೂ ಅದನ್ನು ನುಡಿಯುವುದರಿಂದ ಒಬ್ಬರಿಗೆ ಕೇಡಾಗುತ್ತಿದ್ದರೆ ಅಥವಾ ದುಃಖವಾಗುತ್ತಿದ್ದರೆ ಅಂಥ ಸಂದರ್ಭದಲ್ಲಿ ಮೌನವನ್ನು ಅವಲಂಬಿಸಬೇಕು.

**ಪ್ರಿಯಮುಕ್ತಂ ಹಿತಂ ನೈತದಿತಿ ಮತ್ವಾ ನ ತದ್ವದೇತ್**
**ಶ್ರೇಯಸ್ತತ್ರ ಹಿತಂ ವಾಚ್ಯಂ ಯದ್ಯಪ್ಯತ್ಯಂತಮಪ್ರಿಯಂ ॥ ೪೦ ॥**

ಪ್ರಿಯವಾದ ವಚನದಿಂದ ಹಿತವಾಗುವುದಿಲ್ಲ ಎಂದು ತಿಳಿದು ಬಂದರೆ ಅಂಥ ಪ್ರಿಯ ವಚನ, ಸವಿನುಡಿಯನ್ನು ಆಡಬಾರದು. ಅಪ್ರಿಯವಾದರೂ ಚಿಂತೆಯಿಲ್ಲ, ಹಿತಕರವಾದ ಮಾತನ್ನು ಹೇಳುವುದೇ ಶ್ರೇಯಸ್ಕರವಾಗಿರುತ್ತದೆ.

**ಪ್ರಾಣಿನಾಮುಪಕಾರಾಯ ಯಥೈವೇಹ ಪರತ್ರ ಚ**
**ಕರ್ಮಣಾ ಮನಸಾ ವಾಚಾ ತದೇವ ಮತಿಮಾನ್ ಭಜೇತ್ ॥ ೪೧ ॥**

ಈ ಲೋಕದಲ್ಲಿ, ಪರಲೋಕದಲ್ಲಿ, ಪ್ರಾಣಿಗಳಿಗೆ ಉಪಕಾರವಾಗುವಂತೆ ಮಾತಿನಿಂದಲೂ ಮನಸ್ಸಿನಿಂದಲೂ, ಕೃತಿಯಿಂದಲೂ, ತ್ರಿಕರಣ ಸಿದ್ಧಿ ಪೂರ್ವಕವಾಗಿ ಪ್ರಯತ್ನಿಸಬೇಕು.

## ಶುಭಕಾಲದಲ್ಲಿ ಮಾಡುವ ಮಂಗಳಶ್ರಾದ್ಧ

ಗಂಡು ಮಗನು ಹುಟ್ಟಿದಾಗ ತಂದೆಯು ತಾನು ಉಟ್ಟ ಬಟ್ಟೆ ಸಹಿತ ಸ್ನಾನ ಮಾಡಬೇಕು. ಅನಂತರ ಆ ಮಗುವಿನ ಜಾತಕರ್ಮ ಸಂಸ್ಕಾರವನ್ನೂ ಮತ್ತೂ ಅಭ್ಯುದಯಿಕ ಶ್ರಾದ್ಧವನ್ನೂ ಮಾಡಬೇಕು. ಭಕ್ತಿಯಿಂದ ದೇವತೆಗಳ ಮತ್ತು ಪಿತೃಗಳ ಉದ್ದೇಶದಿಂದ ಇಬ್ಬರು ಬ್ರಾಹ್ಮಣರನ್ನು ಬಲಗಡೆಗೂ ಮತ್ತು ಎಡಗಡೆಗೂ ಕೂಡಿಸಿ ಊಟಕ್ಕೆ ಹಾಕಬೇಕು. ಪೂರ್ವ ಅಥವಾ ಉತ್ತರಕ್ಕೆ ಮುಖ ಮಾಡಿ ಮೊಸರು ಅಕ್ಷತೆ ಮತ್ತು ಬೋರೇಕಾಯಿಗಳಿಂದ ಪಿಂಡಗಳನ್ನು ಮಾಡಿ ದೇವ ತೀರ್ಥದಿಂದ ಕೊಡಬೇಕು. ಈ ಅಭ್ಯುದಯಿಕ ಶ್ರಾದ್ಧದಿಂದ ನಾಂದೀಮುಖದೇವ ಹೆಸರಿನ ಪಿತೃಗಳು ಪ್ರಸನ್ನರಾಗುತ್ತಾರೆ. ಆದುದರಿಂದ ಎಲ್ಲ ವಿಧವಾದ ಮಂಗಲ ನಾಮಕರಣ, ಚೌಲ, ಸೀಮಂತ ಮುಂತಾದ ಸಂಸ್ಕಾರಗಳಲ್ಲಿಯೂ, ಪ್ರಥಮ ಸಲ ಮಕ್ಕಳ ಮುಖ ದರ್ಶನ ಮಾಡುವಾಗಲೂ ನಾಂದೀಮುಖರೆಂಬ ಪಿತೃಗಳ ಬಳಗವನ್ನು ಉದ್ದೇಶಿಸಿ ಗೃಹಸ್ಥಾಶ್ರಮಿಯು ಭಕ್ತಿಯಿಂದ ಈ ನಾಂದೀಶ್ರಾದ್ಧವನ್ನು ಮಾಡತಕ್ಕದ್ದು.

ಮಹಾರಾಜಾ, ಇನ್ನು ಮೇಲೆ ನಿನಗೆ ಪ್ರೇತಕರ್ಮದ ವಿಧಿವಿಧಾನಗಳನ್ನು ಹೇಳುತ್ತೇನೆ ಕೇಳು.

## ಪ್ರೇತಕಾರ್ಯ

ಸತ್ತ ಮನುಷ್ಯನ ಆ ಶವ ಶರೀರವನ್ನು ಸ್ವಚ್ಛ ನೀರಿನಿಂದ ಸ್ನಾನಮಾಡಿಸಬೇಕು. ಅನಂತರ ಹೂವಿನ ಮಾಲೆ ಹಾಕಿ ಊರಹೊರಗೆ ವೈಯ್ದು ಅದನ್ನು ದಹನ ಮಾಡಬೇಕು. ಆ ಬಳಿಕ ತಾನು ಉಟ್ಟ ತೊಟ್ಟ ಬಟ್ಟೆ ಸಹಿತ ಊರ ಹೊರಗಿನ ಜಲಾಶಯದಲ್ಲಿ ಸ್ನಾನಮಾಡಿ ''ಯತ್ರ ಯತ್ರ ಸ್ಥಿತಾಯೇದಮಮುಕಾಯ'' ಎಂದು ಮಂತ್ರ ಹೇಳಿ ದಕ್ಷಿಣಕ್ಕೆ ಮುಖಮಾಡಿಕೊಂಡು ನಿಂತು ಎಲ್ಲ ಬಾಂಧವರೂ ಮೃತನಿಗೆ ಜಲಾಂಜಲಿಗಳನ್ನು ಕೊಡಬೇಕು. ಅನಂತರ ಸಂಜೆಯಾಗುವವರೆಗೆ ಊರ ಹೊರಗೇ ಇದ್ದು ಆಕಳುಗಳು ಮರಳಿ ಊರಲ್ಲಿ ಬರುವಾಗ ತಾವೂ ಊರಿನಲ್ಲಿ ಪ್ರವೇಶ ಮಾಡಬೇಕು. ಅನಂತರ ನಕ್ಷತ್ರ ದರ್ಶನವಾದ ಬಳಿಕ ಸ್ನಾನಮಾಡಿ, ಆಗ ಮಾಡತಕ್ಕ ಅಶೌಚ ಕೃತ್ಯಗಳನ್ನೆಲ್ಲ ಮಾಡಿ ಮುಗಿಸಿ, ನೆಲದಲ್ಲಿಯೇ ಹುಲ್ಲು ಚಾಪೆ ಹಾಸಿಕೊಂಡು ಮಲಗಬೇಕು. ಮತ್ತು ಸತ್ತ ಮನುಷ್ಯನಿಗೆ ಪ್ರತಿದಿನವೂ ನೆಲದ ಮೇಲೆ ಪಿಂಡದಾನವನ್ನು ಕೊಡಬೇಕು. ಮತ್ತು ಹಗಲು ಹೊತ್ತು ಮಾತ್ರ ಅನಿಷಿದ್ಧವಾದ ಪದಾರ್ಥಗಳನ್ನು ಊಟ ಮಾಡಬೇಕು. ಆಗ ಭೋಜನಕ್ಕೆ ಬರಲು ಇಚ್ಚಿಸಿದ ಬ್ರಾಹ್ಮಣರಿಗೆ ಬಾಂಧವರಿಗೂ ಊಟಕ್ಕೆ ಹಾಕಬೇಕು. ಈ ಬಂಧು ಬ್ರಾಹ್ಮಣರ ಭೋಜನದಿಂದ ಆ ಪ್ರೇತಗಳಿಗೆ ಮೃತಜೀವನಕ್ಕೆ ತೃಪ್ತಿಯು ಆಗುತ್ತದೆ. ಅಶೌಚದ ಮೊದಲನೇ ದಿನ ಅದರಂತೆ ಮೂರು, ಏಳು ಅಥವಾ ಒಂಭತ್ತನೇ ದಿನ ವಸ್ತ್ರತ್ಯಾಗವನ್ನು ಮಾಡಿ ಬಹಿರ್ದೇಶದಲ್ಲಿ ಸ್ನಾನಮಾಡಿ ತಿಲೋದಕವನ್ನು ಬಿಡಬೇಕು.

## ಅಶೌಚ ಯಾರಿಗೆ ಎಷ್ಟು ದಿನ !

ರಾಜನೇ ! ಮರಣ ಹೊಂದಿದ ನಾಲ್ಕನೇ ದಿನ ಸ್ಮಶಾನದಲ್ಲಿ ಆ ಮೃತ ಮನುಷ್ಯನನ್ನು ದಹನ ಮಾಡಿದ ಸ್ಥಳದಲ್ಲಿ ದಗ್ಧ ಶೇಷವಾದ ಎಲುವುಗಳನ್ನು ಆರಿಸಬೇಕು. ಅನಂತರ ಸಪಂಡಿ ಬಂಧು ಜನರನ್ನು ಸ್ಪರ್ಶಮಾಡಬಹುದು. ಅಸ್ಥಿಚಯನವಾದ ನಂತರ ಸಗೋತ್ರ ಜನರಿಗೂ ಮತ್ತು ಸಮಾನೋದಕರಿಗೂ ಹಾಸಿಗೆ, ಆಸನ, ಮತ್ತು ಉಳಿದ ಅವಶ್ಯಕವಾದ ವಸ್ತುಗಳನ್ನು ಬಳಸಲಿಕ್ಕೆ ಬರುವದು. ಆದರೆ ಸಪಿಂಡರಿಗೆ ಸ್ತ್ರೀ ಸಂಪರ್ಕವು ಮಾತ್ರ ಅಶೌಚವಿದ್ದಾಗ ನಿಷಿದ್ಧವಾಗಿರುತ್ತದೆ. ಬ್ರಾಹ್ಮಣರಿಗೆ ಹತ್ತು ದಿನ ಅಶೌಚ, ಕ್ಷತ್ರಿಯನಿಗೆ ಹನ್ನೆರಡು ದಿನ, ವೈಶ್ಯರಿಗೆ ಹದಿನೈದು ದಿನ, ಶೂದ್ರರಿಗೆ ಒಂದು ತಿಂಗಳವರೆಗೆ ಅಶೌಚವು ಇರುತ್ತದೆ. ಅಶೌಚದ ಅನಂತರ ಮೂರು, ಐದು, ಏಳು ಒಂಬತ್ತು ಮುಂತಾದ ವಿಷಮ ಸಂಖ್ಯೆಯಲ್ಲಿ ಬ್ರಾಹ್ಮಣರ ಭೋಜನ ಮಾಡಿಸಬೇಕು. ಮತ್ತು ಬ್ರಾಹ್ಮಣರ ಎಲೆಯ ಹತ್ತಿರವೇ ದರ್ಭದ ಮೇಲೆ ಸತ್ತ ಮನುಷ್ಯನ ತೃಪ್ತಿಗಾಗಿ ಪಿಂಡದಾನವನ್ನು ಮಾಡಬೇಕು. ಅಶೌಚ ನಿವೃತ್ತಿಯಾದ ಬಳಿಕ ಬ್ರಾಹ್ಮಣರ ಭೋಜನ ಮಾಡಿಸಿ ಬ್ರಾಹ್ಮಣ ಜಾತಿಯವರು ಜಲಸ್ಪರ್ಶವನ್ನು ಮಾಡಿ, ಕ್ಷತ್ರಿಯರು ಶಸ್ತ್ರಾಸ್ತ್ರವನ್ನು ಮುಟ್ಟಿ, ವೈಶ್ಯರು ಚಾವಟಿಯನ್ನು ಹಿಡಿದು, ಶೂದ್ರರು ದಂಡವನ್ನು ಸ್ಪರ್ಶಮಾಡಿ ಶುದ್ಧರಾಗಬೇಕು. ಅನಂತರ ತಮ್ಮ ತಮ್ಮ, ವರ್ಣಾಶ್ರಮಕ್ಕೆ ಉಚಿತವಾದ ಧರ್ಮ, ಕರ್ಮಗಳನ್ನು ಆಚರಿಸಬೇಕು.

## ಏಕೋದ್ದಿಷ್ಟ ಶ್ರಾದ್ಧ

ಮುಂದೆ ಪ್ರತಿ ತಿಂಗಳೂ ಸತ್ತವನ ಮೃತ್ಯು ತಿಥಿಯಂದು ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು. ಇದರಲ್ಲಿ ಅವಾಹಾನಾದಿ ಕ್ರಿಯೆ, ಮತ್ತು ವಿಶ್ವೇದೇವ ಸಂಬಂಧಿಯಾದ ಬ್ರಾಹ್ಮಣರ ಆಮಂತ್ರಣಾದಿಗಳು ಇರುವುದಿಲ್ಲ. ಈ ಏಕೋದ್ದಿಷ್ಟಶ್ರಾದ್ಧದಲ್ಲಿ ಒಂದು ಅರ್ಘ್ಯ, ಒಂದು ಪವಿತ್ರವನ್ನು ಕೊಡಬೇಕು. ಅನೇಕ ಬ್ರಾಹ್ಮಣರ ಭೋಜನ ಮಾಡಿಸಿದರೂ ಅವರೆಲ್ಲರ ಭೋಜನದ ಅನಂತರ ಮೃತ ಮನುಷ್ಯನಿಗೆ ಒಂದೇ ಪಿಂಡವನ್ನು ಕೊಡಬೇಕು. ಹೀಗೆ ಒಂದು ವರ್ಷದವರೆಗೆ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು. ಈ ರೀತಿಯಾಗಿ ಒಂದು ವರ್ಷವು ಮುಗಿದ ಬಳಿಕ ಸಪಿಂಡೀಕರಣವನ್ನು ಮಾಡಬೇಕು. ಅದರ ವಿಧಿ ಹೀಗೆ ಇದೆ.

### ಸಪಿಂಡೀಕರಣ

ಈ ಸಪಿಂಡೀಕರಣವನ್ನು ಕೂಡ ಒಂದು ವರ್ಷ. ಆರು ತಿಂಗಳು, ಅಥವಾ ಹನ್ನೆರಡು ದಿನಗಳ ಅನಂತರ ಏಕೋದ್ದಿಷ್ಟ ಶ್ರಾದ್ಧವಿಧಿಯಿಂದಲೇ ಮಾಡಬೇಕು. ಇದರಲ್ಲಿ ಎಳ್ಳು, ಗಂಧ, ಮತ್ತು ನೀರಿನಿಂದ ನಾಲ್ಕು ಪಾತ್ರೆಗಳನ್ನು ತುಂಬಿ ಇಡಬೇಕು. ಅವುಗಳಲ್ಲಿ ಒಂದು ಪಾತ್ರವು ಮೃತಪುರುಷನಿಗೆ ಇರುತ್ತದೆ. ಮೂರು ಪಾತ್ರಗಳು ಪಿತೃಗಳದು ಇರುತ್ತವೆ. ಮೃತ ಪುರುಷನ ಪಾತ್ರದಲ್ಲಿರುವ ನೀರಿನಿಂದ ಪಿತೃಪಾತ್ರೆಗಳನ್ನು ಸೇಚನಮಾಡಬೇಕು. ಈ ರೀತಿಯಾಗಿ ಮೃತ ಪುರುಷನಿಗೆ ಪಿತೃತ್ವವು ಪ್ರಾಪ್ತವಾದ ಬಳಿಕ ಸಂಪೂರ್ಣ ಶ್ರಾದ್ಧ ಧರ್ಮಗಳ ಮುಖಾಂತರ ಆ ಮೃತ ಪುರುಷನಿಂದಲೇ ಆರಂಭಮಾಡಿಕೊಂಡು ಪಿತೃಗಳ ಪೂಜೆಯನ್ನು ಮಾಡಬೇಕು.

## ಶ್ರಾದ್ಧವನ್ನು ಯಾರು ಮಾಡಬೇಕು.!

ರಾಜನ್, ಶ್ರಾದ್ಧಮಾಡಲಿಕ್ಕೆ ಅಧಿಕಾರಿ ವ್ಯಕ್ತಿಗಳೆಂದರೆ ಮಗ, ಮೊಮ್ಮಗ, ಮರಿ ಮಗ, ಸೋದರ, ಸಹೋದರನ ಮಗ, ಅಥವಾ ಸಪಿಂಡರ ಮಕ್ಕಳು, ಮೊಮ್ಮಕ್ಕಳು ಯಾರಾದರೂ ಆಗಬಹುದು. ಅವರಾರೂ ಇಲ್ಲದಿದ್ದರೆ ಆ ಗೋತ್ರದಲ್ಲಿ ಹುಟ್ಟಿದವರಿಗಾಗಲೀ ಅಥವಾ ಮಾತೃಪಕ್ಷದ ಸಪಿಂಡರಿಗಾಗಲೀ ಶ್ರಾದ್ಧದ ಅಧಿಕಾರ ಇರುತ್ತದೆ. ತಾಯಿಯ ವಂಶ ಮತ್ತು ತಂದೆಯ ವಂಶ ಎರಡೂ ನಷ್ಟವಾಗಿದ್ದರೆ ಆ ಕುಲದ ಸ್ತ್ರೀಯರಾದರೂ ಶ್ರಾದ್ಧ ಕರ್ಮವನ್ನು ಮಾಡಿಸಬೇಕು. ಕೊನೆಗೆ ಅವನ ಮಿತ್ರರು, ಅವರ್‍ಯಾರೂ ಮಾಡದಿದ್ದರೆ ರಾಜರಾದರೂ ಬಂಧು ಹೀನನಾದ ಮನುಷ್ಯನ ಹೊಲ, ಮನೆ ಮುಂತಾದ ಆಸ್ತಿಯನ್ನು ತೆಗೆದುಕೊಂಡು ಅವನ ಶ್ರಾದ್ಧವನ್ನು ಮಾಡಿಸಬೇಕು. ಒಟ್ಟು ಈ ಸಂಪೂರ್ಣ ಪ್ರೇತ ಕರ್ಮವು ಮೂರು ವಿಧವಾಗಿದೆ ಪೂರ್ವಕರ್ಮ, ಮಧ್ಯಮ ಕರ್ಮ ಮತ್ತು ಉತ್ತರ ಕರ್ಮ ಎಂದು. ಮೃತನ ಅಗ್ನಿ ಸಂಸ್ಕಾರದಿಂದ ಆರಂಭಿಸಿ ಅಶೌಚ ಶುದ್ಧಿಯ ನಂತರ ಜಲ ಅಥವಾ ಶಸ್ತ್ರದ ಸ್ಪರ್ಶದವರೆಗೆ ಮಾಡತಕ್ಕ ಕರ್ಮಗಳೆಲ್ಲವು ಪೂರ್ವ ಕರ್ಮವೆಂದು ಕರೆಯಲ್ಪಡುತ್ತವೆ. ಪ್ರತಿ ತಿಂಗಳೂ ಮಾಡಲ್ಪಡುವ ಏಕೋದ್ದಿಷ್ಟ

ಶ್ರಾದ್ಧವು ಮಧ್ಯಮ ಕರ್ಮ ಎನಿಸುತ್ತದೆ. ಸಪಿಂಡೀಕರಣದ ಅನಂತರ ಮೃತವ್ಯಕ್ತಿಗೆ ಪಿತೃತ್ವ ಪ್ರಾಪ್ತಿಯು ಆದ ನಂತರ ಮಾಡಲ್ಪಡುವ ಪಿತೃಕರ್ಮಗಳೆಲ್ಲವು ಉತ್ತರ ಕರ್ಮ ಎಂದು ಹೇಳಿಕೊಳ್ಳಲ್ಪಡುತ್ತವೆ.

ಪೂರ್ವ ಕರ್ಮಗಳನ್ನು ತಾಯಿ, ತಂದೆ, ಮಗ, ಬಂಧು, ಬಳಗ, ಸಪಿಂಡ, ಸಮಾನೋದಕ, ಸಗೋತ್ರ, ಅಥವಾ ಸಮಾಜದವರು ಅಥವಾ ರಾಜರು ಯಾರಾದರೂ ಮಾಡಬಹುದು. ಆದರೆ ಮುಂದಿನ ಮಧ್ಯಮ ಕರ್ಮ ಉತ್ತರ ಕರ್ಮಗಳನ್ನು ಮಾತ್ರ ಅವರ ಮಕ್ಕಳು ಮೊಮ್ಮಕ್ಕಳು ಮೊದಲಾದ ಉತ್ತರಾಧಿಕಾರಿಗಳು ಮಾತ್ರ ಮಾಡತಕ್ಕದ್ದು. ಪ್ರತಿ ವರ್ಷವೂ ಮರಣ ದಿವಸದಲ್ಲಿ ಸ್ತ್ರೀಯರ ಉತ್ತರ ಕರ್ಮವನ್ನೂ ಕೂಡ ಏಕೋದ್ದಿಷ್ಟ ಶ್ರಾದ್ಧ ವಿಧಿಯಿಂದ ಅವಶ್ಯವಾಗಿ ಮಾಡಬೇಕು. ಪ್ರತಿ ಸಂವತ್ಸರದಲ್ಲಿ ಮೃತ್ಯು ತಿಥಿಯಂದು ಮಾಡಲೇಬೇಕಾದ ಸ್ತ್ರೀ ಪುರುಷರ ಆ ಉತ್ತರ ಕ್ರಿಯೆಗಳ ವಿಧಿ ವಿಧಾನಗಳ ಬಗೆಯನ್ನು ತಿಳಿಸುತ್ತೇನೆ ಕೇಳು.

**ಔರ್ವಮುನಿ** - ರಾಜನ್, ಶ್ರದ್ಧೆಯಿಂದ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಕರ್ಮವನ್ನು ಮಾಡುವುದರಿಂದ ಬ್ರಹ್ಮಾದಿ ದೇವತೆಗಳೂ, ಪಿತೃಗಳೂ, ಋಷಿಗಳೂ ಮತ್ತು ಎಲ್ಲ ಪ್ರಾಣಿಗಳೂ ಸಂತುಷ್ಟರಾಗುತ್ತಾರೆ. ಮರಣ ತಿಥಿಯಲ್ಲದೆ ಪ್ರತಿ ಅಮಾವಾಸ್ಯೆಯ ದಿನ ಮತ್ತೂ ಹೇಮಂತ ಶಿಶಿರ ಋತುಗಳ ಶುಕ್ಲಪಕ್ಷದ ಅಷ್ಟಮಿಯ ದಿನ ಶ್ರಾದ್ಧವನ್ನು ಮಾಡತಕ್ಕದ್ದು. ಇದು ನಿತ್ಯ ಶ್ರಾದ್ಧಕಾಲ. ಇದಲ್ಲದೇ ಬೇರೆ ದಿನಗಳಲ್ಲಿಯೂ ಮಾಡಬಹುದು.

## ಶ್ರಾದ್ಧಕಾಲ

ಶ್ರಾದ್ಧಕ್ಕೆ ಯೋಗ್ಯವಾದ ಪದಾರ್ಥಗಳು ದೊರೆತಾಗ ಅಥವಾ ಯೋಗ್ಯರಾದ ಶಿಷ್ಟವಿಶಿಷ್ಟ ಬ್ರಾಹ್ಮಣರು ಮನೆಗೆ ಬಂದಾಗ, ಮತ್ತು ಸಂಕ್ರಮಣ, ಗ್ರಹಣ, ವ್ಯತೀಪಾತ, ಮುಂತಾದ ಸಂದರ್ಭದಲ್ಲಿಯೂ ಅಥವಾ ಗ್ರಹಪೀಡೆ, ದುಸ್ವಪ್ನ ದರ್ಶನ ಮತ್ತು ಸೂರ್ಯನ ರಾಶಿ ಸಂಕ್ರಾಂತಿ ಕಾಲದಲ್ಲಿಯೂ ಮತ್ತು ಹೊಸ ಧಾನ್ಯವು ಮನೆಗೆ ಬಂದಾಗಲೂ ಕಾಮ್ಯ ಶ್ರಾದ್ಧವನ್ನು ಮಾಡಬೇಕು. ಅಮಾವಾಸ್ಯಾ ದಿನವೂ ಅನುರಾಧಾ, ವಿಶಾಖಾ ಅಥವಾ ಸ್ವಾತೀ ನಕ್ಷತ್ರದಿಂದ ಯುಕ್ತವಾದಾಗ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಎಂಟು ವರ್ಷ ತೃಪ್ತಿಯಾಗುತ್ತದೆ. ಮತ್ತು ಅಮಾವಾಸ್ಯೆಯು ಪುಷ್ಯ, ಆರ್ದ್ರಾ, ಅಥವಾ ಪುನರ್ವಸು ನಕ್ಷತ್ರದಿಂದ ಯುಕ್ತವಾದಾಗ ಪಿತೃಗಳನ್ನು ಪೂಜಿಸಿದರೆ ಹನ್ನೆರಡು ವರ್ಷ ತೃಪ್ತಿಯಾಗುವುದು. ಧನಿಷ್ಠ, ಪೂರ್ವಾಭಾದ್ರಪದ, ಅಥವಾ ಶತಭಿಷ ನಕ್ಷತ್ರದಿಂದ ಯುಕ್ತವಾದ ಅಮಾವಾಸ್ಯಾ ದಿನಗಳಲ್ಲಿ ಶ್ರಾದ್ಧ ಮಾಡಿದರೆ ಪಿತೃಗಣದವರಿಗೆ ಅತ್ಯಂತ ತೃಪ್ತಿಯಾಗುವುದು. ಗಂಗಾ ಯಮುನಾ ಸರಸ್ವತೀ ಗೋಮತೀ, ಮುಂತಾದ ಪುಣ್ಯ ನದಿಗಳಲ್ಲಿ ಸ್ನಾನಮಾಡಿ ಶ್ರಾದ್ಧ ಮಾಡುವುದರಿಂದ ಮನುಷ್ಯನ ಪಾಪಗಳೆಲ್ಲವೂ ನಷ್ಟವಾಗುತ್ತವೆ.

## ಪರ್ವಕಾಲದಲ್ಲಿ ತಿಲ ತರ್ಪಣ

ಪಿತೃಭಕ್ತನಾದ ಪರೂರವ ಮಹಾರಾಜನು ಹಿಂದೆ ಶ್ರೀಸನತ್ಕುಮಾರರಿಗೆ ನಮಸ್ಕಾರ ಮಾಡಿ ವಿನಯದಿಂದ ಶ್ರಾದ್ಧಕ್ಕೆ ಪ್ರಶಸ್ತವಾದ ದಿನಗಳು ಯಾವವು ಎಂಬ ಪ್ರಶ್ನೆ ಕೇಳಿದನು. ಅದಕ್ಕೆ ಸನತ್‌ಕುಮಾರರು ಹೀಗೆ ಹೇಳಿದರು.

**ಸನತ್‌ಕುಮಾರ್** :- ವೈಶಾಖ ಶುಕ್ಲ ತೃತೀಯಾ, ಕಾರ್ತಿಕ ಶುದ್ಧ ನವಮಿ, ಭಾದ್ರಪದ ಶುದ್ಧ ತ್ರಯೋದಶಿ, ಮಾಘಮಾಸದ ಅಮಾವಾಸ್ಯೆ, ಈ ನಾಲ್ಕು ತಿಥಿಗಳು ಯುಗಾದಿ ತಿಥಿಗಳು ಎಂದು ಪುರಾಣದಲ್ಲಿ ಹೇಳಿರುತ್ತಾರೆ. ಇವು ನಾಲ್ಕು ಶ್ರಾದ್ಧಕ್ಕೆ ವಿಹಿತವಾದ ಅತ್ಯಂತ ಪ್ರಶಸ್ತ ದಿನಗಳಾಗಿರುತ್ತವೆ. ಗ್ರಹಣ, ಸಂಕ್ರಮಣ, ಅಷ್ಟಕ, ಮುಂತಾದ ದಿನಗಳಲ್ಲಿ ಪಿತೃಗಳಿಗೆ ಭಕ್ತಿಯಿಂದ ಎಳ್ಳು ಸಹಿತ ನೀರಿನಿಂದ ತರ್ಪಣಕೊಟ್ಟರೆ ಒಂದು ಸಾವಿರ ವರ್ಷ ಶ್ರಾದ್ಧ ಮಾಡಿದಷ್ಟು ಪುಣ್ಯ ಬರುತ್ತದೆ ಎಂದು ಪಿತೃಗಳೇ ಹೇಳುತ್ತಾರೆ. ಮಾಘ ಅಮಾವಾಸ್ಯೆಯ ದಿವಸ ಧನಿಷ್ಠಾ, ಪೂರ್ವಭಾದ್ರಪದಾ ನಕ್ಷತ್ರಗಳ ಯೋಗವಿದ್ದಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಿದರೆ ಅವರಿಗೆ ಅತ್ಯಂತ ತೃಪ್ತಿಯಾಗುತ್ತದೆ. ಶ್ರಾದ್ಧಕ್ಕೆ ಮುಖ್ಯವಾಗಿ ಶುದ್ಧ ಮನಸ್ಸು, ಪ್ರಶಸ್ತವಾದ ಕಾಲ, ಶಾಸ್ತ್ರೋಕ್ತ ವಿಧಾನ, ನ್ಯಾಯಾರ್ಜಿತವಾದ ದ್ರವ್ಯ, ಯೋಗ್ಯಪಾತ್ರ ಮತ್ತು ಅತ್ಯಂತ ಭಕ್ತಿ ಇವು ಅತಿ ಅವಶ್ಯಕವಿರುತ್ತವೆ. ಇವುಗಳಿಂದ ಮನುಷ್ಯನಿಗೆ ಇಚ್ಛಿತಫಲವು ಪ್ರಾಪ್ತವಾಗುತ್ತದೆ.

''ಚಿತ್ತಂ ಚ ವಿತ್ತಂ ಚ ನೃಣಾಂ ವಿಶುದ್ಧಂ।
ಶಸ್ತಶ್ಚ ಕಾಲಃ ಕಥಿತೊ ವಿಧಿಶ್ಚ ॥
ಪಾತ್ರಂ ಯಥೋಕ್ತಂ ಪರಮಾ ಚ ಭಕ್ತಿಃ ।
ನೃಣಾಂ ಪ್ರಯಚ್ಛಂತ್ಯಭಿವಾಂಛಿತಾನಿ'' ॥

## ಪಿತೃಗಳ ನಿರೀಕ್ಷೆ, ಅಪೇಕ್ಷೆ

ರಾಜನೇ, ಪಿತೃಗಳು ತಮ್ಮ ವಂಶದಲ್ಲಿ ಶ್ರದ್ಧೆಯಿಂದ ಶ್ರಾದ್ಧಮಾಡುವ ಪುಣ್ಯಾತ್ಮನು ಹುಟ್ಟಬಹುದೇ, ಎಂದು ಕಾಯುತ್ತ ಕುಳಿತಿರುತ್ತಾರೆ. ಪಿತೃಗಳು ತಮ್ಮ ವಂಶದ ಜನರಿಂದ ನಿರೀಕ್ಷಿಸುವುದೇನು? ಆ ಪಿತೃಗಳು ಹಾಡುವ ಕೆಲವು ಪದ್ಯಗಳನ್ನು ಓದಿದರೆ ಅವರ ಅಭಿಪ್ರಾಯವು ಇಂತು ತಿಳಿದು ಬರುತ್ತದೆ. ''ನಮ್ಮ ಕುಲದಲ್ಲಿ ಸಂಪತ್ತು ಬಂದಾಗ ಶಾಠ್ಯವನ್ನು ಮಾಡದೆ ಪಿತೃಗಳಿಗೆ ಪಿಂಡದಾನ ಮಾಡುವ ಪುಣ್ಯಾತ್ಮನು ಎಂದಾದರೂ ಹುಟ್ಟಬಹುದೇ? ಐಶ್ವರ್ಯವಿದ್ದಾಗ ನಮ್ಮನ್ನು (ಪಿತೃಗಳನ್ನು) ಉದ್ದೇಶಿಸಿ ವಸ್ತ್ರ, ರತ್ನ ಬಂಗಾರ, ವಾಹನ, ಮತ್ತು ಬೇರೆ ಬೇರೆ ಭೋಗ ಸಾಮಗ್ರಿ ಮತ್ತೂ ರೋಖ ಹಣ ಇವುಗಳನ್ನು ಬ್ರಾಹ್ಮಣರಿಗೆ ಕೊಡುವ ಕೊಡುಗೈಯ ಉದಾರ ಮನುಷ್ಯನು ನಮ್ಮ ಕುಲದಲ್ಲಿ ಹುಟ್ಟುಬಹುದೇ! ಅಷ್ಟೂ ಐಶ್ವರ್ಯ ಇಲ್ಲದಿದ್ದರೆ ಶ್ರಾದ್ಧಕಾಲವು ಬಂದಾಗ ಶ್ರೇಷ್ಠ ಬ್ರಾಹ್ಮಣರನ್ನು ಕರೆದು ಯಥಾಶಕ್ತಿ ಅನ್ನದಾನ ಮಾಡುವ ಭಕ್ತಿವಂತ ಮಾನವನಾದರೂ ನಮ್ಮ ಕುಲದಲ್ಲಿ ಜನಿಸಬಹುದೋ? ಅಷ್ಟು ಯೋಗ್ಯತೆ ಇಲ್ಲದಿದ್ದರೆ ಬ್ರಾಹ್ಮಣರಿಗೆ ಧಾನ್ಯವನ್ನೂ ಯಥಾ ಶಕ್ತಿ ದಕ್ಷಿಣೆಯನ್ನೂ ಕೊಡಬಹುದು.

ಅಷ್ಟೂ ಸಾಮರ್ಥ್ಯವಿಲ್ಲದಿದ್ದರೆ ಒಳ್ಳೇ ಬ್ರಾಹ್ಮಣರಿಗೆ ಹೋಗಿ ನಮಸ್ಕಾರ ಮಾಡಿ ಒಂದು ಮುಷ್ಟಿ ಎಳ್ಳನ್ನು ಕೊಟ್ಟು ಕೈ ಮುಗಿದು ಬರಬೇಕು. ಅಥವಾ ಏಳೆಂಟು ಮುಷ್ಟಿ ಎಳ್ಳನ್ನು ಪಿತೃಗಳನ್ನು ಉದ್ದೇಶಿಸಿ ಜಲಾಂಜಲಿಯೊಂದಿಗೆ ಭಕ್ತಿಯಿಂದ ಬಾಗಿ ನಮಗೆ ಕೊಡಬೇಕು. ಅಷ್ಟಕ್ಕೂ ಅವನಿಗೆ ಯೋಗ್ಯತೆ ಇಲ್ಲದಿದ್ದರೆ ಆ ಪಿತೃದಿನದಂದು ಅತ್ತಿತ್ತ

ತಿರುಗಾಡಿ ಎಳೆ ಹುಲ್ಲು, ಮೇವು ಕೂಡಿಸಿ ತಂದು ಶ್ರದ್ಧೆಯಿಂದ ಪಿತೃಗಳ ಉದ್ದೇಶದಿಂದ ಆಕಳಿಗೆ ಒಂದು ದಿನ ಹೊಟ್ಟೆತುಂಬ ತಿನ್ನಲಿಕ್ಕೆ ಹಾಕಿ ಮೇಯಿಸಬೇಕು. ಇದಾವುದೂ ಆಗದಿದ್ದರೆ ಅಡಿವಿಗೆ ಹೋಗಿ ಬಗಲು ಎತ್ತಿ ಸೂರ್ಯನೇ ಮೊದಲಾದ ಲೋಕಪಾಲಕರನ್ನು ಉದ್ದೇಶಿಸಿ ಹೀಗೆ ಒದರಿ ಹೇಳಬೇಕು.

## ಕಡೆಯ ಪಕ್ಷ

''ನನ್ನ ಹತ್ತಿರ ಶ್ರಾದ್ಧಕ್ಕೆ ಉಪಯೋಗವಾಗುವ ವಸ್ತು ಇಲ್ಲ. ವೆಚ್ಚ ಮಾಡಲಿಕ್ಕೆ ಹಣವಿಲ್ಲ. ಆದುದರಿಂದ ಬೇರಾವದಾರಿಯೂ ಇಲ್ಲದ ನಾನು ಭಕ್ತಿಯಿಂದ ಪಿತೃಗಳಿಗೆ ನಮಸ್ಕಾರ ಮಾಡುತ್ತೇನೆ. ನನ್ನ ಈ ಭಕ್ತಿಯುಕ್ತ ಪ್ರಣಾಮದಿಂದ ನನ್ನ ಪಿತೃಗಳು ಸಂತೃಪ್ತರಾಗಲಿ ಎಂದು ನಾನು ಗಾಳಿಯಲ್ಲಿ ಎರಡು ಕೈಗಳನ್ನು ಎತ್ತಿ ಪ್ರಾರ್ಥಿಸುತ್ತೇನೆ.

**''ನ ಮೇऽಸ್ತೀ ವಿತ್ತಂ ನ ಧನಂ ನ ಚಾನ್ಯತ್ ।**
**ಶ್ರಾದ್ಧೋಪಯೋಗ್ಯಂ ಸ್ವಪಿತೄನ್ನತೋऽಸ್ಮಿ ॥**
**ತೃಪ್ಯಂತು ಭಕ್ತ್ಯಾ ಪಿತರೋ ಮಮೇತೌ ॥**
**ಕೃತೌ ಭುಜೌ ವರ್ತ್ಮನಿ ಮಾರುತಸ್ಯ ॥**

**ಔರ್ವಮುನಿ** - ಸಗರರಾಜ! ಹಣ ಮತ್ತು ಉಪಕರಣಗಳು ಎಷ್ಟೇ ಇರಲಿ ಅಥವಾ ಇಲ್ಲದೇ ಇರಲಿ, ಈ ಮೇಲೆ ಹೇಳಿದ ಯಾವುದಾದರೂ ಒಂದು ಕಲ್ಪದಿಂದ ಪಿತೃಗಳನ್ನು ನಿರ್ದಿಷ್ಟ ಕಾಲದಲ್ಲಿ ತೃಪ್ತಿಗೊಳಿಸಬೇಕು. ಶ್ರಾದ್ಧಕ್ಕೆ ಸಿರಿ, ಸಾಮಗ್ರಿ, ಸಲಕರಣೆಗಳು ಒಂದು ವೇಳೆ ಇಲ್ಲದಿದ್ದರೂ ಶ್ರದ್ಧೆ ಮಾತ್ರ ಇದ್ದರೆ ಸಾಕು. ಇದ್ದುದರಲ್ಲಿಯೇ ಶ್ರಾದ್ಧವನ್ನು ಮಾಡಿ ಮುಗಿಸಬಹುದು. ಶ್ರದ್ಧೆಯಿಂದ ಮಾಡಿದ್ದೇ ಶ್ರಾದ್ಧವೆನಿಸುತ್ತದೆ. ಪಿತೃಗಳ ಅಪೇಕ್ಷೆಯೂ ಇದೇ ಆಗಿರುತ್ತದೆ.

## ಶ್ರಾದ್ಧದ ಊಟಕ್ಕೆ ಯಾರನ್ನು ಕೂಡಿಸಬೇಕು?

ಶ್ರಾದ್ಧಕ್ಕೆ ಬ್ರಹ್ಮವಿದ್ಯೆ ಮತ್ತು ಉಪನಿಷತ್ತುಗಳಲ್ಲಿ ಹೇಳಿದ ಮಧುವಿದ್ಯೆ ಹಾಗೂ ಅಧ್ಯಾತ್ಮ ವಿದ್ಯೆಗಳನ್ನು ಬಲ್ಲಂಥ ವಿದ್ವಾಂಸರನ್ನು ಅಥವಾ ವೇದ ಪಾರಂಗತರಾದ ಶ್ರೋತ್ರಿಯ ಬ್ರಾಹ್ಮಣರನ್ನು, ಪುರೋಹಿತರನ್ನು, ಭಗವದ್ ಭಕ್ತರನ್ನೂ, ಸಾಮಗಾನ ಮಾಡುವವರನ್ನು ಕೂಡಿಸಬೇಕು. ಇವರಿಗೆ ಶ್ರಾದ್ಧ ಭೋಜನದಲ್ಲಿ ಅಗ್ರಪ್ರಾಶಸ್ತ್ಯವನ್ನು ಕೊಡಬೇಕು. ಅನಂತರ ಸೋದರಳಿಯ, ಮಗಳ ಮಗ, ಅಳಿಯ, ಮಾವ, ಮುಂತಾದ ಬಳಗದವರನ್ನು ಯೋಗ್ಯರಾಗಿದ್ದರೆ ಕೂಡಿಸಬೇಕು. ಪಂಚಾಗ್ನಿ ಸಾಧನವನ್ನು ಮಾಡಿಕೊಂಡು ತಪಸ್ಸನ್ನು, ಮಾಡುವ ಯೋಗಿಗಳು ದೊರೆತರಂತೂ ಬಹಳೇ ಉತ್ತಮ. ಸಂಬಂಧಿಕರನ್ನು, ಶಿಷ್ಯರನ್ನು, ಬಂಧುಬಳಗದವರನ್ನು, ಸಾಧಾರಣ ಬ್ರಾಹ್ಮಣರನ್ನು ಮೊದಲಿನ ಶಿಷ್ಟವಿಶಿಷ್ಟ ಬ್ರಾಹ್ಮಣರ ಭೋಜನವಾದ ಬಳಿಕ ಭೋಜನ ಮಾಡಿಸಬೇಕು. ಈ ಅಪ್ತೇಷ್ಟ ಭೋಜನದಿಂದ ಪಿತೃಗಳಿಗೆ ಸಂತೋಷವಾಗುವುದು.

## ಶ್ರಾದ್ಧಕ್ಕೆ ಯಾರನ್ನು ಕೂಡಿಸಬಾರದು ?

ಮಿತ್ರದ್ರೋಹಿ, ಷಂಢ, ಕನ್ಯೆಯರನ್ನು ಕೆಡಿಸಿದವ, ಸಂಧ್ಯಾವಂದನೆಯನ್ನು ಮಾಡದವ, ಕಳ್ಳ, ಚಾಡಿಕೋರ, ಸಂಬಳ ತೆಗೆದುಕೊಂಡು ಶಾಸ್ತ್ರ ಪಾಠ ಹೇಳದವ, ಕಪ್ಪು ಹಲ್ಲುಳ್ಳವ, ಪುನರ್ವಿವಾಹ ಮಾಡಿಕೊಂಡವ, ತಾಯಿ, ತಂದೆಗಳನ್ನು ಮನೆ ಬಿಟ್ಟು ಹೊರಗೆ ಹಾಕಿದವ, ಶೂದ್ರ ಸ್ತ್ರೀ ಸಹವಾಸ ಮಾಡಿದವ, ದೇವರಿಗೆಂದು ಕೊಟ್ಟ ಸಾಮಗ್ರಿಯನ್ನು ತಾನೇ ತಿನ್ನುವ ಪೂಜಾರಿ, ಪರಿಚಾರಕ ಮತ್ತು ಇತರ ನಿಂದ್ಯ ನಿಷಿದ್ಧವಾದ ಕೃತ್ಯಗಳನ್ನು ಮಾಡುವ ಮನುಷ್ಯರನ್ನು ಶ್ರಾದ್ಧಕ್ಕೆ ಕೂಡಿಸಬಾರದು.

## ಕಾಮ ಕ್ರೋಧ ಬಿಡಬೇಕು

ಶ್ರಾದ್ಧ ತಿಥಿಯ ಮುನ್ನ ದಿನವೇ ಯೋಗ್ಯರಾದ ಬ್ರಾಹ್ಮಣರ ಮನೆಗೆ ಹೋಗಿ ''ನಾಳೆ ತಾವು ನಮ್ಮ ಮನೆಗೆ ಪಿತೃಸ್ಥಾನ ಬ್ರಾಹ್ಮಣರಾಗಿ ಭೋಜನಕ್ಕೆ ಬರಬೇಕು. ಮತ್ತು ತಾವು ದೇವಸ್ಥಾನ ಬ್ರಾಹ್ಮಣರಾಗಿ ದಯಮಾಡಿಸಬೇಕು'' ಎಂದು ಆಮಂತ್ರಣ ಹೇಳಿ ಬೇರೆ ಬೇರೆ ಬ್ರಾಹ್ಮಣರಿಗೆ ತಿಳಿಸಿ ಬರಬೇಕು. ಆಮಂತ್ರಣವಾದ ಬಳಿಕ ಯಜಮಾನನೂ ಬ್ರಾಹ್ಮಣರೂ ಕೋಪವನ್ನು ಮಾಡಬಾರದು. ಸ್ತ್ರೀ ಸಂಗವನ್ನು ಮಾಡಿದರೆ ಬ್ರಾಹ್ಮಣನಿಗೂ ಒಡೆಯನಿಗೂ ಘೋರ ನರಕವಾಗುವುದು. ಮತ್ತು ಅವರ ಪಿತೃಗಳೂ ನರಕದಲ್ಲಿ ಬೀಳುವರು. ಶ್ರಾದ್ಧದ ದಿನದಲ್ಲಿ ಆಮಂತ್ರಣ ಹೇಳಿದ ಬ್ರಾಹ್ಮಣರನ್ನು ಮತ್ತೊಮ್ಮೆ ಭೋಜನಕ್ಕಾಗಿ ಮನೆಯವರೆಗೆ ಹೋಗಿ ಕರೆದು ಬರಬೇಕು. ಅವರಲ್ಲದೆ ಅಂದು ಮನೆಗೆ ಬೇರೇ ಬ್ರಾಹ್ಮಣರು ತಾವಾಗಿ ಬಂದರೆ ಅಥವಾ ಸನ್ಯಾಸಿಗಳು ದಯಮಾಡಿಸಿದರೆ ಅವರಿಗೆ ಅಲ್ಲಿಯೇ ಆಮಂತ್ರಣವನ್ನು ಕೊಟ್ಟು ಅತ್ಯಾದರದಿಂದ ಭೋಜನ ಮಾಡಿಸಬೇಕು. ಪಿತೃ ಸ್ಥಾನಕ್ಕೆ ೧-೩ ಹೀಗೆ ವಿಷಮ ಸಂಖ್ಯೆಯಲ್ಲಿ ಬ್ರಾಹ್ಮಣರನ್ನೂ, ದೇವಸ್ಥಾನಕ್ಕೆ ೨-೪ ಹೀಗೆ ಸಮಸಂಖ್ಯೆಯಲ್ಲಿಯೂ ಯಥಾ ಶಕ್ತಿ ಬ್ರಾಹ್ಮಣರ ಭೋಜನ ಮಾಡಿಸಬೇಕು. ಯೋಗ್ಯತೆ ಇಲ್ಲದಿದ್ದರೆ ಕನಿಷ್ಠ ಒಬ್ಬೊಬ್ಬ ಬ್ರಾಹ್ಮಣರನ್ನಾದರೂ ಕೂಡಿಸಬೇಕು.

ದೇವಸ್ಥಾನದ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿಯೂ ಪಿತೃ ಸ್ಥಾನದ ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿಯೂ ಭೋಜನಕ್ಕೆ ಕೂಡಿಸತಕ್ಕದ್ದು. ಊಟಕ್ಕಿಂತ ಮೊದಲು ಆಮಂತ್ರಿತ ಬ್ರಾಹ್ಮಣರನ್ನು ಆದರದಿಂದ ಕರೆದು ಕುಶಾಸನವನ್ನಿತ್ತು, ಅರ್ಘ್ಯಕೊಟ್ಟು, ಅವರ ಆಜ್ಞೆಯಿಂದ ಅಲ್ಲಿ ದೇವತೆಗಳಿಗೆ ಅವ್ಹಾನ ಮಾಡಬೇಕು. ಅಕ್ಕಿಕಾಳು ಕೂಡಿದ ನೀರಿನಿಂದ ಆವಾಹಿತರಾದ ದೇವತೆಗಳ ಅರ್ಘ್ಯ, ಹೂ, ಗಂಧ, ಧೂಪ, ಮಾಲೆ ಮುಂತಾದವುಗಳನ್ನು ವಿಧಿ ಪೂರ್ವಕವಾಗಿ ನೀಡಬೇಕು. ಈ ಎಲ್ಲ ಉಪಚಾರವನ್ನೂ ಪಿತೃಸ್ಥಾನದವರಿಗೆ ಅಪಸವ್ಯವಾಗಿ ಅಂದರೆ ಜನಿವಾರವನ್ನು ಎಡಕ್ಕೆ ಹಾಕಿಕೊಂಡು ಕೊಡಬೇಕು. ಅನಂತರ ಬ್ರಾಹ್ಮಣರ ಅನುಮತಿ ಪಡೆದು ಎರಡು ಭಾಗ ಮಾಡಿದ ದರ್ಭಗಳನ್ನು ಕೊಟ್ಟು ಮಂತ್ರ ಉಚ್ಚಾರಣ ಪೂರ್ವಕವಾಗಿ ಪಿತೃಗಳನ್ನು ಆವಾಹನ ಮಾಡಬೇಕು. ಮತ್ತು ಅಪಸವ್ಯದಿಂದ ಆ ಪಿತೃಗಳಿಗೆ ಅರ್ಘ್ಯವನ್ನು ನೀಡಬೇಕು.

ಈ ಶ್ರಾದ್ಧ ಕಾಲದಲ್ಲಿ ಬೇರೆ ಅತಿಥಿಯು ಬಂದರೆ ಆಮಂತ್ರಿತರಾದ ಬ್ರಾಹ್ಮಣರ ಅಪ್ಪಣೆಯಿಂದ ಆಗಂತುಕರನ್ನೂ ಕರೆದು ಯಥೇಚ್ಛ ಭೋಜನ ಮಾಡಿಸಬೇಕು. ಇಲ್ಲದಿದ್ದರೆ ಶ್ರಾದ್ಧ ಮಾಡಿದ ಪುಣ್ಯವೆಲ್ಲವೂ ನಷ್ಟವಾಗಿ ಹೋಗುತ್ತದೆ. ಅನಂತರ ಆ ಬ್ರಾಹ್ಮಣರ ಅಪ್ಪಣೆಯಿಂದ ಅಗ್ನಿಯಲ್ಲಿ ಉಪ್ಪು ಮುಂತಾದ ಯಾವ ವ್ಯಂಜನ ಪದಾರ್ಥವನ್ನು ಬೆರಸದೆ ಇರುವ ಶುದ್ಧಾನ್ನದಿಂದ ಮೂರು ಆಹುತಿಗಳನ್ನು ಕೊಡಬೇಕು. ''ಅಗ್ನಯೇ ಕವ್ಯವಾಹನಾಯ ಸ್ವಾಹಾ'' ಎಂದು ಮಂತ್ರದಿಂದ ಎರಡನೇ ಆಹುತಿಯನ್ನೂ. ''ವೈವಸ್ವತಾಯ ಸ್ವಾಹಾ'' ಎಂದು ಮೂರನೇ ಆಹುತಿಯನ್ನೂ ಕೊಡಬೇಕು. ಈ ಆಹುತಿಯನ್ನು ಕೊಟ್ಟು ಉಳಿದ ಅನ್ನವನ್ನು ಎಲ್ಲ ಬ್ರಾಹ್ಮಣರ ಪಾತ್ರೆಗಳಲ್ಲಿ ಸ್ವಲ್ಪ ಸ್ವಲ್ಪ ಬಡಿಸಬೇಕು ಅನಂತರ ಬ್ರಾಹ್ಮಣರಿಗೆ ಬೇಕಾದ ಬಗೆ ಬಗೆಯ ಮೃಷ್ಟಾನ್ನ ಮತ್ತೂ ವ್ಯಂಜನ ಪದಾರ್ಥಗಳನ್ನು ಬಡಿಸಿ ''ಯಥಾ ಸುಖಂ ಜುಷಧ್ವಂ'' ಎಂದು ಕೈ ಮುಗಿದು ವಿನಯದಿಂದ ಬಿನ್ನವಿಸಬೇಕು. ಬ್ರಾಹ್ಮಣರಾದರೂ ಪ್ರಸನ್ನ ಮುಖದಿಂದ ಮೌನವಾಗಿ ಸುಖವಾಗಿ ಕುಳಿತು ಊಟ ಮಾಡಬೇಕು. ಯಜಮಾನನು ಸಾವಧಾನವಾಗಿ ಶಾಂತ ಮನಸ್ಸಿನಿಂದ ಬ್ರಾಹ್ಮಣರಿಗೆ ಬಡಿಸಬೇಕು.

## ವಿಪ್ರರಲ್ಲಿ ಅಪ್ಪ ಅಜ್ಜ ಬಂದಿರುತ್ತಾರೆ.

ಬ್ರಾಹ್ಮಣರು ಊಟ ಮಾಡುವಾಗ ''ಓಂ ಅಪಾಹತಾ ಅಸುರಾ ರಕ್ಷಾಂಸಿ ವೇದಿಷದಃ'' ಎಂಬ ರಕ್ಷೋಘ್ನ ಮಂತ್ರವನ್ನು ಪಠಿಸುತ್ತ ಶ್ರಾದ್ಧ ಮಾಡಿದ ನೆಲದ ಮೇಲೆ ಎಳ್ಳುಗಳನ್ನು ಹಾಕಿ ''ನಮ್ಮ ಪಿತೃಗಳೇ ಈ ಬ್ರಾಹ್ಮಣರ ರೂಪದಿಂದ ಇಲ್ಲಿ ಬಂದು ಕುಳಿತಿದ್ದಾರೆ'' ಎಂದು ಭಾವಿಸಬೇಕು. ಮತ್ತು ಮನಸ್ಸಿನಲ್ಲಿ ''ಬ್ರಾಹ್ಮಣರಲ್ಲಿ ಸನ್ನಿಹಿತರಾದ ನನ್ನ ತಂದೆ, ತಂದೆಯ ತಂದೆ, ಮತ್ತೂ ನನ್ನ ಮುತ್ತಜ್ಜರು, ನಾನು ನೆಲದ ಮೇಲೆ ಇಟ್ಟು ಕೊಟ್ಟ ಈ ಪಿಂಡದಿಂದ ತೃಪ್ತಿಯನ್ನೂ ಹೊಂದಲಿ. ನನ್ನ ತಾಯಿಯ ತಂದೆ, ತಾಯಿಯ ಅಜ್ಜ, ಮತ್ತೂ ತಾಯಿಯ ಮುತ್ತಜ್ಜ ಮೊದಲಾದ ಪಿತೃಗಳೆಲ್ಲರೂ ಸಂತೃಪ್ತರಾಗಲಿ. ಎಲ್ಲ ಹವ್ಯಕವ್ಯಗಳ ಭೋಕ್ತಾರನಾದ ಯಜ್ಞಪತಿ ಶ್ರೀ ಹರಿಯು ಇಲ್ಲಿ ಇರುವುದರಿಂದ ಎಲ್ಲ ರಾಕ್ಷಸರು ಇಲ್ಲಿಂದ ಓಡಿ ಹೋಗಲಿ. ಎಲ್ಲ ದೇವತೆಗಳು ಸಂತುಷ್ಟರಾಗಲಿ'' ಎಂದೂ ಮನಸ್ಸಿನಲ್ಲಿ ಚಿಂತಿಸಬೇಕು.

ಬ್ರಾಹ್ಮಣರು ತೃಪ್ತರಾದ ಬಳಿಕ ತುಸು ಅನ್ನವನ್ನು ಅವರ ಎಲೆಯ ಮುಂದೆ ಉದುರಿಸಬೇಕು. ಇಚ್ಛಾ ಭೋಜನದಿಂದ ತೃಪ್ತಿಯನ್ನು ಹೊಂದಿದ ಆ ಬ್ರಾಹ್ಮಣರ ಅಪ್ಪಣೆ ಪಡೆದು, ನೆಲದ ಮೇಲೆ ದರ್ಭೆಹಾಸಿ ಅದರ ಮೇಲೆ ತಿಲಸಹಿತವಾದ ಅನ್ನದಿಂದ ಮಾಡಿದ ಪಿಂಡಗಳನ್ನು ಇಡಬೇಕು. ಅವುಗಳ ಮೇಲೆ ಪಿತೃ ತೀರ್ಥದಿಂದ ಎಳ್ಳು ನೀರು ಬಿಡಬೇಕು. ಅದರಂತೆ ಮಾತಾಮಹ ಮೊದಲಾದವರನ್ನು ಉದ್ದೇಶಿಸಿ ಪಿಂಡದಾನವನ್ನು ಮಾಡಬೇಕು. ಬ್ರಾಹ್ಮಣರ ಎಲೆಯ ಹತ್ತಿರ ದಕ್ಷಿಣಾಭಿಮುಖವಾಗಿ ಹರವಿದ ದರ್ಭೆಗಳ ಮೇಲೆ ಮೊದಲು ತಂದೆಯ ಪಿಂಡವನ್ನು ಇಡಬೇಕು. ಅನಂತರ ಅಜ್ಜನ ಪಿಂಡವನ್ನೂ ಆ ಮೇಲೆ ಮುತ್ತಜ್ಜನ ಪಿಂಡವನ್ನೂ ಇಡಬೇಕು. ಇದರಂತೆ ತಾಯಿಯ ತಂದೆ, ತಾತ,

ಮುತ್ತಾತರನ್ನೂ ಉದ್ದೇಶಿಸಿ ಪಿಂಡಗಳನ್ನು ಇಡಬೇಕು. ಮತ್ತೂ ಆ ಎಲ್ಲ ಪಿಂಡಗಳಿಗೂ ಪುಷ್ಪ, ಧೂಪ, ನಿರ್ಮಾಲ್ಯ, ಗಂಧ ಮುಂತಾದವುಗಳಿಂದ ಪೂಜೆ ಮಾಡಬೇಕು. ಅನಂತರ ತನ್ನ ಕೈಗೆ ಹತ್ತಿದ ಅನ್ನವನ್ನು ದರ್ಭದ ಮೂಲಭಾಗದಲ್ಲಿ ಉದುರಿಸಿ ''ಲೇಪಭಾಗ ಭುಜಃ ತೃಷ್ಯಂತಾಂ'' ಎಂದು ಹೇಳಬೇಕು. ಅನಂತರ ಭಕ್ತಿಯಿಂದ ಪಿತೃಸ್ಥಾನ ಬ್ರಾಹ್ಮಣರಿಗೆ ಅನಂತರ ದೇವಸ್ಥಾನದಲ್ಲಿ ಇರುವ ಬ್ರಾಹ್ಮಣರಿಗೂ ದಕ್ಷಿಣೆಯನ್ನು ಕೊಡಬೇಕು. ಅನಂತರ ಉಭಯ ಬ್ರಾಹ್ಮಣರನ್ನು ಆಶೀರ್ವಾದಕ್ಕಾಗಿ ಪ್ರಾರ್ಥನೆ ಮಾಡಿಕೊಂಡು ಆಶೀರ್ವಾದ ಪಡೆಯಬೇಕು. ಮಾತಾಮಹಾದಿ ಶ್ರಾದ್ಧಗಳನ್ನೂ ಇದೇ ರೀತಿಯಾಗಿ ಮಾಡಬೇಕು. ಅನಂತರ ಮೊದಲು ಪಿತೃಸ್ಥಾನದ ಬ್ರಾಹ್ಮಣರನ್ನು ಊಟದಿಂದ ಎಬ್ಬಿಸಬೇಕು. ಆ ಬಳಿಕ ದೇವಸ್ಥಾನದ ಬ್ರಾಹ್ಮಣರನ್ನು ಏಳಗೊಡಬೇಕು. ಭೋಜನವಾದ ಬಳಿಕ ಅವರ ಜೊತೆಗೆ ಪ್ರೀತಿಯ ಮಾತುಗಳನ್ನಾಡಿ ಮರ್ಯಾದೆಯಿಂದ ಬ್ರಾಹ್ಮಣರನ್ನು ಬೀಳ್ಕೊಡಬೇಕು. ಮತ್ತು ಬಾಗಿಲವರೆಗೆ ಹೋಗಿ ಕಳಿಸಿ ಬರಬೇಕು.

## ಮುಖ್ಯ ಮೂರು

ಅನಂತರ ತನ್ನ ಬಂಧು ಭೃತ್ಯ ಮಿತ್ರ ಬಳಗದವರಿಂದಲೂ ಹಿರಿಕಿರಿಯರಿಂದಲೂ ಕೂಡಿಕೊಂಡು ಊಟ ಮಾಡಬೇಕು. ಶ್ರಾದ್ಧದಲ್ಲಿ ಮೂರು ಪದಾರ್ಥಗಳು ಅತ್ಯಂತ ಪವಿತ್ರವಾಗಿರುತ್ತವೆ. ಎಳ್ಳು, ಕುತುಪಕಾಲ, ಮತ್ತು ದೌಹಿತ್ರ ಈ ಮೂರು ಮುಖ್ಯವಾಗಿರುತ್ತವೆ. ಮಧ್ಯಾನ್ಹ ಅನಂತರದ ಕಾಲಕ್ಕೆ ಕುತುಪಕಾಲವೆನ್ನುತ್ತಾರೆ. ಶ್ರಾದ್ಧವನ್ನು ಈ ಕುತಪಕಾಲದಲ್ಲಿಯೇ ಮಾಡಬೇಕು ಮತ್ತು ಅದಕ್ಕೆ ಕರಿಯ ಎಳ್ಳನ್ನು ಉಪಯೋಗಿಸಬೇಕು. ಹಾಗೂ ಮಗಳ ಮಗನನ್ನು ಭೋಜನಕ್ಕೆ ಕೂಡಿಸಬೇಕು. ಶ್ರಾದ್ಧದಲ್ಲಿ ಬೆಳ್ಳಿಯನ್ನು ದಾನ ಕೊಟ್ಟರೆ ವಿಶೇಷ ಪುಣ್ಯ. ಎಲ್ಲದಕ್ಕಿಂತಲೂ ಮುಖ್ಯವೆಂದರೆ ಪರಮಾತ್ಮನ ನಾಮಸ್ಮರಣೆ, ಭಗವತ್ ಕಥಾ ಪ್ರವಚನ, ಪಾರಾಯಣ, ಕೀರ್ತನೆ, ದೇವರ ಮೇಲಿನ ಪದ ಪದ್ಯಗಳನ್ನು ಹಾಡುವುದು ಇತ್ಯಾದಿ. ಶ್ರಾದ್ಧದಿನದಲ್ಲಿ ಬಿಡಬೇಕಾದದ್ದು ಮೂರು. ಸಿಟ್ಟು, ಪ್ರಯಾಣ, ಮತ್ತು ಗಡಿಬಿಡಿ. ಅಲ್ಲಿ ಊಟ ಮಾಡಿದವರೂ ಕೂಡ ಈ ಮೂರನ್ನು ತ್ಯಜಿಸಬೇಕು. ಪಿತೃಗಣದವರಿಗೆ ಚಂದ್ರನು ಆಧಾರ. ಚಂದ್ರನಿಗೆ ಯೋಗವು ಆಧಾರ. ಆದ್ದರಿಂದ ಶ್ರಾದ್ಧದಲ್ಲಿ ಯೋಗಿಗಳನ್ನು ಕೂಡಿಸುವುದು ಅತ್ಯುತ್ತಮವಾಗಿರುತ್ತದೆ. ಶ್ರಾದ್ಧದ ಊಟವನ್ನು ಉಂಡು ಸಾವಿರಾರು ಬ್ರಾಹ್ಮಣರಲ್ಲಿ ಒಬ್ಬನಾದರೂ ಜ್ಞಾನಯೋಗಿ ಅಥವಾ ಭಕ್ತಿಯೋಗಿಯಾದ ಮನುಷ್ಯನು ಇದ್ದರೆ ಅವನು ತನ್ನ ಜೊತೆಗೆ ಉಂಡ ಆ ಸಾವಿರ ಬ್ರಾಹ್ಮಣರನ್ನೂ ಊಟಕ್ಕೆ ಹಾಕಿದ ಯಜಮಾನನನ್ನೂ ಉದ್ಧಾರ ಮಾಡುತ್ತಾನೆ.

## ಶ್ರಾದ್ಧದಲ್ಲಿ ವಿಹಿತ ಮತ್ತು ನಿಷಿದ್ಧ ವಸ್ತುಗಳು

ಗಯಾ ಕ್ಷೇತ್ರಕ್ಕೆ ಹೋಗಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಬಹಳ ಸಂತೋಷವಾಗುತ್ತದೆ. ಶ್ರಾದ್ಧಕ್ಕೆ, ಅಕ್ಕಿ, ಉದ್ದು, ಶಾವಕ್ಕಿ, ಗೋದಿ, ಎಳ್ಳು, ಸಾಸಿವೆ, ನವಣಕ್ಕಿ, ಜವೆಗೋದಿ, ಬಟಗಡಲೆ, ಇವೆಲ್ಲವೂ ವಿಹಿತವಾಗಿರುತ್ತವೆ. ಹೊಸ ಧಾನ್ಯವನ್ನು

ದೇವರಿಗೆ ಸಮರ್ಪಣೆ ಮಾಡಿ ನವಾನ್ನ ಎಂಬ ಯಜ್ಞವನ್ನು ಮಾಡದಿದ್ದರೆ ಅಂಥ ಧಾನ್ಯವು ಶ್ರಾದ್ಧಕ್ಕೆ ಬರುವುದಿಲ್ಲ. ಮತ್ತು ಅಲಸಂದಿ, ಚೆನ್ನಂಗಿ ಬೇಳೆ, ಸೂರೆಕಾಯಿ, ಬಿಳೀ ಕುಂಬಳಕಾಯಿ, ಗಜ್ಜರಿ ಮತ್ತು ಉಳ್ಳೀಗಡ್ಡಿ, ಮೂಲಂಗಿ, ಸಮುದ್ರದ ಉಪ್ಪು, ಕೆಂಪು ಇಂಗು ಮುಂತಾದ ಪದಾರ್ಥಗಳು ನಿಷಿದ್ಧವಾಗಿರುತ್ತವೆ. ಮುನ್ನ ದಿನ ರಾತ್ರಿ ತಂದ ನೀರು, ಕೂಪ ಶಾಂತಿಮಾಡದ ಬಾವಿಯ ನೀರು, ಆಕಳು ಕುಡಿಯದ ತಗ್ಗಿನಲ್ಲಿ ನಿಂತ ನೀರು, ಕೆಟ್ಟವಾಸನೆ ಬರುವ ಅಥವಾ ಬುರುಗು ನೀರು ಶ್ರಾದ್ಧಕ್ಕೆ ಯೋಗ್ಯವಲ್ಲ. ಒಂಟಿ ಖುರ ಉಳ್ಳ ಪ್ರಾಣಿಗಳ ಹಾಲು, ಆಡಿನ ಹಾಲು, ಚಿಗರೆಯ ಹಾಲು, ಒಂಟೆಯ ಹಾಲು, ಮತ್ತು ಎಮ್ಮೆಯ ಹಾಲು, ಶ್ರಾದ್ಧದಲ್ಲಿ ನಿಷಿದ್ಧವಾಗಿರುತ್ತವೆ. ಪಾಪಕರ್ಮದಿಂದ ಬಹಿಷ್ಕೃತ, ಪತಿತ, ನೀಚ, ನಪುಂಸಕ, ನಾಸ್ತಿಕ, ನಾಯಿ, ದಿಗಂಬರ, ಬೌದ್ಧ, ಹಂದಿ, ಕೋತಿ, ಮುಟ್ಟಾದ ಹೆಣ್ಣುಮಗಳು, ಮತ್ತು ಸೂತಕದವರು, ಹೆಣಹೊರುವವರು ಇಷ್ಟು ಜನರನ್ನು ಶ್ರಾದ್ಧದ ದಿನ ಕಣ್ಣಿಗೆ ಕಾಣದಂತೆ ದೂರ ಇರಲಿಕ್ಕೆ ಹೇಳಬೇಕು. ಮತ್ತು ಶ್ರಾದ್ಧಮಾಡುವ ಸ್ಥಳದಲ್ಲಿ ಎಳ್ಳನ್ನು ಎರಚಿ ಭೂತೋಚ್ಚಾಟನೆ ಮಾಡಿ ರಾಕ್ಷಸರನ್ನು ಓಡಿಸಬೇಕು. ಮತ್ತು ಶ್ರಾದ್ಧದಲ್ಲಿ ಕೂದಲು ಬಿದ್ದ, ಅಥವಾ ಹುಳಕಾದ, ಹಿಂಡಿ ತೆಗೆದು ಅಥವಾ ಹಳಸಿದ ಕೊಳೆತ ಪದಾರ್ಥಗಳನ್ನು ಉಪಯೋಗಿಸಬಾರದು. ಶ್ರಾದ್ಧದಲ್ಲಿ ಮೃತಪುರುಷರ ಹೆಸರು ಗೋತ್ರಗಳನ್ನು ಉಚ್ಚಾರಮಾಡಿ ಪಿತೃಗಳಿಗೆ ಶ್ರಾದ್ಧಕ್ಕೆ ವಿಹಿತವಾದ ಅನ್ನವನ್ನು ಕೊಟ್ಟರೆ ಅದು ಆ ಪಿತೃಗಳಿಗೆ ಅವರು ಎಲ್ಲಿಯೇ ಇರಲಿ, ಯಾವ ಲೋಕದಲ್ಲೇ ವಾಸಿಸಲಿ ಯಾವ ಜಾತಿಯವರೇ ಆಗಿರಲಿ, ಆ ಜಾತಿಗೆ ತಕ್ಕಂಥ ಆಹಾರವಾಗಿ ಅವರಿಗೆ ತೃಪ್ತಿಯುಂಟುಮಾಡುತ್ತದೆ.

## ಪಾಖಂಡಿ ಮತಗಳ ಮೂಲ ಮೀಮಾಂಸೆ

**ಮೈತ್ರೇಯ -** ಪೂಜ್ಯರೇ ನಗ್ನ ಎಂದರೆ ಯಾರು ! ಅವರ ಆಚಾರ ವಿಚಾರವೇನು? ನಗ್ನ ಎಂಬ ಹೆಸರು ಬರಲಿಕ್ಕೆ ಕಾರಣವೇನು? ಇದನ್ನೆಲ್ಲ ತಿಳಿದುಕೊಳ್ಳಬೇಕೆಂದು ಇಚ್ಛಿಸುತ್ತೇನೆ. ಧರ್ಮಾಚರಣೆಯ ರಹಸ್ಯವನ್ನು ಬಲ್ಲ ತಮಗೆ ತಿಳಿಯದಿದ್ದುದು ಯಾವದಿದೆ !

**ಪರಾಶರ -** ಋಗ್ ವೇದ, ಯಜುರ್ವೇದ, ಸಾಮವೇದ, ಎಂಬ ಈ ಮೂರು ವೇದಗಳು ಎಲ್ಲ ವರ್ಣದವರಿಗೂ ಮರ್ಯಾದೆಯ ಆವರಣವಿದ್ದಂತೆ. ಈ ಮಾನವತೆಯ ಆವರಣ ಭೂತವಾದ ವೇದಗಳನ್ನು ಮೋಹದಿಂದ ತೊರೆದು ಬಿಟ್ಟಂಥ ಮಹಾಪಾತಕಿಯು 'ನಗ್ನ' ಎಂದು ಕರೆಯಲ್ಪಡುತ್ತಾನೆ. ಹಿಂದೆ ನಮ್ಮ ಅಜ್ಜಂದಿರಾದ ಬ್ರಹ್ಮರ್ಷಿವಶಿಷ್ಠರು ಭೀಷ್ಮಾಚಾರ್ಯರಿಗೆ ನಗ್ನ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಿದ್ದರು. ಆಗ ನಾನೂ ಅಲ್ಲಿಯೇ ಇದ್ದು ಅದನ್ನು ಕೇಳಿದೆ. ಆಗ ವಶಿಷ್ಠರು ಹೇಳಿದ್ದನ್ನೇ ನಾನೀಗ ನಿನಗೆ ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ದೇವ ದಾನವರಲ್ಲಿ ನೂರು ವರ್ಷ ಯುದ್ಧ ನಡೆಯಿತು. ಆ ಯುದ್ಧದಲ್ಲಿ ಪ್ರಹ್ಲಾದ ಮೊದಲಾದ ದೈತ್ಯರು ಕಲಿತನದಿಂದ ಕಾದಾಡಿ ದೇವತೆಗಳನ್ನು ಸೋಲಿಸಿದರು. ಪರಾಜಿತರಾದ ದೇವತೆಗಳು ಹಾಲ್ಗಡಲಿನ ಉತ್ತರ ತೀರಕ್ಕೆ ಹೋಗಿ ಉಗ್ರವಾದ ತಪಸ್ಸನ್ನು ಮಾಡಿದರು. ಮತ್ತು ಆ

ಭಗವಂತನನ್ನು ಭಕ್ತಿಯಿಂದ ಸ್ತೋತ್ರ ಮಾಡಿದರು. ಆ ದೇವತೆಗಳ ಭಕ್ತಿಭಾವ ಭರಿತವಾದ ದಿವ್ಯ ಸ್ತೋತ್ರದಿಂದ ಪರಮಾತ್ಮನು ಪ್ರಸನ್ನನಾಗಿ ಅವರ ಕಣ್ಣಿಗೆ ಪ್ರತ್ಯಕ್ಷನಾದನು. ಶಂಖ ಚಕ್ರ, ಗದೆಗಳನ್ನು ಕೈಗಳಲ್ಲಿ ಪಿಡಿದು ಗರುಡನ ಮೇಲೆ ಕುಳಿತು ಬಂದ ಆ ಶ್ರೀ ಹರಿಯನ್ನು ಕಂಡು ಎಲ್ಲ ದೇವತೆಗಳೂ ಅವನ ಎದುರು ಅಡ್ಡಬಿದ್ದರು. ಕೈ ಮುಗಿದು ಕೇಳಿಕೊಂಡರು. ''ಪರಮೇಶ್ವರಾ, ನಮಗೆ ನೀನೇ ನಾಥ. ನಾವು ನಿನ್ನನ್ನೇ ಮೊರೆ ಹೊಕ್ಕಿದ್ದೇವೆ. ದುಷ್ಟದೈತ್ಯರಿಂದ ನಮ್ಮನ್ನು ನೀನೇ ರಕ್ಷಿಸು. ಪ್ರಹ್ಲಾದ ಮೊದಲಾದ ದೈತ್ಯರು ಬ್ರಹ್ಮದೇವರ ಆಜ್ಞೆಯನ್ನು ಮೀರಿ ಮೂರು ಲೋಕದ ಯಜ್ಞಭಾಗಗಳನ್ನೆಲ್ಲ ತಾವೇ ಅಪಹರಿಸಿರುವರು. ಅವರನ್ನು ಕೊಲ್ಲುವುದು ನಮಗೆ ಅವಶ್ಯಕವಾಗಿದೆ. ಯಾಕೆಂದರೆ ಈಗ ಆ ದೈತ್ಯರೆಲ್ಲರೂ ವೇದ ಮಾರ್ಗವನ್ನು ಅವಲಂಬಿಸಿದ್ದಾರೆ. ತಮ್ಮ ವರ್ಣಧರ್ಮಗಳಿಗೆ ಅನುಗುಣವಾಗಿ ನಡೆಯುತ್ತಾರೆ. ಜಪ ತಪಗಳನ್ನು ಮಾಡುತ್ತಲಿದ್ದಾರೆ. ಹೀಗೆ ಸ್ವಧರ್ಮ ನಿಷ್ಠರಾದ ಅವರನ್ನು ಕೊಲ್ಲುವುದು ನಮಗೆ ಅಶಕ್ಯವಾಗಿದೆ. ಆದುದರಿಂದ ಸರ್ವ ಸಮರ್ಥನಾದ ನಿನ್ನ ಚರಣಗಳಿಗೆ ಶರಣು ಬಂದಿದ್ದೇವೆ. ಆ ನಮ್ಮ ವೈರಿಗಳನ್ನು ಕೊಲ್ಲಲು ನಮಗೆ ಒಂದು ಉಪಾಯವನ್ನು ದಯವಿಟ್ಟು ಹೇಳಿಕೊಡಬೇಕು.''

## ಮಾಯಾಮೋಹನ ಉತ್ಪತ್ತಿ

**ಪರಾಶರ** - ಆಗ ಶ್ರೀ ವಿಷ್ಣು ದೇವತೆಗಳ ಮಾತನ್ನು ಕೇಳಿ ಮಾಯಾ ಮೋಹ ಎಂಬ ವ್ಯಕ್ತಿಯನ್ನು ನಿರ್ಮಿಸಿದನು. ಮತ್ತು ದೇವತೆಗಳನ್ನು ಸಂತೈಸುತ್ತ ''ಸುರರೇ, ನಾನು ಇದೀಗ ನಿರ್ಮಿಸಿದ ಈ ಮಾಯಾಮೋಹನು ಆ ದೈತ್ಯರನ್ನೆಲ್ಲ ಮೋಹಗೊಳಿಸಿ ವೇದ ಶಾಸ್ತ್ರಗಳ ದಾರಿಬಿಟ್ಟು ಸ್ವೈರವೃತ್ತಿಗೆ ಇಳಿಸುವನು.ಆಗ ಅವರನ್ನು ನೀವು ಸುಲಭವಾಗಿ ಸಂಹರಿಸ ಬಲ್ಲಿರಿ. ಆದುದರಿಂದ ನೀವೀಗ ನಿಮ್ಮ ತಾಣಗಳಿಗೆ ತೆರಳಿರಿ. ಭಯ ಪಡಬೇಡಿ. ಈ ಮಾಯಾಮೋಹನು ನಿಮಗಿಂತ ಮೊದಲು ಆ ದೈತ್ಯರಿದ್ದಲ್ಲಿಗೆ ಹೋಗಿ ನಿಮ್ಮ ಕಾರ್ಯ ಮಾಡುವನು.'' ಎಂದು ಭಗವಂತನು ಭರವಸೆಯನ್ನು ನೀಡಿದನು. ಪರಮಾತ್ಮನ ಈ ಪ್ರಿಯ ನುಡಿಗಳಿಂದ ದೇವತೆಗಳಿಗೆ ಸಮಾಧಾನವಾಗಿ ಅವರು ತಮ್ಮ ಸ್ಥಾನಕ್ಕೆ ನಡೆದರು. ಮಹಾಮಾಯನು ಅಸುರಪುರದ ದಾರಿ ಹಿಡಿದನು.

## ನರ್ಮದಾ ತೀರದಲ್ಲಿ ಧರ್ಮಾತ್ಮರು

ನರ್ಮದಾ ನದಿಯ ದಂಡೆಯ ಮೇಲೆ ಅನೇಕಾನೇಕ ತಪಸ್ವಿಗಳು ತಪಸ್ಸನ್ನು ಆಚರಿಸುತ್ತಲಿದ್ದಾರೆ. ದೈತ್ಯಕುಲದ ಧುರೀಣರೆಲ್ಲರೂ ಮನೆ ಮಾರು ತೊರೆದು ವಿರಕ್ತರಾಗಿ ಏಕಾಗ್ರ ಚಿತ್ತದಿಂದ ತಪೋನಿರತರಾಗಿದ್ದಾರೆ. ಆ ನರ್ಮದಾ ತೀರದ ತಪೋವನಕ್ಕೆ ಒಂದು ದಿನ ದಿಗಂಬರ ಸಾಧು ಒಬ್ಬ ದಯಮಾಡಿಸಿದ. ಅವನು ತಲೆಯನ್ನು ಸ್ವಚ್ಛ ಮುಂಡನ ಮಾಡಿಸಿದ್ದ. ಮೈಮೇಲೆ ಒಂದು ತುಣುಕು ಕೂಡ ಬಟ್ಟೆ ಇಲ್ಲ. ಅವನು ಕೈಯಲ್ಲಿ ನವಿಲು ಗರಿ ಹಿಡಿದಿದ್ದ. ಅವನ ಈ ವಿಚಿತ್ರ ವೇಷವನ್ನು ಕಂಡೇ ಆ ನದೀ ತೀರದ ತಪೋನಿಧಿಗಳಿಗೆ ಅಚ್ಚರಿಯಾಯಿತು. ಅವರು ಆ ದಿಗಂಬರ ಸಾಧುವನ್ನು ನೋಡುತ್ತ

ಕುಳಿತರು. ಆಗ ಆ ದಿಗಂಬರನು ಅವರ ಹತ್ತಿರ ಬಂದು ಆ ದಾನವ ಯೋಗಿಗಳನ್ನು ಮಧುರ ಮೋಹಕವಾದ ವಚನದಿಂದ ಮಾತನಾಡಿಸಿದ. ''ದೈತ್ಯಪತಿಗಳೇ ! ಏತಕ್ಕಾಗಿ ನಿಮ್ಮ ಈ ತಪಸ್ಸು ! ನೀವು ಬಯಸುವುದೇನು ! ಐಹಿಕ ಫಲವೋ ಪಾರತ್ರಿಕ ಪುಣ್ಯವೋ !'' ಅದಕ್ಕೆ ದೈತ್ಯ ತಪಸ್ವಿಗಳು ಶಾಂತ ಸ್ವರದಲ್ಲಿ ಉತ್ತರಿಸಿದರು. 'ಪಾರತ್ರಿಕ ಫಲಕ್ಕಾಗಿ ನಾವು ಈ ತಪಸ್ಸನ್ನು ಆಚರಿಸುತ್ತಲಿದ್ದೇವೆ. ಕ್ಷುಲ್ಲಕವಾದ ಐಹಿಕ ಫಲಕ್ಕಾಗಿ ನಾವು ತಪಿಸುತ್ತಿಲ್ಲ. ಪುಣ್ಯ ಪುರುಷಾರ್ಥಕ್ಕಾಗಿಯೇ ನಮ್ಮ ಈ ತಪಸ್ಸು.''

## ದಿಗಂಬರ ಸಾಧುವಿನ ಧರ್ಮೋಪದೇಶ

**ದಿಗಂಬರ** - ಪರಮ ಪುರುಷಾರ್ಥವಾದ ಮೋಕ್ಷವನ್ನೇ ನೀವು ಬಯಸುವುದಾದರೆ ನನ್ನ ಮಾತನ್ನು ಆಲಿಸಿರಿ. ನಾನೊಂದು ಧರ್ಮವನ್ನು ಹೇಳುತ್ತೇನೆ. ಅದರಿಂದ ಮುಕ್ತಿ ಮಂದಿರದ ಬಾಗಿಲವೇ ತೆರೆಯುವುದೆಂದು ತಿಳಿಯಿರಿ. ಆ ಧರ್ಮದಿಂದ ನೀವು ಇಲ್ಲಿಂದಲೇ ಬೇಕೆಂದರೆ ಸ್ವರ್ಗಕ್ಕೆ, ಬಯಸಿದರೆ ಮೋಕ್ಷಕ್ಕೂ ಹೋಗಬಹುದು. ಇದರ ಹೊರತು ನೀವು ಮುಕ್ತಿಗೆ ಅರ್ಹರಾಗಿದ್ದೀರಿ. ನೀವು ಮಹಾ ಬಲಿಷ್ಠರು. ನಿಮಗಲ್ಲದೆ ಬೇರಾರಿಗೆ ದೊರಕೀತು ಆ ಮುಕ್ತಿ!'' ಎಂದು ಮುಂತಾಗಿ ಸವಿಮಾತುಗಳನ್ನಾಡಿದನು. ಅವನ ಮಾತಿನಲ್ಲಿ ಮಾಧುರ್ಯವಿತ್ತು. ರೀತಿಯಲ್ಲಿ ಚಾತುರ್ಯವಿತ್ತು. ಮುಖದಲ್ಲಿ ಸೌಂದರ್ಯವಿತ್ತು. ಮೇಲೆ ಮಧ್ಯ ಮಧ್ಯದಲ್ಲಿ ಯುಕ್ತಿಗಳನ್ನು ಹೇಳಿ ಅವನು ತನ್ನ ಹೇಳಿಕೆ ಸಮಂಜಸ ಎನಿಸುವಂತೆ ಪ್ರತಿಪಾದಿಸುತ್ತಿದ್ದ. ಅವನು ಬೇರಾರೂ ಆಗದೆ ಶ್ರೀ ಹರಿಯು ಕಳಿಸಿದ ಮಾಯಾಮೋಹನೇ ಆಗಿದ್ದ. ಅವನ ಮಾತಿನ ಮೋಡಿ, ಮತ್ತು ಬೆಡಗಿನ ಭಾಷೆಗಳಿಗೆ ಆ ದೈತ್ಯರೆಲ್ಲರೂ ಮರುಳಾದರು. ವೇದ ಮಾರ್ಗದಿಂದ ಮರಳಿದರು. ನಾಸ್ತಿಕತೆಯೆಡೆಗೆ ಹೊರಳಿದರು. ದಿಗಂಬರನ ನುಡಿ ಅವರಿಗೆ ಹುಚ್ಚು ಹಿಡಿಸಿತು. ಅವನು ಹೇಳಿದ್ದಕ್ಕೆಲ್ಲ. 'ಹೂಂ' ಎಂದರು. ಅವನು ಧರ್ಮ ಎಂದರೆ ಧರ್ಮ, ಅವನು ಅಧರ್ಮ ಎಂದರೆ ಅಧರ್ಮ. ಅವನ ಮಾತೇ ವೇದ ವಾಕ್ಯವಾಯಿತು.

ಮಾಯಾಮೋಹನಾದರೂ ತನ್ನ ಮೋಹಕವಾದ ಶೈಲಿಯಲ್ಲಿ ಅನೇಕ ಉಕ್ತಿ ಜಾಲಗಳನ್ನೇನೆಯ್ದು ಬಿಟ್ಟ. ಅವಕೆಲ್ಲ, ಯುಕ್ತಿಗಳನ್ನೂ ಜೋಡಿಸಿದ. ಮನಮರುಳು ಮಾಡುವ ಅವನ ಮಾತಿನ ರೀತಿಗೆ ಮನಸೋತ ದೈತ್ಯರು ವಿವೇಕ ಶಕ್ತಿಯನ್ನೇ ಕಳೆದುಕೊಂಡಿದ್ದರು. ಮುಂದೆ ಅವನು ಯುಕ್ತಿಯಿಲ್ಲದೇ ಅಸಂಬದ್ಧವಾಗಿ ಹೇಳಿದಕ್ಕೆಲ್ಲ ಹುಚ್ಚನಂತೆ ಹೂಂ ಗುಟ್ಟಿದರು. ಬರಬರುತ್ತ ಅವನು ಯಾವ ಕಾರಣವೂ ಇಲ್ಲದೆ ''ಇದು ಧರ್ಮ, ಅದು ಅಧರ್ಮ, ಇದು ಸತ್, ಅದು ಅಸತ್. ಇದರಿಂದ ಮೋಕ್ಷ ಅದರಿಂದ ಮೋಕ್ಷವಿಲ್ಲ. ಇದು ಪರಮಾರ್ಥ, ಅದು ಪರಮಾರ್ಥವಲ್ಲ. ಇದು ಕಾರ್ಯ ಅದು ಅಕಾರ್ಯ, ಇದು ದಿಗಂಬರ ಧರ್ಮ, ಅದು ಆಡಂಬರ ಧರ್ಮ'' ಎಂದು ಮುಂತಾಗಿ ಹೇಳಿದಾಗ ದೈತ್ಯರೆಲ್ಲರೂ ಅದನ್ನು ಯಾವ ವಿಚಾರವೂ ಇಲ್ಲದೇ ನಿಜವೆಂದು ನಂಬಿ ಬಿಟ್ಟರು. ಇದರಿಂದ ಮಾಯಾಮೋಹನಿಗೆ ಅವರನ್ನು ಧರ್ಮಮಾರ್ಗದಿಂದ ದೂರ ಸರಿಸಲಿಕ್ಕೆ ಏನೂ ಆಯಾಸವಾಗಲಿಲ್ಲ. ಅವನು ಆ ದೈತ್ಯರಿಗೆ ಅನೇಕವಾದಗಳನ್ನು ತೋರಿಸಿ

ಅವರೆಲ್ಲರನ್ನೂ ಧರ್ಮಭ್ರಷ್ಟರನ್ನಾಗಿ ಮಾಡಿದನು. ಮತ್ತೂ ''ಪ್ರಾಚೀನ ಪರಂಪರಾ ಪ್ರಾಪ್ತವಾದ ವೈದಿಕ ಧರ್ಮವನ್ನು ಬಿಟ್ಟು ಸ್ವತಂತ್ರ ವಿಚಾರ ಶಕ್ತಿಯಿಂದ ನೀವು ಈಗ ಅರಿತುಕೊಂಡ ಅಥವಾ ನನ್ನಿಂದ ಕಲಿತುಕೊಂಡ ಧರ್ಮವೇ ಮಹಾಧರ್ಮ. ಇದಕ್ಕೆ ನೀವೇ ಅರ್ಹರಿರುತ್ತೀರಿ'' ಎಂದು ಮಾಯಾ ಮೋಹನು ಅವರಿಗೆಲ್ಲ ''ಈ ಮಹಾಧರ್ಮವನ್ನು ನೀವು 'ಅರ್ಹತ' ಅಂಗೀಕರಿಸಲು ಯೋಗ್ಯರಾಗಿರುತ್ತೀರಿ'' ಎಂದು ಹೇಳಿದ್ದರಿಂದ ಆ ಧರ್ಮವನ್ನು ಅವಲಂಬಿಸಿದವರೆಲ್ಲರೂ 'ಅರ್ಹತರು' ಎಂದು ಕರೆಯಲ್ಪಟ್ಟರು.

## ಪಾಖಂಡಿ ಮತದ ಪ್ರಚಾರ

ಮಾಯೋಮೋಹನು ಅವರೆಲ್ಲರನ್ನೂ ವೇದ ಧರ್ಮದಿಂದ ಬಿಡಿಸಿದನು. ನಾಸ್ತಿಕ್ಯದ ಹಾದಿಯನ್ನು ಹಿಡಿಸಿದನು. ಮೋಹಪರವಶರಾದ ಆ ದೈತ್ಯರೆಲ್ಲರು ಮಾಯಾಮೋಹನು ಉಪದೇಶಿಸಿದ ನಾಸ್ತಿಕ ಮತವನ್ನು ನಂಬಿದರು. ಮತ್ತು ಅದನ್ನೇ ಒಬ್ಬ ಮತ್ತೊಬ್ಬನಿಗೆ, ಮತ್ತೊಬ್ಬ ಮಗದೊಬ್ಬನಿಗೆ, ಅವನು ಇನ್ನೊಬ್ಬನಿಗೆ. ಉಪದೇಶಿಸುತ್ತ ನಡೆದರು. ಹೀಗಾಗಿ ಕೆಲವೇ ದಿನಗಳಲ್ಲಿ ಆ ಪಾಖಂಡಮತವು ಭೂಮಂಡಲದಲ್ಲಿ ಎಲ್ಲ ಕಡೆಗೆ ಹಬ್ಬಿತು. ಬಹುಶಃ ದೈತ್ಯರೆಲ್ಲರೂ ವೇದ ಧರ್ಮವನ್ನು ಬಿಟ್ಟು, ಆ ನಾಸ್ತಿಕ ಮತಕ್ಕೆ ಅಂಟಿಕೊಂಡರು. ಆದರೂ ಅಲ್ಲಲ್ಲಿ ಹಲಕೆಲವು ದಾನವ ಕುಲದ ಧುರೀಣರು ಹೊಸ ಧರ್ಮಕ್ಕೆ ಒಮ್ಮೆಲೇ ಹೊಂದಿಕೊಳ್ಳದೇ ವೇದಮಾರ್ಗಾನುಯಾಯಿಗಳಾಗಿಯೇ ಉಳಿದಿದ್ದರು. ಅವರೆಲ್ಲರನ್ನು ವೈದಿಕ ಸಂಪ್ರದಾಯದಿಂದ ವಿಮುಖರನ್ನಾಗಿ ಮಾಡಲು ಮಾಯಾ ಮೋಹನು ಹೊಸ ಯುಕ್ತಿಯೊಂದನ್ನು ಮಾಡಿದನು. ಇನ್ನೂ ವೈದಿಕರಾಗಿ ಉಳಿದ ದೈತ್ಯರು ಅಲ್ಲಲ್ಲಿ ನಿಂತು ಜಪ, ತಪ, ಯಜ್ಞ ಯಾಗಗಳನ್ನು ಮಾಡುತ್ತಲಿದ್ದರು. (ಆದರೆ ಅವರ ಉದ್ದೇಶ ದುಷ್ಟವಾಗಿತ್ತು. ಆ ತಪಃಫಲ ಹಾಗೂ ಯಜ್ಞಸಿದ್ಧಿಗಳಿಂದ ಅವರು ಮೂರು ಲೋಕಗಳನ್ನು ಆಕ್ರಮಿಸಬೇಕೆಂದು ದುರಾಲೋಚನೆಯನ್ನು ಮಾಡಿದ್ದರು. ಅದಕ್ಕಾಗಿ ಶ್ರೀ ಹರಿ ಮಾಯೆಯಿಂದ ಅವರನ್ನು ವಂಚಿಸಿದ)

ಒಂದು ದಿನ ಕೆಂಪು ಶಾಟಿಯನ್ನು ಹೊದೆದುಕೊಂಡು ಸನ್ಯಾಸಿಯೊಬ್ಬನು ಆ ದೈತ್ಯರ ಬಳಿಗೆ ಬಂದನು. ಅವನು ನೋಡಲಿಕ್ಕೆ ಸುಂದರ. ಮಾತುಗಳನ್ನು ಮಿದುವಾಗಿಯೂ ಮಧುರವಾಗಿಯೂ ನುಡಿಯುತ್ತಿದ್ದ. ಆದುದರಿಂದ ಅವನ ವಚನಗಳು ಜನರಿಗೆ ಮೋಹಕವಾಗಿರುತ್ತಿದ್ದವು. ಹತ್ತೂ ಇಂದ್ರಿಯಗಳನ್ನೂ ಅವನು ಅಂಕಿತದಲ್ಲಿ ಇರಿಸಿಕೊಂಡಿದ್ದ. ಮೇಲೆ ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿ ವೇಷ. ಅವನ ಈ ವೇಷ, ಮಧುರ ಭಾಷೆಗಳನ್ನು ಕೇಳಿ ದೈತ್ಯರೆಲ್ಲರೂ ಮುಗ್ಧರಾದರು. ಶ್ರೀ ವಿಷ್ಣುವಿನಿಂದ ಆಜ್ಞಪ್ತನಾದ ಮಾಯಾಮೋಹನೇ ಒಳ್ಳೇ ತೇಜಸ್ವಿಯಾದ ಸನ್ಯಾಸಿ ಆಗಿ ಆ ದೈತ್ಯ ವರ್ಗದ ಮನಸ್ಸನ್ನು ತನ್ನ ಮೋಹಕವಾದ ವಾಕ್ ಚಾತುರ್ಯದಿಂದ ಸೆಳೆದು ಸೂರೆಗೊಂಡಿದ್ದ. ಅವನ ಉಪದೇಶವನ್ನು ಕೇಳಲಿಕ್ಕಾಗಿ ಜನರು ತಂಡ ತಂಡವಾಗಿ ನೆರೆಯುತ್ತಿದ್ದರು. ಅವನು ಹೇಳಿದ್ದನ್ನೆಲ್ಲ ಕೇಳಿ ವಿವೇಕ ಶೂನ್ಯರಾಗಿ ಒಪ್ಪಿಕೊಂಡು ಬಿಡುತ್ತಿದ್ದರು. ಪ್ರಚಂಡ ಜನಸಮೂಹವು ಅವನ ಉಪನ್ಯಾಸಕ್ಕಾಗಿ ಕೂಡಿದಾಗ ಆ ಯತಿಯು ಆ ದೈತ್ಯರಿಗೆ ಸವಾಲು

ಹಾಕುತ್ತಿದ್ದ. ''ದಾನವರೇ, ನೀವು ಬಯಸುವುದೇನು? ಸ್ವರ್ಗವೋ ! ಅಪವರ್ಗವೋ ? ಸ್ವರ್ಗವಂತೂ ಶಾಶ್ವತವಲ್ಲ. ಮೋಕ್ಷಕ್ಕೆ ನಿಮ್ಮ ಮಾರ್ಗವು ಉಪಯುಕ್ತವಲ್ಲ.

## ವೇದ ಮತದ ಹುಳುಕು, ಬೌದ್ಧ ಮತದ ಬೆಳಕು

ನೀವು ಹಿಡಿದಿರುವುದು ವೇದ ಮಾರ್ಗ. ಆ ವೈದಿಕ ಮತದಲ್ಲಿ ಯಜ್ಞಯಾಗಗಳೇ ಮುಖ್ಯ. ಯಜ್ಞವೆಂದರೆ ಪ್ರಾಣಿಗಳನ್ನು ಬಲಿಕೊಡುವುದು. ಪಶುಗಳನ್ನು ಹಿಂಸೆಮಾಡುವುದು. ನಿರುಪದ್ರವಿಗಳಾದ ಜೀವ ಜಂತುಗಳನ್ನು ಕೊಂದು ಹಾಕಿದರೆ ಪುಣ್ಯ ಬರುವುದೇ ? ಹೊಡೆಯುವುದು ಕಡಿಯುವುದು, ಕೊಲ್ಲುವುದು ಎಂಥ ಧರ್ಮ ! ಇದು ಎಲ್ಲರಿಗೂ ತಿಳಿಯುವ ಮಾತು. ಪರೋಪಕಾರವೇ ಮುಖ್ಯಧರ್ಮ. ಹಿಂಸೆಗಿಂತ ಬೇರೆ ಅಪಕಾರವಿಲ್ಲ. ವೇದೋಕ್ತವಾದ ಈ ಹಿಂಸಾಪ್ರಧಾನ ಯಜ್ಞ ಸಂಸ್ಥೆಯಿಂದ ಯಾರಿಗೂ ಉಪಕಾರವಿಲ್ಲ. ಪ್ರಾಣಾಂತಿಕ ಅಪಕಾರ ಮಾತ್ರ ಉಂಟು. ಆದುದರಿಂದ ಆ ವೇದ ಧರ್ಮವನ್ನು ಬಿಟ್ಟು ಬಿಡಿರಿ. ಅಹಿಂಸೆಯೇ ಪರಮಧರ್ಮ. ಈ ಪ್ರಪಂಚವೆಲ್ಲವೂ ಕ್ಷಣಿಕ. ನಿರಾಧಾರ, ಭ್ರಾಂತಿಜನ್ಯ ಜ್ಞಾನವೇ ಅದರ ಅಸ್ತಿವಾರ. ರಾಗ ದ್ವೇಷಗಳಿಂದ ಮನಸ್ಸು ದೂಷಿತವಾದ ಜೀವನು ಸಂಸಾರ ಸಂಕಟದಲ್ಲಿ ತೊಳಲಾಡುತ್ತಿದ್ದಾನೆ. ಇದರಿಂದ ಪಾರಾಗಿ ನಿರ್ವಾಣವನ್ನು ಹೊಂದಬೇಕೆಂದು ಇಚ್ಛೆ ಇದ್ದರೆ ನನ್ನ ಮಾತನ್ನು ಕೇಳಿರಿ. ಈ ಪ್ರಪಂಚವೆಲ್ಲವೂ ವಿಜ್ಞಾನಮಯವಾಗಿದೆ. ಎಲ್ಲ ಬುದ್ಧರೂ ಹೀಗೆ ಹೇಳುತ್ತಾರೆ. ನೀವು ಇದನ್ನೇ ಚೆನ್ನಾಗಿ 'ಬುದ್ಧ್ಯತ' ತಿಳಿದು ಕೊಳ್ಳಿರಿ'' ಎಂದು ಬೋಧಿಸಿದನು. ಮಾಯಾವಿಯಾದ ಆ ಸನ್ಯಾಸಿಯು ತಾನು ಹೇಳಿದ ಪ್ರತಿಯೊಂದು ಉಕ್ತಿಯೂ (ಯುಕ್ತಿ) ಯುಕ್ತವಾಗಿದೆ. ಎಂದು ಸಿದ್ಧಮಾಡಿ ತೋರಿಸುತ್ತಿದ್ದ. ಮತ್ತು ತಾನು ಹೇಳಿದ ಪ್ರತಿಯೊಂದು ಮಾತಿಗೂ ಅನೇಕ ಸಮಂಜಸವಾದ ಉದಾಹರಣೆಗಳನ್ನು ಕೊಟ್ಟು ಸರ್ವ ಜನರಂಜನ, ಮನರಂಜನವಾಗುವಂತೆ ಮಾಡುತ್ತಿದ್ದ. ಆ ಯತಿ ಯೋಗಿಯ ಯುಕ್ತಿಯುತವಾದ ಮಾತಿನ ಮೋಡಿಗೆ ಮಾರುಹೋದ ದೈತ್ಯರೆಲ್ಲರೂ ವೇದ ಧರ್ಮವನ್ನು ಸಂಪೂರ್ಣವಾಗಿ ಬಿಟ್ಟು ಬಿಟ್ಟರು. ದಿಗಂಬರ ಸಂಪ್ರದಾಯದ ಅರ್ಹತಮತದಲ್ಲಿ ಸೇರದೇ ಉಳಿದ ದೈತ್ಯರೆಲ್ಲರೂ ಈ ಹೊಸ ಶೂನ್ಯವಾದದಲ್ಲಿ ಸೇರಿಕೊಂಡರು. ಮತ್ತು ಅದನ್ನು ಅವರು ಒಬ್ಬರಿಗೊಬ್ಬರು ತಿಳಿಸುತ್ತ ಎಲ್ಲ ಕಡೆಗೂ ಪ್ರಚಾರ ಮಾಡಿದರು. ಹೀಗಾಗಿ ಕೆಲವೇ ದಿನಗಳಲ್ಲಿ ಮಾಯಾಮೋಹನ ಉಪಾಯದಿಂದ ಎಲ್ಲ ದೈತ್ಯರೂ ವೇದ ಮಾರ್ಗ ಭ್ರಷ್ಟರಾಗಿ ಜೈನ ಬೌದ್ಧಾದಿಮತಗಳಲ್ಲಿ ಸೇರಿಕೊಂಡರು. ಅವರಲ್ಲಿ ಕೆಲವರು ವೇದಗಳನ್ನು ನಿಂದಿಸಿದರು. ಉಳಿದವರು ಯಜ್ಞಯಾಗಗಳನ್ನು ಹೀಗಳೆದರು. ಎಲ್ಲರೂ ಸೇರಿ ದೇವ ಬ್ರಾಹ್ಮಣರನ್ನು ತೆಗಳಿದರು. ಪ್ರತಿಯೊಬ್ಬರೂ ಅನೇಕ ತರ್ಕ ವಿತರ್ಕಗಳನ್ನು ಹೂಡಿ ವೈದಿಕ ಸಂಪ್ರದಾಯಗಳನ್ನು ಖಂಡಿಸಲು ಮುಂದಾದರು.

## ವೇದ ಮತಖಂಡನ, ಪಾಖಂಡಿ ಮತಮಂಡನ

''ಪ್ರಾಣಿಹಿಂಸೆಯಿಂದ ಪುಣ್ಯ ಬರುತ್ತದೆ ಎಂಬ ಮಾತು ಯಾವ ಯುಕ್ತಿಗೆ

ಹತ್ತುವುದು ! ಒಬ್ಬರನ್ನು ಕೊಲ್ಲುವುದು ಯಾವ ಧರ್ಮ ! ಬೆಂಕಿಯಲ್ಲಿ ಆಹುತಿಯನ್ನು ಹಾಕಿದರೆ ಪುಣ್ಯ ಬರುತ್ತದೆ ಎನ್ನುವುದು ಶುದ್ಧ ಹುಡುಗಾಟ. ಅನೇಕ ಯಜ್ಞಗಳನ್ನು ಮಾಡಿ ಇಂದ್ರನು ಸುರರಾಜ್ಯದ ಅಧಿಪತಿಯಾಗುತ್ತಾನೆ. ಇಂದ್ರನಾಗಿ ಅವನು ತಿನ್ನುವುದು ಬನ್ನೀಗಿಡದ ಕಟ್ಟಿಗೆ, ಸೋಮ ಬಳ್ಳಿಯ ತೊಪ್ಪಲು. ಹಾಗಿದ್ದರೆ ಎಲೆ, ಕಾಯಿ ಕಂಟಿಗಳನ್ನು ತಿನ್ನುವ ದನಗಳು ಆ ಇಂದ್ರನಿಗಿಂತ ಮೇಲಲ್ಲವೇ ! ಯಜ್ಞದಲ್ಲಿ ಮಾನವನು ಬಲಿಕೊಟ್ಟ ಪಶುವಿಗೆ ಸ್ವರ್ಗವು ದೊರಕುತ್ತಿದ್ದರೆ ತಂದೆಯು ತನ್ನ ಮಗನನ್ನೇ ಯಜ್ಞದಲ್ಲಿ ಬಲಿಕೊಟ್ಟು ಕೊಂದು ಸ್ವರ್ಗಕ್ಕೆ ಏಕೆ ಕಳಿಸುವುದಿಲ್ಲ ! ಬ್ರಾಹ್ಮಣರಿಗೆ ಊಟಕ್ಕೆ ಹಾಕಿದರೆ ಲೋಕಾಂತರದಲ್ಲಿ ಇದ್ದ ತಂದೆ ತಾತರಿಗೆ ಹೊಟ್ಟೆ ತುಂಬುತ್ತಿದ್ದರೆ ಪ್ರವಾಸದಲ್ಲಿ ಯಾರೂ ಬುತ್ತಿ ಒಯ್ಯುವ ಕಾರಣವಿಲ್ಲ. ಊರಿಗೆ ಹೋದವನ ಹೆಸರಿನಿಂದ ಇದ್ದೂರಲ್ಲಿ ಮನೆಯಲ್ಲಿ ಯಾರಿಗಾದರೂ ಊಟಕ್ಕೆ ಹಾಕಿದರಾಯಿತು. ಅದರಿಂದಲೇ ಅವರಿಗೆ ಇದ್ದಲ್ಲಿಯೇ ದಾರಿಯಲ್ಲಿ ಹೊಟ್ಟೆ ತುಂಬಿ ಹೋಗುವುದು. ಈ ವಿಚಾರದಷ್ಟೇ ಶ್ರಾದ್ಧದಲ್ಲಿ ಪಿತೃಗಳ ಉದ್ದೇಶದಿಂದ ಮನೆಯಲ್ಲಿ ಬ್ರಾಹ್ಮಣರಿಗೆ ಊಟಕ್ಕೆ ಹಾಕುವ ವಿಚಾರ ಕೂಡ ಹಾಸ್ಯಾಸ್ಪದವಾಗಿರುತ್ತದೆ. ಇದೆಲ್ಲವೂ ಜನರ ಅಂಧಶ್ರದ್ಧೆಯೇ ಸರಿ. ಇದನ್ನೆಲ್ಲ ಮೂಢ ನಂಬಿಗೆ ಎಂದು ತಿಳಿದುಕೊಂಡು ಯುಕ್ತಿ ವಿರುದ್ಧವಾದ ಹುರುಳಿಲ್ಲದ ವೈದಿಕ ಮತವನ್ನು ಉಪೇಕ್ಷಿಸಿ ಬಿಟ್ಟು ಬಿಡಿರಿ. ನಾನು ಹೇಳಿದ ಮಾತು ನಿಮಗೆ ಒಳ್ಳೇದು ಎಂದು ಎನಿಸಿದರೆ. ಸಕಾರಣವಾಗಿದ್ದರೆ ನೀವು ಸ್ವೀಕರಿಸಿರಿ. ವೇದಗಳು ಪ್ರಮಾಣ ಎಂದು ಹೇಳುವವರು ''ಆ ವೇದ ಅಪೌರುಷೇಯ. ಅವುಗಳನ್ನು ಯಾರು ರಚಿಸಿಲ್ಲ'' ಎಂದು ಹೇಳುತ್ತಾರೆ. ಯಾರೂ ರಚಿಸದಿದ್ದರೆ ಅವು ಮುಗಿಲಿನಿಂದ ತಾವಾಗಿ ಉದುರಿಬಿದ್ದವೇ ! ಯಾರೂ ಉಚ್ಚಾರ ಮಾಡದೇ ಅಕ್ಷರಗಳು ತಾವಾಗಿ ಮೂಡಿ ಬಂದವು ಎಂದು ಹೇಳುವುದು ಮೂಢನಂಬಿಗೆಯಲ್ಲವೇ ! ನಿಜವಾದ ಧರ್ಮದಲ್ಲಿ ಮೂಢ ನಂಬಿಗೆಗೆ ಇಂಬಿಲ್ಲ. ನಾವೆಲ್ಲಿಯೂ ಅಂಧಶ್ರದ್ಧೆಯನ್ನು ತೋರತಕ್ಕದ್ದಲ್ಲ. ಯಾವದು ಯುಕ್ತಿಯುಕ್ತವೋ, ವಿಮರ್ಶಪೂರ್ವಕವೋ, ಮತ್ತು ಸಕಾರಣವಾಗಿದೆಯೋ ಅಂಥ ಬುದ್ಧಿ ಪ್ರಧಾನವಾದ ಬೌದ್ಧ ಮತವನ್ನೇ ಎಲ್ಲರೂ ಅಂಗಿಕರಿಸಬೇಕು. ಅದೇ ನನಗೆ ನಿಮಗೂ ತಾರಕ.'' ಎಂದು ಮುಂತಾಗಿ ಉಪನ್ಯಾಸವನ್ನು ಮಾಡಿದನು.

ಯತಿವೇಷಧಾರಿಯಾದ ಮಾಯಾಮೋಹನ ಈ ವಚನಗಳಿಂದ ಎಲ್ಲರಿಗೂ ವೇದದಲ್ಲಿ ವಿಶ್ವಾಸವೇ ಹಾರಿಹೋಯಿತು. ದೈತ್ಯರೆಲ್ಲರೂ ವೇದ ವಿದ್ರೋಹಿಗಳಾಗಿ ಸ್ವೈರಾಚಾರಕ್ಕಿಳಿದು ನೀತಿ ಭ್ರಷ್ಟರಾದರು.

## ಧರ್ಮ ಏವ ಹತೋ ಹಂತಿ

ಆಗ ದೇವತೆಗಳು ಅವರ ಜೊತೆಗೆ ಯುದ್ಧ ಮಾಡಬಂದರು. ದೇವದಾನವರಲ್ಲಿ ಘನಘೋರ ಸಗ್ರಾಮವಾಯಿತು. ಧರ್ಮದ ಕವಚವೇ ಕಳಚಿಹೋಗಿದ್ದ ದೈತ್ಯರನ್ನು ದೇವಕುಲದವರು ಸುಲಭವಾಗಿ ಸೋಲಿಸಿ ಓಡಿಸಿದರು. ದೇವತೆಗಳಿಂದ ಪರಾಜಿತರಾಗಿ ಅಲ್ಲಲ್ಲಿ ತಲೆಮರೆಸಿಗೊಂಡು ತಿರುಗಾಡುವ ಆ ದಾನವದೈತ್ಯರೂ ಮತ್ತು ಅವರ ಮತವನ್ನೇ

ಅನುಸರಿಸಿ ದಿಗಂಬರ ಬೌದ್ಧ ಜೈನ ಮತಗಳನ್ನು ಅಂಗೀಕರಿಸಿರುವ ಮಾನವರೂ 'ನಗ್ನ' ಎಂಬ ಪುರಾಣಗಳಲ್ಲಿ ಕರೆಯಲ್ಪಟ್ಟಿದ್ದಾರೆ. ಮಾನವನ ಮರ್ಯಾದಾವಸ್ತ್ರವನ್ನೇ ಹಾರಿಹೊಡೆದದ್ದರಿಂದ ಅವರಿಗೆ 'ನಗ್ನ' ಎಂದು ಹೆಸರು ಬಂದಿತು.

ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂದು ಭಾರತೀಯ ಸಂಪ್ರದಾಯದಲ್ಲಿ ನಾಲ್ಕಕೇ ಆಶ್ರಮಧಾರಿಗಳಿದ್ದಾರೆ. ಬ್ರಹ್ಮಚರ್ಯ ಆಶ್ರಮ ಅಥವಾ ಸನ್ಯಾಸಾಶ್ರಮವನ್ನು ಸ್ವೀಕಾರಮಾಡಬೇಕು. ಈ ನಾಲ್ಕು ಆಶ್ರಮಗಳಲ್ಲಿ ಯಾವ ಆಶ್ರಮಕ್ಕೂ ಸೇರದೆ ನಗ್ನವಾದವನು ಮಹಾ ಪಾಪಿಯೇ ಸರಿ. ತನಗೆ ವಿಹಿತವಾದ ವರ್ಣಾಶ್ರಮ ಧರ್ಮ ಕರ್ಮಗಳನ್ನು ಮತ್ತು ನಿತ್ಯ ಆಚಾರಗಳನ್ನು ಶಕ್ತಿಯಿದ್ದರೂ ಮಾಡದಿದ್ದರೆ ಅವನು ಆಗಲೇ ಪತಿತನಾಗುತ್ತಾನೆ.

## ವೇದದ್ವೇಷಿಗಳಿಂದ ದೂರ ಇರಬೇಕು

ಆಪತ್ ಕಾಲವನ್ನು ಬಿಟ್ಟು ಉಳಿದ ಸಮಯದಲ್ಲಿ ಹದಿನೈದು ದಿನ ನಿತ್ಯ ಕರ್ಮಗಳನ್ನು ಬಿಟ್ಟ ಮನುಷ್ಯನು ಶುದ್ಧನಾಗಬೇಕಾದರೆ ಬಹಳ ದೊಡ್ಡ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೆ ಮಾತ್ರ ಸಾಧ್ಯ. ಆದರೆ ವರ್ಷಗಟ್ಟಳೆ ಬುದ್ಧಿಪೂರ್ವಕವಾಗಿ ತನ್ನ ಜಾತಿ ಧರ್ಮದ ವಿಹಿತ ಕರ್ಮಗಳನ್ನು ಮಾಡದೇ ಇದ್ದ ಮನುಷ್ಯನಿಗೆ ಎಂಥ ಪ್ರಾಯಶ್ಚಿತ್ತದಿಂದಲೂ ಶುದ್ಧಿಯಾಗಲಾರದು. ಅಂಥ ಪಾಪಿಯನ್ನು ನೋಡಿದ ಮಾತ್ರದಿಂದಲೇ ಮನುಷ್ಯನಿಗೆ ಮೈಲಿಗೆಯಾಗುವುದು. ಇಂಥ ಪಾಖಂಡಿಯ ದರ್ಶನದಿಂದ ಬಂದ ಪಾಪವು ಪರಿಹಾರವಾಗಬೇಕಾದರೆ ಸೂರ್ಯನನ್ನು ನೋಡಬೇಕು. ಅವನನ್ನು ಮುಟ್ಟಿದರೆ ಉಟ್ಟುತೊಟ್ಟುಕೊಂಡ ಬಟ್ಟೆಗಳೊಂದಿಗೇ ನೀರಿನಲ್ಲಿ ಮುಳುಗಿ ಏಳಬೇಕು. ಸಜ್ಜನರಾದವರು ಅಂಥವರ ಸಹವಾಸವನ್ನು ಸಂಪೂರ್ಣವಾಗಿ ವರ್ಜಿಸಬೇಕು. ಅಂಥ ಪಾಪಿಗಳ ದೃಷ್ಟಿ ಬಿದ್ದರೂ ಸಾಕು. ಅಸ್ತಿಕರು ಮಾಡಿದ ಯಜ್ಞ ಯಾಗ ಶ್ರಾದ್ಧ ಪೂಜೆ ಮುಂತಾದ ಪುಣ್ಯ ಕಾರ್ಯಗಳೆಲ್ಲವೂ ನಿಷ್ಫಲವಾಗುವವು. ಪಾಖಂಡಿಗಳ ಸಹವಾಸ. ಸಂಭಾಷಣ, ಸಂವ್ಯಹಾರ, ಸಂಸ್ಪರ್ಶ, ಮುಂತಾದ ಯಾವುದೇ ತರಹದ ಸಂಪರ್ಕ ಸಂಬಂಧವನ್ನು ಮಾಡಿದರೆ ನರಕವಾಗುವುದು. ಆದ್ದರಿಂದ ಇಂಥ ವೇದ ವಿದ್ವೇಷಿಗಳಿಂದ ದೂರ ಇರುವುದೇ ಶ್ರೇಯಸ್ಕರವಾಗಿದೆ.

## ಪುಣ್ಯಪುರುಷ ಪಾಖಂಡಿಯ ಸ್ನೇಹ ಮಾಡಿದಾಗ

ಪೂರ್ವಕಾಲದಲ್ಲಿ ಶತಧನು ಎಂಬ ಓರ್ವ ಅರಸನು ಭೂಮಿಯನ್ನು ಆಳುತ್ತಿದ್ದ. ಅವನ ಕೀರ್ತಿಯು ಭೂಮಂಡಲದಲ್ಲಿ ಎಲ್ಲ ಕಡೆಗೂ ಪಸರಿಸಿತ್ತು. ಅವನ ಮಡದಿ ಶೈಬ್ಯಾ. ಅವಳಿಗೆ ಧರ್ಮದಲ್ಲಿ ನಿರತಿಶಯ ನಿಷ್ಠೆ. ಸತ್ಯ, ಶೌಚ ಮತ್ತು ದಯೆ, ಮುಂತಾದ ಸದ್ಗುಣಗಳು ಅವಳಲ್ಲಿ ಮನೆ ಮಾಡಿದ್ದವು. ಒಳ್ಳೇತನದ ಎಲ್ಲ ಲಕ್ಷಣಗಳೂ ಅವಳಲ್ಲಿ ಮೇಳವಿಸಿದ್ದವು. ನಯ, ವಿನಯಗಳು, ಆ ಪತಿವ್ರತೆಯ ಉಸಿರಾಗಿದ್ದವು.ಇಂಥ ಧರ್ಮ ಪತ್ನಿಯೊಡನೆ ಶತಧನು ಮಹಾರಾಜನು ಜಗದೊಡೆಯನಾದ ಜನಾರ್ದನನ್ನು ಆರಾಧಿಸಿದನು. ತಪಸ್ಸಮಾಧಿಯಿಂದ ಆ ದೇವದೇವನನ್ನು ಮೆಚ್ಚಿಸಿದನು. ಹೋಮ

ಹವನಗಳಿಂದ ಯಜ್ಞ ಪುರುಷನನ್ನು ಸಂತೋಷ ಪಡಿಸಿದನು. ಈ ಸಂದರ್ಭಗಳಲ್ಲಿ ವಿಪುಲವಾಗಿ ದಾನಕ್ಷಿಣೆಗಳನಿತ್ತನು. ಪ್ರತಿದಿನವೂ ಆ ಭೂಪಾಲನು ಭಾರ್ಯೆಯೊಂದಿಗೆ ಭಗವಂತನ ಪೂಜೆಮಾಡುವಾಗ ಪ್ರಪಂಚವನ್ನೇ ಮರೆಯುತ್ತಿದ್ದನು. ಏಕಾಗ್ರ ಭಕ್ತಿಯಿಂದ ಆ ರಾಜದಂಪತಿಗಳು ಅಚ್ಯುತನನ್ನು ಅರ್ಚಿಸುತ್ತಿದ್ದರು. ಒಮ್ಮೆ ಕಾರ್ತೀಕ ಏಕಾದಶಿಯೆಂದು ರಾಜರಾಣಿಯರು ಗಂಗಾ ತಟಾಕಕ್ಕೆ ಸ್ನಾನಕ್ಕೆ ಹೋಗಿದ್ದರು. ಅವರಿಬ್ಬರೂ ಸ್ನಾನಮಾಡಿ ಮೇಲೆದ್ದು ತೀರದಲ್ಲಿ ನಿಂತುಕೊಂಡಾಗ ಅಲ್ಲಿಗೆ ಒಬ್ಬ ಪಾಖಂಡಿಯು ಬಂದನು.

## ದೊರೆಯ ದಾಕ್ಷಿಣ್ಯ, ರಾಣಿಯ ಧರ್ಮದೀಕ್ಷೆ

ಆ ಪಾಖಂಡಿಯು ಮಹಾರಾಜನಿಗೆ ಬಿಲ್ಲು ವಿದ್ಯೆಯನ್ನು ಕಲಿಸಿದ ಗುರುವಿನ ಗೆಳೆಯನಾಗಿದ್ದ. ಇವನನ್ನು ಮಾತನಾಡಿಸದಿದ್ದರೆ ಅವನ ಮಿತ್ರನಾದ ತನ್ನ ಗುರು ನೊಂದುಕೊಳ್ಳಬಹುದು ಎಂಬ ದಾಕ್ಷಿಣ್ಯದಿಂದ ಮಹಾರಾಜನು ಅವನೊಡನೆ ಗೆಳೆಯನಂತೆ ವ್ಯವಹರಿಸಿದ. ಸ್ನೇಹದಿಂದ ಮಾತನಾಡಿದ. ಆದರೆ ಅವನ ಮಡದಿ ಧರ್ಮ ನಿಷ್ಠಳು. ಈ ಪಾಖಂಡಿಯನ್ನು ಕಂಡು ಆಕೆ ಮೋರೆ ತಿರುವಿದಳು. ಅವನ ಜೊತೆಗೆ ಒಂದು ಮಾತನ್ನೂ ಆಡಲಿಲ್ಲ. ಯಾವ ಉಪಚಾರವನ್ನೂ ಮಾಡಲಿಲ್ಲ. ಆದರೆ ಉಪವಾಸ ಮಾಡಿ ಮಡಿಯಿಂದ ಗಂಗೆಯಲ್ಲಿ ಮಿಂದು ನಿಂತಾಗ ಈ ಪಾಪಿ ಕಣ್ಣಿಗೆ ಬಿದ್ದನಲ್ಲ ಎಂದು ಅವಳ ಮನಸ್ಸು ಮಿಡುಕಿತು. ಈ ಪಾಖಂಡಿಯ ದರ್ಶನದ ಪಾಪವನ್ನು ತೊಳೆದುಕೊಳ್ಳಲಿಕ್ಕಾಗಿ ಸೂರ್ಯನನ್ನು ನೋಡಿದಳು. ಮತ್ತೆ ಆ ಪಾಖಂಡಿಯೆಡೆಗೆ ಕಣ್ಣೆತ್ತಿ ಕೂಡ ನೋಡಲಿಲ್ಲ. ಅನಂತರ ಅವರಿಬ್ಬರೂ ಊರಿಗೆ ಬಂದರು. ಮನೆಗೆ ಬಂದು ಯಥಾ ಪ್ರಕಾರ ಶ್ರೀ ಹರಿಯನ್ನು ಭಕ್ತಿಯಿಂದ ಪೂಜಿಸಿದರು. ಮುಂದೆ ತಾನಿರುವವರೆಗೆ ಶತಧನು ಮಹಾರಾಜ ನ್ಯಾಯದಿಂದ ಭೂಮಿಯನ್ನು ಆಳಿದ. ಅನೇಕ ದಾನಧರ್ಮಾದಿ ಪುಣ್ಯ ಕಾರ್ಯಗಳನ್ನು ಮಾಡಿದ. ವೈರಿಗಳನ್ನೆಲ್ಲ ಗೆದ್ದ. ಕೊನೆಯವರೆಗೂ ಧರ್ಮಶಾಸನ ನಡೆಸಿ ಕಾಲಪ್ರಾಪ್ತವಾದ ಮರಣ ಹೊಂದಿದ. ಧರ್ಮದರ್ಶಿನಿಯಾದ ಮಹಾರಾಣಿಯು ಪತಿಯ ವಿರಹವನ್ನು ತಾಳಲಾರದೆ ಚಿತಾರೋಹಣ ಮಾಡಿ ಸತೀ ಹೋದಳು. ಆ ಅರಸಿಯು ದೃಢತರವಾದ ತನ್ನ ಧರ್ಮ ನಿಷ್ಠೆಯಿಂದ ಮುಂದಿನ ಜನ್ಮದಲ್ಲಿ ಕಾಶೀರಾಜನ ಹೊಟ್ಟೆಯಿಂದ ಹುಟ್ಟಿಬಂದಳು. ಅವಳ ಪಾತಿವ್ರತ್ಯ ಪ್ರಭಾವದಿಂದ ಜನ್ಮಾಂತರದ ನೆನಹುಗಳು ಅವಳ ಮನಸ್ಸಿನಿಂದ ಅಳಿಸಿದ್ದಿಲ್ಲ. ಜ್ಞಾನ ವಿಜ್ಞಾನಗಳೆಲ್ಲ ಅವಳ ಮಿದುಳಿನಲ್ಲಿ ತುಳುಕಾಡುತ್ತಿದ್ದವು. ಅವಳ ಮುಖ ಲಕ್ಷಣ ಕಂಡಾಗ ಯಾರಿಗಾದರೂ ಗೌರವಭಾವವು ಉಂಟಾಗುತ್ತಿತ್ತು. ಇಂತು ಎಲ್ಲ ಲಕ್ಷಣಗಳಿಂದ ಒಡಗೂಡಿದ ಆ ರಾಜಕುವರಿಯನ್ನು ಅವಳ ತಂದೆ ಒಳ್ಳೇವರನನ್ನು ನೋಡಿ ಕನ್ಯಾದಾನ ಮಾಡಬೇಕೆಂದು ಬಯಸಿದ. ಆದರೆ ಆ ರಾಜನಂದಿನಿಯು ತನ್ನ ತಂದೆಗೆ ಈಗ ತನ್ನ ಮದುವೆ ಬೇಡ ಎಂದು ಬಿನ್ನವಿಸಿದಳು. ಎಲ್ಲ ವಿಷಯಗಳನ್ನು ಬಲ್ಲ ಬುದ್ಧಿವಂತಳಾದ ಆ ಮಗಳ ಮಾತನ್ನು ರಾಜನು ತೆಗೆದುಹಾಕಲಿಲ್ಲ. ಅವಳಿಗೆ ವರ ನೋಡುವ ವಿಚಾರವನ್ನೇ ಬಿಟ್ಟು ಬಿಟ್ಟ.

ಕಾಶೀರಾಜಕುಮಾರಿಯು ತನ್ನ ದಿವ್ಯ ದೃಷ್ಟಿಯಿಂದ ತನ್ನ ಕಳೆದ ಜನ್ಮದ ಪತಿಯನ್ನು ಹುಡುಕತೊಡಗಿದಳು. ನಾಡಿನ ಎಲ್ಲ ಅರಸು ಕುವರರ ಚಿತ್ರ ಚರಿತ್ರೆಗಳನ್ನು ತರಿಸಿ ಪರೀಕ್ಷಿಸಿದಳು. ಅವಳ ಪೂರ್ವ ಜನ್ಮದ ಪತಿ ಶತಧನು ಮಹಾರಾಜನು ಯಾವ ರಾಜ ಕುಲದಲ್ಲಿಯೂ ಜನಿಸಿರಲಿಲ್ಲ. ಬ್ರಾಹ್ಮಣ ವಂಶದಲ್ಲಿಯೂ ಉದಿಸಿರಲಿಲ್ಲ. ಮಾನವ ಜಾತಿಯಲ್ಲಿ ಎಲ್ಲಿಯೂ ಅವನ ಹುಟ್ಟು ಗೋಚರಿಸಲಿಲ್ಲ.

ಆಗ ಸೂಕ್ಷ್ಮದರ್ಶಿನಿಯಾದ ಆ ಕಾಶೀಪತಿಯ ಕುವರಿಯು ತನ್ನ ದಿವ್ಯ ದೃಷ್ಟಿಯಿಂದ ಪಶುಪಕ್ಷಿ ಪ್ರಪಂಚವನ್ನೆಲ್ಲ ಪರೀಕ್ಷಿಸಿ ನೋಡಿದಳು. ಶತಧನು ಮಹಾರಾಜನು ನಾಯಿಯಾಗಿ ಹುಟ್ಟಿದ್ದು ಅವಳಿಗೆ ತಿಳಿದು ಬಂತು. ಕಳೆದ ಜನ್ಮದಲ್ಲಿ ಕಾರ್ತೀಕ ಏಕಾದಶಿ ದಿನ ಗಂಗೆಯಲ್ಲಿ ಸ್ನಾನ ಮಾಡಿ ಮಡಿಯಿಂದ ಇದ್ದಾಗ ತನ್ನ ಪತಿ ವೇದನಿಂದಕನಾದ ಪಾಖಂಡಿಯೊಡನೆ ಸ್ನೇಹಸಲ್ಲಾಪದ ಮಾಡಿದ್ದರ ದುಷ್ಫಲವೇ ಈ ಶ್ವಾನ ಜನ್ಮ ಎಂದು ಅವಳಿಗೆ ತಕ್ಷಣವೇ ತಿಳಿದು ಹೋಯಿತು. ತನ್ನ ಪತಿಯ ಈ ನಾಯಿ ಪಾಡನ್ನು ನೋಡಿ ಅವಳಿಗೆ ಬಹಳ ಕೆಡಕು ಅನಿಸಿತು. ಕೂಡಲೇ ಅವಳು ತನ್ನ ಆ ನಾಯಿ ನಲ್ಲನನ್ನು ಅರಿಸಿಕೊಂಡು ಹೊರಟಳು. ದೇಶ ದೇಶ ತಿರುಗಿ ಕೊನೆಗೆ ಅವಳು ವಿದಿಶಾ ಪಟ್ಟಣಕ್ಕೆ ಬಂದಳು. ಅಲ್ಲಿ ಅವಳು ನಾಯಿ ಆಗಿ ಬೀದಿಯಲ್ಲಿ ಅಲೆಯುವ ಪತಿಯನ್ನು ಗುರುತಿಸದಳು. ತನ್ನ ಆ ಶ್ವಾನಕಾಂತನನ್ನು ಕಂಡು ಅವಳ ಕಣ್ಣು ಹನಿಗೂಡಿತು. ಕರಳು ಹಿಂಡಿತು. ತನ್ನ ದುಃಖಾವೇಗವನ್ನು ಬಿಗಿಹಿಡಿದು ಅವಳು ಅದನ್ನು ಕರೆದಾಗ ಆ ಬೀದಿ ನಾಯಿಯು ಅವಳ ಬಳಿಬಾರದೆ ದೂರ ಬೊಗಳುತ್ತ ನಿಂತಿತ್ತು. ಆಗ ಅವಳು ಅದಕ್ಕೆ ಬೇಕಾದ ಆಹಾರವನ್ನು ನೀಡಿದಳು. ನಾಯಿಯನ್ನು ಕರೆಯುವ ಶಬ್ದದಲ್ಲಿ ಸಲುಗೆಯಿಂದ ಅದನ್ನು ಕರೆದಳು.

ಅನ್ನದ ಆಶೆಗೆ ಅದು ಅವಳ ಹತ್ತಿರ ಬಂದಿತು. ಅವಳು ಕೊಟ್ಟಿದ್ದನ್ನೆಲ್ಲ ತಿಂದಿತು. ಆಗ ಆ ರಾಜಕುಮಾರಿಯು ಸ್ನೇಹದಿಂದ ಆ ನಾಯಿಯ ಮೈಮೇಲೆ ಕೈಯಾಡಿಸಿದಳು. ಅದರ ಮೈಕೈ ತೀಡಿದಳು. ಇದರಿಂದ ಆ ನಾಯಿಯು ಅವಳಿಗೆ ಸಂಪೂರ್ಣ ಈಲಾಯಿತು. ರಾಜಕುಮಾರಿಯು ಅದಕ್ಕೆ ಬೇಕಾದ ಬಗೆ ಬಗೆಯ ಮೃಷ್ಟಾನ್ನಗಳನ್ನು ದಿನವೂ ಕೊಡುತ್ತಿದ್ದಳು. ನಲುಮೆಯಿಂದ ಅದರ ಯೋಗಕ್ಷೇಮವನ್ನು ನೋಡುತ್ತಿದ್ದಳು. ಅವಳ ಈ ಆರೈಕೆಯಿಂದ ಆ ಬಿಡಾಡಿ ನಾಯಿಯು ಮೈತುಂಬಿಕೊಂಡು ಹೃಷ್ಟವೂ ಆಯಿತು. ಪುಷ್ಟವೂ ಆಯಿತು. ರಾಜಪುತ್ರಿಯ ಉಪಚಾರ ಉಪಕಾರಗಳಿಂದ ನಾಯಿಗೆ ಅವಳ ಜೊತೆಗೆ ಸಲುಗೆ ಬೆಳೆಯಿತು. ಅದು ನನ್ನ ಜಾತಿ ಸಂಸ್ಕಾರಕ್ಕೆ ಅನುಗುಣವಾಗಿ ತನ್ನ ಒಡೆಯನನ್ನೇ ನಂಬಿ ಮೆಚ್ಚಿ ಅವಳ ಮೈ ಮೈ ಆಡರುತ್ತಿತ್ತು. ಕೈ ಕಾಲೂ ಮೂಸುತ್ತಿತ್ತು. ಅವಳ ಅಂಗಾಲನ್ನು ನೆಕ್ಕುತ್ತಿತ್ತು. ಪ್ರೀತಿಯಿಂದ ಅವಳ ಮುಂದೆ ನಿಂತು ಕುಂಯ್ ಗುಡುತ್ತಿತ್ತು. ಅವಳ ಆ ನಾಯಿನಾಥ ಮೈಗೆ ಮೈ ಮಸೆದು ಮುದ್ದು ಮಾಡತೊಡಗಿದಾಗ ಪೂರ್ವಜನ್ಮದ ಸ್ಮೃತಿ ಜಾಗರೂಕವಾಗಿರುವ ಆ ಮಾನವತಿಗೆ ನಾಚಿಕೆಯಾಗುತ್ತಿತ್ತು. ಒಂದು ದಿನ ಅವಳಿಗೆ ಆ ನಾಯಿ ನಾಯಕನ ಶ್ವಾನ ಚೇಷ್ಟೆಯಿಂದ ಕಚಕುಳಿಯಿಟ್ಟಂತಾದರೂ ಮರುಕ್ಷಣದಲ್ಲಿ ಕೆಡುಕೆನಿಸಿ ಅವಳು ಅದಕ್ಕೆ ನಮಸ್ಕಾರ ಮಾಡಿ

ಅದರ ಕಿವಿಯಲ್ಲಿ ಹೇಳಿದಳು. ''ನಾಥ, ನೀವು ನಾಯಿಯಲ್ಲ. ಶತಧನು ಮಹಾರಾಜ. ಕಳೆದ ಜನ್ಮದಲ್ಲಿ ಸಾರ್ವಭೌಮರಾದ ನೀವು ಗಂಗೆಯ ದಂಡೆಯ ಮೇಲೆ ಪಾಖಂಡಿಯ ಜೊತೆಗೆ ಸ್ನೇಹಾಲಾಪ ಪೂರ್ವಕವಾಗಿ ಸೌಹಾರ್ದವನ್ನು ಬೆಳೆಸಿದ್ದರಿಂದ ಇಂಥ ದುರವಸ್ಥೆಯು ನಿಮಗೆ ಬಂದೊದಗಿದೆ. ನಾನು ನಿಮ್ಮ ಅಂದಿನ ಮಡದಿ. ಈಗಲಾದರೂ ನಿಮಗೆ ಆ ಘಟನೆ ಸ್ಮರಣಕ್ಕೆ ಬಂದಿತೇ !''

ರಾಜಪುತ್ರಿಯ ಈ ನುಡಿಗಳನ್ನು ಕೇಳಿ ಆ ನಾಯಿಯು ಒಂದು ಕ್ಷಣ ನಿಶ್ಚಲವಾಗಿ ನಿಂತುಕೊಂಡಿತು. ಅವಳ ಮಾತು ಅದರ ನೆನಪಿನ ಕಾವಾಟವನ್ನೇ ತೆರೆಯಿತು. ಹಿಂದಿನಘಟನೆಗಳೆಲ್ಲವೂ ಅದಕ್ಕೆ ಒಂದಾಗಿ ಸ್ಮರಣಕ್ಕೆ ಬರತೊಡಗಿದವು. ಅಂದು ಕಾರ್ತೀಕ ಏಕಾದಶಿಯಂದು ಗಂಗಾ ತಟಾಕದಲ್ಲಿ ತನ್ನ ಧನುರ್ವಿದ್ಯಾ ಗುರುವಿನ ದಾಕ್ಷಿಣ್ಯಕ್ಕಾಗಿ ವೇದದ್ವೇಷಿಯ ಜೊತೆಗೆ ತಾನು ಸ್ನೇಹ ಪೂರ್ವಕವಾಗಿ ಮಾತನಾಡಿದ್ದು ನೆನಪಾಯಿತು. ಆ ಪಾಪದಿಂದಲೇ ತನಗೆ ಇಂಥ ನೀಚನಾಯಿಯ ಜನ್ಮ ಬಂದದ್ದನ್ನು ತಿಳಿದು ಅದರ ಮೈ ನಡುಗಿ ಹೋಯಿತು. ಹಿಂದಿನ ಸ್ಮರಣೆ ಮೂಡಿ ಬಂದಾಗ ಅದಕ್ಕೆ ತನ್ನ ನಾಯಿ ಜನ್ಮ ನೋಡಿ ಹೇಸಿಕೆಯೂ ಆಯಿತು. ನಾಚಿಕೆಯು ಆಯಿತು. ಕೂಡಲೇ ನಿರ್ವಿಣ್ಣವಾದ ಆ ನಾಯಿಯು ಅಲ್ಲಿಂದ ರಾಜಪುತ್ರಿಯ ಕಣ್ಣಿಗೆ ಕಾಣದಂತೆ ದೂರ ಓಡಿ ಊರಹೊರಗೆ ಹೋಗಿಪ್ರಾಣ ನೀಗಿತು. ಮುಂದೆ ಅದಕ್ಕೆ ನರಿಜನ್ಮವು ಬಂದಿತು.

ಮತ್ತೆ ಆ ಕಾಶೀಪತಿಯ ಕುಮಾರಿಯ ದಿವ್ಯದೃಷ್ಟಿಯಿಂದ ನಿರೀಕ್ಷಿಸಿದಳು ತನ್ನ ನಲ್ಲ ಎಲ್ಲಿ ಏನು ಎಂದು. ಕೋಲಾಹಲ ಎಂಬ ಬೆಟ್ಟದಲ್ಲಿ ತನ್ನ ನಾಥ ನರಿಯಾಗಿದ್ದಾನೆ ಎಂದು ಅವಳಿಗೆ ಗುರುತಾಯಿತು. ಕೂಡಲೇ ಅಲ್ಲಿಗೆ ಧಾವಿಸಿ ನರಿಯಾದ ಆ ದೊರೆಯನ್ನು ಕರೆತಂದು ಹಿಂದಿನಂತೆ ಮತ್ತೆ ಬೋಧಿಸಿದಳು. ''ಮಹಾರಾಜ ನಾಯಿಯಾದಾಗ ನಾನು ಹೇಳಿದ್ದು ನೆನಪಿದೆಯೇ ! ಪಾಖಂಡಿಯ ಜೊತೆಗೆ ಆಗ ಮಾತನಾಡಿದ್ದಕ್ಕೆ ನಿಮಗೆ ಶಿಕ್ಷೆ ಆ ನಾಯಿ ಜನ್ಮ ಮತ್ತು ಈ ನರೀ ಜನ್ಮ. ಈಗಲಾದರೂ ಆ ಪಾಪಕ್ಕೆ ಪಶ್ಚಾತ್ತಾಪ ಪಟ್ಟು ವೇದ ಧರ್ಮದ ಮಹತಿಯನ್ನು ಮನದಲ್ಲಿ ನೆನೆಯಿರಿ.'' ಹಿಂದಿನ ಜನ್ಮದ ಹೆಂಡತಿಯ ಮಾತು ಕೇಳಿ ಆ ನರಿ - ದೊರೆಗೆ ನಿಜವಾಗಿಯೂ ಪಶ್ಚಾತ್ತಾಪವೆನಿಸಿತು. ಅದು ಅಲ್ಲಿಂದ ಓಡಿ ಹೋಗಿ ಕಗ್ಗಾಡಿನಲ್ಲಿ ಕಲ್ಲಾಗಿ ಕುಳಿತಿತು. ಆಹಾರವನ್ನು ಮುಟ್ಟದೇ ಉಪವಾಸದಿಂದಲೇ ಜನ್ಮ ನೀಗಿತು.

ಅನಂತರ ಅದು ಒಂದು ಕಾಡಿನಲ್ಲಿ ತೋಳವಾಗಿ ಜನಿಸಿತು. ಆಗ ಆ ನೃಪನಂದಿನಿಯೂ ಅಲ್ಲಿಯೂ ಹೋಗಿ ಮತ್ತೆ ಅದಕ್ಕೆ ಅದರ ಹಿಂದಿನ ಜನ್ಮಗಳ ನೆನಪು ಕೊಟ್ಟು ಬೌದ್ಧ ಭಿಕ್ಷು, ಜೈನ ಶ್ರವಣರ ಸಹವಾಸ ಸಂಭಾಷಣಗಳಿಂದ ಆಗುವ ಅನರ್ಥವನ್ನು ತಿಳಿಸಿ ಹೇಳಿದಳು. ಅದರಿಂದ ಆ ತೋಳಕ್ಕೆ ಒಳ್ಳೇ ತಿಳಿಯಾದ ತಿಳಿವಳಿಕೆ ಬಂದು ಅದೂ ಕೂಡ ತನ್ನ ಆ ತೋಳ ತನುವನ್ನು ತ್ಯಾಗ ಮಾಡಿತು. ಮುಂದೆ ಆ ಶತಧನು ಮಹಾರಾಜ ಹದ್ದಾಗಿ ಹುಟ್ಟಿದ. ಈಗಲೂ ಅವನ ಈ ಪೂರ್ವ ಪತ್ನಿಯು ''ಪ್ರಭು ಈ ನಿನ್ನಗೃಧ್ರಚೇಷ್ಟೆ ಸಾಕು, ಪಾಷಂಡರ ಜೊತೆಗೆ ಮಾತನಾಡಿದ್ದಕ್ಕೆ ಪ್ರಾಯಶ್ಚಿತ್ತ

ಮಾಡಿಕೊಳ್ಳಿರಿ'' ಎಂದು ಹೇಳಿದಳು. ಆಗ ಆ ಹದ್ದು ಅಲ್ಲಿಯೇ ಬಿದ್ದು ಸತ್ತುಹೋಗಿ ಮತ್ತೆ ಕಾಗೆಯಾಯಿತು.

ಕಾಶಿರಾಜನ ಕುಮಾರಿಯು ಮತ್ತೆ ಆ ಕಾಗೆಯ ಬಳಿಗೆ ಬಂದು ''ಕಾಂತ, ಅಂದು ಅಸಂಖ್ಯ ಜನರಿಗೆ ದಾನದಕ್ಷಿಣೆ ಇತ್ತು, ಬಂದಷ್ಟು ಜನರಿಗೆ ಬಯಸಿದ ಭೋಜನ ನೀಡುವ ನೀನು ಈಗ ಕಾಗಿಪಿಂಡ ತಿಂದು ಬದುಕುವ ಪ್ರಸಂಗ ಬಂದಿತೇ! ಇದು ವೇದ ನಿಂದಿಸುವವರ ಸಹವಾಸ ಫಲ'' ಎಂದು ನುಡಿದಳು. ಆಗ ಪಾಖಂಡಿಯ ಸಂಪರ್ಕ ಮಾಡಿದ್ದಕ್ಕೆ ಪಶ್ಚಾತ್ತಾಪದಗ್ಧನಾದ ಆ ರಾಜನು ಕಾಗೆಯ ಜನ್ಮ ನೀಗಿ ನವಿಲಾದನು. ಸುಂದರವಾದ ಆ ನವಿಲನ್ನು ರಾಜಕುಮಾರಿಯು ಗುರುತಿಸಿ ಅದನ್ನು ತನ್ನ ಅಂತಃಪುರದಲ್ಲಿ ತಂದು ಇರಿಸಿಗೊಂಡಳು. ಅದಕ್ಕೆ ಬೇಕು ಬೇಕಾದ ಬಗೆ ಬಗೆಯ ಹಣ್ಣು - ಕಾಯಿಗಳನ್ನು ತಿನಿಸಿ, ಉಣಿಸಿ, ತಣಿಸಿ, ಕುಣಿಸಿ ತಾನೂ ನಲಿಯುತ್ತಿದ್ದಳು. ಮುಂದೆ ಒಂದು ದಿನ ಅವಳ ಕಾಶೀಪತಿಯಾದ ತಂದೆಯು ಒಂದು ಅಶ್ವಮೇಧ ಯಜ್ಞವನ್ನು ಮಾಡಿದನು. ಆ ಯಜ್ಞದ ಅವಭೃಥ ಸ್ನಾನ ಕಾಲದಲ್ಲಿ ಆ ರಾಜಕುವರಿಯು ಆ ನವಿಲನ್ನು ಯಜ್ಞದ ಪುಣ್ಯೋದಕದಲ್ಲಿ ಸ್ನಾನ ಮಾಡಿಸಿದಳು. ತಾನೂ ಸ್ನಾನಮಾಡಿ ಶುಚಿರ್ಭೂತಳಾಗಿ ತನ್ನ ಆ ನವಿಲುನಲ್ಲನ ಬಳಿಗೆ ಬಂದು ಅದಕ್ಕೆ ''ಪಾಖಂಡಿಯ ಜೊತೆಗೆ ಸಂಭಾಷಣೆ ಮಾಡಿದ ತಪ್ಪಿಗಾಗಿ ಶತಧನು ಮಹಾರಾಜನಾದ ನೀನು ನಾಯಿ, ನರಿ, ತೋಳ, ಹದ್ದು, ಕಾಗೆ, ನವಿಲು ಮುಂತಾ ನಾನಾ ನೀಚ ಜಾತಿಗಳಲ್ಲಿ ತೊಳಲಾಡಬೇಕಾಯಿತೆಂದು ಹೇಳಿ ಅದರ ದುರವಸ್ಥೆಯನ್ನು ನೆನಪಿಗೆ ತಂದುಕೊಟ್ಟಳು.

ಮುಂದೆ ಆ ಶತಧನು ಮಹಾರಾಜನು ಮಯೂರ ಜನ್ಮದಿಂದ ಮುಕ್ತನಾಗಿ ಮಿಥಿಲೆಯ ಅರಸು ಜನಕರಾಜನ ಮಗನಾಗಿ ಜನಿಸಿದನು. ಕಾಶೀಪತಿ ಕುಮಾರಿಗೆ ದಿವ್ಯ ದೃಷ್ಟಿಯಿಂದ ಈ ಸಮಾಚಾರವು ತಿಳಿಯಿತು. ಆ ಮೈಥಿಲ ರಾಜಕುಮಾರನು ಪ್ರಾಯ ಪ್ರಬುದ್ಧನಾದಾಗ ಇತ್ತ ರಾಜಕುಮಾರಿಯು, ಕಾಶೀರಾಜನಿಗೆ ತನ್ನ ಸ್ವಯಂವರವನ್ನು ಏರ್ಪಡಿಸಲಿಕ್ಕೆ ಸೂಚಿಸಿದಳು. ಅದರಂತೆ ಮಹಾರಾಜನು ಅವಳ ಸ್ವಯಂವರದ ಘೋಷಣೆಯನ್ನು ಎಲ್ಲ ಕಡೆಗೂ ಮಾಡಿಸಿದನು. ಸ್ವಯಂವರಕ್ಕೆ ದಿಗ್ ದೇಶಗಳಿಂದ ಅನೇಕ ರಾಜಕುಮಾರರು ಬಂದಿದ್ದರು. ಮಿಥಿಲಾದೇಶದ ನೃಪನಂದನನೂ ಆ ಸ್ವಯಂವರಕ್ಕೆ ಆಗಮಿಸಿದ್ದ. ಕಾಶೀಪತಿ ಕುಮಾರಿಯು ಅವನನ್ನು ಸರಿಯಾಗಿ ಗುರುತಿಸಿ ಆ ಮೈಥಿಲ ರಾಜಕುಮಾರನ ಕೊರಳಿಗೆ ಸಂತಸದಿಂದ ಸ್ವಯಂ ಪ್ರೇರಣೆಯಿಂದ ಸ್ವಯಂವರ ಮಾಲೆಯನ್ನು ಹಾಕಿದಳು. ರಾಜಕುಮಾರನು ತನ್ನ ಆ ಜನ್ಮಜನ್ಮಾಂತರದ ಚಿರಸಂಗಿನಿಯನ್ನು ತನ್ನ ವಿದೇಹ ರಾಜ್ಯಕ್ಕೆ ಕರೆತಂದು ಶೃಂಗಾರದಿಂದ ವಿವಿಧ ಭೋಗ ಭಾಗ್ಯಗಳನ್ನು ಅನುಭವಿಸಿದ. ಮಹಾತ್ಮನಾದ ಜನಕ ಮಹಾರಾಜನು ಮರಣ ಹೊಂದಿದ ಬಳಿಕ ಈ ರಾಜಕುಮಾರನೇ ವಿದೇಹ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ಅನೇಕ ಯಜ್ಞಗಳನ್ನು ಮಾಡಿದ. ವಿಪುಲವಾದ ದಾನ ದಕ್ಷಿಣೆಗಳನ್ನಿತ್ತ. ಶತ್ರುಗಳನ್ನು ಸದೆ ಬಡಿದ. ಮಿತ್ರರನ್ನು ಸಂತೋಷ ಪಡಿಸಿದ. ಭೋಗಗಳನ್ನು ಭೋಗಿಸಿದ. ನ್ಯಾಯದಿಂದ

ಪೊಡವಿಯನ್ನು ಆಳಿದ. ಅನೇಕ ಸತ್ಪುತ್ರರನ್ನು ಹೆತ್ತ. ಕೊನೆಗೆ ಧಾರಾತೀರ್ಥದಲ್ಲಿ ವೈರಿಗಳೊಡನೆ ಹೋರಾಡುತ್ತ ಮರಣ ಹೊಂದಿ ಕ್ಷತ್ರಿಯೋಚಿತವಾದ ವೀರಸ್ವರ್ಗ ವನ್ನೈದಿದ. ಆಗ ಕಾಶಿರಾಜ ನಂದಿನಿಯು ನಗುನಗುತ್ತ ಪತಿಯ ಶರೀರದೊಡನೆ ಚಿತೆಯನ್ನು ಏರಿದಳು. ಮುಂದೆ ಆ ಶತಧನು ಮಹಾರಾಜನು ತನ್ನ ಮಡದಿಯೊಡನೆ ಇಂದ್ರಲೋಕಕ್ಕಿಂತ ಉತ್ತಮವಾದ ಪುಣ್ಯ ಲೋಕದ ಸದ್ಗತಿಯನ್ನು ಹೊಂದಿದನು. ಇದರಿಂದ ಶತಧನು ಮಹಾರಾಜನು ಸ್ವಯಂ ಧರ್ಮಾತ್ಮನಾಗಿದ್ದರೂ ವೇದ ವಿದ್ರೋಹಿಗಳಾದ ಜೈನ ಬೌದ್ಧಾದಿ ಪಾಖಂಡಿಗಳ ಜೊತೆಗೆ ಸಂಭಾಷಣೆ ಮಾಡಿದ್ದರಿಂದ ಎಂಥ ಅನರ್ಥಕ್ಕೆ ಗುರಿಯಾಗಿ, ನಾನಾ ನೀಚ ಯೋನಿಯಲ್ಲಿ ಬಳಲಬೇಕಾಯಿತು, ಎನ್ನುವುದು ಸ್ಪಷ್ಟವಾಗುವುದು. ಅವನ ಪತ್ನಿಯು ಆ ಪಾಖಂಡಿಯ ಜೊತೆಗೆ ಮಾತನಾಡದ್ದರಿಂದ ಅವಳಿಗೆ ಏನೂ ಅನಿಷ್ಟವಾಗದೆ ಅವಳೇ ಕೊನೆಗೆ ತನ್ನ ಪತಿಯನ್ನು ಅಶ್ವಮೇಧ ಯಜ್ಞದ ಅವಭೃತಸ್ನಾನ ಮಾಡಿಸಿ ಉದ್ಧಾರಮಾಡಿ ಅಂಥ ಪಾಖಂಡಿಗಳಿಂದ ದೂರವಿದ್ದರೆ ಎಂಥ ಮಹತ್ ಪುಣ್ಯವು ಬರುವದೆಂಬುದನ್ನೂ ತೋರಿಸಿಕೊಟ್ಟಿದ್ದಾಳೆ. ಆದುದರಿಂದ ವಿವೇಕಿಗಳಾದವರು ವೇದನಿಂದಕರಾದ ಪಾಖಂಡಿಗಳ ಜೊತೆಗೆ ಸ್ನೇಹ, ಸೌಹಾರ್ದ, ಸಂಭಾಷಣೆ, ಸಹವಾಸ, ಸಹಾಲಾಪ ಮೊದಲಾದ ಯಾವುದೇ ವಿಧವಾದ ಸಂಪರ್ಕವನ್ನು ಸರ್ವಥಾ ಇರಿಸಿಕೊಳ್ಳತಕ್ಕದ್ದಲ್ಲ. ಅದರಲ್ಲಿಯೂ ಯಜ್ಞಯಾಗ, ಅಥವಾ ಬೇರೆ ಶುಭ ಕಾರ್ಯಗಳಲ್ಲಿ ಅವರನ್ನು ನೋಡತಕ್ಕದ್ದಲ್ಲ. ಅವರು ಕಣ್ಣಿಗೆ ಬಿದ್ದರೆ ಮಹಾ ಪಾಪವು ಬರುವುದಲ್ಲದೇ ಕೈಕೊಂಡ ಕಾರ್ಯವೂ ಕೆಟ್ಟುಹೋಗುತ್ತದೆ. ಆದುದರಿಂದ ನಾಸ್ತಿಕನನ್ನು ನೋಡಿದರೆ ಸೂರ್ಯನನ್ನು ನೋಡಬೇಕು.ಇದರಂತೆ ಗುಪ್ತಪಾಪ ಮಾಡುವ, ದೇವ ವೇದ ನಿಂದಕರಾದ, ನಾಸ್ತಿಕರ ಜೊತೆಗೆ ಮಾತನ್ನೂ ಕೂಡ ಆಡಬಾರದು. ಇವರಿಗೆ ನಗ್ನರೆಂದು ಹೆಸರು. ವಿನಾಕಾರಣ ಜಡೆ ಬೆಳಿಸಿ, ಅಥವಾ ತಲೆ ಬೋಳಿಸಿ ಮಡಿಮೈಲಿಗೆ ಇಲ್ಲದೆ, ಸ್ವಧರ್ಮ ವಿಹಿತ ಕರ್ಮಗಳನ್ನು ತ್ಯಜಿಸಿದ, ದೇವದ್ರೋಹಿಗಳ, ಧರ್ಮದ್ವೇಷಿಗಳ, ವೇದನಿಂದಕರ, ಪಾಖಂಡಿಗಳ ಜೊತೆಗೆ ಯಾವುದೇ ಬಗೆಯ ಸಂಬಂಧ ಮಾಡಿದರೂ ನರಕವಾಗುವುದು ನಿಶ್ಚಯ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಮೂರನೇ ಅಂಶ ಸಂಪೂರ್ಣ*



ಅಧ್ಯಾಯ - ೧

## ನಾಲ್ಕನೆಯ ಅಂಶ

**ಮೈತ್ರೇಯ** - ಪೂಜ್ಯರೇ, ಸದಾಚಾರ ಸಂಪನ್ನರಾದ ಜನರು ಅವಶ್ಯವಾಗಿ ಅನುಷ್ಠಾನ ಮಾಡಬೇಕಾದ ನಿತ್ಯ ನೈಮಿತ್ತಕ ಕ್ರಿಯಾಕಲಾಪಗಳನ್ನು ತಾವು ಈವರೆಗೆ ನಿರೂಪಿಸಿದಿರಿ. ಮತ್ತು ವರ್ಣಧರ್ಮ ಆಶ್ರಮಧರ್ಮಗಳ ಬಗೆಗೂ ತಾವು ತಿಳಿ ಹೇಳಿದಿರಿ. ಆದರೀಗ ನಮಗೆ ತಮ್ಮ ಮುಖದಿಂದ ಹಿಂದಿನ ರಾಜಮಹಾರಾಜರ ವಂಶ ಚರಿತ್ರವನ್ನು ಕೇಳಬೇಕೆಂದು ಅಪೇಕ್ಷೆ ಆಗಿದೆ. ಗುರುಗಳಾದ ತಾವು ನನಗೆ ಅದನ್ನು ಅರುಹಬೇಕು.

**ಪರಾಶರ** - ಮೈತ್ರೇಯ, ಬ್ರಹ್ಮದೇವರಿಂದ ನಿರ್ಮಿತವಾದ ಈ ಮಾನವ ವಂಶದಲ್ಲಿ ಅನೇಕ ಅರಸರು ಆಗಿ ಹೋಗಿದ್ದಾರೆ. ಅವರಲ್ಲಿ ಶೂರರೆಷ್ಟೋ! ವೀರರೆಷ್ಟೋ! ಕೆಲವರು ಯಾಗ ಯೋಗಿಗಳಾದರೆ ಹಲವರು ರಣರಂಗ ಧೀರರು. ಕೆಲವರು ಧೈರ್ಯಮೇರುಗಳು. ಇಂಥ ಪುಣ್ಯಪುರುಷರ ಕುಲದ ಕತೆ ಕೇಳುವುದರಿಂದಲೇ ನರರ ಪಾಪ ಕಳೆದು ಹೋಗುವುದು. ಇಂಥ ಸದ್ವಂಶಗಳ ಚರಿತ್ರ ಶ್ರವಣದಿಂದ ಪಾಪಿಗಳ ಪಾಪಧ್ವಂಸವಾಗುವುದು.

**ಮೈತ್ರೇಯ** - ಈ ಸಮಸ್ತ ಪ್ರಪಂಚಕ್ಕೆ ಆದಿಯಾದ ಶ್ರೀ ಹರಿಯ ಸ್ವಯಂ ಅನಾದಿ. ಋಗಾದಿ, ಸರ್ವವೇದಗಳಿಂದ ಮುಖ್ಯವಾಗಿ ಪ್ರತಿಪಾದಿತನಾದ ಆ ಭಗವಂತನೇ ಎಲ್ಲ ಲೋಕಗಳಿಗೂ ಆದಿಭೂತನಾಗಿದ್ದಾನೆ. ಅವನಿಂದ ಮೊದಲು ಜನಿಸಿದವ ಬ್ರಹ್ಮ. ಆ ಬ್ರಹ್ಮದೇವರ ಬಲಗೈಯ ಹೆಬ್ಬೆರಳಿನಿಂದ ದಕ್ಷಪ್ರಜಾಪತಿಯು ಉದಿಸಿದ. ದಕ್ಷ ಕುಮಾರಿಯಾದ ಆದಿತಿದೇವಿಯು ಮಹರ್ಷಿ ಕಶ್ಯಪರ ಕೈ ಹಿಡಿದು ಸೂರ್ಯನಿಗೆ ಜನ್ಮವಿತ್ತಳು. ಸೂರ್ಯನಿಂದ ಮನು. ಆ ಮನು ಮಹಾರಾಜನಿಗೆ ಹತ್ತು ಜನ ಮಕ್ಕಳು. ಇಕ್ಷ್ವಾಕು, ನೃಗ, ಧೃಷ್ಟ, ಶರ್ಯಾತಿ, ನರಿಷ್ಯಂತ,ಪ್ರಾಂಶು, ನಾಭಾಗ, ನೇದಿಷ್ಟ, ಕರೂಷ, ಪೃಷದ್ರ ಎಂದು ಆ ಹತ್ತು ಮನುಪುತ್ರರ ಹೆಸರು.

### ಪುರಾಣ ಕಾಲದಲ್ಲಿಯ ಒಂದು ಲಿಂಗಪಲ್ಲಟದ ಪ್ರಕರಣ

ಈ ದಶಕುಮಾರರು ಜನಿಸುವುದಕ್ಕಿಂತ ಮೊದಲು ಮನುಮಹಾರಾಜನು ಸಂತಾನದ ಅಪೇಕ್ಷೆಯಿಂದ ಮಿತ್ರಾವರುಣ ಎಂಬ ಜೋಡು ದೇವತೆಗಳನ್ನು ಉದ್ದೇಶಿಸಿ ಯಜ್ಞಗೈದಿದ್ದ. ಆ ಯಜ್ಞದಲ್ಲಿಆಹುತಿಯನ್ನು ಕೊಡುತ್ತ ಕುಳಿತ ಹೋತೃವಿನ ತಪ್ಪಿನಿಂದಾಗಿ ಹುಟ್ಟುವ ಮಗು ಗಂಡಾಗದೆ ಹೆಣ್ಣಾಗಿ ಜನಿಸಿಬಿಟ್ಟಿತು. ಅವಳ ಹೆಸರು ಇಳೆ. ಆದರೆ ಇದನ್ನು ತಿಳಿದ ಮನು ಮಹಾರಾಜನಿಗೆ ಬಹಳ ಕೆಡುಕೆನಿಸಿತು. ಅವನು ಮತ್ತೆ ಮಿತ್ರಾವರುಣರಿಗೆ ಶರಣು ಹೋದ. ''ತನಗೆ ಗಂಡು ಮಗು ಬೇಕು. ಪುತ್ರನ ಬಯಕೆಯಿಂದಲೇ ತಾನೀ ಯಜ್ಞವನ್ನು ಕೈಕೊಂಡಿದ್ದು. ಆದುದರಿಂದ ಯಜ್ಞ ಫಲವಾದ ಈ ಇಳೆ ಎಂಬ ಕನ್ನೆಯು ಇನ್ನು ಮೇಲಾದರೂ ಗಂಡು ಮಗುವಾಗುವಂತೆ ಆಶೀರ್ವದಿಸಬೇಕು'' ಎಂದು ಬೇಡಿಕೊಂಡ. ಮಿತ್ರಾವರುಣ ಕರುಣೆ ಕೋಡಿಯೊಡೆಯಿತು. ಮನುವಿನ ಬಿನ್ನಹಕ್ಕೆ ತಥಾಸ್ತು ಎಂದಿತು ಅವರ ಕರುಣೆದುಂಬಿದ ಅಂತಃಕರಣ. ದೇವತಾನುಗ್ರಹಕ್ಕೆ ಯಾವುದು ತಾನೇ ಅಸಾಧ್ಯ ! ಅರೆಕ್ಷಣದಲ್ಲಿ 'ಇಳೆ' ಯಾಗಿದ್ದವಳು

"ಸುದ್ಯುಮ್ನ" ಆದ, ಮಹಾರಾಜನ ಸಂತಸಕ್ಕೆ ಪಾರವಿಲ್ಲ. ಆದರೆ ಪ್ರಾರಬ್ಧವನ್ನು ಯಾರು ತಪ್ಪಿಸಬಲ್ಲರು ಮನುಮಹಾರಾಜನ ಆ ಮಗು ಹೆಣ್ತನವನ್ನೇ ಬೇಡಿ ಬಂದಿತ್ತೋ ಏನೋ! ಮಿತ್ರಾವರುಣರ ಪ್ರಸಾದದಿಂದ ಹೆಣ್ಣಿದ್ದವಳು ಹೇಗೋ ಗಂಡಾಗಿ ಸುದ್ಯುಮ್ನ ಎಂದಾದ ಬಳಿಕವೂ ಅವನಿಗೆ ತನ್ನ ಗಂಡಸುತನವನ್ನು ಬಹು ದಿನ ಉಳಿಸಿಗೊಳ್ಳಲಿಕ್ಕೆ ಆಗಲಿಲ್ಲ.

## "ಊರು ಬಿಟ್ಟು ಪರ ಊರಿಗೆ ಹೋದರೆ ಪ್ರಾರಬ್ಧವು ಬೇರಾದೀತೇ !"

ಪುರುಷ ಭಾವವನ್ನು ಹೊಂದಿದ ಇಳೆ ಸುದ್ಯುಮ್ನನಾಗಿ ಗಂಡಸರಂತೆ ಒಂದು ಸಲ ಬೇಟೆಯಾಡಲಿಕ್ಕೆ ಕಾಡಿಗೆ ನಡೆದ. ಆ ರಾಜಕುಮಾರನ ಜೊತೆಗೆ ಅನೇಕ ಮಿತ್ರರೂ ಮಂತ್ರಿಗಳೂ ಬೇಟೆಗಾಗಿ ತೆರಳಿದ್ದರು. ಸಿಂಧು ದೇಶದ ಎತ್ತರವಾದ ಕುದುರೆ ಹತ್ತಿ ಉತ್ತರ ದಿಕ್ಕಿನ ಶೈಲಶ್ರೇಣಿಗಳಲ್ಲಿ ಕಾಡುಮಿಕಗಳನ್ನು ಬಿಲ್ಲು ಬಾಣಗಳಿಂದ ಕೊಲ್ಲುತ್ತ ನಡೆದ ಸುದ್ಯುಮ್ನನು ಮೇರು ಪರ್ವತದ ಒಂದು ವಿಲಾಸೋಪವನದಲ್ಲಿ ಪ್ರವೇಶಮಾಡಿದ.

ಕಗ್ಗಾಡಿನ ಕೊಂಪೆಯೊಂದರಲ್ಲಿ ಅರಳಿ ಕಂಪಿಂಪುಗಳಿಂದ ತಂಪಿಂಡಿದ ಆ ಉಪವನವು ಶಿವಪಾರ್ವತಿಯರ ಕ್ರೀಡಾವಿಲಾಸದ ಕ್ಷೇತ್ರವಾಗಿದ್ದಿತು. ಹಿಂದೊಮ್ಮೆ ಪಾರ್ವತೀ ಪರಮೇಶ್ವರರು ಪ್ರಣಯಕೇಳಿಯಲ್ಲಿದ್ದಾಗಲೇ ಕೆಲವು ಋಷಿಗಳು ಅಲ್ಲಿಗೆ ಒಮ್ಮೆಲೆ ಬಂದು ಬಿಟ್ಟರು. ಆಗ ದಾಕ್ಷಾಯಣಿಯ ಲಜ್ಜೆಯ ಒಜ್ಜೆಯಿಂದ ಕುಸಿದು ಹೋದಳು. ತಮ್ಮ ಪ್ರೇಮ ಸಮಾಧಿಗೆ ವಿಘ್ನವಾಗಿ ರಸಭಂಗವಾದಂತಾದ ಪರಶಿವ ಅಂದೇ ಶಾಪವಿತ್ತ "ಇನ್ನು ನನ್ನ ಈ ಪ್ರೇಮಾಯತನದಲ್ಲಿ ಯಾವುದಾದರೂ ಗಂಡು ಪಿಳ್ಳೆ ಪ್ರವೇಶಿಸಿದರೆ ಅದು ಕೂಡಲೆ ಹೆಣ್ಣಾಗಿ ಬಿಡಲಿ" ಎಂದು. ಇದಾವುದನ್ನೂ ಅರಿಯದ ರಾಜಕುಮಾರ ಸುದ್ಯುಮ್ನ ಬೇಟೆಯ ಹುಚ್ಚಿನಲ್ಲಿ ತೀವ್ರಗಾಮಿಯಾದ ತನ್ನ ತೇಜಿಯನ್ನು ಏರಿಕೊಂಡು ನರನಾರಾಯಣಾಶ್ರಮದ ಬಳಿಯಿರುವ ಆ ಶಾಪಗ್ರಸ್ತ ಉಪವನದಲ್ಲಿ ಹೊಕ್ಕುಬಿಟ್ಟ.

## "ಧಾತಾ ಯಥಾ ಪೂರ್ವಮಕಲ್ಪಯತ್"

ಮೊದಲೇ ಹೆಂಗಸು.ನಡುವೆ ಕೆಲದಿನ ಮಿತ್ರಾವರುಣರ ಪ್ರಸಾದ ವಿಶೇಷದಿಂದ ಆಗಂತುಕವಾಗಿ ಅವಳಿಗೆ ಗಂಡಸುತನ ಬಂದಿತ್ತು. ರಾಜಕುಮಾರನಾದುದರಿಂದ ಒಳ್ಳೇ ರಾಜಠೀವಿಯಿಂದ ಅವನು ತನ್ನ ಪೌರುಷದಿಂದ ಮೆರೆದ. ಈಗ ಸತೀಶಂಕರರ ವಿಹಾರ ವನದಲ್ಲಿ ಪ್ರವೇಶಿಸಿ ಆ ಸುದ್ಯುಮ್ನ ಮರಳಿ ಮತ್ತೆ ಹೆಂಗಸಾದ. ಜಾತ್ಯಾ ಹೆಣ್ಣಾದ ಅವನು ಈಗ ಶಿವನ ಶಾಪದಿಂದ ಲಬ್ಧವಾದ ನಾರೀ ಭಾವಕ್ಕೆ ಅಂದವಾಗಿ ಹೊಂದಿಕೊಂಡು ಬಿಟ್ಟ. ಸ್ತ್ರೀ ಸಹಜವಾದ ಲಜ್ಜೆ ಲಾವಣ್ಯ, ವನಪುವೈಯ್ಯಾರಗಳು ತಾವಾಗಿಯೇ ಆ ನವ ನಾರಿಯಲ್ಲಿ ಮೈದೋರಿದವು. ಚಂದ್ರನ ಮಗನಾದ ಬುಧನು ತಂದೆಯಂತೆ ಸುಂದರ. ಬೃಹಸ್ಪತಿಯಂತೆ ಬುದ್ಧಿವಂತ. ನವ ವಧುವಾದ ಇಳೆಯು ಬುಧನ ಆಶ್ರಮದ ಬಳಿಯಲ್ಲಿ ಸುಳಿದಾಡುತ್ತಿರುವಾಗ ಅವರೀರ್ವರ ದೃಷ್ಟಿ ಮಿಲನವಾಯಿತು. ಇಳೆಯ ಚೆಲುವು ಬುಧನ ಚಿತ್ತವನ್ನು ಸೂರೆಗೊಂಡಿತು. ರಾಗರಸಿಕರಾದ ಅವರೀರ್ವರೂ ಪ್ರೇಮದಿಂದ ಕೂಡಿದರು ಆಗ ಪುರೂರವನ ಉತ್ಪತ್ತಿ ಆಯಿತು.

## "ವಾಚಮರ್ಥೋಽನುಧಾವತಿ"

ಇದನ್ನು ತಿಳಿದ ಮನು ಮಹಾರಾಜನಿಗೆ ವ್ಯಥೆ ಆಯಿತು. ಅವನು ಋಷಿಗಳನ್ನು ಪ್ರಾರ್ಥಿಸಿದ "ನನ್ನ ಮಗ ಮತ್ತೆ ಮರಳಿ ಗಂಡು ಆಗಲಿ" ಎಂದು. ಪ್ರಭಾವ ಶಾಲಿಗಳಾದ ಆ

ಋಷಿಗಳೆಲ್ಲರೂ ಸರ್ವ ವೇದಮಯನಾದ ಶ್ರೀ ಹರಿಯನ್ನು ಯಜ್ಞಗಳಿಂದ ಆರಾಧಿಸಿದರು. ಸಂತುಷ್ಟನಾದ ಆ ಯಜ್ಞಪುರುಷನು ಆ ಇಳೆಗೆ ಮತ್ತೆ ಪುರುಷಭಾವವನ್ನು ಕರುಣಿಸಿದನು. ಹೆಣ್ಣಾಗಿ ಬುಧನಿಂದ ಪುರೂರವ ಎಂಬ ಪುತ್ರನನ್ನು ಹೆತ್ತ ಆ ಇಳೆಯು ಮತ್ತೆ ಈಗ ದೇವತಾ ಅನುಗ್ರಹದಿಂದ ಸುದ್ಯುಮ್ನನಾಗಿ ಪೌರುಷ ಪ್ರತಿಷ್ಠೆಯನ್ನು ಪಡೆದಳು. ಗಂಡಾಗಿ ಮೆರೆಯುವ ಆ ಪ್ರಚಂಡ ರಾಜಕುಮಾರ ಸುದ್ಯುಮ್ನ ಓರ್ವ ಯೋಗ್ಯ ಕನ್ನೆಯ ಕೈ ಹಿಡಿದು ಉತ್ಕಲ, ಗಯ ವಿನತ, ಎಂಬ ಮೂವರು ಮಕ್ಕಳನ್ನು ಪಡೆದನು.

ಸುದ್ಯಮ್ನನು ಮೊದಲು ಹೆಂಗಸಾದದ್ದರಿಂದ ಅವನಿಗೆ ತಂದೆಯ ರಾಜ್ಯದಲ್ಲಿ ಪಾಲು ಸಿಕ್ಕಿರಲಿಲ್ಲ. ಈಗ ಅವನು ಮತ್ತೆ ಗಂಡಸಾಗಿ ಬರುವಷ್ಟರಲ್ಲಿ ಮನು ಮಹಾರಾಜನ ಉಳಿದ ಹತ್ತು ಜನ ಮಕ್ಕಳು ತಂದೆಯ ಸಾಮ್ರಾಜ್ಯವನ್ನೆಲ್ಲ ತಾವೇ ಹಂಚಿಕೊಂಡಿದ್ದರು. ಮಹರ್ಷಿ ವಸಿಷ್ಠರು ಸುದ್ಯುಮ್ನನಿಗೂ ಒಂದು ಪಾಲನ್ನು ಕೊಡಲಿಕ್ಕೆ ಹೇಳಿದರು. ಅವರ ಅಪ್ಪಣೆಯಂತೆ ಮನುರಾಜ ಸುದ್ಯುಮ್ನನಿಗೆ ಪ್ರತಿಷ್ಠಾನ ನಗರವನ್ನು ಇತ್ತ. ಸುದ್ಯುಮ್ನನಿಗೋ ತಾನು ಗಂಡಸಾದಾಗ ಹುಟ್ಟಿದ ಉತ್ಕಲ, ಗಯ ವಿನತರಿಗಿಂತ ತಾನು ಹೆಣ್ಣಾದಾಗ ಹುಟ್ಟಿದ ಪುರೂರವನ ಮೇಲೆ ವಿಶೇಷ ಮಮತೆ.ಆದುದರಿಂದ ಅವನು ತನಗೆ ತಂದೆ ಕೊಟ್ಟ ಪ್ರತಿಷ್ಠಾನಪುರವನ್ನು ತನ್ನ ಅಂಗನಾವಸ್ಥೆಯ ಆತ್ಮಜನಾದ ಪುರೂರವನಿಗೇ ಕೊಟ್ಟುಬಿಟ್ಟ. ಈ ಪುರೂರವನ ಪೀಳಿಗೆಯಲ್ಲಿ ಅಸಂಖ್ಯ ಕ್ಷತ್ರಿಯರು ಜನಿಸಿ ದಿಗ್ದೇಶಗಳಲ್ಲಿ ಹರಡಿ ಹಬ್ಬಿದರು.

## ಪೃಷಧ್ರನ ಜೀವನದ ಶೋಕಾಂತಿಕೆ

ಮನುವಿನ ಕೊನೆಯ ಮಗನಾದ ಪೃಷದ್ರ ಬಾಲ್ಯದಿಂದಲೇ ವಿರಕ್ತ. ಅವನು ತನ್ನ ಪಾಲಿನ ರಾಜ್ಯಕೋಶಗಳನ್ನೆಲ್ಲ ಸೋದರರಿಗೆ ಬಿಟ್ಟು ಕೊಟ್ಟು ಬ್ರಹ್ಮ ವಿದ್ಯೆಯನ್ನು ಪಡೆಯುವ ಹಂಬಲದಿಂದ ಗುರುಕುಲಕ್ಕೆ ನಡೆದ. ಅಲ್ಲಿ ಒಂದು ರಾತ್ರಿ ಹುಲಿಯೊಂದು ಆಶ್ರಮದ ಕೊಟ್ಟಿಗೆಯಿಂದ ಹಸುವಿನ ಕರುವನ್ನು ಕಚ್ಚಿಕೊಂಡು ಹೊರಟಿತು. ತಾಯಿ ಹಸುವಿನ ಕರುಣೆಯ ಕಿಂಕಾಳಿಯನ್ನು ಕೇಳಿ ಪೃಷಧ್ರ ಖಡ್ಗ ಹಿರಿದು ಹುಲಿಯನ್ನು ಬೆನ್ನಟ್ಟಿದ. ಕಗ್ಗತ್ತಲೆಯ ಆ ಕಾಳರಾತ್ರಿಯಲ್ಲಿ ಹುಲಿಯ ಹಿಂದೆ ಹಾರುಗಾಲಿನಿಂದ ಓಡುತ್ತ ನಡೆದ ಪೃಷಧ್ರ ಕೊನೆಗೆ ಕೈಯಲ್ಲಿಯ ಖಡ್ಗವನ್ನು ಅದಕ್ಕೆ ಬೀಸಿ ಒಗೆದ. ದುರ್ದೈವದಿಂದ ಆ ಖಡ್ಗವು ಹುಲಿಯ ಬದಲಾಗಿ ಕರುವಿಗೆ ತಾಗಿ ಅದು ತುಂಡಾಗಿ ಬಿದ್ದಿತು. ರಾಜಕುಮಾರನ ಕೈಯಿಂದಾದ ಈ ಗೋಹತ್ಯೆಯನ್ನು ಕಂಡು ಕುಪಿತರಾದ ಗುರುಗಳು ಅವನಿಗೆ ಶೂದ್ರನಾಗು ಎಂದು ಶಾಪವಿತ್ತರು. ಪಶ್ಚಾತ್ತಾಪ ದಗ್ಧನಾದ ಪೃಷಧ್ರ ಅಲ್ಲಿಂದ ಹೊರಟು ದಾರಿಯಲ್ಲಿ ಉರಿಯುತ್ತಿರುವ ಕಾಡ್ಗಿಚ್ಚಿನಲ್ಲಿ ಅಗ್ನಿನಾರಾಯಣನಿಗೆ ಆತ್ಮಾಹುತಿ ನೀಡಿ ಜನ್ಮ ನೀಗಿದ. ಮನುವಿನ ಮತ್ತೊಬ್ಬ ಮಗ ಕರೂಷ. ಅವನಿಂದ ಕಾರೂಷ ಎಂಬ ಅತ್ಯಂತ ಶೂರರಾದ ಕ್ಷತ್ರಿಯರ ಬಳಗವು ಬೆಳೆಯಿತು. ಧೃಷ್ಟ ಎಂಬ ಮಗದೊಬ್ಬ ಮನುಕುಮಾರನ ಸತ್ಪುತ್ರ ನಾಭಾಗ. ಆ ನಾಭಾಗನು ವೈಶ್ಯನಾಗಿ ವ್ಯಾಪಾರ ಉದ್ಯೋಗಗಳನ್ನು ಅಭಿವೃದ್ಧಿ ಗೊಳಿಸಿದ ಅವನಿಗೆ ಬಲಂಧನ ಎಂಬ ಕುಮಾರನು ಜನಿಸಿದ. ಬಲಂಧನನಿಗೆ ವತ್ಸಪ್ರೀತಿ. ವತ್ಸ ಪ್ರೀತಿಯಿಂದ ಆ ಮನೆತನದಲ್ಲಿ ಪ್ರಾಂಶು, ಪ್ರಜಾಪತಿ, ಖನಿತ್ರ, ಚಾಕ್ಷುಷ, ವಿಂಶ, ವಿವಿಂಶಕ, ಖನಿನೇತ್ರ, ಅತಿವಿಭೂತಿ, ಕರಂಧಮ, ಆವಿಕ್ಷಿತ, ಕೊನೆಯವನಾಗಿ ಮರುತ್ತ ಎಂಬ ರಾಜ ಮಹಾರಾಜರು ಆಗಿ ಹೋದರು.

**"ಮರುತಃ ಪರಿವೇಷ್ಟಾರೋ ಮರುತ್ತಸ್ಯಾವಸನ್ ಗೃಹೇ"**

ಮರುತ್ತ ಮಹಾರಾಜನು ದಾನ ಧರ್ಮಗಳಿಗೆ ಪುರಾಣ ಪ್ರಪಂಚದಲ್ಲಿಯೇ ಪ್ರಸಿದ್ಧನಾಗಿದ್ದಾನೆ. ಅವನು ಧೈರ್ಯಮೇರು. ವೀರವರೇಣ್ಯ. ವೇದ ಮಂತ್ರಗಳಲ್ಲಿ ಕೂಡ ಮರುತ್ತ ಮಹಾರಾಜನ ವೈಭವದ ವರ್ಣನೆ ಬರುತ್ತದೆ. ಆ ಕಾಲದಲ್ಲಿ ಎಲ್ಲರ ಬಾಯಲ್ಲಿಯೂ ಮರುತ್ತನದೇ ಬಣ್ಣನೆ.

**"ಮರುತ್ತಸ್ಯ ಯಥಾ ಯಜ್ಞ ಸ್ತಥಾ ಕಸ್ಯಾಬವದ್ಭುವಿ ।**
**ಸರ್ವಂ ಹಿರಣ್ಮಯಂ ಹ್ಯಸ್ಯ ಯಜ್ಞವಸ್ತ್ವತಿ ಶೋಭನಂ ॥**
**ಅಮಾದ್ಯದಿಂದ್ರಃ ಸೋಮೇನ ದಕ್ಷಿಣಾಭಿರ್ದ್ವಿಜಾತಯಃ ।**
**ಮರುತಃ ಪರಿ ವೇಷ್ಟಾರಃ ಸದಸ್ಯಾಶ್ಚ ದಿವೌಕಸಃ ॥**

"ಮರುತ್ತನಂತೆ ಹಿಂದೆ ಯಾರೂ ಯಜ್ಞ ಮಾಡಲಿಲ್ಲ. ಆ ಯಜ್ಞ ಕಾಲದಲ್ಲಿ ಅವನು ಬಳಸಿದ್ದೆಲ್ಲ ಬಂಗಾರ. ಕೊಟ್ಟದ್ದೆಲ್ಲ ಹೊನ್ನ ರನ್ನ. ಮಾಡಿದ್ದೆಲ್ಲವೂ ಸುಂದರ. ಇಂದ್ರಾದಿದೇವತೆಗಳು ಅವನ ಯಜ್ಞದ ಆಹುತಿಗಳಿಂದ ತೃಪ್ತರಾದರೆ ಭೂರಿದಾನ ದಕ್ಷಿಣೆಗಳಿಂದ ಬ್ರಾಹ್ಮಣರು ಸಂತಸದುಂಬಿದ್ದರು.ಆ ಮಹಾರಾಜನು ಮಾಡುವ ಅತ್ಯದ್ಭುತವಾದ ಪ್ರಚಂಡ ಅನ್ನದಾನವನ್ನು ಕಂಡು ಸ್ವಯಂ ದೇವತೆಗಳೇ ಟೊಂಕ ಕಟ್ಟಿ ಎಲೆ ಬಡಿಸಿದರು. ಅವನು ಸಭೆ ಕರೆದರೆ ಅದರಲ್ಲಿ ಮಾನವರಿಗಿಂತ ದೇವತೆಗಳೇ ಹೆಚ್ಚಾಗಿ ಸಭಿಕರಾಗಿ ನೆರೆಯುತ್ತಿದ್ದರು."

ಇದು ಮರುತ್ತ ಮಹಾರಾಜನ ಮಹಿಮೆ. ಆ ಮರುತ್ತ ಚಕ್ರವರ್ತಿಗೆ ನರಿಷ್ಯಂತ ಎಂಬ ಒಬ್ಬ ಮಗನಾದ. ಅವನಿಂದ ಮುಂದೆ ಆ ವಂಶದಲ್ಲಿ ಧರ್ಮ, ರಾಜವರ್ಧನ, ಸುಬುದ್ಧಿ, ಕೇವಲ, ಸುಧೃತಿ, ನರ, ಚಂದ್ರ, ಬಂಧುಮಾನ್, ವೇಗವಾನ್, ಬುಧ, ತೃಣಬಿಂದು, ಮುಂತಾದ ಕ್ಷತ್ರಿಯ ರಾಜರು ಒಬ್ಬರಾದ ಮೇಲೆ ಒಬ್ಬರು ಜನಿಸಿದರು. ತೃಣಬಿಂದುವಿಗೆ ಇಲವಿಲಾ ಎಂಬ ಕನ್ಯೆಯು ಇದ್ದಳು. ತೃಣಬಿಂದು ಒಳ್ಳೇ ಸ್ಫುರದ್ರೂಪಿಯಾದ ರಾಜಕುಮಾರ. ಅವನ ರೂಪಗುಣಗಳಿಗೆ ಮಾರು ಹೋಗಿ ಅಲಂಬುಸಾ ಎಂಬ ಅಪ್ಸರೆಯು ಅವನನ್ನು ಒರಿಸಿದಳು. ಮೆಚ್ಚಿ ಮಡದಿಯಾದ ಅಲಂಬುಸೆಯಿಂದ ತೃಣಬಿಂದುವಿಗೆ ವಿಶಾಲ ಎಂಬ ಪುತ್ರನು ಹುಟ್ಟಿದ. ಅವನೇ ಮುಂದೆ ವಿಶಾಲಾ ರಾಜಧಾನಿಯನ್ನು ನಿರ್ಮಿಸಿದ. ಹೇಮಚಂದ್ರ ಆ ವಿಶಾಲನ ಮಗ. ಹೇಮಚಂದ್ರನಿಂದ ಚಂದ್ರ, ಧೂಮ್ರಾಕ್ಷ, ಸೃಂಜಯ, ಸಹದೇವ, ಕೃಶಾಶ್ವ, ಸೋಮದತ್ತ ಮುಂತಾಗಿ ರಾಜರು ಆಗಿ ಹೋದರು. ಸೋಮದತ್ತ ಮಹಾರಾಜನು ಮಾಡಿದ ಅಶ್ವಮೇಧಯಾಗಗಳು ಒಂದು ನೂರು. ಅವನ ಮಗ ಜನಮೇಜಯ, ಜನಮೇಜಯನಿಗೆ ಸುಮತಿ ಎಂಬ ಸತ್ಪುತ್ರನು ಹುಟ್ಟಿದ. ಆ ವಿಶಾಲನ ವಂಶದಲ್ಲಿ ಉದಿಸಿದ ರಾಜರಿಗೆಲ್ಲ ವೈಶಾಲಿಕರು ಎಂದು ಕರೆಯುತ್ತಾರೆ. ಅವರ ಬಗ್ಗೆ ಲೋಕದಲ್ಲಿ ಒಂದು ನಾಣ್ಣುಡಿ ಪ್ರಸಿದ್ಧವಾಗಿದೆ.

**"ತೃಣಬಿಂದೋಃ ಪ್ರಸಾದೇನ ಸರ್ವೇ ವೈಶಾಲಿಕಾ ನೃಪಾಃ ।**
**ದೀರ್ಘಾಯುಷೋ ಮಹಾತ್ಮಾನೋ ವೀರ್ಯವಂತೋಽತಿಧಾರ್ಮಿಕಾ ॥**

ತೃಣಬಿಂದು ಮಹಾರಾಜನ ಪುಣ್ಯದಿಂದ ವಿಶಾಲ ವಂಶದಲ್ಲಿ ಉತ್ಪನ್ನರಾದ ರಾಜರೆಲ್ಲರೂ ದೀರ್ಘಾಯುಷಿಗಳೂ ಧಾರ್ಮಿಕರೂ ಶೂರಧೀರರೂ ಮಹಾತ್ಮರೂ ಆಗಿರುತ್ತಾರೆ. ಮನುವಿನ ಮತ್ತೊಬ್ಬ ಮಗನಾದ ಶರ್ಯಾತಿಗೆ ಸುಕನ್ಯಾ ಎಂಬ ಕನ್ಯಾಮಣಿ ಇದ್ದಳು. ಅವಳು ಚ್ಯವನ ಋಷಿಯನ್ನು ಮದುವೆಯಾದಳು. ಶರ್ಯಾತಿಯ ಗಂಡು ಮಗನಾದ ಆನರ್ತ ಪರಮಧಾರ್ಮಿಕ. ಆನರ್ತನ ಮಗನೇ ರೇವತ. ಅವನು ಕುಶಸ್ಥಲಿಯಲ್ಲಿದ್ದು ಅನರ್ತ ರಾಜ್ಯವನ್ನು ಆಳಿದ.

## ವರಶೋಧಕ್ಕಾಗಿ ಬ್ರಹ್ಮಲೋಕಕ್ಕೆ ಪ್ರಯಾಣ

ರೇವತನಿಗೆ ಮಕ್ಕಳು ಮೂರು. ಅವರಲ್ಲಿ ಕಕುದ್ಮಿ ಹಿರಿಯ. ರೇವತನ ಮಗಳೇ ರೇವತೀ. ಅವಳಿಗೆ ಎಷ್ಟು ಹುಡುಕಿದರೂ ಯೋಗ್ಯ ವರವೇ ದೊರಕಲಿಲ್ಲ. ವರಾನ್ವೇಷಣೆಯಿಂದ ಬೇಸತ್ತುಹೋದ ರೇವತ ಕೊನೆಗೆ ಅವಳನ್ನು ಕರೆದುಕೊಂಡು ವರಬೇಕೆಂದು ಸತ್ಯಲೋಕಕ್ಕೆ ತೆರಳಿದ ಇವನು ಬ್ರಹ್ಮಲೋಕಕ್ಕೆ ಹೋದಾಗ ಅಲ್ಲಿ ಸಂಗೀತ ಕಛೇರಿ ನಡೆದಿದ್ದಿತು. ಹಾಹಾ, ಹೂಹಾ ಎಂಬ ಗಂಧರ್ವರು ಆ ಚತುರ್ಮುಖನ ಎದುರು ತಮ್ಮ ಮಧುರ ಕಂಠದಿಂದ ಅತಿತಾನ ಎಂಬ ದಿವ್ಯ ಗಾನವನ್ನು ಮಾಡುತ್ತಲಿದ್ದರು. ಅಪೂರ್ವವಾದ ಗಾನಗಿರಡಿಗಳನ್ನು ಹೊರಳಿಸಿ ಅವರು ತಾನವಿತಾನಗಳನ್ನು ಅರಳಿಸುತ್ತ ಹಾಡುತ್ತಿದ್ದರು. ಚಿತ್ರಾ, ದಕ್ಷಿಣಾ, ಮತ್ತು ಧಾತರಿ ಎಂಬ ಸಂಗೀತದ ಮೂರು ವಿಧವಾದ ತಿರವು ಹರವುಗಳಲ್ಲಿ ತಮ್ಮ ಸ್ವರ ಮಂಡಲವನ್ನು ಹರಡಿ, ಹೊರಳಿಸಿ, ಕೊರಳ ದನಿಯಿಂದ ಗಾನಗೋಪುರವನ್ನೇ ಎತ್ತಿ ನಿಲ್ಲಿಸಿದ ಆ ಗಂಧರ್ವರ ಸಂಗೀತ ಸೇವೆಯನ್ನು ಆಲಿಸುತ್ತ ರೇವತನು ಅಲ್ಲಿಯೇ ಕುಳಿತುಕೊಂಡ. ಆ ಸ್ವರ್ಗೀಯ ಸಂಗೀತವನ್ನು ತನ್ಮಯನಾಗಿ ಕೇಳುತ್ತ ನಿಂತುಕೊಂಡ ರೇವತನಿಗೆ ಸಮಯದ ಅರಿವೇ ಇರಲಿಲ್ಲ. ತಾನು ಬಂದ ಕೆಲಸದ ಪರಿವೇ ಉಳಿಯಲಿಲ್ಲ. ಹೊತ್ತು ಹೋದದ್ದು ಕೂಡ ಅವನಿಗೆ ಗೊತ್ತು ಆಗಲಿಲ್ಲ. ಹಾಡು ಮುಗಿದ ಬಳಿಕ ತಾವರೆಯ ಆಸನದಲ್ಲಿ ಮಂಡಿಸಿದ ಶಾರದಾಪತಿಗೆ ಸಾಷ್ಟಾಂಗ ನಮಸ್ಕಾರಗೈದ. ಮತ್ತು ''ನನ್ನ ಮಗಳು ರೇವತಿಗೆ ನೀವು ಯಾವ ವರವನ್ನು ಗೊತ್ತು ಪಡಿಸಿ ಅವಳ ಹಣೆಯಲ್ಲಿ ಬರೆದಿದ್ದೀರಿ'' ಎಂದು ಕೇಳಿದ. ಆಗ ಭಗವಾನ್ ಬ್ರಹ್ಮನು ಅವನಿಗೆ ''ನಿನ್ನ ಮಗಳಿಗೆ ಯಾವ ವರವು ಆಗಬಹುದು ಹೇಳು'' ಎಂದ. ಆಗ ರೇವತನು ಭೂಲೋಕದಲ್ಲಿ ಇರುವ ಯೋಗ್ಯ ವರಗಳ ಯಾದಿ ಒಂದನ್ನು ಬ್ರಹ್ಮದೇವರಿಗೆ ಒಪ್ಪಿಸಿ ''ಭೂಲೋಕದಲ್ಲಿ ಇಷ್ಟು ವರಗಳು ಇರುತ್ತವೆ. ಇವರಲ್ಲಿ ನನ್ನ ಮಗಳಿಗೆ ಯಾವನು ಬ್ರಹ್ಮ ಸಂಕಲ್ಪದಂತೆ ವರನೆಂದು ನಿಶ್ಚಿತನಾಗಿರುವನು? ದಯವಿಟ್ಟು ಅದನ್ನು ತಿಳಿಸಿದರೆ ನಾನು ಭೂಮಂಡಲಕ್ಕೆ ಹೋಗಿ ಆ ವರನಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುತ್ತೇನೆ'' ಎಂದು ಬಿನ್ನವಿಸಿದನು.

ರೇವತನ ಮಾತನ್ನು ಕೇಳಿ ಬ್ರಹ್ಮದೇವರಿಗೆ ನಗೆ ಬಂದಿತು. ಆದರೂ ಅವನ ಮೇಲಿನ ದಯೆಯಿಂದ ಅವರು ರೇವತನೆಡೆಗೆ ಬಾಗಿ ನುಡಿದರು. ''ರೇವತ, ಇಲ್ಲಿ ನೀನು ಹೇಳಿದ ವರಗಳ ಪಟ್ಟಿಯಲ್ಲಿರುವ ಯಾವ ವರವೂ ಈಗ ಭೂಮಂಡಲದಲ್ಲಿ ಬದುಕಿ ಉಳಿದಿಲ್ಲ ಈ ಎಲ್ಲ ವರಗಳು ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಕಿರಿ ಮಕ್ಕಳು ಕೂಡ ಈಗ ಭೂಮಂಡಲದಲ್ಲಿ ಹೇಳ ಹೆಸರಿಲ್ಲದಂತಾಗಿದ್ದಾರೆ. ನೀನು ಈ ಬ್ರಹ್ಮಲೋಕಕ್ಕೆ ಬಂದು

ಬಹು ಸಮಯವಾಯಿತು. ಇಲ್ಲಿಯ ಸಂಗೀತ ಸಮಾಧಿಯಲ್ಲಿ ಕುಳಿತ ನಿನಗೆ ಕಾಲದ ಅರಿವು ಇರಲಿಲ್ಲ. ಮೇಲಾಗಿ ಅಲ್ಲಿಯ ಒಂದು ಮೂಹೂರ್ತವೆಂದರೆ ಭೂಲೋಕದಲ್ಲಿಯ ಮಾನವ ಮಾನದ ಚತುರ್ಯುಗಗಳೇ ತಿರುಗಿ ಹೋಗಿರುತ್ತವೆ. ಈಗ ಭೂಮಂಡಲದಲ್ಲಿ ಇಪ್ಪತೆಂಟನೇ ದ್ವಾಪರ ಯುಗವು ಕೂಡ ಮುಗಿಯಲು ಬಂದಿದೆ. ಕಲಿಕಾಲವು ಸನ್ನಿಹಿತವಾಗಿದೆ. ನಿನ್ನ ಪರಿವಾರದವರಲ್ಲಿ ಉಳಿದವನು ನೀನೊಬ್ಬನೇ. ಮತ್ತು ನಿನ್ನ ಜೊತೆಗೆ ಬಂದ ಈ ನಿನ್ನ ಮಗಳಾದ ರೇವತಿ. ಆದುದರಿಂದ ಇವಳನ್ನು ನಿನಗೆ ಸಮ್ಮತನಾದ ಈ ಯುಗದ ಒಬ್ಬ ವರನಿಗೆ ಕೊಟ್ಟು ಮದುವೆ ಮಾಡು ನೀನು ನೋಡಿದ ವರಗಳಂತೆ ನಿನ್ನ ಕೈ ಹಿಡಿದ ಮಡದಿ, ಹಡೆದ ಮಕ್ಕಳು, ಪಡೆದ ಭಾಗ್ಯ, ಆಳಿದ ರಾಜ್ಯ, ಮಂತ್ರಿಗಳು, ಸೇವಕರು, ಬಂಧು-ಬಳಗ, ಸೈನ್ಯ-ಸಂಪತ್ತು ಎಲ್ಲವೂ ಕಾಲಗರ್ಭದಲ್ಲಿ ಕಣ್ಮರೆಯಾಗಿಹೋಗಿವೆ.''

ಬ್ರಹ್ಮದೇವರ ಈ ಮಾತನ್ನು ಕೇಳಿ ರೇವತ ಹೌಹಾರಿದ. ಅವನ ಜಂಘಾಬಲವೇ ಉಡುಗಿದಂತಾಯಿತು. ತನ್ನ ಸರ್ವಸ್ವನಾಶದ ಸಮಾಚಾರದಿಂದ ಅವನು ನಡುಗಿ ಹೋದ. ಆದರೆ ಮಾಡುವುದೇನು? ''ಕಾಲಾಯ ತಸ್ಮೈ ನಮಃ'', ಇದ್ದುದರಲ್ಲಿಯೇ ಅವನು ಮತ್ತೆ ಧೈರ್ಯ ತಂದುಕೊಂಡ. ಮತ್ತೆ ಸಾವರಿಸಿ ನಿಂತುಕೊಂಡು ಆ ಕಮಲಾಸನನಿಗೆ ಕೈ ಮುಗಿದು ಕೇಳಿಕೊಂಡ. ''ಭಗವನ್, ನನ್ನ ಅವಸ್ಥೆಯು ಹೀಗಾದ ಬಳಿಕ ನನ್ನ ಈ ಕನ್ಯೆಯನ್ನು ಇನ್ನಾರಿಗೆ ಕೊಡಲಿ?'' ರೇವತನ ಈ ಪ್ರಶ್ನೆಯನ್ನು ಕೇಳಿದ ಕೂಡಲೇ ಜಗದ್‌ಗುರುವಾದ ಆ ಬ್ರಹ್ಮನು ಅರೆಕ್ಷಣ ಆಲೋಚನಗೈದ. ಕೂಡಲೇ ಅವನ ತಲೆ ಬಾಗಿತು, ಕೈ ಮುಗಿಯಿತು, ಕಂಠ ಬಿಗಿಯಿತು. ಮಾತು ಅವನ ಚತುರ್ಮುಖದಿಂದ ಉದಿಸಿ ಬಂದಿತು.

## ಶ್ರೀ ಬ್ರಹ್ಮಾ ಉವಾಚ

ನಹ್ಯಾದಿಮಧ್ಯಾಂತಮಜಸ್ಯ ಯಸ್ಯ ।
ವಿದ್ಮೋ ವಯಂ ಸರ್ವಮಯಸ್ಯ ಧಾತುಃ ॥
ನ ಚ ಸ್ವರೂಪಂ ನ ಪರಂ ಸ್ವಭಾವಂ ।
ನ ಚೈವ ಸಾರಂ ಪರಮೇಶ್ವರಸ್ಯ ॥೧॥

ಸರ್ವತ್ರ ವ್ಯಾಪ್ತನಾದ ಆದಿ ಮಧ್ಯ ಅಂತ ರಹಿತನಾದ ಪರಮೇಶ್ವರನ ಸ್ವರೂಪ, ಸ್ವಭಾವ ಸಾರಗಳನ್ನು ನಾವಾರೂ ತಿಳಿಯಲು ಶಕ್ತರಲ್ಲ.

ಮದ್ರೂಪಮಸ್ಥಾಯ ಸೃಜತ್ಯಜೋ ಯಃ ।
ಸ್ಥಿತೌ ಚ ಯೋಽಸೌ ಪುರುಷಸ್ವರೂಪೀ ॥
ರುದ್ರ ಸ್ವರೂಪೇಣ ಚ ಯೋಽತ್ತಿ ವಿಶ್ವಂ ।
ಧತ್ತೇ ತಥಾನಂತ ವಪುಃ ಸಮಸ್ತಂ ॥೨॥

ಆ ಪರಮೇಶ್ವರನೇ ಬ್ರಹ್ಮರೂಪನಾಗಿ ನನ್ನಲ್ಲಿ ಇದ್ದುಕೊಂಡ ಬ್ರಹ್ಮನಾಮಕನಾಗಿ ಸೃಷ್ಟಿಯನ್ನು ಮಾಡುತ್ತಾನೆ. ರುದ್ರನಾಮಕನಾಗಿ ರುದ್ರನಲ್ಲಿ ನಿಂತು ಸಮಸ್ತ ವಿಶ್ವವನ್ನೆಲ್ಲ ಪ್ರಳಯ ಕಾಲದಲ್ಲಿ ಕಬಳಿಸುತ್ತಾನೆ. ಮತ್ತು ಸ್ಥಿತಿ ಕಾಲದಲ್ಲಿ ವಿಷ್ಣು ರೂಪದಿಂದ ಸಂರಕ್ಷಿಸುತ್ತಾನೆ. ಅನಂತ ರೂಪದಿಂದ ಹದಿನಾಲ್ಕು ಲೋಕಗಳನ್ನೆಲ್ಲ ಧಾರಣ ಮಾಡುತ್ತಾನೆ.

**ಪಾಕಾಯ ಯೋಽಗ್ನಿತ್ವಮುಪೈತಿ ಲೋಕಾನ್ ।**
**ಬಿಭರ್ತಿ ಪೃಥ್ವೀವಪುರವ್ಯಯಾತ್ಮಾ ॥**
**ಶಕ್ರಾದಿರೂಪೀ ಪರಿಪಾತಿ ವಿಶ್ವ -**
**ಮರ್ಕೇಂದು ರೂಪಶ್ಚ ತಮೋ ಹಿನಸ್ತಿ ॥ ೩ ॥**

ಆ ಪರಮೇಶ್ವರನೇ ಪಾಕ ಸಿದ್ಧಿಗಾಗಿ ಅಗ್ನಿನಾಮಕನಾಗಿ ಅಗ್ನಿಯಲ್ಲಿ ಇರುತ್ತಾನೆ. ಮತ್ತು ಪೃಥ್ವೀ ರೂಪದಿಂದ ಎಲ್ಲವನ್ನು ಧಾರಣ ಮಾಡುತ್ತಾನೆ. ಇಂದ್ರಾದಿ ರೂಪದಿಂದ ಪಾಲನ ಗೈಯುತ್ತಾನೆ. ಚಂದ್ರ ಸೂರ್ಯ ರೂಪದಿಂದ ಕತ್ತಲೆಯನ್ನು ಕಳೆಯುತ್ತಾನೆ.

**ಕರೋತಿ ಚೇಷ್ಟಾಃ ಶ್ವಸನ ಸ್ವರೂಪಿ ।**
**ಲೋಕಸ್ಯ ತೃಪ್ತಿಂ ಚ ಜಲಾನ್ನರೂಪೀ ॥**
**ದದಾತಿ ವಿಶ್ವ ಸ್ಥಿತಿ ಸಂಸ್ಥಿತಸ್ತು**
**ಸರ್ವಾವಕಾಶಂ ತು ನಭಃಸ್ವರೂಪೀ ॥ ೪ ॥**

ವಾಯುನಾಮಕನಾಗಿ ವಾಯುವಿನಲ್ಲಿ ಇದ್ದು ಪ್ರಾಣಿಗಳ ಶ್ವಾಸೋಚ್ಛ್ವಾಸಕ್ಕೆ ಕಾರಣನಾಗಿ ಸರ್ವ ವ್ಯಾಪಾರಗಳನ್ನೂ ಮಾಡಿಸುತ್ತಾನೆ. ಅನ್ನ ನೀರಿನ ರೂಪದಿಂದ ಜೀವಿಗಳಿಗೆ ತೃಪ್ತಿಯನ್ನುಂಟು ಮಾಡುತ್ತಾನೆ, ಮತ್ತು ಈ ವಿಶ್ವದ ಇರುವಿಕೆಗೆ ಆಶ್ರಯ ಭೂತನಾಗಿ ಆಕಾಶ ರೂಪದಿಂದ ಎಲ್ಲರಿಗೂ ಅವಕಾಶವನ್ನು ನೀಡುತ್ತಾನೆ.

**ಯಸ್ಮಿನ್ ಜಗದ್ಯೋ ಜಗದೇವತಾದ್ಯೋ ।**
**ಯಸ್ಯಾಶ್ರಿತೋಽಸ್ಮಿನ್ ಜಗತಿ ಸ್ವಯಂಭೂಃ ॥**
**ಸ ಸರ್ವ ಭೂತ ಪ್ರಭವೋ ಧರಿತ್ರ್ಯಾಂ ।**
**ಸ್ವಾಂಶೇನ ವಿಷ್ಣು ರ್ನೃಪತೇಽ ವತೀರ್ಣಃ ॥ ೫ ॥**

ಎಲ್ಲ ವಿಶ್ವವೂ ಆ ಪರಮೇಶ್ವರನನ್ನೇ ಆಧರಿಸಿ ನಿಂತಿದೆ. ಈ ವಿಶ್ವವನ್ನೆಲ್ಲ ಅವನೇ ವ್ಯಾಪಿಸಿದ್ದಾನೆ. ನಾನಾದರೂ ಕೂಡ ಸರ್ವ ಸೃಷ್ಟಿಕರ್ತನಾದುದು ಅವನ ಆಶ್ರಯದಿಂದಲೇ ಅಂಥ ಸರ್ವ ಜಗತ್‌ಕಾರಣನಾದ ಆ ಪರಮಾತ್ಮನು ತನ್ನ ಸಾಕ್ಷಾತ್ ವಿಷ್ಣುರೂಪದಿಂದ ಈ ಭೂಲೋಕದಲ್ಲಿ ಶ್ರೀ ಕೃಷ್ಣನಾಗಿ ಅವತಾರಮಾಡಿದ್ದಾನೆ.

**ಕುಶಸ್ಥಲೀ ಯಾ ತವ ಭೂಪ ರಮ್ಯಾ ।**
**ಪುರೀ ಪುರಾಽ ಭೂದಮರಾವತೀವ ॥**
**ಸಾ ದ್ವಾರಕಾ ಸಂಪ್ರತಿ ತತ್ರ ಚಾಸ್ತೆ ।**
**ಸ ಕೇಶವಾಂಶೋ ಬಲದೇವನಾಮಾ ॥ ೬ ॥**

ರೇವತರಾಜ ಹಿಂದೆ ನಿನ್ನ ರಾಜಧಾನಿಯಾದ ಕುಶಸ್ಥಳಿಯು ಈಗಲೂ ಇದೆ. ಆದರೆ ಈಗ ಅದರ ಹೆಸರು ಮಾತ್ರ ಬದಲಾಗಿ ದ್ವಾರಕಾ ಎಂದಾಗಿದೆ. ಹಿಂದಿನಂತೆ ಈಗಲೂ ಆ ನಗರಿಯು ತನ್ನ ಶೋಭಾಸೌಂದರ್ಯದಿಂದ ಅಮರಾವತಿಯಂತೆ ಕಂಗೊಳಿಸುತ್ತದೆ. ಆ ದ್ವಾರಕೆಯಲ್ಲಿ ಮಹಾವಿಷ್ಣುವಿನ ಅಂಶಭೂತನಾದ ಬಲರಾಮನು ವಿರಾಜಿಸುತ್ತಾನೆ.

**ತಸ್ಮೈ ತ್ವಮೇನಾಂ ತನಯಾಂ ನರೇಂದ್ರ ।**
**ಪ್ರಯಚ್ಛ ಮಾಯಾಮನುಜಾಯ ಜಾಯಾಮ್ ॥**
**ಶ್ಲಾಘ್ಯೋ ವರೋಽಸೌ ತನಯಾ ತವೇಯಂ ।**
**ಸ್ತ್ರೀ ರತ್ನ ಭೂತಾ ಸದೃಶೋ ಹಿ ಯೋಗಃ ॥೭॥**

ಮಹಾರಾಜ, ಮಾಯಾಮಾನವನಾದ ಆ ಬಲದೇವನಿಗೆ ನೀನು ನಿನ್ನ ಈ ಮಗಳಾದ ರೇವತಿಯನ್ನು ಧಾರೆಯೆರೆದು ಕೊಡು. ಆ ವರ ಶ್ಲಾಘ್ಯ, ಈ ಕನ್ಯೆ ಅವನಿಗೆ ಯೋಗ್ಯ. ಸ್ತ್ರೀ ಕುಲಕ್ಕೆ ಈ ರೇವತಿಯು ಒಂದು ರತ್ನ. ಇವರಿಬ್ಬರ ಮಿಲನವು ಅನುರೂಪ ವಾಗಿರುತ್ತದೆ.

ಭಗವಾನ್ ಶ್ರೀ ಬ್ರಹ್ಮದೇವನ ಈ ನುಡಿಯನ್ನು ಕೇಳಿ ರೇವತರಾಜನು ಅಲ್ಲಿಂದ ಹೊರಟು ಭೂಲೋಕಕ್ಕೆ ಬಂದ. ಹಿಂದಿನ ಯುಗದ ಮಾನವನಾದ ಅವನ ಕಣ್ಣಿಗೆ ದ್ವಾಪರಯುಗದ ಜನರೆಲ್ಲರೂ, ಕುಳ್ಳರೂ, ಕುರೂಪಿಗಳೂ ತೇಜೋಹೀನರೂ, ಮತ್ತು ಅಲ್ಪ ಬುದ್ಧಿಯವರೂ, ಬಲಗುಂದಿದವರೂ, ಕಳೆಗೆಟ್ಟವರೂ ಆಗಿ ತೋರಿದರು. ಅವನು ತನ್ನ ನಗರವಾದ ಕುಶಸ್ಥಳಿಗೆ ಬಂದ. ಅದರ ರೂಪವು ಮಾರ್ಪಾಡಾಗಿತ್ತು. ಹೆಸರೂ ಕೂಡ ಬದಲಾಗಿ ದ್ವಾರಕೆಯೆಂದಾಗಿತ್ತು. ಅಲ್ಲಿಗೆ ಬಂದು ಆ ಪೂರ್ವಯುಗದ ಅರಸನು ಬಲದೇವನಿಗೆ ತನ ಮಗಳನ್ನು ಕೊಟ್ಟನು. ಆ ಬಲದೇವನ ಎದೆ ಸ್ಫಟಿಕದ ಬೆಟ್ಟದಂತೆ ಗಟ್ಟಿಯಾಗಿ ಹರವಾಗಿತ್ತು ನೇಗಿಲನ್ನೇ ಆಯುಧವಾಗಿ ಅವನು ಪಿಡಿದು ಕೊಂಡಿದ್ದ. ಭಗವತ್ ಸಂಕಲ್ಪವನ್ನು ತಿಳಿದ ಬಲರಾಮನು ಆ ಪೂರ್ವಯುಗದ ಕನ್ಯೆಯನ್ನು ತನ್ನ ಮಡದಿಯನ್ನಾಗಿ ಸ್ವೀಕರಿಸಿದ. ಆದರೆ ದ್ವಾಪರ ಯುಗದ ಮಾನವರ ಮಾನದಿಂದ ಅವಳು ಅವನಿಗಿಂತ ಬಹಳ ಎತ್ತರವಾಗಿದ್ದಳು. ತನ್ನ ಕೈಯಲ್ಲಿಯ ನೇಗಿಲದ ತುದಿಯಿಂದ ಅವಳನ್ನು ಜಗ್ಗಿ ಬಗ್ಗಿಸಿ ತನ್ನ ನಿಲುವಿಗೆ ಸಮನಾಗುವಂತೆ ಮಾಡಿದ. ಅದರಿಂದ ಅವಳು ಉಳಿದೆಲ್ಲ ದ್ವಾಪರಯುಗದ ನಾರಿಯರಂತೆ ಹವಣಾದ ನಾರಿಯ ನಿಲುವು ಚೆಲುವುಗಳಿಂದ ಶೋಭಿಸ ತೊಡಗಿದಳು. ಬಲರಾಮನು ವಿಧಿಪೂರ್ವಕವಾಗಿ ಅವಳನ್ನು ಮದುವೆ ಆದನು. ರೇವತ ರಾಜನು ಕನ್ಯಾದಾನ ಮಾಡಿಕೊಟ್ಟ. ಹಿಮಾಲಯಕ್ಕೆ ತಪಸ್ಸಿಗಾಗಿ ತೆರಳಿದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನಾಲ್ಕನೇ ಅಂಶದಲ್ಲಿ ಒಂದನೇ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೨

## ಇಕ್ಷ್ವಾಕುವಿನ ವಂಶದ ಬಳ್ಳಿಯು ಬೆಳೆದ ಬಗೆ

**ಪರಾಶರ** - ಮೈತ್ರೇಯ, ಈ ಮೊದಲು ಕುಶಸ್ಥಳಿಯ ದೊರೆಯಾದ ರೇವತ ರಾಜನು ಬಹುಕಾಲ ಮರಳಿ ಬಾರದಿರಲು ಪುಣ್ಯ ಜನ ಎಂಬ ಹೆಸರಿನ ರಾಕ್ಷಸರು ಅವನ ರಾಜಧಾನಿಯ ಮೇಲೆ ದಾಳಿ ಮಾಡಿದರು. ದೈತ್ಯರ ಹಾವಳಿಯಿಂದ ಆ ಕುಶಸ್ಥಳಿಯು ಹಾಳಾಗಿ ಹೋಯಿತು. ರೇವತನ ನೂರು ಜನ ಸೋದರರು ದೈತ್ಯರ ಉಪಟಳದಿಂದ ಹೆದರಿ ದಿಕ್ಕಾಪಾಲಾಗಿ ಚದರಿ ಹೋದರು. ಅವನ ವಂಶದಲ್ಲಿ ಹುಟ್ಟಿದ ಕ್ಷತ್ರಿಯರು ದಿಕ್ಕುಗೊಬ್ಬರಾದರು. ಮನುವಿನ ಮತ್ತೊಬ್ಬ ಮಗ ಧೃಷ್ಟನಿಂದ ಧಾರ್ಷ್ಟಿಕ ಎಂಬ ಕ್ಷತ್ರಿಯ ವಂಶವು ಕುಡಿಯೊಡೆಯಿತು. ಇನ್ನೊಬ್ಬ ಮನುಕುಮಾರ ನಾಭಾಗನಿಗೆ ನಾಭಾಗ ಎಂದೇ ಹೆಸರುಳ್ಳ ಮಗನಿದ್ದ. ಆ ನಾಭಾಗನಿಗೆ ಅಂಬರೀಷ, ಅಂಬರೀಷನಿಗೆ ವಿರೂಪ, ವಿರೂಪನಿಗೆ ಪೃಷದಶ್ವ, ಅವನಿಂದ ರಥೀತರ ಮಕ್ಕಳಾಗಿ ಜನಿಸಿದರು. ಈ ರಥೀತರನ ಕುಲದಲ್ಲಿ ಕೆಲವರು ತಮ್ಮ ಬ್ರಹ್ಮ ವಿದ್ಯೆಯ ಪ್ರಭಾವದಿಂದ ಬ್ರಾಹ್ಮಣರಾಗಿ ಆಂಗೀರಸರೆಂದು ಹೆಸರಾದರು. ಆದುದರಿಂದಲೇ.

**''ಏತೇ ಕ್ಷತ್ರ ಪ್ರಸೂತಾ ವೈ ಪುನಶ್ಚಾಂಗಿರಸಃ ಸ್ಮೃತಾಃ ।**
**ರಥೀತರಾಣಾಂ ಪ್ರವರಾಃ ಕ್ಷತ್ರೋಪೇತಾ ದ್ವಿಜಾತಯಃ ॥**
ಎಂಬ ಪದ್ಯವು ಆ ಕಾಲದಲ್ಲಿ ಪ್ರಚಾರಕ್ಕೆ ಬಂದಿತ್ತು.

## ಮೂಗಿನಿಂದ ಹುಟ್ಟಿದ ಮಗ ಮಾಂಸ ತಿಂದ

ಮನುರಾಜನು ಒಮ್ಮೆ ಜೋರಿನಿಂದ ಶೀನುವಾಗ ಅವನ ಮೂಗಿನಿಂದ ಒಬ್ಬ ಮಗನು ಉಚ್ಚಿ ಬಿದ್ದನು. ಅವನಿಗೆ ಇಕ್ಷ್ವಾಕು ಎಂದು ಹೆಸರು. ಆ ಇಕ್ಷ್ವಾಕುವಿಗೆ ನೂರು ಜನ ಮಕ್ಕಳು. ಅವರಲ್ಲಿ ವಿಕುಕ್ಷಿ ನಿಮಿ, ದಂಡ ಈ ಮೂವರು ಮುಖ್ಯರಾಗಿದ್ದರು. ಶಕುನಿ ಮೊದಲಾದ ಐವತ್ತು ಕುಮಾರರು ಉತ್ತರಾಪಥಕ್ಕೆ ಒಡೆಯರಾದರು. ಉಳಿದ ನಲವತ್ತೆಂಟು ಮಕ್ಕಳು ದಕ್ಷಿಣಾ ಪಥವನ್ನು ಆಳತೊಡಗಿದರು. ಈ ಇಕ್ಷ್ವಾಕು ನರೇಶನು ಒಂದು ದಿನ ತನ್ನ ಜ್ಯೇಷ್ಠ ಪುತ್ರನಾದ ವಿಕುಕ್ಷಿಗೆ ಅಷ್ಟಕಾಶ್ರಾದ್ಧಕ್ಕಾಗಿ ಯೋಗ್ಯ ಪ್ರಾಣಿಯ ಮಾಂಸವನ್ನು ತೆಗೆದುಕೊಂಡು ಬಾ ಎಂದು ಅಪ್ಪಣೆಗೈದನು. ಅದರಂತೆ ವಿಕುಕ್ಷಿಯು ಕಾಡಿಗೆ ಹೋಗಿ ಬಿಲ್ಲುಬಾಣಗಳಿಂದ ಅನೇಕ ಪ್ರಾಣಿಗಳನ್ನು ಹೊಡೆದು ಕೊಂದ. ಬೇಟೆಯ ಓಡಾಟದಿಂದ ಅವನಿಗೆ ಬಹಳ ಬಳಲಿಕೆಯಾಗಿ ಬಾಯಾರಿಕೆಯಾಯಿತು. ಹಸಿವು ಅವನ ಹೊಟ್ಟೆಯಲ್ಲಿ ಕಸಿವಿಸಿಯನ್ನು ಉಂಟು ಮಾಡಿತು. ಹಸಿವೆಯ ಹಾವಳಿಯನ್ನು ತಾಳಲಾರದೆ ಅವನು ಶ್ರಾದ್ಧಕ್ಕಾಗಿ ಹೊಡೆದ ಪ್ರಾಣಿಗಳಲ್ಲಿಯ ಒಂದು ಮೊಲದ ಮಾಂಸವನ್ನು ತಿಂದು ಬಿಟ್ಟನು. ಆದರಿಂದ ಹಸಿವನ್ನು ಹಿಂಗಿಸಿಗೊಂಡು ಉಳಿದ ಮಾಂಸವನ್ನು ತಂದು ತಂದೆಗೆ ಒಪ್ಪಿಸಿದನು. ಇಕ್ಷ್ವಾಕು ಕುಲಕ್ಕೆ ಎಂದಿನಿಂದಲೂ ವಸಿಷ್ಠರೇ

ಪುರೋಹಿತರು. ಅಂದು ಶ್ರಾದ್ಧಕ್ಕೆ ಅವರೇ ದಯ ಮಾಡಿಸಿದ್ದರು. ಇಕ್ಷ್ವಾಕು ಮಹಾರಾಜನು ವಿಕ್ಕುಕಿಯು ತಂದ ಮಾಂಸವನ್ನೆಲ್ಲ ವಸಿಷ್ಠರ ಮುಂದೆ ತಂದಿರಿಸಿ ''ಸ್ವಾಮಿ ಇದನ್ನು ಪ್ರೋಕ್ಷಣ ಮಾಡಿ ಇಂದಿನ ಶ್ರಾದ್ಧಕ್ಕೆ ಉಪಯೋಗಿಸಿಕೊಳ್ಳಬೇಕು'' ಎಂದು ಬಿನ್ನವಿಸಿದ. ಆಗ ವಸಿಷ್ಠರು ''ಸಾಕು, ಸಾಕು, ಇದೆಲ್ಲವೂ ಉಚ್ಛಿಷ್ಟವಾಗಿ ಅಪವಿತ್ರವಾಗಿದೆ. ಯಾಕೆಂದರೆ ನಿನ್ನ ಜೇಷ್ಠಪುತ್ರನು ಈ ಪ್ರಾಣಿಗಳನ್ನು ಕೊಂದು, ಅವುಗಳಲ್ಲಿ ಒಂದು ಮೊಲವನ್ನು ತಿಂದು, ಉಳಿದ ಮಾಂಸವನ್ನು ತಂದಿದ್ದಾನೆ,'' ಎಂದು ನುಡಿದರು. ಇದನ್ನು ಕೇಳಿ ಇಕ್ಷ್ವಾಕು ಮಹಾರಾಜನಿಗೆ ಸಿಟ್ಟು ಬಂದು ಆ ಮಗನನ್ನು ಮನೆ ಬಿಟ್ಟು ಹೊರಗೆ ಅಟ್ಟಿದನು. ಮೊಲವನ್ನು ತಿಂದಿದ್ದರಿಂದ ಆ ವಿಕುಕ್ಷಿಗೆ ಶಶಾದ (ಶಶ=ಮೊಲ. ಆದ=ತಿನ್ನು) ಎಂದು ಹೆಸರಾಯಿತು. ಇಕ್ಷ್ವಾಕು ಮಹಾರಾಜನು ಮರಣ ಹೊಂದಿದ ಬಳಿಕ ಆ ಶಶಾದನೇ ಮನೆಗೆ ಬಂದು ತಂದೆಯ ಸಿಂಹಾಸನವನ್ನು ಏರಿ ಧರ್ಮದಿಂದ ರಾಜ್ಯವನ್ನು ಆಳಿದನು. ಆ ಶಶಾದನಿಗೆ ಪುರಂಜಯ ಎಂಬ ಪುತ್ರನು ಉತ್ಪನ್ನನಾದನು.

ಆ ಪುರಂಜಯನಿಗೂ ತಂದೆಯಂತೆ ತೊಟ್ಟಿಲಿನಲ್ಲಿ ಇಟ್ಟ ಹೆಸರು ಒಂದಾದರೆ ಜನರು ಕರೆಯುವ ಹೆಸರು ಬೇರೊಂದಾಯಿತು. ಅದರ ಕಾರಣವನ್ನು ಹೇಳಬೇಕೆಂದರೆ ಅದೊಂದು ದೊಡ್ಡ ಕತೆ.

## ಮಾನವನು ಮಹೇಂದ್ರನ ಹೆಗಲನೇರಿದ ಕತೆ

ಹಿಂದೆ ತ್ರೇತಾಯುಗದಲ್ಲಿ ದೇವದಾನವರ ನಡುವೆ ಘನಘೋರವಾದ ಯುದ್ಧವಾಯಿತು. ಅದರಲ್ಲಿ ಅತಿ ಬಲಿಷ್ಠರಾದ ದೈತ್ಯರು ಸುರಪುರದ ನಾಗರಿಕರನ್ನೆಲ್ಲ ಸೋಲಿಸಿ ಓಡಿಸಿದರು. ಪರಾಜಿತರಾದ ದೇವಕುಲದ ಧುರೀಣರು ಶ್ರೀ ಹರಿಗೆ ಶರಣು ಹೋದರು.

## ಹರಿಯ ಉಪಾಯ, ದೈತ್ಯರಿಗೆ ಅಪಾಯ

ದೇವತೆಗಳ ಭಕ್ತಿಭಾವಭರಿತವಾದ ಸೇವೆಯಿಂದ ಸುಪ್ರೀತನಾದ ಸ್ವಾಮಿ ಶ್ರೀ ಹರಿಯು ಜಗತ್ ಕಲ್ಯಾಣಾಕಾಂಕ್ಷೆಯಿಂದ ಇಂತು ನುಡಿದನು. ''ಸುರರೇ, ನಿಮ್ಮ ಮನಸ್ಸಿನಲ್ಲಿದ್ದುದು ನನಗೆ ತಿಳಿದಿದೆ. ಅದಕ್ಕಾಗಿ ನಿಮಗೊಂದು ಉಪಾಯವನ್ನು ತಿಳಿಸುವೆ ಕೇಳಿ. ರಾಜರ್ಷಿಯಾದ ಶಶಾದನ ಚಿರಂಜೀವ ಪುರಂಜಯದೊರೆಯು ಈಗ ಧರೆಯನ್ನು ಆಳುತ್ತಲಿದ್ದಾನೆ. ಕ್ಷತ್ರ ಜಾತಿಯಲ್ಲಿ ಅವನು ಸರ್ವಶ್ರೇಷ್ಠ. ಆದ್ದರಿಂದ ನಾನು ಆ ರಾಜರ್ಷಿಯ ದೇಹದಲ್ಲಿ ಒಂದು ಅಂಶದಿಂದ ಸನ್ನಿಹಿತನಾಗಿ ದೈತ್ಯರನ್ನು ಧ್ವಂಸ ಗೈಯುವೆ. ಆ ಕಾರ್ಯಸಿದ್ಧಿಗಾಗಿ ಮೊದಲು ನೀವು ದಾನವರ ಜೊತೆಗೆ ಹೋರಾಟಕ್ಕಾಗಿ ಪುರಂಜಯನನ್ನು ಅಣಿಗೊಳಿಸಿರಿ'' ನಾರಾಯಣನ ಈ ನುಡಿಯನ್ನು ಕೇಳಿ ಅಮರೇಶ್ವರರೆಲ್ಲರು ಅವನಡಿಗೆ ಎರಗಿ ಅಲ್ಲಿಂದ ಹೊರಟು ನೇರವಾಗಿ ಪುರಂಜನನ ಅರಮನೆಗೆ ಇಳಿದುಬಂದರು. ಅವನು ಆ ಸುರೇಶ್ವರರನ್ನು ಸ್ವಾಗತಿಸಿ ''ಅಪ್ಪಣೆ ಏನು?'' ಎಂದು ಕೇಳಿದ. ಆಗ ದೇವತೆಗಳು ಅವನಿಗೆ ಅನುನಯದ ದನಿಯಲ್ಲಿ ಹೇಳಿದರು.

''ಕ್ಷತ್ರಿಯೋತ್ತಮ, ನಿನ್ನಲ್ಲಿ ನಮ್ಮದೊಂದು ಬೇಡಿಕೆ. ನಮ್ಮ ವೈರಿಗಳು ಮಲೆತು ನಿಂತಿದ್ದಾರೆ. ನಾವೀಗ ಸೋಲನ್ನು ಅಪ್ಪಿದ್ದೇವೆ. ಆದರೆ ಮತ್ತೀಗ ಆ ಅಸುರರೊಂದಿಗೆ

ಹೋರಾಡಬೇಕೆಂದು ನಿರ್ಧರಿಸಿದ್ದೇವೆ. ಈ ಘೋರ ಹೋರಾಟದಲ್ಲಿ ನೀನು ನಮ್ಮ ಪರವಾಗಿ ದಾನವರೊಡನೆ ಕಲಿತನದಿಂದ ಕಾದು ನಮಗೆ ಗೆಲುವನ್ನು ತಂದುಕೊಡಬೇಕು. ನಮ್ಮ ಈ ಸ್ನೇಹದ ಕೋರಿಕೆಗೆ ಇಲ್ಲ ಎನ್ನುವುದು ನಿನಗೆ ಸಲ್ಲದು''

## ಇಂದ್ರನನ್ನು ಬಗ್ಗಿಸಿ ಹತ್ತುವ ಹಂಬಲ

ದೇವತೆಗಳ ಈ ಸಹಾಯಯಾಚನೆಯನ್ನು ಕೇಳಿ ಪುರಂಜಯನು ''ನಾನು ನಿಮ್ಮ ಸಹಾಯಕ್ಕೆ ನಿಶ್ಚಿತವಾಗಿ ಬರುವೆ. ಆದರೆ ಒಂದು ಕರಾರು. ನಿಮ್ಮ ಇಂದ್ರ ಮೂರು ಲೋಕದ ಒಡೆಯ. ನೂರು ಅಶ್ವಮೇಧಯಾಗ ಮಾಡಿ ಆ ಪುಣ್ಯದಿಂದ ಅವನು ಆ ಸುರರಾಜ ಪಟ್ಟವನ್ನು ಪಡೆದಿದ್ದಾನೆ. ಆ ದೇವರಾಜನು ತನ್ನ ಹೆಗಲ ಮೇಲೆ ನನ್ನನ್ನು ಹೊತ್ತು ರಣಾಂಗಣದಲ್ಲಿ ನಡೆಯುವುದಾದರೆ ನಾನು ನಿಮ್ಮ ಸಹಾಯಕ್ಕೆ ಬಂದು ದಾನವರೊಡನೆ ಕಾದು ಅವರನ್ನು ಕೊಲ್ಲುತ್ತೇನೆ.'' ಎಂದು ತನ್ನ ನಿಬಂಧನೆಯನ್ನು ತಿಳಿಸಿದ.

## ವಿಷ್ಣುವಿನ ಅಂಶ. ದೈತ್ಯರೆಲ್ಲರ ಧ್ವಂಸ

ಕಾರ್ಯದ ಕಡೆಗೆ ಗಮನವಿದ್ದ ದೇವತೆಗಳು ಮತ್ತು ದೇವೇಂದ್ರನೂ ಪುರಂಜಯನ ಈ ಕರಾರಿಗೆ ಒಪ್ಪಿದರು. ಅವನ ಭರವಸೆಯಿಂದ ಸುರರೆಲ್ಲರೂ ಸೈನಿಕರಾಗಿ ದೈತ್ಯರ ಮೇಲೆ ದಾಳಿ ಇಟ್ಟರು. ಇಂದ್ರನು ಎತ್ತಾಗಿ ಪುರಂಜಯನನ್ನು ಹೊತ್ತುನಡೆದ. ಪುರಂಜಯನ ವೃಷಭರೂಪಿಯಾದ ಆ ವಾಸವನ ಮೇಲೆ ಕುಳಿತು ಆಢ್ಯತೆಯಿಂದ ಅಸುರರ ಜೊತೆಗೆ ಹಣಾಹಣಿ ಹೋರಾಡಿದ. ಕೋಪದಿಂದ ಕೆರಳಿ ಕಲಿತನದಿಂದ ಕಾದುವ ಆ ನರನಾಥನಲ್ಲಿ ವಿಷ್ಣುವಿನ ತೇಜಸ್ಸು ತುಂಬಿ ತುಳುಕುತಿತ್ತು. ಅದರಿಂದ ಉತ್ತೇಜಿತನೂ ಅಜೇಯನೂ ಆದ ಪುರಂಜಯನು ಆ ದೇವ ದಾನವ ಯುದ್ಧದಲ್ಲಿ ಎಲ್ಲ ರಾಕ್ಷಸರನ್ನೂ ಸಂಹರಿಸಿದನು. ಕಕುದ್ = ಎತ್ತಿನ ಹೆಗಲ, ಅದರ ಮೇಲೆ ಕುಳಿತು ಯುದ್ಧಮಾಡಿದ್ದರಿಂದ ಅವನಿಗೆ 'ಕಕುಸ್ಥ' ಎಂದು ಹೆಸರು ಬಂದಿತು. ''ಕಕುದಿ ತಿಷ್ಠತಿ ಇತಿ ಕಕುಸ್ಥಃ''

ಕಕುಸ್ಥನ ಮಗ ಅನೇನಸ, ಅನೇನಸನ ಮಗ ಪೃಥು, ಪೃಥುವಿನ ಪುತ್ರ ವಿಷ್ಟರಾಶ್ವ ಅವನ ಮಗ ಯುವನಾಶ್ವ, ಯುವನಾಶ್ವನಿಂದ ಶ್ರಾವಸ್ತನು ಜನಿಸಿದನು. ಶ್ರಾವಸ್ತಿ ನಗರವನ್ನು ನಿರ್ಮಿಸಿದವನು ಇವನೇ. ಶ್ರಾವಸ್ತನ ಮಗ ಬೃಹದಶ್ವ. ಅವನ ಪುತ್ರ ಕುವಲಯಾಶ್ವ. ಈ ಕುವಲಯಾಶ್ವನು ಉದಂಕ ಎಂಬ ಮಹಾಋಷಿಗೆ ಅಪಕಾರವನ್ನು ಮಾಡಿದ ಧುಂಧು ಎಂಬ ದೈತ್ಯನನ್ನು ಕೊಂದನು. ಈ ಕಾರ್ಯದಲ್ಲಿ ಅವನಿಗೆ ಸಾಕ್ಷಾತ್ ಶ್ರೀ ವಿಷ್ಣುವಿನ ತೇಜಸ್ಸು ಬೆಂಬಲವಾಗಿ ದೊರಕಿತ್ತು. ಆದರೆ ಈ ಯುದ್ಧದಲ್ಲಿ ಸಹಾಯಕ್ಕೆ ಬಂದ ಅವನ ಇಪ್ಪತ್ತೊಂದು ಸಾವಿರ ಮಕ್ಕಳು ಧುಂಧುದೈತ್ಯನ ಮುಖದಿಂದ ಹೊರಟ ಉಸಿರಿನ ಬೆಂಕಿಯಲ್ಲಿ ಬೆಂದು ಸತ್ತುಹೋದರು. ಅಷ್ಟು ಜನ ಮಕ್ಕಳಲ್ಲಿ ಬದುಕಿ ಉಳಿದವರು ಮೂವರು ಮಾತ್ರ, ದೃಢಾಶ್ವ, ಚಂದ್ರಾಶ್ವ, ಕಪಿಲ. ದೃಢಾಶ್ವನಿಂದ ಮುಂದುವರಿದ ಆ ವಂಶದಲ್ಲಿ ಹರ್ಯಶ್ವ, ನಿಕುಂಭ, ಅಮಿತಾಶ್ವ, ಕೃಶಾಶ್ವ, ಪ್ರಸೇನಜಿತ್, ಯುವನಾಶ್ವ ಮುಂತಾದ ರಾಜರು ಆಗಿಹೋದರು.

## ನಿಸರ್ಗ ವಿರುದ್ಧವಾದರೂ ನಿಜವಾಗಿ ನಡೆದ ಒಂದು ಘಟನೆ

ಈ ಯುವನಾಶ್ವನಿಗೆ ಮಾತ್ರ ಮಕ್ಕಳಿಲ್ಲದ್ದರಿಂದ ರಾಜ್ಯ, ಐಶ್ವರ್ಯ, ಅಧಿಕಾರ, ಮನೆ, ಮಡದಿ ಎಲ್ಲವೂ ಬೇಡವಾಯಿತು. ಅವನು ಅರಮನೆ ಸಿರಿಮನೆ ಎಲ್ಲವನ್ನೂ ತೊರೆದು ಕಾಡಿಗೆ ನಡೆತಂದ. ಅಲ್ಲಿ ಋಷಿಗಳ ಆಶ್ರಮಗಳಲ್ಲಿಯೇ ಇರತೊಡಗಿದ. ಅಡವಿ ಆಶ್ರಮಗಳಲ್ಲಿ ಅನಾಥನಂತೆ ಅಲೆದಾಡುವ ಆ ಸಾರ್ವಭೌಮನನ್ನು ಕಂಡು ಋಷಿಗಳ ಎದೆ ಕರಗಿತು. ಅವರೆಲ್ಲರೂ ಕೂಡಿ ಆ ಮಹಾರಾಜನಿಂದ ಸಂತಾನೋತ್ಪತ್ತಿಗಾಗಿ ಒಂದು ಯಜ್ಞವನ್ನು ಮಾಡಿಸಿದರು. ಆ ಯಜ್ಞದಲ್ಲಿ ಮಂತ್ರಗಳಿಂದ ನೀರನ್ನು ಅಭಿಮಂತ್ರಣಮಾಡಿ ಮಂತ್ರಪೂತವಾದ ಆ ಜಲವನ್ನು ಒಂದು ಕಲಶದಲ್ಲಿ ತುಂಬಿ ಅದನ್ನು ಯಜ್ಞವೇದಿಕೆಯ ನಟ್ಟನಡುವೆ ಇಟ್ಟು ಮಧ್ಯರಾತ್ರಿ ನಂತರ ಮುನಿಗಳೆಲ್ಲ ಮಲಗಿಕೊಂಡರು.

ಸರಿರಾತ್ರಿಯ ಸಮಯದಲ್ಲಿ ಮಹಾರಾಜನಿಗೆ ವಿಪರೀತ ಬಾಯಾರಿಕೆ. ಹತ್ತಿರದಲ್ಲಿ ಎಲ್ಲಿಯೂ ನೀರು ಕಾಣಲಿಲ್ಲ. ಗಂಟಲು ಸೇದತೊಡಗಿತು. ನಾಲಿಗೆ ಒಣಗಿತು. ಮಹಾರಾಜನು ನೀರಡಿಸಿ ಆಶ್ರಮದ ಒಳಗೆ ಹೊಕ್ಕ. ಎಲ್ಲಿಯೂ ನೀರು ದೊರಕಲಿಲ್ಲ. ಆದರೆ ಯಜ್ಞವೇದಿಕೆಯ ಮೇಲೆ ನೀರು ತುಂಬಿ ಒಂದು ಕಲಶವನ್ನು ಇರಿಸಲಾಗಿತ್ತು. 'ಬಹಳ ರಾತ್ರಿಯಾದ ಮೇಲೆ ದಣಿದು ಮಲಗಿದ ಮುನಿಗಳನ್ನು ಎಬ್ಬಿಸುವುದೇಕೆ !' ಎಂದು ಅವರಿಗೆ ಎಚ್ಚರಾಗದಂತೆ ಮಹಾರಾಜನು ಮೆಲ್ಲ ಮೆಲ್ಲನೆ ಕಳ್ಳಹೆಜ್ಜೆ ಇರಿಸುತ್ತ ಯಜ್ಞವೇದಿಕೆಗೆ ಬಂದ. ಅಲ್ಲಿ ನೀರು ತುಂಬಿಟ್ಟ ಆ ಮಂತ್ರಪೂತ ಜಲಕಲಶವನ್ನು ಎತ್ತಿ ನೀರನ್ನೆಲ್ಲ ಗಟಗಟ ಕುಡಿದ. ಸದ್ದು ಮಾಡದಂತೆ ಅಲ್ಲಿಂದ ಹೊರಬಿದ್ದು ತನ್ನ ಸ್ಥಾನದಲ್ಲಿ ಬಂದು ಮಲಗಿದ. ಎಚ್ಚರಾದ ಬಳಿಕ ಋಷಿಗಳು ಯಜ್ಞಕಲಶವು ಬರಿದಾದ್ದನ್ನು ಕಂಡು ಅಚ್ಚರಿಗೊಂಡು ಕೇಳಿದರು. ''ಇದರಲ್ಲಿಯ ನೀರನ್ನು ಕುಡಿದವರು ಯಾರು ? ಇದು ನಾವು ಅಭಿಮಂತ್ರಿಸಿದ ನೀರು. ಇದನ್ನು ಯುವನಾಶ್ವನ ಪಟ್ಟದರಸಿಯು ಕುಡಿದರೆ ಮಹಾಪರಾಕ್ರಮಿಯಾದ ಮಗನನ್ನು ಹಡೆಯುವಳು. ಅವಳು ಇಲ್ಲಿ ಇಲ್ಲದಿದ್ದರೆ ನಾಳೆ ಕರೆಸಿಕೊಟ್ಟರಾಯಿತೆಂದು ನಾವು ಆ ಅಭಿಮಂತ್ರಿತವಾದ ಉದಕವನ್ನು ಈ ಯಜ್ಞಕಲಶದಲ್ಲಿ ತುಂಬಿ ಈ ಹೋಮದ ಜಗುಲಿಯ ಮೇಲೆ ಇರಿಸಿದ್ದೆವು. ಇದೀಗ ಬರಿದಾಗಿದೆ. ಹೇಗೆ ? ಯಾರು ? ''

ಅದನ್ನು ಕೇಳಿ ಮಹಾರಾಜನು ಅಲ್ಲಿ ಬಂದು ''ಇದನ್ನು ನಾನೇ ಕುಡಿದೆ. ನನಗೆ ಗೊತ್ತಾಗಲಿಲ್ಲ ಈ ಕಲಶದಲ್ಲಿ ತಾವು ಮಂತ್ರಪೂತವಾದ ಜಲವನ್ನು ಇರಸಿದ್ದೀರೆಂದು'' ಎಂದು ತನ್ನ ತಪ್ಪನ್ನು ಒಪ್ಪಿಕೊಂಡನು. ಋಷಿಗಳ ಮಂತ್ರ ಎಂದೂ ಹುಸಿಹೋಗಲಾರದು. ಮಂತ್ರಪೂತನಾದ ಆ ಯಜ್ಞದ ಪುಣ್ಯೋದಕದ ಪ್ರಭಾವದಿಂದ ಮಹಾರಾಜನ ಹೊಟ್ಟೆಯಲ್ಲಿ ಗರ್ಭಮೂಡಿತು. ದಿನ ಕಳೆದಂತೆ ಅದು ಬೆಳೆಯತೊಡಗಿತು. ಒಂಬತ್ತು ತಿಂಗಳು ತುಂಬಿದ ಬಳಿಕ ಮಹಾರಾಜನ ಬಲಹೊಟ್ಟೆಯನ್ನು ಒಡೆದು ಕೂಸು ಹೊರಬಿದ್ದಿತು. ದೇವರ ದಯೆಯಿಂದ ಆ ಅರಸು

ಸಾಯಲಿಲ್ಲ. ಕೂಸಿಗೂ ಏನೂ ಆಗಲಿಲ್ಲ. ''ಹೀಗೆ ಹುಟ್ಟಿದ ಈ ಮಗು ಏನನ್ನು ಕುಡಿಯಬೇಕು ! ತಾಯಿಯ ಮೊಲೆ ಹಾಲಿಲ್ಲದೆ ಈ ಕೂಸು ಬದುಕುವದೆಂತು !'' ಎಂದು ಮುನಿಗಳು ಚಿಂತಾಕ್ರಾಂತರಾಗಿ ಅಲ್ಬರಿದರು. ಆ ಋಷಿಗಳ ''ಕಂ ಧಾಸ್ಯತಿ'' ಏನನ್ನು ಕುಡಿಯಬೇಕು. ಎಂಬ ಕಾಳಜಿಯ ದನಿಕೇಳಿ ದೇವೇಂದ್ರನು ಅಲ್ಲಿಗೆ ಧಾವಿಸಿ ಬಂದು ''ಮಾಂಧಾಸ್ಯತಿ'' ನನ್ನನ್ನು, ಕುಡಿಯುತ್ತದೆ. ಎಂದು ನುಡಿದ. ದೇವರಾಜನು ಆ ಮಗುವಿನ ಮುಖದಲ್ಲಿ ತನ್ನ ತೋರಬೆರಳನ್ನಿಟ್ಟು ಚೀಪಿಸತೊಡಗಿದ. ಸುರನಾಥನ ಬೆರಳಿನಿಂದ ಅಮೃತವೇ ಜಿನಗುತ್ತಿತ್ತು. ಅಮೃತ ಪ್ರಾಶನದಿಂದ ಆ ಕೂಸು ಒಂದೇ ದಿನದಲ್ಲಿ ಬೆಳೆದು ದೊಡ್ಡದಾಯಿತು. ಆ ಮಾಂಧಾತ ಮಹಾರಾಜನು ಮುಂದೆ ಚಕ್ರವರ್ತಿಯಾಗಿ ಸಪ್ತದ್ವೀಪಗಳಿಂದ ಒಡಗೂಡಿನ ಪೊಡವಿಯನ್ನೆಲ್ಲ ಆಳಿದನು. ಮಾಂಧಾತನ ಸಾಮ್ರಾಜ್ಯದ ವಿಸ್ತಾರ ವೈಭವವನ್ನು ಹೇಳುವ ಈ ಪದ್ಯವು ಜಗತ್ ಪ್ರಸಿದ್ಧವಾಗಿದೆ.

**''ಯಾವತ್ಸೂರ್ಯ ಉದೇತ್ಯಸ್ತಂ ಯಾವಚ್ಚ ಪ್ರತಿತಿಷ್ಠತಿ ।**
**ಸರ್ವಂ ತದ್ ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ''**

ಸೂರ್ಯ ಮೂಡುವ ನಾಡು, ಅವನು ಅಸ್ತವಾಗುವ ಗೂಡು, ಅಲ್ಲದೆ ಅವನು ಬೆಳಕು ಬೀರುವ ಎಲ್ಲ ಕಾಡು, ಮೇಡು, ನಾಡುಗಳು ಕೂಡ ಯುವನಾಶ್ವನ ಮಗನಾದ ಮಾಂಧಾತನ ಕ್ಷೇತ್ರವಾಗಿರುತ್ತವೆ. ಅರ್ಥಾತ್ ಬಿಸಿಲು ಬಿದ್ದಲೆಲ್ಲ, ಕತ್ತಲೆ ಇದ್ದಲ್ಲೆಲ್ಲ ಮಾಂಧಾತನ ರಾಜ್ಯವಿದ್ದಿತು. ಈ ಮಾಂಧಾತ ಮಹಾರಾಜನು ಶತಬಿಂದುವಿನ ಮಗಳಾದ ಬಿಂದುಮತಿಯನ್ನು ಮದುವೆಯಾದ. ಅಂಬರೀಷ, ಪುರಕುತ್ಸ, ಮುಚಕುಂದ, ಎಂಬ ಮೂವರು ಮಕ್ಕಳನ್ನು ಅವಳಲ್ಲಿ ಪಡೆದನು. ಮತ್ತು ಐವತ್ತು ಹೆಣ್ಣು ಮಕ್ಕಳು ಮಾಂಧಾತನಿಗೆ ಬಿಂದುಮತಿಯಿಂದಲೇ ಜನಿಸಿದರು.

## ಮೀನದ ಬದುಕು ಮುನಿಯ ಮನವನ್ನು ಕೆದಕಿತು

ಇದೇ ಸಮಯದಲ್ಲಿ ಋಗ್ವೇದ ರಹಸ್ಯವನ್ನೆಲ್ಲ ಅರಿತ ಸೌಭರಿ ಎಂಬ ಮಹರ್ಷಿಯು ಹನ್ನೆರಡು ವರ್ಷ ನೀರಿನಲ್ಲಿ ಮುಳುಗಿ ಏಕಾಗ್ರಚಿತ್ತದಿಂದ ತಪಂಗೈಯುತ್ತಿದ್ದನು. ಆ ನೀರಿನಲ್ಲಿ ಸಂಮದ ಎಂಬ ಹೆಸರಿನ ಮೀನುಗಳ ಒಡೆಯನೊಬ್ಬನಿದ್ದ. ಅವನಿಗೆ ಮಕ್ಕಳು ಬಹಳ. ಮೊಮ್ಮಕ್ಕಳು ಅನೇಕ. ಅವನ ಮೈ ಮೇಲೆ ಮಕ್ಕಳು, ಬೆನ್ನ ಮೇಲೆ ಮೊಮ್ಮಕ್ಕಳು, ರೆಕ್ಕೆಯ ಮೇಲೆ ಹೆಣ್ಣು ಮಕ್ಕಳು, ತಲೆಯ ಮೇಲೆ ಕೆಲವು ಪೌತ್ರರು, ಪಕ್ಕದಲ್ಲಿ ಹಲವು ಪುತ್ರರು, ಬಾಲದಮೇಲೆ ಹಲವು ದೌಹಿತ್ರರು ಹತ್ತಿ ನಲಿದು ಹಗಲಿರುಳು ಅವನ ಜೊತೆಗೆ ಆಟವಾಡಿ ಆನಂದ ಪಡುತ್ತಿದ್ದರು. ಆ ಮಕ್ಕಳು, ಮೊಮ್ಮಕ್ಕಳು ಮೈಮುಟ್ಟಿದಾಗೆಲ್ಲ ಆ ಮತ್ಸ್ಯಪತಿಗೆ ಮೈತುಂಬಾ ಹಿಗ್ಗಿನ ಮುಳ್ಳು ಮೂಡಿರುತ್ತಿದ್ದವು. ಹೃದಯ ಹಿಗ್ಗಿ ಹರ್ಷ ಗರಿಗೆದರುತ್ತಿತ್ತು. ಆ ಮೀನುಗಳ ಒಡೆಯನು ಅನುದಿನವೂ ಮಕ್ಕಳನ್ನೂ ಹೆತ್ತು, ಮೊಮ್ಮಕ್ಕಳನ್ನು ಹೊತ್ತು ಆ ತನ್ನ ಪ್ರಜಾಪರಿವಾರದೊಂದಿಗೆ ವಿಹಾರಗೈಯುತ್ತ ಸಂತಾನ ಸುಖ ಸೌಭಾಗ್ಯದಿಂದ ಕಾಲ ಕಳೆಯುತ್ತಿದ್ದನು.

ಒಂದು ದಿನ ನೀರಿನಲ್ಲಿ ತಪಸ್ಸನ್ನು ಮಾಡುತ್ತ ಕುಳಿತ ಸೌಭರಿ ಋಷಿಯ ಕಣ್ಣು ಮೀನದ ಸಂಸಾರದ ಮೇಲೆ ಬಿದ್ದಿತು. ಮಕ್ಕಳು ಮೊಮ್ಮಕ್ಕಳೊಂದಿಗೆ ಆ ಸಲಿಲ ರಂಗದಲ್ಲಿ ಸುಖ ವಿಲಾಸಗಳನ್ನು ಅನುಭವಿಸುತ್ತಲಿರುವ ಆ ಮೀನದ ಒಡೆಯನನ್ನು ಕಂಡು ಸೌಭರಿಯ ಚಿತ್ತವು ಚಾಂಚಲ್ಯಚುಂಬಿಯಾಯಿತು. ಅವನು ಆಶೆಯಿಂದ ಕಣ್ಣನ್ನು ಅರಳಿಸಿ ಆ ಮೀನದ ಸುಖ ಸಂಸಾರವನ್ನು ನೋಡ ತೊಡಗಿದನು. ಬಂಧು ಬಳಗದೊಂದಿಗೆ ಭೋಗ-ಭಾಗ್ಯಗಳನ್ನು ಅನುಭವಿಸುವ ಆ ಜಲಚರ ಕುಟುಂಬವನ್ನು ಕಂಡು ಮನಸೋತ ಆ ಮುನಿಯ ಹೃದಯವು ಇಂತು ಮಾರ್ನುಡಿಯಿತು. "ಆಹಾ ಏನು ಧನ್ಯ ಈ ಮೀನು!" ಇಂಥ ಹೀನಯೋನಿಯಲ್ಲಿ ಹುಟ್ಟಿದರೂ ಇದಕ್ಕೆ ಮಕ್ಕಳೆಷ್ಟು! ಮೊಮ್ಮಕ್ಕಳೆಷ್ಟು! ಇದರ ಈ ಸಂತಾನ ಸಂತಸವನ್ನು ಕಂಡಾಗ ನನ್ನ ಅಂತರಂಗದಲ್ಲಿಯೂ ಸಂತತಿಯ ಆಸೆ ಮೂಡತೊಡಗಿದೆ. ನಾನೂ ಈ ಮೀನಗಳ ಒಡೆಯನಂತೆ ಮಕ್ಕಳು ಮೊಮ್ಮಕ್ಕಳಿಂದ ಕೂಡಿ ಭೋಗ ಭಾಗ್ಯಗಳನ್ನು ಅನುಭವಿಸಬೇಕು."

## ಮುದುಕ ಮುನಿಯ ಮದುವೆಯ ಹಂಬಲ

ಹೀಗೆ ಮನಸ್ಸಿನಲ್ಲಿ ಭೋಗಕಾಂಕ್ಷೆಯು ಅಂಕುರಿಸಿದ ಆ ಸೌಭರಿ ಮುನಿಯು ತನ್ನ ಚಿರಂತನ ಜಲಸಮಾಧಿಯಿಂದ ಮೇಲಕ್ಕೆ ಎದ್ದು ಹೊರಬಿದ್ದು ಸಂತಾನ ಪ್ರಾಪ್ತಿಗಾಗಿ ಗೃಹಸ್ಥಾಶ್ರಮದಲ್ಲಿ ಪ್ರವೇಶಮಾಡಬೇಕೆಂದು ಬಯಸಿ ಕನ್ಯಾಯಾಚನೆಗಾಗಿ ಮಾಂಧಾತ ಮಹಾರಾಜನ ಹತ್ತಿರ ಬಂದನು. ತಪೋಧನರು ತಾವಾಗಿ ತನ್ನ ಮನೆಗೆ ನಡೆದು ಬಂದದ್ದನ್ನು ಕಂಡು ತೃಪ್ತಿಗೊಂಡ ಮಾಂಧಾತ ಆ ಸೌಭರಿಯನ್ನು ಎದ್ದುನಿಂತು ಎದುರುಗೊಂಡ. ಆಸನವಿತ್ತು ಸತ್ಕರಿಸಿದ. ಆಸನದ ಮೇಲೆ ಆಸೀನನಾದ ಬಳಿಕ ಆ ಮಹಾಮುನಿಯು ತನ್ನ ಕನ್ಯಾಕಾಂಕ್ಷೆಯನ್ನು ಅವನೆದುರು ಮಂಡಿಸಿದ. "ನರನಾಥ ನಿಮ್ಮ ಕಕುಸ್ಥವಂಶದಲ್ಲಿ ಈ ವರೆಗೆ ಮನೆಗೆ ಬಂದ ಅತಿಥಿಗಳನ್ನು ಬರಿಗೈಯಿಂದ ಯಾರೂ ಕಳಿಸಿಲ್ಲ. ನಿಮ್ಮ ಕುಲದ ಆ ಕೀರ್ತಿಯನ್ನು ಕೇಳಿಯೇ ನಾನೀಗ ನಿನ್ನಲ್ಲಿಗೆ ಬಂದಿದ್ದೇನೆ. ಇಷ್ಟು ದಿನ ನೈಷ್ಠಿಕ ಬ್ರಹ್ಮಚರ್ಯ ವ್ರತದಿಂದ ತಪೋನುಷ್ಠಾನಮಾಡಿದ ನನಗೆ ಈಗ ಮದುವೆಯಾಗಿ ಗೃಹಸ್ಥನಾಗಬೇಕೆಂದು ಬಯಕೆಯಾಗಿದೆ. ನಿನಗೆ ಐವತ್ತು ಜನ ಕನ್ಯೆಯರಿರುವರೆಂದು ಕೇಳಿದ್ದೇನೆ. ಅವರಲ್ಲಿ ಒಬ್ಬ ಮಗಳನ್ನು ನನಗೆ ಮದುವೆಮಾಡಿಕೊಡು. ಹೆಣ್ಣು ಹಡೆದ ಅರಸರು ಅನೇಕರಿರಬಹುದು. ನಾನು ಅವರಾರಲ್ಲಿಯೂ ಕನ್ಯೆಯನ್ನು ಕೇಳಲಿಕ್ಕೆ ಹೋಗಿಲ್ಲ. ಬ್ರಾಹ್ಮಣರಿಗೆ ಬೇಡಿದ್ದನ್ನು ಕೊಡುವ ದಾನದೀಕ್ಷೆ ನಿಮ್ಮ ಮನೆತನದವರಿಗೆ ಮಾತ್ರ ಇದೆ. ಅದಕ್ಕಾಗಿಯೇ ನಾನು ನಿನ್ನ ಕಡೆಗೇ ಬಂದದ್ದು. ನನ್ನ ಈ ಬೇಡಿಕೆಯನ್ನು ಕಡೆಗಣಿಸಬೇಡ. ನನ್ನ ಈ ಆಶಾಭಂಗವಾದರೆ ನನಗೆ ಆ ದುಃಖವನ್ನು ತಾಳಲಿಕ್ಕಾಗುವದಿಲ್ಲ.

## ಕೊಟ್ಟರೆ ಮಗಳಿಗೆ ತಾಪ, ಬಿಟ್ಟರೆ ತನಗೆ ಶಾಪ

ಸೌಭರಿಮುನಿಯ ಈ ಕನ್ಯಾಯಾಚನೆಯನ್ನು ಕೇಳಿ ಮಾಂಧಾತ ಮಹಾರಾಜ ಕಕ್ಕಾಬಿಕ್ಕಿಯಾದ. ಅವನೊಮ್ಮೆ ಕಣ್ಣೆತ್ತಿ ವರನಾಗ ಹೊರಟ ಆ ಮುನಿಯ ದೇಹವನ್ನು

'ಆಪಾದಮೌಲಿ ಪರ್ಯಂತಂ' ನೋಡಿದ. ಗಡ್ಡ ಬೆಳ್ಳಗಾಗಿದ್ದವು. ನಡುಬಾಗಿತ್ತು. ಅಡಿಯಿಂದ ಮುಡಿಯವರೆಗೆ ಅವನ ಇಡೀ ಮೈಯನ್ನು ಮುಪ್ಪು ಬಲವಾಗಿ ಅಪ್ಪಿಕೊಂಡಿತ್ತು. ಜೀವನದ ಸಂಧ್ಯಾಕಾಲದಲ್ಲಿದ್ದ ಇಂಥ ಜರಾಜರ್ಜರ ಜರಠನಿಗೆ ತನ್ನ ಎಳೆ ಮಕ್ಕಳನ್ನು ಕೊಡಲಿಕ್ಕೆ ಅವನ ಮನಸ್ಸು ಒಪ್ಪಲಿಲ್ಲ. ಆದರೆ ಸೌಭರಿಯು ಮಹಾಚಂಡ ಕೋಪನೆಂದೂ ಅವನಿಗೆ ಗೊತ್ತು. ತಪಸ್ವಿಗಳಿಗೆ ಆಶಾಭಂಗವಾದರೆ ತಕ್ಷಣ ಕೋಪ, ಅದರ ಬೆನ್ನ ಹಿಂದೇ ಶಾಪ. ಇದೆಲ್ಲ ದೊಡ್ಡ ತಾಪ. ಮಾಡುವುದೇನು ! ಅವನಿಗೆ ಏನು ಹೇಳಬೇಕೋ ತಿಳಿಯದಾಯಿತು. ಅವನಿಗೆ ದಿಗ್ಭ್ರಮೆಯಾದಂತಾಯಿತು. ಮುಖ ಕೆಳಗೆ ಹಾಕಿ ಸುಮ್ಮನೆ ನಿಂತ. ಅವನ ಮಿದುಳಿನಲ್ಲಿ ನೂರು ವಿಚಾರಗಳು ಸಿಡಿಯುತ್ತಲಿದ್ದವು. ಅದನ್ನು ಕಂಡು ಸೌಭರಿಯು ''ಮಹಾರಾಜ, ಇಷ್ಟೇಕೆ ಚಿಂತೆ ಮಾಡುವಿ ? ನಾನೇನು ನಿನಗೆ ಅಂಥ ಅಶಕ್ಯ ಮಾತನ್ನು ಹೇಳಿದ್ದೇನೆ! ಹೆಣ್ಣು ಹಡೆದ ಬಳಿಕ ಅದನ್ನು ಯಾರಿಗಾದರೂ ಕೊಡಲೇ ಬೇಕಷ್ಟೇ !'' ''ಅದನ್ನು ನನಗೆ ಕೊಡು ಎಂದಿಷ್ಟೇ ನಾನೀಗ ನಿನಗೆ ಕೇಳಿದ್ದೇನೆ. ಅದರಿಂದ ನನ್ನ ಕಾರ್ಯವಾಗುವದು. ನೀನು ಕೃತಾರ್ಥನಾಗುವಿ'' ಎಂದು ತಿಳಿಪಡಿಸಿದರು. ಮಹಾರಾಜನ ಕಣ್ಣೆದುರು ಈಗ ಎರಡೇ ವಿಷಯಗಳು ಕಟ್ಟಿದ್ದವು. ಇವನಿಗೆ ಕೊಟ್ಟರೆ ಮಗಳ ತಾಪ, ಇಲ್ಲದಿದ್ದರೆ ಮುನಿಯ ಶಾಪ, ಎರಡೂ ಅವನಿಗೆ ಅಸಹ್ಯವಾಗಿದ್ದವು. ಭಾವುಕನಾದ ಆ ಭೂಪತಿಯು ಬ್ರಹ್ಮದಂಡಕ್ಕೆ ಬಹಳ ಬೆದರುತ್ತಿದ್ದ. ಮುನಿಯ ಮಾತನ್ನು ಕೇಳಿ ಹೆದರುತ್ತಲೇ ಉತ್ತರಿಸಿದ.

''ಪೂಜ್ಯರೇ, ನಮ್ಮ ಮನೆತನದಲ್ಲಿ ಒಂದು ಸಂಪ್ರದಾಯವಿದೆ. ಕನ್ನೆ ಒಲಿದು ಮೆಚ್ಚಿದ ವರಕ್ಕೇ ಅವಳನ್ನಿತ್ತು ವಿವಾಹ ಮಾಡಿ ಕೊಡುವದು. ತಾವು ಹೀಗೆ ಕೇಳುತ್ತೀರೆಂದು ನಾವು ಕನಸು ಮನಸ್ಸಿನಲ್ಲಿಯೂ ಯೋಚಿಸಿರಲಿಲ್ಲ. ಇಂಥ ಮುಪ್ಪಿನ ಕಾಲದಲ್ಲಿ ನಿಮಗೆ ಕನ್ಯಾಕಾಂಕ್ಷೆ ಹೇಗಾಯಿತು ! ಮದುವೆಯ ಬಯಕೆ ಮನದಲ್ಲಿ ಅದೆಂತು ಮೂಡಿತು ! ದೇವರೇ ಬಲ್ಲ. ಇಂಥ ಪರಿಸ್ಥಿತಿಯಲ್ಲಿ ಏನು ಮಾಡಬೇಕು ! ನನಗೆ ಏನೂ ತಿಳಿಯದಂತಾಗಿದೆ. ಆಗಲಿ ವಿಚಾರ ಮಾಡುತ್ತೇನೆ''.

## ನಿಷೇಧದ ಇನ್ನೊಂದು ಮುಖ

ಸೌಭರಿಗೆ ಮಹಾರಾಜನ ಹೃದಯ ಅರ್ಥವಾಯಿತು. ''ಇದು ನಿಷೇದದ ಇನ್ನೊಂದು ಮುಖ. ನೇರವಾಗಿ ಇಲ್ಲವೆನ್ನದೆ ಬಳಸು ಮಾತಿನಿಂದ ಕನ್ನೆಯನ್ನು ಕೊಡುವದಿಲ್ಲ. ಎಂದು ಸೂಚಿಸಿದ್ದಾನೆ. ಕನ್ನೆ ಮೆಚ್ಚಿದ ವರನಿಗೆ ಕೊಡುತ್ತೇನೆಂದು ಹೇಳಿ ಹೊಸ ಉಪಾಯದಿಂದ ನನ್ನ ನಿರಾಕರಣೆ ಮಾಡಿದ್ದಾನೆ. ಮುದಿಗಂಡನನ್ನು ವರಿಸಲು ಯಾವ ಮದುಮಗಳು ಸಿದ್ಧಳಾಗುವಳು ! ಸಾಮಾನ್ಯ ಸ್ತ್ರೀಯರೇ ಹಳೇ ಗೃಧ್ರಗಳನ್ನು ಕಂಡು ಅಸಹ್ಯ ಪಟ್ಟುಕೊಳ್ಳುವಾಗ ರಾಜನ ಈ ಹೊಸ ಹರೆಯದ ಹುಡುಗಿಯರು ನನ್ನಂಥ ಮುದಿಗೂಬೆಗಳನ್ನು ಹೇಗೆ ಒಪ್ಪಿ ಒಲಿದು ಮದುವೆಗೆ ಸಿದ್ಧವಾದಾರು ! ಇದನ್ನೆಲ್ಲ ಯೋಚಿಸಿಯೇ ಈ ಮಾಂಧಾತ ಈ ರೀತಿಯಾಗಿ ನುಡಿದಿದ್ದಾನೆ. ಆಗಲಿ ನಾನು ಇದಕ್ಕೊಂದು ಹೊಸ ಹಂಚಿಕೆ ಮಾಡುತ್ತೇನೆ'' ಎಂದು ಯೋಚಿಸಿ ಸೌಭರಿ ಋಷಿಯು ಮಾಂಧಾತನಿಗೆ

ಹೇಳಿದ - ''ನೃಪನೇ! ನಿಮ್ಮ ಮನೆತನದ ಸಂಪ್ರದಾಯ ಕನ್ನೆ ಮೆಚ್ಚಿದ ವರನಿಗೇ ಮದುವೆ ಮಾಡಿಕೊಡುವದಿದ್ದರೆ ಹಾಗೇ ಮಾಡು. ನಿನ್ನ ಅರಮನೆಯ ಅಂತಃಪುರದ ಸೇವಕನನ್ನು ಕರೆದು ನನ್ನನ್ನು ನಿನ್ನ ಕನ್ಯೆಯರಿದ್ದಲ್ಲಿ ಕರೆದೊಯ್ಯಲಿಕ್ಕೆ ಹೇಳು. ಆ ನಿನ್ನ ಐವತ್ತು ಜನ ಹೆಣ್ಣುಮಕ್ಕಳಲ್ಲಿ ಯಾರಾದರೂ ನನ್ನನ್ನು ಮದುವೆಯಾಗಲಿಕ್ಕೆ ಸಿದ್ಧಳಾದರೆ ನಾನು ಮದುವೆಯಾಗಿ ಸಂಸಾರಕ್ಕೆ ಇಳಿಯುತ್ತೇನೆ. ಇಲ್ಲದಿದ್ದರೆ ಈ ಹೊಸ ಸಂಸಾರದ ಹವ್ಯಾಸವನ್ನು ಈಗಲೇ ಬಿಟ್ಟು ಬಿಡುತ್ತೇನೆ. ಕಳೆದು ಹೋದ ಜೀವನವನ್ನು ಎಳೆದು ತರುವ ಈ ಕಾರ್ಯಕ್ರಮವನ್ನು ಇಲ್ಲಿಯೇ ನಿಲ್ಲಿಸಿಬಿಡುತ್ತೇನೆ.''

ಎದುರಾಡಿದರೆ ಮುನಿ ಎಲ್ಲಿ ಶಾಪ ಚೆಲ್ಲುವನೋ ? ಎಂದು ಮಾಂಧಾತನಿಗೆ ಹೆದರಿಕೆ. ಮರುಮಾತನಾಡೆ ಅವನು ಕನ್ಯೆಯರ ಅಂತಃಪುರದ ಆಳು ಮಗನನ್ನು ಕರೆದು ಋಷಿಯನ್ನು ಕನ್ಯಾಗೃಹಕ್ಕೆ ಕರೆದುಕೊಂಡು ಹೋಗಲು ಅಪ್ಪಣೆ ಇತ್ತ. ಆ ರಾಣೀವಾಸದ ಪರಿಚಾರಕನೊಂದಿಗೆ ಸೌಭರಿ ಋಷಿಯು ಅಂತಃಪುರಕ್ಕೆ ತೆರಳಿದ.

## ತಪಸ್ಸಿನಿಂದ ತಾರುಣ್ಯ, ಲೋಭನೀಯ ಲಾವಣ್ಯ

ಆ ಕನ್ಯಾಗೃಹದಲ್ಲಿ ಕಾಲಿಟ್ಟಾಗ ಮುನಿಯ ರೂಪ ಮಾರ್ಪಾಟಾಗಿತ್ತು. ತರುಣರಿಗಿಂತ ಸುಂದರವಾಗಿದ್ದಿತು ಅವರ ಶರೀರ. ಗಂಧರ್ವರಿಗಿಂತ ಹೆಚ್ಚಿನ ಕಾಂತಿಯು ಪ್ರಾಯ ತುಂಬಿದ ಅವನ ದೇಹದಲ್ಲಿ ತೂಗುತ್ತಿತ್ತು. ಅವನನ್ನು ಅಂತಃಪುರಕ್ಕೆ ಕರೆತಂದ ಆಳುಮಗನು ಅರಸುಗುವರಿಯರಿಗೆ ಹೇಳಿದ - ''ಇದು ನಿಮ್ಮ ಹಡೆದ ತಂದೆಯ (ಮಹಾರಾಜ) ಆಜ್ಞೆ. ''ಈ ಋಷಿಯು ಕನ್ಯೆಯನ್ನು ಬಯಸಿ ನನ್ನೆಡೆಗೆ ಬಂದಿದ್ದಾನೆ. ನಾನು ಅವನಿಗೆ ಮಾತುಕೊಟ್ಟಿದ್ದೇನೆ. ನಿಮ್ಮನ್ನು ನನ್ನ ಯಾವ ಮಗಳಾದರೂ ಒಲಿದು ಮದುವೆಯಾಗಲು ಒಪ್ಪಿದರೆ ಅದಕ್ಕೆ ನನ್ನದೇನೂ ಅಡ್ಡಿ ಆತಂಕ ಇಲ್ಲ'' ಎಂದು. ಆದ್ದರಿಂದ ನೀವು ಇವನನ್ನು ನೋಡಿರಿ. ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ.'' ಆಗ ಅವನ ಎಲ್ಲ ಕನ್ಯೆಯರು ತಮ್ಮ ಬೊಗಸೆಗಣ್ಣುಗಳನ್ನು ಅಗಲಗೊಳಿಸಿ ಆ ಸೌಭರಿ ಋಷಿಯನ್ನು ಒಮ್ಮೆ ನೋಡಿದರು. ಅವನೊಬ್ಬ ಚೆಲುವಿನ ಚಂದ್ರಾಮ. ಎಲ್ಲರಿಗೂ ಅವನ ಮೇಲೆ ಅನುರಾಗ ಅಭಿಲಾಷೆಗಳು ಮೂಡಿದವು. ಮದವೇರಿದ ಹೆಣ್ಣಾನೆಗಳು ಹಿಂಡಿನ ಒಡೆಯನಾದ ಗಂಡುಗಜದತ್ತ ನುಗ್ಗಿ ಬರುವಂತೆ ಆ ಐವತ್ತು ರಾಜಕುಮರಿಯರು ಆ ಸೌಭರ ಮುನಿಯನ್ನು ಮೆಚ್ಚಿ ಬಂದು ಒಲಿದು ವರಿಸಿ ನಿಂದರು. 'ನಾನು ಇವನನ್ನು ಮದುವೆಯಾಗುತ್ತೇನೆ', 'ನಾನು ಇವನನ್ನು ಒರಿಸುತ್ತೇನೆ' ಎಂದು ಅವರವರಲ್ಲಿ ಕಲಹಕ್ಕೆ ಮೊದಲಿಟ್ಟಿತು. ಅವರಲ್ಲಿ ಒಬ್ಬಳು ಉಳಿದ ಸೋದರಿಯರಿಗೆ ''ಸಾಕು ಸೋದರಿಯರೆ! ಸುಮ್ಮನಿರಿ. ಇವನನ್ನು ಮೊದಲ ವರಿಸಿದವಳು ನಾನು. ಇವನು ನಿಮಗೆ ಅನುರೂಪವಲ್ಲ.'' ಎಂದು ಹೇಳಿದಳು. ಇನ್ನೊಬ್ಬಳು ''ಇವನು ಹುಟ್ಟಿದ್ದೇ ನನ್ನ ಕೈ ಹಿಡಿಯಲಿಕ್ಕಾಗಿ, ನನ್ನ ಸೃಷ್ಟಿಯಾದದ್ದೇ ಇವನ ಮಡದಿಯಾಗಲಿಕ್ಕಾಗಿ. ನೀವೆಲ್ಲರೂ ನಮ್ಮ ಈ ಅನುರೂಪ ಜೋಡಿಯನ್ನು ನೋಡಿ ಸಂತೋಷಪಡಿ'' ಎಂದು ನುಡಿದಳು. ಮಗದೊಬ್ಬಳು ''ಈ ಮುನಿಯು ಇಲ್ಲಿ ಕಾಲಿಟ್ಟಾಗ ಮೊಟ್ಟ ಮೊದಲು ಇವನನ್ನು ನೋಡಿದವಳು ನಾನು. ಕಂಡಕೂಡಲೇ ನಾನು ಇವನನ್ನು

ವರಿಸಿಬಿಟ್ಟೆ. ಈ ತಂಗಿಯ ಮಂಗಲ ಕಾರ್ಯಕ್ಕೆ ಭಂಗ ಬರುವಂತೆ ಮಾಡುವುದು ನಿಮಗೆ ತರವಲ್ಲ. ಸೋದರಿಯ ಕಲ್ಯಾಣೋತ್ಸವವನ್ನು ನೀವೆಲ್ಲರೂ ಸಂಭ್ರಮದಿಂದ ನೆರವೇರಿಸಿ ಪುಣ್ಯಪಡೆಯಿರಿ'' ಎಂದು ಹೇಳಿದಳು. ಹೀಗೆ ಒಬ್ಬರಿಗೊಬ್ಬರು ಬಡೆದಾಡಿ ಕೊನೆಗೆ ಎಲ್ಲರೂ ಅವನ ಕೊರಳಿಗೆ ಮಾಲೆ ಹಾಕಿದರು. ತನ್ನ ಆತ್ಮವನ್ನೇ ಅಂತಃಕರಣ ಪೂರ್ವಕವಾಗಿ ಆ ಋಷಿಗೆ ಪೂರ್ಣವಾಗಿ ಅರ್ಪಿಸಿದರು.

ಅಂತಃಪುರದ ಅಧಿಕಾರಿಯು ಓಡಿಹೋಗಿ ಮಾಂಧಾತ ಮಹಾರಾಜನಿಗೆ ನಡೆದ ಸಂಗತಿಯನ್ನೆಲ್ಲ ಬಿನ್ನವಿಸಿದ. ಅದನ್ನು ಕೇಳಿ ಮಹಾರಾಜನು ''ಏನು ! ಏನಾಯಿತು ! ಹೇಗಾಯಿತು ? ಹೀಗೇಕಾಯಿತು ? ಏನು ಮಾಡಲಿ ! ನಾನೇಕೆ ಆ ಋಷಿಯನ್ನು ಅಂತಃಪುರಕ್ಕೆ ಕಳಿಸಿದೆ ! ಇವನನ್ನು ವರಿಸಿದರೆ ನನ್ನದೇನು ಅಂಭ್ಯಂತವಿಲ್ಲವೆಂದು ನನ್ನ ಕನ್ಯೆಯರಿಗೆ ಅದೇಕೇ ಹೇಳಿ ಕಳಿಸಿದೆ ! ಇದೇನಾಯಿತು ! ಎಂತಾಯಿತು ! ಮುಂದೇನು ?'' ಎಂದು ಮುಂತಾಗಿ ನೂರಾರು ಪ್ರಶ್ನೆ ಚಿನ್ಹೆಗಳು ಅವನ ಕಣ್ಣ ಮುಂದೆ ಕುಣಿಯ-ತೊಡಗಿದವು. ಏನೂ ತಿಳಿಯದಂತಾದ ಅವನು ಗಡಿಬಿಡಿಯಿಂದ ಅಂತಃಪುರಕ್ಕೆ ಧಾವಿಸಿ ಬರುವಷ್ಟರಲ್ಲಿ ಕಾರ್ಯವು ಮಿಂಚಿಹೋಗಿತ್ತು. ಅವನ ಐವತ್ತೂ ಜನ ಪ್ರಾಯಪ್ರಬುದ್ಧ ರಾಜಕನ್ಯಾಮಣಿಗಳು ಸೌಭರಿ ಋಷಿಯನ್ನು ವರಿಸಿ, ಅವನ ಎದೆಯರಸಿಯರು ಆಗಿಬಿಟ್ಟಿದ್ದರು. ಅದೂ ಕೂಡ ಸ್ವಯಂ ಸ್ಫೂರ್ತಿಯಿಂದ, ಸ್ವಸಂತೋಷದಿಂದ. ಆಗ ಮಾಂಧಾತ ಮಹಾರಾಜನಿಗೆ ಏನೂ ಮಾಡಲಿಕ್ಕೆ ಬರುವಂತಿರಲಿಲ್ಲ. ಇಚ್ಛೆಯಿಲ್ಲದಿದ್ದರೂ ಆ ತನ್ನ ಎಲ್ಲ ಮಕ್ಕಳಿಗೆ ಸೌಭರಿಯೊಂದಿಗೆ ಸಂಯುಕ್ತ ವಿವಾಹಕ್ಕೆ ಒಪ್ಪಿಗೆ ಕೊಡಲೇಬೇಕಾಯಿತು. ರಾಜಕುವರಿಯರ ವಿವಾಹವು ಋಷಿಯೊಡನೆ ವಿಜೃಂಭಣೆಯಿಂದ ನೆರವೇರಿತು. ಮದುವೆಮಾಡಿಕೊಂಡು ಆ ಮಹರ್ಷಿಯು ಎಲ್ಲ ಮಡದಿಯರನ್ನೂ ತನ್ನ ಆಶ್ರಮಕ್ಕೆ ಕರೆತಂದ.

## ಬ್ರಹ್ಮತೇಜವೇ ರಾಜ ಯೋಗ ಬಯಸಿದಾಗ

ವಿಶ್ವಕರ್ಮ ಒಬ್ಬ ಶಿಲ್ಪ ಬ್ರಹ್ಮ. ಶಿಲ್ಪ ವಿದ್ಯೆಯ ಎಲ್ಲ ಕಲ್ಪಕೌಶಲಗಳೂ ಅವನಿಗೆ ಕರತಲಾಮಲಕ. ಬ್ರಹ್ಮರ್ಷಿಯು ನೆನೆದ ತಕ್ಷಣ ಆ ದೇವಬಡಿಗ ಅಲ್ಲಿ ಕಾಣಿಸಿಕೊಂಡ. ನೆನೆದ ಕಾರಣ ಕೇಳಿದ. ಸೌಭರಿ ಮುನಿಯು ತನ್ನ ಕೈಹಿಡಿದ ನೃಪನಂದಿನಿಯರಿಗೆಲ್ಲ ಸುಂದರವಾದ ಒಂದೊಂದು ಅರಮನೆ ಉದ್ಯಾನಗಳನ್ನು ನಿರ್ಮಿಸಲು ಹೇಳಿದ. ಸಿದ್ಧರ ಆದೇಶವಾಗುವದೊಂದೇ ತಡ. ಎಲ್ಲವೂ ಅನುಪದವೇ ಸಿದ್ಧವಾಯಿತು. ವಿಶ್ವಕರ್ಮನ ರಚನೆ ರಮಣೀಯವಾಗಿತ್ತು. ಒಬ್ಬೊಬ್ಬ ರಾಜಕುವರಿಗೂ ಒಂದೊಂದು ಭವ್ಯ ಮಂದಿರ. ಸಕಲವಿಧ ಸಾಮಗ್ರೀ ಸುಂದರ. ಕೂಡುವ ಕುರ್ಚಿ, ಮಲಗುವ ಮಂಚ, ಮೇಲೆ ಸೊಳ್ಳೆಪರದೆ. ಇಂಬಿದ್ದಲ್ಲೆಲ ದಿಂಬುಗಳು. ಅಲ್ಲಲ್ಲಿ ಎಲ್ಲ ವಿಧ ಭೋಗ ಸಾಮಗ್ರಿಗಳು. ಈ ಸುಂದರ ಮಂದಿರಗಳ ಅಕ್ಕಪಕ್ಕದಲ್ಲಿ ರಮ್ಯವಾದ ಉಪವನಗಳು. ಹಿಂದೆ ಹೊಕ್ಕರಣೆ. ಮುಂದೆ ಪುಷ್ಕರಣಿ, ಕೊಳದ ತುಂಬ ಅರಳಿದ ತಾವರೆ, ನಗುವ ನೈದಿಲೆ, ತುಂಬಿಗಳ ಗುಂಜಾರವ, ಅರಸಂಚೆಗಳ ಕ್ರೇಂಕಾರವ, ಕಾರಂಡವಗಳ ಕಲರವ. ಸುತ್ತು - ಮುತ್ತು ಬಯಲು, ಎತ್ತ ನೋಡಿದತ್ತ ಹಸಿರು - ಕುಸುರು.

ಇಂಥ ಒಂದಕ್ಕಿಂತ ಒಂದು ಸುಂದರವಾದ ದಿವ್ಯ ಮಂದಿರಗಳಲ್ಲಿ ಆ ಸೌಭರಿಮುನಿಯ ಸುಂದರಿಯರು ಆನಂದದಿಂದ ಇರತೊಡಗಿದರು. ಮುನಿಯ ಅಪ್ಪಣೆಯಿಂದ ಆ ಎಲ್ಲ ಭವ್ಯ ಭವನಗಳಲ್ಲಿ ಆ ಮುನಿಮಾನಿನಿಯರಿಗೆ ಪರಮಾನಂದದ ನಿಧಿಯೇ ದೊರೆತಂತಾಗಿತ್ತು. ಯಾವುದಕ್ಕೂ ಕೊರತೆಯಿಲ್ಲ. ಬೇಕಾದ ಭಕ್ಷ್ಯ, ಭೋಜ್ಯ, ಪಾನ, ಮಾನ, ಬಯಸಿದ ಭೋಗಭಾಗ್ಯಗಳೆಲ್ಲವೂ ಅಲ್ಲಿ ಸದಾ ಸಿದ್ಧವಿರುತ್ತಿದ್ದವು. ಬಂದ ಅತಿಥಿ ಅಭ್ಯಾಗತರಿಗೆ ತಿಂದಷ್ಟು ಬಡಿಸಿ, ತೃಪ್ತಿಗೊಳಿಸಿ, ತಾವೂ ತಿಂದು ತೇಗಿ ಆನಂದದಿಂದ ಆ ನೃಪನಂದಿನಿಯರೆಲ್ಲರೂ ಆ ವಿಹಾರ ಭವನಗಳಲ್ಲಿ ನಲಿಯುತ್ತಿದ್ದರು.

## ವೈದಿಕನಿಗೆ ಕನ್ನೆಯಿತ್ತ ತಂದೆಯ ಚಿಂತೆ

ಇತ್ತ ಮಹಾರಾಜ ಮಾಂಧಾತನಿಗೆ ಕುಳಿತಲ್ಲಿಯೇ ಚಿಂತೆ. ನನ್ನ ಐವತ್ತು ಜನ ಕನ್ಯೆಯರೂ ಆ ಬಡಬ್ರಾಹ್ಮಣನ ಕೈಹಿಡಿದು ವೈದಿಕ ಮುತ್ತೈದೆಯರಾಗಿ ನಡೆದರು. ಅವನ ಐಶ್ವರ್ಯವೆಂದರೆ ಮುರಕ ಗುಡಿಸಲು, ಹರಕ ಕೃಷ್ಣಾಜಿನ. ಕಾಡಿನಲ್ಲಿಯ ಅವನ ಆ ಎಲೆ ಮನೆಯಲ್ಲಿ ನನ್ನ ಇಷ್ಟು ಜನ ರಾಜಕುಮಾರಿಯರು ಹೇಗಿರುವರು ! ಅವರೆಲ್ಲರೂ ನನ್ನ ಅರಮನೆಯಲ್ಲಿ ಬಿಸಿಲು ಮೋರೆಕಾಣದೆ, ಭೋಗ ಭಾಗ್ಯಗಳ ತೂಗುಮಂಚದ ಮೇಲೆಯೇ ಸುಖದಿಂದ ಆಡಿ ಬೆಳೆದವರು. ಆಶ್ರಮದ ಕಠೋರ ಜೀವನದ ಕಷ್ಟಕಾಠಿಣ್ಯಗಳಿಗೆ ಹೇಗೆ ಹೊಂದುಕೊಳ್ಳುವರು ! ಒಂದಲ್ಲ ಹತ್ತಲ್ಲ. ಸಾವಿರ ಯೋಚನೆಗಳು ಅವನ ತಲೆ ತಿಕ್ಕುತ್ತಿದ್ದವು.

ಒಂದು ದಿನ ಅವನ ಮಕ್ಕಳ ಪಾಡನ್ನು ನೋಡಿ ಬರಬೇಕೆಂದು ತಾನಾಗಿ ಅಳಿಯನ ಮನೆಗೆ ಹೊರಟ. ಮೊದಲು ನೋಡಿದ ಸೌಭರಿಯ ಆಶ್ರಮದ ಬಳಿಗೆ ಅವನು ಬಂದಾಗ ಮಾಂಧಾತನಿಗೆ ದಿಗ್ಭ್ರಮೆಯಾಯಿತು. ಹಳೆಯ ಎಲೆಮನೆಯ ತಾಣದಲ್ಲಿ ಸಂಗಮವರಿ ಶಿಲೆಯ ಬಂಗಲೆಗಳು ಸಾಲುಸಾಲಾಗಿ ಬೆಳಕಿನ ಮಾಲೆಗಳನ್ನು ಮುಡಿದು ಕಂಗೊಳಿಸುತ್ತಿದ್ದವು. ಅವುಗಳ ಆ ಬದಿ ರಮ್ಯ ಸರೋವರ, ಈ ಬದಿ ರಮಣೀಯ ಹೂದೋಟ. ಈ ನಂದನವನದ ಹಿನ್ನೆಲೆಯಲ್ಲಿ ಚಂದಿರ ಚುಂಬಿಯಾದ ಸುಂದರ ಮಂದಿರಗಳು. 'ನಾನೆಲ್ಲಿ ಬಂದೆ' ಎಂದು ಸಂದೇಹದಿಂದ ಹಿಂದೆ ಮುಂದೆ ನೋಡುವಷ್ಟರಲ್ಲಿ 'ತಂದೆ, ವಂದಿಸುತ್ತೇನೆ' ಎಂದು ಒಬ್ಬ ಮಗಳು ನಮಸ್ಕರಿಸಿ ತನ್ನ ಮನೆಗೆ ಮಾಂಧಾತನನ್ನು ಕರೆದೊಯ್ದಳು. ಅವಳ ಆ ಮನೆ, ಅಲ್ಲಿಯ ಭೋಗ ಭಾಗ್ಯ ಐಶ್ವರ್ಯ ಎಲ್ಲವನ್ನು ಕಂಡು ಮಹಾರಾಜನಿಗೆ ಪರಮಾನಂದವಾಯಿತು. ಸಂತಸದಿಂದ ಅವನು ತನ್ನ ತನುಜಳನ್ನು ತಬ್ಬಿಕೊಂಡು ಗದ್ಗದ ಕಂಠನಾಗಿ ''ಮಗಳೇ ಸುಖವಾಗಿರುವೆಯಾ ! ನಿನಗೇನಾದರೂ ಮನಸ್ತಾಪವಿದೆಯೇ ! ಮಹರ್ಷಿಯು ನಿನ್ನ ಮೇಲೆ ಪ್ರೇಮಮಾಡುವನೇ ! ತವರು ಮನೆಯ ನೆನಪಾಗುವದೇ !'' ಎಂದು ಮುಂತಾಗಿ ಕೇಳಿದನು. ಅದಕ್ಕೆ ಹಿಗ್ಗಿನ ಬುಗ್ಗೆಯಲ್ಲಿಯೇ ಬಿದ್ದಂತಾದ ಆ ಮಗಳು ಉತ್ತರಿಸಿದಳು. ''ಅಪ್ಪ, ನೀವೇ ನೋಡಿದ್ದೀರಲ್ಲ ನನ್ನ ಈ ಭವ್ಯ ಭವನವನ್ನು! ಇದೆಂಥ ರಮ್ಯ! ಇಲ್ಲಿಯೇ ಪಕ್ಕದಲ್ಲಿ ನನ್ನ ಉಪವನ ಎಷ್ಟು ಮನೋಹರವಿದೆ ! ಅಲ್ಲಿಯ ಹಕ್ಕಿಗಳ ಕಲಕಂಠದ ಇಂಚರವನ್ನು ಕೇಳುವದೇ ಒಂದು ಸೊಗಸು. ಇದೋ ಇತ್ತ ನೋಡು. ಈ ಕೊಳದ ತುಂಬ ತಾವರೆಗಳು.

ತಂದೆ, ನೀವಿಲ್ಲಿ ಬಂದ ಬಳಿಕ ನೀವು ನನ್ನೆಡೆಗೆ ನೋಡಿದಿರಾ! ಎಂತೆಂತಹ ಪಟ್ಟೆಪೀತಾಂಬರಗಳು! ನನ್ನ ಮೈತುಂಬ ಆಭರಣ. ಮನೆ ತುಂಬ ಮಿದು ಆಸನ. ಅಲ್ಲಿ ಮೆತ್ತಗಿನ ಹಾಸಿಗೆ, ಇಲ್ಲಿ ಸುಖಾಸಿಕೆ. ನಾನು ಮನಸ್ಸಿನಲ್ಲಿ ಮಾಡಿದ್ದೆಲ್ಲ ತಕ್ಷಣ ಸತ್ಯ ಸೃಷ್ಟಿಯಲ್ಲಿ ಇಳಿದು ಬಿಡುತ್ತದೆ. ಇಲ್ಲಿ ನನಗೆ ತಿನ್ನುವುದಕ್ಕೆ ಕಡಿಮೆಯಿಲ್ಲ. ಉಣ್ಣುವದಕ್ಕೆ ಕೊರತೆ ಇಲ್ಲ. ಯಾವದಕ್ಕೂ ನ್ಯೂನತೆಯಿಲ್ಲ. ಅಪ್ಪ! ಸುಖ ಸಮೃದ್ಧಿಯಿಂದ ತುಂಬಿ ತುಳುಕಿದೆ ನನ್ನ ದಾಂಪತ್ಯ ಜೀವನ.

ಆದರೆ ನನಗೆ ಒಂದು ಮಾತ್ರ ಚಿಂತೆ ಇದೆ. ನಮ್ಮ ಮನೆಯವರಿಗೆ ನಾನೆಂದರೆ ಭಾರೀ ಅಚ್ಚುಮೆಚ್ಚು. ಋಷಿಗಳಾದರೂ ಅವರಿಗೆ ಯಾವಾಗಲೂ ನನ್ನದೇ ಹುಚ್ಚು. ಅವರು ಸರ್ವದಾ ನನ್ನ ಸೆರಗುಹಿಡಿದುಕೊಂಡು ನನ್ನ ಹಿಂದೇ ತಿರುಗಾಡುತ್ತಿರುತ್ತಾರೆ. ಹೀಗಾಗಿ ನನ್ನ ಉಳಿದ ಸಹೋದರಿಯರಿಗೆ ಪತಿದರ್ಶನವೇ ಆಗದಂತಾಗಿದೆ. ಅಯ್ಯೋ! ಅವರೂ ನನ್ನಂತೆ ಹೆಣ್ಣು ಜೀವವಲ್ಲವೇ! ಅವರೂ ನನ್ನ ಪತಿಯನ್ನೇ ಕೈಹಿಡಿದಿದ್ದಾರೆ. ಅವರ ಭಾಗ್ಯವನ್ನು ನಾನೊಬ್ಬಳೇ ಕಸಿದುಕೊಂಡು ಭೋಗಿಸುತ್ತಲಿದ್ದೇನಲ್ಲ ಎಂಬ ಕೊರಗು ನನ್ನ ಕರುಳನ್ನು ಕೊರೆಯುತ್ತಲಿದೆ. ನನ್ನ ಸಹೋದರಿಯರು ದುಃಖವನ್ನು ನೆನೆದು ನನಗೂ ಬಹಳ ದುಃಖವಾಗುತ್ತದೆ. ಇದರಿಂದ ನನಗೇ ನಾಚಿಕೆಯಾಗಿ ಅವರಿಗೆ ಮೋರೆ ತೋರಿಸದಂತಾಗಿದೆ. ಅದಕ್ಕಾಗಿ ನಾನು ಅವರ ಭೇಟಿಗೇ ಹೋಗಿಲ್ಲ'' ಎಂದು ತಿಳಿಸಿದಳು. ಆಗ ಮಾಂಧಾತ ಮಹಾರಾಜನು ಅಲ್ಲಿಂದೆದ್ದು ಇನ್ನೊಬ್ಬ ಮಗಳ ಮನೆಗೆ ಹೋದನು ಅಲ್ಲಿಯೂ ಇದೇ ಭೋಗ ಭಾಗ್ಯ, ಭವನ, ಉಪವನ, ಶಯನ, ಆಸನ, ಆಮೋದ ಪ್ರಮೋದ, ವಿನೋದ ವಿಲಾಸ, ಪ್ರಕಾಶ, ಹಾಸ ಉಲ್ಲಾಸ, ಸಲ್ಲಾಪ, ಸರಸ, ಸುಖ, ಸಂಪದ, ಸರ್ವವೂ ಮೊದಲಿನ ಮಗಳ ಮನೆಯಲ್ಲಿದ್ದಂತೆಯೇ ಸಮೃದ್ಧವಾಗಿ ಇದ್ದಿತು. ಅವಳಂತೆ ಈ ಮಗಳೂ ತನ್ನ ಸಿರಿಸೌಭಾಗ್ಯದ ಸಂತಸವನ್ನು ಬಣ್ಣಿಸಿ ''ಅಪ್ಪ ಈ ಪುಣ್ಯ ಪುರುಷನನ್ನು ಕೈ ಹಿಡಿದ ನನ್ನ ಬಾಳು ಬಂಗಾರವಾಗಿದೆ. ನನ್ನ ಜೀವನದ ತುಂಬ ಸೊಗಸಿನ ಸುಗ್ಗಿ. ಹಿಗ್ಗಿನ ಬುಗ್ಗಿ. ಆದರೆ ಅಪ್ಪ! ನನಗೆ ಒಂದೇ ಒಂದು ಮನೋವ್ಯಥೆ ಉಂಟು. ನನ್ನ ಪತಿಯು ನನ್ನ ರೂಪಕ್ಕೆ ಮಾರುಹೋಗಿದ್ದಾರೆ. ಗುಣಕ್ಕೆ ಮುಗ್ಧರಾಗಿದ್ದಾರೆ. ನನ್ನನ್ನು ಬಿಟ್ಟು ಅವರು ಆಚೀಚೆ ಕದಲುವದಿಲ್ಲ. ಇದರಿಂದ ನನಗೇನೋ ನನ್ನ ನಲ್ಲನ ನಿತ್ಯ ಸಹವಾಸ, ಸಂತಸ ದೊರಕುತ್ತದೆ. ಆದರೆ ನನ್ನಂತೆ ಮಹರ್ಷಿಯನ್ನು ಮೆಚ್ಚಿ ಮದುವೆಯಾದ ಉಳಿದ ನನ್ನ ಸೋದರಿಯರ ಗತಿ ಏನೊ! ನನಗೆ ನಿತ್ಯ ಭೋಗ ಎಂದರೆ ಆ ನನ್ನ ಉಳಿದ ಸೋದರಿಯರಿಗೆ ನಿತ್ಯ ವಿಯೋಗ ಎಂದಾಗಲಿಲ್ಲವೇ! ನನ್ನ ಭಗಿನಿಯರ ನಿತ್ಯ ದುಃಖವನ್ನು ನೆನೆದು ನನಗೆ ಬಹಳ ವ್ಯಥೆಯಾಗುತ್ತದೆ. ಏನಾದರೂ ನನ್ನ 'ಇವರು' ನನ್ನ ನೆರಳು ಬಿಟ್ಟು ತೆರಳುವದಿಲ್ಲ. ಅಷ್ಟು ಮರುಳಾಗಿದ್ದಾರೆ ನನ್ನ ಸೊಗಸು ಸೌಂದರ್ಯಗಳಿಗೆ. ಆದರೆ ಪಾಪ! ಆ ನನ್ನ ಅಕ್ಕತಂಗಿಯರ ಪಾಡೇನು ? ಇದೇ ನನಗಿರುವ ದೊಡ್ಡ ದುಃಖ'' ಎಂದು ತಿಳಿಸಿದಳು. ಹೀಗೆ ರಾಜನು ತನ್ನ ಐವತ್ತು ಹೆಣ್ಣು ಮಕ್ಕಳ ಮನೆಗೆ ಹೊಕ್ಕು ಬಂದನು. ಎಲ್ಲ ಕಡೆಗೂ ಇದೇ ಸೊಲ್ಲು. ಎಲ್ಲರ ಮನೆಯಲ್ಲಿಯೂ ಸಿರಿ ತುಂಬಿತ್ತು. ಸಂತಸ ಸೂಸಿತ್ತು, ಸೌಭಾಗ್ಯ ಸೂರೆ ಆಗಿತ್ತು.

ಸೌಭರಿ ಋಷಿಯು ತನ್ನ ತಪಃಪ್ರಭಾವದಿಂದ ಎಲ್ಲ ಮಡದಿಯರಿಗೂ ಸಮೃದ್ಧವಾದ ಸುಖಸಂಪದಗಳನ್ನು ಒದಗಿಸಿದ್ದ. ಮತ್ತು ತಾನೂ ಯೋಗಶಕ್ತಿಯಿಂದ ಐವತ್ತು ರೂಪಗಳನ್ನು ತೆಗೆದುಕೊಂಡು ಆ ಎಲ್ಲ ರಾಜಕುಮಾರಿಯರ ಜೊತೆಗೆ ನಿತ್ಯ ನಿರಂತರವೂ ರಾಜಭೋಗಗಳನ್ನು ಅನುಭವಿಸುತ್ತಿದ್ದ. ರತಿ ವಿಲಾಸಗಳನ್ನು ಮಾಡುತ್ತಿದ್ದ. ಅಳಿಯನ ಈ ಪ್ರಿಯಾರಾಧನೆಯನ್ನು ಕೇಳಿ ಯಾವ ಮಾವನಿಗೆ ತಾನೆ ಆನಂದೋದ್ರೇಕವಾಗಲಿಕ್ಕಿಲ್ಲ!

ಮಾಂಧಾತ ಮಹಾರಾಜನು ತನ್ನ ಅಳಿಯನ ಈ ಲೋಕೋತ್ತರವಾದ ತಪಃಶಕ್ತಿ, ವಿಷಯಾಸಕ್ತಿ ಮತ್ತು ಭೋಗ ರಕ್ತಿಗಳನ್ನೂ ಮತ್ತು ತನ್ನ ಹೆಣ್ಣು ಮಕ್ಕಳನ್ನು ಸಂತೋಷಗೊಳಿಸಲಿಕ್ಕಾಗಿ ಅವನು ಮಾಡಿದ ಉಪಾಯಗಳನ್ನೂ ಕಣ್ಣಾರೆ ಕಂಡು ಸಂತಸಗೊಂಡ. ಆ ಸೌಭರಿ ಮುನಿಯು ಏಕಾಂತದಲ್ಲಿದ್ದಾಗ ಅವನ ಬಳಿಗೆ ಬಂದು ಪ್ರೀತಿಯಿಂದ ಪೂಜಿಸಿದ. ವಿನಯದಿಂದ ನುಡಿದ. ''ಪೂಜ್ಯರೇ, ತಾವು ದೊಡ್ಡವರು. ತಮ್ಮ ಸಿದ್ಧಿಯೂ ದೊಡ್ಡದು. ಇಂಥ ಪ್ರಭಾವವನ್ನು ನಾನು ಬೇರೆ ಎಲ್ಲಿಯೂ ಕಂಡಿಲ್ಲ. ಅತ್ಯದ್ಭುತವಾದ ತಮ್ಮ ಯೋಗಶಕ್ತಿಯ ಮಹಾಮಹಿಮೆಯನ್ನು ನಾನಿಂದು ಪ್ರತ್ಯಕ್ಷವಾಗಿ ಕಂಡೆ. ಇದೆಲ್ಲವೂ ಈವರೆಗೆ ತಾವು ಮಾಡಿದ ಭಗವದಾರಾಧನೆಯ ಫಲ. ತಮ್ಮ ತಪಃಸ್ಸಿನ ಫಲ'' ಎಂದು ನುಡಿದು ಆ ಸೌಭರಿ ಮುನಿಯನ್ನು ಸತ್ಕರಿಸಿದನು. ಮತ್ತೂ ಕೆಲವು ದಿನ ಅಳಿಯ ಮಕ್ಕಳೊಡನೆ ತನಗೆ ಬೇಕುಬೇಕಾದ ಸುಖೋಪಭೋಗಗಳನ್ನು ಅನುಭವಿಸಿ ಅನಂತರ ತನ್ನ ಊರಿಗೆ ಮರಳಿದನು.

ಕೆಲಕಾಲ ಕಳೆದ ಬಳಿಕ ಸೌಭರಿ ಋಷಿಗೆ ಆ ರಾಜಕುವರಿಯಲ್ಲಿ ನೂರು ಜನ ಗಂಡು ಮಕ್ಕಳು ಹುಟ್ಟಿದರು. ಮುನಿಯ ಪ್ರೇಮದ ಪ್ರವಾಹವು ನೂರು ಕವಲುಗಳಲ್ಲಿ ಹೊಮ್ಮಿ ಹರಿಯಿತು. ಆ ಶತಪುತ್ರರ ಲಾಲನೆ ಪಾಲನೆ, ಆಟ, ಪಾಟ, ಸ್ನೇಹ ಸಂಪರ್ಕಗಳಿಂದ ಮಮತೆಯ ಬಂಧನವು ಇನ್ನೂ ಬಿಗಿಯಾಯಿತು. ಅವರ ಮೇಲಿನ ಮೋಹ ಮಮತೆಯಿಂದ ನೂರು ಬಗೆಯ ಚಿಂತೆಗಳು ಅವನ ಅಂತಃಕರಣವನ್ನು ಕೆಣಕ-ತೊಡಗಿದವು. ''ಈ ಕೂಸಿಗೆ ಕಾಲು ಬಂದೀತೇ ? ಆ ಮಗುವಿಗೆ ಬಾಯಿ ಬರಬಹುದೇ ! ಈ ಮಕ್ಕಳು ಸರಿಯಾಗಿ ಬೆಳೆಯಬಹುದೇ ? ಇವರ ಮದುವೆಯಾಗಬಹುದೇ ? ನನ್ನ ಕಣ್ಣು ಸೊಸೆಯಂದಿರನ್ನು ಕಾಣಬಹುದೇ ? ಮೊಮ್ಮಕ್ಕಳನ್ನು ಆಡಿಸುವ ಭಾಗ್ಯ ನನಗೆ ಉಂಟೇ ! ಆ ಮೊಮ್ಮಕ್ಕಳಿಗೆ ಮಕ್ಕಳಾಗಿ ಅದನ್ನೂ ಕಾಣುವ ಭಾಗ್ಯ ನನಗೆ ಬರಬಹುದೇ ?'' ಎಂದು ಮುಂತಾಗಿ ಅಸಂಖ್ಯ ಆಶೆ ಆಕಾಂಕ್ಷೆಗಳೂ ಹೊಸ ಹೊಸ ಮನೋರಥಗಳೂ ದಿನಕೊಮ್ಮೆ ಬೆಳೆಯುತ್ತಿದ್ದವು. ಕ್ಷಣಕ್ಕೊಮ್ಮೆ ಚಿಗಿಯುತ್ತಿದ್ದವು.

## ರಾಗದಿಂದ ವಿರಾಗಕ್ಕೆ

ಕೊನೆಗೊಮ್ಮೆ ಆ ಸೌಭರಿ ಋಷಿಗೆ ವೈರಾಗ್ಯ ಉತ್ಪನ್ನವಾಯಿತು.

''ಅಬ್ಬಾ ನಾನೆಂಥ ಮೂಢ ! ಇದೇನು ನನ್ನ ಮೋಹ ! ಈ ಮನೋರಥಗಳಿಗೆ ಕೊನೆ ಉಂಟೇ ? ಲಕ್ಷಕೋಟಿ ವರ್ಷಗಳಾದರೂ ಮಾನವನ ಹಗಲುಗನಸುಗಳು ಕೊನೆಗೊಳ್ಳುವದಿಲ್ಲ. ಆ ಮನೋರಥಗಳು ಪೂರ್ಣವಾದಂತೆ ಹೊಸ ಹೊಸ

ಮನೋರಥಗಳು ಹೊಸ ಹೊಸ ಆಶೆ ಆಕಾಂಕ್ಷೆಗಳು ಮತ್ತೆ ಹುಟ್ಟುತ್ತಲೇ ಹೋಗುತ್ತವೆ. ನಾನು ಬಯಸಿದಂತೆ ಮಲಗಿದ ಮಕ್ಕಳಿಗೆ ಕೂಡಲಿಕ್ಕೆ ಬಂದು, ಕುಳಿತ ಕೂಸುಗಳು ಕಾಲು ಬಂದು ನಡೆದಾಡಿದವು. ಕಾಲು ಬಂದ ಮಕ್ಕಳು ಪ್ರಾಯದವರಾಗಿ ಮದುವೆಯಾದರು. ಸೊಸೆಯಂದಿರನ್ನು ಕಂಡದ್ದಾಯಿತು. ಮೊಮ್ಮಕ್ಕಳನ್ನು ನೋಡಿದ್ದಾಯಿತು. ಈಗ ಆ ಮೊಮ್ಮಕ್ಕಳ ಮಕ್ಕಳನ್ನು ನೋಡಬೇಕೆಂದು ಹಂಬಲ ಹೃದಯದಲ್ಲಿ ಮೂಡಿದೆ. ಅದೂ ಪೂರ್ಣವಾದ ಬಳಿಕ ಮತ್ತೊಂದು ಮನೋರಥವು ಉದಿಸುವದು. ಅದೂ ಸಿದ್ಧಿಸಿದರೆ ಮಗದೊಂದು ಮತ್ತೊಂದು ಮನೋರಥವು ಉದಿಸುವದು. ಅದೂ ಸಿದ್ಧಿಸಿದರೆ ಮಗದೊಂದು ಚಿಗಿತು ಬರುವದು. ಮನೋರಥಗಳನ್ನು ನಿಯಮಿಸುವವರಾರು ! ಈ ಹಗಲುಗನಸುಗಳ ಹುಟ್ಟನ್ನು ತಡೆಗಟ್ಟುವವರಾರು ! ಸಾಯುವವರೆಗೂ ಇದಕ್ಕೆ ಸಮಾಪ್ತಿ ಇಲ್ಲ. ಇದು ನನಗೆ ಇಂದು ತಿಳಿದಂತಾಯಿತು. ಈ ಮನೋರಥಗಳ ಬೆನ್ನು ಹತ್ತಿ ಹೊರಟವನ ಚಿತ್ತವು ಪರಮಾರ್ಥದತ್ತ ಎಂದಿಗೂ ಒಲಿಯುವದಿಲ್ಲ.

ಹಿಂದೆ ನಾನು ತಪಃ ಸಮಾಧಿಗಾಗಿ ನೀರಿನಲ್ಲಿ ವಾಸಮಾಡಿದಾಗ ಒಂದು ಮೀನಿನೊಡನೆ ಮೈತ್ರಿಯನ್ನು ಬೆಳಿಸಿದೆ. ಆ ಮೀನಿನ ಸಂಗವೇ ಇಷ್ಟೆಲ್ಲ ಅನರ್ಥಕ್ಕೆ ಕಾರಣವಾಯಿತು. ಅಂದಿನಿಂದಲೇ ನನ್ನ ಆತ್ಮಪಾತಕ್ಕೆ ಪ್ರಾರಂಭವಾಯಿತು.

ಆ ಮೀನಿನ ಬಾಳು ಬಳಗವನ್ನು ಕಂಡು ನಾನೂ ಸಂಸಾರಕೆ ಇಳಿದೆ. ಐವತ್ತು ನೃಪ ನಂದಿನಿಯರ ಕೊರಳಿಗೆ ತಾಳಿ ಕಟ್ಟಿದೆ. ಅದರಿಂದ ವಂಶ ಹಬ್ಬಿತು. ಸಂಖ್ಯೆ ಶತ ಸಂಖ್ಯೆಯಲ್ಲಿ ಬೆಳೆಯಿತು. ಆ ಶತ ಸಂಖ್ಯೆಗೆ ಗುಣಿಸಿ ಮತ್ತೆ ಮುಂದೆ ಮೊಮ್ಮಕ್ಕಳು ಬಂದರು. ಹೀಗೆ ಈ ಕುಲವು ಕವಲೊಡೆದು ಕೊನರುತ್ತ ನಡೆದಂತೆ ನಮ್ಮ ಚಿಂತೆ ಚಿಗಿತವು. ದುಃಖ ಕಾರಣಗಳೂ ಬಲಿತವು, ಮಮತೆಯ ಸೆಳೆತದಿಂದ ಚಿತ್ತದ ಶಾಂತಿಯು ಕದಡಿತು. ನನ್ನ ತಪಸ್ಸು ಕರಗಿತು. ನೀರಿನಲ್ಲಿ ಕುಳಿತು ನಾನು ಬಹುಕಾಲ ಮಾಡಿದ ತಪಸ್ಸಿನ ಪುಣ್ಯದ ಫಲವೆಲ್ಲವೂ ಒಂದು ಕ್ಷಣ ಮಾಡಿದ ಈ ಮೀನಿನ ಸಹವಾಸದಿಂದಾಗಿ ಅದೇ ನೀರಿನಲ್ಲಿ ತೊಳೆದಂತಾಯಿತು. ಅದಕ್ಕೇ ಹಿರಿಯರು ಹೇಳುವರು ''ಸಂಗವನ್ನು ಬಿಡಬೇಕು, ನರನು ನಿಸ್ಸಂಗನಾಗಬೇಕು'' ಎಂದು.

**ನಿಸ್ಸಂಗತಾ ಮುಕ್ತಿ ಪದಂ ಯತೀನಾಂ ।**
**ಸಂಗಾದಶೇಷಾಃ ಪ್ರಭವಂತಿ ದೋಷಾಃ ॥**
**ಆರೂಢಯೋಗೊ ವಿನಿಪಾತ್ಯತೇಽ ಧಃ ।**
**ಸಂಗೇನ ಯೋಗೀ ಕಿಮುತಾಲ್ಪ ಸಿದ್ಧಿಃ ॥**

ಇಂದ್ರಿಯಗಳನ್ನು ಗೆದ್ದು ಸರ್ವ ಸಂಗವನ್ನು ಪರಿತ್ಯಾಗ ಮಾಡುವದೇ ಮೋಕ್ಷಕ್ಕೆ ಉಪಾಯ. ದೋಷಗಳೆಲ್ಲವೂ ಸಂಗತಿ ಸಹವಾಸದಿಂದಲೇ ಬರುವವು. ಸಂಗದಿಂದ ಯೋಗಾರೂಢರಾದ ಯೋಗಿಗಳೇ ಕೆಳಗುರುಳಿ ಬೀಳುವಾಗ ಸಿದ್ಧಿಯ ಸುದ್ದಿಯೇ ಇಲ್ಲದ ಅಲ್ಪರ ಪಾಡೇನು !

ನಾನು ಇನ್ನು ಮೇಲೆ ಎಚ್ಚರಾಗುವೆ. ಮಮತೆಯ ಮೊಸಳೆ ಈವರೆಗೆ ನನ್ನನ್ನು ಹಿಡಿದಿತ್ತು. ಸಂಗದಿಂದ ನನ್ನ ತಪೋಭಂಗವಾಗಿತ್ತು. ಇನ್ನು ಇಂಥ ತಪ್ಪು ಮಾಡುವದಿಲ್ಲ. ಎಲ್ಲ ಈಶ್ವರರನ್ನೂ ನಿಯಮಿಸತಕ್ಕ ಆ ಶ್ರೀ ವಿಷ್ಣುವನ್ನೇ ಶರಣು ಹೋಗುವೆ. ತಪಸ್ಸಿನಿಂದ ಆರಾಧಿಸುವೆ. ಸರ್ವತ್ರ ವ್ಯಾಪ್ತನಾದ ಆ ಅನಂತನಲ್ಲಿ ನನ್ನ ಚಿತ್ತವು ನಿತ್ಯನಿರಂತರವೂ ನೆಲಿಸಲಿ. ಸರ್ವೇಶ್ವರನಾದ ಆ ಶ್ರೀ ಹರಿಗಿಂತ ಹಿರಿದಾದ ದೇವರಿಲ್ಲ. ಅವನಿಗೆ ಸಮನಾದ ದೇವರೂ ಇಲ್ಲ. ಅವನೇ ದೇವರಿಗೂ ದೇವ. ಗುರುಗಳ ಗುರು, ಒಡೆಯರ ಒಡೆಯ. ಅವನನ್ನೇ ಆಶ್ರಯಿಸುತ್ತೇನೆ''. ಎಂದು ಆಲೋಚಿಸಿ ನಿರ್ಧರಿಸಿ ಆ ಸೌಭರಿ ಋಷಿಯು ವಿರಕ್ತನಾಗಿ ಮಕ್ಕಳು, ಹಾಸಿಗೆ, ಹೊದಿಕೆ, ಹೊನ್ನು, ಹಣ ಎಲ್ಲವನ್ನು ತೊರೆದು ಕಾಡಿಗೆ ನಡೆದ. ಅವನಂತೆ ವಿಷಯ ಸುಖದಲ್ಲಿ ವೈರಾಗ್ಯ ಮೂಡಿದ ಅವನ ಮಡದಿಯರೆಲ್ಲರೂ ಅವನ ಜೊತೆಗೇ ತಾವೂ ತಪಸ್ಸಿಗೆ ತೆರಳಿದರು. ಅವರಿಗೂ ಜೀವನದಲ್ಲಿ ಜುಗುಪ್ಸೆ ಹುಟ್ಟಿತ್ತು.

ನಿರ್ಜನವಾದ ಪುಣ್ಯಾರಣ್ಯದಲ್ಲಿ ವಾನಪ್ರಸ್ಥಾಶ್ರಮಿಗಳು ಮಾಡಬೇಕಾದ ಎಲ್ಲ ಧರ್ಮಕರ್ಮಗಳನ್ನು ಮಡದಿಯರೊಂದಿಗೆ ಮಾಡಿ ತಪಂಗೈದು ಎಲ್ಲ ಪಾಪಗಳನ್ನು ಕಳೆದುಕೊಂಡನು. ಅವನ ಅಂತಃಕರಣವು ನಿರ್ಮಲವಾಯಿತು. ಭಕ್ತಿ ಪಕ್ವವಾಯಿತು. ಕೊನೆಗೆ ಸೌಭರಿಯು ಸರ್ವಸಂಗ ಪರಿತ್ಯಾಗ ಮಾಡಿ ಸನ್ಯಾಸಾಶ್ರಮವನ್ನು ಸ್ವೀಕರಿಸಿದ. ಆ ಪರಮಾತ್ಮನಲ್ಲಿ ಸರ್ವ ಸಮರ್ಪಣೆಗೈದು ಅವನು ನಿರಂತರ ಧ್ಯಾನ ಜಪ, ತಪ, ಆರಾಧನೆಗಳಿಂದ ಜಗದೀಶ್ವರನ ಪರಮ ಪ್ರಸಾದವನ್ನು ಹೊಂದಿ ಕೊನೆಗೆ ಜನನ ಮರಣಾದಿ ವಿಕಾರರಹಿತವಾದ ಶಾಶ್ವತ ಸ್ಥಾನವನ್ನು ಪಡೆದ. ಈ ಸೌಭರಿ ಚರಿತ್ರವನ್ನು ಹೇಳಿ ಕೇಳಿದವರಿಗೆ ಆರು ಜನ್ಮದಲ್ಲಿ ದುಷ್ಟ ಮಕ್ಕಳು ಜನಿಸುವುದಿಲ್ಲ. ಅಪದ್ಧ ಧರ್ಮದಲ್ಲಿ ಅಭಿರುಚಿ ಹುಟ್ಟುವದಿಲ್ಲ. ನಡೆ-ನುಡಿಗಳಲ್ಲಿ ದಾರಿ ತಪ್ಪುವದಿಲ್ಲ. ದುರ್ವ್ಯಾಪಾರದಲ್ಲಿ ಮನಸ್ಸು ಎಳೆಯುವುದಿಲ್ಲ.

*ಶ್ರೀ ವಿಷ್ಣು ಮಹಾಪುರಣದಲ್ಲಿ ಚತುರ್ಥಾಂಶದಲ್ಲಿ ಎರಡನೇ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೩

ಮಾಂಧಾತ ಮಹಾರಾಜನಿಗೆ ಅಂಬರೀಷ ಎಂಬ ಮಗನು ಹುಟ್ಟಿದನು. ಅಂಬರೀಷನಿಂದ ಮುಂದೆ ಆ ವಂಶದಲ್ಲಿ ಯುವನಾಶ್ವ, ಯುವನಾಶ್ವನಿಂದ ಹಾರೀತನು ಜನಿಸಿದನು. ಈ ಹಾರೀತನಿಂದ ಆಂಗಿರಸ ಗೋತ್ರದ ಹಾರೀತಗಣವು ಪ್ರವೃತ್ತವಾಯಿತು.

### ಗಂಧರ್ವರಿಂದ ಗಂಡಾಂತರ

ಮಾಂಧಾತ ಮಹಾರಾಜನ ಮತ್ತೊಬ್ಬ ಮಗನಾದ ಪುರುಕುತ್ಸನು ಮಹಾವೀರ ವರೇಣ್ಯನಾಗಿದ್ದನು. ಹಿಂದೆ ರಸಾತಲ ಲೋಕದಲ್ಲಿ ಮೌನೇಯ ಎಂಬ ಗಂಧರ್ವರಿದ್ದರು. ಅವರ ಸಂಖ್ಯೆ ಆರು ಕೋಟಿ. ಮಹಾ ಬಲಿಷ್ಠರಾದ ಅವರು ಆ ಲೋಕದಲ್ಲಿ ನೆಲೆ ನಿಂತು ನಾಗಪತಿಗಳನ್ನೆಲ್ಲ ಸೋಲಿಸಿದರು. ಅವರ ಅಧಿಕಾರವನ್ನು ಕಸಿದುಕೊಂಡರು. ಅವುಗಳ ಹೆಡೆಯ ಮೇಲಿನ ರತ್ನಗಳನ್ನು ಕಿತ್ತುಕೊಂಡರು. ಗಂಧರ್ವರ ಶೌರ್ಯದಿಂದ ಸೋತುಹೋದ ಸರ್ಪಕುಲದ ಧುರೀಣರೆಲ್ಲರು ದೇವತೆಗಳಿಗೆಲ್ಲ ಒಡೆಯನಾದ ಕಡಲಿನಲ್ಲಿ ಪವಡಿಸಿದ ಆ ಪರಮಾತ್ಮನಿಗೆ ಶರಣುಹೋದರು. ನನ್ನನ್ನು ಹಾಡಿ ಪಾಡುತ್ತಲಿರುವ ಹಾವುಗಳ ಹೊಗಳಿಕೆಯನ್ನು ಕೇಳಿ ಹಾವಿನ ಹಾಸಿಗೆಯ ಮೇಲೆ ಹಾಯಾಗಿ ಮಲಗಿದ ಹರಿಯು ನಿದ್ದೆ ತಿಳಿದು ಎದ್ದು ಕುಳಿತನು. ಮತ್ತು ತನ್ನ ತಾವರೆಗಣ್ಣಿನ ಪಕಳೆತೆರೆದು ಆ ನಾಗ ಧುರೀಣರ ಕಡೆಗೆ ನೋಡಿದನು. ಆಗ ನಾಗನಾಯಕರೆಲ್ಲರೂ ನಾರಾಯಣನಿಗೆ ನಮಸ್ಕಾರ ಮಾಡಿ ಗಂಧರ್ವರಿಂದ ತಮಗೆ ಒದಗಿಬಂದ ಗಂಡಾಂತರವನ್ನು ಪರಮಾತ್ಮನಿಗೆ ನಿವೇದನೆ ಮಾಡಿ ಅದರಿಂದ ತಮ್ಮನ್ನು ರಕ್ಷಿಸಬೇಕೆಂದು ಬಿನ್ನವಿಸಿಗೊಂಡರು. ಅದನ್ನು ಕೇಳಿ ಹುಟ್ಟು ಸಾವುಗಳನ್ನು ಮೀರಿದ ಶ್ರೀ ಹರಿಯು ಆ ಸರ್ಪ ಸಂಘದ ಮುಂದಾಳುಗಳಿಗೆ ಇಂತು ಆಶ್ವಾಸನೆ ಇತ್ತನು. ''ಭೂತಳದಲ್ಲಿ ಮಾಂಧಾತನ ಮಗನಾದ ಪುರುಕುತ್ಸನು ರಾಜ್ಯವನ್ನು ಆಳುತ್ತಿದ್ದಾನೆ. ನಾನು ಅವನಲ್ಲಿ ಆವಿಷ್ಟನಾಗಿ ಈ ದುಷ್ಟ ಗಂಧರ್ವರನ್ನು ವಧಿಸುತ್ತೇನೆ''. ಎಂಬ ಹರಿಯ ನುಡಿಯನ್ನು ಕೇಳಿ ಹಾವಿನ ಕುಲದ ಹಿರಿಯರೆಲ್ಲರು ಹಿಗ್ಗಿ ಆ ಭಗವಂತನಿಗೆ ಮತ್ತೊಮ್ಮೆ ಬಗ್ಗಿ ವಂದನೆಗೈದು ತಮ್ಮ ಲೋಕಕ್ಕೆ ಮರಳಿದರು.

### ಹೆಣ್ಣು ಕೊಟ್ಟ ಪುಣ್ಯದಿಂದ ಹಾವುಗಳು ಬದುಕಿದವು

ನಾಗರಾಜನು ತನ್ನ ತಂಗಿಯಾದ ನರ್ಮದೆಯನ್ನು ಪುರಕುತ್ಸ ರಾಜನಿಗೆ ಈ ಮೊದಲೇ ಕೊಟ್ಟು ಮದುವೆ ಮಾಡಿದ್ದನು. ಈಗ ಅವನು ತನ್ನ ಸಹೋದರಿಗೆ ಆ ಪುರಕುತ್ಸ ರಾಜನನ್ನು ಪಾತಾಳಕ್ಕೆ ಕರೆದುಕೊಂಡು ಬರಲಿಕ್ಕೆ ತಿಳಿಸಿದನು. ಅದರಂತೇ ನಾಗಕನ್ಯೆ ಆದ ನರ್ಮದೆಯು ತನ್ನ ಕಾಂತನನ್ನು ಕರೆದುಕೊಂಡು ಈ ರಸಾತಳಕ್ಕೆ ಬಂದಳು. ಅಲ್ಲಿ ಗಂಧರ್ವರಿಗೂ ನಾಗಗಳಿಗೂ ಘೋರ ಕದನವು ಮೊದಲಿಟ್ಟಿತು. ಪುರಕುತ್ಸನು ಸರ್ಪಸೇನೆಯ ಬೆಂಬಲಕ್ಕೆ ನಿಂತುಕೊಂಡ. ಮೊದಲೇ ಮಹಾವೀರ ಪುರುಕುತ್ಸ. ಈಗಂತೂ ಅವನಲ್ಲಿ ಶ್ರೀ ವಿಷ್ಣುವಿನ ಆವೇಶವು ಕಾಣಿಸಿಕೊಂಡಿತ್ತು. ಅಂದ ಬಳಿಕ ಕೇಳುವದೇನು ! ಒಂದೊಂದೇ ಹೊಡೆತದಿಂದ

ಆರು ಕೋಟಿ ಗಂಧರ್ವರನ್ನೆಲ್ಲ ಆ ಮಾಂಧಾತನ ಮಗನು ಕೊಂದು ಹಾಕಿದ. ಗೆಲುವಿನ ಬಾವುಟವನ್ನು ಎತ್ತಿ ಮೆರಿಸಿ ಮತ್ತೆ ತನ್ನ ರಾಜಧಾನಿಗೆ ಮರಳಿದ. ಸರ್ಪಕುಲದ ಸಕಲ ಸದಸ್ಯರೂ ''ಈ ಗಂಧರ್ವರ ಗೆಲುವಿಗೆ ತಮ್ಮ ಕುಲ ಕನ್ಯೆಯಾದ ನರ್ಮದೆಯ ಒಲವು ಚೆಲುವುಗಳೇ ಕಾರಣ. ಪುರುಕುತ್ಸನನ್ನು ರಸಾತಳಕ್ಕೆ ಕರೆತಂದು ಗಂಧರ್ವರನ್ನು ಕೊಲ್ಲಿಸಿದವಳೇ ಅವಳು.'' ಎಂದು ಆನಂದದಿಂದ ಅವಳನ್ನು ಅಭಿನಂದಿಸಿದರು. ಮತ್ತೂ ''ನರ್ಮದೆಯನ್ನು ನೆನೆದವರಿಗೆ ಅಥವಾ ಅವಳ ಹೆಸರನ್ನು ಹೇಳಿದವರಿಗೆ ಎಂದೂ ಯಾವ ಹಾವೂ ಕಚ್ಚಲಾರದು. ಕದಾಚಿತ್ ಕಚ್ಚಿದರೂ ವಿಷ ಏರಲಾರದು, ಏನೂ ಬಾಧೆ ಆಗಲಾರದು'' ಎಂದು ಆ ನರ್ಮದೆಗೆ ವರವನ್ನು ಕೊಟ್ಟರು.

## ನರ್ಮದೆಯನ್ನು ನೆನೆದರೆ ನಂಜಿನ ಅಂಜಿಕೆಯಿಲ್ಲ

**''ನರ್ಮದಾಯೈ ನಮಃ ಪ್ರಾತರ್ನರ್ಮದಾಯೈ ನಮೋ ನಿಶಿ।**
**ನಮೋಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷಸರ್ಪತಃ॥**

ಎಂಬ ಮಂತ್ರವನ್ನು ಪಠಿಸುತ್ತ ಹಗಲು ಅಥವಾ ಇರುಳು ಎಲ್ಲಿಯೇ ತಿರುಗಾಡಿದರೂ, ಕತ್ತಲೆಯನ್ನು ಕಾಲಾಡಿಸಿದರೂ ಹಾವು ಕಚ್ಚದು. ಈ ಮಂತ್ರ ಹೇಳುತ್ತ ಊಟ ಮಾಡಿದರೆ ಅಡಿಗೆಯಲ್ಲಿ ವಿಷ ಕೂಡಿದರೂ ಅದು ಬಾಧಿಸುವದಿಲ್ಲ. ಈ ಪುರುಕುತ್ಸ ಮಹಾರಾಜನಿಗೆ ಎಂದಿಗೂ ಸಂತತಿ ವಿಚ್ಛೇದವಾಗುವದಿಲ್ಲ'' ಎಂದು ಪನ್ನಗ ಪತಿಗಳು ಮತ್ತೆ ವರವನ್ನಿತ್ತರು. ಪುರುಕುತ್ಸನಿಗೆ ನರ್ಮದೆಯಿಂದ ತ್ರಸದಸ್ಯು ಎಂಬ ಪುತ್ರನು ಉತ್ಪನ್ನನಾದ. ಅವನ ಮಗ ಅನರಣ್ಯ. ಅವನನ್ನು ರಾವಣನು ದಿಗ್ವಿಜಯಕ್ಕೆ ಹೊರಟಾಗ ಸಂಹರಿಸಿದನು. ಅನರಣ್ಯನಿಂದ ಮುಂದೆ ಪೃಷದಶ್ವ, ಹರ್ಯಶ್ವ, ಹಸ್ತ, ಸುಮನ, ತ್ರಿಧನ್ವ, ತ್ರೈಯ್ಯಾರುಣಿ, ತ್ರಿಶಂಕು ಮೊದಲಾದ ರಾಜರು ಆಗಿ ಆಳಿಹೋದರು.

## ಹುಚ್ಚು ಹಂಬಲದಿಂದ ಹೊಲೆಯನಾದ ತ್ರಿಶಂಕು

ಈ ತ್ರಿಶಂಕುವಿಗೆ ಸತ್ಯವ್ರತ ಎಂದು ಬೇರೊಂದು ಹೆಸರಿದ್ದಿತು. ಈ ತ್ರಿಶಂಕುವಿಗೆ ಒಂದು ಹಂಬಲ, 'ಈ ನರದೇಹದಿಂದಲೇ ಸ್ವರ್ಗ ಲೋಕಕ್ಕೆ ಏರಬೇಕು' ಎಂದು. ಅದಕ್ಕಾಗಿ ಒಂದು ಯಜ್ಞ ಮಾಡಿಸಬೇಕೆಂದು ವಶಿಷ್ಠರಲ್ಲಿ ಕೇಳಿಕೊಂಡ ''ಅದಾಗದು'' ವಶಿಷ್ಠರು ಖಂಡತುಂಡಾಗಿ ನುಡಿದರು. ''ಸಾಯುವವರೆಗೆ ಸ್ವರ್ಗವಿಲ್ಲ. ಮಾನವ ದೇಹದಿಂದ ದೇವ ಭೋಗವಿಲ್ಲ.'' ಇಷ್ಟಾದರೂ ತ್ರಿಶಂಕುವಿನ ಸ್ವರ್ಗಚ್ಛಲ ದೂರಾಗಲಿಲ್ಲ. ಅವನು ವಶಿಷ್ಠರ ಮಕ್ಕಳ ಹತ್ತಿರ ಬಂದು ಅದೇ ಮಾತನ್ನು ಕೇಳಿದ. ತಂದೆ ವಶಿಷ್ಠರ ಮಾತನ್ನು ಮೀರಿ ನಡೆದ ಆ ತ್ರಿಶಂಕುವಿಗೆ ಆ ವಸಿಷ್ಠಪುತ್ರರು ''ನೀನು ಗುರುದ್ರೋಹಿ, ಚಂಡಾಲನಾಗು'' ಎಂದು ಶಾಪವಿತ್ತರು. ಸ್ವರ್ಗದ ಹಂಬಲ ಹೊತ್ತ ಆ ರಾಜಕುಮಾರನು ಹೊಸ ಹರೆಯದಲ್ಲಿಯೇ ಹೊಲೆಯನಾದ.

ದೊರೆಯ ದೋಷದಿಂದ ದೇಶದಲ್ಲಿ ದೊಡ್ಡ ಬರ ಬಿತ್ತು. ಅದೂ ಕೂಡ ಹನ್ನೆರಡುವರ್ಷಗಳವರೆಗೆ. ಈ ಕ್ಷಾಮಕಾಲದಲ್ಲಿ ವಿಶ್ವಾಮಿತ್ರ ಮುನಿಗಳು ತಪಂಗೈಯಲು ಕಾಡಿಗೆ ಹೋಗಿದ್ದರು. ಅವರ ಮನೆಯಲ್ಲಿ ಮಡದಿ ಮಕ್ಕಳು, ಮಳೆ, ಬೆಳೆ,

ಇಲ್ಲದ್ದರಿಂದ ಆ ಋಷಿ ಕುಟುಂಬವನ್ನು ಪೋಷಣೆ ಮಾಡಬೇಕೆಂದು ಸಂಕಲ್ಪಿಸಿದ. ಅವರು ಹೊಲೆಯನಾದ ತನ್ನ ಕೈಯಿಂದ ಕೊಟ್ಟದ್ದನ್ನು ಮುಟ್ಟಲಿಕ್ಕಿಲ್ಲ ಎಂಬ ಶಂಕೆಯಿಂದ ಗಂಗೆಯ ದಂಡೆಯಲ್ಲಿದ್ದ ಒಂದು ಆಲದ ಮರದ ಮೇಲೆ ಮೃಗಗಳ ಮಾಂಸವನ್ನು ತಂದು ದಿನಾಲು ಕಟ್ಟುತ್ತಿದ್ದನು.

ವಿಶ್ವಾಮಿತ್ರ ಕುಟುಂಬದವರು ಅದನ್ನು ಅನುದಿನವೂ ತಿಂದು ಬದುಕಿ ಬೆಳೆದರು. ಮುಂದೆ ಕೆಲದಿನಗಳ ನಂತರ ಕ್ಷಾಮಮುಗಿದು ಎಲ್ಲ ಕಡೆ ಮಳೆಯಿಂದ ಕ್ಷೇಮವಾದ ಬಳಿಕ ವಿಶ್ವಾಮಿತ್ರರು ತಪಸ್ಸಿನಿಂದ ಮನೆಗೆ ಮರಳಿದರು. ಕ್ಷಾಮದಲ್ಲಿ ಅವರ ಮನೆ ಜನರೆಲ್ಲರೂ ಸುಖದಿಂದ ಇದ್ದು ಯಾರೂ ಬರಗಾಲಕ್ಕೆ ಬಲಿಯಾಗದೇ ಸುರಕ್ಷಿತವಾಗಿ ಬದುಕಿ ಉಳಿದಿದ್ದರು. ಇದೆಲ್ಲವೂ ತ್ರಿಶಂಕುವಿನ ಪುಣ್ಯ. ತಪೋನುಷ್ಠಾನದಿಂದ ಮರಳಿ ಮನೆಗೆ ಬಂದ ವಿಶ್ವಾಮಿತ್ರರು ತ್ರಿಶಂಕು ತನ್ನ ಕುಟುಂಬಕ್ಕೆ ಮಾಡಿದ ಉಪಕಾರವನ್ನು ನೆನೆದು ಅವನನ್ನು ಅವನ ಅಪೇಕ್ಷೆಯಂತೆ ತಮ್ಮ ತಪೋಬಲದಿಂದ ದೇಹಸಹಿತವಾಗಿಯೇ ಅಂತರಿಕ್ಷಲೋಕಕ್ಕೆ ಏರಿಸಿದರು. ಆ ತ್ರಿಶಂಕುವಿನಿಂದ ಹರಿಶ್ಚಂದ್ರ, ರೋಹಿತಾಶ್ವ, ಹರಿತ, ಚಂಚು, ಆ ಚಂಚುವಿನಿಂದ ವಿಜಯ, ವಸುದೇವ, ವಿಜಯನಿಂದ ಮುಂದೆ ರುರು, ವೃಕ, ಬಾಹು ಮುಂತಾದ ರಾಜರು ಜನಿಸಿದರು.

## ಸ್ತ್ರೀ ಬುದ್ಧಿಃ ಪ್ರಳಯಾಂತಿಕಾ

ಬಾಹುರಾಜನು ಹೈಹಯ, ತಾಲಜಂಘ ಮುಂತಾದ ವೈರಿಗಳಿಂದ ಸೋತು ಮಡದಿಯರೊಂದಿಗೆ ಅಡವಿ ಸೇರಿದನು. ಆಗ ಅವನ ಪಟ್ಟದರಾಣಿಯು ತುಂಬು ಗರ್ಭಿಣಿ. ಅದನ್ನು ಸಹಿಸದ ಅವಳ ಸವತಿಯರು ಅವಳ ಹೊಟ್ಟೆಯಲ್ಲಿಯ ಪಿಂಡವು ಬೆಳೆಯದೆ ಸಲ್ಲಾಗಿ ಕಲ್ಲಾಗಿ ಕೂಡಲಿ ಎಂದು ಅವಳಿಗೆ ವಿಷವೂಡಿಸಿದರು. ಅದರಿಂದ ಏಳೆಂಟು ವರ್ಷವಾದರೂ ಆ ಅರಸಿಯ ಗರ್ಭವು ಹೊಟ್ಟೆಯಲ್ಲಿಯೇ ಉಳಿಯಿತು. ಬಾಹುರಾಜನು ಮುದುಕನಾದುದರಿಂದ ಔರ್ವಮುನಿಯ ಆಶ್ರಮ ಬಳಿಯಲ್ಲಿ ಸತ್ತು ಬಿದ್ದನು. ಆಗ ಅವನ ಪತಿವ್ರತೆಯಾದ ಪಟ್ಟದರಾಣಿಯು ಸಹಗಮನಕ್ಕಾಗಿ ಚಿತೆಯನ್ನು ಒಟ್ಟಿಸಿದಳು. ಪತಿಯನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಸಹಗಮನಕ್ಕೆ ಸಿದ್ಧಳಾದಳು. ಅಲ್ಲಿಯೇ ಆಶ್ರಮದಲ್ಲಿ ತಪಃ ಸಮಾಧಿಯಲ್ಲಿ ಕುಳಿತ ಔರ್ವಮುನಿಗೆ ಮಹಾರಾಣಿಯ ಸಹಗಮನದ ಸಮಾಚಾರವು ತಿಳಿದು ಬಂದಿತು. ಹಿಂದೆ ಆದದ್ದು, ಇಂದು ನಡೆದದ್ದು, ಮುಂದೆ ಆಗುವದು ಎಲ್ಲವೂ ಅಂಗೈಯಲ್ಲಿಯ ನೆಲ್ಲಿಯ ಕಾಯಿಯಂತೆ ತಿಳಿಯುತ್ತಿತ್ತು ಎಲ್ಲ ಬಲ್ಲ ಆ ಔರ್ವಮುನಿಗೆ. ತಕ್ಷಣದಲ್ಲಿ ಅವರು ತಮ್ಮ ಎಲೆಮನೆಯಿಂದ ಹೊರಬಿದ್ದು ರಾಜಮಹರ್ಷಿಯ ಚಿತೆಯ ಬಳಿಗೆ ಬಂದು ಸಂಭ್ರಮದಿಂದ ನುಡಿದರು.

## ಅಗ್ನಿಯಿಂದ ಇಳಿಸಿದರು, ರಾಷ್ಟ್ರವನ್ನೆ ಉಳಿಸಿದರು

''ಸಾಕು ಸಾಕು ಈ ಸಹಗಮನ, ಇದೇನು ಹುಚ್ಚು ನಿಮಗೆ! ಅಮ್ಮ, ನಿನ್ನ ಹೊಟ್ಟೆಯಲ್ಲಿ ನಮ್ಮ ನಾಡಿನ ಚಕ್ರವರ್ತಿ ಮೂಡಿದ್ದಾನೆ. ಅವನಿಂದ ವೈರಿಗಳ ವಂಶವು

ಆರು ಕೋಟಿ ಗಂಧರ್ವರನ್ನೆಲ್ಲ ಆ ಮಾಂಧಾತನ ಮಗನು ಕೊಂದು ಹಾಕಿದ. ಗೆಲುವಿನ ಬಾವುಟವನ್ನು ಎತ್ತಿ ಮೆರಿಸಿ ಮತ್ತೆ ತನ್ನ ರಾಜಧಾನಿಗೆ ಮರಳಿದ. ಸರ್ಪಕುಲದ ಸಕಲ ಸದಸ್ಯರೂ ''ಈ ಗಂಧರ್ವರ ಗೆಲುವಿಗೆ ತಮ್ಮ ಕುಲ ಕನ್ಯೆಯಾದ ನರ್ಮದೆಯ ಒಲವು ಚೆಲುವುಗಳೇ ಕಾರಣ. ಪುರುಕುತ್ಸನನ್ನು ರಸಾತಳಕ್ಕೆ ಕರೆತಂದು ಗಂಧರ್ವರನ್ನು ಕೊಲ್ಲಿಸಿದವಳೇ ಅವಳು.'' ಎಂದು ಆನಂದದಿಂದ ಅವಳನ್ನು ಅಭಿನಂದಿಸಿದರು. ಮತ್ತೂ ''ನರ್ಮದೆಯನ್ನು ನೆನೆದವರಿಗೆ ಅಥವಾ ಅವಳ ಹೆಸರನ್ನು ಹೇಳಿದವರಿಗೆ ಎಂದೂ ಯಾವ ಹಾವೂ ಕಚ್ಚಲಾರದು. ಕದಾಚಿತ್ ಕಚ್ಚಿದರೂ ವಿಷ ಏರಲಾರದು, ಏನೂ ಬಾಧೆ ಆಗಲಾರದು'' ಎಂದು ಆ ನರ್ಮದೆಗೆ ವರವನ್ನು ಕೊಟ್ಟರು.

## ನರ್ಮದೆಯನ್ನು ನೆನೆದರೆ ನಂಜಿನ ಅಂಜಿಕೆಯಿಲ್ಲ

**''ನರ್ಮದಾಯ್ಯೆ ನಮಃ ಪ್ರಾತರ್ನರ್ಮದಾಯ್ಯೆ ನಮೋ ನಿಶಿ।**
**ನಮೋಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷಸರ್ಪತಃ॥**

ಎಂಬ ಮಂತ್ರವನ್ನು ಪಠಿಸುತ್ತ ಹಗಲು ಅಥವಾ ಇರುಳು ಎಲ್ಲಿಯೇ ತಿರುಗಾಡಿದರೂ, ಕತ್ತಲೆಯನ್ನು ಕಾಲಾಡಿಸಿದರೂ ಹಾವು ಕಚ್ಚದು. ಈ ಮಂತ್ರ ಹೇಳುತ್ತ ಊಟ ಮಾಡಿದರೆ ಅಡಿಗೆಯಲ್ಲಿ ವಿಷ ಕೂಡಿದರೂ ಅದು ಬಾಧಿಸುವದಿಲ್ಲ. ಈ ಪುರುಕುತ್ಸ ಮಹಾರಾಜನಿಗೆ ಎಂದಿಗೂ ಸಂತತಿ ವಿಚ್ಛೇದವಾಗುವದಿಲ್ಲ'' ಎಂದು ಪನ್ನಗ ಪತಿಗಳು ಮತ್ತೆ ವರವನ್ನಿತ್ತರು. ಪುರುಕುತ್ಸನಿಗೆ ನರ್ಮದೆಯಿಂದ ತ್ರಸದಸ್ಯು ಎಂಬ ಪುತ್ರನು ಉತ್ಪನ್ನನಾದ. ಅವನ ಮಗ ಅನರಣ್ಯ. ಅವನನ್ನು ರಾವಣನು ದಿಗ್ವಿಜಯಕ್ಕೆ ಹೊರಟಾಗ ಸಂಹರಿಸಿದನು. ಅನರಣ್ಯನಿಂದ ಮುಂದೆ ಪೃಷದಶ್ವ, ಹರ್ಯಶ್ವ, ಹಸ್ತ, ಸುಮನ, ತ್ರಿಧನ್ವ, ತ್ರೈಯ್ಯಾರುಣಿ, ತ್ರಿಶಂಕು ಮೊದಲಾದ ರಾಜರು ಆಗಿ ಆಳಿಹೋದರು.

## ಹುಚ್ಚು ಹಂಬಲದಿಂದ ಹೊಲೆಯನಾದ ತ್ರಿಶಂಕು

ಈ ತ್ರಿಶಂಕುವಿಗೆ ಸತ್ಯವ್ರತ ಎಂದು ಬೇರೊಂದು ಹೆಸರಿದ್ದಿತು. ಈ ತ್ರಿಶಂಕುವಿಗೆ ಒಂದು ಹಂಬಲ, 'ಈ ನರದೇಹದಿಂದಲೇ ಸ್ವರ್ಗ ಲೋಕಕ್ಕೆ ಏರಬೇಕು' ಎಂದು. ಅದಕ್ಕಾಗಿ ಒಂದು ಯಜ್ಞ ಮಾಡಿಸಬೇಕೆಂದು ವಶಿಷ್ಠರಲ್ಲಿ ಕೇಳಿಕೊಂಡ ''ಅದಾಗದು'' ವಶಿಷ್ಠರು ಖಂಡತುಂಡಾಗಿ ನುಡಿದರು. ''ಸಾಯುವವರೆಗೆ ಸ್ವರ್ಗವಿಲ್ಲ. ಮಾನವ ದೇಹದಿಂದ ದೇವ ಭೋಗವಿಲ್ಲ.'' ಇಷ್ಟಾದರೂ ತ್ರಿಶಂಕುವಿನ ಸ್ವರ್ಗಚ್ಛಲ ದೂರಾಗಲಿಲ್ಲ. ಅವನು ವಶಿಷ್ಠರ ಮಕ್ಕಳ ಹತ್ತಿರ ಬಂದು ಅದೇ ಮಾತನ್ನು ಕೇಳಿದ. ತಂದೆ ವಶಿಷ್ಠರ ಮಾತನ್ನು ಮೀರಿ ನಡೆದ ಆ ತ್ರಿಶಂಕುವಿಗೆ ಆ ವಸಿಷ್ಠಪುತ್ರರು ''ನೀನು ಗುರುದ್ರೋಹಿ, ಚಂಡಾಲನಾಗು'' ಎಂದು ಶಾಪವಿತ್ತರು. ಸ್ವರ್ಗದ ಹಂಬಲ ಹೊತ್ತ ಆ ರಾಜಕುಮಾರನು ಹೊಸ ಹರೆಯದಲ್ಲಿಯೇ ಹೊಲೆಯನಾದ.

ದೊರೆಯ ದೋಷದಿಂದ ದೇಶದಲ್ಲಿ ದೊಡ್ಡ ಬರ ಬಿತ್ತು. ಅದೂ ಕೂಡ ಹನ್ನೆರಡುವರ್ಷಗಳವರೆಗೆ. ಈ ಕ್ಷಾಮಕಾಲದಲ್ಲಿ ವಿಶ್ವಾಮಿತ್ರ ಮುನಿಗಳು ತಪಂಗೈಯಲು ಕಾಡಿಗೆ ಹೋಗಿದ್ದರು. ಅವರ ಮನೆಯಲ್ಲಿ ಮಡದಿ ಮಕ್ಕಳು, ಮಳೆ, ಬೆಳೆ,

ಇಲ್ಲದ್ದರಿಂದ ಆ ಋಷಿ ಕುಟುಂಬವನ್ನು ಪೋಷಣೆ ಮಾಡಬೇಕೆಂದು ಸಂಕಲ್ಪಿಸಿದ. ಅವರು ಹೊಲೆಯನಾದ ತನ್ನ ಕೈಯಿಂದ ಕೊಟ್ಟದ್ದನ್ನು ಮುಟ್ಟಲಿಕ್ಕಿಲ್ಲ ಎಂಬ ಶಂಕೆಯಿಂದ ಗಂಗೆಯ ದಂಡೆಯಲ್ಲಿದ್ದ ಒಂದು ಆಲದ ಮರದ ಮೇಲೆ ಮೃಗಗಳ ಮಾಂಸವನ್ನು ತಂದು ದಿನಾಲು ಕಟ್ಟುತ್ತಿದ್ದನು.

ವಿಶ್ವಾಮಿತ್ರ ಕುಟುಂಬದವರು ಅದನ್ನು ಅನುದಿನವೂ ತಿಂದು ಬದುಕಿ ಬೆಳೆದರು. ಮುಂದೆ ಕೆಲದಿನಗಳ ನಂತರ ಕ್ಷಾಮಮುಗಿದು ಎಲ್ಲ ಕಡೆ ಮಳೆಯಿಂದ ಕ್ಷೇಮವಾದ ಬಳಿಕ ವಿಶ್ವಾಮಿತ್ರರು ತಪಸ್ಸಿನಿಂದ ಮನೆಗೆ ಮರಳಿದರು. ಕ್ಷಾಮದಲ್ಲಿ ಅವರ ಮನೆ ಜನರೆಲ್ಲರೂ ಸುಖದಿಂದ ಇದ್ದು ಯಾರೂ ಬರಗಾಲಕ್ಕೆ ಬಲಿಯಾಗದೇ ಸುರಕ್ಷಿತವಾಗಿ ಬದುಕಿ ಉಳಿದಿದ್ದರು. ಇದೆಲ್ಲವೂ ತ್ರಿಶಂಕುವಿನ ಪುಣ್ಯ. ತಪೋನುಷ್ಠಾನದಿಂದ ಮರಳಿ ಮನೆಗೆ ಬಂದ ವಿಶ್ವಾಮಿತ್ರರು ತ್ರಿಶಂಕು ತನ್ನ ಕುಟುಂಬಕ್ಕೆ ಮಾಡಿದ ಉಪಕಾರವನ್ನು ನೆನೆದು ಅವನನ್ನು ಅವನ ಅಪೇಕ್ಷೆಯಂತೆ ತಮ್ಮ ತಪೋಬಲದಿಂದ ದೇಹಸಹಿತವಾಗಿಯೇ ಅಂತರಿಕ್ಷಲೋಕಕ್ಕೆ ಏರಿಸಿದರು. ಆ ತ್ರಿಶಂಕುವಿನಿಂದ ಹರಿಶ್ಚಂದ್ರ, ರೋಹಿತಾಶ್ವ, ಹರಿತ, ಚಂಚು, ಆ ಚಂಚುವಿನಿಂದ ವಿಜಯ, ವಸುದೇವ, ವಿಜಯನಿಂದ ಮುಂದೆ ರುರು, ವೃಕ, ಬಾಹು ಮುಂತಾದ ರಾಜರು ಜನಿಸಿದರು.

## ಸ್ತ್ರೀ ಬುದ್ಧಿಃ ಪ್ರಳಯಾಂತಿಕಾ

ಬಾಹುರಾಜನು ಹೈಹಯ, ತಾಲಜಂಘ ಮುಂತಾದ ವೈರಿಗಳಿಂದ ಸೋತು ಮಡದಿಯರೊಂದಿಗೆ ಅಡವಿ ಸೇರಿದನು. ಆಗ ಅವನ ಪಟ್ಟದರಾಣಿಯು ತುಂಬು ಗರ್ಭಿಣಿ. ಅದನ್ನು ಸಹಿಸದ ಅವಳ ಸವತಿಯರು ಅವಳ ಹೊಟ್ಟೆಯಲ್ಲಿಯ ಪಿಂಡವು ಬೆಳೆಯದೆ ಸಲ್ಲಾಗಿ ಕಲ್ಲಾಗಿ ಕೂಡಲಿ ಎಂದು ಅವಳಿಗೆ ವಿಷವೂಡಿಸಿದರು. ಆದರಿಂದ ಏಳೆಂಟು ವರ್ಷವಾದರೂ ಆ ಅರಸಿಯ ಗರ್ಭವು ಹೊಟ್ಟೆಯಲ್ಲಿಯೇ ಉಳಿಯಿತು. ಬಾಹುರಾಜನು ಮುದುಕನಾದುದರಿಂದ ಔರ್ವಮುನಿಯ ಆಶ್ರಮ ಬಳಿಯಲ್ಲಿ ಸತ್ತು ಬಿದ್ದನು. ಆಗ ಅವನ ಪತಿವ್ರತೆಯಾದ ಪಟ್ಟದರಾಣಿಯು ಸಹಗಮನಕ್ಕಾಗಿ ಚಿತೆಯನ್ನು ಒಟ್ಟಿಸಿದಳು. ಪತಿಯನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಸಹಗಮನಕ್ಕೆ ಸಿದ್ಧಳಾದಳು. ಅಲ್ಲಿಯೇ ಆಶ್ರಮದಲ್ಲಿ ತಪಃ ಸಮಾಧಿಯಲ್ಲಿ ಕುಳಿತ ಔರ್ವಮುನಿಗೆ ಮಹಾರಾಣಿಯ ಸಹಗಮನದ ಸಮಾಚಾರವು ತಿಳಿದು ಬಂದಿತು. ಹಿಂದೆ ಆದದ್ದು, ಇಂದು ನಡೆದದ್ದು, ಮುಂದೆ ಆಗುವದು ಎಲ್ಲವೂ ಅಂಗೈಯಲ್ಲಿಯ ನೆಲ್ಲಿಯ ಕಾಯಿಯಂತೆ ತಿಳಿಯುತ್ತಿತ್ತು ಎಲ್ಲ ಬಲ್ಲ ಆ ಔರ್ವಮುನಿಗೆ. ತಕ್ಷಣದಲ್ಲಿ ಅವರು ತಮ್ಮ ಎಲೆಮನೆಯಿಂದ ಹೊರಬಿದ್ದು ರಾಜಮಹರ್ಷಿಯ ಚಿತೆಯ ಬಳಿಗೆ ಬಂದು ಸಂಭ್ರಮದಿಂದ ನುಡಿದರು.

## ಅಗ್ನಿಯಿಂದ ಇಳಿಸಿದರು, ರಾಷ್ಟ್ರವನ್ನೆ ಉಳಿಸಿದರು

''ಸಾಕು ಸಾಕು ಈ ಸಹಗಮನ, ಇದೇನು ಹುಚ್ಚು ನಿಮಗೆ! ಅಮ್ಮ, ನಿನ್ನ ಹೊಟ್ಟೆಯಲ್ಲಿ ನಮ್ಮ ನಾಡಿನ ಚಕ್ರವರ್ತಿ ಮೂಡಿದ್ದಾನೆ. ಅವನಿಂದ ವೈರಿಗಳ ವಂಶವು

ಧ್ವಂಸವಾಗಲಿದೆ. ಅನೇಕ ಯಜ್ಞಯಾಗಗಳು ಜರುಗಲಿವೆ. ಇಂಥ ಬೀರವುಳ್ಳ ನಮ್ಮ ಸಾರ್ವಭೌಮನನ್ನು ವ್ಯರ್ಥವಾಗಿ ಸುಟ್ಟು ಹಾಕುವಿಯಲ್ಲ ! ತಾಯಿ, ಮೊದಲು ಕೆಳಗಿಳಿ, ರಾಷ್ಟ್ರಘಾತಕವಾದ ಈ ಹುಚ್ಚು ಸಾಹಸವನ್ನು ಇಲ್ಲಿಗೇ ನಿಲ್ಲಿಸು.'' ಮುನಿಪುಂಗವರ ಒಲುಮೆಯಿಂದ ಆ ಸಾಧ್ವಿಯು ಚಿತೆಯಿಂದ ಕೆಳಗಿಳಿದಳು. ಔರ್ವಮುನಿಯು ಆ ಸಾಧ್ವಿಯನ್ನು ತಮ್ಮ ಆಶ್ರಮಕ್ಕೆ ಕರೆದೊಯ್ದರು.

ಕೆಲವು ದಿನ ಕಳೆದ ಬಳಿಕ ಆ ಮುನಿಯ ಎಲೆಮನೆಯಲ್ಲಿಯೇ ಮಹಾರಾಣಿಯು ಗಂಡುಮಗುವನ್ನು ಹೆತ್ತಳು. ಸವತಿಯರು ಹಾಕಿದ ವಿಷದಿಂದ ಆ ಮಗುವಿಗೆ ತೇಜಸ್ಸು ಇಮ್ಮಡಿಸಿತು. ಆ ಚಕ್ರವರ್ತಿ ಕುಮಾರನಿಗೆ ಔರ್ವಋಷಿಗಳು ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದರು. ಔರ್ವಮುನಿಗಳು ಆ ಮಗುವಿಗೆ ಇಟ್ಟ ಹೆಸರು ಸಗರ=ವಿಷದಿಂದ ಒಡಗೂಡಿದವ. ಮುಂದೆ ಅವರೇ ಆ ರಾಜಕುಮಾರನ ಉಪನಯನವನ್ನು ಮಾಡಿ ವೇದ ವೇದಾಂಗಗಳನ್ನೂ, ಶಸ್ತ್ರ ವಿದ್ಯೆಯನ್ನೂ, ಶಾಸ್ತ್ರವಿದ್ಯೆಯನ್ನೂ ಕಲಿಸಿದರು. ಮತ್ತು ಭೃಗುಕುಲದವರು ಮಾತ್ರ ಬಲ್ಲ ಅಗ್ನಿ ವಿದ್ಯೆಯ ರಹಸ್ಯವನ್ನೂ ಅವನಿಗೆ ತಿಳಿಸಿಕೊಟ್ಟರು.

## ಸೇಡು ತೀರಿಸಿ ನಾಡಿಗೆ ಸ್ವಾತಂತ್ರ್ಯ ತಂದ ಸಗರಕುಮಾರ

ಹುಡುಗ ದೊಡ್ಡವನಾದ. ಅವನ ಬುದ್ಧಿ ಬೆಳೆಯಿತು. ತಿಳಿವಳಿಕೆ ಮೂಡಿತು. ಅವನು ತಾಯಿಯನ್ನು ಪ್ರಶ್ನಿಸಲು ಮೊದಲಿಟ್ಟ ''ಅಮ್ಮ! ನಾವು ಇಲ್ಲಿಗೆ ಹೇಗೆ ಬಂದೆವು ! ಏಕೆ ಬಂದೆವು ! ನಮ್ಮ ತಂದೆ ಎಲ್ಲಿ!'' ಎಂದು ಮುಂತಾಗಿ. ಮಗನ ಪ್ರಶ್ನೆ ಮಾಲಿಕೆಯನ್ನು ಕೇಳಿ ಮಹಾರಾಣಿಯ ಮರೆತ ದುಃಖ ಮರುಕಳಿಸಿತು. ನಡೆದ ದುರಂತ ಘಟನೆಗಳನ್ನೆಲ್ಲ ಅವಳು ಮಗನಿಗೆ ತಿಳಿಸಿದಳು. ವೈರಿಗಳು ತನ್ನ ತಂದೆಗೆ ತಂದ ದುರ್ದೆಶೆಯನ್ನು ತಿಳಿದು ಸಗರಕುಮಾರನ ಸಿಟ್ಟು ಸಿಡಿಲಾಗಿ ಸಿಡಿಯಿತು. ತಂದೆಯ ರಾಜ್ಯವನ್ನು ಕಸಿದ ಹೈಹಯ ತಾಲಜಂಘರನ್ನು ಕೊಲ್ಲುವದಾಗಿ ಅವನು ಆಣೆ ಇಟ್ಟ. ಸೇಡಿನ ಸಿಡಿಲುಸವಾರಿ ಏರಿದ. ಆ ಸಗರಕುಮಾರ ಹೈಹಯ ತಾಲಜಂಘ ಮುಂತಾದ ಎಲ್ಲ ಶತ್ರುಗಳ ಸಂಘವನ್ನು ಮುರಿದು ಮಣ್ಣುಗೂಡಿಸಿದ. ಏನೋ ಕಣ್ಣು ತಪ್ಪಿ ಅಲ್ಲಿ ಇಲ್ಲಿ ಕೆಲವರು ಉಳಿದುಕೊಂಡರು. ಶಕ, ಯವನ, ಕಾಂಭೋಜ, ಪಾರದ, ಪಲ್ಲವ, ಮುಂತಾದ ವೈರಿ ವಂಶದವರಿಗೂ ಅವನು ಕೈ ತೊಳೆದು ಬೆನ್ನು ಹತ್ತಿದ. ಕಂಡಲ್ಲಿ ತುಂಡರಿಸಿದ. ಅಳಿದುಳಿದ ಅವರ ವೈರಿಗಳು ಕೂಡ ಓಡಿ ಹೋಗಿ ಸಗರವಂಶದ ಕುಲಗುರುವಾದ ವಶಿಷ್ಠರನ್ನು ಮೊರೆಹೊಕ್ಕರು. ಆಗ ವಶಿಷ್ಠರು ದಿಕ್ಕೆಟ್ಟು ಓಡಿ ಬಂದ ಆ ದೀನ ಜನರನ್ನು ನೋಡಿ ದಯೆದುಂಬಿ ಸಗರನಿಗೆ ಹೇಳಿದರು. ''ವತ್ಸ, ಸಾಕು ಈ ಸಂಹಾರ ಸತ್ರ. ಅರೆಜೀವರಾದ ಈ ವೈರಿಗಳನ್ನು ಬೆನ್ನಟ್ಟಿ ಬೇಟೆಯಾಡುವದರಲ್ಲಿ ಅರ್ಥವಿಲ್ಲ. ನೀನಿಟ್ಟ ಆಣೆ ಸಟೆ ಆಗದಂತೆ ನಾನಾಗಲೇ ಇವರನ್ನು ಅರೆಜೀವರನ್ನಾಗಿ ಮಾಡಿದ್ದೇನೆ. ಅವರು ಇನ್ನು ನಿನ್ನ ಮುಂದೆ ಕ್ಷತ್ರಿಯರೆಂದು ತಲೆ ಎತ್ತಿ ಮೆರೆಯಲಾರರು. ಯಾವ ಬ್ರಾಹ್ಮಣನೂ ಅವರಿಗೆ ಆರ್ಯೋಚಿತವಾದ ಸಂಸ್ಕಾರವನ್ನು ಮಾಡಕೂಡದು. ಮಾಡಲಾರ. ಇದರಿಂದ ಅವರು ಇನ್ನು ಇದ್ದರೂ

ಸತ್ತಂತೆ. ನಿನ್ನ ತಂದೆಯನ್ನು ರಾಜ್ಯ ಭ್ರಷ್ಟನನ್ನು ಮಾಡಿ ಕಾಡಿಗೋಡಿಸಿದ ಅವರೆಲ್ಲರನ್ನೂ ಕೊಲ್ಲುತ್ತೇನೆಂದು ನೀನು ಮಾಡಿದ ಪ್ರತಿಜ್ಞೆಯು ಇದರಿಂದ ಪೂರ್ಣವಾದಂತಾಯಿತು.

ಗುರು ವಶಿಷ್ಠರ ಮಾತಿಗೆ ಆ ತರುಣ ರಾಜಕುಮಾರನು ತಲೆಬಾಗಿದ. ಆದರೆ ಅವರೆಲ್ಲರ ವೇಷಗಳನ್ನು ಮಾತ್ರ ಬದಲಾಗುವಂತೆ ಮಾಡಿದ. ಮುಸಲ್ಮಾನರ ತಲೆ ಬೋಳಿಸಿ ಗಡ್ಡ ಇಟ್ಟ. ಶಕರ ತಲೆಯನ್ನು ಒಪ್ಪರೆ ಬೋಳಿಸಿದ. ಪಾರದರಿಗೆಲ್ಲ ''ತಲೆಗೂದಲುಗಳನ್ನು ಕತ್ತರಿಸಕೂಡದು. ಹೆಂಗಸಿನಂತೆ ಅವರು ಯಾವಾಗಲೂ ಇಳಿಗೂದಲುಗಳನ್ನು ಜೋತಾಡಿಸುತ್ತಿರಬೇಕು'' ಎಂದು ಶಾಸನಗೈದ. ಪಲ್ಲವರಿಗೆ ಹೊರೆ ಮೀಸೆಗಳನ್ನು ಇರಿಸಲು ಅಪ್ಪಣೆಗೈದ. ಇವರಿಗೂ ಉಳಿದ ವೈರಿ ಕ್ಷತ್ರಿಯರಿಗೂ 'ವೇದ' ಓದಬಾರದು. ಯಾಗಮಾಡಬಾರದು ಮತ್ತು ವೇದಬಾಹಿರರು ಆಗಬೇಕೆಂದು'ನಿರ್ಬಂಧ ಪಡಿಸಿದ. ಸಗರನ ಶಾಸನದಂತೆ ಕ್ಷತ್ರಿಯ ಧರ್ಮವನ್ನು ಬಿಟ್ಟು ಜಾತಿ ಭ್ರಷ್ಟರಾದ ಅವರನ್ನೆಲ್ಲ ಬ್ರಾಹ್ಮಣರೂ ಕೂಡ ಬಹಿಷ್ಕರಿಸಿದರು. ಹೀಗೆ ಎಲ್ಲರೂ ತೊರೆದ ಬಳಿಕ ಸೋತು ಸುಣ್ಣಾದ ಹೊಡೆತ ತಿಂದು ಹಣ್ಣಾದ ಸಗರ ಶತ್ರುಗಳೆಲ್ಲರೂ ಕೊನೆಗೆ ಬೇಸತ್ತು ಮ್ಲೇಂಛ ಜಾತಿಯನ್ನು ಅಂಗೀಕರಿಸಿದರು. ಇತ್ತ ಸಗರ ಕುಮಾರನಾದರೂ ತನ್ನ ತಂದೆಯ ಹಿಂದಿನ ರಾಜಧಾನಿಗೆ ಬಂದು ಸಾಮ್ರಾಜ್ಯವನ್ನೆಲ್ಲ ಸ್ವಾಧೀನ ಪಡೆಸಿಕೊಂಡನು. ಸಾರ್ವಭೌಮನಾಗಿ ಸಿಂಹಾಸನ ಏರಿದನು. ಏಳು ದ್ವೀಪವುಳ್ಳ ವಸುಂಧರೆಯನ್ನು ಆಳಿದನು. ಅವನ ಸಾರ್ವಭೌಮ ಅಧಿಕಾರಕ್ಕೆ ಎಲ್ಲಿಯೂ ಚ್ಯುತಿಬರಲಿಲ್ಲ. ಎಂದೂ ಕ್ಷತಿ ಉಂಟಾಗಲಿಲ್ಲ.

*ಇತಿ ಶ್ರೀ ವಿಷ್ಣು ಮಹಾ ಪುರಾಣದಲ್ಲಿನ ಚತುರ್ಥಾಂಶದ ಮೂರನೆಯ ಅಧ್ಯಾಯ ಸಂಪೂರ್ಣ*



# ಸಗರ, ಸುದಾಸ, ಖಟ್ವಾಂಗ ಮತ್ತು ಶ್ರೀ ರಾಮನ ಚರಿತ್ರಗಳು

ಅಧ್ಯಾಯ - ೪

ಸಗರ ಚಕ್ರವರ್ತಿಗೆ ಇಬ್ಬರು ಪತ್ನಿಯರು ಸುಮತಿ ಮತ್ತು ಕೇಶಿನಿ. ಸುಮತಿಯು ಕಾಶ್ಯಪರ ಮಗಳು. ಕೇಶಿನಿಯು ವಿದರ್ಭರಾಜನ ಮಗಳು. ಆ ಇಬ್ಬರೂ ರಾಣಿಯರು ಸಂತಾನಕ್ಕಾಗಿ ಔರ್ವಋಷಿಯನ್ನು ಅತ್ಯಂತ ಭಕ್ತಿಯಿಂದ ಸೇವಿಸಿದರು. ಸುಪ್ರೀತನಾದ ಮಹಾಮುನಿಯು ಅವರಿಗೆ ವರವನ್ನು ಕೊಟ್ಟ. ''ಒಬ್ಬಳಿಗೆ ವಂಶವೃದ್ಧಿಯನ್ನು ಮಾಡುವ ಒಬ್ಬ ಮಗನು ಜನಿಸುವನು, ಇನ್ನೊಬ್ಬಳಿಗೆ ಅರವತ್ತುಸಾವಿರ ಪುತ್ರರು ಹುಟ್ಟುವರು. ಈ ಎರಡು ವರಗಳಲ್ಲಿ ಯಾರಿಗೆ ಯಾವದು ಬೇಕೋ ಅವರು ಅದನ್ನು ಸ್ವೀಕರಿಸಬಹುದು'' ಎಂದು. ಬೇಕಾದ ವರವನ್ನು ಆರಿಸಿಗೊಳ್ಳಲು ಅವರಿಗೇ ಬಿಟ್ಟು ಬಿಟ್ಟನು. ವಿದರ್ಭರಾಜನಂದಿನಿಯಾದ ಕೇಶಿನಿಯು ಕುಲದ ಬಳ್ಳಿಯನ್ನು ಕುಡಿಯೊಡಿಸಿ ಚೆಲ್ಲುವರಿಸುವ ಒಬ್ಬ ಮಗನನ್ನು ಕೇಳಿದಳು. ಕಾಶ್ಯಪ ಕುಮಾರಿಯಾದ ಸುಮತಿಯು ಅರವತ್ತುಸಾವಿರ ಮಕ್ಕಳನ್ನು ಬಯಸಿದಳು. ಅವರಿಬ್ಬರಿಗೂ ಔರ್ವಮುನಿಯು 'ತಥಾಸ್ತು' ಎಂದು ಹೇಳಿದ ಅದರಂತೆ ಕೆಲವೇ ದಿನಗಳಲ್ಲಿ ಕೇಶಿನಿಯು ಅಸಮಂಜಸ ಎಂಬ ವಂಶವೃದ್ಧಿಯನ್ನು ಮಾಡುವ ಪುತ್ರನನ್ನು ಹೆತ್ತಳು. ಕಾಶ್ಯಪಕುವರಿಯಾದ ಸುಮತಿಯು ಅರವತ್ತು ಸಾವಿರ ಪುತ್ರರನ್ನು ಪಡೆದಳು.

## ನಡತೆಗೆಟ್ಟ ಮಗನನ್ನು ನಾಡಿನಿಂದ ಹೊರಗಟ್ಟಿಸಿದ ಸಗರನ ನ್ಯಾಯನಿಷ್ಠೆ

ಅಸಮಂಜಸನಿಂದ ಅಂಶುಮಾನ ಎಂಬ ಕುಮಾರನು ಜನಿಸಿದನು. ಅಸಮಂಜಸನು ಎಳೆತನದಿಂದಲೂ ದುರ್ನಡತೆಯುಳ್ಳವನಾಗಿದ್ದನು. ಅವನ ತಂದೆ ಆಶೆಮಾಡಿದ್ದ ''ದೊಡ್ಡವನಾದ ಬಳಿಕ ತನ್ನ ಪುತ್ರನು ಸರಿಯಾದ ದಾರಿಗೆ ಬರುವನು'' ಎಂದು. ಆದರೆ ದಿನಗಳೆದಂತೆ ಅವನ ಅನಾಚಾರ ಬೆಳೆಯಿತು. ಬಾಲ್ಯವು ಕಳೆದರೂ ಅವನ ಬುದ್ಧಿ ಬೆಳೆಯಲಿಲ್ಲ. ವಯಸ್ಸಾದಂತೆ ಅವನ ದುರ್ವ್ಯಾಪಾರಗಳು ಬೆಳೆದವು. ನ್ಯಾಯ ನಿಷ್ಠುರನಾದ ತಂದೆಯು ಶೀಲಗೇಡಿಯಾದ ಆ ಮಗನನ್ನು ಕೊನೆಗೊಂದು ದಿನ ಮನೆ ಬಿಟ್ಟು ಹೊರಗೆ ಹಾಕಿದನು. ಸುಮತಿಯ ಅರವತ್ತು ಸಾವಿರ ಜನ ಮಕ್ಕಳಾದರೂ ಅಣ್ಣನಾದ ಆ ಅಸಮಂಜಸನ ನಡತೆಯನ್ನೇ ಅನುಸರಿಸಿದರು. ಸಗರರಾಜನ ಎಲ್ಲ ಮಕ್ಕಳೂ ವಿವೇಕಶೂನ್ಯರಾಗಿ ಉನ್ಮಾರ್ಗಗಾಮಿಗಳಾದರು. ಯಜ್ಞಯಾಗಾದಿ ವೇದೋಕ್ತ ಕರ್ಮಾನುಷ್ಠಾನಗಳಿಗೆ ವಿಘ್ನವೊಡ್ಡ ತೊಡಗಿದರು ಆಗ ದೇವತೆಗಳು ದೋಷ ದೂರನಾದ ಶ್ರೀ ಮನ್ನಾರಾಯಣನ ಅವತಾರಭೂತನಾದ ಕಪಿಲ ಮುನಿಯನ್ನು ವಂದಿಸಿ ಬಿನ್ನಹಗೈದರು. ''ಸ್ವಾಮಿನ್, ಸಗರ ಚಕ್ರವರ್ತಿಯ ಮಕ್ಕಳೆಲ್ಲರೂ ಹಿರಿಯ ಅಣ್ಣ ಅಸಮಂಜಸನ ದಾರಿ ಹಿಡಿದು ವೇದಮಾರ್ಗ ವಿಧ್ವಂಸಕರಾಗಿ ಲೋಕಕಂಟಕರಾಗಿದ್ದಾರೆ. ರಾಜಪುತ್ರರು ಧರ್ಮದ್ರೋಹಿಗಳಾಗಿ ವೇದವಿದ್ವೇಷದಿಂದ ಸತ್ಕಾರ್ಯಗಳಿಗೆ ಅಡ್ಡಿ ಒಡ್ಡತೊಡಗಿದರೆ ಜಗತ್ತಿನ ಗತಿಯೇನು ? ದೀನ ಜನರ ಉದ್ಧಾರ ಮತ್ತು ವೇದ

ಮಾರ್ಗದ ಉದ್ಧಾರಕ್ಕಾಗಿಯೇ ಅಲ್ಲವೇ ಭಗವಂತನ ಅವತಾರಗ್ರಹಣ!'' ಎಂದು. ಭಗವಾನ್ ಕಪಿಲ ದೇವನು ''ಸಗರ ರಾಜಕುಮಾರರೆಲ್ಲರೂ ಕೆಲವೇ ದಿನಗಳಲ್ಲಿ ವಿನಾಶಹೊಂದುವರು'' ಎಂದು ಸುರರಿಗೆ ಆಶ್ವಾಸನೆಯಿತ್ತ.

## ಹಿಂಸ್ರಾಃ ಸ್ವಪಾಪೇನ ವಿಹಿಂಸಿತಾಃ ಖಲಾಃ

ಈ ಸಂದರ್ಭದಲ್ಲಿ ಸಗರ ಮಹಾರಾಜನು ಅಶ್ವಮೇಧಯಾಗವನ್ನು ಪ್ರಾರಂಭ ಮಾಡಿದನು. ಯಜ್ಞದ ಕುದುರೆಯನ್ನು ಕಾಯಲಿಕ್ಕೆ ಸಗರನ ಅರವತ್ತುಸಾವಿರ ಮಕ್ಕಳು ಅದರ ಬೆನ್ನ ಹಿಂದಿನಿಂದ ದಿಗ್ವಿಜಯಕ್ಕೆ ನಡೆದರು. ಅವರ ಕಣ್ಣು ತಪ್ಪಿಸಿ ಆ ಅಶ್ವಮೇಧ ಕುದುರೆಯನ್ನು ಯಾರೋ ಕದ್ದು ಭೂತಳದ ಬುಡದಲ್ಲಿ ಬಚ್ಚಿಟ್ಟರು. ಆ ಹೆಜ್ಜೆಯನ್ನು ಗುರುತಿಸುತ್ತ ಸಗರ ರಾಜಕುಮಾರರು ನೆಲವನ್ನು ಅಗಿಯತೊಡಗಿದರು. ತಲೆಗೊಂದು ಯೋಜನದಂತೆ ಪಾಳಿಯ ಪ್ರಕಾರ ನೆಲದೊಡಲನ್ನು ಅಗಿದು ಬಗಿದು ಕೊನೆಗೆ ಪಾತಾಳ ಲೋಕದ ಆಳಕ್ಕೆ ಇಳಿದರು. ಅಲ್ಲಿ ಅವರ ಯಜ್ಞದ ಕುದುರೆ ತಿರುಗಾಡುತ್ತಿತ್ತು. ಆ ಯಜ್ಞಾಶ್ವದ ಬಳಿಯಲ್ಲಿಯೇ ಮೋಡ ಚೆದರಿದ ಮುಗಿಲಿನಲ್ಲಿ ನೇಸರಿನಂತೆ ತೇಜೋ ಭಾಸುರನಾಗಿ ಬೆಳಗುತ್ತಿದ್ದ ಕಪಿಲಮುನಿ ಅವರ ಕಣ್ಣಿಗೆ ಬಿದ್ದ. ಅವನ ಕಾಂತಿಕಿರಣಗಳ ಪ್ರಭಾಪುಂಜದಿಂದ ಪಾತಾಳ ಲೋಕದ ದಶದಿಕ್ಕುಗಳೂ ಬೆಳಗಿದ್ದವು. ಅವನೇ ತಮ್ಮ ಕುದುರೆಯ ಕಳ್ಳನೆಂದು ಅವರು ತಿಳಿದುಕೊಂಡರು. ಆ ಸಗರ ಪುತ್ರರು ಮೊದಲೇ ದೇವ ದ್ವೇಷಿಗಳು, ಧರ್ಮದ್ರೋಹಿಗಳು, ಲೋಕಕಂಟಕರು. ಈಗಂತೂ ಅವರ ಯಾಗದ ತೇಜಿಯನ್ನು ಕದ್ದ ಕಪಿಲ ಮುನಿ ಅವರ ಕೈಯಲ್ಲಿ ಸಿಕ್ಕು ಬಿಟ್ಟಿದ್ದ ಕೇಳವದೇನು!

ಆ ದುರುಳರು ತಮ್ಮ ಆಯುಧಗಳನ್ನು ಎತ್ತಿ ''ಹೊಡೆಯಿರಿ ಈ ಕುದುರೆ ಕಳ್ಳನನ್ನು ಕೊಲ್ಲಿರಿ ಈ ಯಜ್ಞಕ್ಕೆ ವಿಘ್ನವೊಡ್ಡಿದವನನ್ನು'' ಎಂದು ನುಡಿದು ಕಪಿಲ ಭಗವಂತನ ಮೇಲೆ ಕೈ ಮಾಡಿದರು. ಭಗವಂತನಾದ ಆ ಕಪಿಲ ಮುನಿ ಕುಳಿತಲ್ಲಿಯೇ ತನ್ನ ಕಣ್ಣು ಹೊರಳಿಸಿ ಅವರೆಡೆಗೆ ನೋಡಿದ. ಆಯಿತು. ಅರವತ್ತುಸಾವಿರ ಸಗರ ಕುಮಾರರ ಮೈಯಲ್ಲಿ ಉರಿ ಅಗ್ನಿಸಂಕಟ. ಅರೆಚಣದಲ್ಲಿ ಎಲ್ಲರೂ ಸುಟ್ಟು ಸತ್ತು ಹೋದರು. ಇತ್ತ ಯಜ್ಞದೀಕ್ಷಿತನಾಗಿ ಕುಳಿತ ಸಗರ ದೊರೆಗೆ ಸಮಾಚಾರ ತಿಳಿಯಿತು ಕಪಿಲಭಗವಂತನ ತೇಜಸ್ಸಿನ ಜ್ವಾಲೆಯಿಂದ ತನ್ನ ಮಕ್ಕಳೆಲ್ಲರೂ ಉರಿದು ಹೋದರೆಂದು. ಆಗ ಅವನು ಅಸಮಂಜಸನ ಮಗನಾದ ಅಂಶುಮಂತನನ್ನು ಅಶ್ವಮೇಧದ ಅಶ್ವವನ್ನು ಕರೆತಲಿಕ್ಕೆ ನಿಯಮಿಸಿದನು.

## ಸುಲಭನೋ ಹರಿ

ಅವನು ಸಗರ ಮಕ್ಕಳು ತೋಡಿದ ದಾರಿಯಿಂದಲೇ ಇಳಿದು ಪಾತಾಳಕ್ಕೆ ಬಂದನು. ಅಲ್ಲಿದ್ದ ಕಪಿಲ ದೇವನನ್ನು ಭಕ್ತಿಯಿಂದ ವಂದಿಸಿ, ಪೂಜಿಸಿ, ಸ್ತುತಿಸಿ ಒಲಿಸಿದನು. ಅವನ ಮೇಲೆ ಪ್ರಸನ್ನನಾಗಿ ಪರಮಾತ್ಮನು ಅನುಗ್ರಹಗೈದು ನುಡಿದನು. ''ಇಕೋ! ನಿಮ್ಮ ಯಜ್ಞದ ಈ ಕುದುರೆ ಇಲ್ಲಿಯೇ ಇದೆ.ಇದನ್ನು ನೀನು ಕರೆದೊಯ್ದು ನಿಮ್ಮ ಅಜ್ಜನಿಗೆ ಒಪ್ಪಿಸು. ನಿನ್ನ ಮೊಮ್ಮಗನು ಸ್ವರ್ಗದಿಂದ ಗಂಗೆಯನ್ನು ಕರೆತರುವನು. ನಿನಗೆ ಬೇಕಾದ

ವರ ಬೇಡು.'' ಆಗ ಅಂಶುಮಂತನು ಕೈ ಮುಗಿದು ''ಸ್ವಾಮಿನ್, ನನ್ನ ಪಿತೃಗಳಾದ ಸಗರ ರಾಜಕುಮಾರರು ಮೊದಲೇ ಅನಾಚಾರಿಗಳು.' ಮೇಲೆ ಈಗ ಬ್ರಹ್ಮದಂಡದಿಂದ ದಗ್ಧರಾಗಿದ್ದಾರೆ. ಅಂದಬಳಿಕ ಅವರಿಗೆ ಮುಂದೆ ಸ್ವರ್ಗಾದಿಸದ್ಗತಿ ಆಗುವದೆಂತು ! ಅದಕ್ಕಾಗಿ ತಾವು ನನಗಿತ್ತ ವರದಿಂದ ಅವರೆಲ್ಲರೂ ಸ್ವರ್ಗ ಸೇರುವಂತಾಗಲಿ'' ಎಂದು ಬೇಡಿಕೊಂಡನು. ಆಗ ಕಪಿಲದೇವ ನುಡಿದ ''ಈ ಮೊದಲೇ ನಿನಗೆ ನಾನು ತಿಳಿಸಿದ್ದೇನೆ, ''ನಿನ್ನ ಮೊಮ್ಮಗ ಮೇಲಿನಿಂದ ಗಂಗೆಯನ್ನು ನೆಲದೆಡೆಗೆ ಕರೆತರುತ್ತಾನೆ'' ಎಂದು. ಅವನು ಕರೆತಂದ ಆ ಸುರನದಿಯ ನೀರು ಈ ನಿನ್ನ ಪಿತೃಗಳ ಎಲವು ಬೂದಿಗೆ ತಾಕಿದರೆ ಸಾಕು, ಅವರೆಲ್ಲರೂ ಸ್ವರ್ಗಕ್ಕೆ ಹೋಗುವರು. ಹರಿಯ ಕಾಲ್ಬೆರಳಿನಿಂದ ಹರಿದು ಬಂದ ಆ ನೀರಿನ ಮಹಿಮೆಯೇ ಅಂಥದು. ಆ ಪುಣ್ಯಜಲದಲ್ಲಿ ಸಂಕಲ್ಪಪೂರ್ವಕವಾಗಿ ಸ್ನಾನ ಮಾಡಿದವರು ಮಾತ್ರ ಉದ್ಧಾರವಾಗುವದಿಲ್ಲ. ಸತ್ತ ಪ್ರಾಣಿಯ ತೊಗಲು, ಎಲಬು, ಸ್ನಾಯು ನರ, ಕೂದಲು ದೇಹದ ಯಾವದೋ ಭಾಗ, ತುಂಡು, ತುಣುಕು, ತುಸು ತಾಗಿದರೂ ಸಾಕು ಆ ಪುಣ್ಯೋದಕಕ್ಕೆ. ಎಂಥ ಪತಿತ ಮನುಷ್ಯನಾದರೂ ತತ್‌ಕ್ಷಣದಲ್ಲಿ ಉದ್ಧೃತನಾಗಿ ಸ್ವರ್ಗವನ್ನು ಸೇರುತ್ತಾನೆ.''

ಭಗವಂತನ ಈ ಅನುಗ್ರಹ ವಚನ ಕೇಳಿ ಅಂಶುಮಂತನು ಅವನಿಗೆ ಸಾಷ್ಟಾಂಗ ವಂದಿಸಿದ. ಅವನ ಅಜ್ಞೆಯಂತೆ ಯಾಗದ ಕುದುರೆಯನ್ನು ತೆಗೆದುಕೊಂಡು ಬಂದು ಅಜ್ಜನಿಗೆ ಒಪ್ಪಿಸಿದ. ಸಗರರಾಜನು ಆ ಅಶ್ವದಿಂದ ತಾನು ಪ್ರಾರಂಭಿಸಿದ ಅಶ್ವ ಮೇಧಯಾಗವನ್ನು ಪೂರ್ತಿಗೊಳಿಸಿದ. ಸಗರಕುಮಾರರು ಪಾತಾಳಕ್ಕೆ ಇಳಿಯಲಿಕ್ಕಾಗಿ ಅಗಿದ ಪೊಡವಿಯ ಒಡಲಿನ ಆ ದೊಡ್ಡ ತಗ್ಗಿನಲ್ಲಿ ನೀರು ತುಂಬಿ ಅದೇ ಸಾಗರ ಎಂದು ಹೆಸರಾಯಿತು. ಸಗರರಾಜನು ಆ ಸಮುದ್ರನಾಥನನ್ನು ತನ್ನ ಒಬ್ಬ ಮಗನೆಂದೇ ಪರಿಗಣಿಸಿದನು. ಯಜ್ಞದ ಅಶ್ವಮೇಧ ಕುದುರೆಯನ್ನು ಮರಳಿ ತಂದ ಅಂಶುಮಂತನಿಗೆ ದಿಲೀಪ ಎಂಬ ಮಗನು ಜನಿಸಿದ. ಆ ದಿಲೀಪನ ಮಗನೇ ಭಗೀರಥ. ಅವನು ಸ್ವರ್ಗದ ಆ ಪುಣ್ಯ ಪ್ರವಾಹವನ್ನು ಭೂಮಿಗೆ ತಂದ. ಇಲ್ಲಿಂದ ಪಾತಾಳಕ್ಕೆ ಕರೆದೊಯ್ದ. ಅದೇ ಕಾರಣದಿಂದಾಗಿ ಆ ದೇವಗಂಗೆ ಭಾಗೀರಥಿ ಎಂಬ ಹೆಸರು ಬಂದಿತು. ಭಗೀರಥನಿಂದ ಮುಂದೆ ಆ ಕುಲದಲ್ಲಿ ಸುಹೋತ್ರ, ಶ್ರುತ, ನಾಭಾಗ, ಅಂಬರೀಷ, ಸಿಂಧುದ್ವೀಪ, ಅಯುತಾಯು, ಋತುಪರ್ಣ ಮುಂತಾಗಿ ಅನೇಕ ರಾಜರು ಜನಿಸಿದರು. ಕೊನೆಯವನಾದ ಋತುಪರ್ಣ ಲೆತ್ತದಾಟದಲ್ಲಿ ವಿಲಕ್ಷಣ ಚಾತುರ್ಯವನ್ನು ಪಡೆದಿದ್ದನು. ಪುಣ್ಯ ಶ್ಲೋಕನಾದ ನಳರಾಜನಿಗೆ ಅವನು ಸಹಾಯ ಮಾಡಿದನು. ಋತುಪರ್ಣನ ಪುತ್ರನು ಸರ್ವಕಾಮ, ಅವನ ಮಗ ಸುದಾಸ, ಸುದಾಸನಿಗೆ ಮಿತ್ರಸಹನು ಪುತ್ರನಾದರು.

## ರಾಜನು ರಕ್ಕಸನಾದ ಒಂದು ದುಃಖದ ಘಟನೆ

ಒಮ್ಮೆ ಮಿತ್ರಸಹನು ಬೇಟೆಗಾಗಿ ಕಾಡಿಗೆ ಹೋಗಿದ್ದ. ಅಲ್ಲಿ ಎರಡು ಕ್ರೂರ ಹುಲಿಗಳು ಅವನ ಪ್ರಾಂತದ ಪ್ರಾಣಿಗಳನ್ನೆಲ್ಲ ಕಡಿದು ಕೊಂದು ಹಾಕಿವೆ ಎಂದು ತಿಳಿದು ಬಂದಿತು. ಅವುಗಳನ್ನು ಅರಿಸಿಕೊಂಡು ಮಹಾರಾಜನು ಕಗ್ಗಾಡಿನಲ್ಲಿ ಒಳ ನುಗ್ಗಿದಾಗ ಆ

ಗಿರಿ ಗರ್ಭದ ಗಹನಗೂಡಿನಲ್ಲಿ ಜೋಡು ಹುಲಿಗಳು ಅವನ ಕಣ್ಣಿಗೆ ಬಿದ್ದವು. ಕೂಡಲೇ ಆ ರಾಜನು ಅವುಗಳಿಗೆ ಗುರಿ ಇಟ್ಟು ಬಾಣ ಬಿಟ್ಟ. ತಕ್ಷಣ ಒಂದು ಹುಲಿಯು ಅಲ್ಲಿಯೇ ಸತ್ತು ಬಿದ್ದಿತು. ಸಾಯುವಾಗ ಅದು ಹುಲಿಯ ರೂಪ ಬಿಟ್ಟು ಕ್ರೂರ ಮುಖದ ದೊಡ್ಡ ದೈತ್ಯನಾಗಿ ಧರೆಗುರುಳಿತು. ಎರಡನೆ ಹುಲಿಯು ''ರಾಜನ್, ನಾನು ಇದರ ಸೇಡನ್ನು ತೀರಿಸಿಕೊಳ್ಳದೆ ಬಿಡುವದಿಲ್ಲ'' ಎಂದು ಹೇಳಿ ಓಡಿಹೋಗಿ ಕಾಡಿನಲ್ಲಿ ಕಣ್ಮರೆಯಾಯಿತು.

ಕೆಲಕಾಲವು ಸರಿದ ಬಳಿಕ ಮಿತ್ರಸಹಮಹಾರಾಜನು ಒಂದು ಯಜ್ಞ ಮಾಡಿದ. ಅದರ ಅಧ್ವರ್ಯಗಳು ಕುಲ ಪುರೋಹಿತರಾದ ವಶಿಷ್ಠರೇ ಆಗಿದ್ದರು. ಯಜ್ಞ ಮುಗಿದ ಬಳಿಕ ಆಚಾರ್ಯ ವಶಿಷ್ಠರು ಯಾವದೊ ಕೆಲಸಕ್ಕಾಗಿ ಹೊರಗೆ ಹೋಗಿದ್ದರು. ಆ ಸಮಯವನ್ನು ಸಾಧಿಸಿ ಕಾಡಿನಲ್ಲಿ ಓಡಿಹೋದ ವ್ಯಾಘ್ರ ರೂಪಿ ದೈತ್ಯನು ವಸಿಷ್ಠರ ರೂಪದಿಂದ ಮಹಾರಾಜನ ಬಳಿಗೆ ಬಂದು ಅಧಿಕಾರವಾಣಿಯಿಂದ ಅಪ್ಪಣೆ ಗೈದ. ''ರಾಜನೇ, ಯಜ್ಞವೆಲ್ಲ ಪೂರ್ತಿ ಮುಗಿದಂತಾಗಿದೆ. ಇನ್ನೇಕೆ ನಾಲಿಗೆಯ ನಿಯಂತ್ರಣ ! ಇಂದು ಮನುಷ್ಯರ ಮಾಂಸ ಹಾಕಿ ರುಚಿಕರವಾದ ಅಡುಗೆ ಆಗಲಿ, ನಾನೀಗ ಬರುತ್ತೇನೆ. ಸ್ವಾದಿಷ್ಟವಾದ ಮಾಂಸಾಹಾರವು ಬೇಗ ಸಿದ್ಧವಾಗಲಿ'' ಸಾಕ್ಷಾದ್ ವಸಿಷ್ಠರೇ ಈ ಮಾತನ್ನು ಹೇಳಿದ್ದಾರೆಂದೇ ಮಿತ್ರಸಹ ತಿಳಿದ. ಅವನಿಗೆ ಅತ್ಯಾಶ್ಚರ್ಯವಾಯಿತು.

## ಮುನಿಗಳ ಮಾಂಸ ಬಡಿಸಿದಾಗ

ಶುದ್ಧ ಶಾಕಾಹಾರಿಯಾದ ಆ ಸಾತ್ವಿಕ ಸಮ್ರಾಟನ ಮನೆಯಲ್ಲಿ ಮಾಂಸದ ಅಡಿಗೆಯನ್ನು ಮಾಡಬಲ್ಲ ಪಾಚಕರೆಲ್ಲಿ ಸಿಗಬೇಕು? ಆದರೆ ಗುರುಗಳು ಸ್ವಯಂ ಬಂದು ''ಇಂದು ಮಾಂಸಾಹಾರವೇ ಆಗಬೇಕು'' ಎಂದು ತಾವಾಗಿ ಹೇಳಿಹೋಗಿದ್ದಾರೆ. ಅವರ ಅಪ್ಪಣೆಯನ್ನೂ ಮೀರಲಿಕ್ಕೆಬಾರದು. ಅದಕ್ಕೆ ಏನು ಮಾಡುವದು? ಎಂದು ರಾಜನು ಯೋಚಿಸುತ್ತ ಕುಳಿತಾಗಲೇ ಅಲ್ಲಿಗೆ ಮಾಂಸದಿಂದಲೇ ಮೃಷ್ಟಾನ್ನವನ್ನು ತಯಾರಿಸುವ ಓರ್ವ ಅಡಿಗೆಯವನು ಬಂದು ''ನಿಮ್ಮಲ್ಲಿ ಆಮಿಷ ಪಾಕವನ್ನು ಮಾಡುವದಿದ್ದರೆ ನಾನು ಮಾಡುತ್ತೇನೆ'' ಎಂದು ಹೇಳಿದನು. ಅದನ್ನು ಕೇಳಿ ರಾಜನಿಗೆ ಒಳ್ಳೇ ಸಮಯಕ್ಕೆ ದೇವರೇ ತನ್ನ ಸಹಾಯಕ್ಕೆ ಬಂದಂತೆ ಎನಿಸಿತು. ಆದರೆ ವಾಸ್ತವಿಕವಾಗಿ ಬಂದವ ದೈತ್ಯನಾಗಿದ್ದ. ವಶಿಷ್ಠರ ರೂಪದಿಂದ ಬಂದು ನರಮಾಂಸ ಬೇಕು ಎಂದು ಹೇಳಿದ ದುಷ್ಟದೈತ್ಯನೇ ಮತ್ತೀಗ ಅಡಿಗೆಯ ಭಟ್ಟನಾಗಿ ಬಂದು ಮಾಂಸ ಭೋಜನವನ್ನು ಸಿದ್ಧಪಡಿಸಿ ಇಟ್ಟ.

ಅಷ್ಟರಲ್ಲಿ ಕಾರ್ಯಾಂತರಕ್ಕೆ ಹೋದ ನಿಜವಾದ ವಶಿಷ್ಠರು ಮರಳಿ ಅರಮನೆಗೆ ಬಂದರು. ಮಹಾರಾಜನು ಅವರ ದಾರಿಯನ್ನೇ ಕಾಯುತ್ತಲಿದ್ದ. ಬಂದ ಕೂಡಲೇ ಅವರನ್ನು ಸ್ವಾಗತ ಮಾಡಿ ಕೂಡಿಸಿ ಅವರ ಎದುರಿಗೆ ಬಂಗಾರದ ತಾಟಿನಲ್ಲಿ ಮಾಂಸವನ್ನು ಬಡಿಸಿ ತಂದಿಟ್ಟ. ಅದನ್ನು ನೋಡಿ ವಶಿಷ್ಠರಿಗೆ ಕೌತುಕವೂ ಆಯಿತು. ಕೋಪವೂ ಬಂದಿತು. ಆದರೆ ಅವರು ವಿಷಯವನ್ನು ಪೂರ್ತಿ ತಿಳಿಯದೇ ಸಿಟ್ಟಿಗೇಳಬಾರದೆಂದು ಒಂದು ಕ್ಷಣ ಕಣ್ಣು ಮುಚ್ಚಿ ತಂದಿಟ್ಟ ವಸ್ತು ಏನು ಎಂದು ಆಲೋಚನೆಗೈದರು. ಅದು ನಿಶ್ಚಿತವಾಗಿಯೂ ನರಮಾಂಸವೆಂದು ಅವರಿಗೆ ಗೊತ್ತಾಯಿತು. ಕೂಡಲೇ ಅವರ ಕೋಪ

ಕೆರಳಿತು. ಶಾಪದ ನುಡಿ ಸಿಡಿದು ಬಂದಿತು. ''ನಮ್ಮಂತಹ ತಪಸ್ವಿಗಳು ಇಂಥ ಮಾಂಸಾಹಾರವನ್ನು ಮುಟ್ಟುವದಿಲ್ಲ ಎಂದು ನಿನಗೆ ಗೊತ್ತಿದೆ. ಆದರೂ ಇಂಥ ಹೇಯವಾದ ನರಮಾಂಸವನ್ನು ನನ್ನ ಮುಂದೆ ತಂದಿರಿಸಿರುವೆ. ಆದುದರಿಂದ ನೀನು ಇದೇ ನರಮಾಂಸ ತಿನ್ನುವ ರಾಕ್ಷಸನಾಗು.''

ಆಗ ಹೆದರಿ ಹೌಹಾರಿದ ಆ ದೊರೆಯು ನಡುಗುತ್ತ ''ಪೂಜ್ಯರೇ ! ಇದೀಗ ತಾವೇ ಬಂದು 'ಇಂದು ಭೋಜನಕ್ಕೆ ನರಮಾಂಸವೇ ಆಗಬೇಕು'' ಎಂದು ಅಪ್ಪಣೆ ಕೊಟ್ಟದ್ದಿರಿ. ಆದರಂತೆ ನಾನೀಗ ಈ ಆಮಿಷ ಭೋಜನವನ್ನು ಸಿದ್ಧಪಡಿಸಿ ತಮಗೆ ಬಡಿಸಿದ್ದೇನೆ'' ಎಂದು ನುಡಿದನು. ಆಗ ವಸಿಷ್ಠರು 'ಇದೇನು ಅವಾಂತರ? ಇಲ್ಲೇನೋ ಮೋಸ ನಡೆದಿರಬಹುದು' ಎಂದು ಸಂದೇಹ ಬಂದು ಮತ್ತೆ ಧ್ಯಾನಪರರಾದರು. ಅಂತರ್ದೃಷ್ಟಿಯಿಂದ ಪರಿಕ್ಷಿಸಿ ನೋಡಿದಾಗ ನಡೆದ ನಿಜಸಂಗತಿಯೆಲ್ಲವೂ ಅವರ ಕಣ್ಣಿಗೆ ನಿಚ್ಚಳವಾಗಿ ಗೋಚರವಾಯಿತು. 'ಇದೆಲ್ಲವೂ ಈ ರಾಜನ ಮೇಲಿನ ಸೇಡು ತೀರಿಸಿಕೊಳ್ಳ ಹೊರಟ ಕಾಡು ದೈತ್ಯನ ಕುಟಿಲ ಕಾರಸ್ಥಾನ' ಎಂದು ಖಾತ್ರಿಯಾದ ಬಳಿಕ ಅವರು ಅವನಿಗೆ ಅನುಗ್ರಹ ಗೈದರು. ''ಈ ನಿನ್ನ ರಾಕ್ಷಸ ರೂಪವು ಹನ್ನೆರಡು ವರ್ಷ ಮಾತ್ರ ಇರುವದು, ಆಮೇಲೆ ನೀನು ಮತ್ತೆ ಮಾನವನಾಗುವೆ'' ಎಂದು ಸಂತೈಸಿದರು.

ಆದರೆ ಮಿತ್ರಸಹನಿಗೆ ಇದೂ ಕೂಡ ಅಸಹ್ಯವೆನಿಸಿತು. ತನ್ನದೇನೂ ತಪ್ಪಿಲ್ಲದೆ ತನಗೇಕೆ ಈ ವಶಿಷ್ಠರ ಶಾಪ ? ದೈತನಾಗುವ ತಾಪ ? ''ಕಾರಣವಿಲ್ಲದೇ ನನಗೆ ಹನ್ನೆರಡು ವರ್ಷ ಮನುಷ್ಯಮಾಂಸ ತಿನ್ನುವ ರಕ್ಕಸನಾಗು ಎಂದು ಶಾಪವನ್ನು ಚಲ್ಲಿದ ಈ ವಶಿಷ್ಠರಿಗೇ ನಾನು ಪ್ರತಿ ಶಾಪ ಕೊಟ್ಟು ಬುದ್ಧಿ ಕಲಿಸುತ್ತೇನೆ'' ಎಂದು ನಿರ್ಧರಿಸಿದ. ಕೈಯಲ್ಲಿ ಶಾಪ ಜಲವನ್ನು ಹಿಡಿದು ಅಭಿಮಂತ್ರಿಸಿ ಆ ಶಾಪೋದಕವನ್ನು ವಶಿಷ್ಠರ ಮೇಲೆ ತೂರಬೇಕೆಂದು ತನ್ನ ಕೈಯೆತ್ತಿದ್ದ. ಆಗ ಅವನ ಮಡದಿಯಾದ ಮದಯಂತಿಯು ಅಲ್ಲಿಗೆ ಓಡಿ ಬಂದಳು. ಅವನನ್ನು ತಡೆದಳು. ''ನಾಥಾ, ಗುರುಗಳಿಗೆ ಶಾಪ ಕೊಡುವದೇ ! ಇದೇನು ಅನ್ಯಾಯ ! ಆಚಾರ್ಯ ವಶಿಷ್ಠರು ನಮ್ಮ ಪಾಲಿನ ದೇವರು. ನಮ್ಮ ಕುಲಾಚಾರ್ಯರು. ಅವರನ್ನು ಶಪಿಸಬೇಡಿರಿ'' ಎಂದು ಹೇಳಿ ಶಾಪದ ನೀರು ತುಂಬಿದ ಅವನ ಕೈಯನ್ನು ಹಿಡಿದಳು. ಶಾಪಾಕ್ಷರಗಳಿಂದ ಮಂತ್ರಿಸಿದ ಆ ಶಾಪಸಲಿಲವನ್ನು ಮುಗಿಲಿನಲ್ಲಿ ಚಲ್ಲಿದರೆ ಮೋಡಗಳು ಉಡುಗಿ ಹೋಗುವವು. ನೆಲದಲ್ಲಿ ಚಿಮ್ಮಿದರೆ ಬೆಳೆಗಳು ಹಾಳಾಗುವವು. ಆದ್ದರಿಂದ ಅವನು ಆ ಶಾಪೋದಕವನ್ನು ತನ್ನ ಕಾಲುಗಳ ಮೇಲೆ ಚೆಲ್ಲಿಕೊಂಡನು. ಕೋಪತಾಪಿತವಾದ ಆ ಶಾಪೋದಕದಿಂದ ಮಿತ್ರಸಹನ ಎರಡೂ ಕಾಲಗಳು ಕಾಂತಿಗೆಟ್ಟವು. ಸುಟ್ಟು ಕರಕಾದವು. ಆ ಕಾಲುಗಳಿಂದ ಅವನು ಮುಂದೆ ಕಲ್ಮಾಷಪಾದ ಎಂಬ ನಾಮಾಂತರವನ್ನು ಹೊಂದಿದ. ಮುಂದೆ ವಶಿಷ್ಠರ ಶಾಪದಿಂದ ಆ ಕಲ್ಮಾಷಪಾದನು ಮೂರು ದಿನಕ್ಕೊಮ್ಮೆ ಕೆಲಕಾಲ ರಾಕ್ಷಸನಾಗಿ ಕಂಡವರನ್ನೆಲ್ಲ ಕೊಂದು ತಿಂದು ಬರುತ್ತಿದ್ದನು.

## ವಿವೇಕ ಭ್ರಷ್ಟಾನಾಂ ಭವತಿ ವಿನಿಪಾತಃ ಶತಮುಖಃ

ಒಂದು ದಿನ ಒಬ್ಬ ಮುನಿಯು ಋತುಸ್ನಾತಳಾದ ತನ ಮಡದಿಯೊಡನೆ ಕೂಡಿದ್ದು ರಕ್ಕಸ ರೂಪತಾಳಿದ ಕಲ್ಮಾಷನ ಕಣ್ಣಿಗೆ ಬಿದ್ದಿತು. ಇವನನ್ನು ಕಂಡ ಕೂಡಲೇ

ದಂಪತಿಗಳಿಬ್ಬರೂ ತಮ್ಮ ಕಾಮಕ್ರೀಡೆಯನ್ನು ಬಿಟ್ಟು ಓಡತೊಡಗಿದರು. ಮಿತ್ರಸಹನು ಅವರನ್ನು ಬೆನ್ನಟ್ಟಿ ಆ ಬ್ರಾಹ್ಮಣನನ್ನು ಹಿಡಿದುಕೊಂಡನು. ಆಗ ಮುನಿಯ ಮಡದಿಯು ಅಲ್ಲಿಗೆ ಬಂದು ಮಿತ್ರಸಹನೆದುರಿಗೆ ಅಡ್ಡಬಿದ್ದು ಅಂಗಲಾಚಿದಳು. ''ಮಹಾರಾಜ, ಪ್ರಸನ್ನನಾಗು. ನೀನು ನಿಜವಾಗಿ ರಾಕ್ಷಸನಲ್ಲ. ನೀನು ನಮ್ಮ ದೊರೆ. ಮಿತ್ರಸಹ ಮಹಾರಾಜ. ಇಕ್ಷ್ವಾಕು ಕುಲಕ್ಕೆ ನೀನೊಂದು ತಿಲಕ ಇದ್ದಂತೆ. ದಯಮಾಡಿ ಬ್ರಹ್ಮಹತ್ಯೆಯನ್ನು ಮಾಡಬೇಡ. ಮಹಾರಾಜ, ಮೈ ಸುಖವನ್ನು ಬಯಸಿ ಬಂದ ನಾನು ಈ ನನ್ನ ಪತಿಯೊಡನೆ ಸರಸಕ್ಕಿಳಿದಾಗಲೇ ನೀನು ಬಂದು ಅರ್ಧಕ್ಕೆ ತಡೆದೆ. ಹೆಣ್ಣಿನ ದೇಹದ ಸುಖವನ್ನು ಉಂಡ ನಿನಗೆ ಗೊತ್ತು, 'ರತಿ ಸುಖವು ಅರ್ಧವಾದಾಗ ರಮಣನನ್ನು ಕಸಿದುಕೊಂಡು ಕೊಂದು ಹಾಕಿದರೆ ಪತ್ನಿಯ ಜೀವಕ್ಕೆ ಎಂಥ ದುಃಖವಾಗುವದೆಂದು. ದಯಮಾಡಿ ನನ್ನ ಪತಿಯನ್ನು ಬಿಡು. ಮಾಂಗಲ್ಯ ಭಿಕ್ಷೆಯನ್ನು ನೀಡು'' ಎಂದು ಹಲಬಿ, ಹೇಳಿಕೊಂಡು, ಕೈ ಮುಗಿದು, ಕಾಲಿಗೆ ಬಿದ್ದು ಮತ್ತೆ ಮತ್ತೆ ಬೇಡಿಕೊಂಡಳು. ಆದರೆ ರಾಕ್ಷಸನಾದ ಮಿತ್ರಸಹನಿಗೆ ದಯೆ ಬರಲಿಲ್ಲ. ಬ್ರಾಹ್ಮಣ ಪತ್ನಿಯ ಮಾತಿಗೆ ಕಿವಿಗೊಡಲಿಲ್ಲ. ಆ ಬ್ರಾಹ್ಮಣನನ್ನು ಬಿಡಲಿಲ್ಲ. ಹಸಿದ ಹುಲಿಯಂತೆ ಆ ಬ್ರಾಹ್ಮಣನ ಮೇಲೆ ಎರಗಿ ಕರುಣೆ ಇಲ್ಲದೇ ಕೊಂದನು. ಅವಳ ಎದುರಿಗೇ ಕುಳಿತು ಆ ಬ್ರಾಹ್ಮಣನ ಮಾಂಸವನ್ನು ತಿಂದನು. ಅದನ್ನು ಕಂಡು ಆ ಬ್ರಾಹ್ಮಣನ ಧರ್ಮ ಪತ್ನಿಯು ಕೋಪದಿಂದ ಕಿಡಿಕಿಡಿಯಾಗಿ ಆ ರಾಜನಿಗೆ ಶಾಪವಿತ್ತಳು.

''ನನಗೆ ಪತಿಯಿಂದ ಇನ್ನೂ ತೃಪ್ತಿಯಾಗದೇ ಇದ್ದಾಗ ನೀನು ಅವನನ್ನು ಕೊಂದು ತಿಂದೆ. ಆದ್ದರಿಂದ ನೀನು ನಿನ್ನ ಮಡದಿಯೊಡನೆ ಕಾಮಕೇಳಿಗೆ ಇಳಿದಾಗಲೇ ಮರಣ ಹೊಂದುವಿ.'' ಈ ರೀತಿಯಾಗಿ ಶಾಪವಿತ್ತು ದುಃಖಾಗ್ನಿಯಲ್ಲಿ ಬೆಂದ ಆ ಬ್ರಾಹ್ಮಣಿಯು ಚಿತಾಗ್ನಿಯನ್ನು ಏರಿ ಸಹಗಮನ ಮಾಡಿದಳು, ಮುಂದೆ ಹನ್ನೆರಡು ವರ್ಷ ಕಳೆದ ಬಳಿಕ ರಾಜನಿಗೆ ಹಿಡಿದ ಶಾಪ ಬಿಟ್ಟಿತು. ರಾಕ್ಷಸಭಾವವು ತೊಲಗಿತು. ಅವನಲ್ಲಿ ಸಾತ್ವಿಕ ವೃತ್ತಿಯು ಮೊದಲಿನಂತೆ ಮರುಕಳಿಸಿತು. ಅವನ ದೇಹವು ತನ್ನ ಪಟ್ಟದರಸಿಯಾದ ಮದಯಂತಿಯ ಸಂಗ ಸುಖಕ್ಕಾಗಿ ಹಾತೊರೆಯಿತು. ಆಗ ಅವನು ಕಾಮಾತುರನಾಗಿ ಮದಯಂತಿಯ ಅಂತಃಪುರಕ್ಕೆ ಬಂದನು. ಆಗ ಆ ಸಾಧ್ವೀಮಣಿಯು ಪತಿಗೆ ಬ್ರಾಹ್ಮಣ ಪತ್ನಿಯ ಶಾಪವನ್ನು ನೆನಪಿಗೆ ತಂದುಕೊಟ್ಟಳು. ಮತ್ತು ''ಇನ್ನು ಈ ಜನ್ಮದಲ್ಲಿ ವಿಷಯ ಸುಖಕ್ಕೆ ಆಶೆಪಡುವದು ಬೇಡ'' ಎಂದು ತಿಳಿಸಿ ಹೇಳಿದಳು. ಅಂದಿನಿಂದ ಮಿತ್ರಸಹ ಮಹಾರಾಜನು ಹೆಣ್ಣಿನ ಮೈ ಸುಖದಿಂದ ಮನಸ್ಸನ್ನೇ ತಿರುಗಿಸಿಬಿಟ್ಟನು. ಆದರೆ ರಾಜ್ಯಕ್ಕೆ ಮುಂದೆ ಉತ್ತರಾಧಿಕಾರಿಗಳೇ ಇಲ್ಲದಂತಾಯಿತು. ಆಗ ಅವನು ಕುಲಾಚಾರ್ಯರಾದ ವಶಿಷ್ಠರನು ಪ್ರಾರ್ಥಿಸಿಕೊಂಡ. ಅವನ ಅಪೇಕ್ಷೆಯ ಮೇರೆಗೆ ವಶಿಷ್ಠರು ಪಟ್ಟದರಸಿಯ ಹೊಟ್ಟೆಯಲ್ಲಿ ತಮ್ಮ ಶಕ್ತಿಯಿಂದ ಗರ್ಭವನ್ನು ಇರಿಸಿದರು. ಆದರೆ ಆ ಗರ್ಭವು ಎಷ್ಟು ದಿನವಾದರೂ ಬೆಳೆಯಲೂ ಇಲ್ಲ, ಹೊರಬರಲೂ ಇಲ್ಲ. ಏಳೆಂಟು ವರ್ಷಗಳಾದರೂ ಅದು ಕಲ್ಲಾಗಿ ಉದರದಲ್ಲಿಯೇ ಕುಳಿತಿತು. ವ್ಯರ್ಥವಾಗಿ ಈ ಪಿಂಡವನ್ನು ಎಷ್ಟು ದಿನ ಹೊತ್ತುಕೊಂಡು ತಿರುಗಬೇಕು' ಎಂದು ಮದಯಂತಿಗೆ ಬೇಸರಾಯಿತು. ಕೊನೆಗೆ ಅವಳು

ಸಿಟ್ಟಿನಿಂದ ಒಂದು ಕಲ್ಲು ತೆಗೆದುಕೊಂಡು ತನ್ನ ಹೊಟ್ಟೆಗೆ ಹೊಡೆದುಕೊಂಡಳು. ಗರ್ಭವು ಹೊರಬಿದ್ದಿತು. ಮುತ್ತಿನಂತಹ ಗಂಡು ಮಗು. ರಾಜ ರಾಣಿಯರಿಗೆ ಮಹದಾನಂದ ಆಯಿತು. ಕಲ್ಲಿನಪೆಟ್ಟು ತಿಂದು ಹೊಟ್ಟೆಯಿಂದ ಹೊರ ಬಿದ್ದು ಬಂದುದರಿಂದ ಆ ಮಗುವಿಗೆ 'ಅಶ್ಮಕ' ಎಂದು ಹೆಸರಾಯಿತು. (ಅಶ್ಮ = ಕಲ್ಲು). ಆ ಅಶ್ಮಕನಿಗೆ ಮೂಲಕನೆಂಬ ಮಗನು ಹುಟ್ಟಿದನು.

## ಅಬಲೆಯರೇ ಅರಸನನ್ನು ಉಳಿಸಿದರೂ ಅದು ಹೇಗೆ ?

ಮೂಲಕನು ರಾಜನಾಗಿ ಇದ್ದಾಗ ಪರಶುರಾಮ ದೇವರು ಕ್ಷತ್ರಿಯ ಕುಲವನ್ನೇ ಅಳಿದು ಬಿಡಬೇಕೆಂದು ಅಣೆ ಇಟ್ಟು ಹೊರಟ್ಟಿದ್ದರು. ಅವರ ಕೊಡಲಿಯ ಪೆಟ್ಟಿಗೆ ನರೇಂದ್ರರ ದೊಡ್ಡ ದೊಡ್ಡ ಮನೆತನಗಳೆಲ್ಲ ಸಿಕ್ಕು ನುಚ್ಚು ನೂರಾಗಿ ಹೋದವು. ಆ ಕೊಡಲಿ ರಾಮನ ಸವಾರಿಯು ಮೂಲಕನ ಊರಿಗೆ ಧೂಮಕೇತುವಿನಂತೆ ಬಂದೆರಗಿದಾಗ ಅವನ ರಾಣೀ ವಾಸದ ರಮಣಿಯರೆಲ್ಲರು ಒಂದು ಚಮತ್ಕಾರವನ್ನು ಮಾಡಿ ತಮ್ಮ ರತಿಕಾಂತನನ್ನು ಉಳಿಸಿಕೊಂಡರು. ಚಂಡಕೋಪನಾದ ಭಾರ್ಗವನು ಕೆಂಡದಂಥ ಕಂಗಳಿಂದ ಕಿಡಿಕಾರುತ್ತ ಕೊಡಲಿ ಎತ್ತಿ ಅರಮನೆಗೆ ಬಂದಾಗ ಮೂಲಕನ ಪ್ರೇಯಸಿಯರೆಲ್ಲರು ಬತ್ತಲೆಯರಾಗಿ ಮೂಲಕನ ಸುತ್ತು ಮುತ್ತು ನಿಂತುಬಿಟ್ಟರು. ನೈಷ್ಠಿಕ ಬ್ರಹ್ಮಚಾರಿಯಾದ ದೇವೋತ್ತಮ ಪರಶುರಾಮನು ಆ ದೃಶ್ಯವನ್ನು ನೋಡಲಾರದೆ ದೂರದಿಂದಲೇ ಕತ್ತು ತಗ್ಗಿಸಿ ಅಲ್ಲಿಂದ ಹೊರಟು ಹೋದನು. ಮತ್ತೆ ಎಂದೂ ಆ ಕೊಡಲಿಯ ಕಡುಗಲಿಯು ಮೂಲಕನ ಊರಿನತ್ತ ಕಣ್ಣೆತ್ತಿ ಕೂಡ ನೋಡಲಿಲ್ಲ. ಅಂದು ನಾರಿಯರೆಲ್ಲರು ಮೂಲಕನ ಮೈಗೆ ಮೈ ಹತ್ತಿ ಮೆತ್ತಿ ಕವಚದಂತೆ ನಿಂತು ರಕ್ಷಿಸಿದ್ದರಿಂದ ಅವನಿಗೆ 'ನಾರೀಕವಚ' ಎಂದು ಹೆಸರಾಯಿತು. ಈ ಮೂಲಕನಿಂದ ಮುಂದೆ ಇಕ್ಷ್ವಾಕು ವಂಶದಲ್ಲಿ ದಶರಥ, ಇಲವಿಲ, ವಿಶ್ವಸಹ ಮತ್ತು ಖಟ್ವಾಂಗ ಮುಂತಾದ ನರಪತಿಗಳು ಕ್ರಮವಾಗಿ ಜನಿಸಿದರು.

## ಮೃತ್ಯು ಅವಸರ ಪಡಿಸಿದಾಗ ಮೋಕ್ಷ ಪಡೆದ

ಖಟ್ವಾಂಗ ಭೂಪತಿಯು ದೇವತೆಗಳ ಬಿನ್ನಹದಂತೆ ಸುರಾಸುರ ಸಂಗ್ರಾಮದಲ್ಲಿ ಭಾಗವಹಿಸಿ ದಾನವರನ್ನು ತನ್ನ ದಾರುಣವಾದ ದಾಳಿಗಳಿಂದ ಹೊಡೆದು ಧೂಳು ಮಾಡಿ ಹಾರಿಸಿದ. ಆದರಿಂದ ಪರಿತುಷ್ಟರಾದ ದೇವತೆಗಳು ಅವನಿಗೆ ವರ ಕೊಡಲಿಕ್ಕೆ ಮುಂದೆ ಬಂದರು. ಆಗ ಖಟ್ವಾಂಗನು ಅವರಿಗೆ "ಸ್ವಾಮಿ, ನನಗೆ ವರ ಕೊಡುವದಕ್ಕಿಂತ ಮೊದಲು ನನ್ನ ಆಯುಷ್ಯವು ಎಷ್ಟು ಉಳಿದಿದೆ ಹೇಳಿರಿ" ಎಂದು ಕೇಳಿದ. "ಇನ್ನು ಎರಡೂವರೆಘಳಿಗೆ ಮಾತ್ರ" ನೋಡಿ ಹೇಳಿದರು ಸುರಸತ್ತಮರು. ಕೂಡಲೇ ಆ ಖಟ್ವಾಂಗರಾಜನು ಮನೋವೇಗವುಳ್ಳ ವಿಮಾನದಿಂದ ಭೂಲೋಕಕ್ಕೆ ಧಾವಿಸಿಬಂದ. ಇಲ್ಲಿ ತನ್ನ ಗುರು ಹಿರಿಯರಿಗೆಲ್ಲ ನಮಸ್ಕರಿಸಿ ಪ್ರತಿಜ್ಞೆ ಇಟ್ಟು ಧ್ಯಾನ ಸಮಾಧಿಗೆ ಕುಳಿತ. "ಬ್ರಾಹ್ಮಣರಿಗಿಂತ ಬೇರಾರೂ ನನಗೆ ಪ್ರಿಯರಲ್ಲ. ನನ್ನ ಆತ್ಮವೂ ಕೂಡ ಅಲ್ಲ. ಈವರೆಗೆ ನಾನು ಒಮ್ಮೆಯೂ ಧರ್ಮವನ್ನು ಉಲ್ಲಂಘಿಸಿಲ್ಲ. 'ಈ ಚರಾಚರ ಪ್ರಪಂಚವೆಲ್ಲವೂ ಅಚ್ಯುತನನ್ನು ಬಿಟ್ಟು

ಇಲ್ಲ. ಈ ನನ್ನ ನಿಶ್ಚಯಕ್ಕೆ ಎಂದಿಗೂ ಚ್ಯುತಿ ಬಂದಿಲ್ಲ.' 'ಇದೆಲ್ಲವೂ ನಿಜವಾಗಿದ್ದ ಪಕ್ಷದಲ್ಲಿ ಮುನಿ ಮಾನಿತನಾದ ಆ ಪರಮಾತ್ಮನು ತನ್ನ ಅಡಿದಾವರೆಯ ಬಳಿಯಲ್ಲಿ ನನಗೆ ಎಡೆಕೊಡಲಿ' ಎಂದು ಕಡು ನಿರ್ಧಾರದಿಂದ ಭಗವಂತನನ್ನು ಅತ್ಯಂತ ಭಕ್ತಿಭಾವಭರಿತನಾಗಿ ಚಿಂತಿಸಹತ್ತಿದನು. ಅವನ ಮನಸ್ಸು ದೇವದೇವೋತ್ತಮನ ಧ್ಯಾನದಲ್ಲಿಯೇ ತಲ್ಲೀನವಾಯಿತು. ತತ್ಪರವಾಯಿತು, ತನ್ಮಯವಾಯಿತು. ಅದರಿಂದ ಅವನು ಪರಮಾತ್ಮನ ಪರಮ ಪ್ರಸಾದವನ್ನು ಪಡೆದನು. ಅಂದಿನಿಂದ ಖಟ್ವಾಂಗ ಮಹಾರಾಜನ ಆ ಪುಣ್ಯ ಚರಿತ್ರದ ನೆನಪು ಹಾಡಿನ ರೂಪದಿಂದ ಜನ ಹೃದಯದಲ್ಲಿ ಹೊಕ್ಕು ಶಾಶ್ವತ ಸತ್ಯವಾಗಿ ನಿಂತಿದೆ.

''ಖಟ್ವಾಂಗೇನ ಸಮೋ ನಾನ್ಯಃ ಕಶ್ಚಿದುರ್ವ್ಯಾಂ ಭವಿಷ್ಯತಿ ।
ಯೇನ ಸ್ವರ್ಗಾದಿಹಾಗಮ್ಯ ಮುಹೂರ್ತಂ ಪ್ರಾಪ್ಯ ಜೀವಿತಂ ।
ತ್ರಯೋऽತಿ ಸಂಹಿತಾ ಲೋಕಾ ಬುದ್ಧ್ಯಾ ಸತ್ಯೇನ ಚೈವ ಹಿ ॥

ಖಟ್ವಾಂಗನಂಥ ಮನುಷ್ಯರು ಭೂಮಿಯಲ್ಲಿ ಮತ್ತೊಬ್ಬರಿಲ್ಲ. ಸ್ವರ್ಗದಿಂದ ಬಂದಾಗ ಅವನ ಆಯುಷ್ಯವು ಉಳಿದಿದ್ದು ಒಂದು ಮುಹೂರ್ತ ಮಾತ್ರ. ಅಷ್ಟೇ ಅವಕಾಶದಲ್ಲಿ ತನ್ನ ಸದ್ ಬುದ್ಧಿಯನ್ನು ಉಪಯೋಗ ಮಾಡಿಕೊಂಡು ಸತ್ಯಸ್ವರೂಪಿಯಾದ ಪರಮಾತ್ಮನಲ್ಲಿ ತನ್ನ ಚಿತ್ತವನ್ನು ಗಟ್ಟಿಯಾಗಿ ನೆಟ್ಟು, ನೆನೆದು, ಧ್ಯಾನಗೈದು, ಈ ಮೂರು ಲೋಕಗಳನ್ನು ಮೀರಿ ಅವನು ಮೇಲಿನ ಸದ್ಗತಿಯನ್ನು ಹೊಂದಿದ.''

## ಸಂಕ್ಷಿಪ್ತ ರಾಮಾಯಣ

ಖಟ್ವಾಂಗನಿಂದ ಮುಂದೆ ಆ ಇಕ್ಷ್ವಾಕು ವಂಶದಲ್ಲಿ ದೀರ್ಘಬಾಹು, ರಘು, ಅಜ, ದಶರಥ ಮುಂತಾದ ರಾಜರು ಉತ್ಪನ್ನರಾಗಿ ಬೆಳಗಿ ಬಾಳಿದರು. ಆ ದಶರಥನಿಂದ ಪರಮಾತ್ಮನ ಪೂರ್ಣಾವತಾರಿಯಾದ ಶ್ರೀ ರಾಮಚಂದ್ರನು ಪ್ರಾದುರ್ಭೂತನಾದನು. ಅವನ ಅಂಶದಿಂದ ಕೂಡಿದ ಭರತ, ಲಕ್ಷ್ಮಣ, ಶತ್ರುಘ್ನರು ದಶರಥ ಕುಮಾರರಾಗಿ ಭೂಮಿಗೆ ಬಂದರು.

ರಾಮನು ಹಾಲ್ಗಲ್ಲದ ಹಸುಳೆ ಇದ್ದಾಗಲೇ ವಿಶ್ವಾಮಿತ್ರನ ಯಜ್ಞವನ್ನು ರಕ್ಷಿಸಲಿಕ್ಕಾಗಿ ಅಡವಿಗೆ ನಡೆದ. ತಾಟಕೆಯನ್ನು ಹೊಡೆದ. ಯಜ್ಞದಲ್ಲಿ ವಿಘ್ನ ಮಾಡಲಿಕ್ಕೆ ಬಂದ ಮಾರೀಚನನ್ನು ಬಾಣದಿಂದ ಎತ್ತಿ ಕಡಲಿನಲ್ಲಿ ಎಸೆದ. ಸುಬಾಹು ಮೊದಲಾದವರನ್ನು ಕೊಂದು ಹಾಕಿದ. ಕಾಲುತಾಕಿಸಿದ ಮಾತ್ರದಿಂದ ಅಹಲ್ಯೆಯ ಪಾಪವನ್ನು ಕಳೆದ. ಜನಕನ ಮನೆಯಲ್ಲಿ ಶಿವನ ಬಿಲ್ಲನ್ನು ಲೀಲೆಯಿಂದೆ ಮುರಿದ. ಹೆಂಗಸಿನ ಮೈಯಿಂದ ಹುಟ್ಟದಿರುವ ಸೀತೆಯನ್ನು ಜನಕನ ಪಣಗೆದ್ದು ಪಾಣಿಗ್ರಹಣ ಮಾಡಿದ. ಎಲ್ಲ ಕ್ಷತ್ರಿಯರನ್ನು ಹುರಿದು ಮುಕ್ಕಿದ. ಕಾರ್ತವೀರ್ಯನ ಕುಲಕ್ಕೆ ಧೂಮಕೇತುವಿನಂತಿದ್ದ ಪರಶುರಾಮನ ಜೊತೆಗೆ ಸೆಣಸಿ ಅವನ ಗರ್ವ ಹರಣದ ಲೀಲೆಯನ್ನು ಮಾಡಿದ. ಅಯೋಧ್ಯೆಗೆ ಬಂದ ಬಳಿಕ ತಂದೆಯ ವಚನವನ್ನು ಪಾಲಿಸಲಿಕ್ಕಾಗಿ ರಾಜ್ಯವನ್ನೇ ತೊರೆದ. ಸೀತಾ ಲಕ್ಷ್ಮಣರನ್ನು ಸಂಗಡ ಕರೆದುಕೊಂಡು

ವನವಾಸಕ್ಕೆ ಹೊರಟ. ಅರಣ್ಯದಲ್ಲಿ ವಿರಾಧ, ಖರ, ದೂಷಣ ಮುಂತಾದ ರಕ್ಕಸರು ಅವನ ಕೋಪಕ್ಕೆ ಬಲಿಯಾದರು. ಕಬಂಧ ಮತ್ತು ವಾಲಿ ಇಬ್ಬರೂ ಅವನ ಬಾಣಕ್ಕೆ ತುತ್ತಾದರು. ಅವನು ಕಡಲನ್ನೇ ಕಟ್ಟಿದ. ರಾಕ್ಷಸ ಕುಲವನ್ನೆಲ್ಲ ಕಡಿದೊಟ್ಟಿದ. ರಾವಣ ಕುಂಭಕರ್ಣರನ್ನು ಸಂಹರಿಸಿದ. ಅಗ್ನಿ ಪ್ರವೇಶ ಮಾಡಿ ತನ್ನ ಸ್ವತಃ ಸಿದ್ಧವಾದ ಶುದ್ಧಿ, ಪಾತಿವ್ರತ್ಯವನ್ನು ಜಗತ್ತಿಗೆ ಪ್ರಕಟಗೊಳಿಸಿದ ಸೀತಾದೇವಿಯನ್ನು ಅಯೋಧ್ಯೆಗೆ ಕರೆತಂದ. ಆ ಮಹಾತಾಯಿಯ ಶೀಲ ಸತೀತ್ವಗಳನ್ನು ದೇವತೆಗಳು ಹಾಡಿ ಹೊಗಳಿದರು. ಆ ಮೇಲೆ ಅಯೋಧ್ಯಾ ಪಟ್ಟಣದಲ್ಲಿ ನೆರವೇರಿದ ಆ ರಾಮಚಂದ್ರನ ಪಟ್ಟಾಭೀಷೇಕದ ಮಂಗಲ ಮಹೋತ್ಸವದ ಮಹಾವೈಭವವನ್ನು ನೂರು ವರ್ಷ ಬಣ್ಣಿಸಿದರೂ ತೀರದು. ಆದರೂ ಸಂಕ್ಷೇಪದಲ್ಲಿ ವಿವರಿಸುತ್ತೇನೆ, ಆಲಿಸು.

ಶ್ರೀ ರಾಮಪಟ್ಟಾಭಿಷೇಕ ಕಾಲದಲ್ಲಿ ಲಕ್ಷ್ಮಣ, ಭರತ, ಶತ್ರುಘ್ನ, ವಿಭೀಷಣ, ಸುಗ್ರೀವ, ಜಾಂಬುವಂತ, ಹನುಮಂತ ಮೊದಲಾದ ಭಕ್ತರೆಲ್ಲರೂ ಛತ್ರಚಾಮರ ಮುಂತಾದವುಗಳನ್ನು ಹಿಡಿದು ಸೇವೆಯನ್ನು ಸಲ್ಲಿಸುತ್ತಲಿದ್ದರು. ಬ್ರಹ್ಮ, ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ, ರುದ್ರ, ಮೊದಲಾದ ದೇವತೆಗಳು ಕೈ ಕಟ್ಟಿಕೊಂಡು ನಿಂತಿದ್ದರು. ವಶಿಷ್ಠ, ವಾಮದೇವ, ವಾಲ್ಮೀಕಿ, ಮಾರ್ಕಂಡೇಯ, ವಿಶ್ವಾಮಿತ್ರ, ಭರದ್ವಾಜ, ಅಗಸ್ತ್ಯ ಮೊದಲಾದ ಮುನಿಪುಂಗವರು ನಾಲ್ಕೂವೇದ ಮಂತ್ರಗಳಿಂದ ಹಾಡಿ ಪಾಡುತ್ತಲಿದ್ದರು. ಗಂಧರ್ವರು ಗಾಯನ ಮಾಡುತ್ತಲಿದ್ದರು. ಅಪ್ಸರೆಯರು ನರ್ತಿಸುತ್ತಲಿದ್ದರು. ಮಂಗಲವಾದ್ಯಗಳು ಮೊಳಗುತ್ತಲಿದ್ದವು. ಭೂಮಂಡಲದ ಎಲ್ಲ ರಾಜಮಹಾರಾಜರು ಕಪ್ಪ ಕಾಣಿಕೆಗಳನ್ನು ತಂದು ಒಪ್ಪಿಸಿ ವಿನಯದಿಂದ ಬಾಗಿ ನಿಂತಿದ್ದರು. ಎಲ್ಲರ ಅಪೇಕ್ಷೆಯಂತೆ ಎಲ್ಲ ಲೋಕ ರಕ್ಷಣೆಗಾಗಿ ವಿಧಿಪೂರ್ವಕವಾಗಿ ಆ ದಶರಥ ಕುಮಾರನ ಪಟ್ಟಾಭಿಷೇಕ ಮಹೋತ್ಸವವು ಅತ್ಯಂತ ವೈಭವ ವಿಜೃಂಭಣೆಯಿಂದ ನೆರವೇರಿತು. ಸೀತೆಯ ಆ ಎದೆಯರಸನು ಸಿಂಹಾಸನವನ್ನು ಏರಿ ರಘುವಂಶದ ಒಂದು ತಿಲಕ ಎನಿಸಿದನು. ಆ ಕೌಸಲ್ಯ ಕುಮಾರನು ಹನ್ನೊಂದು ಸಾವಿರ ವರ್ಷ ರಾಮರಾಜ್ಯವನ್ನು ನಡೆಸಿ ಪ್ರಜೆಗಳನ್ನು ಸುಖ ಸಾಗರದಲ್ಲಿ ತೇಲಾಡಿಸಿದನು. ರಾಮನ ಸೋದರರನಾದ ಭರತನಾದರೂ ಗಂಧರ್ವರು ನೆಲಿಸಿದ ದೇಶವನ್ನು ಗೆಲ್ಲುವದಕ್ಕಾಗಿ ದಿಗ್ವಿಜಯ ಮಾಡಿದನು. ಅವರ ಜೊತೆಗೆ ನಡೆದ ಯುದ್ಧದಲ್ಲಿ ಮೂರು ಕೋಟಿ ಗಂಧರ್ವರನ್ನು ಸಂಹಾರ ಮಾಡಿದನು. ಶತ್ರುಘ್ನನು ಪ್ರಬಲ ಪರಾಕ್ರಮಿಯಾದ ಮಧುಪುತ್ರ ಲವಣಾಸುರನನ್ನು ಕೊಂದು ಮಥುರಾ ಪಟ್ಟಣವನ್ನು ಸ್ಥಾಪನೆ ಮಾಡಿದನು.

ಈ ರೀತಿಯಾಗಿ ಶ್ರೀ ರಾಮನ ಸೋದರರೆಲ್ಲರು ತಮ್ಮ ಪ್ರಚಂಡವೀರ್ಯ ವಿಕ್ರಮಗಳಿಂದ ತಮ್ಮ ಅಣ್ಣನಾದ ಶ್ರೀ ರಾಮಚಂದ್ರನ ಭೂಭಾರಹರಣ ರೂಪವಾದ ದೇವಕಾರ್ಯದಲ್ಲಿ ಯಥಾಶಕ್ತಿ ಸೇವೆ ಸಲ್ಲಿಸಿ ದಿವ್ಯಗತಿಯನ್ನು ಹೊಂದಿದರು. ಪ್ರಭು ಪರಮೇಶ್ವರನಾದ ಶ್ರೀರಾಮಚಂದ್ರನು ದುಷ್ಟರನ್ನು ಸಂಹರಿಸಿ, ಶಿಷ್ಟರನ್ನು ಸಂರಕ್ಷಿಸಿ, ಲೋಕ ಮರ್ಯಾದೆಯನ್ನು ವ್ಯವಸ್ಥಿತಗೊಳಿಸಿ, ಧರ್ಮಚಕ್ರವನ್ನು ಪ್ರವರ್ತಿಸಿ, ಜಗತ್ತಿಗೆಲ್ಲ ಕ್ಷೇಮವನ್ನುಂಟುಮಾಡಿ, ಕೊನೆಗೆ ತನ್ನ ವೈಕುಂಠಧಾಮಕ್ಕೆ

ಹೊರಟುನಿಂತನು. ಈ ರಾಮನೆಂದರೆ ಸಾಕ್ಷಾತ್ ಶ್ರೀ ವಿಷ್ಣುವಿನ ಅವತಾರ ಎಂದು ನಂಬಿ ನೆಚ್ಚಿ, ಅವನ ಪಾದಾರವಿಂದದಲ್ಲಿ ನಿಶ್ಚಲವಾದ ಮನಸ್ಸನ್ನಿಟ್ಟು ರಾಜ್ಯದ ಅನೇಕ ಪ್ರಜೆಗಳು ಸಾಲೋಕ್ಯ ಮೋಕ್ಷವನ್ನು ಹೊಂದಿದರು.

ದುಷ್ಟರನ್ನೆಲ್ಲ ದಮನಮಾಡಿದ ರಾಮನಿಗೆ ಇಬ್ಬರು ಮಕ್ಕಳು ಲವ - ಕುಶ. ಲಕ್ಷ್ಮಣನಿಗೂ ಇಬ್ಬರು ಅಂಗದ, ಚಂದ್ರಕೇತು, ಭರತನಿಗೆ ತಕ್ಷ, ಪುಷ್ಕಲ. ಶತ್ರುಘ್ನನಿಗೆ ಸುಬಾಹು ಶೂರಸೇನ. ಕುಶನಿಂದ ರಾಮನ ವಂಶವು ಬೆಳೆದ ಬಗೆ ಹೀಗಿದೆ. ಕುಶ, ಅತಿಥಿ, ನಿಷಧ, ಅನಲ, ನಭ, ಪುಂಡರೀಕ, ಕ್ಷೇಮಧನ್ವ, ದೇವಾನೀಕ, ಅಹೀನಕರ, ಪಾರಿಯಾತ್ರಕ, ದೇವಲ, ವಂಚಲಿ, ಉತ್ತರ, ವಜ್ರನಾಭ, ಶಂಖಣ, ಯುಷಿತಾಶ್ವ, ವಿಶ್ವಸಹ, ಹಿರಣ್ಯನಾಭ, ಧ್ರುವಸಂಧಿ, ಸುದರ್ಶನ, ಅಗ್ನಿವರ್ಣ, ಶೀಘ್ರಗ, ಮರು. ಈ ಮರು ಮಹಾರಾಜನು ಯೋಗಾರೂಢನಾಗಿ ಕಲಾಪಗ್ರಾಮದಲ್ಲಿ ಈಗಲೂ ಇರುತ್ತಾನೆ. ಮುಂದಿನ ಯುಗದಲ್ಲಿ ಆ ಮರುರಾಜನೇ ಸೂರ್ಯ ವಂಶದ ಕ್ಷತ್ರಿಯ ಕುಲಕ್ಕೆ ಪ್ರವರ್ತಕನು ಆಗಲಿರುವನು. ಆ ಮನುವಿನ ಮಗ ಪ್ರಸುಶ್ರುತ, ಅವನಿಂದ ಸುಸಂಧಿ, ಸುಸಂಧಿಯ ಮಗ ಅಮರ್ಷ, ಅವನ ಪುತ್ರ ಸಹಸ್ವಾನ, ಅವನ ಮಗ ವಿಶ್ವಭವ, ಅವನಿಂದ ಬೃಹದ್‌ಬಲ ಮುಂತಾಗಿ ಕ್ಷತ್ರಿಯಕುಮಾರರು ಹುಟ್ಟಿ ರಾಮನ ವಂಶವನ್ನು ಮುಂದುವರಿಸಿದರು. ಈ ಬೃಹದ್ಬಲನು ಕುರುಕ್ಷೇತ್ರದಲ್ಲಿ ಕೌರವ ಪಾಂಡವರ ಯುದ್ಧದಲ್ಲಿ ಅರ್ಜುನನ ಮಗನಾದ ಅಭಿಮನ್ಯುವಿನಿಂದ ಸಂಹರಿಸಲ್ಪಟ್ಟನು. ಈಗ ನಾನು ಇಕ್ಷ್ವಾಕು ಕುಲದ ಮುಖ್ಯ ರಾಜರ ಹೆಸರು ಹಾಗೂ ಸಂಕ್ಷಿಪ್ತ ಚರಿತ್ರೆಯನ್ನು ಹೇಳಿದ್ದೇನೆ. ಇವರ ಚರಿತ್ರೆ ಶ್ರವಣದಿಂದಲೇ ಪಾಪ ಲೋಪವಾಗುತ್ತದೆ. ಇಂಥ ಮಹಿಮಾನ್ವಿತರು ಇಕ್ಷ್ವಾಕುಲದ ಈ ಅರಸರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ನಾಲ್ಕನೇಯ ಅಧ್ಯಾಯ ಸಂಪೂರ್ಣ*

—o—

## ನಿಮಿಯಿಂದ ನಿಮಿಷ ಎಮೆಯ ನಿಮೇಷ

ಅಧ್ಯಾಯ - ೫

ಇಕ್ಷ್ವಾಕುರಾಜನ ಮಗನಾದ ನಿಮಿಯು ಸಾವಿರ ವರ್ಷ ಯಜ್ಞವನ್ನು ಪ್ರಾರಂಭಮಾಡಿದನು. ಅದಕ್ಕಾಗಿ ವಶಿಷ್ಠರಿಗೆ ಪುರೋಹಿತರಾಗಬೇಕೆಂದು ಬಿನ್ನವಿಸಿಕೊಂಡನು. ಅದಕ್ಕೆ ವಶಿಷ್ಠರು "ನಾನು ಇಂದ್ರನ ಐನೂರು ವರ್ಷದ ಬೇರೊಂದು ಯಾಗಕ್ಕೆ ಬರುತ್ತೇನೆಂದು ಒಪ್ಪಿ ಅವನ ಆಮಂತ್ರಣವನ್ನು ಸ್ವೀಕರಿಸಿದ್ದೇನೆ. ಆದ್ದರಿಂದ ಈಗ ನಿನ್ನ ಯಾಗಕ್ಕೆ ನನಗೆ ಈಗಲೇ ಬರಲಿಕ್ಕೆ ಆಗುವದಿಲ್ಲ. ನಾನು ಮೊದಲು ಇಂದ್ರನ ಯಜ್ಞವನ್ನು ಮುಗಿಸಿ ಬರುತ್ತೇನೆ. ಅನಂತರ ನಿನ್ನ ಕಡೆಯಿಂದಲೂ ಆ ಸಾವಿರ ವರ್ಷ ಸತ್ರವನ್ನು ಮಾಡಿ ಮುಗಿಸುತ್ತೇನೆ. ಅಲ್ಲಿಯವರೆಗೆ ನೀನು ಕಾಯುತ್ತಲಿರು" ಎಂದು ಹೇಳಿದರು. ವಶಿಷ್ಠರ ಈ ವಚನಕ್ಕೆ ನಿಮಿರಾಜನು ಉತ್ತರವನ್ನೇ ಕೊಡಲಿಲ್ಲ. ಅವನ ಮೌನವನ್ನು ಸಮ್ಮತಿ ಎಂದು ಭಾವಿಸಿ ವಸಿಷ್ಠರು ದೇವೇಂದ್ರನ ಯಜ್ಞವನ್ನು ಮಾಡಿಸಲಿಕ್ಕಾಗಿ ಸ್ವರ್ಗಕ್ಕೆ ಹೋದರು. ಇತ್ತ ನಿಮಿ ಮಹಾರಾಜನು ಗೌತಮ ಮೊದಲಾದ ಋಷಿಗಳನ್ನು ಪುರೋಹಿತರನ್ನಾಗಿ ಮಾಡಿಕೊಂಡು ಯಜ್ಞವನ್ನು ನೆರವೇರಿಸಿದನು.

ದೇವೇಂದ್ರನ ಯಜ್ಞವು ಮುಗಿದ ಕೂಡಲೇ ವಶಿಷ್ಠರು ನಿಮಿಯ ಯಜ್ಞಕ್ಕೆ ಹೋಗಬೇಕೆಂದು ಒಳ್ಳೇ ಗಡಿಬಿಡಿಯಿಂದ ಬಂದರು. ಬರುವಷ್ಟರಲ್ಲಿ ಗೌತಮ ಋಷಿಗಳ ಪೌರೋಹಿತ್ಯದಲ್ಲಿ ಯಜ್ಞವನ್ನು ಮಾಡಿ ಮುಗಿಸಿ ನಿಮಿಮಹಾರಾಜನು ಆಯಾಸ ಪರಿಹಾರಕ್ಕಾಗಿ ಮಲಗಿಕೊಂಡಿದ್ದ. ಅದನ್ನು ಕಂಡು ವಶಿಷ್ಠರಿಗೆ ಕೋಪ ಬಂದಿತು. "ನನಗೆ ಮೊದಲು ಯಜ್ಞಮಾಡಿಸಲು ಹೇಳಿ ಅನಂತರ ಬೇರೆಯವರನ್ನು ಕರೆದು ಯಜ್ಞಮಾಡಿಸಿ ನನಗೆ ಅವಮಾನಮಾಡಿದ ಈ ನಿಮಿರಾಜನು ದೇಹಹೀನನಾಗಲಿ" ಎಂದು ಶಾಪವನ್ನು ಕೊಟ್ಟರು. ನಿದ್ದೆ ತಿಳಿದು ಎದ್ದ ಬಳಿಕ ನಿಮಿರಾಜನು ವಶಿಷ್ಠರ ಶಾಪದ ಸುದ್ದಿಯನ್ನು ಅರಿತು ತಾನೂ ಮರಳಿ ವಶಿಷ್ಠರಿಗೆ ಶಾಪವನ್ನು ಚೆಲ್ಲಿದನು. "ನಾನು ಮಲಗಿದಾಗ ಬಂದು ನನ್ನನ್ನು ವಿಚಾರಿಸದೆ ನನಗೆ ಶಾಪವನ್ನು ಎಸೆದುಹೋದ ಈ ದುಷ್ಟ ಗುರು ವಶಿಷ್ಠರ ದೇಹಪಾತವಾಗಲಿ." ಹೀಗೆ ಗುರುವನ್ನು ಶಪಿಸಿ ನಿಮಿ ತನ್ನ ದೇಹವನ್ನು ತ್ಯಾಗಮಾಡಿದನು. ನಿಮಿರಾಜನ ಶಾಪದಿಂದ ವಶಿಷ್ಠರ ಆತ್ಮವು ಮಿತ್ರಾವರುಣರಲ್ಲಿ ಪ್ರವಿಷ್ಟವಾಯಿತು. ಊರ್ವಶಿಯ ಚೆಲುವನ್ನು ಕಂಡು ಮಿತ್ರಾವರುಣರ ಚಿತ್ತವು ಚಂಚಲಿಸಿ ವೀರ್ಯಪಾತವಾಯಿತು. ಅದರಿಂದ ಹೊಸ ದೇಹವನ್ನು ಪಡೆದು ವಶಿಷ್ಠರು ಹುಟ್ಟಿ ಬಂದರು. ನಿಮಿರಾಜನು ತ್ಯಾಗ ಮಾಡಿದ ದೇಹವನ್ನು ಮನೋಹರವಾದ ದಿವ್ಯ ಗಂಧವನ್ನು ಬಳಿದು, ಎಣ್ಣೆಯಲ್ಲಿ ಪೂಸಿ, ಚೆನ್ನಾಗಿ ಸಂಸ್ಕರಿಸಿದ್ದರಿಂದ ಅದು ಕೊಳೆಯದೆ ಕೆಡದೆ ಅಂದೇ ಸತ್ತ ದೇಹದಂತೆ ಕಾಂತಿಗೆಡದೆ ಉಳಿದುಕೊಂಡಿತು.

ಯಜ್ಞದ ಕೊನೆಗೆ ಆಹುತಿಯನ್ನು ತೆಗೆದುಕೊಳ್ಳಲಿಕ್ಕೆ ಬಂದ ದೇವತೆಗಳನ್ನು ಕುರಿತು ಪುರೋಹಿತರು ಬಿನ್ನಹ ಮಾಡಿಕೊಂಡರು. "ಯಜಮಾನನಿಗೆ ವರವನ್ನು ದಯ ಪಾಲಿಸಿರಿ" ಎಂದು. ಆಗ ದೇವತೆಗಳು ನಿಮಿರಾಜನು ಆತ್ಮಕ್ಕೆ "ನಿನಗೆ ಬೇಕಾದ ವರವನ್ನು ಕೇಳು" ಎಂದು ಹೇಳಿದರು. ಅದಕ್ಕೆ ನಿಮಿರಾಜನು ಅಶರೀರನಾಗಿಯೇ ದೇವತೆಗಳಿಗೆ

ಪ್ರಾರ್ಥಿಸಿಕೊಂಡನು, ''ಪೂಜ್ಯರೇ, ಬಾಳಿನಲ್ಲಿಯ ಗೋಳನ್ನೆಲ್ಲ ಪರಿಹರಿಸುವವರು ನೀವೇ ಅಲ್ಲವೆ ! ಶರೀರವನ್ನು ಬಿಟ್ಟು ಇರುವದಕ್ಕಿಂತ ಹೆಚ್ಚಿನ ದುಃಖವು ಜೀವಕ್ಕೆ ಬೇರೆ ಇಲ್ಲ. ಆದುದರಿಂದ ನಾನು ಎಲ್ಲ ಜನರ ಕಣ್ಣುಗಳಲ್ಲಿ ಎಮೆಯ ರೂಪದಿಂದ ವಾಸಮಾಡಬೇಕೆಂದು ಬಯಸಿದ್ದೇನೆ. ಮಾನವ ದೇಹವನ್ನು ಧರಿಸುವದೇ ಬೇಡ ಎಂದು ಎನಗೆ ಅನಿಸಿದೆ'' ಎಂದು ವರವನ್ನು ಕೇಳಿಕೊಂಡನು. ಅವನ ಅಪೇಕ್ಷೆಯಂತೆ ದೇವತೆಗಳು ಎಲ್ಲ ಪ್ರಾಣಿಗಳ ಕಣ್ಣಿನ ಅಂಚಿನಲ್ಲಿ ಎಮೆಯ ರೂಪವಾಗಿ ನಿಮಿಯು ಇರುವಂತೆ ಮಾಡಿದರು. ಅಂದಿನಿಂದ ಜನರು ಕಣ್ಣಿನ ಎಮೆ ಬಡಿಯುವದು, ಕಣ್ಣು ಪಿಳಿಕಿಸುವದು ಪ್ರಾರಂಭವಾಯಿತು.

## ಜೀವವಿಲ್ಲದ ದೇಹದಿಂದ ಜನಿಸಿದ ಜನಕ

ನಿಮಿರಾಜನಿಗೆ ಇನ್ನೂ ಸಂತಾನವಿರಲಿಲ್ಲ. ದೇಶದಲ್ಲಿ ಅರಾಜಕತೆಯು ಉಂಟಾಗಬಾರದೆಂದು ಲೋಕ ಕಲ್ಯಾಣ ಕಾಂಕ್ಷಿಗಳಾದ ಮುನಿಗಳು ಆ ನಿಮಿರಾಜನ ದೇಹವನ್ನು ಅರಣಿ (ಯಜ್ಞದ ಕಟ್ಟಿಗೆ) ಯಿಂದ ಕಡೆದರು. ಅದರಿಂದ ಒಂದು ಮಗು ಜನಿಸಿತು. ಅರಣಿ ಮಂಥನದಿಂದ ಜನಿಸಿದ್ದರಿಂದ ಅವನಿಗೆ ಜನಕ ಎಂದು ಹೆಸರಾಯಿತು. ಅವನ ತಂದೆಯಾದ ನಿಮಿಯು ದೇಹವಿಲ್ಲದೆ ವಿದೇಹನಾದುದರಿಂದ ಅವನ ಮಗನಾದ ಆ ಜನಕನಿಗೆ 'ವೈದೇಹ' ಎಂದೂ ಹೆಸರು ಬಂದಿತು. ಸತ್ತ ಶರೀರವನ್ನು ಮಥನಮಾಡಿ ಮೂಡಿ ಬಂದುದರಿಂದ ಮಿಥಿ ರಾಜನೆಂದು ಅವನ ಪ್ರಸಿದ್ಧಿಯಾಯಿತು. ಈ ಜನಕ ರಾಜನ ವಂಶವು ಮುಂದೆ ಉದಾವಸು ಎಂಬ ಅವನ ಮಗನಿಂದ ಮುಂದುವರೆಯಿತು. ಮುಂದೆ ಆ ಜನಕ ವಂಶದಲ್ಲಿ ನಂದಿವರ್ಧನ, ಸುಕೇತು, ದೇವರಾತ, ಬೃಹದುಕ್ಥ, ಧೃಷ್ಟಕೇತು, ಹರ್ಯಶ್ವ, ಮಹಾವೀರ್ಯ, ಸುಧೃತಿ, ಮನು, ಪ್ರತೀಕ, ಕೃತರಥ, ದೇವಮೀಢ, ವಿಬುಧ, ಮಹಾಧೃತಿ, ಕೃತರಾತ, ಮಹಾರೋಮ, ಸುವರ್ಣರೋಮ, ಹ್ರಸ್ವ ರೋಮ, ಸೀರಧ್ವಜ ಮುಂತಾದ ರಾಜರು ಒಬ್ಬರಿಂದ ಒಬ್ಬರು ಹುಟ್ಟಿ ಮಿಥಿಲೆಯ ರಾಜ್ಯವನ್ನು ಆಳಿದರು. ಸೀರಧ್ವಜನು ಸಂತಾನಕ್ಕಾಗಿ ಯಜ್ಞವನ್ನು ಪ್ರಾರಂಭಿಸಿ ಯಜ್ಞಭೂಮಿಯನ್ನು ನೇಗಿಲದಿಂದ ಹರಗುವಾಗ ಅಲ್ಲಿ ಸೀತಾದೇವಿಯು ಅವನ ಕೈಗೆ ದೊರೆತಳು.

ಸೀರಧ್ವಜನ ಸಹೋದರನಾದ ಕುಶಧ್ವಜನು ಸಾಂಕಾಶ್ಯದ ದೊರೆಯಾಗಿದ್ದನು. ಸೀರಧ್ವಜನ ಮಕ್ಕಳು, ಅವರ ಮಕ್ಕಳು, ಅವರ ಮಕ್ಕಳು, ಮುಂತಾಗಿ ಅವರ ವಂಶದ ಬಳ್ಳಿಯು ಕುಡಿಬಿಟ್ಟು ಬೆಳೆಯಿತು. ಕ್ರಮವಾಗಿ ಅವರ ಹೆಸರುಗಳು ಇಂತಿವೆ. ಸೀರಧ್ವಜನಿಂದ ಭಾನುಮಾನ್, ಶತದ್ಯುಮ್ನ, ಶುಚಿ, ಊರ್ಜ, ಶತಧ್ವಜ, ಅಂಜನ, ಕುರುಜಿತ್, ಅರಿಷ್ಟನೇಮಿ, ಶ್ರುತಾಯು, ಸುಪಾರ್ಶ್ವ, ಶತ್ರುಂಜಯ, ಕ್ಷೇಮಾವಿ, ಅನೇನಸ, ಭೌಮರಥ, ಸತ್ಯರಥ, ಉಪಗು, ಉಪಗುಪ್ತ, ಸ್ವಾಗತ, ಸ್ವಾನಂದ, ಸುವರ್ಚ, ಸುಪಾರ್ಶ್ವ, ಸುಭಾಷ, ಸುಶ್ರುತಜಯ, ವಿಜಯ, ಋತ, ಸುನಯ, ವೀತಹವ್ಯ, ಧೃತಿ, ಭಲಾಶ್ವ, ಕೃತಿ. ಈ ಜನಕ ರಾಜನ ವಂಶವು ಈ ಕೃತಿರಾಜನಿಂದ ಕೊನೆಗೊಳ್ಳುತ್ತದೆ. ಇವರಿಗೆಲ್ಲ ಮೈಥಿಲರು ಎಂದು ಹೆಸರು. ಬಹುಶಃ ಮೈಥಿಲರಾಜರೆಲ್ಲರೂ ಆತ್ಮಜ್ಞಾನಿಗಳಾಗಿದ್ದರು.

—೦—

*ಶ್ರೀ ಮಹಾವಿಷ್ಣು ಪುರಾಣದಲ್ಲಿ ಚತುರ್ಥಾಂಶದ ಐದನೆಯ ಅಧ್ಯಾಯ ಸಂಪೂರ್ಣ*

# ಸೋಮವಂಶದ ಬೆಳವಣಿಗೆಯ ಬಗೆ. ಚಂದ್ರ, ಬುಧ, ಪುರೂರವರ ಚರಿತೆ

ಅಧ್ಯಾಯ - ೬

**ಮೈತ್ರೇಯ -** ಪೂಜ್ಯರೇ, ತಾವು ಈವರೆಗೆ ಸೂರ್ಯವಂಶವು ಬಿತ್ತರಗೊಂಡ ಬಗೆಯನ್ನು ಅರುಹಿದಿರಿ. ಚಂದ್ರವಂಶವು ಚೆಲ್ವರಿದ ಕ್ರಮವನ್ನೂ ಕೇಳಬೇಕೆಂಬ ಹಂಬಲವು ನನ್ನಲ್ಲಿ ಮೂಡಿದೆ. ಚಂದ್ರವಂಶದ ಕೀರ್ತಿಶಾಲಿಗಳಾದ ರಾಜರ ಚರಿತ್ರವನ್ನು ನನಗಾಗಿ ಹೇಳಬೇಕು.

**ಪರಾಶರ -** ಮೈತ್ರೇಯ, ಈ ಚಂದ್ರವಂಶದಲ್ಲಿ ನಹುಷ, ಯಯಾತಿ, ಕಾರ್ತವೀರ್ಯಾರ್ಜುನ ಮುಂತಾದ ಮಹಾ ಪ್ರಬಲರಾದ ರಾಜ ಋಷಿಗಳು ಆಗಿಹೋದರು. ಅವರ ಬೀರ, ಬೆಳಕು, ಶೀಲ ಗೈಮ ಒಂದೊಂದೂ ವರ್ಣನೀಯವಾಗಿರುತ್ತವೆ. ಅವರ ಚರಿತ್ರವನ್ನು ಹೇಳುತ್ತೇನೆ. ಚಿತ್ತಗೊಟ್ಟು ಆಲಿಸು.

## ಚಂದ್ರನ ಕಪ್ಪು ಚರಿತ್ರ

ಎಲ್ಲ ಜಗತ್ತನ್ನು ಹಡೆದ ಆ ನಾರಾಯಣನ ಹೊಕ್ಕಳದಲ್ಲಿ ಹುಟ್ಟಿದ ತಾವರೆಯಿಂದ ಮೊದಲು ಜನಿಸಿದವ ಬ್ರಹ್ಮದೇವ. ಬ್ರಹ್ಮನ ಮಗ ಅತ್ರಿಮುನಿ, ಆ ಅತ್ರಿಯಿಂದ ಚಂದ್ರನು ಪುತ್ರನಾಗಿ ಜನಿಸಿದನು. ಆ ತನ್ನ ಮೊಮ್ಮಗನಾದ ಚಂದ್ರನನ್ನು ಬ್ರಹ್ಮದೇವರು ಎಲ್ಲ ವನಸ್ಪತಿಗಳಿಗೆ ಒಡೆಯನನ್ನಾಗಿಯೂ, ಬ್ರಾಹ್ಮಣರಿಗೆ ಅಧಿರಾಜನನ್ನಾಗಿಯೂ, ಚಿಕ್ಕೆಗಳ ಬಳಗಕ್ಕೆ ಸ್ವಾಮಿಯನ್ನಾಗಿಯೂ ಮಾಡಿ ಇವೆಲ್ಲವುಗಳ ಸರ್ವಾಧಿಪತ್ಯ ಪಟ್ಟದಲ್ಲಿ ಅಭಿಷೇಕಗೈದರು. ಆಗ ಚಂದ್ರನು ಒಂದು ದೊಡ್ಡ ರಾಜಸೂಯಯಾಗವನ್ನು ಮಾಡಿದನು. ಅನಾಯಾಸವಾಗಿ ದೊರೆತ ದೊಡ್ಡ ಸ್ಥಾನ, ಮಹಾಪ್ರಭಾವಗಳಿಂದಾಗಿ ಚಂದ್ರನ ಮೈಯಲ್ಲಿ ಮದ ತುಂಬಿತು. ಮದವು ತಲೆಗೇರಿದ ಚಂದ್ರನು ದೇವಗುರು ಬೃಹಸ್ಪತಿಯ ಮಡದಿಯಾದ ತಾರೆಯ ರೂಪಸಿರಿಗೆ ಮಾರುಹೋಗಿ ಅವಳನ್ನು ಕದ್ದು ತನ್ನ ಮನೆಯಲ್ಲಿರಿಸಿಕೊಂಡನು. ಸುರಾಚಾರ್ಯನು ಹೆಂಡತಿಯನ್ನು ಕಳೆದುಕೊಂಡು ಬ್ರಹ್ಮದೇವರಿಗೆ ದೂರು ಇತ್ತನು. ಆಗ ಬ್ರಹ್ಮನು ದೇವಗುರುವಿನ ಭಾರ್ಯೆಯನ್ನು ಮರಳಿ ಅವನ ಮನೆಗೆ ಕಳಿಸಬೇಕೆಂದು ಚಂದ್ರನಿಗೆ ಹೇಳಿಕಳಿಸಿದನು. ಎಲ್ಲ ದೇವತೆಗಳೂ ಋಷಿಗಳೂ ಅವನ ಬಳಿಗೆ ಹೋಗಿ ಗುರು ಪತ್ನಿಯನ್ನು ಬಿಟ್ಟುಕೊಡಲು ಬಿನ್ನಹ ಮಾಡಿಕೊಂಡರು.

## ಐಶ್ವರ್ಯ, ಅಧಿಕಾರಗಳಿಗೆ ಅವಿವೇಕವೂ ಸೇರಿದಾಗ

ತಾರೆಯ ಸೊಬಗನ್ನು ಸೂರೆಗೊಂಡ ಚಂದ್ರನಿಗೆ ಅವಳನ್ನು ಬಿಡಲಿಕ್ಕೆ ಮನಸ್ಸಾಗಲಿಲ್ಲ. ಮೇಲೆ ಬೃಹಸ್ಪತಿಯನ್ನು ದ್ವೇಷಿಸುವ ಶುಕ್ರಾಚಾರ್ಯರು ಸೋಮನ ಕಾಮಮೂಲಕವಾದ ಈ ವಾಮಾಚಾರದಲ್ಲಿ ಅವನಿಗೆ ಬೆಂಬಲವಾಗಿ ನಿಂತುಕೊಂಡರು. ತಮ್ಮ ಕುಲಗುರುವಾದ ಶುಕ್ರರ ಆದೇಶದ ಮೇರೆಗೆ ದೈತ್ಯರೆಲ್ಲರೂ ಚಂದ್ರನ ಪಕ್ಷಗಟ್ಟಿದರು. ಬೃಹಸ್ಪತಿಯ ತಂದೆಯಾದ ಅಂಗೀರಸ ಋಷಿಯಲ್ಲಿ ಅಧ್ಯಯನ ಮಾಡಿದ್ದರಿಂದ ರುದ್ರದೇವರು ಗುರುಪುತ್ರನ ಸಹಾಯಕ್ಕಾಗಿ ಬಂದು ನಿಂತರು.

ದೇವತೆಗಳೆಲ್ಲರೂ ತಮ್ಮ ಗುರುವಿನ ಪರವಾಗಿ ಹೋರಾಡಲು ಅಣಿಯಾದರು. ಒಳ್ಳೇ ಮಾತಿನಿಂದ ಚಂದ್ರನು ಗುರುಪತ್ನಿಯನ್ನು ಮರಳಿ ಕಳಿಸಲು ಒಪ್ಪದಾದಾಗ ಅದೇ ನೆವದಿಂದ ದೇವ - ದಾನವರಲ್ಲಿ ಘೋರ ಕದನವು ಎಸಗಿತು.

ತಾರೆಯ ನಿಮಿತ್ತವಾಗಿ ಅದು ನಡೆದದ್ದರಿಂದ ಅದಕ್ಕೆ ''ತಾರಕಾಮಯ'' ಸಂಗ್ರಾಮ ಎಂದು ಹೆಸರಾಯಿತು. ಆ ಘನಘೋರವಾದ ಸಂಗ್ರಾಮದಲ್ಲಿ ಇಂದ್ರಾದಿ ದೇವತೆಗಳೆಲ್ಲರೂ ರುದ್ರದೇವರನ್ನು ಮುಂದೆಮಾಡಿಕೊಂಡು ಒಂದೆಡೆಗೆ ಶಸ್ತ್ರ ಹಿಡಿದು ನಿಂತರು. ಎದುರು ಪಕ್ಷದಲ್ಲಿ ಜಂಭ, ಕುಂಭಾದಿ ದೈತ್ಯ ಧುರೀಣರು ಶುಕ್ರಾಚಾರ್ಯರ ನೇತೃತ್ವದಲ್ಲಿ ಚಂದ್ರನ ಪಕ್ಷಗಟ್ಟಿ ಹೋರಾಡತೊಡಗಿದರು. ಅತ್ಯಂತ ಭೀಕರವಾದ ಈ ದೇವದಾನವರ ಕದನದಿಂದ ಜಗತ್ತೆಲ್ಲವೂ ತಲ್ಲಣಿಸಿ ಚತುರ್ಮುಖನಿಗೆ ಮೊರೆಹೊಕ್ಕಿತು. ಆಗ ಬ್ರಹ್ಮದೇವರು ಅಲ್ಲಿಗೆ ಧಾವಿಸಿ ಬಂದು ಹುರುಡುಗಟ್ಟಿ ಹೋರಾಡುವ ಶಿವ - ಶುಕ್ರರನ್ನು ತಡೆದರು. ದೇವ - ದಾನವರಿಗೆ ಬುದ್ಧಿ ಹೇಳಿ ಯುದ್ಧವನ್ನು ನಿಲ್ಲಿಸಿದರು. ಮತ್ತು ಚಂದ್ರನಿಗೆ ''ಛೀ'' ಮಾಡಿ ತಾರಾದೇವಿಯನ್ನು ದೇವಗುರುವಿಗೆ ಮರಳಿ ಕೊಡಿಸಿದರು. ಆಗ ಅವಳು ಗರ್ಭಿಣಿ ಇದ್ದುದನ್ನು ನೋಡಿ ಬೃಹಸ್ಪತಿಯು ತಾರೆಗೆ, ''ನನ್ನ ಮಡದಿಯಾದ ನಿನ್ನ ದೇಹದಲ್ಲಿ ಇನ್ನೊಬ್ಬನು ಇಟ್ಟ ಗರ್ಭವನ್ನು ನಾನು ನೋಡಲಾರೆ. ಸಾಕು ಈ ಬಸುರಿನ ಸಡಗರ. ನಿನ್ನ ಹೊಟ್ಟೆಯಲ್ಲಿಯ ಪಿಂಡವನ್ನು ಕೊಡಲೇ ಕೆಳಗೆ ಕೆಡವಿ ಶುದ್ಧಳಾಗಿ ಬಾ'' ಎಂದು ತಾರೆಗೆ ಗದರಿಸಿದನು.

## ಬಿದ್ದ ಪಿಂಡದಿಂದ ಮುದ್ದು ಗಂಡು ಮಗು

ಪಾಪ ಆ ತಾರೆಯು ನಿಜವಾಗಿಯೂ ನಿಷ್ಪಾಪಳಾಗಿದ್ದಳು. ಅವಳು ಮಹಾಪತಿವ್ರತೆಯೂ ಅಹುದು. ಬಲಿಷ್ಠನಾದ ಚಂದ್ರನು ಅವಳನ್ನು ಅಪಹರಿಸಿ ಬಲತ್ಕಾರದಿಂದ ಭೋಗಿಸಿದ್ದನು. ಅವಳ ಇಚ್ಛೆ ಇಲ್ಲದೆ ಗರ್ಭಧಾರಣವಾಗಿದ್ದಿತು. ಈಗ ಗಂಡನು ''ಆ ಪಿಂಡವನ್ನು ನೆಲಕ್ಕೆ ಬಿಸಾಕಿ ಬಾ'' ಎಂದು ಗದರಿಸಿದಾಗ ಅವಳು ಬೆದರಿ ತನ್ನ ಬಸಿರನ್ನು ಕಡೆಗೆ ಮಾಡಿಕೊಂಡು ಹಸಿರು ಹುಲ್ಲಿನ ಮೇಲೆ ಚೆಲ್ಲಿಕೊಟ್ಟಳು. ಕೂಡಲೇ ಆ ಹಸಿರು ಹಾಸೆಯಲ್ಲಿ ಮಹಾ ತೇಜಸ್ವಿಯಾದ ಒಂದು ಹಸಗೂಸು ಹುಟ್ಟಿತು. ತೇಜಃಪುಂಜನಾದ ಆ ಕೂಸಿನ ಕಿರಣ ಕಾಂತಿಯನ್ನು ಕಂಡು ದೇವತೆಗಳ ಕಣ್ಣು ಕುಕ್ಕತೊಡಗಿದವು. ಅಂಥ ವಿಲಕ್ಷಣವಾದ ಚೆಲುವು ಕಾಂತಿಗಳನ್ನು ಹೊತ್ತು ಕಂಗೊಳಿಸುವ ಆ ಸುಂದರ ಮಗುವನ್ನು ಕಂಡು ಆ ಮಗು ತನ್ನದಾಗಬೇಕೆಂದು ಚಂದ್ರ - ಬೃಹಸ್ಪತಿ ಇಬ್ಬರಿಗೂ ಆಶೆಯಾಯಿತು. ಆಗ ಅವರಿಬ್ಬರೂ ಆ ಕೂಸು ನನ್ನದು - ನನ್ನದು ಎಂದು ಹೇಳತೊಡಗಿದರು. ಆಗ ದೇವತೆಗಳಿಗೆ ಸಂದೇಹ ಬಂದು ತಾರೆಯನ್ನೇ ಕೇಳಿದರು, ''ನಿಜ ಹೇಳು, ಈ ಪಿಂಡ ಯಾರದು ? ಬೃಹಸ್ಪತಿಯದೋ, ಚಂದ್ರನದೋ ?

ನಾಚಿಕೆಯಿಂದ ತಾರೆಗೆ ಏನು ಹೇಳಲಿಕ್ಕೂ ಆಗಲಿಲ್ಲ. ದೇವತೆಗಳು ಎಷ್ಟು ಬಾರೆ ಕೇಳಿದರೂ ಅವಳು ಲಜ್ಜಾಮೂಕಳಾಗಿ ಮುಖವನ್ನು ತಗ್ಗಿಸಿಕೊಂಡು ನಿಂತಳು. ಆಗ ಅಲ್ಲಿಯೇ ಹುಲ್ಲು ಹಾಸಿಗೆಯ ಮೇಲೆ ಚಲ್ಲಿದ ಆ ಎಳೆಯ ಮಗು ತನ್ನ ಹುಟ್ಟಿನ ಬಗ್ಗೆ

ನಡೆದ ಈ ಹಗರಣವನ್ನು ಕೇಳಿ ಕೆರಳಿ ಕೂಗಿತು. ''ಎಲೇ ದುಷ್ಟತಾಯಿಯೇ! ನನ್ನ ತಂದೆ ಯಾರು ಎಂಬುದನ್ನು ಏಕೆ ಬಾಯಿಬಿಟ್ಟು ಹೇಳಲೊಲ್ಲಿ? ಎಂದೂ ಇಲ್ಲದ ನಾಚಿಕೆ ನಿನಗೆ ಇಂದೇ ಬಂದಿತೇ? ತುಸು ತಡೆ. ನಾನೇ ನಿನಗೆ ಶಾಸ್ತಿ ಮಾಡುತ್ತೇನೆ'' ಎಂದು ಗುಡುಗಿತು. ಆ ಬುಧನು ಮುಂದೆ ಮಿತ್ರಾವರುಣರ ಮಗ ಸುದ್ಯುಮ್ನನು ಶಿವನ ವಿಹಾರ ವನದಲ್ಲಿ ಪ್ರವೇಶಗೈದು ಹೆಣ್ಣಾಗಿ ಇಳಿಯೆಂದಾದಾಗ ಅವಳನ್ನು ಪ್ರೇಮಿಸಿ ಪುರೂರವ ಎಂಬ ಪುತ್ರನನ್ನು ಪಡೆದನು. ಆ ಪುರೂರವನು ಮಾಡಿದ ಯಜ್ಞಗಳಿಗೆ ಲೆಕ್ಕವಿಲ್ಲ. ನೀಡಿದ ದಾನಗಳಿಗೂ ಲೆಕ್ಕವಿಲ್ಲ. ಅವನು ತುಂಬ ತೇಜಸ್ವಿ, ಅವನು ತನ್ನ ಆಯುಷ್ಯದಲ್ಲಿ ಒಮ್ಮೆಯೂ ಹುಸಿ ನುಡಿಯಲಿಲ್ಲ. ಅವನ ರೂಪ ದೇವಸುಂದರಿಯರು ಆಶೆಪಡುವಷ್ಟು ಅಪರೂಪವಾಗಿತ್ತು. ಮಾನವ ಲೋಕದಲ್ಲಿ ಅವನು ಒಳ್ಳೇ ಮಾನವಂತನಾಗಿದ್ದ.

## ಊರ್ವಶಿಯ ಚೆಲುವು, ಪುರೂರವನ ಒಲವು

ಒಮ್ಮೆ ಮಿತ್ರಾವರುಣರು ಊರ್ವಶಿಗೆ ಶಾಪವಿತ್ತರು ''ನೀನು ಮನುಷ್ಯ ಲೋಕದಲ್ಲಿ ವಾಸ ಮಾಡು'' ಎಂದು. ಆಗ ಆಕಸ್ಮಿಕವಾಗಿ ಪುರೂರವನು ಊರ್ವಶಿಯ ಕಣ್ಣಿಗೆ ಕಂಡ. ಸ್ಫುರದ್ರೂಪಿಯಾದ ಆ ನರನಾಥನ ತುಂಬು ತಾರುಣ್ಯ. ಲಲಿತ ಲಾವಣ್ಯಗಳನ್ನು ಕಂಡು ಅವಳ ಮನಸ್ಸು ಮುಗ್ಧವಾಯಿತು. ಕೂಡಲೇ ಅವಳು ಸ್ವರ್ಗ ಸುಖವನ್ನು ಕಡೆಗಣಿಸಿ ಅವನ ಮೇಲೆ ಮನಸ್ಸನ್ನಿಟ್ಟು ಭೂಮಿಗೆ ಬಂದಳು. ಪುರೂರವನು ಕೂಡ ಊರ್ವಶಿಯನ್ನು ಕಂಡು ಅವಳ ಲೋಕೋತ್ತರವಾದ ಲಾವಣ್ಯಕ್ಕೆ ಮನಸೋತನು. ಮಾನವ ಲೋಕದಲ್ಲಿ ಇಂಥ ಸ್ತ್ರೀ ಸೌಂದರ್ಯವನ್ನೇ ಅವನು ಕಂಡಿರಲಿಲ್ಲ. ಅವಳ ಶರೀರದ ಸೊಬಗೇ ಬೇರೆ. ಸೌಂದರ್ಯದ ಸೊಗಸೇ ಬೇರೆ. ಅವಳ ನಡೆಯಲ್ಲಿ ಒಂದು ಬಗೆಯ ಚೆಲುವು ಚಿಮ್ಮಿದರೆ ಅವಳ ನುಡಿಯಲ್ಲಿ ಮತ್ತೊಂದು ಬಗೆಯ ಹೊಸ ರಸ ಸೂಸುತ್ತಿತ್ತು. ಅವಳ ಹಾಸ್ಯದಲ್ಲಿಯೂ ಒಂದು ಲೀಲಾಲಾಸ್ಯವಿತ್ತು. ಅವಳ ಈ ಎಲ್ಲ ಗುಣಗಳನ್ನು ನೋಡಿ ಪುರೂರವನ ಮನಸ್ಸು ಅವಳಲ್ಲಿಯೇ ನೆಟ್ಟಿತು. ಹೀಗೆ ಅವರಿಬ್ಬರ ಮನಸ್ಸೂ ಕೂಡಿದವು. ದೃಷ್ಟಿ ಕೂಡಿದವು. ಅವರು ಬಾಹ್ಯ ಪ್ರಪಂಚವನ್ನೇ ಮರೆತರು.

## ಊರ್ವಶಿಯ ಮೂರು ವಿಚಿತ್ರ ಷರತ್ತುಗಳು

ಆಗ ರಾಜನು ದಿಟ್ಟತನದಿಂದ ನುಡಿದ ''ಓ! ಊರ್ವಶಿ! ನೀನು ಹುಬ್ಬು ಹಾರಿಸಿದರೆ ಅದೇ ನನಗೆ ಹಬ್ಬ, ನಿನ್ನನ್ನು ಕಂಡು ಕೂಡಲೇ ನನ್ನ ಹೃದಯದಲ್ಲಿ ಪ್ರೇಮಕಾಮಗಳು ತುಳುಕಾಡಿವೆ. ಪ್ರಸನ್ನಳಾಗು, ನನಗೆ ಪ್ರಣಯ ಭಿಕ್ಷೆಯನ್ನು ನೀಡು''. ಊರ್ವಶಿಯ ಮುಖದಲ್ಲಿ ಮೂಡಿದ ಲಜ್ಜೆಯ ಲಾಲಿಮೆ ಚಾರಿಮೆಯ ಮುದ್ರೆ ಒತ್ತಿ ಮಿಂಚಿತು. ಮುಗುಳನಗೆಯ ಮಧ್ಯದಲ್ಲಿ ಅವಳು ನಾಚುತ್ತ ನುಡಿದಳು ''ರಾಜನ್! ನೀನು ನನ್ನ ಷರತ್ತುಗಳಿಗೆ ಒಪ್ಪಿದರೆ ನಾನ್ನು ನಿನ್ನ ಪ್ರಣಯಿನಿಯಾಗಲು ಸಿದ್ಧಳಿದ್ದೇನೆ.''

''ನಿನ್ನ ಷರತ್ತುಗಳು ಏನು ತಿಳಿಸು'' ಎಂದು ಕೇಳಿದ ಪುರೂರವ. ಅದಕ್ಕೆ ಊರ್ವಶಿಯು ''ನನ್ನ ಹಾಸಿಗೆಯ ಹತ್ತಿರವೇ ಇರುವ ಎರಡು ಹೋತಿನ ಮರಿಗಳನ್ನು ಎಂದೂ ಆಚೀಚೆ ಕದಲಿಸಕೂಡದು. ಮತ್ತು ನೀನೆಂದಿಗೂ ಬಟ್ಟೆಯಿಲ್ಲದೇ ನನ್ನ ಕಣ್ಣಿಗೆ

ಬೀಳಕೂಡದು. ಮತ್ತು ಆಕಳ ತುಪ್ಪದ ಹೊರತು ನನಗೆ ಬೇರೆ ಆಹಾರವನ್ನು ಹಾಕಬಾರದು.'' ಎಂದು ಹೇಳಿದಳು. ಅವಳ ಈ ಮೂರು ಕರಾರುಗಳಿಗೂ ಪುರೂರವನು ಒಪ್ಪಿಕೊಂಡ. ಆ ಮುಗಿಲಿನ ಮಗಳು ಈ ಮಣ್ಣಿನ ಮಗನೊಂದಿಗೆ ಮಡದಿಯಾಗಿ ಬಾಳಲು ಭೂಮಿಗೆ ಬಂದಳು.

## ಸ್ವರ್ಗದ ಹಸಿವು, ನೆಲದ ಕಸುವು, ಒಂದು ಗೂಡಿದಾಗ

ಅನಂತರ ಪುರೂರವನು ದೇವಲೋಕದ ಚೆಲುವನೆಲ್ಲ ಬಳಿದು ತಂದ ಆ ಬೆಡಗು ಗಾತಿಯೊಡನೆ ಚೈತ್ರರಥ ಮುಂತಾದ ಉಪವನಗಳಲ್ಲಿ ವಿಹರಿಸಿದ. ಬೆಳ್ದಾವರೆಗಳು ಬಿರಿದು ಕಂಪುಬೀರುವ ಮಾನಸ ಸರೋವರ ಮುಂತಾದ ರಮಣೀಯ ತಾಣಗಳಲ್ಲಿ ರಸಕೇಳಿಯಾಡಿದ. ಆ ಸುರಸುಂದರಿಯೊಡನೆ ಬಗೆ ಬಗೆಯ ಸರಸ ವಿಲಾಸಗಳನ್ನೂ ವಿವಿಧ ಭೋಗಗಳನ್ನೂ ಅನುಭವಿಸುತ್ತ ನಡೆದ ಆ ಮಹಾರಾಜನಿಗೆ ದಿನಗಳು ಉರುಳಿದ್ದು ಗೊತ್ತಾಗಲಿಲ್ಲ. ವರ್ಷಗಳು ತೆರಳಿದ್ದು ಗುರುತಾಗಲಿಲ್ಲ. ದಿನಕ್ಕೊಂದು ಹೊಸ ಕ್ರೀಡೆ ಕ್ಷಣಕ್ಕೊಂದು ರಸಕೇಳಿ. ಸಗ್ಗದ ಹೆಣ್ಣು, ಪುರೂರವನ ಕುಗ್ಗದ ಪೌರುಷ, ಹಳಸದ ಪ್ರೇಮ, ಕುಂದದ ಕಾಮ, ಕೇಳುವದೇನು ! ಅರವತ್ತು ಸಾವಿರ ವರ್ಷ ನಡೆಯಿತು ಆ ಪ್ರಣಯಗಳೀರ್ವರ ಸರಸ ಶೃಂಗಾರ. ಊರ್ವಶಿಯು ನವೋನವ ಭೋಗಾನು ರಾಗಗಳಿಂದ ಅಮರಾವತಿಯ ಬದುಕನ್ನೇ ಮರೆತು ಮಾನವನ ಮೈ ಸುಖದಲ್ಲಿಯೇ ಬೆರೆತು ಹೋದಳು.

## ಗಂಧರ್ವರ ಮಿಂಚುಮಾಟ

ಅತ್ತ ದೇವಲೋಕದಲ್ಲಿ ಊರ್ವಶಿ ಇಲ್ಲದೆ ದೇವಪುರಿಯು ಸಿದ್ಧರಿಗೆ ಶೂನ್ಯವೆನಿಸಿತು. ಗಂಧರ್ವರಿಗೆ ಬರಡಾಗಿ ತೋರಿತು. ಅಪ್ಸರೆಯರಿಗೆ ಭಣಭಣ ಎನಿಸಿತು. ಸ್ವರ್ಗದ ಪ್ರತಿಯೊಬ್ಬ ನಾಗರಿಕನಿಗೂ ಊರ್ವಶಿಯ ಇಲ್ಲದಿರುವಿಕೆಯು ಅನುಭವಕ್ಕೆ ಬರತೊಡಗಿತು. ವಿಶ್ವಾವಸು ಎಂಬ ಗಂಧರ್ವನಿಗೆ ಊರ್ವಶಿ, ಪುರೂರವರ ಕರಾರುಗಳೆಲ್ಲ ತಿಳಿದಿದ್ದವು. ಒಂದು ದಿನ ರಾತ್ರಿ ಅವನು ಗಂಧರ್ವರೊಡನೆ ಗುಪ್ತವಾಗಿ ಪುರೂರವನ ಅಂತಃಪುರಕ್ಕೆ ಬಂದನು. ಊರ್ವಶಿ ಪುರೂರವರ ಹಾಸಿಗೆಯ ಹತ್ತಿರವೇ ಇದ್ದ ಒಂದು ಹೋತಿನ ಮರಿಯನ್ನು ವಿಶ್ವಾವಸು ಗುಟ್ಟಾಗಿ ಹೊತ್ತುಕೊಂಡು ನಡೆದನು. ಮುಗಿಲಿನಲ್ಲಿ ವೈಯ್ಯುವಾಗ ಆ ಮೇಕೆಯ ಮರಿಯು 'ಮ್ಯಾಂ' ಎಂದು ಒದರಿತು. ಅದರ ದನಿಯನ್ನು ಕೇಳಿ ಊರ್ವಶಿಯು ದೀನಳಾಗಿ ''ಅಯ್ಯೋ ! ನನ್ನ ಮಗನನ್ನು ಯಾರೋ ಒಯ್ಯುತ್ತಿದ್ದಾರೆ ! ನಾನು ಯಾರನ್ನು ಮೊರೆ ಹೋಗಲಿ !'' ಎಂದು ಹಲಬಿದಳು. ಆಗ ಮಹಾರಾಜನ ಮೈ ಮೇಲೆ ಬಟ್ಟೆ ಇರಲಿಲ್ಲ. ಆದುದರಿಂದ ಅವನು ಆ ಮೇಕೆಯ ದನಿಯನ್ನು ಕೇಳಿದರೂ ಸುಮ್ಮನಿದ್ದ. ಊರ್ವಶಿಯ ನರಳಿಕೆಗೂ ಅವನು ಅಲ್ಲಿಂದ ಎದ್ದು ಹೋಗಲಿಲ್ಲ. ಆಗ ಗಂಧರ್ವರು ಮತ್ತೊಮ್ಮೆ ಅಲ್ಲಿಗೆ ಬಂದು ಇನ್ನೊಂದು ಮರಿಯನ್ನೂ ಎತ್ತಿಕೊಂಡು ಹೊರಟರು. ಆಕಾಶದಲ್ಲಿ ಅದರ ಆರ್ತ ದನಿಯನ್ನು ಕೇಳಿ ಊರ್ವಶಿಗೆ ಸಂಕಟವಾಗಿ ಅವಳು ಮತ್ತೆ ಕಂಗೆಟ್ಟು ಕೂಗಿದಳು. ''ಅಕಟಕಟಾ! ನಾನು ಅನಾಥಳಾದೆ. ನನಗಾರೂ ರಕ್ಷಣ ಮಾಡುವವರಿಲ್ಲದಾಯಿತು. ನಾನು ಆಶ್ರಯಿಸಿದ ಗಂಡಸು ಹೋತಿನ ಜೋಡಿಯನ್ನು

ಕಾಪಾಡದಷ್ಟು ಕೈಲಾಗದ ಹೇಡಿಯಾಗಿದ್ದಾನೆ'' ಎಂದು. ಅವಳ ನುಡಿ ಪುರೂರವನ ಪೌರುಷಕ್ಕೆ ಒಂದು ಆಹ್ವಾನದಂತಿತ್ತು. ಅವಳ ಮೂದಲಿಕೆಯ ಮಾತಿನಿಂದ ಸಿಟ್ಟಿಗೆದ್ದು ಬರಿ ಮೈಯಿಂದಲೇ ಖಡ್ಗ ಹಿರಿದು ''ಎಲೈ ದುಷ್ಟ ಇನ್ನೇನು ! ನೀನು ಸತ್ತು ಹೋದೆ'' ಎನ್ನುತ್ತ ಬೆನ್ನಟ್ಟಿದನು. ಅಷ್ಟರಲ್ಲಿ ಗಂಧರ್ವರು ಉಜ್ವಲವಾಗಿ ಬೆಳಕು ಮಿಂಚಿನ ಮಾಲೆಯನ್ನು ಬೆಳಗಿದರು. ಆ ಮಿಂಚಿನ ಬೆಳಕಿನಲ್ಲಿ ಮುಗಿಲಿನಲ್ಲಿ ಪುರೂರವನು ಹುಟ್ಟಿದ ಮಹರ್ದೆಸೆಯಲ್ಲಿಯೇ ಊರ್ವಶಿಯ ಕಣ್ಣಿಗೆ ಬಿದ್ದ. ಅವಳ ಎರಡು ಕರಾರುಗಳು ಭಂಗವಾದಂತೆ ಆದವು. ಮೇಕೆಯ ಮರಿಯನ್ನು ಕಾಯಲಿಲ್ಲ. ಮತ್ತು ಬಟ್ಟೆ ಇಲ್ಲದ ತನ್ನ ದೇಹವನ್ನು ಅವಳ ಕಣ್ಣಿಗೆ ಬೀಳುವಂತೆ ಮಾಡಿದ. ಹೀಗೆ ಅವಳ ಎರಡು ಕರಾರುಗಳನ್ನು ಮುರಿದದ್ದರಿಂದ ಕೂಡಲೇ ಊರ್ವಶಿಯು ಅಲ್ಲಿಂದ ಹೊರಟು ಹೋದಳು.

## ಊರ್ವಶಿ ಸ್ವರ್ಗಕ್ಕೆ ಏರಿದಳು, ಪೂರೂರವ ಪಾತಾಳಕ್ಕೆ ಇಳಿದ

ಊರ್ವಶಿಯು ಅಮರಾವತಿಗೆ ಮರಳಿದ್ದನ್ನು ನೋಡಿ ಗಂಧರ್ವರು ಆ ಎರಡೂ ಮೇಕೆ ಮರಿಗಳನ್ನು ಮುಗಿಲಿನಲ್ಲಿಯೇ ಬಿಟ್ಟು ಮನೆಗೆ ಮರಳಿದರು. ರಾಜನು ಆ ಹೋತಿನ ಮರಿಗಳನ್ನು ತೆಗೆದುಕೊಂಡು ಒಳ್ಳೇ ಹಿಗ್ಗಿನಿಂದ ಹಾಸಿಗೆಯ ಬಳಿಗೆ ಬಂದನು. ಆದರೆ ಹಾಸಿಗೆಯ ಮೇಲೆ ಊರ್ವಶಿಯೇ ಇರಲಿಲ್ಲ. ಅದರಿಂದ ಅವನ ತಲೆ ಕೆಟ್ಟು ಹೋಯಿತು. ಉಟ್ಟ ಬಟ್ಟೆಯ ಪರಿವೆ ಇಲ್ಲದೆ ಹುಚ್ಚನಂತೆ ಉರ್ವಶಿಯನ್ನು ಹುಡುಕಲು ದೇಶ ದೇಶ ಅಲೆದ. ಎಲ್ಲ ತೀರ್ಥಗಳಲ್ಲಿಯೂ ಹುಡುಕಾಡಿದ. ಕೊನೆಗೆ ಒಂದು ದಿನ ಕುರುಕ್ಷೇತ್ರದಲ್ಲಿ ನಾಲ್ಕು ಅಪ್ಸರೆಯರೊಂದಿಗೆ ಉರ್ವಶಿಯು ಅಂಭೋಜ ಸರೋವರದಲ್ಲಿ ಅವನ ಕಣ್ಣಿಗೆ ಕಾಣಿಸಿದಳು. ಅವಳನ್ನು ನೋಡಿ ಅವನ ಉನ್ಮಾದವು ತಲೆಗೇರಿದಂತಾಗಿ ''ಪ್ರಿಯಳೇ ನಿಲ್ಲು, ನಿಲ್ಲು, ಘೋರ ಮನಸ್ಸಿನವಳೇ! ನಿಲ್ಲು, ಕಪಟಮಾತಿನವಳೇ ನಿಲ್ಲು'' ಎಂದು ಬಗೆ ಬಗೆಯಾಗಿ ಕೂಗಿ ಕೊಂಡನು. ಹೃದಯದ ಶೋಕವನ್ನೆಲ್ಲ ಅವನು ಶಬ್ದಗಳಲ್ಲಿ ತೋಡಿಕೊಂಡನು. ನಿಜವಾಗಿಯೂ ಅದು ಅವನ ಹೃದಯದ ಹಂಬಲದ ಹಾಡಾಗಿತ್ತು.

### ''ಊರ್ವಶಿಯ ಕಾಂತಾಸಂಮಿತ''

ಆಗ ಊರ್ವಶಿಯು ಅವನಿಗೆ ಉತ್ತರಿಸಿದಳು, ''ಮಹಾರಾಜ, ಸಾಕಿನ್ನು ಈ ನಿನ್ನ ಅವಿವೇಕ, ನಿನ್ನ ಹುಚ್ಚಾಟವನ್ನು ಇನ್ನಾದರೂ ಇಲ್ಲಿಗೇ ನಿಲ್ಲಿಸು, ನಾನು ನಿನ್ನಿಂದ ಗರ್ಭಿಣಿಯಾಗಿದ್ದೇನೆ. ಇನ್ನು ಒಂದು ವರ್ಷದ ಮೇಲೆ ಮತ್ತೆ ನಾನು ಇಲ್ಲಿಗೆ ಬರಬೇಕು. ಅಷ್ಟರಲ್ಲಿ ನಿನಗೊಬ್ಬ ನನ್ನಲ್ಲಿ ಗಂಡು ಮಗನು ಹುಟ್ಟಿರುತ್ತಾನೆ. ಆಗ ನಾನು ಮತ್ತೆ ಒಂದು ರಾತ್ರಿ ನಿನ್ನ ಜೊತೆಗೆ ಇರುತ್ತೇನೆ.'' ಅವಳ ಈ ಮಾತನ್ನು ಕೇಳಿ ಮಹಾರಾಜನಿಗೆ ಪರಮಾನಂದವಾಯಿತು. ಅವನು ಹಿಗ್ಗಿನಿಂದ ತನ್ನ ಊರಿಗೆ ಹಿಂತಿರುಗಿದ. ಇತ್ತ ಊರ್ವಶಿಯು ತನ್ನ ಗೆಳತಿಯರಾದ ಅಪ್ಸರೆಯರಿಗೆ ಹೇಳಿದಳು ''ಇವನೇ ಪುರುಷ ಶ್ರೇಷ್ಠನಾದ ಪುರೂರವ. ನಾನು ಇಷ್ಟು ದಿನಗಳವರೆಗೆ ಇವನೊಡನೆ ಭೂಲೋಕದಲ್ಲಿ ಇದ್ದೆ. ಅವನ ಮೇಲಿನ ಪ್ರೇಮದಿಂದ ನನ್ನ ಮನಸ್ಸು ಅವನೆಡೆಗೇ ಜಗ್ಗುತ್ತಿತ್ತು.'' ಅವಳ

ಈ ಪುರೂರವನ ಪರಿಚಾಯಕ ಮಾತನ್ನು ಕೇಳಿ ಊರ್ವಶಿಯ ಅಪ್ಸರಾ ಸಖಿಯರು ನುಡಿದರು. ''ಸಖಿ, ನೀನು ಮಾಡಿದ್ದು ಬಹಳ ಚೆನ್ನಾಗಿದೆ. ಇವನ ರೂಪವಾದರೂ ಬಹಳ ಸುಂದರವಾಗಿದೆ. ಇವನ ನಿಲುವು ಚೆಲವುಗಳನ್ನು ನೋಡಿದರೆ ನಮಗಾದರೂ ಎನಿಸಬಹುದು 'ಇವನೊಡನೆ ಯಾವಾಗಲೂ ಸಹವಾಸವು ಆಗಲಿ' ಎಂದು.

## ಊರ್ವಶಿಯ ಹೇಳಿಕೆ, ರಾಜನ ಕೇಳಿಕೆ

ಒಂದು ವರ್ಷವು ಪೂರ್ಣವಾದ ಬಳಿಕ ಪುರೂರವ ಮಹಾರಾಜನು ಅಲ್ಲಿಗೆ ಬಂದನು. ಆಗ ಊರ್ವಶಿಯು ತಾನು ಹಡೆದ ಆಯುಕುಮಾರನನ್ನು ಪುರೂರವಗೆ ಕೊಟ್ಟಳು. ಮತ್ತು ಒಂದು ಇರುಳು ಆ ಪುರೂರವನ ಜೊತೆಗೆ ಕಳೆದು ಐದು ಮಕ್ಕಳನ್ನು ಹೆಡಯಲಿಕ್ಕಾಗಿ ಗರ್ಭವನ್ನು ಧರಿಸಿದಳು. ಮತ್ತು ಮಹಾರಾಜನಿಗೆ ತಿಳಿಸಿದಳು. ''ನಮ್ಮ ಮೇಲಿನ ಪ್ರೇಮದಿಂದ ನಿನಗೆ ಎಲ್ಲ ಗಂಧರ್ವರೂ ವರಗಳನ್ನು ಕೊಡಲು ಸಿದ್ಧರಾಗಿದ್ದಾರೆ. ಆದುದರಿಂದ ನೀನು ಹೀಗೆ ವರ ಕೇಳು.'' ಅದನ್ನು ಕೇಳಿ ಪುರೂರವನು ಆ ಗಂಧರ್ವರಿಗೆ ವರ ಕೇಳಿದ. ''ನಾನು ವೈರಿಗಳನ್ನೆಲ್ಲ ಗೆದ್ದಿದ್ದೇನೆ. ನನ್ನ ಯಾವ ಇಂದ್ರಿಯಗಳೂ ಬಲಗುಂದಿಲ್ಲ. ಬಂಧು ಬಳಗ ಪರಿವಾರವೂ ಸಾಕಷ್ಟು ಇದೆ. ನನ್ನ ಐಶ್ವರ್ಯಕ್ಕೆ ಲೆಕ್ಕವಿಲ್ಲ. ನನ್ನಲ್ಲಿ ಬಲಕ್ಕೆ ಕೊರತೆ ಇಲ್ಲ. ನನಗೆ ಬೇರಾವುದೂ ಬೇಕಿಲ್ಲ. ನಾನು ಬಯಸುವುದು ಒಂದೇ ಒಂದು. ''ಊರ್ವಶಿ ನನ್ನನ್ನು ಬಿಟ್ಟು ಅಗಲಬಾರದು. ಅವಳು ಇದ್ದಲ್ಲಿಯೇ ನಾನು ಇರಬೇಕು. ನನ್ನ ಆಯುಷ್ಯವನ್ನೆಲ್ಲ ಊರ್ವಶಿಯ ಸಹವಾಸದಲ್ಲಿಯೇ ಕಳೆಯಬೇಕು'' ಇದೊಂದೇ ಹೃದಯದಲ್ಲಿ ನನಗೆ ಅಭಿಲಾಷೆ ಇದೆ. ಪುರೂರವನ ಪ್ರಣಯಪೂರ್ಣವಾದ ಈ ಪ್ರಾರ್ಥನೆಯನ್ನು ಕೇಳಿ ಗಂಧರ್ವರ ಎದೆ ಕರಗಿತು. ಅವರು ಅವನಿಗೆ ಒಂದು ಅಗ್ನಿ ಪಾತ್ರವನ್ನು ಕೊಟ್ಟು ಹೇಳಿದರು. ''ಈ ಅಗ್ನಿಯನ್ನು ವೈದಿಕ ವಿಧಿಗೆ ಅನುಸಾರವಾಗಿ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಎಂದು ಮೂರು ಭಾಗ ಮಾಡಿ ಊರ್ವಶಿಯ ಪ್ರಾಪ್ತಿಯ ಉದ್ದೇಶದಿಂದ ಚೆನ್ನಾಗಿ ಯಜ್ಞ ಮಾಡು'' ಎಂದು. ಪುರೂರವನು ಅವರ ಆದೇಶದಂತೆ ಗಂಧರ್ವರು ಕೊಟ್ಟ ಅಗ್ನಿ ತುಂಬಿದ ಥಾಲಿಯನ್ನು ತೆಗೆದುಕೊಂಡು ತನ್ನ ಊರ ಕಡೆಗೆ ಹೊರಟನು.

## ಹಗಲು ಕಳೆದ ಬುದ್ಧಿ ಇರುಳು ಮತ್ತೆ ಮರಳಿತು

ದಾರಿಯಲ್ಲಿ ಅವನಿಗೆ ವಿಚಾರ ಬಂದಿತು. ''ಅಯ್ಯೋ ನನ್ನ ಮೌಢ್ಯವು ಅತಿ ಆಯಿತು. ಜಾಡ್ಯವು ಮಿತಿಮೀರಿತು. ಊರ್ವಶಿಯ ಸಲುವಾಗಿ ಇಷ್ಟುದಿನ ಕಂಡಲ್ಲೆಲ್ಲ ಅಂಡಲೆದದ್ದಾಯಿತು. ಈಗ ಆ ಊರ್ವಶಿಯನ್ನು ಬಿಟ್ಟು ಈ ಬೆಂಕಿಯ ಬೋಗೋಣಿಯನ್ನು ಊರಿಗೆ ಒಯ್ಯುತ್ತಿದ್ದೇನೆ. ಊರ್ವಶಿಯನ್ನಲ್ಲ.'' ಹೀಗೆ ವಿಚಾರಿಸಿ ಅವನು ಆ ಅಗ್ನಿ ಪಾತ್ರವನ್ನು ದಾರಿಯ ಅಡವಿಯಲ್ಲಿಯೇ ಬಿಟ್ಟು ಊರಿಗೆ ಹೋದನು ಅರಮನೆಯಲ್ಲಿ ಅವನು ಮಲಗಿಕೊಂಡಾಗ ಸರಿ ರಾತ್ರಿಯಲ್ಲಿ ಅವನಿಗೆ ಪಕ್ಕನೆ ಎಚ್ಚರಾಯಿತು. ಮತ್ತೆ ವಿಚಾರ. ''ಗಂಧರ್ವರು ಆ ಬೆಂಕಿಯ ಥಾಲಿಯನ್ನು ನನಗೆ ಊರ್ವಶಿಯ ಲೋಕ ಪ್ರಾಪ್ತಿಗಾಗಿ ಕೊಟ್ಟಿದ್ದರು. ಅದನ್ನು ನಾನು ನಡುದಾರಿಯ

ಅಡವಿಯಲ್ಲಿಯೇ ಇಟ್ಟು ಬಂದೆ. ಈಗ ಹೋಗಿ ಅದನ್ನು ತೆಗೆದುಕಂಡು ಬರುವೆ.'' ಎಂದು ಆಲೋಚನೆ ಬಂದಕೂಡಲೇ ದಿಗ್ಗನೆ ಎದ್ದು ಆ ನಟ್ಟಿರುಳಿನಲ್ಲಿ ತಾನು ಥಾಲಿಯನ್ನಿಟ್ಟ ಆ ದಟ್ಟಡವಿಗೆ ಧಾವಿಸಿದನು. ಆದರೆ ಇವನು ಅಲ್ಲಿಗೋ ಹೋಗುವಷ್ಟರಲ್ಲಿ ಆ ಅಗ್ನಿಥಾಲಿಯು ಇಟ್ಟ ಸ್ಥಳದಲ್ಲಿ ಇರಲಿಲ್ಲ. ಅದರ ಸ್ಥಳದಲ್ಲಿ ಒಂದು ಅರಳೀಮರವು ಬೆಳೆದಿತ್ತು. ಅದರ ಹೊದರಿನಲ್ಲಿ ಒಂದು ಬನ್ನೀಗಿಡವು ಬೆಳೆದಿತ್ತು. ಅದನ್ನು ನೋಡಿ ಮಹಾರಾಜನಿಗೆ ಆಶ್ಚರ್ಯವೆನಿಸಿತು. ''ನಾನು ಇಲ್ಲಿ ಇಟ್ಟ ಅಗ್ನಿಥಾಲಿಯು ಮಾಯವಾಗಿ ಅದರ ಸ್ಥಳದಲ್ಲಿ ಶಮೀಗರ್ಭವಾದ ಅರಳೀಗಿಡವು ಬೆಳೆದಿದೆ. ಆದ್ದರಿಂದ ನಾನು ಅಗ್ನಿರೂಪವಾದ ಈ ಅಶ್ವತ್ಥ ವೃಕ್ಷವನ್ನೇ ನನ್ನ ರಾಜಧಾನಿಗೆ ಒಯ್ಯುವೆ. ಅಲ್ಲಿ ಈ ಅಶ್ವತ್ಥದ ಅರಣಿ=ಕಟ್ಟಿಗೆಯ ತುಂಡಿನಿಂದ-ಅಗ್ನಿಯನ್ನು ಮಥಿಸಿ ಆದರಿಂದ ಯಜ್ಞಮಾಡುತ್ತೇನೆ.'' ಎಂದು ಸಂಕಲ್ಪಿಸಿ ಆ ಅಶ್ವತ್ಥವನ್ನು ತೆಗೆದುಕೊಂಡು ತನ್ನ ಊರಿಗೆ ನಡೆದನು. ರಾಜಧಾನಿಗೆ ಬಂದ ಬಳಿಕ ಮಹಾರಾಜನು ಆ ಅಶ್ವತ್ಥ ವೃಕ್ಷದಿಂದ ಅರಣಿಯನ್ನು ಸಿದ್ಧಪಡಿಸಿದನು. ಗಾಯತ್ರಿ ಮಂತ್ರವನ್ನು ಹೇಳುತ್ತ ಬೆರಳಿನಾಕಾರದ ಸಮಿಧೆಗಳನ್ನು ಮಾಡಿದ್ದರಿಂದ ಆ ಮಂತ್ರಗಳನ್ನು ಅಕ್ಷರಗಳಷ್ಟೇ ಬೆರಳಿನಾಕಾರದ ಅರಣಿಗಳು ಸಿದ್ಧವಾದವು. ಅವುಗಳ ಮಂಥನ ಮಾಡಿ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂದು ಮೂರು ವಿಧ ಅಗ್ನಿಯಲ್ಲಿ ವೇದಾನುಸಾರವಾಗಿ ಹೋಮ ಮಾಡಿದನು. ಮತ್ತು ಇದೇ ಅಗ್ನಿ ವಿಧಿಯಿಂದ ಬಹುವಿಧವಾದ ಯಜ್ಞಗಳನ್ನು ಮಾಡಿದನು.

ಆದರಿಂದ ಅವನಿಗೆ ಗಂಧರ್ವ ಲೋಕ ಪ್ರಾಪ್ತಿಯಾಯಿತು. ಅವನು ಊರ್ವಶಿಯ ಶಾಶ್ವತ ಸಹವಾಸವನ್ನು ಪಡೆದು ತನ್ನ ಮನದಲ್ಲಿರುವ ಭೋಗಬಯಕೆಗಳನ್ನೆಲ್ಲ ಅನುಭವಿಸಿದನು. ಕೊನೆಗೆ ಅವನ ಕನಸು ನನಸಾಯಿತು. ಮೊದಲು ಒಂದೇ ವಿಧವಾಗಿದ್ದ ಯಜ್ಞಾಗ್ನಿಯು ಈಗ ಮೂರು ವಿಧವಾಗಿ ಪ್ರವರ್ತಿತವಾಯಿತು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಆರನೇ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೭

ಪರಾಶರ - ಆ ಪುರೂರವ ಮಹಾರಾಜನಿಗೆ ಆಯು, ಶತಾಯು, ಅಮಾವಸು, ಎಶ್ವವಸು, ಶ್ರುತಾಯು, ಆಯುತಾಯು, ಎಂಬ ಹೆಸರಿನ ಆರು ಜನ ಒಳ್ಳೇ ಬುದ್ಧಿವಂತರಾದ ಮಕ್ಕಳು ಜನಿಸಿದರು. ಅಮಾವಸುವಿಗೆ ಭೀಮ ಎಂಬ ಮಗನು ಹುಟ್ಟಿದನು. ಆ ಭೀಮನಿಗೆ ಕಾಂಚನ, ಕಾಂಚನನಿಂದ ಸುಹೋತ್ರ, ಆ ಸುಹೋತ್ರನಿಗೆ ಜನ್ನು ಎಂಬ ಮಕ್ಕಳು ಜನಿಸಿದರು.

### ಹರಿಯ ಅಡಿಯಿಂದ, ಹರನ ಜಡೆಯಿಂದ, ಋಷಿಯ ತೊಡೆಯಿಂದ ಇಳಿದು ಬಾ

ಭಗೀರಥನು ದೇವಗಂಗೆಯನ್ನು ಪಾತಾಳಕ್ಕೆ ಕರೆದುಕೊಂಡು ಹೊರಟಾಗ ದಾರಿಯಲ್ಲಿ ಜನ್ನುಋಷಿಯ ಆಶ್ರಮವಿದ್ದಿತು. ಗಂಗೆಯ ಪ್ರವಾಹದಲ್ಲಿ ಅವನ ಆಶ್ರಮ ಮತ್ತೂ ಯಜ್ಞವಾಟಿಕೆ ಎಲ್ಲವೂ ತೇಲಿಕೊಂಡು ಹೋದವು. ಅದನ್ನು ಕಂಡು ಮುನಿಯ ಕಣ್ಣಿನಲ್ಲಿ ಕೆಂಪು ಚಿಮ್ಮಿತು. ಹೃದಯದಲ್ಲಿ ಕ್ರೋಧ ಉಕ್ಕಿತು. ಆಗ ಅವನು ಯಜ್ಞಪುರುಷನನ್ನು ಮಹಾ ಸಮಾಧಿಯಿಂದ ತನ್ನಲ್ಲಿ ಆರೋಪಣೆ ಮಾಡಿಕೊಂಡು ಗಂಗೆಯ ಪ್ರವಾಹವನ್ನೆಲ್ಲ ಕುಡಿದು ಬಿಟ್ಟನು. ಆಗ ದೇವತೆಗಳೂ ಋಷಿಗಳೂ ಬಂದು ಜನ್ನುಮುನಿಗೆ ಬಿನ್ನಹ ಮಾಡಿಕೊಂಡು ಸಂತೈಸಿ ಅವನು ಗಂಗೆಯನ್ನು ಬಿಡುವಂತೆ ಮಾಡಿದರು. ಭಾಗೀರಥಿಯು ಅಂದಿನಿಂದ ಜನ್ನುಋಷಿಯ ಮಗಳು ಎಂದು ಎನಿಸಿ 'ಜಾನ್ಹವಿ' ಎಂದು ಅವಳಿಗೆ ಹೆಸರು ಬಂದಿತು. ಜನ್ನುವಿನಿಂದ ಮುಂದೆ ಆ ಪುರೂರವನ ವಂಶದಲ್ಲಿ ಸುಮಂತು, ಅಜಕ ಬಲಾಕಾಶ್ವ, ಕುಶ ಎಂಬ ಮಕ್ಕಳಾದರು. ಕುಶಾಂಬ, ಕುಶನಾಭ, ಅಧೂರ್ತರಜ, ಮತ್ತು ವಸು ಎಂದು ನಾಲ್ಕು ಮಕ್ಕಳು ಕುಶರಾಜನಿಗೆ ಜನಿಸಿದರು. ಅವರಲ್ಲಿ ಕುಶಾಂಬನು ತನಗೆ ಇಂದ್ರನಿಗೆ ಸರಿ ದೊರೆಯಾದ ಮಗನು ಜನಿಸಬೇಕೆಂದು ತಪಸ್ಸನ್ನು ಆಚರಿಸಿದನು. ಅವನ ಉಗ್ರವಾದ ತಪಸ್ಸನ್ನು ಕಂಡು ಸುರರಾಜನಿಗೆ ಹೆದರಿಕೆಯಾಯಿತು. ಇವನಿಗೆ ಬೇರೊಬ್ಬ ನನಗೆ ಸಮಾನವಾದ ಮಗನು ಹುಟ್ಟುವುದು ಬೇಡ ಎಂದು ವಿಚಾರಿಸಿ ಅವನ ಮಗನಾಗಿ ತಾನೇ ಹುಟ್ಟಿ ಬಂದನು. ಅವನ ಹೆಸರು ಗಾಧಿ. ಕೌಶಿಕನೆಂದೂ ಕರೆಯುತ್ತಿದ್ದರು.

### ಮುಪ್ಪಿನ ಕಾಲದಲ್ಲಿ ಮದುವೆಯ ಹಂಬಲ

ಗಾಧಿ ರಾಜನಿಗೆ ಸತ್ಯವತೀ ಎಂಬ ಕನ್ಯೆ ಇದ್ದಳು. ಅವಳನ್ನು ಭೃಗುವಂಶದ ಋಚೀಕ ಋಷಿಯು ಒಲಿದು ವಿವಾಹವಾಗಬೇಕೆಂದು ಗಾಧಿರಾಜನನ್ನು ಕೇಳಿದನು. ಆದರೆ ಮಹಾರಾಜನಿಗೆ ಕಡುಬಡವನಾದ ಇಂಥ ವೈದಿಕ ಬ್ರಾಹ್ಮಣನಿಗೆ ಮಗಳನ್ನು ಕೊಡುವ ಮನಸ್ಸು ಇರಲಿಲ್ಲ. ಮೇಲೆ ಮುಪ್ಪಿನ ಮುದುಕ. ಸಿಟ್ಟಂತೂ ಸರ್ವದಾ ಮೂಗಿನ ಮೇಲೆ. ಇಂಥ ಕೋಪಿಷ್ಠ ಜರಠನಿಗೆ ಮಗಳನ್ನು ಕೊಟ್ಟರೆ ಅವಳಿಗೆ ಏನು ಸುಖವಾದೀತು ! 'ಇಲ್ಲ' ಎಂದರೆ ಋಚೀಕನಿಗೆ ಕೋಪ. ತಡವಿಲ್ಲದೇ ಶಾಪ. ಆದುದರಿಂದ ಅವನೊಂದು ಯುಕ್ತಿಯನ್ನು ಮಾಡಿದನು. ''ಪೂಜ್ಯರೇ, ಸಾವಿರ ಕುದುರೆಗಳನ್ನು ತಂದುಕೊಟ್ಟವರಿಗೆ ಸತ್ಯವತಿಯನ್ನು ಕೊಡುವುದೆಂದು ನಾನು ಸಂಕಲ್ಪ ಮಾಡಿದ್ದೇನೆ. ಆ ಕುದುರೆಗಳಿಗೆ ಚಂದ್ರನಂತೆ ಕಾಂತಿ ಇರಬೇಕು. ಗಾಳಿಯಂತೆ ವೇಗವಿರಬೇಕು. ಉಚ್ಚೈಶ್ರವದಂತೆ ಅಚ್ಚ ಬಿಳಿ ಬಣ್ಣದವ್ಯೆಯಿರಬೇಕು. ಆದರೆ ಒಂದು ಕಿವಿ ಮಾತ್ರ ಕರ್‍ರಗಿರಬೇಕು. ಇಂಥ ಸಾವಿರ ಕುದುರೆಗಳನ್ನು ಕನ್ಯಾ ಶುಲ್ಕವಾಗಿ ನನಗೆ ತಂದುಕೊಟ್ಟರೆ ಇವಳನ್ನು ಮದುವೆ ಮಾಡಿಕೊಡುತ್ತೇನೆ. ಎಂದು ತಿಳಿಸಿದನು.

## ಕುದುರೆ ಕೊಟ್ಟು ಚದುರೆಯ ಕೈ ಹಿಡಿದ

ತಪೋನಿಧಿಯಾದ ಋಚೀಕ ಋಷಿಯು ವರುಣನ ಬಳಿಗೆ ಹೋಗಿ ಅವನ ದಯೆಯಿಂದ ಅಂಥ ಸಾವಿರ ಕುದುರೆಗಳನ್ನು ದೊರಕಿಸಿಗೊಂಡು ಬಂದು ಗಾಧಿರಾಜನಿಗೆ ಒಪ್ಪಿಸಿದನು. ಅಶ್ವತೀರ್ಥದಿಂದ ಉದಿಸಿ ಬಂದ ಆ ಸಾವಿರ ಕುದುರೆಗಳಿಗೆ ಗಾಧಿಯು ಹೇಳಿದ ಎಲ್ಲ ಲಕ್ಷಣಗಳೂ ಇದ್ದವು. ತನಗೆ ಇಷ್ಟವಾದ ಅಷ್ಟು ಕುದುರೆಗಳನ್ನು ಋಚೀಕಮುನಿಯು ತಂದು ಕೊಟ್ಟ ಬಳಿಕ ಅವನಿಗೆ ಗಾಧಿರಾಜನು ಕನ್ಯೆಯನ್ನು ಕೊಡಲೇಬೇಕಾಯಿತು. ಆ ಮುದುಕ ಮುನಿಯೊಂದಿಗೆ ಸತ್ಯವತಿಯ ವಿವಾಹವು ನೆರವೇರಿತು. ಮದುವೆಯಾದ ಬಳಿಕ ಋಷಿಯು ತನಗೆ ಸಂತಾನಕ್ಕಾಗಿ ಯಜ್ಞಮಾಡಿ ಒಂದು ಚರುವನ್ನು ತಯಾರು ಮಾಡಿದನು. ಆಗ ಸತ್ಯವತಿಯು ತನ್ನ ಪತಿಯನ್ನು ಪ್ರಸನ್ನಗೊಳಿಸಿ ಬಿನ್ನಹ ಗೈದಳು. ''ನಮ್ಮ ತಾಯಿಗೆ ಗಂಡು ಸಂತತಿ ಇಲ್ಲ. ಅವಳಿಗೂ ಒಬ್ಬ ಮಗನನ್ನು ತಾವು ಕರುಣಿಸಬೇಕು.'' ಮಡದಿಯ ನುಡಿಯಂತೆ ಆ ಮುನಿಯು ಮತ್ತು ಒಂದು ಚರುವನ್ನು ಸಿದ್ಧಗೊಳಿಸಿದನು. ತನಗೆ ಬ್ರಹ್ಮಜ್ಞಾನಿಯಾದ ಋಷಿಪುತ್ರನು ಜನಿಸಬೇಕೆಂದೂ ತನ್ನ ಮಾವನಿಗೆ ಮಹಾ ಪರಾಕ್ರಮಶಾಲಿಯಾದ ಕ್ಷತ್ರಿಯ ಕುಮಾರನು ಜನಿಸಬೇಕೆಂದೂ ಸಂಕಲ್ಪ ಮಾಡಿ ಎರಡು ಬೇರೆ ಬೇರೆ ಚರುಗಳನ್ನು ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟನು. ''ಇದು ನಿನಗಾಗಿ. ಇದು ನಿನ್ನ ತಾಯಿಗಾಗಿ. ಇದನ್ನು ಅದಲು ಬದಲು ಮಾಡದೇ ನೀವಿಬ್ಬರು ಭಕ್ಷಣ ಮಾಡಿರಿ'' ಎಂದು ಹೇಳಿ ತಪಸ್ಸಿಗೆ ತೆರಳಿದನು.

## ಮಗಳ ಕಿವಿ ಊದಿ ಚರು ಬದಲಿಸಿದಳು

ಪತಿಯು ವನಕ್ಕೆ ಹೋದ ಬಳಿಕ ಸತ್ಯವತಿಯು ತಾಯಿಯನ್ನು ಕರೆಸಿಕೊಂಡು ತನ್ನ ಪತಿಯು ಸಿದ್ಧಪಡಿಸಿದ ಚರುವಿನ ಸಮಾಚರವನ್ನು ತಿಳಿಸಿದಳು. ತಾಯಿಯ ಹೆಣ್ಣು ಬುದ್ಧಿ ತನ್ನ ಕೆಲಸವನ್ನು ಮಾಡಿತು. ಅವಳು ತನ್ನ ಮಗಳಿಗೆ ಹೇಳಿದಳು- ''ವತ್ಸೆ! ನಿನ್ನ ಪತಿಯು 'ಆ ಚರುವನ್ನು ನೀನೇ ತಿನ್ನಬೇಕು' ಎಂದು ಕಟ್ಟಪ್ಪಣೆ ಮಾಡಬೇಕಾದರೆ ಅದರಲ್ಲಿ ಏನೋ ವಿಶೇಷವು ಇರಲೇಬೇಕು. ಯಾರಿಗಾದರೂ ತನ್ನ ಮಗನು ಸರ್ವ ಶ್ರೇಷ್ಠನಾಗಬೇಕೆಂದು ಅಪೇಕ್ಷೆ ಇರುವುದು ಸಹಜವಷ್ಟೇ! ಆದುದರಿಂದ ನಿನ್ನ ಗಂಡನು ತನ್ನ ಮಗನು ಎಲ್ಲ ಗುಣಗಳಿಂದ ಒಡಗೂಡಿದವನಾಗಬೇಕೆಂದು ಉತ್ತಮ ಚರುವನ್ನು ನಿನಗಾಗಿ ತಯಾರು ಮಾಡಿಟ್ಟಿರಲಿಕ್ಕೆ ಸಾಕು. ಹೆಂಡತಿಯ ತಮ್ಮನ ಬಗ್ಗೆ ಅವರಿಗೆ ಅಷ್ಟು ಅಸ್ಥೆ ಇರಲಿಕ್ಕೆ ಕಾರಣವಿಲ್ಲ. ಆದುದರಿಂದ ನಿನ್ನ ಚರವನ್ನು ನಾನು, ನನ್ನ ಚರುವನ್ನು ನೀನು, ಅದಲು ಬದಲು ಮಾಡಿ ಭಕ್ಷಣ ಮಾಡೋಣ. ನಿನ್ನ ತಮ್ಮನು ನಾಳೆ ದೊಡ್ಡವನಾಗಿ ಮಹಾರಾಜನಾಗಿ ಬಾಳಬೇಕು. ಭೂಮಂಡಲವನ್ನೆಲ್ಲ ಆಳಬೇಕು. ಬಲ, ವೀರ್ಯ, ಧೈರ್ಯ, ಅಧಿಕಾರ, ಐಶ್ವರ್ಯ ಮುಂತಾದ ಎಲ್ಲ ಸದ್ಗುಣಗಳೂ ಅವನಿಗೆ ಅವಶ್ಯವಿರುತ್ತದೆ. ನಿನಗಾಗಿ ತಯಾರಿಸಿದ ಚರುವಿನ ಇಂಥ ಎಲ್ಲ ಗುಣಸಂಪನ್ನನಾದ ಮಗನೇ ಹುಟ್ಟುತ್ತಾನೆ. ಆದುದರಿಂದ ಅದನ್ನು ನನಗೇ ಕೊಡು. ನಿನ್ನ ಮಗನೇನು ! ಹೇಳಿಕೇಳಿ ವೈದಿಕ ಬ್ರಾಹ್ಮಣ. ಗುಡಿಸಲಲ್ಲಿ ಕುಳಿತು ಜಪಮಾಲೆ ತಿರುಗಿಸಲಿಕ್ಕೆ ಅಂಥ ಹೆಚ್ಚಿನ ಗುಣಗಳೇಕೆ ! ನಿನ್ನ ತಮ್ಮನ ಮೇಲೆ ದಯೆದೋರು'' ಎಂದು ಬಗೆ ಬಗೆಯಿಂದ ತಿಳಿಸಿ ಹೇಳಿ ಮಗಳನ್ನು ಒಪ್ಪಿಸಿದಳು.

ಆಗ ಸತ್ಯವತಿಯು ತಮ್ಮನ ಉತ್ಕರ್ಷವಾಗಲಿ ಎಂಬ ದೃಷ್ಟಿಯಿಂದ ತಾಯಿಯ ಮಾತಿಗೆ ಸಮ್ಮತಿಸಿ ತನ್ನ ಚರುವನ್ನು ಅವಳಿಗೆ ಕೊಟ್ಟು ಅವಳ ಚರುವನ್ನು ತಾನು ತಿಂದಳು.

## ತಾಯಿಯ ತಲಿ, ಮಗಳ ಬಲಿ

ಮುಂದೆ ಕೆಲ ದಿನಗಳಾದ ಬಳಿಕ ಋಚೀಕರು ತಪಸ್ಸನ್ನು ಮುಗಿಸಿಕೊಂಡು ವನದಿಂದ ಮನೆಗೆ ಮರಳಿದರು. ಗರ್ಭಿಣಿಯಾದ ಮಡದಿಯ ಮುಖ ನೋಡಿ ಕೂಡಲೇ ಅವರಿಗೆ ತಿಳಿದುಹೋಯಿತು ಚರು ಬದಲಾಗಿದೆ ಎಂದು. ಕೋಪದಿಂದ ನುಡಿದರು- ''ಎಲೇ ಪಾಪಿ ಹೆಣ್ಣೆ! ಇದೇನು ಅಚಾತುರ್ಯವನ್ನು ಮಾಡಿದೆ! ನಿನ್ನ ದೇಹದಲ್ಲಿ ಕ್ರೂರ ಕ್ರಾಂತಿಯು ಉಕ್ಕುತ್ತಲಿದೆ. ನಿನ್ನ ಮುಖದಲ್ಲಿ ಘೋರ ರೂಪ ರಾವು ಬಡೆಯುತ್ತಲಿದೆ. ನೀನು ಖಂಡಿತವಾಗಿಯೂ ನಿನ್ನ ತಾಯಿಗೆ ಕೊಟ್ಟ ಚರುವನ್ನು ಭಕ್ಷಣಮಾಡಿದೆ. ಅದರಲ್ಲಿ ನಾನು ಶೌರ್ಯ, ವೀರ್ಯ, ಐಶ್ವರ್ಯ, ಕ್ರೌರ್ಯ, ಧೈರ್ಯ, ಬಲ ಮುಂತಾದ ಗುಣಗಳೆಲ್ಲ ಬರುವಂತೆ ಮಂತ್ರಿಸಿದ್ದೆ. ನಿನ್ನ ಚರುವಿನಲ್ಲಿ ಶಾಂತಿ, ದಿವ್ಯಜ್ಞಾನ, ಬ್ರಹ್ಮತೇಜ, ಕ್ಷಮೆ ಮುಂತಾದ ಬ್ರಹ್ಮಋಷಿಯ ಸದ್ಗುಣಗಳು ಬರುವಂತೆ ಮಾಡಿದ್ದೆ. ಅದನ್ನು ಈಗ ನೀನು ಬದಲು ಮಾಡಿದ್ದರಿಂದ ಘೋರಾಸ್ತ್ರಗಳನ್ನು ತೂರುವ ಹೋರಾಟದ ಛಲವುಳ್ಳ ಕ್ಷತ್ರಿಯ ಸ್ವಭಾವದ ಕ್ರೂರ ಮಗನು ನಿನಗೆ ಜನಿಸುವನು. ನಿನ್ನ ತಾಯಿಗೋ ಶಾಂತಿಪ್ರಿಯನಾದ ಬ್ರಾಹ್ಮಣರಂತೆ ಸದಾಚಾರ, ಸೌಮ್ಯವೃತ್ತಿಯುಳ್ಳ ಮಗನು ಹುಟ್ಟುವನು.'' ಇದನ್ನು ಕೇಳಿ ಸತ್ಯವತಿಯು ಗಟ್ಟಿಯಾಗಿ ಪತಿಯ ಪಾದವನ್ನು ಹಿಡಿದಳು. ಪಶ್ಚಾತ್ತಾಪದಿಂದ ನುಡಿದಳು- ''ನಾಥ ! ತಿಳಿಯದೇ ನನ್ನ ಕೈಯಿಂದ ಇದೊಂದು ತಪ್ಪಾಗಿದೆ. ತಾವು ಕ್ಷಮಿಸಬೇಕು. ನನ್ನ ಮೇಲೆ ದಯೆದೋರಬೇಕು. ಹೇಗಾದರೂ ಮಾಡಿರಿ. ನನಗೆ ಕ್ರೂರಮಗನು ಹುಟ್ಟುವುದು ಬೇಡ. ಅವನು ಘೋರ ಕೃತ್ಯಗಳನ್ನು ಎಸಗುವುದೂ ಬೇಡ. ಎಂತಾದರೂ ಅದನ್ನು ತಪ್ಪಿಸಿರಿ. ಮೊಮ್ಮಗನು ಬೇಕಾದರೆ ಕ್ಷತ್ರಕಾರ್ಯವನ್ನು ಮಾಡಲಿ'' ಆಗ ಮುನಿಯು ಹಾಗೇ ಆಗಲಿ ಎಂದು ಹೇಳಿದ. ಅನಂತರ ಸತ್ಯವತಿಯು ಗಂಡು ಮಗುವನ್ನು ಹೆತ್ತಳು. ಅವನೇ ಜಮದಗ್ನಿ. ಅವಳ ತಾಯಿಯು ಗಂಡು ಮಗುವಿಗೆ ಜನ್ಮವಿತ್ತಳು. ಅವನೇ ವಿಶ್ವಾಮಿತ್ರ. ಜಮದಗ್ನಿಯು ಜನಿಸಿದ ಬಳಿಕ ತಾಯಿ ಸತ್ಯವತಿಯು ಕೌಶಿಕೀ ಎಂಬ ನದಿಯಾಗಿ ಹರಿದಳು. ಜಮದಗ್ನಿ ಋಷಿಯ ಇಕ್ಷ್ವಾಕುವಂಶದ ರಾಜನಾದ ರೇಣುವಿನ ಪುತ್ರಿ ರೇಣುಕೆಯನ್ನು ಮದುವೆಯಾದನು. ಆ ರೇಣುಕೆಯಲ್ಲಿ ಋಚೀಕರ ಮಾತಿನಂತೆ ಎಲ್ಲ ಕ್ಷತ್ರಿಯರನ್ನು ಸಂಹರಿಸುವ ಪರಶುರಾಮ ಎಂಬ ಮಗನು ಹುಟ್ಟಿದನು. ಅವನು ಜಗದ್ ಗುರುವಾದ ನಾರಾಯಣನ ಸಾಕ್ಷಾತ್ ಅವತಾರ.

ಅತ್ತ ಗಾಧಿಯ ಮಗನಾದ ವಿಶ್ವಾಮಿತ್ರನು ಮುನಿಯಾಗಿ ಬ್ರಹ್ಮರ್ಷಿ ಎನಿಸಿದನು. ಅವನಿಗೆ ದೇವತೆಗಳು ಭೃಗುವಂಶದ ಶುನಶ್ಶೇಪನನ್ನು ದತ್ತುಕೊಟ್ಟರು. ಅದರಿಂದ ಅವನಿಗೆ ದೇವರಾತ ಎಂದು ಹೆಸರು ಬಂದಿತು. ಇವರಲ್ಲದೆ ವಿಶ್ವಾಮಿತ್ರರಿಗೆ ಮಧುಚಂದ್ರ, ಧನಂಜಯ, ಕೃತದೇವ, ಅಷ್ಟಕ, ಕಚ್ಛಪ, ಹಾರೀತ ಮುಂತಾದ ಅನೇಕ ಮಕ್ಕಳು ಉತ್ಪನ್ನರಾದರು. ಅವರೆಲ್ಲರಿಂದ ಬೇರೆ ಬೇರೆ ಕೌಶಿಕ ಗೋತ್ರಗಳು ಪ್ರವರ್ತಿತವಾದವು. ಈ ಕೌಶಿಕ ಗೋತ್ರದವರಿಗೆ ಬೇರೆ ಋಷಿಗೋತ್ರದವರಿಂದ ವಿವಾಹಸಂಬಂಧವಾಗುತ್ತದೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಏಳನೆಯ ಅಧ್ಯಾಯ ಸಂಪೂರ್ಣ*

## ಕಾಶೀರಾಜನ ಮನೆತನ ಧನ್ವಂತರಿ, ವತ್ಸ, ಅಲರ್ಕ | ಅಧ್ಯಾಯ - ೮

ಪುರೂರವನ ಜೇಷ್ಠಪುತ್ರನಾದ ಆಯುಕುಮಾರನು ರಾಹುವಿನ ಮಗಳನ್ನು ಮದುವೆಯಾದನು. ಅವನಿಗೆ ಐವರು ಮಕ್ಕಳು ನಹುಷ, ಕ್ಷತ್ರವೃದ್ಧ, ರಂಭ, ರಜಿ ಕೊನೆಯವನೇ ಅನೇನಸ. ಕ್ಷತ್ರವೃದ್ಧನಿಗೆ ಸುಹೋತ್ರ ಎಂಬ ಮಗನು ಜನಿಸಿದ. ಕೌಶ್ಯ, ಕಾಶ, ಗೃತ್ಸಸಮದ ಮೂವರು ಸುಹೋತ್ರನ ಮಕ್ಕಳು. ಗೃತ್ಸಮದನ ಮಗನಾದ ಶೌನಕನು ಚಾತುರ್ವರ್ಣ್ಯಕ್ಕೆ ಪ್ರವರ್ತಕನಾದನು. ಕಾಶ್ಯನ ಮಗನಾದ ಕಾಶೇಯನು ಕಾಶಿಯ ರಾಜ್ಯಕ್ಕೆ ಅರಸನಾದನು. ಆ ಕಾಶಿರಾಜನಿಗೆ ರಾಷ್ಟ್ರ, ಅವನಿಗೆ ದೀರ್ಘತಪ, ಮಕ್ಕಳಾದವರು. ದೀರ್ಘತಪನ ಸತ್ಪುತ್ರನೆ ಧನ್ವಂತರಿ. ಧನ್ವಂತರಿಯು ಕೈಕೊಂಡ ಕಾರ್ಯಗಳೆಲ್ಲವೂ ತಕ್ಷಣ ಸಿದ್ಧಿಸುತ್ತಿದ್ದವು. ಎಲ್ಲ ಪ್ರಾಣಿಗಳ ಶರೀರ ರಹಸ್ಯವನ್ನು ಅವನು ಬಲ್ಲವನಾಗಿದ್ದನು. ಪೂರ್ವ ಜನ್ಮದಲ್ಲಿ ಭಗವಾನ್ ನಾರಾಯಣನು ಅವನಿಗೆ ವರವನ್ನು ಇತ್ತಿದ್ದನು. ''ಕಾಶಿ ರಾಜನ ವಂಶದಲ್ಲಿ ನೀನು ಮುಂದೆ ಅವತಾರ ಮಾಡಿ ಆಯುರ್ವೇದವನ್ನು ಎಂಟು ಬಗೆಯಾಗಿ ರಚನೆ ಮಾಡುವಿ. ಅನಂತರ ನಿನಗೆ ಯಜ್ಞದಲ್ಲಿ ಒಂದು ಭಾಗವು ದೊರೆಯುವುದು.'' ಎಂದು.

ಧನ್ವಂತರಿಗೆ ಕೇತುಮಾನ್, ಕೇತುಮಂತನಿಗೆ ಭೀಮರಥ, ಅವನಿಗೆ ದಿವೋದಾಸ, ದಿವೋದಾಸನ ಮಗ ಪ್ರವರ್ದನ. ಈ ಪ್ರವರ್ದನನು ಭದ್ರಶ್ರೇಣ್ಯ ಎಂಬ ರಾಜವಂಶವನ್ನು ಗೆದ್ದನು. ವೈರಿಗಳ ಕುಲಗಳನ್ನು ಬೇರುಸಹಿತ ಕಡಿದು ಹಾಕಿದನು. ಆ ಕಾರಣದಿಂದ ಅವನಿಗೆ ಶತ್ರುಜಿತ್ ಎಂದು ಹೆಸರಾಯಿತು. ಅವನು ತನ್ನ ಮಗನನ್ನು ಬಹಳ ಪ್ರೀತಿಯಿಂದ 'ಅಚ್ಚಾ' ಮಾಡಿ 'ವ ತ್ಸ' ಎಂದು ಕರೆದಿದ್ದರಿಂದ ಅವನಿಗೆ ವತ್ಸ ಎಂದೇ ಹೆಸರು ಬಿದ್ದಿತು. ಅಲ್ಲದೇ ಅವನು ಅತ್ಯಂತ ಸತ್ಯಸಂಧನಾದುದರಿಂದ ಋತುಧ್ವಜ ಎಂಬ ಹೆಸರನ್ನೂ ಹೊಂದಿದನು. ಅಂತರ ಅವನಿಗೆ ಕುವಲಯ ಎಂಬ ಹೆಸರಿನ ಶ್ರೇಷ್ಠವಾದ ಕುದುರೆಯು ದೊರೆತದ್ದರಿಂದ ಕುವಲಯಾಶ್ವ ಎಂದು ಲೋಕದಲ್ಲಿ ಅವನ ಹೆಸರು ಪ್ರಸಿದ್ಧಿಯಾಯಿತು. ಈ ವತ್ಸರಾಜನ ಮಗನೇ ಅಲರ್ಕ. ಈ ಅಲರ್ಕ ದೊರೆಯು ಪುರಾಣ ಪ್ರಪಂಚದಲ್ಲೆಲ್ಲ ಪ್ರಸಿದ್ಧನಾಗಿದ್ದಾನೆ. ಆ ಕಾಲದಲ್ಲಿ ಅಲರ್ಕನ ಹೆಸರು ಮತ್ತು ಅವನ ಮೇಲಿನ ಈ ಪದ್ಯವು ಎಲ್ಲರ ನಾಲಿಗೆಯ ಮೇಲೆ ನಲಿದಾಡುತ್ತಿತ್ತು.

''ಷಷ್ಠಿ ವರ್ಷ ಸಹಸ್ರಾಣಿ ಷಷ್ಠಿ ವರ್ಷಶತಾನಿಚ ।
ಅಲರ್ಕಾದಪರೋ ನಾನ್ಯೋ ಬುಭುಜೇ ಮೇದಿನೀಂ ಯುವಾ ॥

ತರುಣ ಅಲರ್ಕನ ಹೊರತಾಗಿ ಬೇರಾರೂ ಈ ಮೇದಿನಿಯನ್ನು ಅರವತ್ತಾರು ಸಾವಿರ ವರ್ಷಗಳವರೆಗೆ ಆಳಲಿಲ್ಲ. ಆ ಅಲರ್ಕನಿಂದ ಮುಂದೆ ಕಾಶಿರಾಜನ ವಂಶದಲ್ಲಿ ಸನ್ನತಿ, ಸುನೀಥ, ಸುಕೇತು, ಧರ್ಮಕೇತು, ವೀತಿಹೋತ್ರ, ಭಾರ್ಗ, ಭಾರ್ಗಭೂಮಿ, ಎಂದು ರಾಜರು ಹುಟ್ಟಿ ಕಾಶೀ ಖಂಡವನ್ನು ಆಳಿದರು. ಕೊನೆಯವನಾದ ಭಾರ್ಗಭೂಮಿಯು ಭೂಲೋಕದಲ್ಲಿ ಚಾತುರ್ವರ್ಣ್ಯದ ಪದ್ಧತಿಯನ್ನು ವ್ಯವಸ್ಥಿತಗೊಳಿಸಿದನು. ಇನ್ನು ಮುಂದೆ ಆಯುಕುಮಾರನ ಮಗನಾದ ರಜಿರಾಜನ ವಂಶವನ್ನು ವಿಸ್ತರಿಸುತ್ತೇನೆ. ಆಲಿಸು. ——o——

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಎಂಟನೇ ಅಧ್ಯಾಯ ಸಂಪೂರ್ಣ*

## ಗೆಲುವಿನ ಗುಟ್ಟು

ಅಧ್ಯಾಯ - ೯

ಊರ್ವಶೀ ಪುರೂರವರ ಮೊಮ್ಮಗನಾದ ರಜಿರಾಜನಿಗೆ ಐದುನೂರು ಜನ ಮಕ್ಕಳು. ಒಬ್ಬೊಬ್ಬರೂ ಮಹಾಬಲಿಗಳು, ಕದನಕಲಿಗಳು. ಅವರ ವೀರ್ಯ ವಿಕ್ರಮಗಳಿಗೆ ಸಾಟಿ ಇಲ್ಲ. ಹಿಂದೊಮ್ಮೆ ದೇವದಾನವರಲ್ಲಿ ಸಮರವು ಶುರುವಾಯಿತು. ಅವರನ್ನು ಕೊಲ್ಲಲು ಇವರು, ಇವರನ್ನು ಕೊಲ್ಲಲು ಅವರು, ಆತುರರಾಗಿದ್ದರು. ಇಬ್ಬರಿಗೂ ಕುತೂಹಲ 'ಯಾರು ಗೆಲ್ಲುವರೆಂದು !' ದೇವದಾನವರಿಬ್ಬರೂ ಧಾವಿಸಿ ಬೊಮ್ಮನ ಬಳಿಗೆ ಬಂದರು. ''ಗೆಲುವು ಯಾರಿಗೆ?'' ಎಂದರು. ಬ್ರಹ್ಮದೇವ ಹೇಳಿದನು. ''ರಜಿರಾಜನು ಯಾರ ಪಕ್ಷದಲ್ಲಿ ನಿಂತು ಹೋರಾಡುವನೋ ಅವರಿಗೆ ವಿಜಯ'' ಎಂದು.

ಚತುರ್ಮುಖನ ವಚನವನ್ನು ಕೇಳಿ ದೈತ್ಯರು ರಜಿಯ ಬಳಿಗೆ ಬಂದು ಯುದ್ಧದಲ್ಲಿ ಸಹಾಯ ಯಾಚನೆಯನ್ನು ಮಾಡಿದರು. ಅದಕ್ಕೆ ರಜಿರಾಜನು ಹೀಗೆ ಉತ್ತರಿಸಿದನು - ''ಯುದ್ಧದಲ್ಲಿ ಗೆದ್ದ ಬಳಿಕ ನೀನು ನನ್ನನ್ನು ದೈತ್ಯಕುಲದ ಇಂದ್ರನನ್ನಾಗಿ ಮಾಡಲು ಅನುಮತಿಸಿದರೆ ನಾನು ನಿಮ್ಮ ಪರವಾಗಿ ದೇವತೆಗಳ ಎದುರು ಹೋರಾಡುತ್ತೇನೆ.'' ಅದಕ್ಕೆ ಆ ದಾನವರು ಹೇಳಿದರು ''ನಮ್ಮಲ್ಲಿ ಮಾಡುವುದೊಂದು ಮಾತಾಡುವುದೊಂದು ಇಲ್ಲ. ನಮ್ಮ ಒಡೆಯನು ಪ್ರಹ್ಲಾದ. ಅವನೇ ನಮಗೆ ಇಂದ್ರ. ಅವನ ಆ ಅಧಿಕಾರಕ್ಕೆ ಈಗ ಚ್ಯುತಿ ಬಂದದ್ದರಿಂದಲೇ ನಾವು ಸುರಸೇನೆಯೊಡನೆ ಸೆಣಸಾಡುತ್ತಿದ್ದೇವೆ.'' ಹೀಗೆ ನುಡಿದು ಅಸುರರು ನಿರಾಶರಾಗಿ ತೆರಳಿದರು. ಅನಂತರ ದೇವತೆಗಳು ಬಂದು ರಜಿ ನೃಪನಿಗೆ ತಮಗೆ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಅವರಿಗೂ ರಜಿರಾಜನು ದೈತ್ಯರಿಗೆ ಹೇಳಿದ ಮಾತನ್ನೇ ತಿಳಿಸಿದ. ಗೆದ್ದ ಬಳಿಕ ರಜಿರಾಜನನ್ನೇ ಇಂದ್ರನನ್ನಾಗಿ ಮಾಡಲು ಸುರರೆಲ್ಲರೂ ಸಮ್ಮತಿ ಇತ್ತರು.

### ರಜಿಯು ಗೆದ್ದ, ಇಂದ್ರ ಅವನ ಪಾದಕ್ಕೆ ಬಿದ್ದ.

ದೇವಾಸುರ ಸಂಗ್ರಾಮದಲ್ಲಿ ಸುರಸೇನೆಯ ಮುಂಚೂಣಿಯಲ್ಲಿ ರಜಿ ನಿಂತುಕೊಂಡ. ಅವನ ಹರಿತವಾದ ಶಸ್ತ್ರ, ಹದನವಾದ ಅಸ್ತ್ರ, ಮತ್ತು ಅಪೂರ್ವವಾದ ಕದನ ಕೌಶಲ್ಯಗಳು ದೇವತಾ ಪಕ್ಷಕ್ಕೆ ಗೆಲುವನ್ನು ತಂದುಕೊಟ್ಟವು. ದೈತ್ಯಬಲವೆಲ್ಲವೂ ಈ ಪೊಡವಿಪತಿಯ ವೀರವಿಕ್ರಮದೆದುರು ಧೂಳೀಪಟ ವಾಯಿತು. ವೈರಿಗಳನ್ನೆಲ್ಲ ಗೆದ್ದು ವಿಜಯಶಾಲಿಯಾದ ದೇವೇಂದ್ರನು ರಜಿರಾಜ ಚರಣಗಳಿಗೆ ತನ್ನ ಹಣೆ ಚಾಚಿದನು. ''ಮಹಾರಾಜ, ನೀನು ನಮ್ಮನ್ನು ಈ ಸಂಕಟದಿಂದ ಪಾರುಮಾಡಿದೆ. ನಾವು ಇಂದು ಉಣ್ಣುವ ಅನ್ನ ನಿನ್ನದು. ನೀನು ನಮಗೆ ತಂದೆ ಇದ್ದಂತೆ. ಮೂರು ಲೋಕದಲ್ಲಿ ನಿನ್ನಂಥ ಧೀರ ಪುರುಷನನ್ನು ನಾನು ಕಾಣಲಿಲ್ಲ. ಲೋಕತ್ರಯದ ಇಂದ್ರನಾದ ನಾನು ಇಂದಿನಿಂದ ನಿನ್ನ ಮಗನೆಂದು ಬಗೆಯಬೇಕು.'' ಸ್ವರ್ಗಪತಿಯ ಈ ಮಾತನ್ನು ಕೇಳಿ ರಜಿಯು ನಕ್ಕು ನುಡಿದನು ''ಹಾಗೇ ಆಗಲಿ. ವೈರಿಗಳು ಆಡಿದ ವಿನಯಪೂರ್ವಕವಾದ ಮಾತುಗಳನ್ನೂ ಅವರ ವಂದನೆಯನ್ನೂ ನಿಷೇಧಿಸಲಿಕ್ಕೆ ಬರುವುದಿಲ್ಲ. ನೀವಂತೂ ನಮ್ಮವರು.

ದೇವತೆಗಳು. ದೊಡ್ಡವರು ನೀವು ಹೇಳಿದ ಮಾತು ನನಗೆ ಮಾನ್ಯವಿದೆ.'' ಎಂದು ಅಲ್ಲಿಂದ ಸುರಶ್ರೇಷ್ಠರ ನಿರೋಪ ತೆಗೆದುಕೊಂಡು ಭೂತಳಕ್ಕೆ ಮರಳಿದನು. ಮುಂದೆ ದೇವೇಂದ್ರನು ಸ್ವರ್ಗಸಿಂಹಾಸವನ್ನು ಏರಿದನು.

## ''ಮಂಗಗಳಿಗೆ ಮದ್ಯ ಕುಡಿಸಿ 'ಮೋಜು' ಗೈದ ನಾರದ''

ಕೆಲವು ವರ್ಷಗಳ ನಂತರ ವಾರ್ಧಕ್ಯದಿಂದ ರಾಜಿರಾಜನು ಮರಣಹೊಂದಿದನು. ಮುಂದೆ ಒಂದು ದಿನ ನಾರದರು ಅಲ್ಲಿಗೆ ಬಂದು ರಜಿರಾಜನ ಐನೂರು ಜನ ಮಕ್ಕಳ ಮುಂದೆ ಸ್ವರ್ಗದಲ್ಲಿ ನಡೆದ ಸಮಾಚಾರವನ್ನು ತಿಳಿಸಿದರು. ಮತ್ತು ''ನ್ಯಾಯವಾಗಿ ಸ್ವರ್ಗಸಾಮ್ರಾಜ್ಯವು ನಿಮ್ಮ ತಂದೆಗೇ ಬರಬೇಕಾದದ್ದು. ನಿಜವಾದ ಇಂದ್ರಪದವಿಗೆ ಅವನೇ ಅಧಿಕಾರಿ. ಕರಾರಿನಂತೆ ದೇವೇಂದ್ರನು ಅವನಿಗೆ ಇಂದ್ರ ಸಿಂಹಾಸನವನ್ನು ಕೊಡದೇ ಬರೇ 'ನಾನು ನಿನ್ನ ಮಗ' ಎಂದು ಉಪಚಾರದ ಮಾತನ್ನು ಹೇಳಿ ಮೋರೆಯ ಮೇಲೆ ಕೈ ಎಳೆದು ಕಳಿಸಿದ್ದಾನೆ. ಮೊದಲಿನ ಷರತ್ತಿನಂತೆ ನೀವು ಹೋಗಿ ಇಂದ್ರ ರಾಜ್ಯವನ್ನು ಕೇಳಿರಿ'' ಎಂದು ಚೋದನೆ ಇತ್ತರು. ಮೊದಲಿನಿಂದಲೂ ಸ್ವರ್ಗ ಸಾಮ್ರಾಜ್ಯದ ಕನಸನ್ನು ಕಾಣುವ ರಜಿಯ ಐನೂರು ಜನ ಮಕ್ಕಳು ನಾರದರ ಪ್ರೇರಣೆಯಿಂದ ದಿಗ್ಗನೆ ಎದ್ದು ಸ್ವರ್ಗಕ್ಕೆ ನಡೆದರು. ದೇವೇಂದ್ರನಿಗೆ ಅವರ ಮೊದಲನೆ ಪ್ರಶ್ನೆ. ''ನೀನು ನಮ್ಮ ತಂದೆಗೆ ಮಗನೆಂದು ಒಪ್ಪಿಕೊಂಡಿರುವಿಯಲ್ಲವೇ !'' ಅದಕ್ಕೆ ಆ ದೇವರಾಜನು ಒಪ್ಪಿದಕೂಡಲೇ ರಜಿಕುಮಾರರ ಮಂದಿನ ಬೇಡಿಕೆ ಸಿದ್ಧವಿದ್ದಿತು. ''ನಾವು ನೀವು ಸಹೋದರರೆಂದಂತಾಯಿತು. ಇಷ್ಟುದಿನ ನೀನು ಸ್ವರ್ಗರಾಜ್ಯವನ್ನು ಆಳಿರುವಿ. ನಿನ್ನ ಪಾಳಿ ಮುಟ್ಟಿದೆ. ಇನ್ನು ಮೇಲೆ ನಮ್ಮ ಪಾಳಿ, ಈ ಸ್ವರ್ಗ ರಾಜ್ಯವನ್ನು ಒಳ್ಳೇ ಮಾತಿನಿಂದ ನಮಗೆ ಬಿಟ್ಟುಕೊಡು.''

ಇದಕ್ಕೆ ಶಚೀಪತಿಯು ಸಮ್ಮತಿಸದಿದ್ದಾಗ ರಜಿರಾಜನ ಆ ಐನೂರು ಮಕ್ಕಳು ಸ್ವರ್ಗಕ್ಕೆ ಲಗ್ಗೆ ಇಟ್ಟರು. ತಂದೆಯಂತೆ ಆ ರಾಜಕುಮಾರರೆಲ್ಲರೂ ಶೌರ್ಯ ಮೇರುಗಳಾಗಿದ್ದರು. ಅವರ ದಾರುಣವಾದ ದಾಳಿಗೆ ದೇವಸೇನೆಯು ತತ್ತರಿಸಿ ಸೋತು ಚದುರಿತು. ರಜಿಯ ತನುಜರು ತಮ್ಮ ಪ್ರತಾಪದಿಂದ ಅಮರಾವತಿಯನ್ನು ಆಕ್ರಮಿಸಿ ಸ್ವರ್ಗ ಸಾಮ್ರಾಜ್ಯವನ್ನು ಆಳತೊಡಗಿದರು.

## ಕಂಗಾಲಾದ ಇಂದ್ರ ಗುರುವಿಗೆ ಮೊರೆಹೋದ

ರಜಿಪುತ್ರರ ಅಂದಿನ ದಾಳಿಧೂಳಿಯಲ್ಲಿ ದೇವೇಂದ್ರನು ತಲೆ ಮರೆಸಿಕೊಂಡು ಎಲ್ಲೆಲ್ಲಿಯೋ ಅಲೆಯಬೇಕಾಯಿತು. ಹೀಗೆ ಎಷ್ಟೋ ದಿನಗಳು ಉರುಳಿದ ಬಳಿಕ ಆ ಸುರರಾಜನು ಬೃಹಸ್ಪತ್ಯಾಚಾರ್ಯರು ಇದ್ದಲ್ಲಿ ಗುಟ್ಟಾಗಿ ಬಂದು ಮೆಲ್ಲನೆ ನುಡಿದನು ''ಗುರುಗಳೇ, ನನ್ನ ಸಲುವಾಗಿ ತಾವು ಒಂದು ಬೋರೆಕಾಯಿಯಷ್ಟಾದರೂ ಪುರೋಡಾಶವನ್ನು ಆಹುತಿ ಕೊಡಬಲ್ಲಿರಾ ? ಈಗ ನನಗೆ ಮೂರು ಲೋಕದಲ್ಲಿ ಯಾರು ಯಜ್ಞದಲ್ಲಿ ಆಹುತಿಯನ್ನು ಕೊಡುವುದಿಲ್ಲ. ತಾವಾದರೂ ನನ್ನ ಮೇಲೆ ಕೃಪೆದೋರಬೇಕು.'' ಇಂದ್ರನ ಈ ಕಂಗಾಲ ಪರಿಸ್ಥಿತಿಯನ್ನು ಕಂಡು ಆ ಸುರಗುರುವಿಗೆ

ಕನಿಕರವೆನಿಸಿತು. ''ಇಂದ್ರ ನೀನು ಇಷ್ಟು ದಿನ ನನ್ನ ಬಳಿಗೆ ಏಕೆ ಬರಲಿಲ್ಲ ! ನಾನು ನಿನಗಾಗಿ ಏನು ಮಾಡೇನು ಏನು ಮಾಡಲಿಕ್ಕಿಲ್ಲ ! ಈ ಮೊದಲೇ ನಿನ್ನ ಈ ದುರವಸ್ಥೆಯನ್ನು ನನಗೆ ಬಂದು ತಿಳಿಸಿದ್ದರೆ ಚೆನ್ನಾಗಿತ್ತು. ಇರಲಿ ಈಗಾದರೇನಾಯಿತು. ನನ್ನ ಕೈ ಚಳಕವನ್ನು ನೋಡು. ಇನ್ನು ಕೆಲವೇ ದಿನಗಳಲ್ಲಿ ನಿನ್ನನ್ನು ಸ್ವರ್ಗದ ಸಿಂಹಾಸನದ ಮೇಲೆ ಕೂಡಿಸುತ್ತೇನೆ.'' ಎಂದು ಆಶ್ವಾಸನೆಯನ್ನು ಇತ್ತರು. ಅಂದಿನಿಂದ ಆ ದೇವ ಗುರು ರಜಿಯ ಮಕ್ಕಳ ಬುದ್ಧಿ ಮೋಹಕ್ಕಾಗಿ ಆಭಿಚಾರಿಕ ಕೃತ್ಯವನ್ನು ಪ್ರಾರಂಭಿಸಿದರು. ಇಂದ್ರನು ತೇಜವು ಬೆಳೆಯಬೇಕೆಂದು ಹೋಮವನ್ನು ಮಾಡತೊಡಗಿದರು.

## ಧರ್ಮ ಬಿಟ್ಟರು, ಬನ್ನ ಭಟ್ಟರು

ಸುರಾಚಾರ್ಯನ ಹಂಚಿಕೆ ಹುಸಿ ಹೋಗಲಿಲ್ಲ. ರಜಿಪುತ್ರರ ಬುದ್ಧಿಗೆ ಮೋಹದ ಮಂಕು ಕವಿಯಿತು. ಸ್ವರ್ಗದ ಸಿರಿ ಸೌಭಾಗ್ಯಗಳ ಮದ ತಲೆಗೆ ಏರಿದ ಅವರಿಗೆ ಭೋಗದ ಆಶೆಯು ಬಲಿಯಿತು. ಧರ್ಮ ಬುದ್ಧಿ ಅಳಿಯಿತು. ದೇವ ಬ್ರಾಹ್ಮಣರಲ್ಲಿ ದ್ವೇಷ ಬೆಳೆಯಿತು. ಭಕ್ತಿ ವೈರಾಗ್ಯವನ್ನು ಹೇಳುವ ವೇದ ಶಾಸ್ತ್ರಗಳಲ್ಲಿ ಅವರಿಗೆ ದ್ವೇಷ ಬುದ್ಧಿ ಹುಟ್ಟಿತು. ಭೋಗ ಪ್ರಧಾನವಾದ ನಾಸ್ತಿಕ ಮತಕ್ಕೆ ಅವರೆಲ್ಲರೂ ತಿರುಗಿದರು. ಹೀಗೆ ವೇದದ್ವೇಷ ಧರ್ಮದ್ರೋಹಗಳಿಂದ ಅವರ ಶಕ್ತಿ ಕುಗ್ಗಿತು. ಆಗ ದೇವೇಂದ್ರನು ಬಂದು ಅವರನ್ನು ಸುಲಭವಾಗಿ ಸಂಹರಿಸಿದನು. ಸುರಪುರದ ಪುರೋಹಿತರಾದ ವಾಚಸ್ಪತಿಗಳ ಹೋಮದ ಪ್ರಭಾವದಿಂದ ದೇವೇಂದ್ರನಲ್ಲಿ ಅದ್ಭುತವಾದ ಶಕ್ತಿ ತೇಜಸ್ಸುಗಳು ಮಿಂಚಾಡುತ್ತಿದ್ದವು.

ಅನಂತರ ಶಚೀಪತಿಯು ಸಂತೋಷದಿಂದ ಸ್ವರ್ಗ ಸಿಂಹಾಸನವನ್ನು ಏರಿದನು. ದೇವೇಂದ್ರನು ತನ್ನ ಕಳೆದ ಸಿಂಹಾಸನವನ್ನು ಮರಳಿ ಪಡೆದ ಈ ಕೌತುಕದ ಕಥೆಯನ್ನು ಕೇಳಿದವರು ಎಂದೂ ಸ್ಥಾನ ಮಾನಗಳನ್ನು ಕಳೆದುಕೊಳ್ಳುವುದಿಲ್ಲ. ದುರ್ಬುದ್ಧಿಯು ಅವರ ಹೃದಯದಲ್ಲಿ ಎಂದೂ ಹಣಿಕೆ ಹಾಕುವುದಿಲ್ಲ. ರಜಿ ಮಹಾರಾಜನ ಮತ್ತೊಬ್ಬ ಸಹೋದರನಾದ ರಂಭನಿಗೆ ಮಕ್ಕಳೇ ಆಗಲಿಲ್ಲ. ಮಗದೊಬ್ಬ ಸಹೋದರ ಕ್ಷತ್ರವೃದ್ಧನಿಗೆ ಪ್ರತಿಕ್ಷತ್ರ, ಅವನಿಂದ ಮುಂದೆ ಸಂಜಯ, ಜಯ, ವಿಜಯ, ಕೃತ, ಹರ್ಯಧನ, ಸಹದೇವ, ಅದೀನ, ಜಯತ್ಸೇನ, ಸಂಸ್ಕೃತಿ, ಕ್ಷತ್ರಧರ್ಮ, ಹೀಗೆ ಕ್ಷತ್ರವೃದ್ಧನ ವಂಶವು ಬೆಳೆಯಿತು. ಇನ್ನೂ ಊರ್ವಶಿಯ ಮತ್ತೊಬ್ಬ ಮೊಮ್ಮಗನಾದ ನಹುಷನ ವಂಶವನ್ನು ನಿರೂಪಿಸುತ್ತೇನೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಒಂಬತ್ತನೆಯ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೧೦

**ಪರಾಶರ -** ನಹುಷ ಮಹಾರಾಜನಿಗೆ ಯತಿ, ಯಯಾತಿ, ಸಂಯಾತಿ, ಆಯಾತಿ, ವಿಯಾತಿ, ಕೃತಿ ಎಂದು ಆರುಜನ ಮಕ್ಕಳಿದ್ದರು. ಅವರೆಲ್ಲರೂ ವೀರರು ಎಲ್ಲರೂ ಧೀರರು. ಅವರಲ್ಲಿ ಹಿರಿಯನಾದ ಯತಿಯು ಹೆಸರಿಗೆ ತಕ್ಕಂತೆ ನಿಜವಾಗಿಯೂ ಯತಿಯಂತೆ ವಿರಕ್ತನಾದ. ರಾಜ್ಯ ಐಶ್ವರ್ಯ ಯಾವುದನ್ನೂ ಬಯಸಲಿಲ್ಲ. ಯಯಾತಿಯು ಭೂಲೋಕ ಸಾರ್ವಭೌಮನಾದ. ಶುಕ್ರಾಚಾರ್ಯರ ಮಗಳಾದ ದೇವಯಾನಿಯನ್ನೂ ವೃಷ ಪರ್ವನ ಮಗಳಾದ ಶರ್ಮಿಷ್ಠೆಯನ್ನೂ ಮದುವೆಯಾದ. ದೇವಯಾನಿಯಿಂದ ಅವನಿಗೆ ಯದು, ತುರ್ವಸು ಎಂಬ ಇಬ್ಬರು ಮಕ್ಕಳು ಜನಿಸಿದರು. ಶರ್ಮಿಷ್ಠೆಯಿಂದ ದ್ರುಹ್ಯು, ಅನು,ಪೂರು, ಎಂದು ಮೂವರು ಮಕ್ಕಳಾದರು.

### ಮುಪ್ಪು, ಹರೆಯನ್ನು ಹುಡುಕ ಹೊರಟಾಗ

ಶುಕ್ರಾಚಾರ್ಯರ ಶಾಪದಿಂದ ಯಯಾತಿಗೆ ನಡುಹರೆಯದಲ್ಲಿಯೇ ಮುಪ್ಪುಬಂದಿತು. ಪ್ರಸನ್ನರಾದ ಶುಕ್ರರು ನಿನ್ನ ಮುಪ್ಪನ್ನು ಯಾರದಾದರೂ ಯೌವನದೊಂದಿಗೆ ಅದಲು ಬದಲು ಮಾಡಬಹುದು ಎಂದು ಸೂಚಿಸಿದರು. ಆಗ ಯಯಾತಿಯು ತನ್ನ ಹಿರಿಯ ಮಗನಾದ ಯದುವಿನ ಬಳಿಗೆ ಬಂದು ಕೇಳಿದನು- ''ವತ್ಸ! ನಿನ್ನ ಅಜ್ಜನ ಶಾಪದಿಂದ ನನಗೆ ಆಕಾಲದಲ್ಲಿ ಈ ಮುಪ್ಪು ಅಡರಿದೆ. ಅದನ್ನು ಈಗ ನೀನು ತೆಗೆದುಕೊಂಡು ನಿನ್ನ ತಾರುಣ್ಯವನ್ನು ನನಗೆ ಕೊಡು. ಶುಕ್ರಾಚಾರ್ಯರ ಅನುಗ್ರಹದಿಂದ ನಿನ್ನ ಯೌವನವನ್ನು ನನಗೆ ಸುಲಭವಾಗಿ ವರ್ಗಾಯಿಸಬಹುದು. ನನಗಿನ್ನೂ ವಿಷಯಗಳ ಆಶೆಯು ತಣಿದಿಲ್ಲ. ಆದ್ದರಿಂದ ನಿನ್ನ ಪ್ರಾಯವನ್ನು ಪಡೆದು ಒಂದು ಸಾವಿರ ವರ್ಷ ವಿಷಯಗಳನ್ನು ಭೋಗಿಸಬೇಕೆಂದು ಮಾಡಿದ್ದೇನೆ. ಇದಕ್ಕೆ ನೀನು 'ಇಲ್ಲ' ಎನ್ನ ಕೂಡದು''. ತಂದೆಯ ಈ ಬೇಡಿಕೆಗೆ ಯದುಕುಮಾರನು ಒಪ್ಪಲಿಲ್ಲ. ಯೌವನವನ್ನು ಕೊಡಲಿಲ್ಲ. ಆಗ ತಂದೆ ಶಪಿಸಿದನು. ''ನಿನ್ನ ಸಂತತಿಗೆ ಮುಂದೆ ರಾಜ್ಯದ ಹಕ್ಕು ಇಲ್ಲದಂತಾಗಲಿ'' ಎಂದು. ಅನಂತರ ಯಯಾತಿ ಮಹಾರಾಜನು ತನ್ನ ಉಳಿದ ಮಕ್ಕಳಾದ ತುರ್ವಸು, ದ್ರುಹ್ಯ ಅನು ಮೂವರನ್ನೂ ತನ್ನ ಮುಪ್ಪನ್ನು ಸ್ವೀಕರಿಸಿ ಅವರ ತಾರುಣ್ಯವನ್ನು ತನಗೆ ಅರ್ಪಿಸಲು ಕೇಳಿಕೊಂಡನು. ಅವರಾರೂ ಒಪ್ಪದಿದ್ದಾಗ ಎಲ್ಲರ ಉಡಿಯಲ್ಲಿಯೂ ಓಡಿ ಶಾಪ ಹಾಕಿದನು. ಅನಂತರ ಶರ್ಮಿಷ್ಠೆಯ ಹೊಟ್ಟೆಯಲ್ಲಿ ಹುಟ್ಟಿದ ಕೊನೆಯ ಮಗು ಪೂರುವನ್ನು ಕೇಳಿದನು. ಪಿತೃ ಭಕ್ತನಾದ ಆ ಪೂರುವು ಭಕ್ತಿಯಿಂದ ಬಾಗಿ ''ಇದೊಂದು ಹಿರಿಯರು ನನ್ನ ಮೇಲೆ ಮಾಡಿದ ದೊಡ್ಡ ಅನುಗ್ರಹ'' ಎಂದು ವಂದಿಸಿ ತನ್ನ ತಾರುಣ್ಯವನ್ನು ತಂದೆಗೆ ಇತ್ತನು. ಅವನು ಮುಪ್ಪನ್ನು ತಾನು ಅಪ್ಪಿ ಜರಠನಾಗಿ ನಿಂತನು.

### ತಂದೆಯ ಭೋಗ, ಮಗನ ತ್ಯಾಗ

ಯಯಾತಿ ಮಹಾರಾಜನು ಮತ್ತೆ ಯುವಕನಾಗಿ ಧರ್ಮಕ್ಕೆ ವಿರೋಧವಾಗದಂತೆ ಯಥೇಚ್ಛವಾಗಿ ವಿಷಯಗಳನ್ನು ಭೋಗಮಾಡಿದನು. ಅವನ ಉತ್ಸಾಹ ಇಮ್ಮಡಿಸಿತ್ತು.

ಶಕ್ತಿ ಮುಮ್ಮುಡಿಸಿತ್ತು. ವಿಷಯ ವಾಸನೆ ನೂರ್ಮಡಿಯಾಗಿ ನವೋನವ ವಿಲಾಸಗಳ ರುಚಿ ನೋಡುತ್ತಿತ್ತು. ಪ್ರಜೆಗಳನ್ನೆಲ್ಲ ಚೆನ್ನಾಗಿ ಪಾಲನೆ ಮಾಡಿ ಅವರಿಗೆ ಎಲ್ಲ ತರಹದ ಸುಖ ಸಮೃದ್ಧಿಗಳನ್ನು ಒದಗಿಸಿದನು.

## ಹರೆಯ ತಿರುಗು, ಹೆಂಡತಿಯ ಮರಗು

ಯಯಾತಿಗೇನೋ ಮಗನ ಪುಣ್ಯದಿಂದ ಯೌವನವು ಮರುಕಳಿಸಿತ್ತು. ಆದರೆ ಅವನ ಹೊಸ ಹರೆಯದ ಸಂಭ್ರಮಕ್ಕೆ ದೇವಯಾನಿಯಿಂದ ತೃಪ್ತಿಯೆನಿಸಲಿಲ್ಲ. ಅವಳಿಗೆ ಯಾರೂ ಯೌವನ ದಾನಮಾಡಿರಲಿಲ್ಲ. ಅದರಿಂದ ಅವಳು ಕೆಲವೇ ದಿನಗಳಲ್ಲಿ ಮುದುಕಿಯಾದಳು. ಆಗ ಹೊಸ ಹೊಸ ಹರೆಯದ ಹೊಂಗನಸುಗಳನ್ನು ಹೃದಯದಲ್ಲಿ ಹೆಣೆದು, ಕೂಡಲೇ ಕೃತಿಯಲ್ಲಿ ಇಳಿಸಿ ತೃಪ್ತಿಪಡುವ ಯಯಾತಿಯು 'ವಿಶ್ವಾಚಿ' ಎಂಬ ಅಪ್ಸರೆಯ ಸಹವಾಸವನ್ನು ಮಾಡಿದನು. ಆ ಗಂಧರ್ವ ಸುಂದರಿಯೊಂದಿಗೆ ಅನುದಿನವೂ ಹೊಸ ಹೊಸ ರಸಕೇಲಿಗಾಗಿ ಅವನ ಹೃದಯವು ತುಡಿಯುತ್ತಿತ್ತು. ದಿನದಿನವೂ ಭೋಗಮಾಡಿದಂತೆ ವಿಷಯಗಳೆಲ್ಲವೂ ರಾಗರಮಣೀಯವಾಗಿಯೇ ಅವನಿಗೆ ತೋರತೊಡಗಿದವು. ಕೊನೆಗೆ ಒಂದು ದಿನ ಅವನಿಗೆ ವೈರಾಗ್ಯವು ಹುಟ್ಟಿತು. ಅವನ ಬಾಯಿಂದ ತಾನಾಗಿಯೇ ಈ ಉದ್ಗಾರವು ಹೊರಬಿದ್ದಿತು.

## ಯಯಾತಿಯ ಅನುಭವದ ಉದ್ಗಾರ

**"ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೆ ॥೧॥**

ವಿಷಯಗಳನ್ನು ಎಷ್ಟು ಭೋಗಮಾಡಿದರೂ ತೃಪ್ತಿಯು ಆಗುವುದಿಲ್ಲ. ತುಪ್ಪ ಸುರುವಿದ ಬೆಂಕಿಯಂತೆ, ಭೋಗಿಸಿದಂತೆ ಭೋಗದ ಆಸೆಯು ಬೆಳೆಯುತ್ತಲೇ ಹೋಗುತ್ತದೆ.

**ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ॥**
**ಏಕಸ್ಯಾಪಿ ನ ಪರ್ಯಾಪ್ತಂ ತಸ್ಮಾತ್ತೃಷ್ಣಾಂ ಪರಿತ್ಯಜೇತ್ ॥ ॥೨॥**

ಭೂಮಂಡಲದಲ್ಲಿರುವ ಅನ್ನ, ಹೊನ್ನು, ಹೆಣ್ಣು, ಮಣ್ಣು, ಹಸು ಎಲ್ಲವನ್ನೂ ಒಬ್ಬನಿಗೆ ಕೊಟ್ಟರೂ ಸಾಕು ಎನ್ನುವುದಿಲ್ಲ ಮಾನವನ ಮನಸ್ಸು. ಆದುದರಿಂದ ವಿಷಯ ವಾಸನೆಯನ್ನು ಪೂರ್ಣವಾಗಿಯೇ ಬಿಟ್ಟು ಬಿಡಬೇಕು.

**ಯದಾ ನ ಕುರುತೆ ಭಾವಂ ಸರ್ವಭೂತೇಷು ಘಾತಕಂ ।**
**ಸಮದೃಷ್ಟೇಸ್ತದಾ ಪುಂಸಃ ಸರ್ವಾಸ್ಸುಖಮಯಾ ದಿಶಃ ॥ ॥೩॥**

ಯಾವ ಜೀವಿಗೂ ದ್ರೋಹ ಬಗೆಯದೇ ಎಲ್ಲವನ್ನೂ ಸಮದೃಷ್ಟಿಯಿಂದ ಕಾಣುವುದೇ ಸುಖದ ಗುಟ್ಟು. ಸರ್ವರಲ್ಲಿರುವ ದೇವರನ್ನು ಅರಿತು ಭಜಿಸುವವನಿಗಂತೂ ಎಲ್ಲ ದಿಕ್ಕುಗಳೂ ಸುಖಮಯವೇ

**ಯಾ ದುಸ್ತ್ಯಜಾ ದುರ್ಮತಿಭಿಃ ಯಾ ನ ಜೀರ್ಯತಿ ಜೀರ್ಯತಃ ।**
**ತಾಂ ತೃಷ್ಣಾಂ ಸಂತ್ಯಜೇತ್ ಪ್ರಾಜ್ಞಃ ಸುಖೇನೈವಾಭಿ ಪೂರ್ಯತೆ ॥ ॥೪॥**

ಆದರೆ ಈ ವಿಷಯದ ಆಸೆಯನ್ನು ಮತಿಗೆಟ್ಟವರೆಂದಿಗೂ ಬಿಡಲಾರರು. ಮನುಷ್ಯನು ಮುದುಕನಾದರೂ ಅವನ ವಿಷಯ ಸುಖದ ಹಸಿವು ಮಾತ್ರ ಹರೆಯದ ಹೆಗಲೇರಿ ಹೊಸ ಹೊಸ ಭೋಗಗಳಿಗೆ ಹಾತೊರೆಯುತ್ತದೆ. ಆದರೆ ಒಮ್ಮೆ ವಿವೇಕಿಯಾದ ಮನುಷ್ಯ ಆ ಭೋಗದ ಹಂಬಲವನ್ನು ಬಿಟ್ಟು ಬಿಟ್ಟರೆ ಅವನಲ್ಲಿ ಸಂತತವೂ ಸುಖ ತುಳುಕಾಡುತ್ತದೆ.

**ಜೀರ್ಯಂತಿ ಜೀರ್ಯತಃ ಕೇಶಾಃ ದಂತಾ ಜೀರ್ಯಂತಿ ಜೀರ್ಯತಃ ।**
**ಧನಾಶಾ ಜೀವಿತಾಶಾ ಚ ಜೀರ್ಯತೋಽಪಿ ನ ಜೀರ್ಯತಃ ॥ ॥೫॥**

ಮಾನವನು ಮುದುಕನಾದಂತೆ ಕೂದಲು ಬೆಳ್ಳಗಾಗಿ ಉದುರತೊಡಗುತ್ತವೆ. ಹಲ್ಲು ಹಳತು ಹುಳುಕು ಬಿದ್ದು ಹೋಗುತ್ತವೆ. ಆದರೆ ಮನುಷ್ಯನಿಗೆ ಎಷ್ಟು ಮುದುಕನಾದರೂ ದುಡ್ಡಿನ ಆಶೆ ಕಡಿಮೆಯಾಗುವುದಿಲ್ಲ. ಬದುಕುವ ಆಶೆ ಅಳಿಯುವುದಿಲ್ಲ.

**"ಪೂರ್ಣಂ ವರ್ಷ ಸಹಸ್ರಂ ಮೇ ವಿಷಯಾಸಕ್ತಚೇತಸಃ ॥**
**ತಥಾಪ್ಯನುದಿನಂ ತೃಷ್ಣಾ ಮಮ ತೇಷೂಪಜಾಯತೇ ॥ ॥೬॥**

ವಿಷಯಗಳಲ್ಲಿ ಆಸಕ್ತನಾಗಿ ರಾಗ ಭೋಗಗಳನ್ನು ನಾನೀಗ ಸಾವಿರ ವರ್ಷಗಳಿಂದ ಅನುಭವಿಸುತ್ತಲಿದ್ದೇನೆ. ಇಷ್ಟಾದರೂ ವಿಷಯ ಭೋಗದ ನನ್ನ ಆಸೆ ಕುಗ್ಗದೇ ತಗ್ಗದೆ ದಿನದಿನವೂ ಬೆಳೆಯುತ್ತಲೇ ಇದೆ.

**'ತಸ್ಮಾದೇತಾಂ ಪರಿತ್ಯಜ್ಯ ಬ್ರಹ್ಮಣ್ಯಾಧಾಯ ಮಾನಸಂ ।**
**ನಿರ್ದ್ವಂದ್ವೋ ನಿರ್ಮಮೋ ಭೂತ್ವಾ ಚರಿಷ್ಯಾಮಿ ಮೃಗೈಸ್ಸಹ ॥ ॥೭॥**

ಆದ್ದರಿಂದ ಇನ್ನು ಈ ಭೋಗದ ಆಸೆಯನ್ನು ಬಿಟ್ಟು ಮಮತೆಯನ್ನು ತೊರೆದು ದ್ವಂದ್ವಾತೀತನಾಗಿ ದೇವರಲ್ಲಿ ಮನಸ್ಸನ್ನು ಇಟ್ಟು ಧ್ಯಾನಮಾಡುವೆ. ಅರಣ್ಯಕ್ಕೆ ಹೋಗಿ ಚಿಗರೆಗಳ ಜೊತೆಗೆ ಮುನಿವೃತ್ತಿಯಿಂದ ಇದ್ದು ತಪಂಗೈದು ಭಗವದಾರಾಧನೆಯನ್ನು ಮಾಡುವೆ.''

ಎಂದು ನಿರ್ಧರಿಸಿದನು. ಅದರಂತೆ ತನ್ನ ನೆಚ್ಚಿನ ಮಗನಾದ ಪೂರುವನ್ನು ಕರೆದು ಅವನ ತಾರುಣ್ಯವನ್ನು ಅವನಿಗಿತ್ತು ತನ್ನ ಮುಪ್ಪನ್ನು ತಾನು ತೆಗೆದುಕೊಂಡನು. ಮತ್ತು ಅವನನ್ನೇ ತನ್ನ ಅನಂತರ ಸಿಂಹಾಸನದಲ್ಲಿ ಕೂಡಿಸಿ ತಾನು ತಪಸ್ಸಿಗಾಗಿ ಅರಣ್ಯಕ್ಕೆ ನಡೆದನು. ಉಳಿದ ಮಕ್ಕಳನ್ನೆಲ್ಲ ಮಾಂಡಲಿಕ ರಾಜರನ್ನಾಗಿ ಮಾಡಿದನು. ಅಗ್ನೇಯ ದಿಕ್ಕಿನ ನಾಡಿಗೆಲ್ಲ ತುರ್ವಸುವನ್ನು, ಪಡುವಲ ನಾಡಿಗೆ ದ್ರುಹ್ಯುವನ್ನು, ದಕ್ಷಿಣ ದಿಕ್ಕಿನ ರಾಜ್ಯಕ್ಕೆ ಯದುವನ್ನು, ಉತ್ತರಾಪಥಕ್ಕೆ ಅನುವನ್ನು ಅಧಿಪತಿಗಳನ್ನಾಗಿ ನಿಯಮಿಸಿದನು. ಎಲ್ಲರ ಮೇಲೆ ಸರ್ವಸಾಮ್ರಾಜ್ಯದ ಸಾರ್ವಭೌಮನನ್ನಾಗಿ ಪೂರುವಿಗೆ ಪಟ್ಟಾಭಿಷೇಕಮಾಡಿ ತಪೋನುಷ್ಠಾನಕ್ಕಾಗಿ ಕಾಡಿಗೆ ತೆರಳಿದನು.

—o—

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಹತ್ತನೆಯ ಅಧ್ಯಾಯ ಸಂಪೂರ್ಣ*

# ಕೃಷ್ಣ ಹುಟ್ಟಿದ ಕುಲಕ್ಕೆ ನಮಸ್ಕಾರ

ಅಧ್ಯಾಯ - ೧೧

**ಪರಾಶರ** - ಯಯಾತಿ ಮಹಾರಾಜನ ಹಿರಿಯಮಗ ಯದುವಿನ ಕುಲವು ಕುಡಿಯೊಡೆದು ಬೆಳೆದ ಕ್ರಮವನ್ನು ನಿನಗೆ ಕೇಳಿಸುತ್ತೇನೆ. ಇದೇ ಯದುವಿನ ಕುಲದಲ್ಲಿ ಸಾವು ನೋವುಗಳಿಲ್ಲದ ಸಾಕ್ಷಾತ್ ಶ್ರೀ ವಿಷ್ಣು ಯಾರಿಗೂ ಅರಿಯಲು ಬಾರದ ಮಹಾಮಹಿಮೆಯಿಂದ ಪೂರ್ಣ ರೂಪನಾಗಿ ಅವತಾರ ಮಾಡಿದನು. ಎಲ್ಲ ಲೋಕಗಳಲ್ಲಿಯೂ ಇರುವ ಅ ಪೂರ್ಣಾವತಾರಿ ಪ್ರಭುವನ್ನು ಮಾನವರು ಆರಾಧಿಸುತ್ತಾರೆ. ಸಿದ್ಧರು ಪೂಜಿಸುತ್ತಾರೆ. ಗಂಧರ್ವರು ಗಾನ ಮಾಡುತ್ತಾರೆ. ಯಕ್ಷರಾಕ್ಷಸರು ಆಶ್ರಯಿಸುತ್ತಾರೆ. ಗುಹ್ಯಕರು ಅರ್ಚಿಸುತ್ತಾರೆ. ಕಿಂಪುರುಷರು ಸುತ್ತಿಸುತ್ತಾರೆ. ಅಪ್ಸರೆಯರು ಹಾಡಿ ಕುಣಿಯುತ್ತಾರೆ. ಹಾವುಗಳು ಹೊಗಳುತ್ತವೆ. ಹಕ್ಕಿಗಳು ಪಾಡುತ್ತವೆ. ದೇವದಾನವರು ಸೇವಿಸುತ್ತಾರೆ. ಆದಿತ್ಯರು ಸ್ತುತಿಸುತ್ತಾರೆ. ರುದ್ರರು ಆರಾಧಿಸುತ್ತಾರೆ. ವಸುಗಳು ಭಜಿಸುತ್ತಾರೆ. ಅಶ್ವಿನಿಗಳು ಉಪಾಸಿಸುತ್ತಾರೆ. ಮರುದ್ಗಣಗಳು ಮನ್ನಿಸುತ್ತಾರೆ. ಅದರಿಂದಲೇ ಅವರಿಗೆಲ್ಲ ಇಷ್ಟಾರ್ಥ ಸಿದ್ಧಿ. ಮೋಕ್ಷವನ್ನು ಬಯಸುವವರೂ, ಧರ್ಮವನ್ನು ನಂಬಿದವರೂ, ದ್ರವ್ಯವನ್ನು ಅಪೇಕ್ಷಿಸುವವರೂ, ಕಾಮವನ್ನು ಬಯಸುವವರೂ ತಮ್ಮ ಇಷ್ಟಫಲ ಸಿದ್ಧಿಗಾಗಿ ಆ ಕೃಷ್ಣ ಪರಮಾತ್ಮನನ್ನೇ ಭಕ್ತಿಯಿಂದ ಸೇವಿಸುತ್ತಾರೆ. ಇಂಥ ಜಗದೀಶ್ವರನು ಉದಿಸಿ ಬಂದ ಯದು ವಂಶದ ಮಹಿಮೆಯನ್ನು ಕೇಳಿದವರು ಎಲ್ಲ ಪಾಪಗಳಿಂದಲೂ ಮುಕ್ತರಾಗುತ್ತಾರೆ.

## ಕೀರ್ತಿವಂತನಾದ ಕಾರ್ತವೀರ್ಯಾರ್ಜುನ

ಯದು ಮಹಾರಾಜನಿಗೆ ಸಹಸ್ರಜಿತ್, ನಲ, ಕ್ರೋಷ್ಟು, ನಹುಷ, ಎಂಬ ನಾಲ್ವರು ಮಕ್ಕಳಿದ್ದರು. ಸಹಸ್ರಜಿತನ ಮಗ ಶತಜಿತನಿಗೆ ಹೈಹಯ, ವೇಣು, ಹೇಹಯ, ಎಂದು ಮೂವರು ಮಕ್ಕಳು. ಹೈಯಯನಿಂದ ಮುಂದೆ ಧರ್ಮ, ಧರ್ಮ ನೇತ್ರ, ಕುಂತಿ, ಸಹಜಿತ್, ಮಹಿಷ್ಮಾನ್ ಎಂಬ ರಾಜರು ಉದ್ಭವಿಸಿದರು. ಈ ಮಹಿಷ್ಮಂತನೇ ಮಾಹಿಷ್ಮತೀ ಎಂಬ ನಗರವನ್ನು ನಿರ್ಮಿಸಿದನು. ಅವನಿಂದ ಮುಂದೆ ಭದ್ರಶ್ರೇಣ್ಯ, ದುರ್ದಮ, ಧನಕ ಎಂಬ ರಾಜರು ಆದರು. ಧನಕನಿಗೆ ಕೃತವೀರ್ಯ, ಕೃತಧರ್ಮ, ಕೃತೌಜಸ, ಕೃತಾಗ್ನಿ ಎಂಬ ನಾಲ್ಕು ಮಕ್ಕಳು. ಕೃತವೀರ್ಯನಿಂದ ಕಾರ್ತವೀರ್ಯಾರ್ಜುನನು ಹುಟ್ಟಿದನು. ಅವನಿಗೆ ಸಾವಿರ ತೋಳುಗಳಿದ್ದವು. ಏಳು ದ್ವೀಪಗಳುಳ್ಳ ಧರಾಮಂಡಲವನ್ನು ಅವನು ಆಳಿದನು. ಆ ಕಾರ್ತಿವೀರ್ಯಾರ್ಜುನನು, ಭಗವದವತಾರಭೂತನಾದ, ಅತ್ರಿಪುತ್ರ ದತ್ತಾತ್ರೇಯ ನಿಂದ ''ಸಾವಿರ ತೋಳು, ಸ್ವಧರ್ಮ ನಿಷ್ಠೆ, ಅಧರ್ಮ ನಿವಾರಣೆ, ಭೂಮಂಡಲ ವಿಜಯ, ಧರ್ಮಾನುಸಾರವಾಗಿ ಪ್ರಜಾಪಾಲನೆ, ವೈರಿಗಳಿಂದ ಅಪರಾಜಯ, ಜಗತ್ ಪ್ರಸಿದ್ಧನಾದ ಪುರುಷನಿಂದ ತನ್ನ ಸಾವು,'' ಇಷ್ಟ ವರಗಳನ್ನು ಬೇಡಿ ಪಡೆದನು. ಅವನು ಈ ಭೂತಳವನ್ನು ಚೆನ್ನಾಗಿ ಆಳಿದನು. ಹತ್ತು ಸಾವಿರ ಯಜ್ಞಗಳನ್ನು ಮಾಡಿದನು. ಜಾನಪದ ಗೀತೆಗಳಲ್ಲಿ, ಜಾಣರ ಹಾಡುಗಳಲ್ಲಿ ಅವನ ಕೀರ್ತಿಯ ಕಥೆ ಕೇಳಿ ಬರುತ್ತಿತ್ತು.

''ಯಜ್ಞೈರ್ದಾನೈಸ್ತಪೋಭಿರ್ವಾ ಪ್ರಶ್ರಯೇಣ ಶ್ರುತೇನ ಚ ।
ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ'' ॥

ಅವನ ರಾಜ್ಯದಲ್ಲಿ ಕಳವು ಆಗುತ್ತಿದ್ದಿಲ್ಲ. ಈ ರೀತಿಯಾಗಿ ಎಂಬತ್ತೈದು ಸಾವಿರ ವರ್ಷ ಅವನು ರಾಜ್ಯವಾಳಿದನು. ಇಷ್ಟು ದಿವಸ ಬದುಕಿದ್ದರೂ ಅವನ ಆರೋಗ್ಯವು ಕುಂದಲಿಲ್ಲ. ಐಶ್ವರ್ಯವೂ ಕರಗಲಿಲ್ಲ. ಸಾಮರ್ಥ್ಯವು ಕುಗ್ಗಲಿಲ್ಲ. ಧೈರ್ಯವು ತಗ್ಗಲಿಲ್ಲ. ದಿಕ್ ದೇಶಗಳನ್ನೆಲ್ಲ ಗೆದ್ದುಕೊಂಡು ಬಂದು ಅವನು ತನ್ನ ರಾಜಧಾನಿಯಾದ ಮಾಹಿಷ್ಮತಿ ನಗರವನ್ನು ಬಳಿಸಿ ಹರಿದ ನರ್ಮದಾ ನದಿಯಲ್ಲಿ ಜಲಕ್ರೀಡೆ ಆಡುತ್ತಿದ್ದನು. ಒಮ್ಮೆ ನರ್ಮದೆಯಲ್ಲಿ ಅವನು ನೀರಾಟವಾಡುತ್ತಿರುವಾಗ ದೇವ ದಾನವರ ಗೆಲುವಿನಿಂದ ಗರ್ವದ ಗೋಪುರವನ್ನೇರಿದ ರಾವಣನನ್ನು ಅವನು ಪಶುವಿನಂತೆ ಹೊಡೆದು, ಹಿಡಿದು ತಂದು ಕತ್ತಲೆ ಕೋಣೆಯಲ್ಲಿ ಕೈದಿಯನ್ನಾಗಿ ಇಟ್ಟನು. ಹೀಗೆ ಎಂಬತ್ತೈದು ಸಾವಿರ ವರ್ಷ ಮೆರೆದ ನಂತರ ಸಾಕ್ಷಾತ್ ನಾರಾಯಣನ ಅವತಾರನಾದ ಪರಶುರಾಮನಿಂದ ಅವನು ಸಂಹರಿಸಲ್ಪಟ್ಟನು. ಅವನ ಮಕ್ಕಳು ನೂರು. ಶೂರ, ಶೂರಸೇನ, ವೃಷಸೇನ, ಮಧು ಮತ್ತು ಜಯಧ್ವಜ ಐವರು ಅವರಲ್ಲಿ ಮುಖ್ಯರಾಗಿದ್ದರು. ಜಯಧ್ವಜನಿಂದ ತಾಲಜಂಘ ಎಂಬ ಮಗನು ಹುಟ್ಟಿದನು. ತಾಲ ಜಂಘನಿಗೂ ನೂರು ಜನ ಮಕ್ಕಳು. ಅವರಲ್ಲಿ ಹಿರಿಯ ವೀತಿಹೋತ್ರ, ಎರಡನೆಯವ ಭರತ. ಭರತನಿಂದ ವೃಷ, ಅವನಿಗೆ ಮಧು, ಮಕ್ಕಳಾದರು. ಆ ಮಧುವಿಗೂ ವೃಷ್ಣಿ ಮೊದಲಾಗಿ ನೂರುಜನ ಮಕ್ಕಳು ಹುಟ್ಟಿದರು. ಈ ವೃಷ್ಣಿಯ ಮೂಲಕವಾಗಿ ಯಾದವರ ವಂಶಕ್ಕೆ ವೃಷ್ಣಿ ವಂಶವೆಂದೂ, ಮಧುವಿನ ಮೂಲಕವಾಗಿ ಮಧುಕುಲವೆಂದೂ, ಯದುವಿನ ಮೂಲಕವಾಗಿ ಯಾದವ ಕುಲವೆಂದೂ ಹೆಸರು ಬಂದವು.

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಚತುರ್ಥಾಂಶದ ಹನ್ನೊಂದನೆಯ ಅಧ್ಯಾಯ ಸಂಪೂರ್ಣ*

—o—

ಅಧ್ಯಾಯ - ೧೨

**ಪರಾಶರ** - ಯದುವಿನ ಮಗನಾದ ಕ್ರೋಷ್ಟುವಿಗೆ ಧ್ವಜಿನೀವಾನ್ ಎಂಬ ಮಗನು ಹುಟ್ಟಿದನು. ಮುಂದೆ ಆ ಮನೆತನದಲ್ಲಿ ಸ್ವಾತಿ, ರುಶಂಕು, ಚಿತ್ರರಥ, ಶಶಿಬಿಂದು ಎಂಬ ರಾಜರು ಆಳಿದರು. ಶಶಿಬಿಂದು ಹದಿನಾಲ್ಕು ರತ್ನಗಳ ಒಡೆತನ ಪಡೆದು ಚಕ್ರವರ್ತಿಯಾಗಿ ಮೆರೆದನು. ಅವನಿಗೆ ಅನೇಕ ಹೆಂಡಂದಿರು, ಅಸಂಖ್ಯಾತ ಪುತ್ರರೂ ಇದ್ದರು. ಅವರಲ್ಲಿ ಪೃಥುಶ್ರವ, ಪೃಥುಕರ್ಮ, ಪೃಥುಕೀರ್ತಿ, ಪೃಥುಯಶ, ಪೃಥುಜಯ, ಪೃಥುದಾನ ಎಂಬ ಆರು ಜನರು ಗಣ್ಯರಾಗಿದ್ದರು. ಪೃಥುಶ್ರವನ ಮಗನಾದ ಪೃಥುತಮನಿಗೆ ಉಶನಸ ಎಂಬ ಮಗನು ಹುಟ್ಟಿದನು. ಅವನು ನೂರು ಅಶ್ವಮೇಧ ಯಾಗಗಳನ್ನು ಮಾಡಿದನು. ಅವನಿಂದ ಮುಂದೆ ಶಿತಪು, ರುಕ್ಮಕವಚ, ಪರಾವೃತ ಎಂಬ ರಾಜರಾದರು. ಪರಾವೃತನಿಗೆ ರುಕ್ಮೇಷು, ಪೃಥು, ಜ್ಯಾಮಘ, ಹರಿತ, ವಲಿತ ಎಂಬ ಐವರು ಮಕ್ಕಳಾದರು. ಇವರಲ್ಲಿ ಜ್ಯಾಮಘನು ಹೆಂಡತಿಗೆ ಬಹಳ ಹೆದರುತ್ತಿದ್ದನು. ಅವನು ಭಾರ್ಯಾಭೀರುತೆಯು ಆ ಕಾಲದ ನಾಣ್ಣುಡಿಯ ಹಾಡುಗಳಲ್ಲಿಯೂ ಹೊಸೆಯಲ್ಪಟ್ಟಿತ್ತು.

**''ಭಾರ್ಯಾವಶ್ಯಾಸ್ತು ಯೇ ಕೇಚಿದ್ ಭವಿಷ್ಯಂತ್ಯಥವಾ ಮೃತಾಃ ।**
**ತೇಷಾಂ ತು ಜ್ಯಾಮಘಃ ಶ್ರೇಷ್ಠಃ ಶೈಬ್ಯಾಪತಿರಭೂನ್ನೃಪ ॥**

ಈವರೆಗೆ ಭೂಲೋಕದಲ್ಲಿ ಹೆಂಡತಿಯ ಕೈಗೊಂಬೆಯಾಗಿ ಕುಣಿದ ಭಾರ್ಯಾಭೀರುಗಳಲ್ಲಿ ಶೈಬ್ಯೆಯ ಗಂಡನಾದ ಜ್ಯಾಮಘನು ಅಗ್ರಗಣ್ಯನಾಗಿದ್ದಾನೆ।

## ಸಾರ್ವಭೌಮ ಅಧಿಕಾರ, ಮನೆಯ ಹೆಂಡತಿ ಪಿಂಜಾರ

ಆ ಜ್ಯಾಮಘನಿಗೆ ಮಡದಿಯಾದ ಶೈಬ್ಯಾಳಿಂದ ಮಕ್ಕಳಾಗಲಿಲ್ಲ. ಆಗ ಹೆಣ್ಣು ಹಡೆದ ಅನೇಕರು ಆ ರಾಜಕುಮಾರನಿಗೆ ಕನ್ಯೆ ಕೊಡಲು ಮುಂದೆ ಬಂದರು. ಅವನಿಗೆ ಮತ್ತೊಂದು ಮದುವೆ ಮಾಡಿಕೊಂಡು ಮಕ್ಕಳನ್ನು ಹಡೆಯಬೇಕೆಂದು ಆಶೆ ಇದ್ದಿತು. ಆದರೆ ಹೆಂಡತಿಯ ಹೆದರಿಕೆಯಿಂದ ಹಾಗೆ ಮಾಡಲಿಕ್ಕಾಗಲಿಲ್ಲ. ಅವನು ಮನೆಯಲ್ಲಿ ಮಡದಿಗೆ ಎಷ್ಟು ಬೆದರುತ್ತಿದ್ದರೂ ಹೊರಗೆ ರಣರಂಗದಲ್ಲಿ ವೈರಿ ಭಯಂಕರನಾಗಿದ್ದ. ಒಮ್ಮೆ ಅವನು ಚತುರಂಗ ಸೈನ್ಯವನ್ನು ತೆಗೆದುಕೊಂಡು ಘೋರ ಯುದ್ಧವನ್ನು ಮಾಡಿ ಶತ್ರುಗಳ ದಂಡನ್ನೆಲ್ಲ ತುಂಡರಿಸಿ ಚೆಲ್ಲಿದ. ಅಳಿದುಳಿದವರು ತಮ್ಮ ಮಡದಿ ಮಕ್ಕಳು, ಬಂಧುಬಳಗ, ಕೋಶದೇಶಗಳನ್ನೆಲ್ಲ ಬಿಟ್ಟು ಕಂಗೆಟ್ಟು ಓಡಿಹೋದರು. ವೈರಿಗಳ ರಾಜಪುರುಷರೆಲ್ಲ ಜ್ಯಾಮಘನ ಶಸ್ತ್ರಾಘಾತಕ್ಕೆ ಬೆದರಿ, ದಾರಿ ಸಿಕ್ಕತ್ತ ಚದುರಿ ಓಡಿ ಹೋದರು. ಶೂನ್ಯವಾದ ಅರಮನೆಯಲ್ಲಿ ''ಅಯ್ಯೋ! ರಕ್ಷಿಸಿರಿ ರಕ್ಷಿಸಿರಿ, ತಂದೆ! ಕಾಯಿರಿ, ಅಣ್ಣ! ನನ್ನನ್ನು ಉಳಿಸಿರಿ. ಅಮ್ಮ! ನನ್ನನ್ನು ಕಾಪಾಡು'' ಎಂದು ರಾಜಕನ್ಯೆಯು ಹೌಹಾರಿ ಕೂಗುತ್ತಲಿದ್ದಳು. ಅವಳ ಬೆದರಿದ ಕಂಗಳಲ್ಲಿ ಕಂಬನಿ ತುಂಬಿತ್ತು. ಅವಳನ್ನು ಕಂಡ ಕೂಡಲೇ ಮಹಾರಾಜನಿಗೆ ಅವಳಲ್ಲಿ ಅನುರಾಗ ಉಂಟಾಯಿತು. ಅಭಿಲಾಷೆ ಮೂಡಿತು. ಅವನು ಮನಸ್ಸಿನಲ್ಲಿ ಯೋಚಿಸಿದ ''ಈ ರಾಜಕನ್ಯೆ ಸಿಕ್ಕದ್ದು ಒಳ್ಳೇದಾಯಿತು.

ಹೇಗೂ ನನಗೆ ಮಕ್ಕಳಿಲ್ಲ. ಈಗಿನ ನನ್ನ ಆ ಬಂಜೆ ಭಾರ್ಯೆಯಿಂದ ಮುಂದಾದರೂ ಮಕ್ಕಳಾಗುವ ಆಶೆ ಇಲ್ಲ. ಈಗ ಅನಾಯಾಸವಾಗಿ ದೈವವೇ ನನಗೆ ಮಕ್ಕಳನ್ನು ದಯಪಾಲಿಸಲಿಕ್ಕಾಗಿ ಈ ಕನ್ಯಾರತ್ನವನ್ನು ಒದಗಿಸಿದೆ'' ಎಂದು. ಆದರೆ ಈ ವಿಚಾರದ ಹಿಂದೆಯೇ ತನ್ನ ಪತ್ನಿ ಶೈಬ್ಯೆಯ ನೆನಪಾಗಿ ಮದುವೆ ಆಗಲಿಕ್ಕೆ ಅವನಿಗೆ ಧೈರ್ಯ ಆಗಲಿಲ್ಲ. ಅವಳನ್ನು ರಥದಲ್ಲಿ ಕೂಡಿಸಿಕೊಂಡು 'ಊರಿಗೆ ಹೋಗಿ ಶೈಬ್ಯೆಯ ಸಮ್ಮತಿ ಪಡೆದೇ ಮದುವೆಯಾಗುವೆನು' ಎಂದು ವಿಚಾರಿಸಿ ಆ ಕನ್ಯೆಯನ್ನು ತನ್ನ ತೇರಿನಲ್ಲಿ ಕುಳ್ಳರಿಸಿಕೊಂಡು ಕರೆದುಕೊಂಡು ಹೊರಟನು. ವೈರಿಗಳನ್ನೆಲ್ಲ ಗೆದ್ದು ವಿಜಯ ಪತಾಕೆಯನ್ನು ಮೆರೆಸುತ್ತ ಬಂದ ಆ ನರವೀರನ ಸ್ವಾಗತ ಸಮಾರಂಭದಲ್ಲಿ ಇಡೀ ನಗರವೇ ಸಂಭ್ರಮದಿಂದ ಪಾಲುಗೊಂಡಿತ್ತು. ಮಹಾರಾಣಿಯಾದರೂ ಮಂತ್ರಿ ಪರಿವಾರ, ಪೌರ ಪರಿಚಾರಿಕರಿಂದೊಡಗೂಡಿ ಮಹಾರಾಜನ ಆ ಮೆರವಣಿಗೆಯನ್ನು ನೋಡಬೇಕೆಂದು ಅರಮನೆಯ ಹೆಬ್ಬಾಗಿಲಿಗೆ ಬಂದಳು. ರಾಜನ ಪಕ್ಕದಲ್ಲಿ ರಥದಲ್ಲಿ ಒಂದು ಹೊಸ ಹೆಣ್ಣು ಕುಳಿತದ್ದು ಅವಳ ಕಣ್ಣಿಗೆ ಬಿದ್ದಿತು. ಕೂಡಲೇ ಅವಳ ಕಣ್ಣು ಕೆಂಪಗಾಯಿತು. ತುಟಿ ನಡುಗಿತು. ನುಡಿ ಸಿಡಿಯಿತು. ''ಚಪಲ ಚಿತ್ತನೇ! ನಿನ್ನ ತೇರಿನಲ್ಲಿ ಇವಳಾರನ್ನು ತಂದಿರುವಿ ?'' ಎಂದು. ರಾಜನಲ್ಲಿ ಅವಳ ಈ ಪ್ರಶ್ನೆಗೆ ಉತ್ತರಿಸುವ ತಯಾರಿ ಇರಲಿಲ್ಲ. ಅವಳ ಪ್ರಶ್ನೆಯ ಗುಡುಗಾಟಕ್ಕೆ ಅವನು ಗದಗುಟ್ಟಿ ನಡುಗತೊಡಗಿದನು. ಭಯದಿಂದ ಹೆದರಿ ತತ್ತರಿಸುತ್ತ ಉತ್ತರಿಸಿದ ''ಇವಳು ನನ್ನ ಸೊಸೆ.'' ಕೂಡಲೆ ಶೈಬ್ಯೆ ಮತ್ತೊಂದು ಪ್ರಶ್ನೆ ಬಾಣದಂತೆ ಬಂದಿತು.

**''ನಾಹಂ ಪ್ರಸೂತಾ ಪುತ್ರೇಣ ನಾನ್ಯಾ ಪತ್ನ್ಯಭವತ್ತವ।**
**ಸ್ನುಷಾ ಸಂಬಂಧತಾ ಹ್ಯೇಷಾ ಕತಮೇನ ಸುತೇನ ತೇ ॥**

''ನಾನಂತೂ ಈ ವರೆಗೂ ಹಡೆದಿಲ್ಲ. ನನ್ನ ಹೊರತು ನಿನಗೆ ಬೇರೆ ಹೆಂಡತಿ ಇಲ್ಲ. ಅಂದ ಬಳಿಕ ಯಾವ ಮಗನಿಂದ ಇವಳು ನಿನಗೆ ಸೊಸೆ ಆದಳು? ಎಲ್ಲಿಯ ಸಂಬಂಧ ?'' ಅಸೂಯೆ ಸಿಟ್ಟುಗಳಿಂದ ಸಿಡಿದು ಬಂದ ಅವಳ ಕಿಡಿನುಡಿಯಿಂದ ಮಹಾರಾಜ ನಡುಗಿಹೋದ. ಅವನ ವಿವೇಕವು ಉಡುಗಿಹೋಯಿತು. ತಾನು ಆಡಿದ ಮಾತಿನಿಂದ ಅವಳಲ್ಲಿ ಬೇರಾವ ಸಂದೇಹವೂ ಮೂಡಬಾರದೆಂದು ತೊದಲುತ್ತ ನುಡಿದ ''ನಿನಗೆ ಮುಂದೆ ಆಗಲಿರುವ ಮಗನಿಗೆ ಇವಳನ್ನು ಸೊಸೆಯನ್ನಾಗಿ ತಂದಿದ್ದೇನೆ.'' ಹೀಗೆ ಹೇಳಿ ಹೇಗೋ ಪಾರಾದನು. ಇದನ್ನು ಕೇಳಿ ಶೈಬ್ಯೆಗೆ ನಗೆ ಬಂದಿತು. ಅವಳು ಮಂದಹಾಸಮಾಡಿ ''ಹಾಗಿದ್ದರೆ ಸರಿ'' ಎಂದು ನುಡಿದ ಆ ರಾಜನೊಡನೆ ತಾನೂ ಮೆರವಣಿಗೆಯಲ್ಲಿ ನಡೆದಳು.

## ''ಪ್ರಿಯಂ ಬ್ರೂಯಾತ್''

ಜ್ಯಾಮಘ ಮಹಾರಾಜನು ನಿನಗೆ ಮುಂದೆ ಆಗುವ ಮಗನ ಮಡದಿ ಇವಳು ಎಂದು ನುಡಿದ ಮುಹೂರ್ತವು ಬಹಳ ಒಳ್ಳೇ ಮುಹೂರ್ತವಾಗಿದ್ದಿತು. ಅದರಿಂದ ರಾಣಿಗೆ ವಯಸ್ಸು ಆಗಿ ಮುದುಕಿಯಾಗಿದ್ದರೂ ಗರ್ಭ ನಿಂತಿತು. ದಿನ ತುಂಬಿದ ಬಳಿಕ ಒಂದು ಗಂಡು ಮಗುವನ್ನು ಹೆತ್ತಳು. ಅವನಿಗೆ ವಿದರ್ಭ ಎಂದು ಹೆಸರಿಟ್ಟನು. ಆ

ವಿದರ್ಭಕುಮಾರನು ತನ್ನ ತಂದೆಯು ಹಿಂದೆ ಯುದ್ಧದಲ್ಲಿ ಗೆದ್ದು ತಂದ ಆ ಕನ್ಯಾರತ್ನವನ್ನೇ ಮದುವೆ ಆದನು. ವಿದರ್ಭನಿಗೆ ಅವಳಲ್ಲಿ ಕ್ರಥ, ಕೈಶಿಕ, ಮತ್ತು ರೋಮಪಾದ ಎಂದು ಮೂವರು ಮಕ್ಕಳಾದರು. ರೋಮಪಾದನಿಗೆ ನಾರದರು ಜ್ಞಾನೋಪದೇಶವನ್ನು ಮಾಡಿದರು. ರೋಮಪಾದನಿಂದ ಬಭ್ರು, ಧೃತಿ, ಚೇದಿ ಮುಂತಾದ ರಾಜರು ಹುಟ್ಟಿ ಬಾಳಿದರು. ನಾಡನ್ನು ಆಳಿದರು. ಅವರಿಗೆಲ್ಲ ಚೈದ್ಯ ಭೂಪಾಲರು ಎಂದು ಹೆಸರು ಕ್ರಥನಿಂದ ಮುಂದೆ ಜ್ಯಾಮಘನ ಸೊಸೆಯ ವಂಶವು ಕುಂತಿ, ಧೃಷ್ಟಿ, ನಿಧೃತಿ, ದಶಾರ್ಹ, ವ್ಯೋಮಾತ, ಜೀಮೂತ, ವಿಕೃತಿ, ಭೀಮರಥ, ನವರಥ, ಶಕುನಿ, ಕರಂಭಿ, ದೇವರಾತ, ದೇವನಕ್ಷತ್ರ, ಮಧು, ಕುಮಾರವಂಶ, ಅನು, ಪುರುಮಿತ್ರ, ಅಂಶು, ಸತ್ವತ ಮುಂತಾದ ರಾಜ ಮಹಾರಾಜರಿಂದ ಮುಂದುವರೆಯಿತು. ಸತ್ವತನಿಂದ ಇವರೆಲ್ಲರಿಗೂ ಸಾತ್ವತ ಎಂದು ಹೆಸರಾಯಿತು.

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಚತುರ್ಥಾಂಶದ ಹನ್ನೆರಡನೇ ಅಧ್ಯಾಯ ಸಂಪೂರ್ಣ*



## ಅಧ್ಯಾಯ - ೧೩

**ಪರಾಶರ** - ಸತ್ವತನಿಗೆ ಭಜನ, ಭಜಮಾನ, ದಿವ್ಯ, ಅಂಧಕ, ದೇವಾವೃಧ, ಮಹಾಭೋಜ ಎಂಬ ಹೆಸರಿನ ಮಕ್ಕಳು ಹುಟ್ಟಿದರು. ಭಜಮಾನನಿಗೆ ಒಬ್ಬ ಹೆಂಡತಿಯಿಂದ ನಿಮಿ, ಕರಣ ಮತ್ತು ವೃಷ್ಣಿ ಎಂಬ ಮಕ್ಕಳೂ ಮತ್ತೊಬ್ಬ ಮಡದಿಯಿಂದ ಶತಜಿತ್, ಸಹಸ್ರಜಿತ್, ಆಯುತಜಿತ್ ಎಂದು ಮೂವರು ಒಟ್ಟು ಆರುಜನ ಮಕ್ಕಳು ಜನಿಸಿದರು. ದೇವಾವೃಧನಿಗೆ ಬಭ್ರು ಎಂಬ ಮಗನು ಹುಟ್ಟಿದನು. ಈ ತಂದೆ ಮಕ್ಕಳಿಬ್ಬರೂ ಲೋಕೋದ್ಧಾರ ಕಾರ್ಯದಲ್ಲಿ ಮುಂದಿದ್ದರು. ಜಾನಪದ ನಾಣ್ಣುಡಿಗಳಲ್ಲಿಯೂ ಅವರ ಗೈಮೆ ಗೀತರೂಪದಿಂದ ಕೇಳಿ ಬರುತ್ತಿತ್ತು.

**''ಯಥೈವ ಶೃಣುಮೋ ದೂರಾತ್ ಸಂಪಶ್ಯಾಮಸ್ತಥಾಂತಿಕಾತ್ ।**
**ಬಭ್ರುಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಃ ಸಮಃ ॥**
**ಪುರುಷಾಃ ಷಟ್ ಚ ಷಷ್ಠಿಶ್ಚ ಷಟ್ ಸಹಸ್ರಾಣಿ ಚಾಷ್ಟ ಚ ।**
**ತೇऽ ಮೃತತ್ವಮನುಪ್ರಾಪ್ತಾ ಬಭ್ರೋರ್ದೇವಾವೃಧಾದಪಿ॥**

''ಜನರ ಬಾಯಿಂದ ದೂರಿಂದ ಕೇಳಿದ್ದೇವೆ. ಸಮೀಪಕ್ಕೆ ಹೋಗಿ ಕಣ್ಣಿಂದಲೂ ನೋಡಿದ್ದೇವೆ. ಮಾನವ ಕುಲದಲ್ಲಿ ಬಭ್ರು ಶ್ರೇಷ್ಠ. ದೇವಾವೃಧ ದೇವತೆಗಳಿಗೆ ಸಮಾನ. ಈ ತಂದೆ ಮಕ್ಕಳಿಂದ ಆರುಸಾವಿರದ ಎಪ್ಪತ್ನಾಲ್ಕು ಜನರು ಅಮರ ಪದವನ್ನು ಹೊಂದಿದರು.'' ಸತ್ವತನ ಮತ್ತೊಬ್ಬ ಮಗನಾದ ಮಹಾಭೋಜ ಅತ್ಯಂತ ಧರ್ಮಿಷ್ಠನಾದ ದೊರೆಯಾಗಿದ್ದನು. ಅವನ ವಂಶದಲ್ಲಿ ಭೋಜರೂ ಮತ್ತು ಮೃತ್ತಿಕಾವರ ಎಂಬ ನಗರದಲ್ಲಿ ವಾಸಮಾಡುವ ಮಾರ್ತಿಕಾವರರೂ ಜನಿಸಿದರು. ವೃಷ್ಣಿ ಎಂಬ ಸತ್ವತನ ಮಗನಿಂದ ಸುಮಿತ್ರ, ಯುಧಾಜಿತ್ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಸುಮಿತ್ರನ ಮಗ ಅನಮಿತ್ರ, ಅನಮಿತ್ರನ ಪುತ್ರ ವಿಘ್ನ, ವಿಘ್ನ ಚಿರಂಜೀವರೇ ಪ್ರಸೇನ ಮತ್ತು ಸುತ್ರಾಜಿತರು.

### ರಕ್ತದ ಕಾಲುವೆ ಹರಿಸಿದ ರತ್ನ ಸ್ಯಮಂತಕ

ಸತ್ರಾಜಿತನಿಗೆ ಸೂರ್ಯನು ಮಿತ್ರನಾಗಿದ್ದ. ಒಂದು ದಿನ ಸತ್ರಾಜಿತನು ಕಡಲ ತಡಿಯಲ್ಲಿ ನಿಂತು ಸೂರ್ಯನನ್ನು ಏಕಾಗ್ರ ಚಿತ್ತದಿಂದ ಸ್ತುತಿಸಿ ಧ್ಯಾನ ಮಾಡಿದನು. ಅದರಿಂದ ಪರಿತುಷ್ಟನಾದ ಪ್ರಭಾಕರನು ಪ್ರತ್ಯಕ್ಷನಾಗಿ ಸತ್ರಾಜಿತನ ಎದುರು ಬಂದು ನಿಂತನು. ಕಣ್ಣೆದುರು ಬಂದು ನಿಂತರೂ ಸತ್ರಾಜಿತನಿಗೆ ಸೂರ್ಯನ ಮೂರ್ತಿಯು ಸ್ಪಷ್ಟವಾಗಿ ಕಾಣಲಿಲ್ಲ. ಅವನು ಕೇಳಿದ ''ಭಗವನ್, ಮುಗಿಲಿನಲ್ಲಿ ಇದ್ದಾಗ ನೀನೊಂದು ಬೆಂಕಿಯ ಉಂಡೆ. ಪಕ್ಕದಲ್ಲಿ ಬಂದು ನಿಂತಾಗಲೂ ಅದರಂತೆಯೇ ನೀನು ಒಂದು ಉರಿಯ ಪಿಂಡ. ಮಿತ್ರನನ್ನು ಕಣ್ತುಂಬ ನೋಡಲಿಕ್ಕೂ ನನಗೆ ಭಾಗ್ಯವಿಲ್ಲವಾಯಿತು. ಈಗ ನನ್ನ ಮೇಲೆ ತಾವು ಹೆಚ್ಚಿನ ಪ್ರಸಾದವನ್ನೇನೂ ಮಾಡಿದಂತಾಗಲಿಲ್ಲವಲ್ಲ!''

ಆಗ ಆ ದಿನಮಣಿಯು ತನ್ನ ಕೊರಳೊಳಗಿನ ಸ್ಯಮಂತಕ ಎಂಬ ದೊಡ್ಡ ರತ್ನವನ್ನು ತೆಗೆದು ಬದಿಗಿರಿಸಿದನು. ಆಗ ಆದಿತ್ಯನ ಮೈ ಸತ್ರಾಜತನಿಗೆ ಕಂಡಿತು. ತುಸು ಕೆಂಬಣ್ಣ, ಹೊಂಬೆಳಗಿನ ಹೊಳಪು, ಕಿಂಚಿತ್ ಕುಳ್ಳ ನಿಲುವು, ಕೆಂಪು ಗಣ್ಣು, ಉಜ್ವಲಕಾಂತಿ, ತೇಜಃ

ಪುಂಜ ಶರೀರ. ಸತ್ರಾಜಿತ ಇಂಥ ದೇಹವುಳ್ಳ ಸೂರ್ಯನಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. ಬಗೆ ಬಗೆಯಾಗಿ ಕೊಂಡಾಡಿದ. ಆಗ ಪ್ರಸನ್ನನಾದ ಆ ಪ್ರಕಾಶದ ಒಡೆಯ ಅನುಗ್ರಹ ಗೈದ ''ನಿನಗೆ ಬೇಕಾದ ವರ ಬೇಡು''. ಮೊದಲೇ ಸತ್ರಾಜಿತನ ಕಣ್ಣು ಆ ಸ್ಯಮಂತಕಮಣಿಯ ಮೇಲೆ ಬಿದ್ದಿತ್ತು. ಆ ರತ್ನವನ್ನು ಕೊಡಬೇಕೆಂದು ಕೇಳಿಕೊಂಡ. ಕೂಡಲೇ ದಿನಮಣಿಯು ಆ ಸ್ಯಮಂತಕಮಣಿಯನ್ನು ತನ್ನ ಮಿತ್ರ ಸತ್ರಾಜಿತನಿಗೆ ಕೊಟ್ಟು ತನ್ನ ಮುಗಿಲ ಮಾಳಿಗೆ ಏರಿದ. ಸತ್ರಾಜಿತ ಆ ಉಜ್ವಲ ಮಣಿಯನ್ನು ತನ್ನ ಕೊರಳಿಗೆ ಕಟ್ಟಿಕೊಂಡು ದ್ವಾರಕೆಗೆ ಬಂದ. ಅವನ ಹೃದಯ ಪದಕದಂತೆ ಹೊಳೆಯುತ್ತಿದ್ದ ಆ ರತ್ನದ ಕಿರಣ ಕಾಂತಿಯಿಂದ ದಿಕ್ಕುಗಳೆಲ್ಲ ತೊಳಗಿದವು. ನಡೆದಾಡಿದ ಭೂಭಾಗವೆಲ್ಲ ಬೆಳಗಿತು. ಜನರಂತೂ ಸಾಕ್ಷಾದ್ ದಿವಾಕರನೇ ದ್ವಾರಕೆಗೆ ಬಂದನೆಂದು ಭಾವಿಸಿದರು. ತಿರೆಯ ಹೊರೆಯನ್ನು ಹಗುರಮಾಡಲಿಕ್ಕೆ ಇಳಿದು ಬಂದ ಭಗವಂತನೆದುರು ದ್ವಾರಕೆಯ ಜನ ಹೋಗಿ ಹೇಳಿದರು ''ಭಗವಾನ್, ತಮ್ಮ ದರ್ಶನಕ್ಕೆ ಸೂರ್ಯ ದೇವನೇ ಇಳಿದು ಬರುತ್ತಿದ್ದಾನೆ.''

ಆಗ ಕೃಷ್ಣ ನಕ್ಕು ನುಡಿದ ''ಅವನು ಸೂರ್ಯನಲ್ಲ. ಸತ್ರಾಜಿತ, ಸೂರ್ಯನು ಅವನಿಗೆ ಸ್ಯಮಂತಕ ಎಂಬ ಅನರ್ಘ್ಯವಾದ ರತ್ನವನ್ನು ಕೊಟ್ಟಿದ್ದಾನೆ. ಅದನ್ನು ಇವನು ಕೊರಳಲ್ಲಿ ಕಟ್ಟಿದ್ದಾನೆ. ಅದರ ಬೆಳಕು ಥಳಕು ಸತ್ರಾಜಿತನ ಮೈ ಬಳಸಿ ಸುತ್ತು ಮುತ್ತು ಬೆಳಗುತ್ತಿದೆ. ಪರೀಕ್ಷಿಸಿ ನೋಡಿ. ನಿಮಗೇ ಗೊತ್ತಾಗುತ್ತದೆ.'' ಸತ್ರಾಜಿತನು ಅದನ್ನು ತನ್ನ ಮನೆಯಲ್ಲಿ ತಂದಿರಿಸಿದ. ಅದು ಪ್ರತಿ ದಿನವೂ ಎಂಟು ಭಾರ ಬಂಗಾರವನ್ನು ಇಟ್ಟಲ್ಲಿಯೇ ಈಯುತ್ತಿತ್ತು. ಅದು ಇದ್ದ ನಾಡಿನಲ್ಲಿ ಬರ ಬೀಳುವಂತಿಲ್ಲ. ಬೇನೆ ಬರುವಂತಿಲ್ಲ, ಬೆಂಕಿಯ ಅನಾಹುತಗಳು ಜರಗುವಂತಿಲ್ಲ. ಹಾವಿನಿಂದ ಸಾವಿಲ್ಲ. ಕಳ್ಳರಿಂದ ಭಯವಿಲ್ಲ. ಅದರ ಇಂಥ ಗುಣಗಳನ್ನು ಅರಿತು ಕೃಷ್ಣನು ಆ ರತ್ನವು ತಮ್ಮ ರಾಜನಾದ ಉಗ್ರಸೇನನ ಬಳಿಗೆ ಇರಲಿಕ್ಕೆ ಯೋಗ್ಯವೆಂದು ಬಯಸಿದನು. ಕೃಷ್ಣನಿಗೆ ಅದನ್ನು ಅವನಿಂದ ತೆಗೆದುಕೊಳ್ಳುವ ಶಕ್ತಿ ಇದ್ದಿತು. ಆದರೆ ತಮ್ಮ ತಮ್ಮಲ್ಲಿ ವಿರಸಬೇಡವೆಂದು ಸುಮ್ಮನಿದ್ದನು. ಸತ್ರಾಜಿತನಿಗೆ ಕೃಷ್ಣನ ಅಪೇಕ್ಷೆ ತಿಳಿಯಿತು. ತನ್ನ ಬಳಿಗೆ ಇದ್ದರೆ ಕೃಷ್ಣನು ಅದನ್ನು ಕೇಳಬಹುದೆಂದು ಹೆದರಿಕೆಯಿಂದ ಅವನು ಅದನ್ನು ತನ್ನ ತಮ್ಮನಿಗೆ ಕೊಟ್ಟನು. ತಮ್ಮ ಪ್ರಸೇನನಿಗೆ ಅದರ ಮಹಿಮೆ ಗೊತ್ತಿದ್ದಿಲ್ಲ. ಅದು ಸೂರ್ಯನ ಕೊರಳಪದಕವಾದ ರತ್ನ. ಅದನ್ನು ಶುಚಿರ್ಭೂತನಾಗಿ ಭಕ್ತಿಯಿಂದ ಧರಿಸಿದರೆ ಅದು ಹೊನ್ನವನ್ನೀಯುತ್ತಿತ್ತು. ಆದರೆ ಮಡಿ ಇಲ್ಲದೇ ಮೈಲಿಗಿಯಿಂದಿದ್ದಾಗ ಮುಟ್ಟಿಧರಿಸಿದರೆ ಧರಿಸಿದವನನ್ನೇ ಘಾತಮಾಡುತ್ತಿತ್ತು.

## ಸತ್ಯವಾದರೂ ಸೋಜಿಗ ಘಟನೆ

ಇದಾವುದನ್ನೂ ಅರಿಯದ ಪ್ರಸೇನನು ಅದನ್ನು ಕತ್ತಿಗೆ ಬಿಗಿದುಕೊಂಡು ಬೇಟೆಗಾಗಿ ಕುದುರೆ ಏರಿ ಕಾಡಿಗೆ ಹೋದನು. ಅಲ್ಲಿ ಒಂದು ಸಿಂಹವು ಬಂದು ಪ್ರಸೇನನನ್ನು ಕೊಂದಿತು. ಕುದುರೆಯನ್ನು ತಿಂದಿತು. ಅನಂತರ ಸಿಂಹವು ಆ ರತ್ನವನ್ನು ಬಾಯಲ್ಲಿ ಕಚ್ಚಿಕೊಂಡು ಕಾಡಿನಲ್ಲಿ ಹೊಕ್ಕಿತು. ಕರಡಿಗಳ ನಾಯಕನಾದ ಜಾಂಬುವಂತನ ಕಣ್ಣಿಗೆ ಮಣಿಯನ್ನು ಮುಖದಲ್ಲಿ ಹೊತ್ತು ನಡೆದ ಸಿಂಹವು ಕಾಣಿಸಿತು. ಕೂಡಲೇ ಆ ಬಲಿಷ್ಠವಾದ ಕರಡಿಯು ಆ ಸಿಂಹದ ಮೇಲೆ ಎರಗಿ ಹೊಡೆದು ಕೊಂದು ಅದರ

ಬಾಯಿಂದ ಸ್ಯಮಂತಕವನ್ನು ಕಸಿದು ಕಿತ್ತುಕೊಂಡಿತು. ಬೆಳಕಿನ ಸೆಳಕುಗಳನ್ನು ತೂರುವ ಆ ಸುಂದರ ಮಣಿಯನ್ನು ತನ್ನ ಗುಹೆಗೆ ವೈಯ್ದು ಆ ಜಾಂಬುವಂತನು ಸುಕುಮಾರ ಎಂಬ ತನ್ನ ಕರಡಿಯಮರಿಗೆ ಅದನ್ನು ಆಡಲಿಕ್ಕೆ ಆಟಿಗೆಯೆಂದು ಕೊಟ್ಟಿತು.

ಬೇಟೆಗೆ ಹೋದ ಪ್ರಸೇನ ಮರಳಿ ಬರಲೇ ಇಲ್ಲ. ಜನರಿಗೆ ಕೃಷ್ಣನ ಮೇಲೆ ಸಂಶಯ. ''ಹಿಂದೆ ಕೃಷ್ಣ ಅದನ್ನು ಅಪೇಕ್ಷಿಸಿದ್ದ. ಈಗ ಅದನ್ನು ಅವನೇ ಪ್ರಸೇನನ್ನು ಕೊಂದು ತೆಗೆದುಕೊಂಡಿರಲು ಸಾಕು. ಇದೆಲ್ಲವೂ ಕೃಷ್ಣ ಕಾರಸ್ಥಾನವೇ ಸರಿ'' ಎಂದು ಗುಜು ಗುಜು ದ್ವಾರಕೆಯಲ್ಲೆಲ್ಲ ಸುರುವಾಯಿತು. ಯಾದವರ ಈ ಗಂಘಾ ಗೋಷ್ಠಿಯ ಗುಟ್ಟುರಟ್ಟಾಗಲು ತಡವಾಗಲಿಲ್ಲ. ಕಿವಿಯಿಂದ ಕಿವಿಗೆ ಬಾಯಿಂದ ಬಾಯಿಗೆ ಬೆಳೆಯುತ್ತ ಕೃಷ್ಣನ ಕಿವಿಗೂ ತಲುಪಿತು. ತನಗೆ ಅಪವಾದ ಬಂದದ್ದೂ ತಿಳಿಯಿತು.

ಒಮ್ಮೆಲೇ ಮಣಿ ಮಾಯವಾದದ್ದು ಅವನಿಗೂ ಗೂಢವೆನಿಸಿತು. ಕೂಡಲೇ ಅವನು ತನ್ನ ಮೇಲೆ ಸಂದೇಹಪಡುವ ಯಾದವರ ಒಂದು ಹಿಂಡನ್ನೇ ಕಟ್ಟಿಕೊಂಡು ಪ್ರಸೇನ ಹೋದ ನಿಟ್ಟಿಗೆ ತೆರಳಿದ. ಎಲ್ಲರೂ ಪ್ರಸೇನನ ಕುದುರೆಯ ಹೆಜ್ಜೆಯ ಗುರುತು ಹಿಡಿದು ಕಾಡಿನಲ್ಲಿ ನಡೆದರು. ಅಲ್ಲಿ ಒಂದೆಡೆ ಪ್ರಸೇನನ ಹೆಣ ಬಿದ್ದಿತ್ತು. ಪಕ್ಕದಲ್ಲಿಯೇ ಸಿಂಹವು ತಿಂದೊಗೆದ ಕುದುರೆಯ ದೇಹದ ಎಲವು ತೊಗಲು ಬಿದ್ದಿದ್ದವು. ಪ್ರಸೇನನ ಶರೀರವೂ ಕ್ರೂರ ಸಿಂಹದ ಪಂಜುಗಳ ಪ್ರಹಾರದಿಂದ ಹರಿದು ಪಂಜರವಾಗಿತ್ತು. ಯಾದವರೆಲ್ಲರೂ ಕಣ್ಣಿಂದ ಕಂಡರು. ಪ್ರಸೇನನನ್ನು ಹೊಡೆದವ ಈ ಹರಿಯಲ್ಲ ಆ ಹರಿ (ಹರಿ-ಸಿಂಹ) ಎಂದು ಖಾತರಿ ಮಾಡಿಕೊಂಡರು. ಯಾದವರ ಆ ಸತ್ಯಶೋಧಕ ಸಮಾಜವು ಸಿಂಹದ ಹೆಜ್ಜೆ ಹಿಡಿದು ವನಗರ್ಭದ ಒಳಹೊಕ್ಕಿತು. ನೆತ್ತರು ಮೆತ್ತಿದ್ದ ಸಿಂಹದ ಹೆಜ್ಜೆಗಳನ್ನು ಗುರುತಿಸುವುದು ಅವರಿಗೆ ಅಷ್ಟೇನು ಕಷ್ಟವಾಗಲಿಲ್ಲ.

## ಕರಡಿಯ ಗವಿ, ಸಾವಿನ ಛವಿ

ಮುಂದೆ ಹತ್ತು ಹೆಜ್ಜೆ ಹೋಗುವಷ್ಟರಲ್ಲಿ ಅಲ್ಲಿ ಸಿಂಹ ಸತ್ತು ಬಿದ್ದಿತ್ತು. ಮುಂದೆ ಕರಡಿಯ ರಕ್ತಸಿಕ್ತವಾದ ಪಾದಗಳು ಹುಡಿಯಲ್ಲಿ ಮೂಡಿದ್ದವು. ಅವನ್ನು ಗುರುತಿಸುತ್ತ ಕರಡಿಯ ಗವಿಗೆ ಬಂದು ತಲುಪಿದರು. ಸಿಂಹವನ್ನೇ ಸಿಗಿದು ಹಾಕಿದ ಆ ಕ್ರೂರ ಕರಡಿಯ ಗುಹೆಯಲ್ಲಿ ಹೋಗುವುದೆಂದರೆ ಸಾವಿನ ಉಡಿಯಲ್ಲಿ ಹಾರಿಕೊಂಡಂತೆಯೇ. ರತ್ನ ಹುಡುಕ ಹೊರಟ ಯಾದವರ ತರುಣ ತಂಡವೆಲ್ಲ ಹೆದರಿ ಹಿಂಜರಿಯಿತು. ಆಗ ಕೃಷ್ಣನು ಅವರಿಗೆಲ್ಲ ಅಲ್ಲಿಯೇ ಬೆಟ್ಟದ ಬೆನ್ನಿನಲ್ಲಿಯ ಒಂದು ದಿನ್ನೆಯ ಮೇಲೆ ವಿಶ್ರಮಿಸಲಿಕ್ಕೆ ಹೇಳಿದ. ತಾನು ಕರಡಿಯ ಗವಿಯನ್ನು ಒಳಹೊಕ್ಕ. ಗವಿಯಲ್ಲಿ ಕಾಲಿರಿಸಿದ ಕೂಡಲೇ ಕೃಷ್ಣನ ಕಿವಿಗೆ ಬಿದ್ದುದು ಒಂದು ಜೋಗುಳದ ಹಾಡು.

**''ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ।**
**ಸುಕುಮಾರಕ ಮಾ ರೋದೀಃ ತವ ಹ್ಯೇಷ ಸ್ಯಮಂತಕಃ॥**

''ಕಾಡು ಸಿಂಹವು ಆ ಪ್ರಸೇನನನ್ನು ಹೊಡೆದು ದೇಹವನ್ನು ತಿಂದಿತು. ಜಾಂಬವಂತನೆಂಬ ಕರಡಿಯು ಅಂಥ ಸಿಂಹವ ಕೊಂದಿತು. ಕಂದ, ಅಳದಿರು ನಿನ್ನ

ತಂದೆಯೇ ಈ ಸ್ಯಮಂತಕ ತಂದಿತು.'' ದಾದಿಯೊಬ್ಬಳು ಕರಡಿಯ ಕೂಸನ್ನು ಆಡಿಸುತ್ತ ಈ ಹಾಡನ್ನು ರಾಗಬದ್ಧವಾಗಿ ಹೇಳುತ್ತಿದ್ದಳು. ಕೃಷ್ಣನಿಗೆ ರತ್ನದ ಪತ್ತೆಯಾಯಿತು. ಮತ್ತು ಅದರ ಕಳವಿನ ಇತಿಹಾಸವೇ ಆ ಮೂರು ನುಡಿಯ ಹಾಡಿನಲ್ಲಿ ಸ್ಪಷ್ಟವಾಗಿ ಒಡಮೂಡಿತ್ತು.

## ಕಳಂಕ ತಂದ ಕಲ್ಲಿನ ಪತ್ತೆಯಾಯಿತು.

ಒಳಗೆ ಹೋಗಿ ನೋಡಿದ ದಾಸಿಯ ಕೈಯಲ್ಲಿ ಕೂಸು. ಕೂಸಿನ ಕೈಯಲ್ಲಿ ಸ್ಯಮಂತಕಮಣಿ. ಕತ್ತಲೆ ಕವಿದ ಗವಿಯಲ್ಲಿ ನೂರು ದೀಪ ಹಚ್ಚಿಟ್ಟಂತಾಗಿತ್ತು. ಸುತ್ತು ಮುತ್ತಲೂ ಬೆಳಕಿನ ಸೆಳಕುಗಳು ತಳಕುಗೊಂಡು ಗುಹೆಯ ಸುತ್ತಲೂ ತುಳುಕಿದ್ದವು. ಕೃಷ್ಣ ಹತ್ತಿರ ಹೋದ ಕೂಡಲೇ ದಾಸಿಯು ಚಿಟ್ಟನೆ ಚೀರಿದಳು. ಅವಳು ಇಂಥ ಮನುಷ್ಯರನ್ನೇ ಕಂಡಿದ್ದಿಲ್ಲ. ''ಬದುಕಿಸಿರಿ, ಕಾಯಿರಿ'' ಎಂದು ಒಂದೇ ಸಮನೆ ಕೂಗತೊಡಗಿದಳು. ಆಗ ದಾಸಿಯ ಆರ್ತ ದನಿಯನ್ನು ಕೇಳಿ ಜಾಂಬವಂತ ಅಲ್ಲಿಗೆ ಧಾವಿಸಿದ. ಎದೆಯಲ್ಲಿ ಕೋಪ ಕಿಚ್ಚಾಡಿತ್ತು. ಅದರ ಝಳ ಕಣ್ಣಿಗೆ ಕೆಂಡವಿಡಿದು ಕಿಡಿಯಾಗಿ ಸೂಸಿತ್ತು. ಕೇಳುವುದೇನು! ಸುರುವಾಯಿತು ಕೃಷ್ಣ ಜಾಂಬುವಂತರಲ್ಲಿ ಯುದ್ಧ. ಜಾಂಬುವಂತ ಮುಪ್ಪಾಗಿದ್ದರೂ ಬಲ ಕುಂದಿರಲಿಲ್ಲ. ಅದು ತ್ರೇತಾಯುಗದ ಕರಡಿ. ರಾವಣ, ಕುಂಭಕರ್ಣರಂಥ ಕಗ್ಗಲಿಗಳ ಮಗ್ಗಲು ಮಡಚಿ ಮೈ ನುಗ್ಗು ಮಾಡಿ ಬಂದ ಬಲವಂತ ಆ ಜಾಂಬುವಂತ. ಇವನಂತೂ ಭಗವಂತ. ಅವನಿಗೂ ಇದೊಂದು ಆಟ. ಭಕ್ತನನ್ನು ಅನುಗ್ರಹಿಸಲು ಹೂಡಿದ ಹೂಟ.

## ಕರಡಿಯೊಡನೆ ಕೃಷ್ಣನ ಹೋರಾಟ

ಇಪ್ಪತ್ತೊಂದು ದಿನ ಸಾಗಿತು ಈ ಕರಡಿ ಕೃಷ್ಣರ ಹೋರಾಟ. ಇತ್ತ ಹೊರಗೆ ಬೆಟ್ಟದ ಅಟ್ಟದ ಮೇಲೆ ಕುಳಿತ ಯಾದವರಿಗೆ ಕಾದುಕಾದು ಕಳವಳವಾಯಿತು. ಏಳೆಂಟುದಿನ ಅವರು ಗವಿಯ ಹೊರಗೆ ಕುಳಿತು ಕೃಷ್ಣನ ದಾರಿ ನೋಡಿದರು. ಆ ಮೇಲೆಯೂ ಬಾರದಿದ್ದಾಗ ಕರಡಿಯ ಕೈಯಲ್ಲಿ ಸಿಕ್ಕು ಕೃಷ್ಣನು ಸತ್ತ ಎಂದು ನಿರ್ಧರಿಸಿದರು. ''ಬದುಕಿದ್ದರೆ ಹೊರ ಬರಲು ಇಷ್ಟೇಕೆ ವಿಳಂಬವಾಗುತ್ತಿತ್ತು! ಪಾಪ! ಕರಡಿಯ ಕೈಯಲ್ಲಿ ಇತ್ತು ಅವನು ಸಾವು'' ಎಂದು ಹಳಹಳಿಸುತ್ತ ದ್ವಾರಕೆಗೆ ಮರಳಿದರು.

## ಕೃಷ್ಣನ ಜೀವಂತ ಶ್ರಾದ್ಧ

ಕೃಷ್ಣನ ಮನೆಯಲ್ಲಿ ಅವನ ಸಾವಿನ ಸುದ್ದಿ ಮುಟ್ಟಿಸಿದರು. ಎಲ್ಲ ಯಾದವರೂ ಸ್ನಾನ ಮಾಡಿ ಸೂತಕ ಆಚರಿಸಿದರು. ಅವನ ದಿನ ಕರ್ಮಗಳೂ ಸರಿಯಾಗಿಯೇ ಜರುಗಿದವು. ದೊಡ್ಡ ಮನುಷ್ಯನಲ್ಲವೇ ಕೃಷ್ಣ! ಅವನ ಯೋಗ್ಯತೆಗೆ ತಕ್ಕಂತೆ ದೊಡ್ಡ ಪ್ರಮಾಣದಲ್ಲಿಯೇ ಶ್ರಾದ್ಧ ನಡೆಯಿತು. ಅನೇಕ ಜನರಿಗೆ ಭೂರಿ ಭೋಜನವಾಯಿತು. ದಿನ ದಿನವೂ ಯಾದವರು ಅವನ ಹೆಸರಿನಿಂದ ಕೊಟ್ಟ ಪಿಂಡ, ಉಂಡೆ, ಊಟಗಳಿಂದ ಕೃಷ್ಣನಿಗೆ ಬಲಬಂದು ಅವನು ಗಟ್ಟಿಯಾಗಿ ಹೋರಾಡತೊಡಗಿದ. ಇತ್ತ ಜಾಂಬವಂತ ಮೊದಲೇ ಮುದುಕ. ಮೇಲಾಗಿ ಊಟವಿಲ್ಲ, ನಿದ್ದೆಯಿಲ್ಲ, ಹಗಲಿರುಳು ಹೋರಾಟ,

ಕೃಷ್ಣನಿಗೆ ಹುಡುಗಾಟ, ಅವನಿಗೆ ಪ್ರಾಣ ಸಂಕಟ, ಭಕ್ತನೆಂದು ಕರುಣೆಯಿಂದ ಮೆತ್ತಗಾಗಿ ಏಟುಕೊಟ್ಟರೂ ಅವನ ಎಲುಬು ಪುಡಿ ಪುಡಿಯಾಗ ತೊಡಗಿದವು. ಇಪ್ಪತ್ತೊಂದು ದಿನ ಹೊಡೆತ ತಿಂದು ಮೈಯಲ್ಲ ಮುದ್ದೆಯಾಯಿತು. ಕೊನೆಗೆ ಅವನ ಮಿದುಳಿನಲ್ಲಿ ಏನೋ ಮಿಂಚಿದಂತಾಯಿತು. ಕೂಡಲೇ ಓಡಿ ಬಂದು ಕೃಷ್ಣನ ಕಾಲಿಗೆ ಬಿದ್ದ. ''ನೀನು ನನ್ನ ಸ್ವಾಮಿಯಾದ ರಾಮನೋ! ಅವನ ಇನ್ನೊಂದು ಅವತಾರನೋ! ನಿಜ ಹೇಳು. ಅವನು ಹೊರತು ಬೇರಾರೂ ನನ್ನನ್ನು ಗೆಲ್ಲರಾರರು. ನೀನು ಅವನಾದ ಬಳಿಕ ನಿನ್ನನ್ನಾರೂ ಗೆಲ್ಲಲ್ಲಾರರು. ದೇವ ಗಂಧರ್ವರಿಗೂ ಯಕ್ಷರಕ್ಷರಿಗೂ ನಿನ್ನೊಡನೆ ಹೋರಾಡುವ ಬಲವಿಲ್ಲ. ನಾನಂತೂ ಅಲ್ಪ, ಪಶು, ಕರಡಿ.'' ಆಗ ಕೃಷ್ಣನ ಅಂತಃಕರಣ ತುಂಬಿ ಬಂತು. ''ನೀನು ತಿಳಿದಂತೆ ನಿನ್ನ ರಾಮನೇ ನಾನು. ಭೂಮಿಯ ಹೊರೆಯನ್ನು ಇಳುಹಲಿಕ್ಕಾಗಿ ಕೃಷ್ಣನಾಗಿ ಬಂದಿದ್ದೇನೆ'' ಎಂದು ತಿಳಿಸಿದ. ಪ್ರೀತಿಯಿಂದ ಮೈತುಂಬ ಕೈಯಾಡಿಸಿದ. ಚಂದನ ಸವರಿದಂತಾಯಿತು. ಕರ್ಪುರ ತೈಲದಿಂದ ಪೂಸಿದಂತಾಯಿತು. ಅವನ ಮೈನೋವೆಲ್ಲ ಮಾಯವಾಯಿತು.

## ಸ್ಯಮಂತಕ ಮಣಿ, ಕನ್ಯಾಮಣಿ

ಆಗ ಜಾಂಬವಂತ ಆ ಜಗದೊಡೆಯನಿಗೆ ಮತ್ತೆ ನಮಸ್ಕರಿಸಿದ. ಎಷ್ಟುಸಲ ಅವನ ಪಾದಗಳಿಗೆ ಪೊಡಮಟ್ಟರೂ ಅವನಿಗೆ ತೃಪ್ತಿಯಿಲ್ಲ. ಅವನನ್ನು ಕೈ ಹಿಡಿದು ಕೂಡಿಸಿದ. ಆದರದಿಂದ ತನ್ನ ಮಗಳಾದ ಜಾಂಬವತಿಯನ್ನು ಅರ್ಘ್ಯ ಎಂದು ತಂದು ಒಪ್ಪಿಸಿದ. ಅದು ಅನರ್ಘ್ಯವಾಗಿತ್ತು. ಸ್ಯಮಂತಕ ರತ್ನವನ್ನೂ ತಂದು ಕೃಷ್ಣನ ಕೈಯಲ್ಲಿ ಹಾಕಿ ಕೈಮುಗಿದ. ಅದೇನು ಕೃಷ್ಣನಿಗೆ ಬೇಕಾಗಿರಲಿಲ್ಲ. ಆದರೆ ಅಪಕೀರ್ತಿಯನ್ನು ಕಳೆದುಕೊಳ್ಳಲಿಕ್ಕಾಗಿ ಅದನ್ನೂ ಕೈಕೊಂಡ. ಹೀಗೆ ಕನ್ಯಾರತ್ನ ಸ್ಯಮಂತಕ ರತ್ನ ಎರಡನ್ನೂ ತೆಗೆದುಕೊಂಡು ಜಾಂಬವತನಿಂದ ಬೀಳ್ಕೊಂಡು ಕೃಷ್ಣ ದ್ವಾರಕೆಗೆ ಬಂದ. ಕೃಷ್ಣನನ್ನು ಕಂಡ ದ್ವಾರಕೆಯ ಜನರಿಗೆ ಆನಂದದ ಉದ್ರೇಕವಾಯಿತು. ಹಿಗ್ಗಿನ ಬುಗ್ಗೆಯೇ ಪುಟಿಯತೊಡಗಿತು. ಅವನನ್ನು ನೋಡಿದ ಮುದುಕರಿಗೆ ಹರೆಯ ತಿರುಗಿತು. ಸ್ತ್ರೀಯರಿಗಂತೂ ಸಂತಸ ಉಕ್ಕೇರಿತು. ಯಾದವರೆಲ್ಲರೂ ''ಓಹ ! ನಮ್ಮ ಭಾಗ್ಯ ತೆರೆಯಿತು. ನಮ್ಮ ಪುಣ್ಯ ಒದಗಿತು.'' ಎಂದು ಕೃಷ್ಣನನ್ನು ಕಂಡು ಹರ್ಷಪರವಶರಾಗಿ ಕುಣಿದಾಡಿದರು. ಶ್ರೀ ಕೃಷ್ಣನಾದರೂ ಸತ್ರಾಜಿತನನ್ನು ಹುಡುಕ ಹೊರಟಂದಿನಿಂದ ಅಂದಿನವರೆಗೆ ನಡೆದ ಸಮಾಚಾರವನ್ನೆಲ್ಲ ಯಾದವರ ಸಭೆಯಲ್ಲಿ ತಿಳಿಸಿದನು. ಸತ್ರಾಜಿತನನ್ನು ಕರೆದು ಆ ಸ್ಯಮಂತಕ ಮಣಿಯನ್ನು ಒಪ್ಪಿಸಿದನು. ತನ್ನ ಮೇಲೆ ಬಂದ ಅಪಕೀರ್ತಿಯನ್ನು ತೊಳೆದುಕೊಂಡನು. ಮತ್ತು ಜಾಂಬವತಿಯನ್ನು ತನ್ನ ಅಂತಃಪುರದಲ್ಲಿ ಸೇರಿಸಿಕೊಂಡನು.

ಸತ್ರಾಜಿತನಿಗೆ ಮನದಲ್ಲಿ ಬಹಳ ನಾಚಿಕೆಯಾಯಿತು. 'ಕೃಷ್ಣ ಒಬ್ಬ ಪೂರ್ಣ ಚಂದ್ರ. ಅಂಥ ನಿರ್ದೋಷನಾದ ನರೋತ್ತಮನ ಮೇಲೆ ನಾನು ಇಲ್ಲದ ಅಪವಾದ ಹೊರಿಸಿದೆ. ಸಲ್ಲದ ಕಳ್ಳತನದ ಆರೋಪವನ್ನು ಮಾಡಿದೆ' ಎಂದು, ಅವನಿಗೆ ಪಶ್ಚಾತ್ತಾಪವಾಯಿತು. ತಾನು ಮಾಡಿದ ತಪ್ಪನ್ನು ತೊಳೆದುಕೊಳ್ಳಲಿಕ್ಕಾಗಿ ತನ್ನ ಮಗಳಾದ ಸತ್ಯಭಾಮೆಯನ್ನು

ಕೃಷ್ಣನಿಗೆ ಮದುವೆಮಾಡಿಕೊಟ್ಟನು. ಸತ್ಯಭಾಮೆಯನ್ನು ನೋಡಿದವರಿಗೆ ನೆಲದ ಮೇಲೆ ನಡೆದಾಡುವ ಸಾಕ್ಷಾತ್ ಶ್ರೀದೇವಿಯೇ ಅವಳು ಎನಿಸುತ್ತಿತ್ತು. ಅವಳ ಈ ಸುರೂಪ ಸೌಂದರ್ಯಕ್ಕೆ ಅಕ್ರೂರ ಮರುಳಾಗಿದ್ದ. ಕೃತವರ್ಮ ಮನಸೋತಿದ್ದ. ಶತಧನ್ವ ಮಾರುಹೋಗಿದ್ದ. ಇನ್ನು ಅನೇಕ ಯಾದವರು ಅವಳ ಸಿರಿಸೊಬಗಿಗೆ ಮುಗ್ಧರಾಗಿದ್ದರು. ಅವರೆಲ್ಲರೂ ಈ ಮೊದಲು ಅನೇಕ ಬಾರಿ ಸತ್ರಾಜಿತನ ಬಳಿಗೆ ಹೋಗಿ ಆ ಕನ್ಯಾರತ್ನವನ್ನು ತಮಗೆ ಕೊಡಬೇಕೆಂದು ಕೇಳಿಕೊಂಡರು. ಅವನು ಈಗ ಎಲ್ಲರನ್ನು ಬಿಟ್ಟು ಕೃಷ್ಣನಿಗೆ ತನ್ನ ಕನ್ಯೆಯನ್ನು ಕೊಟ್ಟಾಗ ಅವರಿಗೆಲ್ಲ ಅವಮಾನವಾದಂತಾಯಿತು.

## ಆ ರತ್ನದಿಂದ ಯಾದವರು ರಕ್ಕಸರಾದರು

ಒಂದು ದಿನ ಅಕ್ರೂರ ಕೃತವರ್ಮ ಮೊದಲಾದವರು ಶತಧನ್ವನ ಬಳಿಗೆ ಬಂದರು ಮತ್ತು ಅವನಿಗೆ ಕಿವಿಯಲ್ಲಿ ಗುಟ್ಟಾಗಿ ಹೇಳಿದರು. ''ಮಿತ್ರಾ, ಈ ಸತ್ರಾಜಿತನಂಥ ದುಷ್ಟನಿಲ್ಲ. ಆ ಸತ್ಯಭಾಮೆಯನ್ನು ಮೊದಲು ಕೇಳಿದವರು ನಾವು ಮತ್ತು ನೀನು. ಅವನು ನಮ್ಮ ಪ್ರಾರ್ಥನೆಯನ್ನು ಕಡೆಗಣಿಸಿದ. ನಿನ್ನ ಕೇಳಿಕೆಯನ್ನು ತಿರಸ್ಕರಿಸಿದ. ನಮ್ಮಿಬ್ಬರನ್ನೂ ಬಿಟ್ಟು ಮೂರನೆಯವನಾದ ಮುರಾರಿಗೆ ಮಗಳನ್ನು ಕೊಟ್ಟಿಟ್ಟ. ನಮ್ಮನ್ನು ಅವಮಾನಿಸಿದ ಅವನನ್ನು ನಾವು ಜೀವದಿಂದ ಉಳಿಸಬಾರದು. ಶತಧನ್ವ, ಆ ಸತ್ರಾಜಿತನನ್ನು ಈಗ ಕೊಂದರೆ ಇನ್ನೂ ಒಂದು ಲಾಭ. ಅವನ ಬಳಿಯಲ್ಲಿ ಹೊನ್ನು ಹೆರುವ ರತ್ನರಾಜ ಆ ಸ್ಯಮಂತಕ ಮಣಿಯಿದೆ. ಅವನನ್ನು ಕೊಂದರೆ ದುರ್ಲಭವಾದ ಆ ಮಹಾರತ್ನವೂ ನಮ್ಮ ಕೈಗೆ ಬರುತ್ತದೆ. ಮಿತ್ರಾ, ನೀನೇ ಏಕೆ ಈ ಕೆಲಸ ಮಾಡಬಾರದು ! ನೀನು ಬೇಡಿದರೂ ಕನ್ಯೆಯನ್ನು ಕೊಡದ ಅವನು ನಿನಗೆ ದೊಡ್ಡ ವೈರಿಯೇ ಸರಿ. ಹೆಂಡತಿಯ ಮೇಲಿನ ಅಭಿಮಾನದಿಂದ ಕೃಷ್ಣನೇನಾದರೂ ನಿನ್ನ ಮೇಲೆ ಕೈ ಮಾಡಿದರೆ ನಾವಿದ್ದೇವಲ್ಲ! ಕೃಷ್ಣನಿಗೂ ನಿನಗೂ ವೈರ ಬೆಳೆದರೆ ನಿನ್ನ ಬೆಂಬಲಕ್ಕೆ ನಾವಿದ್ದೇವೆ'' ಎಂದು ಮುಂತಾಗಿ ಬೋಧನೆ ಮಾಡಿದರು. ಹುಂಬನಂತಿದ್ದ ಶತಧನ್ವನು ಅವರ ಮಾತಿನಿಂದ ಸತ್ರಾಜಿತನ ಕೊಲೆ ಮಾಡಲು ಸಿದ್ಧನಾದ.

''ಪಂಚಪಾಂಡವರು ಅರಗಿನ ಮನೆಯಲ್ಲಿ ಬಿದ್ದು ಬೆಂದು ಹೋದರು'' ಎಂಬ ಸುದ್ದಿ ದ್ವಾರಕೆಗೆ ಬಂದಿತು. ಭಗವಂತನಿಗೆ ಗೊತ್ತು ''ಪಾಂಡವರು ಸತ್ತಿಲ್ಲ. ಸುರಕ್ಷಿತವಾಗಿದ್ದಾರೆ.'' ಎಂದು. ಆದರೆ 'ಅವರು ಬದುಕಿ ಇದ್ದಾರೆ ಎಂಬ ಸಮಾಚಾರವನ್ನು ತಿಳಿದು ದುರ್ಯೋಧನನು ಮತ್ತೆ ಅವರನ್ನು ಕೊಲ್ಲಲಿಕ್ಕೆ ಕೈತೊಳೆದುಬೆನ್ನು ಹತ್ತಬಾರದು' ಎಂಬ ಉದ್ದೇಶದಿಂದ ಅವನು ಪಾಂಡವರ ಉತ್ತರ ಕ್ರಿಯೆಗಾಗಿ ವಾರಣಾವತಕ ತೆರಳಿದನು. ಕೃಷ್ಣನು ಅತ್ತ ಹೋದ ಕೂಡಲೇ ಇತ್ತ ಶತಧನ್ವನು ತನ್ನ ಕಾಯಕವನ್ನು ನಡೆಸಿದನು. ರಾತ್ರಿ ಮಲಗಿದಾಗಲೇ ಸತ್ರಾಜಿತನನ್ನು ಕೊಂದು ಆ ಸ್ಯಮಂತಕ ಮಣಿಯನ್ನು ಕದ್ದೊಯ್ದನು. ಬೆಳಗಾಗುವಷ್ಟರಲ್ಲಿ ಹಾಸಿಗೆಯ ಮೇಲೆ ಹೆಣವಾಗಿ ಬಿದ್ದ ತಂದೆಯನ್ನು ನೋಡಿ ಸತ್ಯಭಾಮೆಗೆ ದುಃಖವುಕ್ಕಿತ್ತು. ಕೋಪವೂ ಉಕ್ಕಿತು. ಕೂಡಲೇ ಅವಳು ಮನೋವೇಗದಿಂದ ಓಡುವ ರಥವನ್ನು ಏರಿ ವಾರಣಾವತಕ್ಕೆ ಹೋದಳು. ಕೃಷ್ಣನಿಗೆ ಆ

ಕ್ರೂರ ಸಮಾಚಾರವನ್ನು ತಿಳಿಸಿ ದೀನಗಳಾಗಿ ನುಡಿದಳು. ''ಸ್ವಾಮಿನ್, ನನ್ನನ್ನು ನಿಮಗೆ ಕೊಟ್ಟಿದ್ದೇ ಆ ಶತಧನ್ವನಿಗೆ ಸಹನೆಯಿರಲಿಲ್ಲ. ಆ ಸಿಟ್ಟಿನಿಂದಲೇ ಅವನು ನನ್ನ ತಂದೆಯನ್ನು ಕೊಂದು ಹಾಕಿದ. ಮತ್ತು ಆ ಸ್ಯಮಂತಕ ರತ್ನವನ್ನು ಅಪಹರಿಸಿದನು. ಮೂರು ಲೋಕದ ಕತ್ತಲೆಯನ್ನು ಕಳೆಯಲಿಕ್ಕೆ ಒಂದೇ ಸ್ಯಮಂತಕ ಸಾಕು. ಇಂಥ ರತ್ನವೂ ಹೋಯಿತು. ತಂದೆಯ ಜೀವವೂ ಹೋಯಿತು. ನಾಥ,ಇದು ನಿಮಗೆ ಅವಮಾನವಲ್ಲವೇ? ನನ್ನನ್ನು ಮದುವೆಯಾದ ನಿಮ್ಮ ಮೇಲಿನ ಹೊಟ್ಟೆಕಿಚ್ಚಿನಿಂದಲೇ ಅವನು ಈ ಕರಾಳ ಕೃತ್ಯವನ್ನು ಎಸಗಿದ್ದು. ಇದಕ್ಕಾಗಿ ಈಗ ಏನು ಮಾಡಬೇಕೋ ಮಾಡಿರಿ.''

## ನಿತ್ಯ ತೃಪ್ತನ ನರಲೀಲೆ

ಕೃಷ್ಣನು ನಿತ್ಯ ತೃಪ್ತ. ಸ್ಯಮಂತಕದಂಥ ಒಂದು ಕಲ್ಲು ಇದ್ದರೆ ಹಿಗ್ಗು ಇಲ್ಲ. ಹೋದರೆ ಕುಗ್ಗು ಇಲ್ಲ. ಪೂರ್ಣಕಾಮನಲ್ಲವೇ ಅವನು ! ಆದರೂ ಸತ್ಯಭಾಮೆಯ ಸಂತೋಷಕ್ಕಾಗಿ ಅವನು ಕಣ್ಣು ಕೆಂಪಗೆ ಮಾಡಿ ನುಡಿದ. ''ಸತ್ಯೆ, ಸತ್ಯವಾಗಿಯೂ ಇದು ನನಗೆ ಅವಮಾನ. ನನ್ನನ್ನು ಅಪಹಾಸ ಮಾಡುವ ಆ ದುರುಳನ ಈ ದುಸ್ಸಾಹಸವನ್ನು ನಾನು ಸೈರಿಸಲಾರೆ. ನಾನೀಗಲೇ ಅವನಿದ್ದಲ್ಲಿಗೆ ಹೋಗಿ ಶತಧನ್ವನನ್ನು ಹಿಡಿದು ತರುವೆನು. ಗಿಡವನ್ನು ಏರದೆ ಗೂಡಿನಲ್ಲಿರುವ ಹಕ್ಕಿಗಳನ್ನು ಹೇಗೆ ಹಿಡಿಯಲಾದೀತು !. ಇದರ ಬಗೆಗೆ ಇನ್ನು ನೀನೂ ಏನು ಹೇಳುವ ಕಾರಣವಿಲ್ಲ. ಇನ್ನು ನೀನು ಕಣ್ಣೀರನ್ನು ಕರೆಯಬೇಡ. ದುಃಖವನ್ನು ಮಾಡಬೇಡ.'' ಎಂದು ಸಂತೈಸಿ ಕೃಷ್ಣನು ದ್ವಾರಕೆಗೆ ಬಂದನು. ನೇರವಾಗಿ ಅವನು ಅಣ್ಣ ಬಲರಾಮನ ಮನೆಗೆ ಬಂದು ಹೇಳಿದನು. ''ಅಣ್ಣ, ಪ್ರಸೇನನು ಅಡವಿಯಲ್ಲಿ ಬೇಟೆಗೆ ಹೋದಾಗ ಸಿಂಹವು ಹೊಡೆದು ಕೊಂದಿತು. ಸತ್ರಾಜಿತನನ್ನು ಶತಧನ್ವನು ಸಂಹಾರಮಾಡಿದನು. ಈಗ ಇಬ್ಬರೇ ನಾನು ನೀನು ಅದಕ್ಕೆ ಹಕ್ಕುದಾರರು. ಆದ್ದರಿಂದ ಮೊದಲು ಈಗ ಈ ತೇರನ್ನು ಏರು ಶತಧನ್ವನನ್ನು ಕೊಂದು ಬರೋಣ'' ಅದಕ್ಕೆ ಬಲದೇವನು ಕೂಡಲೇ ಸಮ್ಮತಿಯನ್ನಿತ್ತು ಕೃಷ್ಣನ ಜೊತೆಗೆ ಹೊರಟನು. ಕೃಷ್ಣ-ರಾಮರಿಬ್ಬರೂ ತನ್ನನ್ನೂ ಬೆನ್ನಟ್ಟಿಬರಲಿರುವರು ಎಂಬ ಸಮಾಚಾರವನ್ನು ತಿಳಿದು ಶತಧನ್ವ ಕೃತವರ್ಮನ ಕಡೆಗೆ ಓಡಿ ಬಂದನು. ಮತ್ತು ತನಗೆ ಸಹಾಯಮಾಡಲು ಕೇಳಿಕೊಂಡನು. ಆಗ ಕೃತವರ್ಮನು ಗಾಬರಿಯಾಗಿ ''ಕೃಷ್ಣ ಬಲರಾಮರನ್ನು ಎದುರು ಹಾಕಿಕೊಳ್ಳುವುದು ನನ್ನಿಂದ ಸಾಧ್ಯವಿಲ್ಲ. ಬೇಕಾದರೆ ಅಕ್ರೂರನನ್ನು ಕೇಳು. ಎಂದು ಹೇಳಿದನು.

## ಅಕ್ರೂರನ ಕ್ರೂರ ಉತ್ತರ

ಶತಧನ್ವನು ಅಕ್ರೂರನ ಬಳಿಗೆ ಹೋಗಿ ಮೊದಲು ಮಾತು ಕೊಟ್ಟಂತೆ ಕೃಷ್ಣರಾಮರಿಂದ ತನ್ನನ್ನು ರಕ್ಷಿಸಬೇಕೆಂದು ಕೇಳಿಕೊಂಡನು. ಆಗ ಅಕ್ರೂರನು ನಡುಗುತ್ತಲೇ ನುಡಿದ ''ಛೇ, ಛೇ, ಕೃಷ್ಣನ ಜೊತೆಗೆ ಯುದ್ಧವೇ ! ಅವನ ಕಾಲು ಅಲುಗಿದರೆ ಮೂರು ಲೋಕಗಳೇ ನಡುಗಿ ಹೋಗುತ್ತವೆ. ಅವನ ಸುದರ್ಶನ ಚಕ್ರದಿಂದ ಮಹಾಬಲಿಷ್ಠರಾದ ದೈತ್ಯರೆಲ್ಲ ಮಣ್ಣುಮುಕ್ಕಿ ಹೋಗಿದ್ದಾರೆ. ಅದರಿಂದ ಅನೇಕ ರಕ್ಕಸ

ರಮಣಿಯರ ಮಂಗಳಸೂತ್ರಗಳು ಹರಿದು ಮಣ್ಣುಗೂಡಿವೆ. ಅಂಥ ಭಗವಂತನ ಎದುರು ನಿಂತು ಕಾದುವ ಅದಟು ಅದಾರಿಗಿದೆ? ಇನ್ನು ನೇಗಿಲನ್ನು ಹಿಡಿದು ನಿಂತ ಆ ಬಲರಾಮನನ್ನು ಎದುರಿಸುವವರು ದೇವತೆಗಳಲ್ಲಿ ಕೂಡ ಯಾರೂ ಇಲ್ಲ. ಅವನ ವಿರುದ್ಧ ಯುದ್ಧ ಮಾಡುವ ಸಾಮರ್ಥ್ಯವು ನಮಗೆಲ್ಲಿದೆ ! ಆದುದರಿಂದ ಮತ್ತೆ ಬೇರಾರಿಗಾದರೂ ಶರಣುಹೋಗು.'' ಇನ್ನು ಬೇರಾರೂ ತನ್ನನ್ನು ರಕ್ಷಿಸಲಾರರೆಂದು ಶತಧನ್ವನಿಗೆ ಖಾತರಿಯಾಯಿತು. ನಿರುಪಾಯನಾಗಿ ಅವನು ನುಡಿದನು. 'ನಿನಗೆ ನನ್ನನ್ನು ಕಾಯುವುದು ಸಾಧ್ಯವಿಲ್ಲದಿದ್ದರೆ ಈ ಸ್ಯಮಂತಕಮಣಿಯನ್ನಾದರೂ ಇಟ್ಟುಕೊಂಡು ರಕ್ಷಿಸು'' ಎಂದು ಕೇಳಿಕೊಂಡನು. ಅದಕ್ಕೆ ಅಕ್ರೂರ ಅಂಜುತ್ತ, ಉಸುರಿದ ''ಇದನ್ನು ನಾನು ನನ್ನ ಬಳಿ ಇಟ್ಟು ಕೊಳ್ಳುವುದಕ್ಕಿಂತ ಮೊದಲು ನೀನು ನನಗೊಂದು ವಚನಕೊಡಬೇಕು. 'ಎಂಥ ಪ್ರಸಂಗದಲ್ಲಿಯೂ ಈ ಸ್ಯಮಂತಕವನ್ನು ನನ್ನ ಬಳಿಯಲ್ಲಿಟ್ಟ ಸುದ್ದಿಯನ್ನು ಯಾರಿಗೂ ತಿಳಿಸಬಾರದು. ನಿನಗೆ ಸಾಯುವ ಪ್ರಸಂಗ ಬಂದರೂ ಈ ಗುಟ್ಟನ್ನು ಬಿಟ್ಟುಕೊಡಬಾರದು.' ಹಾಗಿದ್ದರೆ ಮಾತ್ರ ನಾನು ಅದನ್ನು ನನ್ನ ಬಳಿ ಇಟ್ಟುಕೊಂಡು ರಕ್ಷಿಸುತ್ತೇನೆ.'' ಬೇರೆ ಗತಿಗಾಣದ ಶತಧನ್ವನು ಅಕ್ರೂರನು ಹೇಳಿದ್ದಕ್ಕೆಲ್ಲ ಹೂಗುಟ್ಟಿದನು. ಮತ್ತು ಆ ಮಣಿಯನ್ನು ಅಕ್ರೂರನ ಉಡಿಯಲ್ಲಿ ಚೆಲ್ಲಿ ತೇಜಿಯನ್ನೇರಿ ಅಲ್ಲಿಂದ ಪಲಾಯನಗೈದನು. ಶತಧನ್ವನು ಏರಿದ ಕುದುರೆಯು ಗರುಡನಂತೆ ವೇಗಗಾಮಿಯಾಗಿದ್ದಿತು. ನೂರು ಯೋಜನ ಓಡುವುದೆಂದರೆ ಅದಕ್ಕೊಂದು ಆಟ. ಅದನ್ನು ಆರೋಹಣ ಮಾಡಿ ಅವನು ನಾಗಾಲೋಟ ಬಿಟ್ಟ.

## ಕೊಲೆಗಡುಕ ಕಳ್ಳನಿಗೆ ಕೃಷ್ಣನ ಶಾಸ್ತಿ

ಕೃಷ್ಣ ಬಲರಾಮರು ಶತಧನ್ವನನ್ನು ಹಿಡಿದು ತರಲು ರಥವನ್ನು ಏರಿದರು. ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕ ಎಂಬ ನಾಲ್ಕು ಕುದುರೆಗಳು ಅವರ ರಥವನ್ನು ಹೊತ್ತು ಮನೋವೇಗದಿಂದ ಓಡುತ್ತಿದ್ದವು. ಅತ್ಯಲ್ಪ ಕಾಲದಲ್ಲಿಯೇ ಅವರು ಶತಧನ್ವನನ್ನು ಸಮೀಪಿಸಿದರು. ಗಾಳಿವೇಗದಿಂದ ಬೆನ್ನಟ್ಟಿಬರುವ ಆ ರಥವನ್ನು ಕಂಡ ಶತಧನ್ವನು ತನ್ನ ಕುದುರೆಯನ್ನು ಇನ್ನೂ ಓಡಿಸಿದ. ಆದರೆ ಅದರ ಶಕ್ತಿಯೇ ನೂರು ಯೋಜನ ಓಟದ್ದಿದ್ದಿತು. ಅದನ್ನು ಮೀರಿ ಜೋರಿನಿಂದ ಓಡಿಸಿದಾಗ ಅದು ಮಿಥಿಲಾ ರಾಜ್ಯದ ಸೀಮೆಯಲ್ಲಿಯ ಒಂದು ಅರಣ್ಯದಲ್ಲಿ ಕುಸಿದು ಬಿದ್ದಿತು. ಅಲ್ಲಿಯೇ ಅದು ಅಸು ನೀಗಿತು. ಶತಧನ್ವನು ಅದನ್ನು ಅಲ್ಲಿಯೇ ಬಿಟ್ಟು ಪಾದಚಾರಿಯಾಗಿ ಓಡಿದನು. ಅದನ್ನು ನೋಡಿ ಕೃಷ್ಣನು ಬಲರಾಮನಿಗೆ ಹೇಳಿದನು. ''ಅಣ್ಣ, ನೀನು ಈ ರಥದಲ್ಲಿಯೇ ಕುಳಿತಿರು. ನಾನು ಅವನನ್ನು ಓಡುತ್ತ ಬೆನ್ನಟ್ಟಿ ಕೊಂದು ಬರುತ್ತೇನೆ, ಈ ಅರಣ್ಯಭಾಗದ ತೆಗ್ಗು ತೆವರು, ದರಿ ಶಿಖರಗಳನ್ನು ಕಂಡು ಕುದುರೆಗಳು ಬೆದರಿದಂತೆ ತೋರುತ್ತದೆ. ಇದರಿಂದ ಮುಂದೆ ದುರ್ಗಮ ಮಾರ್ಗದಲ್ಲಿ ಈ ರಥವನ್ನು ಹೊಡೆಯುವುದು ಬೇಡ.'' ಅದಕ್ಕೆ ಬಲರಾಮನು ಸಮ್ಮತಿಸಿ ರಥದಲ್ಲಿಯೇ ಕುಳಿತುಕೊಂಡನು. ಇತ್ತ ಕೃಷ್ಣನು ಚಿಗರೆಯಂತೆ ಚಪಲ ಚರಣಗಳಿಂದ ಪಲಾಯನ ಮಾಡುತ್ತಲಿರುವ ಶತಧನ್ವನನ್ನು

ಎರಡು ಕ್ರೋಶಗಳವರೆಗೆ ಬೆನ್ನಟ್ಟಿದನು. ಶತಧನ್ವನು ದೂರದಲ್ಲಿ ಇನ್ನೂ ಮುಂದೆ ಮುಂದೆ ಓಡುತ್ತಲೇ ಇದ್ದನು. ಆಗ ಹರಿಯು ನಿಂತಲ್ಲಿಂದಲೇ ತನ್ನ ಸುದರ್ಶನ ಚಕ್ರವನ್ನು ಗಿರಿಗಿರಿ ತಿರುಗಿಸಿ ಒಗೆದನು. ಅದರಿಂದ ಶತಧನ್ವನ ತಲೆ ಕತ್ತರಿಸಿ ನೆಲಕ್ಕೆ ಬಿದ್ದಿತು. ಅನಂತರ ಕೃಷ್ಣನು ಅಲ್ಲಿಗೆ ಹೋಗಿ ಅವನ ಮೈ ಕೈಗಳನ್ನು ಬಟ್ಟೆ-ಬರೆಗಳನ್ನೂ ಹುಡುಕಿ ನೋಡಿದನು. ಎಲ್ಲಿಯೂ ಸ್ಯಮಂತಕ ಮಣಿಯು ದೊರಕಲಿಲ್ಲ. ಆಗ ಅವನು ಬರಿಗೈಯಿಂದ ಬಲರಾಮನ ಬಳಿಗೆ ಬಂದು ಹೇಳಿದನು. ''ಅಣ್ಣ, ನಾವು ವ್ಯರ್ಥವಾಗಿ ಶತಧನ್ವನನ್ನು ಕೊಂದಂತಾಯಿತು. ಜಗತ್ತಿನಲ್ಲಿಯೇ ಬಹಳ ಬೆಲೆ ಬಾಳುವ ಸ್ಯಮಂತಕ ರತ್ನವು ಅವನ ಬಳಿಯಲ್ಲಿರಲಿಲ್ಲ.''

## ಕಲ್ಲಿಗಾಗಿ ಸೋದರರ ಎದೆ ಕಲ್ಲಾಯಿತು

ಕೃಷ್ಣನ ಈ ಮಾತಿನ ಮೇಲೆ ಬಲರಾಮನಿಗೆ ವಿಶ್ವಾಸವಾಗಲಿಲ್ಲ. ಶತಧನ್ವನ ಬಳಿಯಲ್ಲಿಯ ರತ್ನವನ್ನು ಬಚ್ಚಿಟ್ಟು ಕೃಷ್ಣನು ತನಗೇ ಮೋಸ ಮಾಡುತ್ತಿದ್ದಾನೆಂದು ಅವನಿಗೆ ಸಂಶಯವಾಯಿತು. ಆದುದರಿಂದ ಅವನು ವಾಸುದೇವನನ್ನು ಜರಿದು ನುಡಿದನು. ''ಕೃಷ್ಣ, ಧಿಕ್ಕಾರವಿರಲಿ ನಿನ್ನ ಈ ದ್ರವ್ಯದ ಆಶೆಗೆ. ನೀನು ಇಷ್ಟು ಸ್ವಾರ್ಥಿ ಇರುವಿಯೆಂದು ನನಗೆ ತಿಳಿದಿರಲಿಲ್ಲ. ತಮ್ಮನೆಂದು ನಾನು ನಿನ್ನನ್ನು ಕ್ಷಮಿಸಿದ್ದೇನೆ, ಸರಿ, ಇನ್ನು ನಿನ್ನ ದಾರಿ ನಿನಗೆ. ನನಗೇನು ನಿನ್ನ ದ್ವಾರಕೆಯೂ ಬೇಡ, ಯಾವ ಬಂಧು ಬಳಗವೂ ಬೇಡ. ಸಾಕಾಗಿದೆ ನನಗೆ ಇಂಥ ಬಂಧುಗಳ ಸಹವಾಸ. ನನ್ನ ಮುಂದೆ ನಿನ್ನ ಯಾವ ಆಣೆ ಚೂರಿಗಳೂ ನಡೆಯವು''. ಅದನ್ನು ಕೇಳಿ ಖಿನ್ನನಾದ ಮುರವೈರಿಯು ಅಣ್ಣನಿಗೆ ಬಗೆ ಬಗೆಯಾಗಿ ಬಿನ್ನವಿಸಿದ. ಬಹುಪರಿಯಾಗಿ ಬಾಗಿ ಬೇಡಿಕೊಂಡ. ಆದರೆ ಬಲರಾಮನಿಗೆ ಬಹಳ ಕೋಪ ಬಂದದ್ದರಿಂದ ಅವನು ಕೇಳದೆ ಅಲ್ಲಿಂದ ಮಿಥಿಲಾನಗರಿಯನ್ನು ಪ್ರವೇಶಿಸಿದ. ಮಿಥಿಲೆಯ ಅರಸನಾದ ಜನಕರಾಜನು ಬಲದೇವನಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಆದರಿಸಿದನು. ಸ್ನೇಹದಿಂದ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅವನ ಆದರಾತಿಥ್ಯವನ್ನು ಸ್ವೀಕರಿಸುತ್ತ ಬಲಭದ್ರನು ಅಲ್ಲಿಯೇ ಉಳಿದುಕೊಂಡನು. ವಾಸುದೇವನು ಮರಳಿ ದ್ವಾರಕೆಗೆ ಬಂದನು.

ಬಲರಾಮನು ಕೃಷ್ಣನೊಡನೆ ಕಲಹವಾಡಿ ಮಿಥಿಲೆಯಲ್ಲಿ ಬಂದು ನೆಲೆಸಿದ್ದಾನೆ ಎಂಬ ಸುದ್ದಿಯು ದುರ್ಯೋಧನನಿಗೆ ತಿಳಿದು ಬಂದಿತು. ಕೂಡಲೇ ಅವನು ಮಿಥಿಲಾ ನಗರಕ್ಕೆ ಬಂದು ಬಲರಾಮನ ಶಿಷ್ಯತ್ವವನ್ನು ವಹಿಸಿದನು. ಮತ್ತು ಅವನಿಂದ ಗದಾ ಯುದ್ಧದ ಶಿಕ್ಷಣವನ್ನು ಪಡೆದನು. ಮೂರು ವರ್ಷಗಳಾದ ಬಳಿಕ ಬಭ್ರು, ಉಗ್ರಸೇನ ಮೊದಲಾದ ಯಾದವರು ಬಲರಾಮನ ಬಳಿಗೆ ಹೋಗಿ ''ಕೃಷ್ಣನು ಆ ರತ್ನವನ್ನು ತೆಗೆದುಕೊಂಡಿಲ್ಲ'' ಎಂದು ಪ್ರಮಾಣ ಪೂರ್ವಕವಾಗಿ ಹೇಳಿದರು. ಸ್ಯಮಂತಕ ಸಮಾಚಾರವು ಈ ಕೆಲವು ಯಾದವರಿಗೆ ಪೂರ್ಣವಾಗಿ ತಿಳಿದಿತ್ತು. ಅವರು ಬಲಭದ್ರನಿಗೆ ವಿಶ್ವಾಸವಾಗುವಂತೆ ಹೇಳಿ ಕೃಷ್ಣನ ಮೇಲಿನ ಅವನ ಸಂದೇಹವನ್ನು ದೂರ ಮಾಡಿ ಅವನನ್ನು ದ್ವಾರಕೆಗೆ ಮರಳಿ ಕರೆತಂದರು.

## ಅಕ್ರೂರನ ಅಂಜಿಕೆ, ಹೊಸ ಹಂಚಿಕೆ

ಶತಧನ್ವನು ಆ ಸ್ಯಮಂತಕ ಮಣಿಯನ್ನು ಅಕ್ರೂರನ ಬಳಿಯಲ್ಲಿ ಇಟ್ಟು ಹೋದ ಬಳಿಕ ಅವನಿಗೆ ಹೊಸ ಚಿಂತೆಯೊಂದು ತಲೆದೋರಿತು. ಆ ಸ್ಯಮಂತಕ ರತ್ನವು ಅನುದಿನವೂ ಬಂಗಾರವನ್ನು ಈಯುತ್ತಿತ್ತು. ಅಷ್ಟು ಬಂಗಾರವನ್ನು ಅಟ್ಟಿಸುವುದೆಲ್ಲಿ? ಭಗವದ್ಭಕ್ತನಾದ ಅವನಿಗೆ ಒಂದು ಉಪಾಯ ಹೊಳೆಯಿತು. ಬಾಲ್ಯದಿಂದಲೂ ಧರ್ಮನಿಷ್ಠನಾದ ಅವನು ಆ ಸುವರ್ಣದಿಂದ ನಿರಂತರ ಯಜ್ಞಯಾಗಾದಿಗಳನ್ನು ಮಾಡತೊಡಗಿದನು. ಯಥೇಚ್ಛವಾಗಿ ಅನ್ನದಾನ, ದ್ರವ್ಯದಾನ, ಸುವರ್ಣದಾನಗಳಿಂದ ಅವನ ಯಜ್ಞಗಳು ಜಗತ್ತಿನಲ್ಲೆಲ್ಲ ಪ್ರಸಿದ್ಧವಾದವು. ಈ ಯಜ್ಞಗಳನ್ನು ಕೈಕೊಳ್ಳುವಲ್ಲಿ ಅಕ್ರೂರನಿಗೆ ಇನ್ನೂ ಒಂದು ಉದ್ದೇಶವಿದ್ದಿತು. ''ಯಜ್ಞದಲ್ಲಿ ದೀಕ್ಷೆಯನ್ನು ತೊಟ್ಟು ಕುಳಿತ ಕ್ಷತ್ರಿಯರನ್ನಾಗಲಿ, ವೈಶ್ಯರನ್ನಾಗಲ್ಲಿ ಕೊಂದರೆ ಬ್ರಹ್ಮಹತ್ಯಾಪಾತಕವು ಬರುತ್ತದೆ'' ಎಂದು ಶಾಸ್ತ್ರ ವಚನವಿದೆ. ಆದ್ದರಿಂದ ತಾನು ನಿರಂತರವಾಗಿ ಯಜ್ಞದೀಕ್ಷೆಯನ್ನು ಹೊಂದಿ ಕುಳಿತುಬಿಟ್ಟರೆ ಸ್ಯಮಂತಕವು ತನ್ನಲ್ಲಿದ್ದ ಗುಟ್ಟುರಟ್ಟಾದರೂ ಯಾರೂ ತನ್ನನ್ನು ಬಂದು ಕೊಲ್ಲದಿರಲಿ ಎಂದು ಅವನ ಹಂಚಿಕೆಯಾಗಿದ್ದಿತು. ಆದುದರಿಂದ ಅವನು ಯಜ್ಞ ದೀಕ್ಷೆಯನ್ನು ಮಾಡುತ್ತಲೇ ನಡೆದ. ಸ್ಯಮಂತಕದ ಪುಣ್ಯದಿಂದ ದ್ರವ್ಯಕ್ಕಂತೂ ಕೊರತೆ ಇರಲಿಲ್ಲ. ಮತ್ತು ಅವನು ಸ್ವಯಂ ಭಗವದ್ಭಕ್ತನಾದ್ದರಿಂದ ಭಗವಂತನನ್ನು ಉದ್ದೇಶಿಸಿ ಯಜ್ಞ ದೀಕ್ಷೆಯನ್ನು ಬಿಡಲೇ ಇಲ್ಲ. ಒಂದಾದ ಮೇಲೊಂದರಂತೆ ಅವನು ಹೊಸ ಹೊಸ ಯಜ್ಞಗಳನ್ನು ಮಾಡುತ್ತಲೇ ನಡೆದ ಸ್ಯಮಂತಕದ ಪುಣ್ಯದಿಂದ ದ್ರವ್ಯಕ್ಕಂತೂ ಕೊರತೆ ಇರಲಿಲ್ಲ. ಮತ್ತು ಅವನು ಸ್ವಯಂ ಭಗವದ್ಭಕ್ತನಾದ್ದರಿಂದ ಭಗವಂತನನ್ನು ಉದ್ದೇಶಿಸಿ ಯಜ್ಞ ಮಾಡಲಿಕ್ಕೂ ಅವನಿಗೆ ಬೇಸರವಿಲ್ಲ. ಹೀಗೆ ಅವನು ಅರವತ್ತೆರಡು ವರುಷಗಳವರೆಗೆ ದೀಕ್ಷೆಯ ಕವಚ ತೊಟ್ಟು ನಿರಂತರ ಯಜ್ಞಯಾಗಗಳನ್ನು ಅನುಷ್ಠಾನ ಮಾಡಿದನು. ಸ್ಯಮಂತಕ ರತ್ನವು ಅವನ ಮನೆಯಲ್ಲಿಯೇ ಸುರಕ್ಷಿತವಾಗಿದ್ದಿತು. ಆ ರತ್ನದ ಪ್ರಭಾವದಿಂದ ದ್ವಾರಕಾ ಪಟ್ಟಣದಲ್ಲಿ ಒಮ್ಮೆಯೂ ಬರ ಬೀಳಲಿಲ್ಲ, ಬೇನೆ ಬರಲಿಲ್ಲ, ಸಾವು ಸುಳಿಯಲಿಲ್ಲ. ಬೇರೆ ಯಾವುದೇ ವಿಧವಾದ ತಾಪ ತೊಂದರೆಗಳು ತಲೆ ದೋರಲಿಲ್ಲ.

ಮುಂದೆ ಒಂದು ದಿನ ಅಕ್ರೂರನ ಪಕ್ಷದವರಾದ ಭೋಜರು ಸತ್ವತನ ಮೊಮ್ಮಗನಾದ ಶತ್ರುಘ್ನನನ್ನು ಸಂಹರಿಸಿದರು. ಅದರಿಂದ ಉಳಿದ ಯಾದವರೆಲ್ಲರೂ ಭೋಜರ ಮೇಲೆ ಸಿಟ್ಟಾಗಿ ಸೇಡುತೀರಿಸಿಕೊಳ್ಳುವ ಹವಣಿಕೆಯಲ್ಲಿದ್ದರು. ಅದನ್ನು ತಿಳಿದು ಭೋಜರೆಲ್ಲರೂ ದ್ವಾರಕೆಯನ್ನು ತ್ಯಜಿಸಿ ಸುರಕ್ಷಿತವಾದ ಸ್ಥಳಾಂತರಕ್ಕೆ ತೆರಳಿದರು. ತಮ್ಮ ಆ ಕುಲಜ್ಞಾತಿಗಳ ಜೊತೆಗೆ ಅಕ್ರೂರನೂ ಊರು ಬಿಟ್ಟನು. ಆಗ ದ್ವಾರಕೆಯಲ್ಲಿ ಅಕ್ರೂರನು ಹೋದಕೂಡಲೆ ಕ್ಷಾಮವು ತಲೆದೋರಿತು. ರೋಗ ರುಜಿನಿಗಳು ಹರಡಿದುವು. ಹಾವು ಹುಲಿಗಳು ಹಾಡುಹಗಲೇ ಹರಿದಾಡಿದವು. ಮಳೆಯಿಲ್ಲದ, ಬೆಳೆಬಾರದ, ಜನರಿಗೆ ನೀರಿಲ್ಲದೆ ನರಳುವ ಪ್ರಸಂಗ ಬಂದಿತು. ಮಾರೀಬೇನೆಯು ಉಪದ್ರವವನ್ನು ಪ್ರಾರಂಭ ಮಾಡಿತು.

## ಸರ್ವಜ್ಞನ ಸಂಶಯ, ಅಭಿನಯ

ಆಗ ಶ್ರೀ ಕೃಷ್ಣನು ಬಲರಾಮ ಉಗ್ರಸೇನರಿಂದ ಕೂಡಿಕೊಂಡು ಎಲ್ಲ ಯಾದವರನ್ನು ಕರೆಸಿ ಗುಪ್ತಾಲೋಚನೆಯನ್ನು ಕೈಕೊಂಡನು. ''ಇದೇನು! ನಮ್ಮ ನಾಡಿನಲ್ಲಿ ಒಮ್ಮೆಲೆ ಪ್ರಜಾಪೀಡೆಯು ಪ್ರಾರಂಭವಾಗಿದೆ! ಇದೇಕೆ ಹೀಗಾಯಿತು! ನೀವೆಲ್ಲರೂ ಈ ವಿಷಯದಲ್ಲಿ ಆಲೋಚನೆ ಮಾಡಿರಿ.'' ಆಗ ಅಂಧಕ ಎಂಬ ಯಾದವ ಕುಲದ ಹಿರಿಯನು ಎದ್ದು ನಿಂತು ಹೇಳಿದನು. ''ಈ ಅಕ್ರೂರನ ತಂದೆಯಾದ ಶ್ವಫಲ್ಕನು ಇದ್ದಲ್ಲಿ ಹಿಂದೆ ಬರಗಾಲ ಬರುತ್ತಿದ್ದಿಲ್ಲ. ರೋಗ ರುಜಿನಗಳು ಸನಿಹದಲ್ಲಿಯೂ ಸುಳಿಯುತ್ತಿದ್ದಿಲ್ಲ. ಹಿಂದೊಮ್ಮೆ ಕಾಶೀರಾಜ್ಯದಲ್ಲಿ ಮಳೆಯೇ ಇಲ್ಲದೆ ಭೀಕರವಾದ ಬರ ಬಿದ್ದಿತು. ಆಗ ಕಾಶೀರಾಜನು ಬಂದು ಶ್ವಫಲ್ಕನನ್ನು ತನ್ನ ರಾಜಧಾನಿಯಾದ ವಾರಣಾಸಿಗೆ ಕರೆದುಕೊಂಡು ಹೋದ. ಶ್ವಫಲ್ಕನು ಕಾಶಿಯಲ್ಲಿ ಕಾಲಿರಿಸುವುದೊಂದೇ ತಡ, ಧಾರಾಕಾರವಾಗಿ ಮಳೆ ಸುರಿಯಿತು. ಜನರ ಕಷ್ಟ ಹರಿಯಿತು. ಈ ಮೊದಲು ಕಾಶೀರಾಜನ ಹೆಂಡತಿಯು ಗರ್ಭಿಣಿಯಾಗಿದ್ದಳು. ಅವಳ ಹೊಟ್ಟೆಯಲ್ಲಿ ಒಂದು ಹೆಣ್ಣು ಮಗು ಮೂಡಿತ್ತು. ನವಮಾಸಗಳು ತುಂಬಿದ ಬಳಿಕವೂ ಆ ಹೆಣ್ಣು ಹೊಟ್ಟೆ ಬಿಟ್ಟು ಹೊರೆಗೆ ಬರಲಿಲ್ಲ. ಹನ್ನೆರಡು ವರ್ಷಗಳಾದರೂ ಆ ಕೂಸು ತಾಯಿಯ ಕುಕ್ಷಿಯಲ್ಲಿಯೇ ಕುಳಿತಿತು. ಆಗ ಕಾಶೀರಾಜನು ಗರ್ಭಗತವಾದ ಆ ಮಗುವಿಗೆ ಕೇಳಿದ-

''ಮಗಳೇ! ನೀನೇಕೆ ತಾಯಿಯ ಉದರವನ್ನು ಬಿಟ್ಟು ಹೊರಗೆ ಬರಲೊಲ್ಲಿ? ನಾವೆಲ್ಲರೂ ನಿನ್ನ ಮುಖವನ್ನು ಕಾಣಬೇಕೆಂದು ಉತ್ಸುಕರಾಗಿದ್ದೇವೆ. ನಿನ್ನ ಈ ಪಿಂಡವನ್ನು ಹೊತ್ತು ಈ ಗರ್ಭಭಾರದಿಂದ ನಿನ್ನ ತಾಯಿಯು ಎಷ್ಟು ದಿನ ಕಷ್ಟಪಡಬೇಕು?'' ಅದಕ್ಕೆ ಆ ಮಗುವು ಹೊಟ್ಟೆಯಲ್ಲಿ ಕುಳಿತೇ ಉತ್ತರಿಸಿತು. ''ಅಪ್ಪಾ! ನೀನು ಪ್ರತಿದಿನವೂ ಒಂದೊಂದು ಆಕಳನ್ನು ಒಬ್ಬ ಬ್ರಾಹ್ಮಣನಿಗೆ ದಾನ ಕೊಡುವುದಾದರೆ ನಾನು ಮೂರು ವರುಷದ ಬಳಿಕ ಹೊರಗೆ ಬರುತ್ತೇನೆ. ''ಕಾಶೀ ರಾಜನು ಆ ಕೂಸಿನ ಕರಾರಿಗೆ ಒಪ್ಪಿಕೊಂಡು ಪ್ರತಿನಿತ್ಯವೂ ಒಂದು ಹಸುವನ್ನು ದಾನಕೊಡತೊಡಗಿದನು. ಮೂರು ವರುಷದ ಬಳಿಕ ಆ ಹೆಣ್ಣು ಮಗು ಹುಟ್ಟಿತು.

## ಮಳೆ ತಂದವನಿಗೆ ಮಗಳನ್ನು ಕೊಟ್ಟ

ದಿನವೂ ಒಂದು ಗೋವನ್ನು ದಾನಮಾಡಿಸಿ ಹುಟ್ಟಿದ್ದರಿಂದ ಅವಳಿಗೆ ಗಾಂದಿನೀ ಎಂದು ಹೆಸರನ್ನಿಟ್ಟರು. ಅವಳು ಬೆಳೆದು ಉಪವರಳಾದಾಗ ಕಾಶೀರಾಜನು ಬರಗಾಲವನ್ನು ನಿವಾರಿಸಲಿಕ್ಕಾಗಿ ಶ್ವಫಲ್ಕನನ್ನು ಕರೆತಂದು ಕಾಶಿಯಲ್ಲಿಟ್ಟು ಕೊಂಡಿದ್ದ. ಶ್ವಫಲ್ಕನ ಆಗಮನದಿಂದಲೇ ಕಾಶೀಖಂಡದ ಕ್ಷಾಮವೆಲ್ಲ ಪರಿಹಾರವಾಗಿ ಕ್ಷೇಮವು ಉಂಟಾಗಿತ್ತು. ಅವನ ಈ ಉಪಕಾರಕ್ಕಾಗಿ ಕೃತಜ್ಞನಾದ ಕಾಶೀಪತಿಯು ತನ್ನ ಮಗಳಾದ ಗಾಂದಿನಿಯನ್ನು ಶ್ವಫಲ್ಕನಿಗೆ ಮದುವೆ ಮಾಡಿಕೊಟ್ಟನು. ಅಂಥ ತಾಯಿ ತಂದೆಗಳಿಂದ ಹುಟ್ಟಿದ ಪುಣ್ಯ ಪುರುಷನೇ ನಮ್ಮ ಈ ಅಕ್ರೂರ. ಅವನ ತಂದೆ ನಾಡಿಗೆ ಮಳೆಬೆಳೆಗಳನ್ನು ತರಿಸುವ ಕಲ್ಯಾಣ ಪುರುಷ. ತಾಯಿ ದಿನಕ್ಕೊಂದು ಹಸುವನ್ನು ದಾನ ಮಾಡಿಸಿದ ಮಂಗಳದೇವಿ.

ಅವರಿಬ್ಬರಿಂದ ಜನಿಸಿದ ಈ ಅಕ್ರೂರ. ಇವನೂ ಮಹಾ ಭಗವದ್ಭಕ್ತ. ನಿರಂತರ ಯಜ್ಞಯಾಗಗಳನ್ನು ಮಾಡಿದ ಪುಣ್ಯಾತ್ಮ. ಇಂಥ ಮಹಾಪುರುಷನು ನಮ್ಮ ಊರನ್ನು ಬಿಟ್ಟು ಹೋದ ಬಳಿಕ ಬರ ಬೀಳದೇ ಏನು ಮಾಡೀತು ! ರೋಗಾದಿ ಉಪದ್ರವ ಏಳದೇ ಏನು ಮಾಡೀತು ! ಆದುದರಿಂದ ಮೊದಲು ಹೋಗಿ ಅವನನ್ನು ಇಲ್ಲಿಗೆ ಕರೆತನ್ನಿರಿ. ಅಂಥ ಗುಣಗಳ ಖಣಿಯಲ್ಲಿ ದೋಷದ ಕಣವನ್ನು ಹುಡುಕುವ ಹುಚ್ಚು ಹವ್ಯಾಸ ಸಾಕು.''

ಆ ಯದುವೃದ್ಧನ ಈ ಮಾತನ್ನು ಕೇಳಿ ಕೃಷ್ಣ, ಬಲರಾಮ, ಉಗ್ರಸೇನ ಮೊದಲಾದ ಯಾದವ ಧರೀಣರೆಲ್ಲರೂ ಅಕ್ರೂರನ ತಪ್ಪನ್ನೆಲ್ಲ ಕ್ಷಮಿಸಿ ಅವನು ಇದ್ದಲ್ಲಿಗೆ ಹೋಗಿ ಅವನಿಗೆ ಅಭಯದ ಆಶ್ವಾಸನೆಯನ್ನು ನೀಡಿ ದ್ವಾರಕೆಗೆ ಕರೆ ತಂದರು. ಅಕ್ರೂರನು ಪಟ್ಟಣದ ಅಗಸೆಯ ಬಾಗಿಲಲ್ಲಿ ಹೆಜ್ಜೆಯಿರಿಸಿದಾಗಲೇ ಧೋ ಧೋ ಧೋ ಮಳೆ ಜನರ ಮುಖದಲ್ಲೆಲ್ಲ ಸಂತಸದ ಕಳೆ. ಬೇನೆ, ಬೆಸರಿಕೆ, ಹಾವು, ಸಾವು, ನೋವು, ನರಳಿಕೆ ಎಲ್ಲವೂ ತಮ್ಮಷ್ಟಕ್ಕೆ ತಾವೇ ಶಾಂತವಾದವು. ದೇಶದ ತುಂಬ ಸಿರಿಸಂಪದ, ಸೌಭಾಗ್ಯ, ಶಾಂತಿ, ಸಂತಸಗಳು ತುಳುಕಾಡಿದವು. ಅದರ ಗುಟ್ಟು ಅವನಿಗೇ ಗೊತ್ತು.

## ಅಕ್ರೂರನ ಪವಾಡಗಳ ಗುಟ್ಟು

ಇದನ್ನು ಕಂಡು ಕೃಷ್ಣನಿಗೆ ಬಹಳ ಕೌತುಕವೆನಿಸಿತು. ''ಇದೇನು ಅಕ್ರೂರನ ಪವಾಡವೋ, ಮತ್ತಾವುದೋ ವಸ್ತುವಿನ ಪ್ರಭಾವವೋ? ಅಂಧಕ ಹೇಳಿದ ಮಾತಿನಲ್ಲಿ ನನಗಂತೂ ನಂಬಿಕೆಯಿಲ್ಲ. ಶ್ವಫಲ್ಕ ಗಾಂದಿನಿಯರಿಂದ ಹುಟ್ಟಿದ ಮಾತ್ರಕ್ಕೆ ಅಕ್ರೂರನಲ್ಲಿ ಇಂಥ ಶಕ್ತಿ ಬರಲಿಕ್ಕುಂಟೇ ! ಈಗ ಅವನು ತೋರಿದ ಪ್ರಭಾವ ಸಾಮಾನ್ಯವಲ್ಲ. ಬರೀ ಪುಣ್ಯವಂತರ ಹೊಟ್ಟೆಯಿಂದ ಹುಟ್ಟಿದ ಮಾತ್ರಕ್ಕೆ ಇಂಥ ಸಿದ್ಧಿ ಹೇಗೆ ಬಂದೀತು ? ದುರ್ಭಿಕ್ಷೆ, ಮಾರಿಕಾದಿ ರೋಗರುಜಿನುಗಳನ್ನು ತಡೆಗಟ್ಟಬೇಕಾದರೆ ಮಹಾ ಮಹತ್ತರವಾದ ಪ್ರಭಾವವು ಬೇಕಾಗುವುದು. ಅಂಥ ವಿಲಕ್ಷಣವಾದ ಸಿದ್ಧಿ ಪ್ರಭಾವಗಳನ್ನು ನಾನಂತೂ ಅಕ್ರೂರನಲ್ಲಿ ಕಾಣೆ. ನನ್ನ ದೃಷ್ಟಿಯಲ್ಲಿ ಇಂಥ ಪ್ರಭಾವವಿರುವುದು ಆ ಸ್ಯಮಂತಕ ರತ್ನದಲ್ಲಿ ಮಾತ್ರ. ನಾಡಿನ ಈ ಕ್ಷಾಮ ಕ್ಷೇಮಗಳ ಅನ್ವಯ ವ್ಯತಿರೇಕವನ್ನು ನೋಡಿದಾಗ ಅಕ್ರೂರನಲ್ಲಿ ಆ ಸ್ಯಮಂತಕ ಮಣಿಯೇ ಇರಬಹುದು. ಬಹುದೇಕೆ ! ಇರಲೇಬೇಕು. ಇದರಲ್ಲಿ ಸಂದೇಹವೇ ಇಲ್ಲ. ಇನ್ನು ಒಂದು ವಿಷಯ. ಈ ಅಕ್ರೂರನು ಎಂದಿನಿಂದಲು ಸುದಾಮನ ಸಹೋದರ. ಆದರೆ ಒಂದಾದ ಮೇಲೆ ಒಂದು ಯಜ್ಞಗಳನ್ನು ಮಾಡುತ್ತಲೇ ಇದ್ದಾನೆ. ಹಣವನ್ನು ತೂರುತ್ತಲೇ ಇತ್ತೀಚೆಗೆ ಅವನು ಇದ್ದಾನೆ. ಇಷ್ಟು ಐಶ್ವರ್ಯ ಇವನಲ್ಲಿ ಎಲ್ಲಿಂದ ಬಂತು ! ಉತ್ತರವು ಸ್ಪಷ್ಟವೇ ಇದೆ. ಆ ಸ್ಯಮಂತಕ ರತ್ನವು ಪ್ರತಿದಿನವೂ ಹೊನ್ನವನ್ನು ಈಯುತ್ತದೆ. ಆ ಹಣದಿಂದಲೇ ಈ ಅಕ್ರೂರನ ಎಲ್ಲ ದಾನ ದಕ್ಷಿಣೆಯ ಚೆಲ್ಲಾಟವು ನಿರಂತರ, ನಡೆದಿರುತ್ತದೆ.'' ಎಂದು ಆ ಸರ್ವಜ್ಞಪ್ರಭುವು ಮಾನುಷ ದೃಷ್ಟಿಯಿಂದ ವಿಚಾರಿಸಿ ನಿರ್ಧರಿಸಿಕೊಂಡನು. ಒಂದು ದಿನ ಕೃಷ್ಣನು ಬೇರೊಂದು ನಿಮಿತ್ತದಿಂದ ತನ್ನ ಅರಮನೆಯಲ್ಲಿಯೇ ಎಲ್ಲ ಯಾದವರ ಸಭೆ ಕರೆದನು. ಸಭೆಯಲ್ಲಿ ಮೊದಲೇ

ಘೋಷಿಸಿದ ವಿಷಯಗಳ ಮೇಲಿನ ಚರ್ಚೆ, ಊಹಾಪೋಹ, ನಿರ್ಣಯಗಳೆಲ್ಲ ಮುಗಿದವು. ಅನಂತರ ಶ್ರೀ ಕೃಷ್ಣನು ಅಕ್ರೂರನ ಜೊತೆಗೆ ಲೋಕಾಭಿರಾಮನಾಗಿ ಆ ವಿಷಯ ಈ ವಿಷಯಗಳನ್ನು ಮಾತನಾಡಿ ವಿನೋದವಾಡುತ್ತ ಪರ್ಯಾಯವಾಗಿ ಇಂತು ನುಡಿದನು. ''ಅಕ್ರೂರ, ಶತಧನ್ವನು ಈ ಭೂಮಂಡಲದ ಸಾರದಂತಿರುವ ಆ ಸ್ಯಮಂತಕ ರತ್ನವನ್ನು ನಿನಗೆ ಕೊಟ್ಟದ್ದು, ನಿನ್ನ ಬಳಿಯಲ್ಲಿ ಇಟ್ಟದ್ದು, ನಮ್ಮೆಲ್ಲರಿಗೂ ಗೊತ್ತೇ ಇದೆ. ಇಡೀ ರಾಷ್ಟ್ರಕ್ಕೆಲ್ಲ ಉಪಕಾರಮಾಡುವ ಆ ಅಮೂಲ್ಯವಾದ ಹರಳು ಈಗ ನಿನ್ನಲ್ಲಿಯೇ ಇದೆ. ಇರಲಿ. ಅದಕ್ಕೇನೂ ಆಕ್ಷೇಪಣೆ ನಮ್ಮದಿಲ್ಲ. ಅದು ಅಲ್ಲಿಯೇ ಇರಲಿ. ನಮ್ಮೂರಲ್ಲಿ ಮಾತ್ರ ಇದ್ದರೆ ಸಾಕು. ಅದರ ಫಲವಾದ ವೃಷ್ಟಿ, ತುಷ್ಟಿ ಪುಷ್ಟಿಗಳನ್ನು ನಾವು ಅನುಭೋಗಿಸುತ್ತೇವೆ. ಆದುದರಿಂದ ಅದನ್ನು ನೀನೇ ಇಟ್ಟುಕೊಳ್ಳುವುದಕ್ಕೆ ನಾನೇನು ಬೇಡವೆನ್ನುವುದಿಲ್ಲ. ಆದರೆ ಆ ಸ್ಯಮಂತಕವನ್ನು ಶತಧನ್ವನನನ್ನು ಕೊಂದು ನಾನೇ ಅಪಹರಿಸಿದ್ದೇನೆಂದು ಅಣ್ಣ ಬಲರಾಮನು ನನ್ನ ಮೇಲೆ ಸಂಶಯ ತೆಗೆದುಕೊಂಡಿದ್ದಾನೆ. ಆ ಕಲ್ಲಿನ ಮೂಲಕವಾಗಿ ನಮ್ಮ ಅಣ್ಣನ ಮನವೂ ಕಲ್ಲಾಗಿದೆ. ನಮ್ಮ ಮನೆಯ ವಾತಾವರಣವೇ ಕಹಿಯಾಗಿದೆ. ಆದ್ದರಿಂದ ನಮ್ಮಲ್ಲಿ ಪ್ರೀತಿಯ ವಾತಾವರಣವನ್ನು ನಿರ್ಮಿಸಲಿಕ್ಕಾಗಿ ಒಮ್ಮೆ ಆ ಸ್ಯಮಂತಕ ರತ್ನವನ್ನು ಎಲ್ಲರಿಗೂ ತೋರಿಸಿಬಿಡು.''

## ಅಕ್ರೂರನ ಮಿದು ಮಾತು

ಆ ರತ್ನವನ್ನು ಬಗಲಲ್ಲಿ ಬಚ್ಚಿಟ್ಟುಕೊಂಡು ಅಕ್ರೂರನು ಯೋಚನೆ ಮಾಡಿದನು. ''ಈಗೇನು ಮಾಡಬೇಕು ! ನಾನು ರತ್ನವು ಇಲ್ಲ ಎಂದು ಹೇಳಿದರೆ ಇವರು ಈಗ ಕೇಳಲಾರರು. ಇಲ್ಲಿಯೇ ನನ್ನನ್ನು ಅವರು ಪರೀಕ್ಷೆ ಮಾಡಿದರೆ ಬಟ್ಟೆ ಮುಚ್ಚಿ ಅಡಗಿಸಿಟ್ಟುಕೊಂಡ ಅದು ಎಲ್ಲರ ಕಣ್ಣಿಗೂ ಕಂಡುಬಿಡುವುದು. ದೊಡ್ಡವರ ಜೊತೆಗೆ ಅತೀ ವಿರೋಧವೂ ತರವಲ್ಲ'' ಎಂದೆಲ್ಲ ವಿಚಾರಿಸಿ ಅಕ್ರೂರನು ಸೌಮ್ಯವಾಗಿ ಸರ್ವಜಗತ್ಕಾರಣನಾದ ಆ ಕೃಷ್ಣನಿಗೆ ಹೇಳಿದನು. ''ಭಗವಾನ್ ಶತಧನ್ವನು ನನಗೆ ಈ ರತ್ನವನ್ನು ಒಪ್ಪಿಸಿ ಹೋದನು. ಅದನ್ನು ನೀವು ಕೇಳಿದ ಕೂಡಲೇ ನಿಮಗೆ ಒಪ್ಪಿಸಿ ಬಿಡಬೇಕೆಂದು ನಾನು ನನ್ನ ಬಳಿ ಇಷ್ಟು ದಿನ ಇಟ್ಟುಕೊಂಡು ಕುಳಿತೆ. ಇಂದು ಬರುವಿರಿ, ನಾಳೆ ಬರುವಿರಿ. ಎಂದು ನಿಮ್ಮ ದಾರಿಯನ್ನು ಕಾದು ಕಾದು ಬೇಸತ್ತೆ. ಇದನ್ನು ಇಷ್ಟು ದಿನ ನನ್ನಲ್ಲಿ ಇಟ್ಟುಕೊಂಡಾಗ ನಾನು ಅನುಭವಿಸಿದ ಕಷ್ಟ ಕಾರ್ಪಣ್ಯಗಳಿಗೆ ಮಿತಿ ಇಲ್ಲ. ಅದಕ್ಕಾಗಿ ನನಗೆ ಹಗಲಿರುಳೂ ಚಿಂತೆ. ರಾತ್ರಿ ನಿದ್ರೆ ಇಲ್ಲ. ಹಗಲು ಸಮಾಧಾನವಿಲ್ಲ. ಅದಕ್ಕಾಗಿ ನಾನು ಈವರೆಗೆ ಎಲ್ಲ ಸುಖಸಂಪದಗಳನ್ನು ಬಿಟ್ಟು ಸಂನ್ಯಾಸಿಯಂತಾಗ ಬೇಕಾಯಿತು. ಇಷ್ಟು ವರ್ಷ ನಾನು ಸುಖದ ಮೋರೆ ಕಾಣಲಿಲ್ಲ. ನಾನಾಗಿ ಬಂದು ನಿಮಗೆ ಒಪ್ಪಿಸೋಣವೆಂದರೆ ಅದಕ್ಕೂ ಹೆದರಿಕೆ ''ಇಡೀ ನಾಡಿಗೇ ಕ್ಷೇಮವನ್ನು ಕೊಡುವ ಈ ಬದುಕನ್ನು ಸುಮ್ಮನೇ ಇಟ್ಟುಕೊಂಡಿರಲೂ ನಿನಗೆ ಆಗುವುದಿಲ್ಲವೇ?'' ಎಂದು ಎಲ್ಲಿ ನೀವು ಗದರಿಸುವಿರೋ ಎಂದು ಸಂದೇಹದಿಂದ ಅದನ್ನು ನಿಮಗೆ ತಂದೊಪ್ಪಿಸಲಿಲ್ಲ. ಇಂದು ಇದನ್ನು ನೀವು ಕೇಳಿದ್ದು ಬಹಳ ಒಳ್ಳೆಯದಾಯಿತು. ನನ್ನ ಭಾರ

ಕಡಿಮೆಯಾಯಿತು. ದಯ ಮಾಡಿ ತೆಗೆದುಕೊಳ್ಳಿರಿ. ನಿಮಗೆ ಯಾರಿಗೆ ಬೇಕೋ ಅವರಿಗೆ ಇದನ್ನು ಕೊಡಿರಿ.'' ಅಕ್ರೂರನು ಅದನ್ನು ತನ್ನ ಉಟ್ಟ ಬಟ್ಟೆಯಲ್ಲಿ ಸೆರಗಿಗೆ ಕಟ್ಟಿ ತನ್ನ ಹೊಟ್ಟೆ ಬಚ್ಚಿಟ್ಟಿದ್ದನ್ನು. ಅವನು ಮೆಲ್ಲನೆ ಆ ಬಟ್ಟೆಯನ್ನು ಬಿಚ್ಚಿ ಒಳಗಿನಿಂದ ಒಂದು ಬಂಗಾರದ ಡಬ್ಬಿಯನ್ನು ಹೊರತೆಗೆದನು. ಅದರಲ್ಲಿ ಹಾಕಿಟ್ಟ ಆ ಸ್ಯಮಂತಕ ರತ್ನವನ್ನು ಆ ಯಾದವರ ಸಭೆಯಲ್ಲಿ ತಂದಿರಿಸಿ ತನ್ನ ಬಟ್ಟೆಯನ್ನು ಜಾಡಿಸಿದನು. ಸಭೆಯ ಮಧ್ಯದಲ್ಲಿ ತಂದಿಟ್ಟ ಕೂಡಲೇ ಅದರ ಕಾಂತಿಯ ಕಿರಣಗಳು ಆಸಭೆಯ ಆಸ್ಥಾನದಲ್ಲೆಲ್ಲ ಜಗಜಗಿಸಿ ಬೆಳಗಿದವು. ಆಗ ಅಕ್ರೂರನು. ''ಮಿತ್ರರೇ, ಇದು ಶತಧನ್ವನು ನನಗೆ ಕೊಟ್ಟ ಮಣಿ.ಇದನ್ನು ನಾನು ತಮಗೆ ತಿರುಗಿ ಸಮರ್ಪಿಸಿದ್ದೇನೆ. ಇದು ಯಾರ ಒಡೆತನದ್ದೋ ಅವರು ಇದನ್ನು ತೆಗೆದುಕೊಳ್ಳಲಿ'' ಎಂದು ನುಡಿದನು.

## ಕೃಷ್ಣನ ಔದಾರ್ಯ, ಸ್ಯಮಂತಕದ ಸಮಸ್ಯಾ ಪರಿಹಾರ

ಅದನ್ನು ನೋಡಿ ಅಕ್ರೂರನು ಬಹಳ ಒಳ್ಳೇದು ಮಾಡಿದನೆಂದು ಎಲ್ಲ ಯಾದವರೂ ಅವನನ್ನು ಪ್ರಶಂಸಿಸಿದರು. ಬಲರಾಮನು ''ಈ ಸ್ಯಮಂತಕದ ಮೇಲೆ ಕೃಷ್ಣನಿಗಿಂತ ಹಿರಿಯನಾದುದರಿಂದ ನನಗೆ ಹೆಚ್ಚಿನ ಅಧಿಕಾರವಿದೆ. ಆದುದರಿಂದ ಇದು ನನಗೇ ಬೇಕು'' ಎಂದು ತನ್ನ ಅಪೇಕ್ಷೆಯನ್ನು ತಿಳಿಸಿದನು. ಸತ್ಯಭಾಮೆಯು ''ಇದು ನಮ್ಮ ತಂದೆಯ ಧನ. ಅದಕ್ಕೆ ನಾನೇ ಅಧಿಕಾರಸ್ಥಳು. ಆದ್ದರಿಂದ ಇದು ನನಗೆ ಸೇರಬೇಕಾದದ್ದೇ ನ್ಯಾಯ'' ಎಂದು ತನ್ನ ಹಕ್ಕನ್ನು ಸ್ಥಾಪಿಸಿದಳು. ಇದನ್ನು ನೋಡಿ ಕೃಷ್ಣನಿಗೆ ಧರ್ಮ ಸಂಕಟವಾಯಿತು. ಒಂದೆಡೆ ಅಣ್ಣ, ಇನ್ನೊಂದೆಡೆಗೆ ಆ ಮಣಿಯ ನಿಜವಾದ ಒಡೆಯನ ಮಗಳಾದ ತನ್ನ ಮಡದಿ, ಈಗ ಇಂಥ ಪ್ರಸಂಗದಲ್ಲಿ ಅದನ್ನು ಯಾರಿಗೆ ಕೊಡುವುದು ! ಯಾರಿಗೆ ಬಿಡುವುದು ! ಆದುದರಿಂದ ಅವನು ವಿಚಾರಿಸಿ ಎಲ್ಲ ಯಾದವರ ಎದುರು ಅಕ್ರೂರನಿಗೆ ಹೇಳಿದನು.

''ಅಕ್ರೂರ, ನನ್ನ ಮೇಲಿನ ಸಂಶಯವನ್ನು ಹೋಗಲಾಡಿಸಲಿಕ್ಕಾಗಿ ನಿನ್ನ ಬಳಿ ಇರುವ ಈ ಸ್ಯಮಂತಕ ರತ್ನವನ್ನು ಈ ಯಾದವರಿಗೆಲ್ಲ ತೋರಿಸೆಂದು ಹೇಳಿದೆನು. ನಿನ್ನ ಕೈಯಿಂದ ನಾನು ಇದನ್ನು ಈ ಎಲ್ಲ ಯಾದವರ ಎದುರಿಗೆ ಇರಿಸಿ ಮತ್ತು ಇದರ ಮೇಲೆ ನಮ್ಮ ಅಣ್ಣ ಬಲರಾಮನಿಗೆ ನನಗಿದ್ದಷ್ಟೇ ಅಧಿಕಾರವಿದೆ. ಆದರೆ ವಾಸ್ತವಿಕವಾಗಿ ಇದು ಸತ್ಯಭಾಮೆಯ ಪಿತ್ರಾರ್ಜಿತವಾದ ಆಸ್ತಿ. ಆದುದರಿಂದ ಅದರ ಮೇಲೆ ಅವಳದೇ ಪೂರ್ಣ ಅಧಿಕಾರವಿರುತ್ತದೆ. ಈ ರತ್ನವು ಬಹಳ ಪವಿತ್ರವಾದುದು. ಇದನ್ನು ಧರಿಸುವವರು ಶುಚಿರ್ಭೂತರೂ ಬ್ರಹ್ಮಚರ್ಯಾದಿಗುಣ ಸಂಪನ್ನರೂ ಇರಲೇಬೇಕು. ಅಂಥ ಸದಾಚಾರ ಸಂಪನ್ನರು ಈ ರತ್ನವನ್ನು ಧಾರಣ ಮಾಡಿದರೆ ಇದರಿಂದ ಇಡೀ ರಾಷ್ಟ್ರಕ್ಕೇ ಕಲ್ಯಾಣವಾಗುವುದು. ಸರಿಯಾಗಿ ಬ್ರಹ್ಮಚರ್ಯಾದ ವ್ರತಗಳನ್ನು ಪಾಲಿಸದಿದ್ದವರು ಇದನ್ನು ಧರಿಸಿದರೆ ಅವರಿಗೂ ಘಾತಕ, ರಾಷ್ಟ್ರಕ್ಕೂ ಘಾತಕ. ೧೬೧೦೮ ಹೆಂಡಂದಿರನ್ನು ಕಟ್ಟಿಕೊಂಡ ನನ್ನಲ್ಲಿ ಬ್ರಹ್ಮಚರ್ಯವು ಎಲ್ಲಿಂದ ಬರಬೇಕು ! ನಾನು ಅದನ್ನು ಧರಿಸದೆ ಬಿಟ್ಟಾಗ ಮಹಾಪತಿವ್ರತೆಯಾದ ಆ ಸತ್ಯಭಾಮೆಯಾದರೂ ಆ ರತ್ನವನ್ನು ಹೇಗೆ

ಧರಿಸುವಳು! ನನ್ನ ಅಣ್ಣನಾದ ಬಲರಾಮನಂತೂ ಸೆರೆ ಕುಡಿಯುತ್ತಾನೆ. ಈ ಸ್ಯಮಂತಕವನ್ನು ಧರಿಸುವುದಾದರೆ ಅವನು ಈ ಸೆರೆ ಕುಡಿಯುವುದನ್ನು ನಿಲ್ಲಿಸಬೇಕಾಗುವುದು. ಮತ್ತು ಉಳಿದ ಭೋಗವಿಲಾಸಗಳನ್ನು ಬಿಡಬೇಕಾಗುವುದು. ಅದು ಅವನಿಂದಾಗದ ಕೆಲಸ. ಆದುದರಿಂದ ನಮ್ಮಲ್ಲಿ ಯಾರೂ ಆ ಸ್ಯಮಂತಕ ರತ್ನವನ್ನು ಧರಿಸಲರ್ಹರಿಲ್ಲ. ಆದುದರಿಂದ ಅಕ್ರೂರ! ನಾನು, ಬಲರಾಮ, ಸತ್ಯಭಾಮೆ ಹಾಗೂ ಇಲ್ಲಿ ನೆರೆದ ಯಾದವರೂ ನಿನ್ನನ್ನೇ ಪ್ರಾರ್ಥಿಸುತ್ತೇವೆ. ಈ ದಿವ್ಯ ಮಣಿಯನ್ನು ನೀನೊಬ್ಬನೇ ಧರಿಸಲು ಸಮರ್ಥನಿರುವೆ. ನೀನು ಇದನ್ನು ಧರಿಸಿದಾಗ ಸಕಾಲವೃಷ್ಟಿ, ಸರ್ವದಾ ತುಷ್ಟಿಯಿಂದ ಇಡೀ ರಾಷ್ಟ್ರಕ್ಕೆಲ್ಲ ಉಪಕಾರವಾಗಿದೆ. ಇದು ನಿನ್ನಲ್ಲಿದ್ದರೆ ದೇಶಕ್ಕೆಲ್ಲ ಉಪಕಾರವಾಗುವುದೆಂಬ ಮಾತು ಎಲ್ಲರ ಅನುಭವಸಿದ್ಧವಾಗಿದೆ. ಆದ್ದರಿಂದ ಇಷ್ಟು ದಿನ ಧರಿಸಿದಂತೆ ಈ ಸ್ಯಮಂತಕವನ್ನು ಇನ್ನು ಮುಂದಾದರೂ ನೀನೇ ಧರಿಸು.''

ಶ್ರೀಕೃಷ್ಣನ ಈ ಮಾತನ್ನು ಕೇಳಿ ಅಕ್ರೂರನು ಸಂತೋಷದಿಂದ ಒಪ್ಪಿಕೊಂಡು ಆ ಮಹಾರತ್ನವನ್ನು ಸ್ವೀಕರಿಸಿದನು. ಅಂದಿನಿಂದ ಅಕ್ರೂರನು ಪ್ರಕಟವಾಗಿಯೇ ಆ ಸ್ಯಮಂತಕವನ್ನು ಕೊರಳಲ್ಲಿ ಧರಿಸಹತ್ತಿದನು. ಆಗ ಅವನೊಬ್ಬ ನೆಲದ ಮೇಲೆ ನಡೆದಾಡುವ ನೇಸರನಂತೆ ಕಾಣುತ್ತಿದ್ದನು. ಅಷ್ಟು ಉಜ್ವಲವಾಗಿದ್ದಿತು ಆ ಸ್ಯಮಂತಕದ ದಿವ್ಯ ದೀಪ್ತಿ.

ಶ್ರೀ ಕೃಷ್ಣನ ಮೇಲಿನ ಕಲಂಕವು ತೊಳೆದು ಹೋದ ಈ ಪವಿತ್ರವಾದ ಕತೆಯನ್ನು ನೆನೆದವರಿಗೆ ಎಂದೂ ಅಪವಾದವು ಬರುವುದಿಲ್ಲ. ಇಂದ್ರಿಯಗಳ ಬಲವು ಕುಗ್ಗುವುದಿಲ್ಲ. ಮತ್ತು ಎಲ್ಲ ಪಾಪಗಳೂ ಇದನ್ನು ನೆನಪಿಗೆ ತಂದುಕೊಡುವವರನ್ನು ಬಿಟ್ಟು ಹೋಗುತ್ತವೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಹದಿಮೂರನೇ ಅಧ್ಯಾಯ ಸಂಪೂರ್ಣ*



## ಅನುಮಿತ್ರ ಹಾಗೂ ಅಂಧಕರ ವಂಶಗಳು

## ಅಧ್ಯಾಯ - ೧೪

ವೃಷ್ಣಿಯ ಮೊಮ್ಮಗನಾದ ಅನಮಿತ್ರನಿಗೆ ಶಿನಿ ಎಂಬ ಮಗನಿದ್ದನು. ಆ ಶಿನಿಯಿಂದ ಸತ್ಯಕ. ಸತ್ಯಕನಿಂದ ಸಾತ್ಯಕಿ ಎಂಬ ಮಕ್ಕಳು ಉತ್ಪನ್ನರಾದರು. ಆ ಸಾತ್ಯಕಿಗೆ ಯುಯುಧಾನ ಎಂದೂ ಹೆಸರಿದ್ದಿತು. ಆ ಸಾತ್ಯಕಿಯ ಮಗನೇ ಸಂಜಯ. ಸಂಜಯನ ಮಗ ಕುಣಿ. ಕುಣಿಯಿಂದ ಯುಗಂಧರ. ಇವರಿಗೆಲ್ಲ ಶೈನೇಯರು ಎಂದು ಹೆಸರು. ಇದೇ ಅನಮಿತ್ರನ ವಂಶದಲ್ಲಿ ಪ್ರಶ್ನಿಯು ಜನಿಸಿದನು. ಪೃಶ್ನಿಯ ಮಗನೇ ಶ್ವಫಲ್ಕನು. ಇವನ ವಿಷಯವಾಗಿ ಈ ಮೊದಲೇ ತಿಳಿಸಲಾಗಿದೆ. ಶ್ವಫಲ್ಕನ ಕಿರಿಯ ತಮ್ಮನ ಹೆಸರು ಚಿತ್ರಕ ಶ್ವಫಲ್ಕನಿಂದ ಕಾಶೀರಾಜಕುಮಾರಿಯಾದ ಗಾಂದಿನಿಯಲ್ಲಿ ಅಕ್ರೂರನು ಜನಿಸಿದನು. ಅಕ್ರೂರನಿಗೆ ಬೇರೊಬ್ಬ ಮಲತಾಯಿಯಿಂದ ಉಪಮದ್ಗು, ಮೃದಾ-ಮೃದ, ವಿಶ್ವಾರಿ, ಮೇಜಯ, ಗಿರಿಕ್ಷತ್ರ, ಉಪಕ್ಷತ್ರ, ಶತಘ್ನ, ಅರಿಮರ್ದನ, ಧರ್ಮದೃಕ್, ದೃಷ್ಟಧರ್ಮ, ಗಂಧಮೋಜ, ವಾಹ, ಪ್ರತಿವಾಹ, ಎಂಬ ಸಹೋದರರಿದ್ದರು. ಮತ್ತು ದೇವವಾನ್, ಉಪದೇವ ಎಂಬ ಇಬ್ಬರು ಗಂಡುಮಕ್ಕಳಿದ್ದರು. ಸುತಾರಾ ಎಂಬ ತಂಗಿಯು ಅಕ್ರೂರನಿಗಿದ್ದಳು. ಚಿತ್ರಕನಿಗೆ ಪೃಥು, ವಿಪೃಥು ಎಂದು ಮುಂತಾಗಿ ಅನೇಕ ಮಕ್ಕಳು ಹುಟ್ಟಿದರು.

ಅಂಧಕನಿಗೆ ಕುಕುರ, ಭಜಮಾನ, ಶುಚಿಕಂಬಲ, ಬರ್ಹಿಷ ಎಂದು ನಾಲ್ಕು ಜನ ಮಕ್ಕಳಿದ್ದರು. ಕುಕುರನ ವಂಶದಲ್ಲಿ ಧೃಷ್ಟ, ಕಪೋತರೋಮ, ವಿಲೋಮ, ಅನು, ಆನಕದುಂದುಂಬಿ, ಅಭಿಜಿತ್, ಪುನರ್ವಸು, ಮುಂತಾದ ಮಕ್ಕಳು ಜನಿಸಿದರು. ಪುನರ್ವಸುವಿಗೆ ಆಹುಕ ಎಂಬ ಗಂಡು ಮಗನೂ, ಆಹುಕೀ ಎಂಬ ಹೆಣ್ಣುಮಗಳೂ ಜನಿಸಿದರು. ಆಹುಕನಿಗೆ ದೇವಕ, ಉಗ್ರಸೇನ ಎಂದು ಮಕ್ಕಳಿದ್ದರು. ದೇವಕನಿಗೆ ದೇವವಾನ್, ಉಪದೇವ, ಸಹದೇವ, ದೇವರಕ್ಷಿತ, ಎಂದು ನಾಲ್ಕು ಜನ ಗಂಡು ಮಕ್ಕಳೂ ಶ್ರೀದೇವಾ, ಶಾಂತಿದೇವಾ, ಸಹದೇವಾ ಮತ್ತು ದೇವಕೀ ಎಂಬ ಕನ್ಯೆರೂ ಜನಿಸಿದರು. ಆಹುಕನ ಏಳೂ ಜನ ಹೆಣ್ಣು ಮಕ್ಕಳನ್ನು ವಸುದೇವನು ಮದುವೆಯಾದನು. ಉಗ್ರಸೇನನಿಗೆ ಕಂಸ, ನ್ಯಗೋಧ್ರ, ಸುನಾಮ, ಅನಕಾಹ್ವ, ಶಂಕು, ಸುಭೂಮಿ, ರಾಷ್ಟ್ರಪಾರ, ಯುದ್ಧತುಷ್ಟಿ, ಸುತುಷ್ಟಿಮಾನ್ ಎಂಬ ಹೆಸರಿನ ಗಂಡು ಮಕ್ಕಳೂ ಮತ್ತು ಕಂಸಾ, ಕಂಸವತೀ, ಸುತನು ಮತ್ತು ರಾಷ್ಟ್ರಪಾಲಿಕಾ ಎಂಬ ಹೆಣ್ಣು ಮಕ್ಕಳೂ ಜನಿಸಿದರು.

### ಕೃಷ್ಣನ ತಂದೆ ಹುಟ್ಟಿದಾಗಲೇ ದೇವ ದುಂದುಭಿ

ಭಜಮಾನನ ವಂಶದಲ್ಲಿ ವಿದೂರಥ, ಶೂರ, ಶಮಿ, ಪ್ರತಿಕ್ಷತ್ರ, ಸ್ವಯಂಭೋಜ, ಹೃದಿಕ, ಕೃತವರ್ಮ, ಶತಧನು, ದೇವಾರ್ಹ, ದೇವಗರ್ಭ, ಶೂರ ಮುಂತಾದವರೂ ಹುಟ್ಟಿ ಬೆಳೆದರು. ಶೂರನಿಗೆ ಮಾರಿಷಾ ಎಂಬ ಮಡದಿ ಇದ್ದಳು. ಅವಳಿಂದ ವಸುದೇವನೇ ಮೊದಲಾದ ಹತ್ತು ಜನ ಮಕ್ಕಳು ಹುಟ್ಟಿದರು. ವಸುದೇವನು ಹುಟ್ಟಿದ ಕೂಡಲೇ ಇವನಿಂದಲೇ ಮುಂದೆ ಭಗವಾನ್ ವಾಸುದೇವ ನಾಮಕನಾದ ಪರಮಾತ್ಮನು ಹುಟ್ಟುವನೆಂದು ತಿಳಿದು ಸ್ವರ್ಗವಾಸಿಗಳು ಆನಂದದಿಂದ ದೇವದುಂದುಭಿಗಳನ್ನು

ಮೊಳಗಿಸಿದರು. ಅದರಿಂದ ಅವನಿಗೆ ಆನಕದುಂದುಭಿ ಎಂದೇ ಹೆಸರಾಯಿತು. ಆ ವಸುದೇವನಿಗೆ ದೇವಭಾಗ, ದೇವಶ್ರವ, ಅಷ್ಟಕ, ಕಕುಚ್ಚಕ್ರ, ವತ್ಸಧಾರಕ, ಸೃಂಜಯ, ಶಮಿಕ ಮತ್ತು ಗಂಡೂಷ ಎಂಬ ಒಂಭತ್ತು ಜನ ಅಣ್ಣ ತಮ್ಮಂದಿರಿದ್ದರು. ಮತ್ತು ಪೃಥಾ, ಶ್ರುತಶ್ರವಾ, ಶುತಕೀರ್ತಿ ಶ್ರುತದೇವಾ, ರಾಜಾಧಿದೇವಿ ಎಂದು ಐದು ಸೋದರಿಯರಿದ್ದರು.

ಶೂರನಿಗೆ ಕುಂತಿ ಎಂಬ ಒಬ್ಬ ಗೆಳೆಯನಿದ್ದನು. ಅವನಿಗೆ ಮಕ್ಕಳಿದ್ದಿಲ್ಲ. ಅದರಿಂದ ಕುಂತಿಗೆ ತನ್ನ ಮಗಳಾದ ಪೃಥೆಯನ್ನು ದತ್ತಕ ಕೊಟ್ಟನು. ಆ ಪೃಥೆಯನ್ನು ಪಾಂಡುರಾಜನು ಮದುವೆಯಾದನು. ಆ ಪೃಥಾದೇವಿಯಲ್ಲಿ ಪಾಂಡುವಿಗೆ ಯಮಧರ್ಮ, ವಾಯು, ಇಂದ್ರ ಮುಂತಾದ ದೇವತೆಗಳ ಅನುಗ್ರಹದಿಂದ ಧರ್ಮ, ಭೀಮ, ಅರ್ಜುನ ಎಂಬ ತನುಜರು ಜನಿಸಿದರು. ಮದುವೆಯಾಗುವುದಕ್ಕಿಂತ ಮೊದಲು ಸೂರ್ಯದೇವನ ಪ್ರಸಾದದಿಂದ ಕರ್ಣ ಎಂಬ ಮಗನು ಹುಟ್ಟಿದನು. ಕುಂತೀ ದೇವಿಯ ಸವತಿಯಾದ ಮಾದ್ರಿದೇವಿಯಲ್ಲಿ ನಕುಲ, ಸಹದೇವ ಎಂಬ ಮಕ್ಕಳು ಜನಿಸಿದರು.

ಶ್ರುತದೇವಾಳನ್ನು ಕರೂಷದೇಶದ ದೊರೆಯಾದ ವೃದ್ಧಧರ್ಮನು ಮದುವೆಯಾದನು. ಅವಳಲ್ಲಿ ಅವನಿಗೆ ದಂತವಕ್ತ್ರ ಎಂಬ ದೊಡ್ಡ ದೈತ್ಯನು ಉತ್ಪನ್ನನಾದನು. ಶ್ರುತಕೀರ್ತಿಯನ್ನು ಕೇಕಯ ರಾಜನು ವಿವಾಹವಾದನು. ಸಂತರ್ದನ ಮೊದಲಾದ ಐವರು ಮಕ್ಕಳನ್ನು ಹಡೆದನು. ರಾಜಾಧಿದೇವಿಯು ವಿಂದ, ಅನುವಿಂದ ಎಂಬ ಮಕ್ಕಳನ್ನು ಹಡೆದಳು. ಅವರು ಮುಂದೆ ಆವಂತಿ ದೇಶಕ್ಕೆ ಒಡೆಯರಾದರು. ಶ್ರುತಶ್ರವಾಳನ್ನು ಚೇದಿರಾಜನಾದ ದಮಘೋಷನು ಮದುವೆಯಾಗಿದ್ದನು. ಶಿಶುಪಾಲ ಎಂಬ ಮಗನನ್ನು ಹಡೆದನು.

## ಕೃಷ್ಣ ಮೂರು ಜನ್ಮದ ವೈರಿಗೆ ಮೋಕ್ಷವಿತ್ತ

ಆ ಶಿಶುಪಾಲನು ಪೂರ್ವಜನ್ಮದಲ್ಲಿ ಅತ್ಯಂತ ಬಲಿಷ್ಠನಾದ ದೈತ್ಯರ ಮೂಲ ಪುರುಷನಾದ ಹಿರಣ್ಯಕಶಿಪು ಆಗಿದ್ದನು. ಅವನನ್ನು ನೃಸಿಂಹದೇವರು ಸಂಹರಿಸಿದರು. ಮತ್ತೆ ಆ ಹಿರಣ್ಯಕಶಿಪುವು ಅತ್ಯದ್ಭುತವಾದ ಶೌರ್ಯ, ಸಂಪತ್ತು, ಅಕ್ಷಯ ಪರಾಕ್ರಮ ಮುಂತಾದ ಅನೇಕ ಸದ್ಗುಣಗಳಿಂದೊಡಗೂಡಿ ರಾವಣನಾದನು. ಪರಮಾತ್ಮನ ಕೈಯಿಂದಲೇ ಮರಣ ಹೊಂದಿದ್ದರಿಂದ ಅವನು ರಾವಣನಾಗಿ ಹುಟ್ಟಿ ಬಹುಕಾಲ ಪರ್ಯಂತರ ಆ ಪುಣ್ಯವನ್ನು ಅನುಭವಿಸಿ ಕೊನೆಗೆ ರಾಮರೂಪಿಯಾದ ಶ್ರೀ ಹರಿಯಿಂದ ಸಂಹರಿಸಲ್ಪಟ್ಟನು. ಅದೇ ರಾವಣನೇ ಮತ್ತೆ ಈಗ ದಮಘೋಷನ ಹೊಟ್ಟೆಯಿಂದ ಶಿಶುಪಾಲನೆಂಬ ಹೆಸರಿನಿಂದ ಹುಟ್ಟಿಬಂದನು. ಈ ಶಿಶುಪಾಲ ಜನ್ಮದಲ್ಲಿಯೂ ಭೂಭಾರವನ್ನು ಇಳಿಸಲಿಕ್ಕಾಗಿ ಅವತಾರ ಮಾಡಿದ ಶ್ರೀ ಕೃಷ್ಣನ ಕೈಯಿಂದಲೇ ಮರಣ ಹೊಂದಿದನು. ಪರಮಾತ್ಮನ ಪ್ರಸಾದದಿಂದ ಬಯಸಿದ ಫಲವು ದೊರಕುವಂತೆ, ಅವನಲ್ಲಿ ದ್ವೇಷೋಪಸರ್ಜನ ಭಕ್ತಿಯನ್ನು ಮಾಡಿದ ಸಜ್ಜೀವರಿಗೂ ಆ ಶ್ರೀ ಹರಿಯು ದಿವ್ಯ ಗತಿಯನ್ನು ಕೊಡುವನು.

*ಶ್ರೀ ವಿಷ್ಣುಮಹಾಪುರಾಣದಲ್ಲಿ ಚತುರ್ಥಾಂಶದ ಹದಿನಾಲ್ಕನೇ ಅಧ್ಯಾಯ ಸಂಪೂರ್ಣ*

—o—

ಅಧ್ಯಾಯ - ೧೫

ಮೈತ್ರೇಯ - ಎಲ್ಲ ಧರ್ಮಗಳನ್ನೂ ಬಲ್ಲವರಾದ ಪೂಜ್ಯ ಪರಾಶರರೇ ! ಹರಿಯು ಹಿರಣ್ಯಕಶಿಪುವನ್ನು ಕೊಂದಾಗ ಅವನು ರಾವಣನಾಗಿ ಹುಟ್ಟಿ ದೇವತೆಗಳಿಗೂ ದುರ್ಲಭವಾದ ಮೂರು ಲೋಕದ ಸಾಮ್ರಾಜ್ಯ ಸುಖ ಸಂಪದಗಳನ್ನು ಅನುಭೋಗಿಸಿದ. ಅವನನ್ನು ರಾಮರೂಪದಿಂದ ಸಂಹರಿಸಿದ ಬಳಿಕ ಅವನೇ ಶಿಶುಪಾಲನಾಗಿ ಹುಟ್ಟಿ ಅವನಿಂದಲೇ ಹತನಾಗಿ ಸಾಯುಜ್ಯಮುಕ್ತಿಯನ್ನು ಹೊಂದಿದ. ನಿರಂತರವೂ ಹರಿಯನ್ನು ದ್ವೇಷಿಸತಕ್ಕ ಹಿರಣ್ಯಕಶಿಪು ರಾವಣರಿಗೆ ಎರಡು ಜನ್ಮಗಳಲ್ಲಿ ಅಂಥ ಸುಖಭೋಗ ಭಾಗ್ಯ ಹೇಗೆ ! ಮೂರನೇ ಜನ್ಮದಲ್ಲಿ ಮೋಕ್ಷ ಹೇಗೆ ! ದಯಮಾಡಿ ತಿಳಿಸಬೇಕು.

## ಶಿಶುಪಾಲನ ಹಿಂದಿನ ವೃತ್ತಾಂತ

ಪರಾಶರರು - ಶ್ರೀಹರಿಯು ನರಸಿಂಹರೂಪ ತೆಗೆದುಕೊಂಡು ಹಿರಣ್ಯಕಶಿಪುವನ್ನು ಸಂಹರಿಸಲಿಕ್ಕೆ ಬಂದಾಗ ಅವನಿಗೆ ಇವನು ವಿಷ್ಣು ಎಂದು ಕಲ್ಪನೆ ಬರಲಿಲ್ಲ. ಇದೊಂದು ಪುಣ್ಯ ಪರಿಪಾಕದಿಂದ ಉದಿಸಿ ಬಂದ ಮಹಾಪ್ರಾಣಿ ಎಂದು ಅವನ ಮನಸ್ಸಿನಲ್ಲಿ ವಿಚಾರ ಬಂದಿತು. ಆದರೂ ನರಸಿಂಹದೇವರ ಕೈಯಿಂದ ಅವನಿಗೆ ಸಾವು ಬಂದದ್ದರಿಂದ ಆ ಪುಣ್ಯದಿಂದ ಅವನು ರಾವಣನಾಗಿ ಹುಟ್ಟಿ ರಾಜ್ಯೈಶ್ವರ್ಯಗಳನ್ನು ಭೋಗಮಾಡಿದ. ಸೀತೆಯನ್ನು ಕದ್ದ ಅವನನ್ನು ರಾಮ ರೂಪದಿಂದ ಶ್ರೀ ಹರಿಯು ಕೊಲ್ಲಬಂದಾಗ ಇವನೊಬ್ಬ ಮನುಷ್ಯ ಎಂಬ ಬುದ್ಧಿಯಿದ್ದಿತು. ಅವನು ವಿಷ್ಣು ಎಂಬ ಭಾವ ಬರಲೇ ಇಲ್ಲ. ಆಗಲೂ ರಾಮನ ಹಸ್ತದಿಂದ ಮರಣಹೊಂದಿದ್ದ ಪುಣ್ಯದಿಂದ ಪೊಡವಿಯಾಣ್ಮರಿಂದ ಹೊಗಳಲ್ಪಡುವ ಚೇದಿರಾಜರ ವಂಶದಲ್ಲಿ ಜನಿಸಿ ಕೊನೆಯಿಲ್ಲದ ಸಿರಿಸೌಭಾಗ್ಯಗಳನ್ನು ಪಡೆದ.

## ದ್ವೇಷ ಮಾಡಿದವಗೆ ಮುಕ್ತಿ ಎಂತಾಯಿತು !

ಶಿಶುಪಾಲನಿಗೆ ಶಿಶುವಿದ್ದಾಗಿನಿಂದಲೇ ಕೃಷ್ಣನ ಮೇಲೆ ಅತ್ಯಂತ ದ್ವೇಷ. ಕೃಷ್ಣನ ಎಲ್ಲ ಹೆಸರುಗಳಲ್ಲಿಯೂ ಅವನಿಗೆ ತುಂಬ ತಿರಸ್ಕಾರ, ಬೆಳಗಿನಿಂದ ಬೈಗಿನವರೆಗೆ ಬೈಗಿನಿಂದ ಬೆಳಗಾಗುವವರೆಗ ಅವನಿಗೆ ಕೃಷ್ಣನನ್ನು ಬೈಯುವುದೇ ಒಂದು ಉದ್ಯೋಗ. ಹಗಲಿರುಳು ಅವನ ಅನಂತ ನಾಮಗಳನ್ನು ಉಚ್ಚರಿಸುವುದು. ನಿಂದಿಸುವುದು ಅವನ ಸ್ವಭಾವವೇ ಆಗಿಬಿಟ್ಟಿತು. ನಿರಂತರವೂ ಅವನಿಗೆ ಕೃಷ್ಣನದೇ ಧ್ಯಾನ. ಊಟಕ್ಕೆ ಕುಳಿತರೆ ಕಣ್ಣೆದುರೇ ಕೃಷ್ಣ ಸ್ನಾನಕ್ಕಾಗಿ ಬಚ್ಚಲಕ್ಕಿಳಿದರೆ ಅಲ್ಲಿಯೇ ಅಚ್ಯುತ. ಮಲಗಲಿಕ್ಕೆಂದು ಹಾಸಿಗೆಗೆ ಹೋದರೆ ಅಲ್ಲಿಯೂ ಹರಿಯ ರೂಪ. ತಿರುಗಾಡಲಿಕ್ಕೆ ಹೋದರೆ ಅಲ್ಲಿಯೂ ಅವನದೇ ನೆರಳು. ಬೇಸತ್ತು ಕಣ್ಣು ಮುಚ್ಚಿದರೆ ಶಂಖ ಚಕ್ರಹಿಡಿದು ಕಿರೀಟವಿಟ್ಟ ಅದೇ ಕೃಷ್ಣಮೂರ್ತಿ ಕುಲುಕುಲು ನಗುತ್ತ ನಿಂತಿದೆ. ಅವನ ಮನಸ್ಸಿನ ತುಂಬ ವಿಷ್ಣು ಮೂಡಿ ಬಿಟ್ಟಿದ್ದ. ಇದರಿಂದ ಕೆರಳಿದಂತಾದ ಶಿಶುಪಾಲ ಮತ್ತೆ ಮತ್ತೆ ಕೃಷ್ಣನ ಬೇರೆ ಬೇರೆ ಹೆಸರು ಹಿಡಿದು, ಎಲ್ಲ ನಾಮಗಳನ್ನು ನುಡಿದು, ಕೂಗಿ, ಚೀರಿ, ಬೈಯುತ್ತಿದ್ದ.

ಶಿಶುಪಾಲನ ದ್ವೇಷದ ಗಾಢತೆಯು ನಿರಂತರವೂ ಅವನ ನಾಲಿಗೆಯ ಮೇಲೆ ವಿಷ್ಣುವಿನ ನಾಮ ನೆಲಿಸುವಂತೆ ಮಾಡಿತು. ಮತ್ತು ಇಪ್ಪತ್ತು ನಾಲ್ಕು ಗಂಟೆಯೂ ಭಗವದ್ರೂಪವು ಅವನ ಕಣ್ಣಿಗೆ ಕಟ್ಟುವಂತೆ ಮಾಡಿತು. ಹೀಗೆ ನಿರಂತರ ದರ್ಶನ ಮತ್ತು ನಾಮೋಚ್ಚಾರಣೆಗಳ ಪ್ರಭಾವದಿಂದ ಅವನಲ್ಲಿರುವ ಸಚ್ಚೇತನವು ಜಾಗ್ರತಾಗಿ ದ್ವೇಷದೋಷವನ್ನು ಕಳೆದುಕೊಂಡಿತು. ಮರಣ ಕಾಲದಲ್ಲಿ ಭಗವಂತನು ಸುದರ್ಶನ ಚಕ್ರವನ್ನು ಎತ್ತಿ ಹೊಡೆಯ ಬಂದಾಗಲಂತೂ ನಿತ್ಯ ನಿರ್ದೋಷನಾದ ಕೃಷ್ಣನ ಪರಬ್ರಹ್ಮ ಸ್ವರೂಪವನ್ನು ಅವನು ಕಣ್ಣಿಂದ ಕಂಡ. ಬಾಯಿಂದಂತೂ ಭಗವನ್ನಾಮೋಚ್ಚಾರಣ ನಡೆದೇ ಇತ್ತು. ಹೀಗೆ ಅಂತ್ಯಕಾಲದಲ್ಲಿ ನಾಲಿಗೆಯ ಮೇಲೆ ಭಗವಂತ, ಹೃದಯದಲ್ಲಿ ಹರಿ, ಕಣ್ಣೆದುರು ಕೃಷ್ಣ, ಸುದರ್ಶನ ಚಕ್ರದಿಂದ ಸಾವು. ಇವೆಲ್ಲ ಒಂದು ಗೂಡಿದ್ದರಿಂದ ಅವನ ಪಾಪಗಳೆಲ್ಲವೂ ಸುಟ್ಟು ಹೋಗಿ ಕೊನೆಗೆ ಅವನು ಈ ಪರಮಾತ್ಮನಲ್ಲಿಯೇ ಲೀನನಾದನು. ಇದರಿಂದ ಒಂದು ಮಾತು ಸ್ಪಷ್ಟವಾಯಿತು. ಆ ಪರಮಾತ್ಮನನ್ನು ದ್ವೇಷದಿಂದ ಸತತವಾಗಿ ನೆನೆದು ನಾಮೋಚ್ಚರಣ ಮಾಡಿದರೂ ಭಕ್ತಿ ಪಾಕವನ್ನು ಪಡೆದ ಅವರಿಗೇ ದೇವ ದುರ್ಲಭವಾದ ಫಲವನ್ನು ಅವನು ಕೊಡುತ್ತಾನೆ. ಅಂದ ಬಳಿಕ ನಿಜವಾದ ಭಕ್ತಿಯಿಂದ ನೆನೆವವರಿಗೆ ಅವನು ದಯಮಾಡಿ ದಿವ್ಯ ಗತಿಯನ್ನು ಕೊಡುತ್ತಾನೆಂದು ಹೇಳಬೇಕ ! ಆನಕದುಂಧುಬಿ ಎಂದು ಹೆಸರಾದ ವಸುದೇವನಿಗೆ ಪೌರವೀ, ರೋಹಿಣಿ, ಮದಿರಾ, ಭದ್ರಾ, ದೇವಕೀ ಮುಂತಾದ ಅನೇಕ ಜನ ಪತ್ನಿಯರಿದ್ದರು. ರೋಹಿಣಿಯಲ್ಲಿ ಅವನಿಗೆ ಬಲರಾಮ, ಶಠ, ಸಾರಣ, ದುರ್ಮದ ಮುಂತಾದ ಮಕ್ಕಳು ಹುಟ್ಟಿದರು. ಬಲರಾಮನಿಗೆ ರೇವತಿಯಲ್ಲಿ ವಿಶಠ, ಉಲ್ಮುಖ ಎಂಬ ಮಕ್ಕಳೀರ್ವರು ಜನಿಸಿದರು. ಸಾರ್ಷ್ಟಿ, ಮಾರ್ಷ್ಟಿ, ಶಿಶು, ಸತ್ಯ, ಧೃತಿ, ಮುಂತಾದವರು ಸಾರಣನ ಮಕ್ಕಳು, ಮದಿರಾದೇವಿಯಿಂದ ನಂದ, ಉಪನಂದ, ಕೃತಕ ಎಂದು ಕಂದರು ಉದಿಸಿದರು. ಉಪನಿಧಿ, ಗದ ಮುಂತಾದವರು ಭದ್ರಾದೇವಿಯ ಮಕ್ಕಳು, ವೈಶಾಲಿಗೆ ಒಬ್ಬನೇ ಮಗ ಕೌಶಿಕ.

## ದೇವರ ಅವತಾರ, ಜೀವನ ಉದ್ಧಾರ

ವಸುದೇವನಿಗೇ ದೇವಕಿಯಲ್ಲಿ ಕೀರ್ತಿಮಾನ್, ಸುಷೇಣ, ಉದಾಯು, ಭದ್ರಸೇನ, ಋಜುದಾಸ, ಭದ್ರದೇವ ಎಂದು ಆರುಮಕ್ಕಳು ಉತ್ಪನ್ನರಾಗಿದ್ದರೂ ಕಂಸನು ಅವರೆಲ್ಲರನ್ನೂ ಕೊಂದನು. ಅನಂತರ ದೇವಕಿಯು ಏಳನೆಯ ಗರ್ಭವನ್ನು ಧರಿಸಿದಳು. ಆಗ ಪರಮಾತ್ಮನು ಯೋಗಮಾಯೆಯನ್ನು ಕರೆದು ದೇವಕಿಯ ಗರ್ಭದಲ್ಲಿಯ ಆ ಭ್ರೂಣಪಿಂಡವನ್ನು ಸೆಳೆದು ರೋಹಿಣಿಯ ಉದರದಲ್ಲಿಡಲು ಅಪ್ಪಣೆ ಮಾಡಿದನು. ಅದರಂತೆ ಯೋಗ ಮಾಯೆಯು ಆ ಗರ್ಭವನ್ನು ಕರ್ಷಣ ಮಾಡಿ ಸೆಳೆದೊಯ್ದುದ್ದರಿಂದ ಅವನಿಗೆ ಸಂಕರ್ಷಣ ಎಂದು ಹೆಸರಾಯಿತು. ಅನಂತರ ಬ್ರಹ್ಮಾಂಡ ವೃಕ್ಷದ ಬೇರಿನಂತಿರುವ ತುದಿ ಮೊದಲಿಲ್ಲದ ಜಗದೀಶ್ವರನು ದೇವಕಿಯ ಗರ್ಭದಿಂದ ವಾಸುದೇವನಾಗಿ ಅವತರಿಸಿದನು. ವಾಯು, ಬ್ರಹ್ಮ ಮುಂತಾದ ದೇವತೆಗಳು ಭೂಮಿಯು ಭಾರವನ್ನಳಿಸಲು ಅವತಾರ ಮಾಡಬೇಕೆಂದು ಬಾಗಿ ಬೇಡಿಕೊಂಡಿದ್ದರು.

ಅತ್ತ ಗೋಕುಲದಲ್ಲಿ ನಂದಗೋಪನ ಮಡದಿಯಾದ ಯಶೋದೆಯ ಬಸಿರಿನಲ್ಲಿ ಯೋಗ ಮಾಯೆಯು ಮೂಡಿದ್ದಳು. ತಾವರೆಗಣ್ಣಿನ ವಾಸುದೇವನು ಜನಿಸುವಾಗ ಚಂದ್ರ, ಸೂರ್ಯ ಮೊದಲಾದ ಗ್ರಹಗಳು ಬೆಳಗಿದವು. ನಕ್ಷತ್ರಗಳು ತೊಳಗಿದವು. ಭಯಭೀತಿಗಳು ಭೂತಲದಿಂದಲೇ ತೊಲಗಿಹೋದವು. ಜನರ ಹೃದಯ ಪೀಠದಲ್ಲಿ ಶಾಂತಿಯು ಮಂಡಿಸಿತು. ಆ ಮಹಾಪುರುಷ ಮೈದಾಳುವದೊಂದೇ ತಡ. ಪ್ರಪಂಚವೆಲ್ಲವೂ ಸರಿದಾರಿಗೆ ಬಂದಿತು.

ನರರು ನೆಲಿಸಿದ ನೆಲದಲ್ಲಿ ಅವತಾರ ಮಾಡಿದ ಆ ಕೃಷ್ಣ ಪರಮಾತ್ಮನು ದೊಡ್ಡವನಾದ ಬಳಿಕ ಹದಿನಾರು ಸಾವಿರದ ಒಂದು ನೂರು ಎಂಟು ಕನ್ನೆಯರ ಕೈಗೆ ಕಂಕಣ ಕಟ್ಟಿದನು. ಅವರಲ್ಲಿ ರುಕ್ಮಿಣೀ, ಸತ್ಯಭಾಮಾ, ಜಾಂಬವತೀ, ಚಾರುಹಾಸಿನೀ ಮುಂತಾದ ಎಂಟು ಜನ ಮಡದಿಯರು ಅಷ್ಟಮಹಿಷಿಯರೆನಿಸಿದರು. ಇಷ್ಟು ಮಡದಿಯರಿಂದ ಕೃಷ್ಣನಿಗೆ ಆದ ಮಕ್ಕಳು ಅಸಂಖ್ಯ. ಅವರಲ್ಲಿ ಪ್ರದ್ಯುಮ್ನ, ಚಾರುದೇಷ್ಣ, ಸಾಂಬ ಮೊದಲಾದ ಹದಿಮೂರು ಜನ ಪುತ್ರರು ಪ್ರಧಾನರಾಗಿದ್ದರು. ರುಕ್ಮಿಣಿಯ ಮಗನಾದ ಪ್ರದ್ಯುಮ್ನನು ತನ್ನ ಸೋದರ ಮಾವ ರುಕ್ಮಿಯ ಕನ್ಯೆಯಾದ ರುಕ್ಮವತಿಯನ್ನು ವಿವಾಹವಾದನು. ಅವರಿಬ್ಬರಿಂದ ಜನಿಸಿದ ಅನಿರುದ್ಧನು ರುಕ್ಮಿಯ ಮೊಮ್ಮಗಳಾದ ಸುಭದ್ರೆಯನ್ನು ಮದುವೆಯಾದನು. ಅನಿರುದ್ಧನ ಮಗ ವಜ್ರ. ವಜ್ರನಿಂದ ಪ್ರತಿಬಾಹು. ಅವನ ಮಗ ಸುಚಾರು. ಹೀಗೆ ಅನೇಕ ನೂರು, ಸಾವಿರ, ಲಕ್ಷ ಸಂಖ್ಯೆಯಲ್ಲಿ ಬೆಳೆದ ಯದುಕುಲದ ಪ್ರಜೆಗಳ ಗಣನೆಯನ್ನು ನೂರು ವರ್ಷ ಹೇಳಿದರೂ ತೀರುವದಿಲ್ಲ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಯಾದವರ ಚಿಕ್ಕದೊಡ್ಡ ಮಕ್ಕಳಿಗೆ ವಿದ್ಯೆಯನ್ನು ಕಲಿಸುವ ಶಿಕ್ಷಕರು ಮೂರು ಕೋಟಿಯ ಮೇಲಿದ್ದರು. ಅಂಥ ಯಾದವರ ಎಣಿಕೆಯನ್ನು ಯಾವನು ಮಾಡಬಲ್ಲನು ! ಹಿಂದೆ ಸುರಾಸುರ ಸಂಗ್ರಾಮದಲ್ಲಿ ಹತರಾದ ದೈತ್ಯರೆಲ್ಲರೂ ಮನುಷ್ಯ ಲೋಕದಲ್ಲಿ ಜನರಿಗೆ ಉಪದ್ರವವನ್ನು ಕೊಡಲಿಕ್ಕಾಗಿ ರಾಜರಾಗಿ ಹುಟ್ಟಿ ಬಂದಿದ್ದರು. ಅವರನ್ನೆಲ್ಲ ಸಂಹರಿಸಿ ಭೂಭಾರವನ್ನು ಕಡಿಮೆಮಾಡಲು ಅವತರಿಸಿದ ಶ್ರೀಕೃಷ್ಣನ ಭಗವತ್ ಕಾರ್ಯದಲ್ಲಿ ಸೇವೆಯನ್ನು ಸಲ್ಲಿಸಿ ಕೃತಾರ್ಥರಾಗಬೇಕೆಂದು ದೇವತೆಗಳು ಯದು ವಂಶದಲ್ಲಿ ಹುಟ್ಟಿ ಬಂದರು. ಒಂದು ನೂರಾ ಒಂದು ಕುಲಗಳಾಗಿ ಕವಲೊಡೆದ ಆ ಯದುವಂಶದ ಯಾದವರನ್ನೆಲ್ಲ ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನೇ ನಿಯಂತ್ರಿಸುತ್ತಿದ್ದನು. ಅವನ ನೇತೃತ್ವದಲ್ಲಿ ಯಾದವ ವಂಶವು ಎಲ್ಲ ವಿಧದಿಂದ ಅಭಿವೃದ್ಧಿಯನ್ನು ಹೊಂದಿತು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಹದಿನೈದನೇ ಅಧ್ಯಾಯ ಸಂಪೂರ್ಣ*

—o—

## ತುರ್ವಸುವಿನ ವಂಶ

ಅಧ್ಯಾಯ - ೧೬

**ಪರಾಶರ** - ಯಯಾತಿಯ ಹಿರಿಯಮಗನಾದ ಯದುವಿನ ವಂಶವನ್ನು ಸಂಕ್ಷೇಪವಾಗಿ ಹೇಳಿದ್ದಾಯಿತು. ಯದುವಿನ ಸೋದರನಾದ ತುರ್ವಸುವಿನ ವಂಶದಲ್ಲಿ ವಹ್ನಿ, ಭಾರ್ಗ, ಭಾನು, ತ್ರಯೀಸಾನು, ಕರಂಧಮ, ಮರುತ್ ಎಂಬ ರಾಜರಾದರು. ಮರುತ್‌ನಿಗೆ ಮಕ್ಕಳಿರಲಿಲ್ಲ. ಆದುದರಿಂದ ಪುರುವಂಶದ ದುಷ್ಯಂತನನ್ನು ಅವನು ತನ್ನ ಮಗನನ್ನಾಗಿ ಮಾಡಿಕೊಂಡನು. ಹೀಗೆ ಯಯಾತಿಯ ಶಾಪದಿಂದ ತುರ್ವಸುವಿನ ವಂಶವು ಪುರುವಂಶವನ್ನು ಆಶ್ರಯಿಸಿ ಬೆಳೆಯಿತು.

## ದ್ರುಹ್ಯುವಿನ ವಂಶ

ಯಯಾತಿಯ ಮತ್ತೊಬ್ಬ ಮಗನಾದ ದ್ರುಹ್ಯುವಿನ ವಂಶದಲ್ಲಿ ಬಭ್ರು, ಸೇತು, ಆರಬ್ಧ, ಗಾಂಧಾರ, ಧರ್ಮ, ಘೃತ, ದುರ್ದಮ, ಪ್ರಚೇತ ಮುಂತಾದ ರಾಜರು ಹುಟ್ಟಿ ಬೆಳೆದರು. ಪ್ರಚೇತಸನ ಮಗನಾದ ಶತಧರ್ಮನು ಉತ್ತರ ದಿಕ್ಕಿನಲ್ಲಿರುವ ಮ್ಲೇಂಛರಿಗೆಲ್ಲ ಒಡೆಯನಾಗಿ ಅವರ ಸಾಮ್ರಾಜ್ಯವನ್ನಾಳಿದನು.

## ಆನುವಿನ ಕುಲ

ಯಯಾತಿಯ ನಾಲ್ಕನೇ ಮಗನಾದ ಆನುವಿಗೆ ಸಭಾನಲ, ಚಕ್ಷು, ಪರಮೇಷು, ಎಂದು ಮೂವರು ಮಕ್ಕಳಾದರು. ಸಭಾನಲನಿಂದ ಮುಂದೆ ಆ ವಂಶದಲ್ಲಿ ಕಾಲಾನಲ, ಸೃಂಜಯ, ಪುರಂಜಯ, ಜನಮೇಜಯ, ಮಹಾಶಾಲ, ಮಹಾಮನ ಮುಂತಾದ ರಾಜರಾದರು. ಮಹಾಮನನಿಗೆ ಉಶೀನರ, ತಿತಿಕ್ಷು ಎಂದು ಇಬ್ಬರು ಮಕ್ಕಳು. ಉಶೀನರನಿಗೆ ಐವರು ಮಕ್ಕಳು. ಶಿಬಿ, ನೃಗ, ನರ, ಕ್ರಿಮಿ, ವರ್ಮ. ಶಿಬಿಯ ಹೊಟ್ಟೆಯಿಂದ ವೃಷುದರ್ಭ, ಸುಮತಿ, ಕೇಕಯ, ಮದ್ರಕ ಎಂದು ನಾಲ್ಕು ಮಕ್ಕಳಾದರು. ಉಶೀನರನ ತಮ್ಮನಾದ ತಿತಿಕ್ಷುವಿಗೆ ರುಶದ್ರಥ ಎಂಬ ಒಬ್ಬ ಮಗನಿದ್ದನು. ಅವನ ಮಗನಾದ ಹೇಮನಿಗೆ ಸುತಪನು ಪುತ್ರನಾದನು. ಆ ಸುತಪನ ಮಗನೇ ಬಲಿ. ಈ ಬಲಿಯ ಹೆಂಡತಿಯಲ್ಲಿ ದೀರ್ಘತಮ ಎಂಬ ಮುನಿಯ ದಯೆಯಿಂದ ಅಂಗ, ವಂಗ, ಕಲಿಂಗ, ಸುಹ್ಮ, ಪೌಂಡ್ರ ಎಂಬ ಐವರು ಮಕ್ಕಳು ಹುಟ್ಟಿದರು. ಈ ಬಲಿ ಪುತ್ರರು ಆಳಿದ ನಾಡುಗಳಿಗೆ ಈಗಲೂ ಅವರ ಹೆಸರುಗಳೇ ಉಳಿದುಕೊಂಡಿವೆ. ಅಂಗನಿಂದ ಮುಂದೆ ಅನಪಾನ, ದಿವಿರಥ, ಧರ್ಮರಥ, ಚಿತ್ರರಥ, ರೋಮಪಾದ ಮುಂತಾಗಿ ವಂಶಾಭಿವೃದ್ಧಿಯು ಆಯಿತು. ರೋಮಪಾದನಿಗೆ ಹೆಣ್ಣು ಸಂತತಿಯಿರಲಿಲ್ಲ. ಆದುದರಿಂದ ಅವನ ಮಿತ್ರನಾದ ದಶರಥಮಹಾರಾಜನು ತನ್ನ ಮಗಳಾದ ಶಾಂತಾಳನ್ನು ರೋಮಪಾದನಿಗೆ ದತ್ತು ಕೊಟ್ಟನು.

ರೋಮಪಾದನ ಮಗನಾದ ಚತುರಂಗನಿಗೆ ಪೃಥುಲಾಕ್ಷ ಮಗ. ಅವನ ಮಗ ಚಂಪ. ಈ ಚಂಪನೇ ಚಂಪಾನಗರಿಯನ್ನು ನಿರ್ಮಿಸಿದನು. ಈ ಚಂಪನಿಂದ ಮುಂದೆ ಹರ್ಯಂಗ, ಭದ್ರರಥ, ಬೃಹದ್ರಥ, ಬೃಹತ್‌ಕರ್ಮ, ಬೃಹದ್ಭಾನು, ಬೃಹನ್ಮನ, ಜಯದ್ರಥ ಎಂದು

ಮುಂತಾಗಿ ಪ್ರಜೆಗಳು ಹುಟ್ಟಿದರು. ಜಯದ್ರಥನು ಬ್ರಾಹ್ಮಣ ಕ್ಷತ್ರಿಯ ಸಾಂಕರ್ಯದಿಂದ ಹುಟ್ಟಿದ ಮಡದಿಯಲ್ಲಿ ವಿಜಯ ಎಂಬ ಮಗನನ್ನು ಹಡೆದನು. ವಿಜಯನಿಂದ ಧೃತಿ, ಧೃತಾವ್ರತ, ಸತ್ಯಕರ್ಮ, ಅಧಿರಥ ಎಂದು ಮುಂತಾಗಿ ಈ ವಂಶವು ಬೆಳೆಯಿತು. ಅಧಿರಥನು ಒಂದು ದಿನ ಗಂಗಾನದಿಗೆ ಸ್ನಾನಕ್ಕೆ ಹೋದಾಗ ನೀರಿನ ಪ್ರವಾಹದಲ್ಲಿ ಒಂದು ಪೆಟ್ಟಿಗೆಯ ತೇಲಿಬರುತ್ತಿತ್ತು. ಅದನ್ನು ತೆಗೆದುಕೊಂಡು ತೆರೆದು ನೋಡಿದಾಗ ಅದರಲ್ಲಿ ಕುಂತಿಯು ಕನ್ಯಾವಸ್ಥೆಯಲ್ಲಿ ಹಡೆದ ಮಗು ಕರ್ಣನು ಕಾಣಿಸಿದನು. ಅವನನ್ನು ಅಧಿರಥನು ತನ್ನ ಮಗನೆಂದು ಬೆಳೆಸಿದನು. ಆ ಕರ್ಣನ ಮಗನೇ ವೃಷಸೇನ.

## ಪುರುವಿನ ವಂಶ

ಯಯಾತಿಯ ಮೆಚ್ಚಿನ ಮಗನಾದ ಪುರುವಿನಿಂದ ಆ ವಂಶವು ಜನಮೇಜಯ, ಪ್ರಚಿನ್ವಾನ್, ಪ್ರವೀರ, ಮನಸ್ಯು, ಅಭಯದ, ಸುದ್ಯು, ಬಹುಗತ, ಸಂಯಾತಿ, ಅಹಂಯಾತಿ, ರೌದ್ರಾಶ್ವ ಇತ್ಯಾದಿಯಾಗಿ ಮುಂದುವರೆಯಿತು. ರೌದ್ರಾಶ್ವನಿಗೆ ಹತ್ತು ಜನ ಮಕ್ಕಳು ಋತೇಷು, ಕಕ್ಷೇಷು, ಸ್ಥಂಡಿಲೇಷು, ಕೃತೇಷು, ಜಲೇಷು, ಧರ್ಮೇಷು, ಧೃತೇಷು, ಸ್ಥಲೇಷು, ಸನ್ನತೇಷು, ವನೇಷು ಎಂದು ಅವರ ಹೆಸರು. ಋತೇಷುವಿಗೆ ಅಂತಿನಾರನೆಂಬ ಮಗನು ಹುಟ್ಟಿದನು. ಅಂತಿನಾರನಿಗೆ ಸುಮತಿ, ಅಪ್ರತಿರಥ, ಧ್ರುವ ಎಂದು ಮೂವರು ಮಕ್ಕಳು. ಅಪ್ರತಿರಥನ ಮಗ ಕಣ್ವ, ಕಣ್ವನ ಪುತ್ರ ಮೇಧಾತಿಥಿ. ಆ ಮೇಧಾತಿಥಿಯ ಸಂತತಿಯವರು ತಮ್ಮ ಅಧ್ಯಾತ್ಮ ವಿದ್ಯಾಪಾಂಡಿತ್ಯದಿಂದ ಕಾಣ್ವಾಯನ ಎಂಬ ಬ್ರಾಹ್ಮಣರಾದರು. ಅಪ್ರತಿರಥನಿಗೆ ಐಲೀನನೆಂಬ ಮತ್ತೊಬ್ಬ ಮಗನಿದ್ದನು. ಆ ಐಲೀನನಿಗೆ ದುಷ್ಯಂತನೇ ಮೊದಲಾದ ನಾಕು ಜನ ಮಕ್ಕಳು ಜನಿಸಿದರು. ದುಷ್ಯಂತನ ಮಗನೇ ಚಕ್ರವರ್ತಿಯಾದ ಭರತನು. ಶಕುಂತಲಾ ದುಷ್ಯಂತರ ಪ್ರಣಯ ಕತೆಯು ಶ್ಲೋಕಬದ್ಧವಾಗಿ ಜನರ ಬಾಯಲ್ಲಿ ಈಗಲೂ ನಲಿಯುತ್ತಲಿದೆ.

## ದುಷ್ಯಂತ - ಶಕುಂತಲಾ

ದುಷ್ಯಂತನು ಬೇಟೆಯಾಡಲಿಕ್ಕೆಂದು ಅರಣ್ಯಕ್ಕೆ ಹೋದಾಗ ನೀರಡಿಸಿ ಕಣ್ವರ ಆಶ್ರಮವನ್ನು ಪ್ರವೇಶಿಸಿದನು. ಮುನಿಗಳು ಆಶ್ರಮದಲ್ಲಿರಲಿಲ್ಲ. ಅಲ್ಲಿ ಅವರ ಸಾಕು ಮಗಳಾದ ಶಕುಂತಲೆಯ ಸೌಂದರ್ಯಕ್ಕೆ ಮುಗ್ಧನಾಗಿ ಅವಳನ್ನು ಗಾಂಧರ್ವ ವಿಧಿಯಿಂದ ಲಗ್ನನಾದನು. ನಿನ್ನನ್ನು ಕರೆತರಲು ಪರಿಚಾರಕರನ್ನು ಕಳಿಸುತ್ತೇನೆಂದು ಹೇಳಿ ರಾಜಧಾನಿಗೆ ತೆರಳಿದನು. ಯಾರನ್ನು ಕಳಿಸಲಿಲ್ಲ. ಶಕುಂತಲೆಗೆ ದುಷ್ಯಂತನಿಂದ ಭರತನೆಂಬ ಮಗನು ಆಶ್ರಮದಲ್ಲಿಯೇ ಜನಿಸಿದನು. ಆ ಮಗನನ್ನು ಮುಂದೆ ಮಾಡಿಕೊಂಡು ಅವಳು ದುಷ್ಯಂತನ ಆಸ್ಥಾನಕ್ಕೆ ಬಂದಾಗ ದುಷ್ಯಂತನು ಗುರುತು ಹತ್ತಿದರೂ ಗುರುತೇ ಇಲ್ಲದವರಂತೆ ಅವಳನ್ನು ತಿರಸ್ಕರಿಸಿದನು. ಆಗ ಶಕುಂತಲೆಯು ದಿಟ್ಟತನದಿಂದ ಮಹಾರಾಜನಿಗೆ ಉತ್ತರಕೊಟ್ಟು ''ನಾನು ನಿನ್ನ ಮಡದಿ. ಇವನು ನಿನ್ನ ಮಗ. ಇವನನ್ನು ರಕ್ಷಿಸುವುದು ನಿನ್ನ ಕರ್ತವ್ಯ'' ಎಂದು ಹೇಳಿದಳು. ದೇವತೆಗಳು ಇದನ್ನು ಅನುಮೋದಿಸಿದರು.

''ಮಾತಾ ಭಸ್ತ್ರಾ ಪಿತುಃ ಪುತ್ರೋ ಯೇನ ಜಾತಃ ಸ ಏವ ಸಃ ।
ಭರಸ್ವ ಪುತ್ರಂ ದುಷ್ಯಂತ ಮಾ ಽ ವಮಂಸ್ಥಾಃ ಶಕುಂತಲಾಮ್ ॥
ರೇತೋಧಾಃ ಪುತ್ರೋ ನಯತಿ ನರದೇವ ಯಮಕ್ಷಯಾತ್ ।
ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥

''ಮಗನು ಹುಟ್ಟಲಿಕ್ಕೆ ತಾಯಿ ಒಂದು ತೊಗಲಿನ ಚೀಲವಿದ್ದಂತೆ. ತಂದೆಯೋ ತಾನೇ ಅವನು. ಆದುದರಿಂದ ದುಷ್ಯಂತನೇ, ಇವನು ನಿನ್ನ ಮಗ. ಈ ನಿನ್ನ ಮಗನನ್ನು ನೀನೇ ರಕ್ಷಿಸು. ಶಕುಂತಲೆಯನ್ನು ಅವಮಾನಿಸಬೇಡ. ಹೆಂಡತಿಯ ಹೊಟ್ಟೆಯಿಂದ ಹುಟ್ಟಿದ ಮಗನು ಮಾನವರನ್ನು ನರಕದಿಂದ ಪಾರುಮಾಡುತ್ತಾನೆ. ಇದು ನಿನ್ನ ಮಗು. ಶಕುಂತಲೆಯು ಹೇಳಿದ ಮಾತು ಸತ್ಯವಾಗಿದೆ.''

ಈ ದೇವವಾಣಿಯನ್ನು ಕೇಳಿ ದುಷ್ಯಂತನು ಶಕುಂತಲೆಯನ್ನು ಸ್ವೀಕರಿಸಿದನು. ಭರತನನ್ನು ತನ್ನ ಅನಂತರ ಚಕ್ರವರ್ತಿಯನ್ನಾಗಿ ಮಾಡಿದನು. ಭರತನಿಗೆ ಮೂವರು ಮಡದಿಯರಲ್ಲಿ ಒಂಭತ್ತು ಜನ ಮಕ್ಕಳು ಹುಟ್ಟಿದರು. ಹಸುಗೂಸುಗಳ ಮೋರೆಯನ್ನು ನೋಡಿ ಒಂದು ದಿನ ಭರತ ಚಕ್ರವರ್ತಿಯು ''ಇವುಗಳಲ್ಲಿ ಒಂದು ಮಗುವೂ ನನಗೆ ಅನುರೂಪವಾಗಿಲ್ಲ'' ಎಂದು ಸಹಜವಾಗಿ ನುಡಿದ. ಅವನ ಮಾತನ್ನು ಕೇಳಿ ಮೂವರು ರಾಣಿಯರು 'ಈ ವಿದ್ರೂಪ ಮಕ್ಕಳ ಕಾರಣದಿಂದಾಗಿ ಮಹಾರಾಜನು ತಮ್ಮನ್ನು ಎಲ್ಲಿ ಬಿಟ್ಟು ಬಿಡುವನೋ ಎಂಬ ಹೆದರಿಕೆಯಿಂದ ಆ ಒಂಬತ್ತು ಜನ ಮಕ್ಕಳನ್ನೂ ಕತ್ತು ಹಿಚುಕಿ ಹಾಕಿದರು. ಮಡದಿಯರ ಮೂರ್ಖತನದಿಂದ ಹುಟ್ಟಿದ ನವಪುತ್ರರೆಲ್ಲರೂ ನಾಶವನ್ನು ಹೊಂದಲು ಭರತ ಚಕ್ರವರ್ತಿಗೆ ಬಹಳ ದುಃಖವಾಯಿತು. ಅವನು ಸಂತಾನಾಕಾಂಕ್ಷೆ ಯಿಂದ ಮರುತ್ಸೋಮ ಎಂಬ ಯಜ್ಞವನ್ನು ಮಾಡಿದನು. ಉತಥ್ಯಮುನಿಯ ಮಡದಿಯಾದ ಮಮತೆಯು ಗರ್ಭಿಣಿಯಿದ್ದಾಗ ದೀರ್ಘತಮ ಎಂಬ ಮುನಿಯು ಮಮತಾದೇವಿಗೆ ಕಾಲಿನಿಂದ ಒದ್ದನು. ಆ ಪೆಟ್ಟಿನಿಂದ ಮಮತೆಯ ಹೊಟ್ಟೆಯಿಂದ ಬೃಹಸ್ಪತಿಯು ಇರಿಸಿದ ಗರ್ಭವು ಕೆಳಗೆ ಬಿದ್ದು ಭರದ್ವಾಜ ಎಂದು ಹೆಸರಾಯಿತು. ಆ ಮಗುವಿಗೆ ಭರದ್ವಾಜನೆಂದು ಹೆಸರು ಬರಲು ಕಾರಣವಾದ ಪದ್ಯವು ಇಂತಿದೆ.

''ಮೂಢೇ ಭರ ದ್ವಾಜಮಿಮಂ ಭರ ದ್ವಾಜಂ ಬೃಹಸ್ಪತೇ
ಯಾತೌ ಯದುಕ್ತ್ವಾ ಪಿತರೌ ಭರದ್ವಾಜಸ್ತ ತಸ್ತ್ವಯಂ''

''ಮೂಢಳೇ, ದ್ವಾಜಂ=ನಮ್ಮಿಬ್ಬರಿಂದ ಹುಟ್ಟಿದ ಈ ಮಗುವನ್ನು ಭರ=ನೀನು ಪೋಷಿಸು'' ಎಂದು ಬೃಹಸ್ಪತಿ ಹೇಳಿದ. ನೀನೇ ಪೋಷಿಸು ಎಂದು ಮಮತೆ ಬೃಹಸ್ಪತಿಗೆ ಹೇಳಿದಳು. ಆದುದರಿಂದ ಆ ಕೂಸಿಗೆ ಭರದ್ವಾಜ ಎಂದು ಹೆಸರಾಯಿತು. ನೀನು ರಕ್ಷಿಸು, ನೀನು ರಕ್ಷಿಸು ಎಂದು ಪರಸ್ಪರ ಹೇಳಿ ವಾದಿಸಿ ಕೊನೆಗೆ ಇಬ್ಬರೂ ಆ ಕೂಸನ್ನು ಬಿಟ್ಟು ಹೋಗಿ ಬಿಟ್ಟರು. ಆಗ ದೇವತೆಗಳಿಗೆ ಕರುಣೆ ಬಂದಿತು. ಆ ಪರದೇಶಿ ಮಗುವನ್ನು ಎತ್ತಿ ತಂದು ದೇವತೆಗಳು ಸಂತಾನಕ್ಕಾಗಿ ಯಜ್ಞ ಮಾಡುತ್ತಲಿದ್ದ ಭರತ ಚಕ್ರವರ್ತಿಗೆ ಮಗನೆಂದು ಕೊಟ್ಟರು. ಭರತನ ಔರಸ ಸಂತಾನವು ವಿತಥ=ಎಂದರೆ ವ್ಯರ್ಥವಾಗಿ ಈ

ಭರದ್ವಾಜನು ಬಂದದ್ದರಿಂದ ಅವನಿಗೆ ವಿತಥ ಎಂದೇ ಹೆಸರಾಯಿತು. ವಿತಥನಿಗೆ ಮನ್ಯು ಎಂಬ ಪುತ್ರನು ಜನಿಸಿದ. ಮನ್ಯುವಿಗೆ ಬೃಹತ್ ಕ್ಷತ್ರ, ಮಹಾವೀರ್ಯ, ನರ, ಗರ್ಗ ಎಂಬ ತನುಜರು ಉತ್ಪನ್ನರಾದರು. ನರನಿಗೆ ಸಂಕೃತಿ, ಸಂಕೃತಿಗೆ ಗುರುಪ್ರೀತಿ, ರಂತಿದೇವ ಎಂಬ ಇಬ್ಬರು ಮಕ್ಕಳಾದರು. ಗರ್ಗನಿಂದ ಶಿನಿ, ಶಿನಿಯಿಂದ ಗಾರ್ಗ್ಯ, ಶೈನ್ಯ ಎಂಬ ಕ್ಷತ್ರಿಯ ಮಿಶ್ರರಾದ ಬ್ರಾಹ್ಮಣರು ಹುಟ್ಟಿದರು. ಮಹಾವೀರ್ಯನಿಗೆ ದುರಕ್ಷಯ ಎಂಬ ಮಗ. ಅವನಿಗೆ ತ್ರಯ್ಯಾರುಣಿ, ಪುಷ್ಕರಿಣ್ಯ, ಕಪಿ ಎಂದು ಮೂವರು ಮಕ್ಕಳು. ಈ ಮೂವರು ಮಕ್ಕಳೂ ಅನಂತರ ಬ್ರಾಹ್ಮಣರಾದರು. ಬೃಹತ್ ಕ್ಷತ್ರನು ಮಗ ಸುಹೋತ್ರನಿಗೆ ಹಸ್ತಿ ಎಂಬ ಮಗನಿದ್ದನು. ಅವನೇ ಹಸ್ತಿನಾವತೀ ಪಟ್ಟಣವನ್ನು ಕಟ್ಟಿಸಿದ್ದನು.

ಹಸ್ತಿರಾಜನಿಗೆ ಅಜಮೀಢ, ದ್ವಿಜಮೀಢ, ಪುರುಮೀಢ ಎಂದು ಮೂವರು ಮಕ್ಕಳು. ಅಜಮೀಢನಿಂದ ಕಣ್ವ, ಕಣ್ವನಿಂದ ಮೇಧಾತಿಥಿ, ಅವನಿಂದ ಕಾಣ್ವಾಯನ ಎಂಬ ಬ್ರಾಹ್ಮಣರು ಮುಂದಾದರು. ಅಜಮೀಢನ ಮತ್ತೊಬ್ಬ ಮಗ ಬೃಹದಿಷು. ಅವನಿಂದ ಮುಂದೆ ಬೃಹದ್ಧನು, ಬೃಹತ್ಕರ್ಮ, ಜಯದ್ರಥ, ವಿಶ್ವಜಿತ್, ಸೇನಜಿತ್ ಮುಂತಾದ ರಾಜರು ಆಗಿಹೋದರು. ಸೇನಜಿತನಿಗೆ ರುಚಿರಾಶ್ವ, ಕಾಶ್ಯ, ದೃಢಹನು, ವತ್ಸಹನು ಎಂದು ನಾಲ್ಕು ಮಕ್ಕಳು. ರುಚಿರಾಶ್ವನ ಮಗ ಪೃಥುಸೇನ, ಅವನ ಮಗ ಪಾರ, ನೀಲ, ಕಾಂಪಿಲ್ಯದೇಶಾಧಿಪತಿ ಸಮರ ಮುಂತಾಗಿ ವಂಶ ಬೆಳೆಯಿತು. ಆ ಸಮರನಿಗೆ ಪಾರ, ಸುಪಾರ, ಸದಶ್ವ ಮೂರು ಮಕ್ಕಳು. ಸುಪಾರನಿಂದ ಪೃಥು, ಸುಕೃತಿ, ವಿಭ್ರಾಜ, ಅಣುಹ ಮುಂತಾಗಿ ರಾಜ ವಂಶವು ದಾಂಗುಡಿಯಿಟ್ಟು ಬೆಳೆಯಿತು. ಅಣುಹನಿಗೆ ಶುಕ್ರಾಚಾರ್ಯರ ಮಗಳಾದ ಕೃತಿಯನ್ನು ಕೊಟ್ಟಿತ್ತು. ಈ ಅಣುಹನಿಂದ ಬ್ರಹ್ಮದತ್ತ, ಅವನಿಂದ ವಿಷ್ವಕ್‌ಸೇನ, ಅವನ ಮಗ ಉದಕ್ಸೇನ, ಉದಕ್ಸೇನನ ಮಗ ಭಲ್ಲಾಭ. ದ್ವಿಜಮೀಢನಿಗೆ ಯವೀನರ ಎಂಬ ಮಗನಿದ್ದ. ಯವೀನರನಿಂದ ಮುಂದೆ ಧೃತಿಮಾನ್, ಸತ್ಯಧೃತಿ, ಧೃಢನೇಮಿ, ಸುಪಾರ್ಶ್ವ, ಸುಮತಿ, ಸನ್ಮತಿಮಾನ್, ಕೃತ ಮುಂತಾದ ರಾಜರು ಜನಿಸಿ ಬೆಳಗಿದರು. ಕೃತನಿಗೆ ಹಿರಣ್ಯನಾಭನು ಯೋಗ ಶಾಸ್ತ್ರವನ್ನು ಕಲಿಸಿದನು. ಈ ಕೃತನು ಪ್ರಾಚ್ಯಸಾಮಗ ಶ್ರುತಿಯ ಇಪ್ಪತ್ನಾಲ್ಕು ಸಂಹಿತೆಗಳನ್ನು ರಚಿಸಿದನು. ಈ ಕೃತನಿಂದ ಉಗ್ರಾಯುಧ ಎಂಬ ಮಗನು ಹುಟ್ಟಿ ನೀಪ ವಂಶದ ಕ್ಷತ್ರಿಯರಿಗೆಲ್ಲ ಮುಟ್ಟುಗೋಲು ಹಾಕಿದ ಉಗ್ರಯುಧನಿಂದ ಕ್ಷೇಮ, ಸುಧೀರ, ರಿಪುಂಜಯ, ಬಹುರಥ ಎಂದು ಮುಂತಾಗಿ ಪುರುವಂಶವು ಬಿತ್ತರಗೊಂಡಿತು.

ಅಜಮೀಢನಿಗೆ ನಲಿನೀ ಎಂಬ ಹೆಂಡತಿಯಿಂದ ನೀಲ ಎಂಬ ಮಗನು ಉದಿಸಿದನು. ಆ ನೀಲನಿಂದ ಶಾಂತಿ, ಸುಶಂತಿ, ಪುರಂಜಯ, ಋಕ್ಷ, ಹರ್ಯಶ್ವ ಮೊದಲಾದ ರಾಜರು ಜನಿಸಿದರು. ಹರ್ಯಶ್ವನಿಗೆ, ಮುದ್ಗಲ, ಸೃಂಜಯ, ಬೃಹದಿಷು, ಯವೀನರ, ಕಾಂಪಿಲ್ಯ ಎಂದು ಐದು ಮಕ್ಕಳಾದರು. ತನ್ನ ಈ ಪಂಚ ಪುತ್ರರು ತನ್ನ ಅಧೀನದಲ್ಲಿರುವ ಪಂಚ ದೇಶಗಳನ್ನು ಆಳಲಿಕ್ಕೆ ಸಮರ್ಥರಿರುವರೆಂದು ಅವರನ್ನು ಒಂದೊಂದು ದೇಶಕ್ಕೆ ಅಧಿಪತಿಗಳನ್ನಾಗಿ ಮಾಡಿದುದರಿಂದ ಅವರಿಗೆ ಪಾಂಚಾಲರು ಎಂದು ಹೆಸರುಬಂದಿತು. ಮುದ್ಗಲನಿಂದ ಮೌದ್ಗಲ್ಯರೆಂಬ ಕ್ಷತ್ರಮಿಶ್ರರಾದ ಬ್ರಾಹ್ಮಣರ ಕುಲವು

ಮುಂದುವರಿಯಿತು. ಮುದ್ಗಲನಿಂದ ಬೃಹದಶ್ವ, ಬೃಹದಶ್ವನಿಗೆ ದಿವೋದಾಸ ಎಂಬ ಒಬ್ಬ ಗಂಡು ಮಗನೂ ಅಹಲ್ಯೆ ಎಂಬ ಹೆಣ್ಣು ಮಗಳೂ ಜನಿಸಿದರು. ಆ ಅಹಲ್ಯೆಗೆ ಗೌತಮ ಋಷಿಯಿಂದ ಶತಾನಂದ. ಅವನಿಂದ ಧನುರ್ವೇದದಲ್ಲಿ ಪಾರಂಗತನಾದ ಸತ್ಯಧೃತಿ ಎಂಬ ಮಗನು ಪುಟ್ಟಿದನು.

ಸತ್ಯಧೃತಿ ಒಂದು ಸಲ ಅಪ್ಸರೆಯಲ್ಲಿ ಶ್ರೇಷ್ಠಳಾದ ಊರ್ವಶಿಯನ್ನು ನೋಡಿದಾಗ ಅವನ ಮನಸ್ಸು ಚಂಚಲವಾಗಿ ಶಕ್ತಿಪಾತವಾಯಿತು. ಅದರಿಂದ ಅಲ್ಲಿಯೇ ಹುಲ್ಲುಗಾವಲಿನ ಮೇಲೆ ಒಂದು ಗಂಡು ಒಂದು ಹೆಣ್ಣು ಎರಡು ಮಕ್ಕಳು ಜನಿಸಿದರು. ಬೇಟೆಯಾಡಲು ಬಂದು ಶಂತನು ಮಹಾರಾಜನು ಆ ಎರಡು ಮುದ್ದು ಮಕ್ಕಳನ್ನು ನೋಡಿ ಕೃಪೆಯಿಂದ ಎತ್ತಿಕೊಂಡು ಹಸ್ತಿನಾವತಿಗೆ ಕರೆತಂದನು. ಅದರಿಂದ ಗಂಡುಮಗುವಿಗೆ ಕೃಪ ಎಂದೂ ಹೆಣ್ಣುಮಗುವಿಗೆ ಕೃಪೀ ಎಂದು ಹೆಸರಾಯಿತು. ಕೃಪೀಯನ್ನು ದ್ರೋಣಾಚಾರ್ಯರಿಗೆ ಮದುವೆಮಾಡಿ ಕೊಡಲಾಯಿತು. ದ್ರೋಣರಿಂದ ಕೃಪಿಯು ಅಶ್ವತ್ಥಾಮ ಎಂಬ ಹೆಸರಿನ ಮಗನನ್ನು ಹೆತ್ತಳು. ದಿವೋದಾಸನಿಗೆ ಮಿತ್ರಾಯು ಎಂಬ ಮಗನು ಜನಿಸಿ ಮುಂದೆ ಆ ವಂಶದಲ್ಲಿ ಮಿತ್ರಾಯು, ಚ್ಯವನ, ಸುದಾಸ, ಸೌದಾಸ, ಸಹದೇವ, ಸೋಮಕ, ಜಂತು, ಯವೀಯಾನ್, ಪೃಷತ್, ದ್ರುಪದ, ಧೃಷ್ಟದ್ಯುಮ್ನ, ದೃಷ್ಟಕೇತು ಮುಂತಾಗಿ ರಾಜರು ಜನಿಸಿದರು. ಅಜಮೀಢನಿಗೆ ಋಕ್ಷ ಎಂಬ ಮಗನಿದ್ದನು. ಅವನಿಗೆ ಸಂವರಣ, ಸಂವರಣನಿಂದ ಕುರುರಾಜನು ಹುಟ್ಟಿ ಧರ್ಮಕ್ಷೇತ್ರವಾದ ಕುರುಕ್ಷೇತ್ರವನ್ನು ನಿರ್ಮಾಣ ಮಾಡಿದನು. ಆ ಕುರುರಾಜನಿಗೆ ಸುಧನು, ಜನ್ಹು, ಪರೀಕ್ಷಿತ್ ಮೊದಲಾದವರು ತನಯರಾದರು. ಸುಧನುವಿನಿಂದ ಸುಹೋತ್ರ, ಚ್ಯವನ, ಕೃತಕ, ಉಪರಿಚರವಸು ಮುಂತಾಗಿ ಸಂತಾನವು ಮುಂದುವರೆಯಿತು. ಆ ಉಪರಿಚರ ವಸುವಿಗೆ ಬೃಹದ್ರಥ, ಪ್ರತ್ಯಗ, ಕುಶಾಂಬು, ಕುಚೇಲ ಮೊದಲಾದ ಏಳು ಜನ ಮಕ್ಕಳಾದರು. ಬೃಹದ್ರಥನಿಂದ ಮುಂದೆ ಕುಶಾಗ್ರ, ವೃಷಭ, ಪುಷ್ಪವಾನ್, ಸತ್ಯಹಿತ, ಸುಧನ್ವ, ಜತು ಮುಂತಾದ ರಾಜರು ಜನಿಸಿದರು. ಬೃಹದ್ರಥನಿಗೆ ಎರಡು ಭಾಗವಾಗಿ ಒಬ್ಬ ಮಗನು ಹುಟ್ಟಿದನು. ಅವನನ್ನು ಜರಾ ಎಂದು ಮುದುಕಿಯು ಎರಡೂ ಭಾಗಗಳನ್ನು ಕೂಡಿಸಿದ್ದರಿಂದ ಅವನು ಜರಾಸಂಧನೆಂದು ಹೆಸರಾದನು. ಆ ಜರಾಸಂಧನಿಂದ ಸಹದೇವ, ಸಹದೇವನಿಂದ, ಸೋಮಪ, ಸೋಮಪನಿಂದ, ಶ್ರುತಿಶ್ರಮ ಮುಂತಾದ ಮಗಧರಾಜರು ಬಾಳಿ ಭೂಮಿಯನ್ನು ಆಳಿದರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಹದಿನಾರನೇ ಅಧ್ಯಾಯ ಸಂಪೂರ್ಣ*

—o—

## ಕುರುವಿನ ವಂಶ ವರ್ಣನೆ

**ಅಧ್ಯಾಯ - ೧೭**

ಕುರವಿನ ಒಬ್ಬ ಮಗನಾದ ಪರೀಕ್ಷಿತನಿಗೆ ಜನಮೇಜಯ, ಶ್ರುತ ಸೇನ, ಉಗ್ರಸೇನ, ಭೀಮಸೇನ ಎಂದು ನಾಲ್ವರು ಪುತ್ರರು. ಮತ್ತೊಬ್ಬ ಕುರು ಪುತ್ರನಾದ ಜನ್ಹುವಿಗೆ ಸುರಥ ಎಂಬ ಮಗನಾದ. ಅವನಿಂದ ಮುಂದೆ ವಿದೂರಥ, ಸಾರ್ವಭೌಮ, ಜಯಸೇನ, ಆರಾಧಿತ, ಆಯುತಾಯು, ಆಕ್ರೋಧನ, ದೇವಾತಿಥಿ, ಋಕ್ಷ, ಭೀಮಸೇನ, ದಿಲೀಪ, ಪ್ರತೀಪ ಮುಂತಾದ ರಾಜರಾದರು. ಪ್ರತೀಪನಿಗೆ ದೇವಾಪಿ, ಬಾಲ್ಹೀಕ, ಶಂತನು ಎಂದು ಮೂವರು ಮಕ್ಕಳಾದರು ದೇವಾಪಿಯು ಬಾಲ್ಯದಲ್ಲಿಯೇ ವನಕ್ಕೆ ತಪಸ್ಸಿಗೆ ತೆರಳಿದನು. ಶಂತನುವು ಮಹಾರಾಜನಾದನು. ಶಂತನುವು ಕೈಯಿಂದ ಮೈ ಮುಟ್ಟಿದರೆ ಸಾಕು. ಮುಪ್ಪು ಕಳೆದು ತಾರುಣ್ಯ ಬರುತ್ತಿತ್ತು. ಅವನು ಹೋದಲ್ಲೆಲ್ಲ ಶಾಂತಿಯ ಸಾಮ್ರಾಜ್ಯವು ಸ್ಥಾಪಿತವಾಗುತ್ತಿತ್ತು. ಶಂತನುವಿನ ಕೀರ್ತಿಯು ಗೀತಗಾಥಾ ರೂಪದಿಂದ ಎಲ್ಲೆಡೆಗೂ ಹಬ್ಬಿತು.

ಒಮ್ಮೆ ಆ ಶಂತನುವಿನ ರಾಜ್ಯದಲ್ಲಿ ಅನಾವೃಷ್ಟಿಯಿಂದ ಬರ ಬಿದ್ದಿತು. ಜನರು ನಾಶವಾಗತೊಡಗಿದರು. ಆಗ ಶಂತನುವು ಬ್ರಾಹ್ಮಣರ ಬಳಿಗೆ ಬಂದು ''ನಮ್ಮ ರಾಷ್ಟ್ರದಲ್ಲಿ ಮಳೆಯಾಗದಿರಲಿಕ್ಕೆ ಕಾರಣವೇನು? ನನ್ನದೇನು ಅಪರಾಧವಾಗಿದೆ?'' ಎಂದು ಕೇಳಿದನು. ಅದಕ್ಕೆ ದಿವ್ಯದೃಷ್ಟಿಯುಳ್ಳ ಬ್ರಾಹ್ಮಣರು ಉತ್ತರಿಸಿದರು- ''ಈ ರಾಜ್ಯಕ್ಕೆಲ್ಲ ನಿಮ್ಮ ಅಣ್ಣನು ಅಧಿಕಾರಿ. ನೀನು ಅವರ ರಾಜ್ಯವನ್ನು ಭೋಗಿಸುತ್ತಿರುವೆ. ಆದುದರಿಂದ ಅಣ್ಣ ಮದುವೆಯಾಗದೇ ತಾನೇ ಮೊದಲು ಮಾಡಿಕೊಂಡ ತಮ್ಮನಿಗೆ 'ಪರವೇತ್ತೃತ್ವ' ಎಂಬ ಪಾಪ ಬರುತ್ತದೆ. ಈಗ ಅಣ್ಣನನ್ನು ಬಿಟ್ಟು ರಾಜ್ಯೈಶ್ವರ್ಯವನ್ನು ಭೋಗಿಸಿದ ನಿನಗೆ ಅಂಥ ಪಾಪ ತಟ್ಟಿದೆ. ದೇವಾಪಿಯು ಧರ್ಮದ್ರೋಹಾದಿ ಪಾಪ ಮಾಡುವವರೆಗೆ ಈ ರಾಜ್ಯವು ಅವನದು ಈಗ ನಿಜವಾದ ರಾಜ್ಯಕ್ಕೆ ಅವನೇ ಅಧಿಕಾರಿಯಾಗಿರುವ ಅವನನ್ನು ಬಿಟ್ಟು ನೀನು ಸಿಂಹಾಸನದ ಮೇಲೆ ಕುಳಿತರೆ ರಾಜ್ಯಕ್ಕೆ ಅನಿಷ್ಟ ಬಡೆದು ಜನರು ಕಷ್ಟ ಪಡುವುದು ತಪ್ಪಿದ್ದಲ್ಲ. ಕಾರಣ ಅವನನ್ನು ಕರೆತಂದು ರಾಜ್ಯಾಧಿಕಾರದ ಗದ್ದುಗೆಯ ಮೇಲೆ ಕೂಡಿಸು'' ಎಂದು ತಿಳಿಸಿದರು. ಶಂತನುವಿಗೆ ಆಶ್ಮಸಾರಿ ಎಂಬ ಒಳ್ಳೇ ಚತುರನಾದ ಓರ್ವ ಮಂತ್ರಿಯಿದ್ದ. ಅವನೊಂದು ಯುಕ್ತಿ ಮಾಡಿದ. ತನ್ನ ರಾಜ್ಯದಲ್ಲಿ ಇರುವ ಕೆಲವು ವೇದನಿಂದಕರನ್ನು ದೇವಾಪಿ ಇದ್ದ ಅರಣ್ಯಕ್ಕೆ ಕೊಟ್ಟು ಕಳಿಸಿದ. ಆ ವೇದನಿಂದಕರು ತಪಸ್ವಿಗಳ ವೇಷವನ್ನು ತೊಟ್ಟಿದ್ದರು. ಗಿಡದ ತೊಗಟಿ ಕೃಷ್ಣಾಜಿನ, ಶಾಟಿಗಳನ್ನು ಉಟ್ಟಿದ್ದರು. ಅನೇಕ ಪ್ರಮಾಣ ವಚನಗಳಂತೂ ಅವರ ನಾಲಿಗೆಯ ತುದಿಯ ಮೇಲೆ ಸದಾಸಿದ್ಧ. ಪಾಪ,ಸಾತ್ವಿಕನೂ ನಿಷ್ಕಪಟಿಯೂ ಆದ ದೇವಾಪಿಯು ತೇಜಸ್ವಿಗಳಾದ ಆ ಹೊಸ ತಪಸ್ವಿಗಳ ಮಾತುಗಳಿಗೆ ಮರುಳು ಆದ. ವೇದ ನಿಂದಕರ ನುಡಿಗಳನ್ನು ನಂಬಿದ. ಅವರ ವಕ್ತೃತ್ವದ ಪ್ರಭಾವದಿಂದ ಅವನಿಗೆ ವೇದ ಮಾರ್ಗದಲ್ಲಿದ್ದ ವಿಶ್ವಾಸವು ಹಾರಿಹೋಯಿತು. ವೇದಶಾಸ್ತ್ರ ದ್ರೋಹಿಗಳ ನಾಸ್ತಿಕವಾದಕ್ಕೆ ಅವನ ಮನಸ್ಸು ಒಲಿಯಿತು.

ಇತ್ತ ಶಂತುನುವಿಗೆ ಬ್ರಾಹ್ಮಣರ ಮಾತನ್ನು ಕೇಳಿ ರಾಜ್ಯವಿಷಯದಲ್ಲಿ ವೈರಾಗ್ಯವು ಹುಟ್ಟಿತು. ಅವನು ಸರ್ವಸ್ವವನ್ನಿತ್ತು ಅಣ್ಣನನ್ನು ಕರೆತರಬೇಕೆಂದು ಮಂತ್ರಿಗಳಿಂದಲೂ ಬ್ರಾಹ್ಮಣರಿಂದಲೂ ಕೂಡಿಕೊಂಡು ದೇವಾಪಿ ಇದ್ದ ಅರಣ್ಯಕ್ಕೆ ಬಂದನು. ಅಲ್ಲಿ ಅವನ ಜೊತೆಗೆ ಬಂದ ಬ್ರಾಹ್ಮಣರು ದೇವಾಪಿಗೆ ಅನೇಕ ವೇದವಚನಗಳನ್ನು ಉದಾಹರಿಸಿ ''ಹಿರಿಯ ಅಣ್ಣನು ಇರುವಾಗ ಕಿರಿಯವನು ಸಿಂಹಾಸನವನ್ನು ಏರುವುದು ಸರಿಯಲ್ಲ. ಕಾರಣ ಹಿರಿಯನಾದ ನೀನೇ ಬಂದು ರಾಜ್ಯ ಗದ್ದುಗೆಯನ್ನು ಆರೋಹಣ ಮಾಡು'' ಎಂದು ಹೇಳಿದರು.

ದೇವಾಪಿಗೆ ಅವರ ವೇದವಚನಗಳನ್ನು ಕೇಳಿಯೇ ಮನಸ್ಸು ಕಳವಳಗೊಂಡಿತು. ಕೂಡಲೇ ಅವನು ''ವೇದಗಳು ಅಪ್ರಮಾಣ. ಅದರಲ್ಲಿ ನನಗೆ ಏನು ನಂಬಿಗೆ ಇಲ್ಲ'' ಎಂದು ಹೇಳಿ ಬಗೆ ಬಗೆಯಾಗಿ ವೇದವನ್ನು ನಿಂದಿಸಿದನು. ಆಗ ಬ್ರಾಹ್ಮಣರು ಶಂತನುವಿಗೆ ''ಮಹಾರಾಜ, ಸಾಕು ನಡೆ, ಊರಿಗೆ ಮರಳೋಣ, ನಿನ್ನ ಅಣ್ಣನಿಗೆ ಇನ್ನು ರಾಜನಾಗಲಿಕ್ಕೆ ಬಲವಂತ ಪಡಿಸುವುದು ಬೇಡ. ಅವನು ವೇದದ್ರೋಹಿಯಾಗಿ ಪತಿತನಾಗಿ ತನ್ನ ರಾಜ್ಯದ ಅಧಿಕಾರವನ್ನೇ ಕಳೆದುಕೊಂಡಿದ್ದಾನೆ. ಆದುದರಿಂದ ಇನ್ನು ನೀನೇ ಸಿಂಹಾಸನಕ್ಕೆ ಧರ್ಮದಿಂದ ನಿಜವಾದ ಅಧಿಕಾರಿಯಾದಂತಾಯಿತು. ಇನ್ನು ಕ್ಷಾಮರೋಗಗಳೆಲ್ಲವೂ ತಾವಾಗಿ ಶಾಂತವಾಗಿ ರಾಷ್ಟ್ರಕ್ಕೆ ಕ್ಷೇಮಾರಾಮಗಳು ಉಂಟಾಗುವುವು. ರಾಜಧಾನಿಗೆ ನಡೆ ಹೋಗೋಣ'' ಎಂದು ಹೇಳಿದರು.

ಅದರಂತೆ ಶಂತನುರಾಜನು ಅಣ್ಣನಿಗೆ ಹೆಚ್ಚು ಆಗ್ರಹಪಡಿಸದೇ ಮರಳಿ ಮನೆಗೆ ಬಂದನು. ಮುಂದೆ ಧರ್ಮನಿಷ್ಠನೂ ವೇದಭಕ್ತನೂ ಆದ ಶಂತನುವಿನ ರಾಜ್ಯದಲ್ಲಿ ಮಳೆ ಆಗಿ, ಬೆಳೆ ಬಂದು, ಜನರು ಸುಖ ಸಮಾಧಾನ ಶಾಂತಿ ಸಂತಸಗಳಲ್ಲಿ ಓಲಾಡಿದರು. ಶಂತನುವಿನ ತಮ್ಮನಾದ ಬಾಲ್ಹೀಕನಿಗೆ ಸೋಮದತ್ತ ಎಂಬ ಪುತ್ರನಿದ್ದನು. ಅವನಿಗೆ ಭೂರಿ, ಭೂರಿಶ್ರವ, ಶಲ್ಯ ಎಂಬ ಮೂವರು ಮಕ್ಕಳು. ಶಂತನುವಿಗೆ ದೇವ ನದಿಯಾದ ಭಾಗೀರಥಿಯಲ್ಲಿ ಎಲ್ಲ ವೇದಶಾಸ್ತ್ರಗಳ ರಹಸ್ಯಾರ್ಥ ಬಲ್ಲ ಕೀರ್ತವಂತನಾದ ಭೀಷ್ಮ ಎಂಬ ಮಗನು ಜನಿಸಿದನು. ಅನಂತರ ಮತ್ತೊಬ್ಬ ಮಡದಿಯಾದ ಸತ್ಯವತಿಯಲ್ಲಿ ಚಿತ್ರಾಂಗದ, ವಿಚಿತ್ರವೀರ್ಯ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಚಿಂತ್ರಾಗದನು ಅದೇ ಹೆಸರಿನ ಗಂಧರ್ವನ ಜೊತೆಗೆ ನಡೆದ ಹೋರಾಟದಲ್ಲಿ ಸಾವನ್ನಪ್ಪಿದನು. ವಿಚಿತ್ರವೀರ್ಯನು ಕಾಶಿರಾಜನ ಮಕ್ಕಳಾದ ಅಂಬಿಕಾ, ಅಂಬಾಲಿಕಾ ಎಂಬ ಎರಡು ಹುಡುಗಿಯರನ್ನು ವಿವಾಹವಾದನು. ಅತಿ ಕಾಮಿಯಾದ ಅವನು ಸತತ ವಿಹಾರ ಕಾಮಕೇಲಿಯಿಂದ ಕ್ಷಯ ಹತ್ತಿ ಅಕಾಲ ಮರಣಕ್ಕೆ ತುತ್ತಾದನು.

ತಾಯಿಯಾದ ಸತ್ಯವತಿಯು ವೇದವ್ಯಾಸರನ್ನು ಕರೆಯಿಸಿ ತನ್ನ ವಂಶವನ್ನು ಅಭಿವೃದ್ಧಿಗೊಳಿಸಲಿಕ್ಕೆ ಹೇಳಿದಳು. ತಾಯಿಯ ಮಾತನ್ನು ಮೀರಬಾರದೆಂದು ವೇದವ್ಯಾಸರು ವಿಚಿತ್ರವೀರ್ಯನ ಹೆಂಡಂದಿರಾದ ಅಂಬಿಕಾ ಅಂಬಾಲಿಕೆಯರಿಗೆ ಧೃತರಾಷ್ಟ್ರ ಪಾಂಡು ಎಂಬ ಮಕ್ಕಳನ್ನು ಕರುಣಿಸಿದರು. ಅದರಂತೆ ಭಕ್ತಳಾದ ದಾಸಿಯೊಬ್ಬಳಿಗೆ

ವಿದುರ ಎಂಬ ಒಬ್ಬ ಕುಮಾರರನ್ನು ದಯಪಾಲಿಸಿದರು. ಧೃತರಾಷ್ಟ್ರನಿಗೆ ಗಾಂಧಾರಿಯಿಂದ ದುರ್ಯೋಧನ ದುಶ್ಶಾಸನ ಮೊದಲಾದ ನೂರುಜನ ಮಕ್ಕಳಾದರು. ಪಾಂಡುರಾಜನು ಒಮ್ಮೆ ಬೇಟೆಯಾಡಲಿಕ್ಕೆ ವನಕ್ಕೆ ಹೋದಾಗ ತಪ್ಪಿ ಅವನ ಬಾಣವು ಒಬ್ಬ ಋಷಿ ದಂಪತಿಗಳಿಗೆ ಬಡೆಯಿತು. ಆಗ ಅವರು "ಸ್ತ್ರೀ ಸಹವಾಸ ಮಾಡಿದರೆ ನಿನಗೆ ಮರಣ ಬರಲಿ" ಎಂದು ಅವನಿಗೆ ಶಾಪವನ್ನಿತ್ತರು. ಆಗ ಅವನ ಭಾರ್ಯೆಯಾದ ಕುಂತೀದೇವಿಯು ಯಮಧರ್ಮನನ್ನು ಆರಾಧನೆ ಮಾಡಿ ಅವನ ಅನುಗ್ರಹದಿಂದ ಧರ್ಮರಾಜ ಎಂಬ ಮಗನನ್ನು ಪಡೆದಳು - ಇದರಂತೆ ವಾಯುದೇವರ ದಯೆಯಿಂದ ಭೀಮಸೇನನನ್ನೂ ಇಂದ್ರನ ಕೃಪೆಯಿಂದ ಅರ್ಜುನನ್ನೂ ಹಡೆದಳು. ಅವಳ ಮಲತಂಗಿಯಾದ ಮಾದ್ರಿದೇವಿಯು ಆಶ್ವೀನೀ ದೇವತೆಗಳನ್ನು ಪ್ರಾರ್ತಿಸಿ ನಕುಲ ಸಹದೇವ ಎಂಬ ಇಬ್ಬರು ಮಕ್ಕಳನ್ನು ಪಡೆದಳು.

ಪಾಂಡುರಾಜನ ಒಟ್ಟು ಈ ಐದು ಮಕ್ಕಳಾದ ಪಂಚಪಾಂಡವರಿಗೆ ದ್ರೌಪದೀ ಎಂಬ ಪತ್ನಿಯಿಂದ ಪ್ರತಿವಿಂಧ್ಯಾ, ಶ್ರುತಸೇನ, ಶ್ರುತಕೀರ್ತಿ, ಶ್ರುತಾನೀಕ, ಶ್ರುತಕರ್ಮ ಎಂದು ಕ್ರಮವಾಗಿ ಐವರು ಮಕ್ಕಳು ಹುಟ್ಟಿದರು. ಇವರಲ್ಲದೇ ಧರ್ಮರಾಜನಿಗೆ ಯೌಧೇಯೀ ಎಂಬ ಹೆಂಡತಿಯಿಂದ, ದೇವಕ, ಭೀಮನಿಗೆ ಹಿಡಿಂಬೆಯಿಂದ ಘಟೋತ್ಕಚ, ಕಾಶಿಯಿಂದ ಸರ್ವಗ, ಸಹದೇವನಿಗೆ ವಿಜಯೆಯಿಂದ ಸುಹೋತ್ರ, ನಕುಲನಿಗೆ ರೇಣುಮತಿಯಿಂದ ನಿರಮಿತ್ರ ಮುಂತಾಗಿ ಮಕ್ಕಳು ಹುಟ್ಟಿದರು. ಅರ್ಜುನನಿಗೆ ಉಲೂಪಿ ಎಂಬ ನಾಗಕನ್ಯೆಯಿಂದ ಇರಾವಾನ್, ಮಣಿಪುರದ ರಾಜಕುಮಾರಿ (ಚಿತ್ರಾಂಗದೆ)ಯಿಂದ ಬಭ್ರುವಾಹನ, ಸುಭದ್ರೆಯಿಂದ ಅಭಿಮನ್ಯು ಎಂಬ ಮಕ್ಕಳು ಜನಿಸಿದರು. ಬಾಲ್ಯದಿಂದಲೇ ಬಲ ಬೆಳೆದು ಮೈಗೂಡಿದ ಮಹಾಬಲ ಪರಾಕ್ರಮಗಳುಳ್ಳ ಅಭಿಮನ್ಯುವಿಗೆ ಉತ್ತರೆಯಿಂದ ಪರೀಕ್ಷಿತ ಮಹಾರಾಜನು ಜನಿಸಿದನು. ಪರೀಕ್ಷಿತನು ತಾಯಿಯ ಗರ್ಭದಲ್ಲಿದ್ದಾಗಲೆ ಕುರುಪಾಂಡವರ ಯುದ್ಧವು ನಡೆಯಿತು. ಕೌರವರೆಲ್ಲರೂ ಸತ್ತ ಬಳಿಕ ಪಾಂಡವರ ಕುಲವನ್ನು ನಿರ್ಮೂಲ ಮಾಡಬೇಕೆಂದು ಅಶ್ವತ್ಥಾಮಾಚಾರ್ಯರು ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿದರು. ಅದರಿಂದ ಉತ್ತರೆಯ ಗರ್ಭದಲ್ಲಿದ್ದ ಪರೀಕ್ಷಿತನ ಭ್ರೂಣವು ಬ್ರಹ್ಮಾಸ್ತ್ರದ ಉರಿಯಿಂದ ಸುಟ್ಟು ಬೂದಿಯಾಯಿತು.

ಆಗ ತಾಯಿ ಉತ್ತರೆ ಹಾಗೂ ದ್ರೌಪದಿ ಕುಂತಿಯ ಪ್ರಾರ್ಥನೆಯನ್ನು ಕೇಳಿ ಕರುಣೆ ತುಂಬಿದ ನರರೂಪಿಯಾದ ನಾರಾಯಣಾವತಾರಿ ಶ್ರೀ ಕೃಷ್ಣನು ಹೊಟ್ಟೆಯಲ್ಲಿಯೇ ಸುಟ್ಟು ಬೂದಿಯಾದ ಆ ಗರ್ಭವನ್ನು ಮತ್ತೆ ತನ್ನ ಪ್ರಭಾವದಿಂದ ಬದುಕಿಸಿದನು. ಸುರಾಸುರರು ನಮಿಸಿ ಸ್ತುತಿಸುವ ಆ ಶ್ರೀ ಕೃಷ್ಣನ ದಯೆಯಿಂದ ಬದುಕಿದ ಆ ಉತ್ತರೆಯ ಮಗನೇ ಈಗ ಪರೀಕ್ಷಿತ ಎಂದು ಹೆಸರಾಗಿ ಧರ್ಮಶಾಸನದಿಂದ ಈಗ ಭೂಮಂಡಲವನ್ನು ಆಳುತ್ತಲಿದ್ದಾನೆ. —o—

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಚತುರ್ಥಾಂಶದ ಹದಿನೇಳನೇ ಅಧ್ಯಾಯ ಸಂಪೂರ್ಣ*

## ಮುಂದಾಗುವ ರಾಜರ ವರ್ಣನೆ

ಅಧ್ಯಾಯ - ೧೮

**ಪರಾಶರ** - ಇನ್ನು ಮೇಲೆ ಮುಂದಾಗಲಿರುವ ರಾಜರ ಕತೆಯನ್ನು ಹೇಳುತ್ತೇನೆ ಕೇಳು. ಈಗ ನಮ್ಮ ದೇಶವನ್ನು ಆಳುತ್ತಲಿರುವ ಪರೀಕ್ಷಿತ ರಾಜನಿಗೆ ಜನಮೇಜಯ, ಶತ್ರುಸೇನ, ಉಗ್ರಸೇನ, ಭೀಮಸೇನ ಎಂಬ ನಾಲ್ಕು ಮಕ್ಕಳಿರುವರು. ಅವರಿಗೆ ಮುಂದಾಗುವ ಮಕ್ಕಳೆಂದರೆ ಜನಮೇಜಯನಿಗೆ ಶತಾನೀಕ. ಈ ಶತಾನೀಕನು ಮಹರ್ಷಿಯಾಜ್ಞವಲ್ಕ್ಯರಿಂದ ವೇದ ಶಾಸ್ತ್ರಗಳನ್ನೂ ಕೃಪಾಚಾರ್ಯರಿಂದ ಶಸ್ತ್ರವಿದ್ಯೆಯನ್ನೂ ಕಲಿಯುವನು. ಮತ್ತು ವಿಷಯಗಳಲ್ಲಿ ಅವನಿಗೆ ವೈರಾಗ್ಯ ಉತ್ಪನ್ನವಾಗಿ ಶೌನಕರ ಉಪದೇಶದಿಂದ ಅವನಿಗೆ ವೇದಾಂತ ವಿದ್ಯೆಯಲ್ಲಿ ಒಳ್ಳೇ ಪಾಂಡಿತ್ಯವು ಪ್ರಾಪ್ತವಾಗುವುದು. ವೇದಶಾಸ್ತ್ರನುಸಾರವಾಗಿ ದೊಡ್ಡವರ ಉಪದೇಶದಿಂದ ಅವನು ಸಾಧನಮಾಡಿಕೊಂಡು ಮೋಕ್ಷವನ್ನು ಹೊಂದುವನು. ಆ ಶತಾನೀಕನಿಂದ ಮುಂದೆ ಆ ಪಾಂಡವರ ವಂಶದಲ್ಲಿ ಅಶ್ವಮೇಧದತ್ತ, ಅಸೀಮಕೃಷ್ಣ, ನಿಚಕ್ನು, ಉಷ್ಣ, ಚಿತ್ರರಥ, ಶುಚಿರಥ, ವೃಷ್ಣಿಮನ್, ಸುಷೇಣ, ಸುನೀಥ, ನೃಪಚಕ್ಷು, ಸುಖಾವಲ, ಪಾರಿಪ್ಲವ, ಸುನಯ, ಮೇಧಾವಿ, ರಿಪುಂಜಯ, ಮೃದು, ತಿಗ್ಮ, ಬೃಹದ್ರಥ, ವಸುದಾನ, ಮತ್ತೊಬ್ಬ ಶತಾನೀಕ, ಉದಯನ, ಅಹೀನರ, ದಂಡಪಾಣಿ,ನಿರಮಿತ್ರ,,ಕ್ಷೇಮಕ, ಎಂದು ಮುಂತಾಗಿ ರಾಜಮಹಾರಾಜರು ಭೂಮಿಯನ್ನು ಆಳುವರು. ಜನಮೇಜಯ ರಾಜನ ಮರಿಮಗನಾದ ಅಸೀಮ ಕೃಷ್ಣನ ಕಾಲದಲ್ಲಿಯೇ ಹಸ್ತಿನಾವತಿಯು ಗಂಗೆಯ ಮಹಾಪೂರದಲ್ಲಿ ಮುಳುಗಿ ಹೋಗುವುದರಿಂದ ಅವನು ಕೌಶಾಂಬಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಳ್ಳುವನು. ಅಸೀಮ ಕೃಷ್ಣನಿಂದ ಕ್ಷೇಮಕರವರೆಗೆ ಮುಂದಿನ ರಾಜರೆಲ್ಲರೂ ಕೌಶಾಂಬಿಯನ್ನೇ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳುವರು. ಈ ಕ್ಷೇಮಕನ ತಲೆಗೆ ಈ ರಾಜರ್ಷಿಗಳ ವಂಶವು ಸಮಾಪ್ತವಾಗುವುದು.

**ಬ್ರಹ್ಮ ಕ್ಷತ್ರಸ್ಯ ಯೋ ಯೋನಿರ್ವಂಶೋ ರಾಜರ್ಷಿ ಸತ್ಕೃತಃ**
**ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾನಂ ಪ್ರಾಪ್ಸ್ಯತೇ ಕಲೌ ॥**

### ಮುಂದಾಗಲಿರುವ ಇಕ್ಷ್ವಾಕುವಂಶದ ರಾಜರು

ಪರಾಶರ - ಇನ್ನು ಮೇಲೆ ಇಕ್ಷ್ವಾಕುವಂಶದಲ್ಲಿ ಆಗಲಿರುವ ರಾಜರ ವಂಶ ವಿಸ್ತಾರವನ್ನು ಹೇಳುತ್ತೇನೆ ಕೇಳು. ಬೃಹದ್ಬಲನಿಗೆ ಬೃಹತ್‌ಕ್ಷಣ, ಅವನಿಂದ ಮುಂದೆ ಉರುಕ್ಷಯ, ವತ್ಸವ್ಯೋಹ, ಪ್ರತಿವ್ಯೋಮ, ದಿವಾಕರ, ಸಹದೇವ, ಬೃಹದಶ್ವ, ಭಾನುರಥ, ಪ್ರತೀತಾಶ್ವ, ಸುಪ್ರತೀಕ, ಮರುದೇವ, ಸುನಕ್ಷತ್ರ, ಕಿನ್ನರ, ಅಂತರಿಕ್ಷ, ಸುಪರ್ಣ, ಅಮಿತ್ರಜಿತ್, ಬೃಹದ್ರಾಜ, ಧರ್ಮಿ, ಕೃತಂಜಯ, ರಣಂಜಯ, ಸಂಜಯ, ಶಾಕ್ಯ, ಶುದ್ಧೋದನ, ಬಾಹುಲ, ಪ್ರಸೇನಜಿತ್, ಕ್ಷುದ್ರಕ, ಕುಂಡಕ, ಸುರತ, ಸುಮಿತ್ರ, ಈ ಸುಮಿತ್ರನ ತಲೆಗೆ ಇಕ್ಷ್ವಾಕು ವಂಶವು ಕೊನೆಗೊಳ್ಳುವುದು.

**''ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ**
**ಯತಸ್ತಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪಸ್ಯತಿ ವೈ ಕಲೌ ॥**

**ಪರಾಶರ** - ಮಗಧ ವಂಶದಲ್ಲಿ ಮಹಾ ಬಲಿಷ್ಠರಾದ ಜರಾಸಂಧ ಮುಂತಾದ ರಾಜರು ಹಿಂದೆ ಆಗಿ ಹೋದರು. ಮುಂದೆ ಜರಾಸಂಧನಿಂದ ಮುಂದೆ ಸಹದೇವ, ಸೋಮ, ಶ್ರುತಶ್ರವ, ಆಯುತಾಯು, ನಿರಮಿತ್ರ, ಸುನೇತ್ರ, ಬೃಹತ್ಕರ್ಮ, ಸೇನಜಿತ್, ಶ್ರುತಂಜಯ, ವಿಪ್ರ, ಶುಚಿ, ಕ್ಷೇಮ್ಯ, ಸುವ್ರತ, ಧರ್ಮ, ಸುಶ್ರವ, ದೃಢಸೇನ, ಸುಬಲ, ಸುನೀತ, ಸತ್ಯದಿತ್, ವಿಶ್ವಜಿತ್, ರಿಪುಂಜಯ, ಮೊದಲಾದವರು ಒಂದು ಸಾವಿರ ವರ್ಷಗಳವರೆಗೆ ಬಾಳುವರು. ತಮ್ಮ ರಾಜ್ಯವನ್ನು ಆಳುವರು.

*ಶ್ರೀ ವಿಷ್ಣು ಮಹಾಪುರಣದಲ್ಲಿ ಚತುರ್ಥಾಂಶದ ಹದಿನೆಂಟನೇ ಅಧ್ಯಾಯ ಸಂಪೂರ್ಣ*



## ಮುಂದಾಗಲಿರುವ ಕಲಿಯುಗದ ರಾಜರ ಮತ್ತು ಕಲಿಧರ್ಮಗಳ ಬಣ್ಣನೆ ರಾಜವಂಶಗಳ ವರ್ಣನೆಯ ಉಪಸಂಹಾರ

ಅಧ್ಯಾಯ - ೧೯

**ಪರಾಶರ** - ಮಗಧ ದೇಶದ ಬೃಹದ್ರಥನ ವಂಶದಲ್ಲಿಯ ಕೊನೆಯ ರಾಜನಾದ ಪುರಂಜಯನಿಗೆ ಸುನಿಕ ಎಂಬ ಮಂತ್ರಿಯು ಇರುವನು. ಅವನು ತನ್ನ ಒಡೆಯನಾದ ರಿಪುಂಜಯ ಮಹಾರಾಜನನ್ನು ಕೊಂದು ಪ್ರದ್ಯೋತ ಎಂಬ ತನ್ನ ಮಗನನ್ನು ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡುವನು. ಆ ಪ್ರದ್ಯೋತನಿಂದ ಮುಂದೆ ಬಲಾಕ, ವಿಶಾಖಯೂಪ, ಜನಕ, ನಂದಿವರ್ಧನ ಎಂದು ಅನೇಕ ರಾಜರು ಒಂದು ನೂರು ಮೂವತ್ತೆಂಟು (೧೩೮) ವರ್ಷಗಳ ವರೆಗೆ ಭೂಮಂಡಲವನ್ನು ಆಳುವರು. ಅನಂತರ ಶಿಶುನಾಭ, ಕಾಕವರ್ಣ, ಕ್ಷೇಮಧರ್ಮ, ಕ್ಷತೌಜಸ, ವಿಧಿಸಾರ, ಅಜಾತಶತ್ರು, ಅರ್ಭಕ, ಉದಯನ, ನಂದಿವರ್ಧನ, ಮಹಾನಂದಿ ಮುಂತಾದ ಶಿಶುನಾಭ ಮನೆತನದ ಭೂಪತಿಗಳು ಮೂರುನೂರ ಅರವತ್ತೆರಡು (೩೬೨) ವರ್ಷ ರಾಜ್ಯವಾಳುವರು.

ಮಹಾನಂದಿಗೆ ಶೂದ್ರಸ್ತ್ರೀಯ ಹೊಟ್ಟೆಯಿಂದ ಅತಿ ಜಿಪುಣನೂ ಮಹಾ ಬಲಿಷ್ಠನೂ ಆದ ಮಹಾಪದ್ಮ ಎಂಬ ಹೆಸರಿನ ನಂದರಾಜನು ಹುಟ್ಟುವನು ಅತ್ಯಂತ ಪರಾಕ್ರಮ ಶಾಲಿಯಾದ ಅವನು ಪರಶುರಾಮನಂತೆ ಆ ಕಾಲದ ಎಲ್ಲ ಕ್ಷತ್ರಿಯರನ್ನು ಸಂಹರಿಸಿ ಬಿಡುವನು. ಈ ಮಹಾಪದ್ಮನಿಂದ ಮುಂದೆ ಶೂದ್ರರಾಜರು ರಾಜ್ಯವಾಳತೊಡಗುವುದು. ಮಹಾಪದ್ಮನು ಏಕಚ್ಛತ್ರಾಧಿಪತಿಯಾಗಿ ನಿರಂಕುಶವಾದ ಸಾರ್ವಭೌಮ ಸತ್ತೆಯನ್ನು ನಿರಾತಂಕವಾಗಿ ನಡೆಸುವನು. ಈ ಮಹಾಪದ್ಮನ ಸುಮೂಲ್ಯ ಮೊದಲಾದ ಒಂಬತ್ತು ಜನ ಮಕ್ಕಳು ಅನಂತರ ಭೂಮಿಯನ್ನು ಆಳುವರು. ಕೌಟಿಲ್ಯ ಎಂಬ ಬ್ರಾಹ್ಮಣನು ಈ ನವ ನಂದರನ್ನು ನಿಃಪಾತ ಮಾಡುವನು. ನಂದರಾಜನ ಮುರಾ ಎಂಬ ಪ್ರೇಯಸಿಯಿಂದ ಹುಟ್ಟಿದ ಚಂದ್ರಗುಪ್ತನನ್ನು ಸಿಂಹಾಸನದಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡುವನು.

ಚಂದ್ರಗುಪ್ತನಿಂದ ಮೌರ್ಯವಂಶವು ಅಧಿಕಾರಕ್ಕೆ ಬರುವುದು. ಚಂದ್ರಗುಪ್ತನ ಮಗ ಬಿಂದುಸಾರ, ಅವನ ಮಗ ಅಶೋಕವರ್ಧನ, ಅವನಿಂದ ಮುಂದೆ ಸುಯಶ, ದಶರಥ, ಸಂಯುತ, ಶಾಲಿಶೂಕ, ಸೋಮಶರ್ಮ, ಶತಧನ್ವ, ಬೃಹದ್ರಥ, ಎಂದು ಮುಂತಾಗಿ ಹತ್ತು ಜನ ಮೌರ್ಯವಂಶದ ರಾಜರು ಒಂದು ನೂರು ಎಪ್ಪತ್ತು ಮೂರು ವರ್ಷ ರಾಜ್ಯವಾಳುವರು. ಮೌರ್ಯರ ಅನಂತರದಲ್ಲಿ ಹತ್ತು ಶುಂಗವಂಶದ ರಾಜರು ಭೂಮಿಯನ್ನು ಆಳುವರು. ಇವರಲ್ಲಿ ಮೊದಲನೇಯವನಾದ ಪುಷ್ಯ ಮಿತ್ರನು ಮೌರ್ಯರ ಸೇನಾಪತಿಯಾಗಿದ್ದು ಕೊನೆಗೆ ಆ ಮೌರ್ಯ ರಾಜನನ್ನು ಸಂಹರಿಸಿ ತಾನೇ ಸಿಂಹಾಸನವನ್ನು ಆರೋಹಣ ಮಾಡುವನು. ಅವನ ಮಗ ಅಗ್ನಿಮಿತ್ರ. ಅವನಿಂದ ಮುಂದೆ ಸುಜ್ಯೇಷ್ಠ ವಸುಮಿತ್ರ, ಉದಂಕ, ಪುಲಿಂದಕ, ಘೋಷವಸು, ವಜ್ರಮಿತ್ರ, ಭಾಗವತ, ದೇವಭೂಮಿ ಮುಂತಾದ ಶುಂಗ ಭೂಪತಿಗಳು (ಒಂದು ನೂರು ಎಪ್ಪತ್ತು ಮೂರು) ವರ್ಷ ಭರತಖಂಡವನ್ನು ಆಳುವರು. ಅನಂತರ ಕಣ್ವ ಭೂಪತಿಗಳ ಆಳಿಕೆ ಪ್ರಾರಂಭ.

ಶುಂಗವಂಶದ ಕೊನೆಯ ಕುಡಿಯಾದ ದೇವಭೂತಿ ಮಹಾವ್ಯಸನಿ. ಅವನ ಅಮಾತ್ಯನಾದ ಕಾಣ್ವ ಕುಲದ ವಸುದೇವನು ದೇವಭೂತಿಯನ್ನು ಸಂಹರಿಸಿ ಭೂಮಿಯ ಒಡೆತನವನ್ನು ಅವನಿಂದ ಕಸಿದುಕೊಳ್ಳುವನು. ಅವನಿಗೆ ಭೂಮಿತ್ರ ಎಂಬ ಮಗ. ತತ್ಪುತ್ರ ನಾರಾಯಣ, ಅವನ ತನಯ ಸುಶರ್ಮ. ಈ ನಾಲ್ವರು ಕಾಣ್ವರಾಜರು ನಲವತ್ತೈದು ವರ್ಷಗಳವರೆಗೆ ರಾಜ್ಯವಾಳುವರು. ಇವರಿಗೆ ಕಾಣ್ವಾಯನರು ಎಂದು ಹೆಸರು. ಕಾಣ್ವಾಯಣ ವಂಶದ ಸುಶರ್ಮನ ಅರಮನೆಯಲ್ಲಿ ಬಲಿಪುಚ್ಛ ಎಂಬ ಸೇವಕನಿರುವ. ಅವನು ಆಂಧ್ರ ಜಾತಿಯವ. ಮಹಾಧೂರ್ತ. ಅವನು ಸಮಯ ಸಾಧಿಸಿ ಒಡೆಯನನ್ನು ಕಡಿದು ಹಾಕಿ ಪೊಡವಿಯನ್ನೆಲ್ಲ ತನ್ನ ಹಿಡಿತದಲ್ಲಿ ಇಟ್ಟುಕೊಂಡು ಅರಸನಾಗಿ ಮೆರೆಯುವನು. ಅವನ ಅನಂತರ ಅವನ ತಮ್ಮ ಕೃಷ್ಣನು ಭೂಮಿಗೆ ಒಡೆಯನಾಗುವನು. ಅವನಿಂದ ಮುಂದೆ ಶಾಂತಕರ್ಣಿ, ಪೂರ್ಣೋತ್ಸಂಗ, ಶಾತಕರ್ಣಿ, ಲಂಬೋದರ, ಪಿಲಕ, ಮೇಘಸ್ವಾತಿ, ಪಟುಮಾನ್, ಅರಿಷ್ಟಕರ್ಮ, ಹಾಲಾಹಲ, ಪಲಲಕ, ಪುಲಿಂದಸೇನ, ಸುಂದರ, ಶಾತಕರ್ಣಿ, ಶಿವಸ್ವಾತಿ, ಗೋಮತಿಪುತ್ರ, ಅಲಿಮಾನ್, ಶಿವಶ್ರಿತ, ಶಿವಸ್ಕಂದ, ಯಜ್ಞಶ್ರೀ, ದ್ವಿಯಜ್ಞ, ಚಂದ್ರಶ್ರೀ, ಪುಲೋಮಾಚಿಮುಂತಾಗಿ ಮೂವತ್ತು ಜನ ರಾಜರು (೪೫೬) ವರ್ಷ ರಾಜ್ಯವಾಳುವರು.

ಅನಂತರ ಏಳು ಅಭೀರವಂಶದವರು, ಹತ್ತು ಗರ್ದಭಿಲ ಮನೆತನದವರು ರಾಜ್ಯವನ್ನು ಆಳುವರು. ಆಮೇಲೆ ಹದಿನಾರು ಶಕವಂಶದ ಅರಸರು, ನಂತರ ಎಂಟು ಯವನದೊರೆಗಳು, ಹದಿನಾಲ್ಕು ತುರುಕರಾಜರು, ಹದಿಮೂರು ಮುಂಡರು, ಹನ್ನೊಂದು ಮೌನಮನೆತನದ ಭೂಪರು ಪೃಥ್ವೀ ಶಾಸನಗೈಯುವರು. ಒಟ್ಟು ಇವರೆಲ್ಲರು ಆಳ್ವಿಕೆಯ ಕಾಲ ಒಂದು ಸಾವಿರದ ತೊಂಬತ್ತು ವರ್ಷ. ಇದರಲ್ಲಿ ಮೌನಕುಲದ ಹನ್ನೊಂದು ರಾಜರ ಶಾಸನದ ಅವಧಿ ಮುನ್ನೂರು ವರ್ಷ. ಅವರು ಆಳಿದನಂತರ ಕೈಕಿಲ ಎಂಬ ಯುವನರು ಪಟ್ಟಾಭಿಷೇಕವಿಲ್ಲದೆ ಭೂಮಿಯನ್ನು ಆಳುವರು. ಈ ಕೈಕಿಲ ಯವನಕುಲವನ್ನು ವಿಂಧ್ಯ ಶಕ್ತಿಯು ಬೆಳಗಿಸುವನು. ಅವನಿಂದ ಮುಂದೆ ಪುರಂಜಯ, ರಾಮಚಂದ್ರ, ಧರ್ಮವರ್ಮ, ವಂಗ, ನಂದನ, ಸುನಂದೀ ಮುಂತಾದ ರಾಜರಾಗುವರು. ಈ ಸುನಂದಿಗೆ ನಂದಿಯಶ, ಶುಕ್ರ, ಪ್ರವೀರ ಎಂದು ಮೂರು ಮಕ್ಕಳು. ಹೀಗೆ ಕೈಕಿಲ ಕುಲದವರು ಒಂದು ನೂರು ಆರು ವರ್ಷ ರಾಜ್ಯಶಾಸನ ನಡೆಸುವರು. ಮಂದೆ ಅವರ ಮಕ್ಕಳು ಮೊಮ್ಮಕ್ಕಳು ಹದಿಮೂರು ತಲೆಯವರೆಗೆ ಶಾಸನ ಸೂತ್ರಧಾರರಾಗಿರುವರು. ಅನಂತರ ಮೂವರು ಬಾಲ್ಹೀಕ ವಂಶದ ರಾಜರು ಅಧಿಕಾರಕ್ಕೆ ಬರುವರು ಬಳಿಕ ಹದಿಮೂರು ಪುಷ್ಪಮಿತ್ರರು, ಏಳು ಪಟುಮಿತ್ರ ಎಂಬ ಆಂಧ್ರರು ಅಧಿಕಾರಾರೂಢರಾಗುವರು. ಇವರ ನಂತರ ಕೋಶಲ ದೇಶದ ಒಂಭತ್ತು ಜನರು ರಾಜರಾಗಿ ನೈಷಧೇಶ್ವರರೆಂದು ಕರೆಯಲ್ಪಡುವರು.

ಮಗಧ ದೇಶದಲ್ಲಿ ವಿಶ್ವಸ್ಪಟಕ ಎಂಬ ರಾಜನು ಬೇರೆ ಬೇರೆ ಜಾತಿ ವರ್ಣಗಳನ್ನು ಪ್ರವೃತ್ತಗೊಳಿಸುವನು. ಕೈವರ್ತ, ವಟು, ಪುಲಿಂದ ಮತ್ತು ಬ್ರಾಹ್ಮಣರನ್ನು ರಾಜ್ಯದ ಅಧಿಕಾರದಲ್ಲಿ ಸ್ಥಾಪಿಸುವನು. ಎಲ್ಲ ಕ್ಷತ್ರಿಯ ಜಾತಿಯನ್ನು ನಿರ್ಮೂಲಗೊಳಿಸಿ ಒಂಬತ್ತು ನಾಗವಂಶದ ರಾಜರು ಪದ್ಮಾವತಿಯಲ್ಲಿ ರಾಜ್ಯವಾಳುವರು. ಮತ್ತು ಗಂಗೆಯ ತಡಿಯ ನೆರೆಹೊರೆಯ ನಾಡನ್ನೂ ಗಯಾ ಪ್ರಯಾಗ ಮುಂತಾದ ಸ್ಥಳವನ್ನು

ಗುಪ್ತರಾಜರು ಶಾಸನಗೈಯ್ಯುವರು. ಕೇರಳ, ಆಂಧ್ರ, ಮಾಂಡ್ರ, ತಾಮ್ರಲಿಪ್ತ ಮತ್ತು ಸಮುದ್ರತೀರದ ನಗರಗಳನ್ನೂ ದೇವರಕ್ಷಿತನುಪಾಲಿಸುವನು. ಕಲಿಂಗ, ಮಾಹಿಷ, ಮಹೇಂದ್ರ, ಭೌಮ ಮುಂತಾದ ದೇಶಗಳನ್ನು ಗುಹ ಎಂಬ ರಾಜರು ಭೋಗಿಸುವರು. ನೈಷಧ ನೈಮಿಷಕ, ಕಾಲಕೋಶಕ ವಂಶದ ರಾಜರು ಅಧಿಪತಿಗಳಾಗಿ ರಾಜ್ಯೈಶರ್ಯವನ್ನು ಅನುಭವಿಸುವರು. ತ್ರೈರಾಜ್ಯ ಮತ್ತು ಮುಷಿಕ ದೇಶಗಳನ್ನು ಕನಕ ಎಂಬ ದೊರೆ ಆಳುವ: ಸೌರಾಷ್ಟ್ರ ಆವಂತೀ, ಶೂದ್ರ, ಆಭೀರ ಮತ್ತು ನರ್ಮದೆಯ ಸುದೂರತೀರದ ಮರುಭೂಮಿಗಳನ್ನು ಪತಿತರಾದ ಬ್ರಾಹ್ಮಣರೂ ಗೊಲ್ಲರೂ, ಶೂದ್ರರೂ ಆಳುವರು. ಸಮುದ್ರ ಪ್ರಾಂತದ ದಾವಿನಕೋರ್ವೀ ಚಂದ್ರ ಭಾಗ, ಹಾಗೂ ಕಾಶ್ಮೀರ ದೇಶಗಳನ್ನು ವ್ರಾತ್ಯರಾದ ಮ್ಲೇಂಛರೂ, ಶೂದ್ರರೂ ತಮ್ಮ ಅಧಿಕಾರದಲ್ಲಿ ತೆಗೆದುಕೊಳ್ಳುವರು.

**"ತತಶ್ಚ ಅನುದಿನ ಮಲ್ಪಾಲ್ಪ ಹ್ರಾಸ ವ್ಯವಚ್ಛೇದಾ ದ್ಧರ್ಮಾರ್ಥಯೋರ್ಜಗತಃ ಸಂಕ್ಷಯೋ ಭವತಿ ॥ ತತಶ್ಚಾರ್ಥಮೇವಾಭಿಜನ ಹೇತುಃ। ಬಲಮೇವಾಶೇಷ ಧರ್ಮಹೇತುಃ। ಸ್ತ್ರೀತ್ವಮೇವ ಉಪಭೋಗ ಹೇತುಃ। ಅನೃತಮೇವ ವ್ಯವಹಾರ ಜಯ ಹೇತುಃ। ಉನ್ನತಾಂಬುತೈವ ಪೃಥಿವೀ ಹೇತುಃ। ಬ್ರಹ್ಮ ಸೂತ್ರತೈವ ವಿಪ್ರತ್ವ ಹೇತುಃ। ರತ್ನಧಾತುತೈವ ಶ್ಲಾಘ್ಯತಾ ಹೇತುಃ। ಲಿಂಗಧಾರಣ ಮೇವಾಶ್ರಮ ಹೇತುಃ। ಅನ್ಯಾಯ ಏವ ವೃತ್ತಿ ಹೇತುಃ। ದೌರ್ಬಲ್ಯಮೇವ ಅವೃತ್ತಿ ಹೇತುಃ। ಅಭಯ ಪ್ರಗಲ್ಭೋಚ್ಚಾರಣಮೇವ ಪಾಂಡಿತ್ಯಹೇತುಃ। ಅನಾಢ್ಯತೈವ ಸಾಧುತ್ವಹೇತುಃ। ಸ್ನಾನ ಮೇವ ಪ್ರಸಾಧನ ಹೇತುಃ। ದಾನಮೇವ ಧರ್ಮ ಹೇತುಃ। ಸ್ವೀಕರಣಮೇವ ವಿವಾಹ ಹೇತುಃ। ಸದ್‌ವೇಷಧಾರ್ಯೇವ ಪಾತ್ರಮ್। ದೂರಾಯತನೋದಕಮೇವ ತೀರ್ಥ ಹೇತುಃ। ಕಪಟವೇಷ ಧಾರಣಮೇವ ಮಹತ್ವ ಹೇತುಃ। ಇತ್ಯೇವಮನೇಕ ದೋಷೋತ್ತರೇ ತು ಭೂಮಂಡಲೇ ಸರ್ವವರ್ಣೇಷ್ವೇವ ಯೋ ಯೋ ಬಲವಾನ್ ಸ ಭೂಪತಿರ್ಭವಿಷ್ಯತಿ ॥**

ಇವರೆಲ್ಲರ ಶಾಸನಕಾಲ ಸಾಮಾನ್ಯವಾಗಿ ಅಷ್ಟಕ್ಕಷ್ಟೇ. ಈ ಎಲ್ಲ ರಾಜರಲ್ಲಿ ಕೋಪ ಹೆಚ್ಚು, ವಿವೇಕ ಕಡಿಮೆ, ದುಡುಕು ಜಾಸ್ತಿ, ದಯೆ ಕಮ್ಮಿ, ನಿಗ್ರಹ ಅಧಿಕ, ಅನುಗ್ರಹ ಶೂನ್ಯ, ಇವರಿಗೆಲ್ಲ ಹುಸಿನುಡಿವಲ್ಲಿ ಹೌಸು, ಅಧರ್ಮದಲ್ಲಿ ಅಗ್ರಹ, ಅಲ್ಪ ಬಲ, ಅಪದ್ಧ ವಿಚಾರ. ಹೊಸ ಹೊಸ ಹೆಣ್ಣಿನ ಚಾಪಲ್ಯ. ಚಿಕ್ಕ ಚಿಕ್ಕ ಮಕ್ಕಳನ್ನೂ ಕೊಲ್ಲಲು ಹೇಸರು. ಗೋಮಾಂಸ ತಿನ್ನಲು ಹಿಂಜರಿಯರು. ಹೆರವರ ಹಣವನ್ನು ಸೂರೆಗೊಳ್ಳುವುದರಲ್ಲಿಯಂತೂ ಅವರಿಗೆ ಎಲ್ಲಿಲ್ಲದ ಹುರುಪು, ಹವ್ಯಾಸ. ಮಹಾ ತಾಮಸ ಸ್ವಭಾವ. ಇಂಥವರು ಏಳುವದೂ ತಡವಿಲ್ಲ. ಬೀಳುವುದೂ ತಡವಿಲ್ಲ. ಆಶೆ ಬಹಳ, ಆಯುಷ್ಯ ಅಲ್ಪ. ಎಲ್ಲರೂ ಕಡುಲೋಭಿಗಳು. 'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ಆ ಕಾಲದ ಪ್ರಜೆಗಳೂ ಕೂಡ ರಾಜರಂತೆ ಧರ್ಮಭ್ರಷ್ಟರಾಗಿ ಶಕ್ತಿ ಹೀನರೂ ಅಲ್ಪಾಯುಷಿಗಳೂ ಆಗುವರು. ಆರ್ಯರೂ ಮ್ಲೇಂಛರೂ ಜಾತಿ ಸಾಂಕರ್ಯದಿಂದ ಕೂಡಿ ಧರ್ಮಾತೀತವಾದ ರಾಜ್ಯವನ್ನು ಸ್ಥಾಪಿಸಿ ಪ್ರಜೆಗಳನ್ನು ನಾಶಮಾಡುತ್ತಾರೆ. ಹೀಗೆ ದಿನ ದಿನವೂ ಧರ್ಮ ಅರ್ಥಗಳು ಕ್ಷೀಣವಾಗುತ್ತ ಪ್ರಪಂಚವೇ ನಾಶದೆಡೆಗೆ ನುಗ್ಗಿ ನಡೆಯುತ್ತದೆ. ಆ ಕಾಲದಲ್ಲಿ ಕುಲೀನತೆಯ ಮುಖ್ಯ ಗಮಕ ದುಡ್ಡೇ ಆಗುವುದು. ಮುಂಗೈ ಜೋರು ಎಲ್ಲ ಧರ್ಮಗಳಿಗೂ ಮೂಲ ಕಾರಣವಾಗುವುದು.

ಇಂದ್ರಿಯ ಲೌಲಪ್ಯವೇ ದಾಂಪತ್ಯದ ಕಾರಣ, ಹೆಣ್ಣೆಂದರೆ ಸಾಕು ಭೋಗಿಸುವ ಪ್ರವೃತ್ತಿ. ಸುಳ್ಳು ವ್ಯವಹಾರದಲ್ಲಿ ಗೆಲುವಿನ ಬಾವುಟವನ್ನೇ ಎತ್ತುವರು. ನೀರಿನ ಸೌಕರ್ಯವಿದ್ದರೆ ತೀರಿತು. ಜನ ನೆಲಿಸಿಬಿಡುವರು. ತೀರ್ಥ ಕ್ಷೇತ್ರ ಒಂದೂ ವಿಚಾರಿಸುವುದೇ ಇಲ್ಲ. ಜನಿವಾರವಿದ್ದರೆ ಸಾಕು ಬ್ರಾಹ್ಮಣನಾಗಿ ಬಿಡುವ. ದುಡ್ಡಿದ್ದವನೇ ದೊಡ್ಡಪ್ಪ. ಕಪನಿ ಹೊದ್ದರೆ ಸಾಕು ಸ್ವಾಮಿಗಳಾಗಿ ಬಿಡುವರು. ಬದುಕಲಿಕ್ಕೆ ಸುಳ್ಳಾಡುವುದೇ ಸಾಧನವಾಗುವುದು. ಬಲವಿಲ್ಲದವರು ಬದುಕಲಾರದ ಪರಿಸ್ಥಿತಿ ಬರುವುದು. ನಿರ್ಭಯವಾಗಿ ಗಟ್ಟಿಸಿ ಮಾತನಾಡುವುದೇ ಮಹಾಪಾಂಡಿತ್ಯ ಎನಿಸುವುದು. ಬಡತನವೇ ಸಜ್ಜನಿಕೆಗೆ ಕಾರಣವಾಗುವುದು. ದುಡ್ಡಿರುವವರೆಗೆ ಒಳ್ಳೇತನಕ್ಕೆ ಯಾರೂ ಒಲಿಯರು. ಮೈಯನ್ನು ಸಿಂಗರಿಸಲಿಕ್ಕಾಗಿಯೇ ಸ್ನಾನ ಮಾಡುವದು. ಮಡಿ ಮಾಡಲಿಕ್ಕಾಗಿ ಅಥವಾ ದೇವರಪೂಜೆಗಾಗಿ ಅಲ್ಲ. ಕನ್ನೆಯನ್ನು ಒಪ್ಪಿ ಬಿಟ್ಟರೆ ಸಾಕು ಮದುವೆಯಾದಂತೆಯೇ. ಯಾವ ವೇದಶಾಸ್ತ್ರವಿಧಿಗಳೂ ಜನರಿಗೆ ಬೇಕಾಗುವುದಿಲ್ಲ. ಸ್ವಾಮಿಗಳ, ಪಂಡಿತರ, ವೇಷ ಹಾಕಿದರೇ ಸತ್ಪಾತ್ರರಾಗುವರು. ದಿನಕ್ಕೊಂದು ವೇಷ, ಕ್ಷಣಕ್ಕೊಂದು ಭಾಷೆಗಳನ್ನು ತಳೆದಾಡುವವರೇ ಮಹಾ ಪುರುಷರೆಂದು ಕರೆಯಲ್ಪಡುವರು. ಹೀಗೆ ಒಂದಕ್ಕಿಂತ ಹೆಚ್ಚು ದೋಷದೂಷಿತರಾದ ಜನರು ತುಂಬಿದ ಈ ಭೂಮಂಡಲದಲ್ಲಿ ಬಲವಿದ್ದವನೇ ಮುಂದೆ ಬಿದ್ದು ಉಳಿದವರನ್ನೆಲ್ಲ ತನ್ನ ಅಂಕಿತದಲ್ಲಿರಿಸಿಗೊಂಡು ರಾಜನಾಗಿ ಬಿಡುವನು.

ಲೋಲುಪರಾದ ಈ ರಾಜಾಧಿಕಾರಿಗಳು ತಮ್ಮ ವಿಷಯ ವಾಸನೆಯನ್ನು ತಣಿಸಲಿಕ್ಕಾಗಿ ದುರ್ವ್ಯಸನಿಗಳಾಗಿ ಹಣವನ್ನು ಸೂರೆಮಾಡುವರು. ಎಷ್ಟು ಹಣವಾದರೂ ಅವರಿಗೆ ಸಾಲದು. ಮತ್ತೆ ಮತ್ತೆ ಅವರು ಕರ ಹೇರಿ ಪ್ರಜೆಗಳನ್ನು ಹೀರಿ ಹಣ್ಣು ಹಣ್ಣು ಮಾಡುವರು. ಹಿಂಡಿ ಹಿಪ್ಪೆಮಾಡುವರು. ಇವರ ಅತಿಶಯವಾದ ಕರಭಾರದಿಂದ ರೋಸಿ ಹೋದ ಜನ ಊರು ಮನೆ ಮಾರು ಬಿಟ್ಟು ಅಡವೀಪಾಲಾಗುವರು. ಕಾಡುಗಳಲ್ಲಿ ತೊಪ್ಪಲ ತರಕಾರಿ ಗಡ್ಡೆ ಗೆಣಸು, ಹಣ್ಣು-ಕಾಯಿ, ಜಲ-ಜೇನು, ತಿಂದು ಹೇಗೋ ಜೀವಿಸುವರು. ಗಿಡಗಳ ತೊಗಟೆ, ತೊಪ್ಪಲು, ನಾರು, ಜಡೆ, ಎಲೆಗಳನ್ನು ಮರ್ಯಾದೆಗಾಗಿ ಮೈಗೆ ಸುತ್ತಿಕೊಂಡು ಚಳಿ ಮಳೆ ಗಾಳಿಗಳನ್ನು ಸಹಿಸಿಗೊಂಡು ಬಿಸಿಲ್ಹಣ್ಣು ತಿನ್ನುತ್ತ ಕಷ್ಟ ಪಡಬೇಕಾಗುವುದು. ಈ ಕಾಲದ ಎಲ್ಲ ಜನರ ಸರಾಸರಿ ಆಯುರ್ಮಾನ ಕೇವಲ ಇಪ್ಪತ್ತೂರು. ಈ ಕಲಿಯುಗದಲ್ಲಿ ಜನರಿಗೆ ಅತ್ಯಲ್ಪ ಆಯುಷ್ಯ. ಈ ಇಪ್ಪತ್ತೂರರ ವಯಸ್ಸನ್ನು ಮುಟ್ಟುವವರೂ ಆಗ ವಿರಳರೇ ಸರಿ. ಇದ್ದವರು ಶತಾಯುಷಿಗಳೆನ್ನಬಹುದು. ಉಳಿದ ಸಾಮಾನ್ಯ ಜನರೆಲ್ಲರೂ ಅದರೊಳಗಾಗಿಯೇ ಅರ್ಥಾತ್ ಬಾಲ್ಯ ತಪ್ಪಿದರೆ ಏರುಂಜೌವ್ವನದಲ್ಲಿಯೇ ಇಹಲೋಕದ ಯಾತ್ರೆಯನ್ನು ಮುಗಿಸಿ ಬಿಡುವರು.

ಆ ಕಾಲದಲ್ಲಿ ವೇದೋಕ್ತ ಕರ್ಮಗಳು ಲೋಪವಾಗವುವು. ಶಾಸ್ತ್ರೋಕ್ತ ಕರ್ಮಗಳನ್ನಂತೂ ಕೇಳುವವರೇ ಇಲ್ಲ. ಧರ್ಮಕ್ಕೆ ಅತ್ಯಂತ ಅವನತಿಯ ಕಾಲ. ಇಂತು ಧರ್ಮಗ್ಲಾನಿಯು ಪೂರ್ಣವಾದಾಗ ಪರಬ್ರಹ್ಮಸ್ವರೂಪಿಯಾದ ಚರಾಚರಗುರುವಾದ ಶ್ರೀಹರಿಯು ಶಂಬಲ ಎಂಬ ಹಳ್ಳಿಯ ವಿಷ್ಣುಯಶ ಎಂಬ ಬ್ರಾಹ್ಮಣನ ಮನೆಯಲ್ಲಿ ಹುಟ್ಟುವನು. ಅದೇ ಭಗವಂತನ ಕಲ್ಕಿ ಅವತಾರ ಸಿದ್ಧಿಗಳೆಲ್ಲ ಅವನ ಕೈಯಲ್ಲಿ. ತುದಿ ಮೊದಲುಗಳು

ಅವಗೆಲ್ಲಿ! ಜಗತ್ತಿನ ಹುಟ್ಟು ಸಾವುಗಳನ್ನು ರೂಪಿಸುವವನು ಅವನೇ ಅಲ್ಲವೇ!

ಪರಬ್ರಹ್ಮ ರೂಪಿಯಾದ ಆ ಕಲ್ಕಿಯು ಆ ಕಾಲದ ಕೀಳುರಾಜರನ್ನೆಲ್ಲ ಕಡಿದು ಕೊಚ್ಚಿ ಹಾಕುವನು. ಮ್ಲೇಂಛರೆಲ್ಲರೂ ಅವನ ಆಯುಧಕ್ಕೆ ಬಲಿಯಾಗುವರು. ದುಷ್ಟಭ್ರಷ್ಟರನ್ನೆಲ್ಲ ಹೊಡೆದು ನಷ್ಟಗೊಳಿಸಿದ ಶ್ರೀಹರಿಯ ಈ ದಶಮಾವತಾರದ ಮಹಿಮೆಯನ್ನು ಯಾವನು ತಿಳಿದು ಬಣ್ಣಿಸಲಾರನು! ಹೀಗೆ ದುಷ್ಟನಿಗ್ರಹ ಮಾಡಿ ಶಿಷ್ಟ ಸಮ್ಮತ ಶ್ರೇಷ್ಠವಾದ ಧರ್ಮದ ಪುನಃ ಪ್ರತಿಷ್ಠಾಪನೆಗೈಯುವನು ಆ ಕಲ್ಕಿರೂಪಿಯಾದ ಶ್ರೀಮನ್ನಾರಾಯಣ. ಹೀಗೆ ಕಲಿಯುಗವು ಕೊನೆಗೊಂಡು ಪ್ರಳಯರಾತ್ರಿಯು ಕಳೆದ ಬಳಿಕ ಎಚ್ಚತ್ತ ಜನರಿಗೆ ಸ್ಫಟಿಕದಂತೆ ನಿರ್ಮಲವಾದ ಜ್ಞಾನೋದಯವಾಗುವುದು. ಮಾನವಕುಲದ ಬೀಜದಂತಿರುವ ಆ ಕಾಲದ ಮನುಷ್ಯರು ವಯಸ್ಸಾದವರಿದ್ದರೂ ಭಗವದನುಗ್ರಹದಿಂದ ಅವರಿಗೆ ಸತ್‌ಸಂತಾನವು ಉತ್ಪನ್ನವಾಗುವುದು. ಅವರ ಆ ಸಂತತಿಯ ಕೃತಯುಗದ ಧರ್ಮವನ್ನು ಅನುಸರಿಸಿ ಸದಾಚಾರ ಸಂಪನ್ನವೂ ಸದ್ವಿಚಾರ ಪ್ರಸನ್ನವೂ ಆಗಿರುವುದು.

**"ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯೋ ಬೃಹಸ್ಪತಿಃ।**
**ಏಕರಾಶೌ ಸಮೇಷ್ಯಂತಿ ತದಾ ಭವತಿ ವೈ ಕೃತಮ್ ॥**

ಸೂರ್ಯ ಚಂದ್ರ ಮತ್ತು ಗುರು ಮೂವರು ಪುಷ್ಯ ನಕ್ಷತ್ರದಲ್ಲಿದ್ದು ಏಕಕಾಲದಲ್ಲಿ ಏಕರಾಶಿಯಲ್ಲಿ ಸಂಮಿಲಿತರಾದಾಗ ಕೃತಯುಗವು ಪ್ರಾರಂಭವಾಗುವುದು.

ಮುನಿವರ್ಯ, ಈ ವರೆಗೆ ನಿನಗೆ ಹಿಂದೆ ಆಗಿ ಹೋದ, ಇಂದು ಇರುವ ಮತ್ತು ಮುಂದೆ ಆಗಲಿರುವ ರಾಜಮಹಾರಾಜರ ಇತಿಹಾಸವನ್ನೆಲ್ಲ ನಿರೂಪಿಸಿದೆ.

**"ಯಾವತ್ ಪರೀಕ್ಷಿತೋ ಜನ್ಮ ಯಾವನ್ನಂದಾಭಿಷೇಚನಮ್**
**ಏತದ್ವರ್ಷ ಸಹಸ್ರಂ ತು ಜ್ಞೇಯಂ ಪಂಚಶತೋತ್ತರಮ್**

ಪರೀಕ್ಷಿತನು ಹುಟ್ಟಿದಂದಿನಿಂದ ನಂದರ ಪಟ್ಟಾಭಿಷೇಕದವರೆಗೆ ಒಂದುಸಾವಿರದ ಐದುನೂರು ವರ್ಷಗಳು ಕಲಿಯುಗದ ಪ್ರಾರಂಭ ಕಾಲವಾಗಿದೆ.

**"ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೆ ಹ್ಯುದಿತೌ ದಿವಿ**
**ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯತೇ ಯತ್ಸಮಂ ನಿಶಿ**
**ತೇನ ಸಪ್ತರ್ಷಯೋ ಯುಕ್ತಾಸ್ತಿಷ್ಠಂತ್ಯಬ್ದ ಶತಂ ನೃಣಾಂ**
**ತೇ ತು ಪಾರೀಕ್ಷಿತೇ ಕಾಲೇ ಮಘಾಸ್ವಾಸನ್ ದ್ವಿಜೋತ್ತಮ**
**ತದಾ ಪ್ರವೃತ್ತಶ್ಚ ಕಲಿರ್ದ್ವಾದಶಾಬ್ದಶತಾತ್ಮಕಃ।**

ಸಪ್ತರ್ಷಿಗಳ ನಕ್ಷತ್ರಗುಚ್ಛದಲ್ಲಿ ಮೊದಲು ಕಂಡು ಬರುವ ಎರಡು ನಕ್ಷತ್ರ (ಪುಲಸ್ತ್ಯ ಮತ್ತು ಕೃತು) ಗಳ ನಡುವಿನ ಸಮಾನವಾದ ದಕ್ಷಿಣೋತ್ತರ ರೇಖೆಗಳಲ್ಲಿ ಇರುವ ಅಶ್ವಿನೀ ಮೊದಲಾದ ನಕ್ಷತ್ರಗಳಲ್ಲಿ ಸಪ್ತರ್ಷಿಗಳು ಒಂದೊಂದು ನೂರು ವರ್ಷ ಇರುತ್ತಾರೆ. ಪರೀಕ್ಷಿತರಾಜನ ಕಾಲದಲ್ಲಿ ಈ ಸಪ್ತರ್ಷಿಗಳು ಮಘಾನಕ್ಷತ್ರದಲ್ಲಿದ್ದರು. ಆಗಲೇ ಹನ್ನೆರಡು ನೂರು ವರ್ಷಗಳ ಅವಧಿಯುಳ್ಳ ಕಲಿಯುಗವು ಪ್ರಾರಂಭವಾಯಿತು.

"ಯದ್ಯೈವ ಭಗವಾನ್ ವಿಷ್ಣೋರಂಶೋ ಯತೋ ದಿವಂ ದ್ವಿಜ
ವಸುದೇವ ಕುಲೋದ್ಭೂತಸ್ತದೈವಾತ್ರಾಗತಃ ಕಲಿಃ ॥
ಯದಾ ಸ ಪಾದಪದ್ಮಾಭ್ಯಾಂ ಪಸ್ಪರ್ಶೇಮಾಂ ವಸುಂಧರಾಂ
ತಾವತ್ಪೃಥ್ವೀ ಪರಿಷ್ವಂಗೇ ಸಮರ್ಥೋ ನಾಭವತ್ಕಲಿಃ"

ಶ್ರೀ ವಿಷ್ಣುವಿನ ಪೂರ್ಣಾವತಾರಿಯಾದ ಶ್ರೀಕೃಷ್ಣನು ವಸುದೇವನ ಕುಲದಲ್ಲಿ ಜನಿಸಿ ಪರಂಧಾಮಕ್ಕೆ ಪ್ರಯಾಣಗೈದಾಗಲೇ ಕಲಿಯು ನೆಲದಲ್ಲಿ ಕಾಲಿರಿಸಿದನು. ಶ್ರೀಕೃಷ್ಣನ ಪಾದವು ಪೃಥ್ವಿಯ ಸ್ಪರ್ಶ ಮಾಡುತ್ತಲಿದ್ದಾಗ ಕಲಿಗೆ ಭೂಮಿಯಲ್ಲಿ ಬರಲಿಕ್ಕೆ ಧೈರ್ಯವಾಗಲಿಲ್ಲ. ಶ್ರೀ ಕೃಷ್ಣನು ವೈಕುಂಠಕ್ಕೆ ತೆರಳಿದ ಕೂಡಲೇ ಧರ್ಮರಾಜನೂ ಅವನ ಸಹೋದರರೂ ರಾಜ್ಯವನ್ನು ತೊರೆದರು. ಎಲ್ಲ ಕಡೆ ಅಪಶಕುನಗಳು ತೋರತೊಡಗಿದವು. ಭಗವಂತನ ವೈಕುಂಠ ಪ್ರಯಾಣವನ್ನು ತಿಳಿದು ಪಾಂಡವರು ತಮ್ಮ ಮೊಮ್ಮಗನಾದ ಪರೀಕ್ಷಿತನಿಗೆ ಪಟ್ಟಾಭಿಷೇಕ ಮಾಡಿ ತಾವೂ ಸ್ವರ್ಗಕ್ಕೆ ನಡೆದರು. ಸಪ್ತರ್ಷಿಗಳು ಪೂರ್ವಾಷಾಢಾ ನಕ್ಷತ್ರಕ್ಕೆ ಬಂದಾಗ ನಂದರ ಆಳಿಕೆ ನಡೆದು ಅಂದಿನಿಂದ ಕಲಿಯ ಪ್ರಾಬಲ್ಯ ಪ್ರಾರಂಭವಾಗುವದು.

"ಪ್ರಯಾಸ್ಯಂತಿ ಯದಾ ಚೈತೆ ಪೂರ್ವಾಷಾಢಾಂ ಮಹರ್ಷಯಃ
ತದಾ ನಂದಾತ್ಪ್ರಭೃತ್ಯೇಷ ಗತಿವೃದ್ಧಿಂ ಗಮಿಷ್ಯತಿ ॥

ಶ್ರೀಕೃಷ್ಣನು ನೆಲವನ್ನು ಬಿಟ್ಟ ದಿನವೇ ಕಲಿ ಕಾಲಿಟ್ಟ. ಈ ಕಲಿಯುಗದ ಕಾಲಾವಕಾಶವನ್ನು ಹೇಳುತ್ತೇನೆ. ಮನುಷ್ಯ ಮಾನದಂತೆ ಮೂರು ಲಕ್ಷ ಅರವತ್ತು ಸಾವಿರ ವರ್ಷ ಕಲಿಯುಗ. ಪ್ರತಿಯೊಂದುಯುಗದಲ್ಲಿಯೂ ಅನೇಕಾನೇಕ ಮಹಾತ್ಮರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಸತ್ಪುರುಷರು ಉತ್ಪನ್ನರಾಗುತ್ತಾರೆ. ಅವರು ಅಸಂಖ್ಯ ಜನರಾದುದರಿಂದ ಅವರ ಹೆಸರು ದೆಶೆಗಳನ್ನೆಲ್ಲ ನಾನು ಬಿತ್ತರಿಸಲಿಲ್ಲ. ಪುರುವಂಶದ ದೇವಾಪಿ, ಇಕ್ಷ್ವಾಕುವಂಶದ ಮರುರಾಜ ಇವರಿಬ್ಬರೂ ಕಲಾಪ ಗ್ರಾಮದಲ್ಲಿರುವರು. ಇವರೀರ್ವರು ಮಹಾಯೋಗ ಸಂಪನ್ನರು. ಸತ್ಯಯುಗವು ಪ್ರಾರಂಭವಾದ ಬಳಿಕ ಈ ಉಭಯ ರಾಜರ್ಷಿಗಳು ಭೂಲೋಕಕ್ಕೆ ಬಂದು ಕ್ಷತ್ರಿಯ ಜಾತಿಯನ್ನು ಮತ್ತೆ ಪ್ರವರ್ತಿತವಾಗುವಂತೆ ಮಾಡುವರು. ಮುಂದಾಗಲಿರುವ ಮಾನವ ವಂಶಕ್ಕೆ ಇವರಿಬ್ಬರು ಬೀಜದಂತಿರುವರು. ಈ ಎಲ್ಲ ರಾಜಕುಲಗಳ ವಂಶ ಚರಿತ್ರವನ್ನು ನಾನು ನಿನಗೆ ಸಂಕ್ಷೇಪವಾಗಿ ತಿಳಿಸಿದೆ. ಇದನ್ನು ವಿಸ್ತಾರಪೂರ್ವಕವಾಗಿ ಹೇಳಲಿಕ್ಕೆ ನೂರು ವರ್ಷಗಳಾದರೂ ಸಾಲದು. ನಶ್ವರವಾದ ಈ ಮನುಷ್ಯದೇಹದ ಮೇಲೆ ವಿಚಿತ್ರ ಮೋಹವನ್ನು ತಾಳಿದ ಆ ರಾಜರೆಲ್ಲ ಇಂದು ಯಾರಾದರೂ ಉಳಿದಿರುವರೋ! ಇಲ್ಲ ಎಲ್ಲರು ಅಳಿದಿರುವರು. ಈ ರಾಜರೆಲ್ಲರಿಗೂ ಈ ಭೂಮಿಯ ಮೇಲೆ ಎಂಥ ಮೋಹ! ಈ ಭೂಮಂಡಲವು ನನ್ನದೇ ಹೇಗಾದೀತು! ನನ್ನ ಅನಂತರ ನನ್ನ ಮಗನಿಗೇ ಹೇಗೆ ದೊರಕೀತು ಎಂದು ಚಿಂತೆಯಲ್ಲಿಯೇ ಅಂತ್ಯವನ್ನು ಹೊಂದುವರು ಆ ಎಲ್ಲ ಭೂಪರು. ಆದರೆ ಅವರ ಮೋಹ ಮಮತೆ ಅಜ್ಞಾನವನ್ನು ನೋಡಿ ನಗುತ್ತಲಿದ್ದಾಳೆ. ಈ ಭೂದೇವಿ.

ಅವಗೆಲ್ಲಿ! ಜಗತ್ತಿನ ಹುಟ್ಟು ಸಾವುಗಳನ್ನು ರೂಪಿಸುವವನು ಅವನೇ ಅಲ್ಲವೇ!

ಪರಬ್ರಹ್ಮರೂಪಿಯಾದ ಆ ಕಲ್ಕಿಯು ಆ ಕಾಲದ ಕೀಳುರಾಜರನ್ನೆಲ್ಲ ಕಡಿದು ಕೊಚ್ಚಿ ಹಾಕುವನು. ಮ್ಲೇಂಛರೆಲ್ಲರೂ ಅವನ ಆಯುಧಕ್ಕೆ ಬಲಿಯಾಗುವರು. ದುಷ್ಟಭ್ರಷ್ಟರನ್ನೆಲ್ಲ ಹೊಡೆದು ನಷ್ಟಗೊಳಿಸಿದ ಶ್ರೀಹರಿಯ ಈ ದಶಮಾವತಾರದ ಮಹಿಮೆಯನ್ನು ಯಾವನು ತಿಳಿದು ಬಣ್ಣಿಸಲಾರನು! ಹೀಗೆ ದುಷ್ಟನಿಗ್ರಹ ಮಾಡಿ ಶಿಷ್ಟ ಸಮ್ಮತ ಶ್ರೇಷ್ಠವಾದ ಧರ್ಮದ ಪುನಃ ಪ್ರತಿಷ್ಠಾಪನೆಗೈಯುವನು ಆ ಕಲ್ಕಿರೂಪಿಯಾದ ಶ್ರೀಮನ್ನಾರಾಯಣ. ಹೀಗೆ ಕಲಿಯುಗವು ಕೊನೆಗೊಂಡು ಪ್ರಳಯರಾತ್ರಿಯು ಕಳೆದ ಬಳಿಕ ಎಚ್ಚತ್ತ ಜನರಿಗೆ ಸ್ಫಟಿಕದಂತೆ ನಿರ್ಮಲವಾದ ಜ್ಞಾನೋದಯವಾಗುವುದು. ಮಾನವಕುಲದ ಬೀಜದಂತಿರುವ ಆ ಕಾಲದ ಮನುಷ್ಯರು ವಯಸ್ಸಾದವರಿದ್ದರೂ ಭಗವದನುಗ್ರಹದಿಂದ ಅವರಿಗೆ ಸತ್‌ಸಂತಾನವು ಉತ್ಪನ್ನವಾಗುವುದು. ಅವರ ಆ ಸಂತತಿಯ ಕೃತಯುಗದ ಧರ್ಮವನ್ನು ಅನುಸರಿಸಿ ಸದಾಚಾರ ಸಂಪನ್ನವೂ ಸದ್ವಿಚಾರ ಪ್ರಸನ್ನವೂ ಆಗಿರುವುದು.

"ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯೋ ಬೃಹಸ್ಪತಿಃ।
ಏಕರಾಶೌ ಸಮೇಷ್ಯಂತಿ ತದಾ ಭವತಿ ವೈ ಕೃತಮ್ ॥

ಸೂರ್ಯ ಚಂದ್ರ ಮತ್ತು ಗುರು ಮೂವರು ಪುಷ್ಯ ನಕ್ಷತ್ರದಲ್ಲಿದ್ದು ಏಕಕಾಲದಲ್ಲಿ ಏಕರಾಶಿಯಲ್ಲಿ ಸಂಮಿಲಿತರಾದಾಗ ಕೃತಯುಗವು ಪ್ರಾರಂಭವಾಗುವುದು.

ಮುನಿವರ್ಯ, ಈ ವರೆಗೆ ನಿನಗೆ ಹಿಂದೆ ಆಗಿ ಹೋದ, ಇಂದು ಇರುವ ಮತ್ತು ಮುಂದೆ ಆಗಲಿರುವ ರಾಜಮಹಾರಾಜರ ಇತಿಹಾಸವನ್ನೆಲ್ಲ ನಿರೂಪಿಸಿದೆ.

"ಯಾವತ್ ಪರೀಕ್ಷಿತೋ ಜನ್ಮ ಯಾವನ್ನಂದಾಭಿಷೇಚನಮ್
ಏತದ್ವರ್ಷ ಸಹಸ್ರಂ ತು ಜ್ಞೇಯಂ ಪಂಚಶತೋತ್ತರಮ್

ಪರೀಕ್ಷಿತನು ಹುಟ್ಟಿದಂದಿನಿಂದ ನಂದರ ಪಟ್ಟಾಭಿಷೇಕದವರೆಗೆ ಒಂದುಸಾವಿರದ ಐದುನೂರು ವರ್ಷಗಳು ಕಲಿಯುಗದ ಪ್ರಾರಂಭ ಕಾಲವಾಗಿದೆ.

"ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೆ ಹ್ಯುದಿತೌ ದಿವಿ
ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯತೇ ಯತ್ಸಮಂ ನಿಶಿ
ತೇನ ಸಪ್ತರ್ಷಯೋ ಯುಕ್ತಾಸ್ತಿಷ್ಠಂತ್ಯಬ್ದ ಶತಂ ನೃಣಾಂ
ತೇ ತು ಪಾರೀಕ್ಷಿತೇ ಕಾಲೇ ಮಘಾಸ್ವಾಸನ್ ದ್ವಿಜೋತ್ತಮ
ತದಾ ಪ್ರವೃತ್ತಶ್ಚ ಕಲಿರ್ದ್ವಾದಶಾಬ್ದಶತಾತ್ಮಕಃ।

ಸಪ್ತರ್ಷಿಗಳ ನಕ್ಷತ್ರಗುಚ್ಛದಲ್ಲಿ ಮೊದಲು ಕಂಡು ಬರುವ ಎರಡು ನಕ್ಷತ್ರ (ಪುಲಸ್ತ್ಯ ಮತ್ತು ಕ್ರತು) ಗಳ ನಡುವಿನ ಸಮಾನವಾದ ದಕ್ಷಿಣೋತ್ತರ ರೇಖೆಗಳಲ್ಲಿ ಇರುವ ಅಶ್ವಿನೀ ಮೊದಲಾದ ನಕ್ಷತ್ರಗಳಲ್ಲಿ ಸಪ್ತರ್ಷಿಗಳು ಒಂದೊಂದು ನೂರು ವರ್ಷ ಇರುತ್ತಾರೆ. ಪರೀಕ್ಷಿತರಾಜನ ಕಾಲದಲ್ಲಿ ಈ ಸಪ್ತರ್ಷಿಗಳು ಮಘಾನಕ್ಷತ್ರದಲ್ಲಿದ್ದರು. ಆಗಲೇ ಹನ್ನೆರಡು ನೂರು ವರ್ಷಗಳ ಅವಧಿಯುಳ್ಳ ಕಲಿಯುಗವು ಪ್ರಾರಂಭವಾಯಿತು.

"ಯದ್ವೈವ ಭಗವಾನ್ ವಿಷ್ಣೋರಂಶೋ ಯತೋ ದಿವಂ ದ್ವಿಜ
ವಸುದೇವ ಕುಲೋದ್ಭೂತಸ್ತದೈವಾತ್ರಾಗತಃ ಕಲಿಃ ॥
ಯದಾ ಸ ಪಾದಪದ್ಮಾಭ್ಯಾಂ ಪಸ್ಪರ್ಶೇಮಾಂ ವಸುಂಧರಾಂ
ತಾವತ್ಪೃಥ್ವೀ ಪರಿಷ್ವಂಗೇ ಸಮರ್ಥೋ ನಾಭವತ್ಕಲಿಃ"

ಶ್ರೀ ವಿಷ್ಣುವಿನ ಪೂರ್ಣಾವತಾರಿಯಾದ ಶ್ರೀಕೃಷ್ಣನು ವಸುದೇವನ ಕುಲದಲ್ಲಿ ಜನಿಸಿ ಪರಂಧಾಮಕ್ಕೆ ಪ್ರಯಾಣಗೈದಾಗಲೇ ಕಲಿಯು ನೆಲದಲ್ಲಿ ಕಾಲಿರಿಸಿದನು. ಶ್ರೀಕೃಷ್ಣನ ಪಾದವು ಪೃಥ್ವಿಯ ಸ್ಪರ್ಶ ಮಾಡುತ್ತಲಿದ್ದಾಗ ಕಲಿಗೆ ಭೂಮಿಯಲ್ಲಿ ಬರಲಿಕ್ಕೆ ಧೈರ್ಯವಾಗಲಿಲ್ಲ. ಶ್ರೀ ಕೃಷ್ಣನು ವೈಕುಂಠಕ್ಕೆ ತೆರಳಿದ ಕೂಡಲೇ ಧರ್ಮರಾಜನೂ ಅವನ ಸಹೋದರರೂ ರಾಜ್ಯವನ್ನು ತೊರೆದರು. ಎಲ್ಲ ಕಡೆ ಅಪಶಕುನಗಳು ತೋರತೊಡಗಿದವು. ಭಗವಂತನ ವೈಕುಂಠ ಪ್ರಯಾಣವನ್ನು ತಿಳಿದು ಪಾಂಡವರು ತಮ್ಮ ಮೊಮ್ಮಗನಾದ ಪರೀಕ್ಷಿತನಿಗೆ ಪಟ್ಟಾಭಿಷೇಕ ಮಾಡಿ ತಾವೂ ಸ್ವರ್ಗಕ್ಕೆ ನಡೆದರು. ಸಪ್ತರ್ಷಿಗಳು ಪೂರ್ವಾಷಾಢಾ ನಕ್ಷತ್ರಕ್ಕೆ ಬಂದಾಗ ನಂದರ ಆಳಿಕೆ ನಡೆದು ಅಂದಿನಿಂದ ಕಲಿಯ ಪ್ರಾಬಲ್ಯ ಪ್ರಾರಂಭವಾಗುವದು.

"ಪ್ರಯಾಸ್ಯಂತಿ ಯದಾ ಚೈತೆ ಪೂರ್ವಾಷಾಢಾಂ ಮಹರ್ಷಯಃ
ತದಾ ನಂದಾತ್ಪ್ರಭೃತ್ಯೇಷ ಗತಿವೃದ್ಧಿಂ ಗಮಿಷ್ಯತಿ ॥

ಶ್ರೀಕೃಷ್ಣನು ನೆಲವನ್ನು ಬಿಟ್ಟ ದಿನವೇ ಕಲಿ ಕಾಲಿಟ್ಟ. ಈ ಕಲಿಯುಗದ ಕಾಲಾವಕಾಶವನ್ನು ಹೇಳುತ್ತೇನೆ. ಮನುಷ್ಯ ಮಾನದಂತೆ ಮೂರು ಲಕ್ಷ ಅರವತ್ತು ಸಾವಿರ ವರ್ಷ ಕಲಿಯುಗ. ಪ್ರತಿಯೊಂದುಯುಗದಲ್ಲಿಯೂ ಅನೇಕಾನೇಕ ಮಹಾತ್ಮರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಸತ್ಪುಷರು ಉತ್ಪನ್ನರಾಗುತ್ತಾರೆ. ಅವರು ಅಸಂಖ್ಯ ಜನರಾದುದರಿಂದ ಅವರ ಹೆಸರು ದೆಶೆಗಳನ್ನೆಲ್ಲ ನಾನು ಬಿತ್ತರಿಸಲಿಲ್ಲ. ಪುರುವಂಶದ ದೇವಾಪಿ, ಇಕ್ಷ್ವಾಕುವಂಶದ ಮರುರಾಜ ಇವರಿಬ್ಬರೂ ಕಲಾಪ ಗ್ರಾಮದಲ್ಲಿರುವರು. ಇವರೀರ್ವರು ಮಹಾಯೋಗ ಸಂಪನ್ನರು. ಸತ್ಯಯುಗವು ಪ್ರಾರಂಭವಾದ ಬಳಿಕ ಈ ಉಭಯ ರಾಜರ್ಷಿಗಳು ಭೂಲೋಕಕ್ಕೆ ಬಂದು ಕ್ಷತ್ರಿಯ ಜಾತಿಯನ್ನು ಮತ್ತೆ ಪ್ರವರ್ತಿತವಾಗುವಂತೆ ಮಾಡುವರು. ಮುಂದಾಗಲಿರುವ ಮಾನವ ವಂಶಕ್ಕೆ ಇವರಿಬ್ಬರು ಬೀಜದಂತಿರುವರು. ಈ ಎಲ್ಲ ರಾಜಕುಲಗಳ ವಂಶ ಚರಿತ್ರವನ್ನು ನಾನು ನಿನಗೆ ಸಂಕ್ಷೇಪವಾಗಿ ತಿಳಿಸಿದೆ. ಇದನ್ನು ವಿಸ್ತಾರಪೂರ್ವಕವಾಗಿ ಹೇಳಲಿಕ್ಕೆ ನೂರು ವರ್ಷಗಳಾದರೂ ಸಾಲದು. ನಶ್ವರವಾದ ಈ ಮನುಷ್ಯದೇಹದ ಮೇಲೆ ವಿಚಿತ್ರ ಮೋಹವನ್ನು ತಾಳಿದ ಆ ರಾಜರೆಲ್ಲ ಇಂದು ಯಾರಾದರೂ ಉಳಿದಿರುವರೋ ! ಇಲ್ಲ ಎಲ್ಲರು ಅಳಿದಿರುವರು. ಈ ರಾಜರೆಲ್ಲರಿಗೂ ಈ ಭೂಮಿಯ ಮೇಲೆ ಎಂಥ ಮೋಹ ! ಈ ಭೂಮಂಡಲವು ನನ್ನದೇ ಹೇಗಾದೀತು! ನನ್ನ ಅನಂತರ ನನ್ನ ಮಗನಿಗೇ ಹೇಗೆ ದೊರಕೀತು ಎಂದು ಚಿಂತೆಯಲ್ಲಿಯೇ ಅಂತ್ಯವನ್ನು ಹೊಂದುವರು ಆ ಎಲ್ಲ ಭೂಪರು. ಆದರೆ ಅವರ ಮೋಹ ಮಮತೆ ಅಜ್ಞಾನವನ್ನು ನೋಡಿ ನಗುತ್ತಲಿದ್ದಾಳೆ. ಈ ಭೂದೇವಿ.

"ಏತೇ ಚಾನ್ಯೇ ಚ ಭೂಪಾಲಾ ಯ್ಯೆರತ್ರ ಕ್ಷಿತಿಮಂಡಲೇ ।
ಕೃತಂ ಮಮತ್ವಂ ಮೊಹಾಂಧ್ಯೈರ್ನಿತ್ಯಂ ಹೇಯಕಲೇವರೇ ॥

ಕಥಂ ಮಮೇಯಮಚಲಾ ಮತ್ಪುತ್ರಸ್ಯ ಕಥಂ ಮಹೀ ।
ಮದ್ವಂಶಸ್ಯೇತಿ ಚಿಂತಾರ್ತಾ ಜಗ್ಮುರಂತಮಿಮೇ ನೃಪಾಃ ॥

ತೇಭ್ಯಃ ಪೂರ್ವತರಾಶ್ಚಾನ್ಯೇ ತೇಭ್ಯ ಸ್ತೇಭ್ಯಸ್ತಥಾಪರೇ ।
ಭವಿಷ್ಯಶ್ಚೈವ ಯಾಸ್ಯಂತಿ ತೇಷಾಮನ್ಯೇ ಚ ಯೇಪ್ಯನು ॥

ವಿಲೋಕ್ಯಾತ್ಮಜಯೋದ್ಯೋಗಂ ಯತ್ರಾವ್ಯಗ್ರಾನ್ನರಾಧಿಪಾನ್ ।
ಪುಷ್ಪಪ್ರಹಾಸೈಃ ಶರದಿ ಹಸತೀವ ವಸುಂಧರಾ ॥

ಹಿಂದಿನ ರಾಜರು ಅವರ ಹಿಂದಿನವರು, ಅವರಿಗಿಂತಲೂ ಹಿಂದು ಹಿಂದಿನ ರಾಜರು ಎಲ್ಲರೂ ಈ ಭೂಮಿಯನ್ನು ಆಳಿ ಕೊನೆಗೆ ಅದನ್ನು ಇಲ್ಲಿಯೇ ಬಿಟ್ಟು ತಾವು ಮಾತ್ರ ಸತ್ತು ಹೋದರು. ತನ್ನನ್ನು (ಈ ಪೃಥ್ವೀಯನ್ನು) ಜಯಿಸಲಿಕ್ಕಾಗಿ ದಂಡೆಯಾತ್ರೆಗೆ ಹೋಗುತ್ತಲಿರುವ ರಾಜರನ್ನು ಕಂಡು ಭೂಮಿಯು ನಗುತ್ತಲಿದೆ. ಬಳ್ಳಿಗಳಲ್ಲಿ ಬಿರಿದ ಹೂಗಳೇ ಭೂದೇವಿಯ ಈ ನಗೆಯ ಸಂಕೇತ. ಈ ಪೃಥ್ವಿಯನ್ನು ಬಹಳ ಹಚ್ಚಿಕೊಂಡು ಅದನ್ನೇ ಮೆಚ್ಚಿಕೊಂಡು ಅದಕ್ಕಾಗಿ ಹುಚ್ಚಾಗಿ ಹೋದ ರಾಜಮಹಾರಾಜರ ಗತಿಯನ್ನೂ ಜನಸಾಮಾನ್ಯರ ಸ್ಥಿತಿಯನ್ನೂ ಮತ್ತು ನಿಜವಾದ ವಸ್ತುಗತಿಯನ್ನೂ ತಿಳಿಸಿಕೊಡುತ್ತ ಧರಿಣೀದೇವಿಯು ನುಡಿದು ನೀಡಿದ ಉಪದೇಶದ ನುಡಿಗಳು ನಿಜವಾಗಿಯೂ ಅರ್ಥಪೂರ್ಣವಾಗಿವೆ.

## ಭೂದೇವಿಯ ಬುದ್ಧಿವಾದ

### ಪೃಥ್ವೀ ಉವಾಚ

ಕಥಾಮೇಷ ನರೇಂದ್ರಾಣಾಂ ಮೋಹೋ ಬುದ್ಧಿಮತಾಮಪಿ
ಯೇನ ಫೇನಸಧರ್ಮಾಣೋಽಪ್ಯತಿ ವಿಶ್ವಸ್ತಚೇತಸಃ ॥

ಅಬ್ಬ ಏನು ಮೋಹ ಈ ರಾಜರಿಗೆ! ಇವರೇನೋ ಅತಿ ಬುದ್ಧಿವಂತರಂತೆ! ಇವರ ಜೀವನವೊ ನೀರ ಮೇಲಿನ ಗುಳ್ಳೆ. ಆದರೆ ಇವರಿಗೆ ಚಂದ್ರಸೂರ್ಯರಂತೆ ತಾವು ಶಾಶ್ವತರು, ಚಿರಂಜೀವಗಳೆಂದೇ ಭಾವನೆ. ಅವರ ಸ್ಥಿರತಾ ಬುದ್ಧಿಯನ್ನು ಕಂಡು ಆಶ್ಚರ್ಯವಾಗುತ್ತದೆ.

"ಕ್ರಮೇಣಾನೇನ ಜೇಷ್ಯಾಮೋ ವಯಂ ಪೃಥ್ವೀಂ ಸಸಾಗರಾಂ ।
ಇತ್ಯಾಸಕ್ತಧಿಯೋ ಮೃತ್ಯುಂ ನ ಪಶ್ಯಂತ್ಯವಿದೂರಗಂ ॥

ಮೊದಲು ಆತ್ಮೀಯರನ್ನು ಅನಂತರ ಮಂತ್ರಿ ಪರಿವಾರವನ್ನು, ನಂತರ ಅವರ ಸಹಾಯದಿಂದ ವೈರಿಗಳನ್ನೂ ಅವರ ನಾಡನ್ನೂ ಗೆದ್ದು ಇದೇ ರೀತಿಯಾಗಿ ಇಡೀ ಭೂಮಂಡಲವನ್ನೇ ಗೆದ್ದು ಆಳಬೇಕೆಂದು ಅವರ ಹಂಬಲ. ಆದರೆ ಬದುಕಿನ ಬಾಗಿಲಲ್ಲಿಯೇ ಕಾದಿರುವ ಹಾವು-ಸಾವು ಅವರ ಕಣ್ಣಿಗೇ ಕಾಣುವುದಿಲ್ಲ ಅದೇಕೋ ಅದೆಂತೋ!

''ಸಮುದ್ರಾವರಣಂ ಯಾತಿ ಭೂಮಂಡಲಮಥೋ ವಶಂ
ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಂ

ಕಡಲಿನ ತಡಿಯೇ ಗಡಿಯಾಗಿರುವ ಪೊಡವಿಯೆಲ್ಲವೂ ಸ್ವಾಧೀವವಾಯಿತೆಂದು ಇಟ್ಟುಕೊಳ್ಳೋಣ. ಆದರೆ ಇದು ಮನಸ್ಸನ್ನು ಸ್ವಾಧೀನವಾಗಿಟ್ಟುಕೊಂಡು ಮನೋಜಯದ ಮುಂದೆ ಏನು ಅಲ್ಲ. ಮನೋಜಯದ ಫಲ ಮೋಕ್ಷ. ಭೂಮೀ ಜಯದಿಂದ ಮುಕ್ತಿ ದೊರೆಯಲಾರದು.

''ಉತ್ಸೃಜ್ಯ ಪೂರ್ವಜಾ ಯಾತಾ ಯಾಂ ನಾದಾಯ ಗತಃ ಪಿತಾ
ತಾಂ ಮಾಮತೀವ ಮೂಢತ್ವಾಜ್ಜೇತುಮಿಚ್ಛಂತಿ ಪಾರ್ಥಿವಾಃ

ಯಾವದನ್ನು ತನ್ನ ಹಿಂದಿನ ತಾತಮುತ್ತಾತರು ಇಲ್ಲಿಯೇ ಬಿಟ್ಟು ಹೋದರೋ, ಯಾವುದನ್ನು ಇವನಪ್ಪನು ಜೊತೆಗೆ ವೈಯ್ಯಲಿಲ್ಲವೋ ಅದೇ ಪೃಥ್ವಿಯನ್ನು ಈ ಭೂಪಗೆಲ್ಲಬೇಕು, ಇಲ್ಲಿಯೇ ಗಟ್ಟಿಯಾಗಿ ನಿಲ್ಲಬೇಕು ಎಂದು ಚಡಪಡಿಸುತ್ತಿದ್ದಾನೆ. ಇದಕ್ಕೆ ಮಹಾಮೂಢತನ ಎನ್ನದೆ ಬೇರೆ ಏನೆನ್ನಬೇಕು !.

''ಮತ್ಕೃತೇ ಪಿತೃಪುತ್ರಾಣಾಂ ಭ್ರಾತ್ರೂಣಾಂ ಚಾಪಿ ವಿಗ್ರಹಃ
ಜಾಯತೇಽತ್ಯಂತ ಮೋಹೇನ ಮಮತ್ವಾದ್ದೃಪ್ತಚೇತಸಾಂ॥

ನನಗಾಗಿ (ನೆಲಕ್ಕಾಗಿ) ತಂದೆ ಮಕ್ಕಳಲ್ಲಿ ಹೋರಾಟ. ಅಣ್ಣತಮ್ಮಂದಿರಲ್ಲಿ ಬಡೆದಾಟ. ಎಲ್ಲರೊಡನೆಯೂ ದ್ವೇಷ. ಇದಕ್ಕೆಲ್ಲ ಕಾರಣ ಅವರಿಗೆ ನನ್ನಲ್ಲಿ ಮೂಡಿದ ಮಮತೆ. ಇದು ನನ್ನದಾಗಬೇಕು ಎಂಬ ಹುಚ್ಚು ಹಂಬಲ

''ಪೃಥ್ವೀ ಮಮೇಯಂ ಸಕಲಾ ಮಮೈಷಾ।
ಮದನ್ವಯಸ್ಯಾಪಿ ಚ ಶಾಶ್ವತೀಯಂ ॥

ಯೋ ಯೋ ಮೃತೋ ಹ್ಯತ್ರ ಬಭೂವ ರಾಜಾ
ಕುಬುದ್ಧಿರಾಸೀದಿತಿ ತಸ್ಯ ತಸ್ಯ ॥

ಈ ಧರಾಮಂಡಲವೇ ನನ್ನದು. ಇದು ನನ್ನ ಮನೆತನದವರಿಗೇ ಶಾಶ್ವತ. ಅವರಿಗೇ ಇದರ ಸ್ಥಿರಪಟ್ಟ ಎಂಬ ಬುದ್ಧಿ ಹಿಂದಿನ ರಾಜರಿಗೆಲ್ಲವೂ ಇದ್ದಿತು. ಅವರೆಲ್ಲರೂ ಸತ್ತು ಹೋದರು. ಇದರಿಂದ ಇದು ದುರ್ಬುದ್ಧಿ ಎಂದು ತಾನೇ ಸಿದ್ಧಿ ತಾನೇ !

ದೃಷ್ಟ್ವಾ ಮಮತ್ವಾದೃತ ಚಿತ್ತಮೇಕಂ ।
ವಿಹಾಯ ಮಾಂ ಮೃತ್ಯುವಶಂ ವ್ರಜಂತಂ ॥

ತಸ್ಯಾನು ಯಸ್ತಸ್ಯ ಕಥಂ ಮಮತ್ವಂ ।
ಹೃದ್ಯಾಸ್ಪದಂ ಮತ್ಪ್ರಭವಂ ಕರೋತಿ ॥

ನನ್ನ ಮೇಲೆ ಅತ್ಯಂತ ಮಮತೆಯನ್ನು ಇರಿಸಿದ ಒಬ್ಬನು ಸಾವಿನ ದವಡೆಯಲ್ಲಿ ಸೇರುವುದನ್ನು ನೋಡಿದ ಬಳಿಕವೂ ಅವನ ಉತ್ತರಾಧಿಕಾರಿಯು ನನ್ನ ಮೇಲೆ ಮತ್ತೆ ಅದೇ ಮಮತೆಯನ್ನು ಬೆಳಿಸಿಕೊಂಡು ಬರುತ್ತಾನೆ ಇದು ಹೇಗೆ !.

**"ಪೃಥ್ವೀ ಮಮೈಷಾಶು ಪರಿತ್ಯಜೈನಾಂ ।**
**ವದಂತಿ ಯೇ ದೂತ ಮುಖೈಃ ಸ್ವಶತ್ರೂನ್ ॥**
**ನರಾಧಿಪಾಸ್ತೇಷು ಮಮಾತಿಹಾಸಃ ।**
**ಪುನಶ್ಚ ಮೂಢೇಷು ದಯಾಭ್ಯುಪೈತಿ ॥**

"ಈ ಭೂಮಿಯು ನನ್ನದು. ಇದನ್ನು ನೀನು ಬಿಟ್ಟು ಕೊಡು." ಎಂದು ವೈರಿಗಳಿಗೆ ದೂತರಿಂದ ಹೇಳಿ ಕಳಿಸುವ ರಾಜರನ್ನು ನೋಡಿದರಂತೂ ನನಗೆ ಬಿದ್ದು ಬಿದ್ದು ನಗಬೇಕೆನಿಸುವುದು. ಆದರೆ ಮರುಕ್ಷಣದಲ್ಲಿಯೇ ಅವರ ಮೂಢತನವನ್ನು ನೋಡಿ ನನ್ನ ಮನದಲ್ಲಿ ಮರುಕವು ಮೂಡವುದು. ಮೈತ್ರೇಯ, ಈ ಭೂಮಿಗೀತೆಯನ್ನು ಕೇಳಿದವರ ಹೃದಯದಲ್ಲಿ ನೆಲದ ಮೇಲಿನ ಮೋಹವೆಲ್ಲವೂ ಅಳಿದು ಹೋಗುವುದು. ಸೂರ್ಯನು ತೊಳುಗುವಾಗ ಮಂಜು ಹೇಗೆ ನಿಂತೀತು ! ಈ ರೀತಿಯಾಗಿ ಮನುಕುಲದ ಹಬ್ಬುಗೆಯ ಬಗೆಯನ್ನು ಈ ವರೆಗೆ ನಾನು ತಿಳಿಸಿದೆ. ಅವರೆಲ್ಲರೂ ಸ್ಥಿತಿ ಪ್ರವೃತ್ತನಾದ ಶ್ರೀವಿಷ್ಣುವಿನ ವಿಭೂತಿರೂಪರೇ ಸರಿ. ಈ ಎಲ್ಲ ಚಂದ್ರ ಸೂರ್ಯ ವಂಶಗಳ ಇಕ್ಷ್ವಾಕು ಜನ್ಹು, ಮಾಂಧಾತೃ, ಸಗರ, ಆವಿಕ್ಷಿತ ರಘು, ಯಯಾತಿ, ನಹುಷ ಮುಂತಾದ ಮಹಾ ಬಲಿಷ್ಠರಾದ ರಾಜರು ಕಾಲದಿಂದ ಕಬಳಿಸಲ್ಪಟ್ಟಿದ್ದಾರೆ. ಇಂದು ಉಳಿದದ್ದು ಅವರ ಕತೆ ಮಾತ್ರ. ಇಂತಿಂಥ ಅತಿರಥ ಮಹಾರಥಿಕರಾದ ರಾಜರೇ ಕಾಲಗರ್ಭದಲ್ಲಿ ಲೀನರಾಗಿ ಹೋದ ಬಳಿಕ ಮಿಕ್ಕ ಮಾನವರ ಪಾಡೇನು ! ಇದನ್ನು ತಿಳಿದುಕೊಂಡ ಬಳಿಕಾದರೂ ಮನುಷ್ಯರು ಮನೆ, ಮಕ್ಕಳು, ಮಡದಿ, ಹೊಲ ನೆಲ, ಹೊನ್ನು ಮುಂತಾದವುಗಳ ಮೋಹದ ಮಡುವಿನಲ್ಲಿ ಸಿಲುಕಿಕೊಳ್ಳಬಾರದು. ಒಂಟಿಗಾಲಿನಿಂದ ಎರಡೂ ಕೈ ಮೇಲೆತ್ತಿ ನಿಂತು ತಪಂಗೈದ ಮಹಾ ಮಹಾ ತಪಸ್ವಿಗಳೂ, ಯಜ್ಞಯಾಗಾದಿಗಳನ್ನು ಮಾಡಿಪುಣ್ಯ ಕೀರ್ತಿಗಳನ್ನು ಗಳಿಸಿದ ವೀರಾಧಿ ವೀರರೂ, ಶೂರ ಧೀರರೂ ಕೂಡ ಸತ್ತು ಹೋಗಿ ಕಥಾಶೇಷರಾಗಿದ್ದಾರೆ.

**"ಪೃಥುಸ್ಸಮಸ್ತಾನ್ ವಿಚಚಾರ ಲೋಕಾನ್ ।**
**ಅವ್ಯಾಹತೋ ಯೋ ವಿಜಿತಾರಿ ಚಕ್ರಃ ॥**
**ಸ ಕಾಲವಾತಾಭ್ರಹತಃ ಪ್ರಣಷ್ಟಃ ।**
**ಕ್ಷಿಪ್ರಂ ಯಥಾ ಶಾಲ್ಮಲಿ ತೂಲಮಗ್ನೌ ॥**

ವೈರಿಗಳನ್ನೆಲ್ಲ ಸದೆಬಡೆದು, ಎಲ್ಲ ಲೋಕಗಳ್ಳೂ ಯಾವ ಅಡತಡೆಯೂ ಇಲ್ಲದೆ ಸುತ್ತಾಡಿ ಬಂದ ಪೃಥುರಾಜನೂ ಕೂಡ ಕಾಲದ ಬಿರುಗಾಳಿಯ ಹಾವಳಿಗೆ ಸಿಕ್ಕು ಬೆಂಕಿಯಲ್ಲಿ ಬಿಸಾಕಿದ ಅರಳಿಯ ಸುರುಳಿಯಂತೆ ನಾಶವಾಗಿ ಹೋದನು.

**"ಯಃ ಕಾರ್ತವೀರ್ಯೋ ಬುಭುಜೇ ಸಮಸ್ತಾನ್ ।**
**ದ್ವೀಪಾನ್ ಸಮಾಕ್ರಮ್ಯ ಹತಾರಿ ಚಕ್ರಃ ॥**
**ಕಥಾ ಪ್ರಸಂಗೇಷ್ವಭಿಧೀಯಮಾನಃ ।**
**ಸ ಏವ ಸಂಕಲ್ಪ ವಿಕಲ್ಪ ಹೇತುಃ ॥**

ಅಂದು ಎಲ್ಲ ಧರಣೀ ದ್ವೀಪಗಳನ್ನು ಆಕ್ರಮಿಸಿ, ವೈರಿಗಳನ್ನೆಲ್ಲ ಬಗ್ಗು ಬಡಿದು, ಅಖಂಡ ಭೂಮಂಡಲದ ಏಕಮಾತ್ರ ಸಾಮ್ರಾಟನೆಂದು

ಮೆರೆದ ಕಾರ್ತವೀರ್ಯಾರ್ಜುನನು ಎಂದಾದರೂ ಇದ್ದನೋ ಇಲ್ಲವೋ ಎಂದು ಇಂದು ಸಂದೇಹಿಸುವಂತಾಗಿದೆ.

''ದಶಾನನಾವಿಕ್ಷಿತ ರಾಘವಾಣಾಮ್ ।
ಐಶ್ವರ್ಯಮುದ್ಭಾಸಿತ ದಿಙ್ಮುಖಾನಾಂ ॥
ಭಸ್ಮಾವಶಿಷ್ಟಂ ನ ಕಥಂ ಕ್ಷಣೇನ ।
ಭ್ರೂಭಂಗ ಪಾತೇನ ಧಿಗಂತಕಸ್ಯ ॥

ದಶದೆಶೆಗಳ ಮುಖಗಳನ್ನು ಬೆಳಗಿದ ರಾಮ, ರಾವಣ, ಆವಿಕ್ಷಿತ ಮುಂತಾದ ಸಾಮ್ರಾಟ ಸಾರ್ವಭೌಮರೆಲ್ಲರೂ ಅಯ್ಯೋ ಆ ಮೃತ್ಯು ಹುಬ್ಬು ಗಂಟು ಹಾಕಿದ ಮಾತ್ರಕ್ಕೆ ಅರೆಕ್ಷಣದಲ್ಲಿ ಅಳಿದು ಹೋದರು. ಇಂಥ ವೀರಾಧಿವೀರರು ಬೂದಿಯಾದರೂ ಇಂದು ಉಳಿದಿದೆಯೇ ! ಇಂಥ ಅಸ್ಥಿರ ಜೀವನಕ್ಕೆ ಧಿಕ್ಕಾರವಿರಲಿ.

''ಕಥಾ ಶರೀರತ್ವಮವಾಪ ಯದ್ವಾ ।
ಮಾಂಧಾತೃ ನಾಮಾ ಭುವಿ ಚಕ್ರವರ್ತೀ ॥
ಶ್ರುತ್ವಾಪಿ ತತ್ಕೋಹಿ ಕರೋತಿ ಸಾಧುಃ ।
ಮಮತ್ವಮಾತ್ಮನ್ಯಪಿ ಮಂದಚೇತಾಃ॥

ಹಿಂದೆ ಬಿಸಿಲು ಬಿದ್ದಲ್ಲೆಲ್ಲ ಮಾಂಧಾತ ಚಕ್ರವರ್ತಿಯ ರಾಜ್ಯವಿದ್ದಿತು. ಇಂಥ ಸಮ್ರಾಟನು ಇಂದು ಕಥಾಶೇಷನಾಗಿ ಹೋಗಿದ್ದಾನೆ. ಇದನ್ನು ಕೇಳಿದ ಬಳಿಕ ಎಂಥ ಮೂಢನಿಗೆ ತಾನೇ ತನ್ನ ದೇಹದಲ್ಲಿ ಮಮತೆ ಮೂಡೀತು !

''ಭಗೀರಥಾದ್ಯಾ ಃ ಸಗರ ಃ ಕಕುಸ್ಥೋ ।
ದಶಾನನೋ ರಾಘವ ಲಕ್ಷ್ಮಣೌ ಚ।
ಯುಧಿಷ್ಠರಾದ್ಯಾಶ್ಚ ಬಭೂವುರೇತೇ ।
ಸತ್ಯಂ ನ ಮಿಥ್ಯಾ ಕ್ವ ನು ತೇನ ವಿದ್ಮಃ ॥

ಭಗೀರಥ, ಸಗರ, ಕಕುಸ್ಥ, ರಾಮ, ಲಕ್ಷ್ಮಣ, ಧರ್ಮರಾಜ, ಒಬ್ಬರೇ ! ಇಬ್ಬರೇ ! ಅಸಂಖ್ಯ ರಾಜರು ಆಗಿ ಹೋದದ್ದು ನಿಜ. ಇದಾವದೂ ಕಟ್ಟುಕತೆಯಲ್ಲ. ನಿಜವಾಗಿಯೂ ನಡೆದ ಸಂಗತಿ. ಆದರೆ ಅವರೆಲ್ಲರೂ ಈಗ ಎಲ್ಲಿ ಎಂಬುದು ಮಾತ್ರ ನಮಗೆ ತಿಳಿಯದು.

ಏತದ್ವಿದಿತ್ವಾ ನ ನರೇಣ ಕಾರ್ಯಂ ।
ಮಮತ್ವಮಾತ್ಮನ್ಯಪಿ ಪಂಡಿತೇನ ॥
ತಿಷ್ಠಂತು ತಾವತ್ತನಯಾತ್ಮಜಾದ್ಯಾಃ ।
ಕ್ಷೇತ್ರಾದಯೋ ಯೇ ಚ ಶರೀರಿಣೋಽನ್ಯೇ ॥

ಇದೆಲ್ಲವನ್ನು ತಿಳಿದು ನಿಜವಾದ ಜ್ಞಾಣ ಮನುಷ್ಯನು ತನ್ನ ದೇಹದಲ್ಲಿ ಕೂಡ ಹೆಚ್ಚಿನ ಮಮತ್ವ ಅಭಿಮಾನಗಳನ್ನು ಮಾಡತಕ್ಕದ್ದಲ್ಲ. ಉಳಿದ ಹೊಲ, ಮಕ್ಕಳು, ಮನೆ, ಮಡದಿ, ಬಂಧುಬಳಗದ ಮಾತಂತೂ ಹಾಗಿರಲಿ, ಆತ್ಮಾಭಿಮಾನವನ್ನು ಕೂಡ ತ್ಯಾಗ ಮಾಡಿ ಬಿಡಬೇಕು.

—○—

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಚತುರ್ಥಾಂಶದ ಹತ್ತೊಂಬತ್ತನೇ ಅಧ್ಯಾಯ ಸಂಪೂರ್ಣ.*

# ಪಂಚಮಾಂಶ

## ಶ್ರೀ ಕೃಷ್ಣಾವತಾರದ ಚರಿತ್ರೆ

ಅಧ್ಯಾಯ - ೧

**ಮೈತ್ರೇಯ -** ಬ್ರಹ್ಮರ್ಷಿಗಳೇ ! ತಾವು ನನಗೆ ರಾಜರ ವಂಶ ಹಾಗೂ ಆ ವಂಶಗಳಲ್ಲಿ ಜನಿಸಿದ ವಿಶಿಷ್ಟ ವ್ಯಕ್ತಿಗಳ ಚರಿತ್ರಗಳನ್ನು ಈವರೆಗೆ ನಿರೂಪಣೆಗೈದಿರಿ. ಆದರೆ ನನಗೀಗ ಯದು ಕುಲದಲ್ಲಿ ಪೂರ್ಣಾಂಶದಿಂದ ಅವತರಿಸಿ ಜಗದೋದ್ಧಾರ ಮಾಡಿದ ಶ್ರೀ ಕೃಷ್ಣನ ದಿವ್ಯ ಚರಿತ್ರವನ್ನು ಇಡಿಯಾಗಿ ಕೇಳಬೇಕೆಂದು ಅಪೇಕ್ಷೆ. ಅದನ್ನು ತಾವು ವಿಸ್ತಾರ ಪೂರ್ವಕವಾಗಿ ನಿರೂಪಿಸಬೇಕು.

**ಪರಾಶರ -** ಮೈತ್ರೇಯ, ನೀನು ಕೇಳಿದ ಕೃಷ್ಣ ಚರಿತ್ರೆ ಜಗತ್ತಿಗೇ ಕ್ಷೇಮಂಕರ. ಆ ಪರಮಾತ್ಮನ ಅವತಾರದ ಸುಂದರ ಚರಿತ್ರವನ್ನು ಬಿತ್ತರಿಸುತ್ತೇನೆ. ಚಿತ್ತವಿಟ್ಟು ಆಲಿಸು.

ಹಿಂದೆ ದೇವಕನ ಮಗಳಾದ ದೇವಕಿಯನ್ನು ವಸುದೇವನು ಮದುವೆಯಾದ. ಆ ದೇವಕಿಯ ಮನಸ್ಸು ದೊಡ್ಡದು. ಅವಳ ಶೀಲ ಸ್ವಭಾವಗಳು ಸತೀ ಸಜ್ಜನಿಕೆಗೆ ಒಪ್ಪುವಂತಿದ್ದವು. ಅವಳಿಗೆ ಸರಿದೊರೆಯಾದ ಹೆಣ್ಣು ನೆಲದಲ್ಲಿರಲಿಲ್ಲ. ಅವಳ ವ್ಯಕ್ತಿತ್ವ ದೇವತಾ ಸ್ತ್ರೀಯರ ಮಟ್ಟವನ್ನು ಮುಟ್ಟಿತ್ತು. ವಸುದೇವ ದೇವಕಿಯರ ಮದುವೆಯ ಮಂಗಳ ಮಹೋತ್ಸವವು ಮುಗಿಯುವಾಗ ವಧೂವರರ ಮೆರವಣಿಗೆಯ ರಥವನ್ನು ಕಂಸ ತಾನೇ ನಡೆಸುತ್ತಿದ್ದ. ಭೋಜರಾಜನಾದ ಉಗ್ರಸೇನನ ಮಗನೇ ಕಂಸ. ದೇವಕಿಯ ಸಹೋದರ. ಮಹಾ ಪರಾಕ್ರಮಿ. ಸೋದರಿಯ ಮೇಲಿನ ಪ್ರೇಮದಿಂದ ಅವನು ವಸುದೇವ ದೇವಕಿಯರ ವಿವಾಹಮಂಗಳದ ರಥೋತ್ಸವದ ಶೋಭಾಯಾತ್ರೆಯಲ್ಲಿ ತಾನೇ ಸಾರಥಿಯಾಗಿ ಕುದುರೆಗಳನ್ನು ಹೊಡೆಯುತ್ತಲಿದ್ದ. ಆಗ ಒಮ್ಮೆಲೇ ಬಾನುಲಿಯ ದನಿ. ''ಮೂರ್ಖ ಕಂಸ, ಯಾವ ತಂಗಿಯನ್ನು ಅವಳ ನಲ್ಲನೊಂದಿಗೆ ತೇರಿನಲ್ಲಿ ಕೂಡಿಸಿ ನೀನು ಮೆರೆಸುತ್ತಲಿರುವಿಯೋ ಅವಳ ಎಂಟನೆಯ ಗರ್ಭ ನಿನಗೆ ಗಂಟಲಗಾಣ ವಾಗುವುದು. ಅದರಿಂದಲೇ ನಿನಗೆ ಮೃತ್ಯು'' ಮೇಘ ಗುಡುಗಿದಂತಿತ್ತು ಆ ಗಂಭೀರವಾದ ಆಕಾಶವಾಣಿ.

ಈ ನಭೋವಾಣಿಯನ್ನು ಕೇಳಿದ ಕೂಡಲೇ ಕೈಯಲ್ಲಿ ಚಾವಟಿಯನ್ನು ಅಲ್ಲಿಯೇ ಚೆಲ್ಲಿ ಖಡ್ಗ ಹಿರಿದ ಕ್ರೂರ ಕಂಸ. ದೇವಕಿಯನ್ನು ಅಲ್ಲಿ ತುಂಡರಿಸಿ ಬಿಡಲು ಅವನ ಕೈ ಖಡ್ಗವನ್ನು ಮೇಲೆತ್ತಿತ್ತು. ಕೂಡಲೇ ವಸುದೇವ ದೀನ ಮುಖದಿಂದ ಅಂಗಲಾಚಿದ.- ''ನಿನ್ನ ಸೋದರಿಗೆ ಜೀವದಾನ ನೀಡು. ಅವಳ ಹೊಟ್ಟೆಯಿಂದ ಹುಟ್ಟುವ ಎಲ್ಲ ಕೂಸುಗಳ್ನೂ ನಿನಗೇ ತಂದು ಒಪ್ಪಿಸುತ್ತೇನೆ. ಅವಳ ಮಕ್ಕಳಿಂದಷ್ಟೇ ನಿನ್ನ ಮರಣ! ಅದು ತಾನೇ ಆಕಾಶವಾಣಿ ಉಸುರಿದ್ದು! ಇವಳಿಂದಲ್ಲ. ಅವಳ ಮಕ್ಕಳನ್ನಂತೂ ಎಲ್ಲವನ್ನೂ ನಿನ್ನ ಕೈಯಲ್ಲಿ ತಂದು ಕೊಡುವೆ. ಅಂದ ಬಳಿಕ ಇವಳನ್ನೇಕೆ ವ್ಯರ್ಥವಾಗಿ ಕೊಲ್ಲುವಿ ?'' ಎಂದು ಪರಿಪರಿಯಿಂದ ಬೇಡಿಕೊಂಡನು. ವಸುದೇವನು ಸಟೆಯನ್ನಾಡಲಾರನೆಂದು ಕಂಸನಿಗೆ ಖಾತರಿಯಿದ್ದಿತು. ಮತ್ತು ಮಕ್ಕಳ ದೋಷಕ್ಕೆ

ತಾಯಿಯನ್ನೇಕೆ ಕೊಲ್ಲಬೇಕು ! ಎಂದಿತು ಅವನ ವಿವೇಕವಾಣಿ. ವಸುದೇವನ ಪ್ರಾರ್ಥನೆ ಅವನ ಮನಸ್ಸನ್ನು ತಿರುಗಿಸಿತು. ಅವನು ದೇವಕಿಯನ್ನು ಕೊಲ್ಲದೇ ಬಿಟ್ಟು ಬಿಟ್ಟ. ಇದೇ ಕಾಲದಲ್ಲಿ ಧರೆಗೆ ಹೊರಲಿಕ್ಕಾಗದಷ್ಟು ಬೆಳೆದಿತ್ತು ಜನಸಂಖ್ಯೆ. ಅದರಲ್ಲಿಯೂ ದುಷ್ಟ ರಾಜರ ಅಸಂಖ್ಯ ಗುಂಪುಗಳ ಭಾರದಿಂದ ಭೂದೇವಿಯು ಕುಸಿಯುವ ಪ್ರಸಂಗ ಬಂದಿತ್ತು. ಈ ಹೊರೆಯನ್ನು ಹೊರಲಾರದೇ ಅವಳು ದೇವತೆಗಳಿಗೆ ಶರಣು ಹೋದಳು. ಮೇರುಗಿರಿಯ ತುದಿಯ ಬದುವಿನಲ್ಲಿ ಒಂದು ದಿನ ಅಮರ ಗಣಗಳ ದೊಡ್ಡ ಸಭೆ ನೆರೆದಿತ್ತು. ಭೂದೇವಿಯು ಅಲ್ಲಿಗೆ ಹೋಗಿ ಬ್ರಹ್ಮ ಮೊದಲಾದ ಸುರಸತ್ತಮರಿಗೆ ಕೈ ಮುಗಿದು ಕಾಲಿಗೆ ಬಿದ್ದು ತನ್ನ ದುಃಖವನ್ನು ತೋಡಿಕೊಂಡಳು.

## ಭೂದೇವೀ ಉವಾಚ

''ಬಂಗಾರಕ್ಕೆ ಬೆಂಕಿ ಗುರು. ಬೆಳಕಿಗೆ ಸೂರ್ಯ ಗುರು. ಅದರಂತೆ ನಿಮಗೆಲ್ಲ ಹರಿಯೇ ಗುರು. ಅವನೇ ಜಗದ್ಗುರು. ನನಗಾದರೂ ಅವನೇ ಗತಿ, ಅವನೇ ಗುರು. ಅವನೇ ತಂದೆ. ಜೀವರಾಶಿಗಳಿಗೆಲ್ಲ ಹಿರಿಯ ಮೂಲಪುರುಷ ಬ್ರಹ್ಮದೇವ. ಅವನಲ್ಲಿಯೂ ಕೆಲಸ ಮಾಡುವುದು ವಿಷ್ಣು ರೂಪವೆ. ಕಲಾ ಕಾಷ್ಠಾ ನಿಮೇಷಾದಿ ಕಾಲನಿಯಾಮಕನೂ ಅವನೇ. ದೇವತೆಗಳೆಲ್ಲರೂ ಅವನ ಒಂದೊಂದು ಅಂಶದಿಂದ ಪ್ರಭಾವಿತರಾಗಿದ್ದಾರೆ. ಆದಿತ್ಯರೂ, ಮರುತರೂ, ಸಾಧ್ಯರೂ, ರುದ್ರರೂ, ಅಶ್ವಿನಿಗಳೂ, ಪಿತೃಗಳೂ, ಅತ್ರಿ ಮೊದಲಾದ ಪ್ರಜಾಪತಿಗಳೂ ಅಪ್ರಮೇಯನಾದ ಆ ಭಗವಂತನ ವಿಶೇಷ ಸನ್ನಿಧಾನೋಪೇತರಾಗಿಯೇ ಜಗತ್ಸರ್ಜನ ಪಾಲನಾದಿ ಕಾರ್ಯಗಳನ್ನು ಮಾಡುತ್ತಲಿದ್ದಾರೆ. ಗ್ರಹ. ನಕ್ಷತ್ರ, ತಾರಕೆಗಳಿಂದ ನಿಬಿಡವಾದ ಆಕಾಶ, ಬೆಂಕಿ, ನೀರು, ಗಾಳಿ, ನೆಲ (ನಾನು) ಹೆಚ್ಚೇನು - ಎಲ್ಲ ವಸ್ತುಗಳೂ ಆ ವಿಷ್ಣುವಿನಿಂದ ಓತಪ್ರೋತವಾಗಿವೆ. ಈ ಜಗತ್ತೆಲ್ಲವೂ ವಿಷ್ಣುಮಯವೇ. ಸಾಗರದ ತೆರೆಗಳು ಒಂದನ್ನೊಂದು ತಾಕಲಾಡುವಂತೆ ಅನಂತರೂಪಿಯಾದ ಆ ಶ್ರೀಹರಿಯ ಪ್ರೇರಣೆಯಿಂದಲೇ ನೇಹ ನಂಟುಗಳು ಎಸಗುತ್ತವೆ. ದ್ರೋಹ ಸಂಘರ್ಷಗಳು ಮಸಗುತ್ತವೆ.

ಪ್ರಕೃತಿ - ಕಾಲನೇಮಿ ಮುಂತಾದ ದೈತ್ಯರು ಭೂಮಿಯನ್ನು ಆಕ್ರಮಿಸಿ ಪ್ರಜೆಗಳನ್ನು ಪೀಡಿಸುತ್ತಲಿದ್ದಾರೆ. ಹಿಂದೆ ಸರ್ವಸಮರ್ಥನಾದ ಶ್ರೀ ಹರಿಯು ಸಂಹಾರ ಮಾಡಿದ ಕಾಲನೇಮಿಯೇ ಈಗ ಕಂಸನಾಗಿ ಉಗ್ರಸೇನನ ಹೊಟ್ಟೆಯಿಂದ ಹುಟ್ಟಿ ಬಂದಿದ್ದಾನೆ. ಯದುಕುಲದಲ್ಲಿ ಜನಿಸಿದ್ದರೂ ಅವನೊಬ್ಬ ದೊಡ್ಡ ರಕ್ಕಸ.

ಇದರಂತೆ ಧೇನುಕ, ಕೇಶಿ, ಪ್ರಲಂಬ, ನರಕ, ಸುಂದ, ಬಲಿಚಕ್ರವರ್ತಿಯ ಮಗನಾದ ಬಾಣಾಸುರ, ಮೊದಲಾದ ದೈತ್ಯರು ಭೂಲೋಕದ ಅನೇಕ ರಾಜ ಮನೆತನಗಳಲ್ಲಿ ಜನಿಸಿ ಬಂದಿದ್ದಾರೆ. ಆ ದುಷ್ಟ ದೈತ್ಯರ ಧಾರಣವನ್ನು ಮಾಡುವುದೆಂದರೆ ನನಗೆ ಭಯಂಕರ ಭಾರ. ಇಂಥ ಅನೇಕಾನೇಕ ದುರುಳ ದಾನವರ ಲಕ್ಷ ಲಕ್ಷ ಅಕ್ಷೋಹಿಣೀ ಬಲ ಇಂದು ನನ್ನ ಎದೆಯ ಮೇಲೆ ನಿಂತಿದೆ. ಜಾತ್ಯಾ ಅವರು ದೈತ್ಯರಾದರೂ ಈಗ ಭವ್ಯ ದೇಹಗಳಿಂದ ಮಹಾ ಬಲಿಷ್ಠರಾಗಿ ಕಣ್ಣೆ ಎಸೆಯುತ್ತಿದ್ದಾರೆ. ಮದೋದ್ಧತರಾದ ಈ ದರ್ಪಿಷ್ಠ ದೈತ್ಯರ ತೊತ್ತುಳಿದಾಟದಿಂದ ನನ್ನ ಮೈ ಗಾಸಿಗೊಂಡಿದೆ. ಈ ಭೂರಿ ಭೀಕರ ದಾನವರ ಭಾರವನ್ನು

ನಾನು ಹೊರಲಾರೆ. ಈ ರಾಜ ರಕ್ಕಸರ ಭೂರಿ ಭಾರದಿಂದ ನಾನು ತತ್ತರಿಸುತ್ತಲಿದ್ದೇನೆ. ನನ್ನ ತೂಕವೇ ತಪ್ಪುತ್ತಲಿದೆ. ನನ್ನಷ್ಟಕ್ಕೆ ನಾನು ಈ ಹೊರೆ ಹೊತ್ತುಕೊಂಡು ನಿಲ್ಲಲಾರದವಳಾಗಿದ್ದೇನೆ. ಈ ಭಯಂಕರ ಭಾರದಿಂದ ಭಗ್ನ ಭುಗ್ನಳಾದ ನಾನು ಇನ್ನು ಕುಸಿದು ರಸಾತಲಕ್ಕೆ ಇಳಿಯುವ ಪ್ರಸಂಗ ಬರುವುದು. ಆದುದರಿಂದ ನೀವೆಲ್ಲರೂ ಹೇಗಾದರೂ ಮಾಡಿ ನನ್ನ ಈ ಹೊರೆಯನ್ನು ಹಗುರ ಗೊಳಿಸಿರಿ.''

ಭೂದೇವಿಯ ಈ ಕರುಣಾಕ್ರಂದನವನ್ನು ಕೇಳಿ ಕರಗಿದ ದೇವತೆಗಳು ಬ್ರಹ್ಮ ದೇವರನ್ನು ಏನಾದರೂ ಉಪಾಯ ಮಾಡಲಿಕ್ಕೆ ಕೇಳಿಕೊಂಡರು ಆಗ ಆ ಶಾರದಾ ಪತಿಯು ಇಂತು ನುಡಿದರು.

''ಸುರಪುಂಗವರೇ, ಈ ಧರಣೀ ದೇವಿಯು ನುಡಿದಂತೆ ನಾನು ನೀವು ಎಲ್ಲರೂ ಆ ನಾರಾಯಣನ ಪ್ರತಿರೂಪರೇಸರಿ. ಅವನ ಪ್ರೇರಣೆ ಬೆಂಬಲವಿಲ್ಲದೇ ಏನನ್ನೂ ನಾವು ಮಾಡಲಾರೆವು. ಆದುದರಿಂದ ನಾವೆಲ್ಲರೂ ಹಾಲೂ ಕಡಲಿನಲ್ಲಿ ಹಾವಿನ ಹಾಸಿಗೆಯಲ್ಲಿ ಪವಡಿಸಿದ ಆ ಪರಮೇಶ್ವರನಿಗೇ ಶರಣು ಹೋಗೋಣ. ಭೂದೇವಿಯು ಪಡುತ್ತಲಿರುವ ಈ ಬವಣೆ ಬೆಸನಗಳನ್ನು ಅವನಿಗೇ ಬಿನ್ನವಿಸಿಗೊಳ್ಳೋಣ. ನಮ್ಮ ವಿಜ್ಞಾಪನೆಗೆ ಒಲಿದ ಆ ಪರಮಾತ್ಮನು ಭೂಮಿಯಲ್ಲಿ ಜಗದೋದ್ಧಾರಕ್ಕಾಗಿ ಅವತಾರ ಮಾಡಿ ಧರ್ಮ ರಕ್ಷಣ ಮಾಡುವನು. ಆದುದರಿಂದ ನಾವೆಲ್ಲರೂ ಅವನ ಬಳಿಗೇ ಹೋಗೋಣ ಬನ್ನಿ'' ಎಂದು ಹೇಳಿ ದೇವತೆಗಳನ್ನೆಲ್ಲ ಕರೆದುಕೊಂಡು ಕ್ಷೀರಸಾಗರದ ಕಡೆಗೆ ನಡೆದರು.

## ಬ್ರಹ್ಮೋವಾಚ

**ದ್ವೇ ವಿದ್ಯೆ ತ್ವಮನಾಮ್ನಾಯಃ ಪರಾಚೈವಾಪರಾ ತಥಾ ।**
**ತವ್ಯೆವ ಭವತೋ ರೂಪೇ ಮೂರ್ತಾಽ ಮೂರ್ತಾತ್ಮಿಕೇ ಪ್ರಭೋ ॥**

ವೇದವಾಣಿಗೆ ಅಗೋಚರನಾದ ಪ್ರಭೋ ಪರವಿದ್ಯೆ ಅಪರವಿದ್ಯೆ ಎರಡಕ್ಕೂ ಮುಖ್ಯ ಪ್ರತಿಪಾದ್ಯನು ನೀನೇ. ನಿನ್ನ ವ್ಯಕ್ತಾವ್ಯಕ್ತ ಸ್ವರೂಪವನ್ನು ತಿಳಿಸುವ ಆ ಪರಾಪರ ವಿದ್ಯೆಗಳು ತ್ವದ್ರೂಪ - ತ್ವತ್ಪರಗಳೇ ಆಗಿವೆ.

**''ದ್ವೇ ಬ್ರಹ್ಮಣೇ ತ್ವಣೀಯೊಽತಿಸ್ಥೂಲಾತ್ಮನ್ ಸರ್ವಸರ್ವವಿತ್ ।**
**ಶಬ್ದ ಬ್ರಹ್ಮ ಪರಂ ಚೈವ ತವ ಬ್ರಹ್ಮಮಯಸ್ಯ ಯತ್ ॥**

ಅಣೋರಣಿಯನೂ ಮಹತೋ ಮಹೀಯನೂ ಸರ್ವತ್ರ ವ್ಯಾಪ್ತನೂ ಆದುದರಿಂದ ಸರ್ವಶಬ್ದ ವಾಚ್ಯನೂ, ಸರ್ವಜ್ಞನೂ ಆದ ಪ್ರಭುವೇ! ಶಬ್ದ ಬ್ರಹ್ಮ ಪರಬ್ರಹ್ಮ ಎಂಬ ಎರಡು ಶಬ್ದಗಳಿಂದಲೂ ನೀನೇ ವಾಚ್ಯನಾಗಿರುವೆ. ಗುಣಪರಿಪೂರ್ಣನಾಗಿ ಚತುರ್ಮುಖ ಬ್ರಹ್ಮಾದಿಗಳಿಗೆ ನಿಯಾಮಕನಾಗಿರುವುದರಿಂದ ಪರಬ್ರಹ್ಮನೆಂದು ಕರೆಯಲ್ಪಡುವ ನೀನೇ ನಿಗಮಾಗಮಗಳಿಂದ ಪರಮ ಮುಖ್ಯ ವೃತ್ತಿಯಿಂದ ಪ್ರತಿಪಾದಿತನಾಗಿ ಶಬ್ದ ಬ್ರಹ್ಮ ಎಂದು ಕರೆಯಲ್ಪಡುವೆ. ವೇದಾದಿ ಶಬ್ದ ರಾಶಿಯೆಲ್ಲವೂ ನಿನ್ನನ್ನೇ ಬೋಧಿಸುವುದರಿಂದಲೂ ಸರ್ವ ಗುಣಾತ್ಮಕನಾದುದರಿಂದಲೂ ನೀನೇ ಬ್ರಹ್ಮಮಯ.

**ಋಗ್ವೇದಸ್ತ್ವಂ ಯಜುರ್ವೇದಸ್ಸಾಮವೇದಸ್ತ್ವಥರ್ವಣಃ**
**ಶಿಕ್ಷಾಕಲ್ಪೋ ನಿರುಕ್ತಂ ಚ ಛಂದೋ ಜ್ಯೋತಿಷಮೇವ ಚ !**
**ಇತಿಹಾಸ ಪುರಾಣೇ ಚ ತಥಾ ವ್ಯಾಕರಣಂ ಪ್ರಭೋ !**
**ಮೀಮಾಂಸಾ ನ್ಯಾಯ ಶಾಸ್ತ್ರಂ ಚ ಧರ್ಮಶಾಸ್ತ್ರಾಣ್ಯಧೋಕ್ಷಜ !**
**ಆತ್ಮಾತ್ಮ ದೇಹಗುಣವದ್ವಿಚಾರಾಚಾರಿ ಯದ್ವಚಃ !**
**ತದಪ್ಯಾದ್ಯಪತೆ ನಾನ್ಯದಧ್ಯಾತ್ಮಾತ್ಮ ಸ್ವರೂಪವತ್''**

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಮುಂತಾಗಿ ನಾಲ್ಕು ವೇದಗಳೂ ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ ಮುಂತಾದ (ಆರು) ಷಡಂಗಗಳೂ ಮತ್ತು ಇತಿಹಾಸ, ಪುರಾಣ, ಮೀಮಾಂಸಾ, ಬ್ರಹ್ಮತರ್ಕ, ಧರ್ಮಶಾಸ್ತ್ರಗಳೂ ಹಾಗೂ ಇವಲ್ಲದೇ ದೇಹ, ಜೀವ, ಪರಮಾತ್ಮ ಮುಂತಾಗಿ ವಿಚಾರಮಾಡುವ ಆಧ್ಯಾತ್ಮಿಕ ವಾಕ್ಯಗಳಿಗೆಲ್ಲ ನಿನ್ನ ಆಧ್ಯಾತ್ಮ ಸ್ವರೂಪವನ್ನು ತಿಳಿಸಿ ಕೊಡುವುದಲ್ಲದೇ ಬೇರಾವ ಪ್ರಯೋಜನವೂ ಇಲ್ಲ. ಆದುದರಿಂದ ಅವೆಲ್ಲವೂ ನೀನೇ ಎನ್ನುವಷ್ಟು ತ್ವನ್ಮಯವಾಗಿವೆ ತ್ವದ್ಬೋಧಕವಾಗಿದೆ.

**ಶೃಣೋಷ್ಯಕರ್ಣಃ ಪರಿಪಶ್ಯಸಿ ತ್ವಮ್!**
**ಅಚಕ್ಷುರೇಕೋ ಬಹುರೂಪ ರೂಪಃ॥**
**ಅಪಾದ ಹಸ್ತೋ ಜವನೋ ಗ್ರಹೀತಾ ।**
**ತ್ವಂ ವೇತ್ಸಿ ಸರ್ವಂ ನ ಚ ಸರ್ವವೇದ್ಯಃ॥**
**ಅಣೋರಣೀಯಾಂಸಮಸತ್ಸ್ವರೂಪಂ ।**
**ತ್ವಾಂ ಪಶ್ಯತೋಽಜ್ಞಾನ ನಿವೃತ್ತಿರಗ್ರ್ಯಾ ॥**
**ಧೀರಸ್ಯ ಧೀರಸ್ಯ ಬಿಭರ್ತಿ ನಾನ್ಯದ್**
**ವರೇಣ್ಯ ರೂಪಾತ್ಪರತಃ ಪರಾತ್ಮನ್ ॥**

ಅಣುವಿಗಿಂತ ಅಣುವೂ ಅವ್ಯಕ್ತ ಸ್ವರೂಪನೂ ಆದ ನಿನ್ನನ್ನು ತಿಳಿದವನಿಗೆ ಅಜ್ಞಾನ ನಿವೃತ್ತಿಯಾಗುವುದು ಖಂಡಿತ. ಅಂಥ ಜ್ಞಾನವಂತನ ಕುಶಲ ಬುದ್ಧಿಯು ಪರಾತ್ ಪರನಾದ ನಿನ್ನ ದಿವ್ಯರೂಪದ ಹೊರತು ಮತ್ತೇನನ್ನೂ ಚಿಂತಿಸುವುದಿಲ್ಲ. ನೀನು ಕಿವಿಯಿಲ್ಲದೇ ಕೇಳುವಿ. ಕಣ್ಣಿಲ್ಲದೇ ನೋಡುವಿ. ನಿನ್ನ ಯಾವ ಜ್ಞಾನವೂ ಇಂದ್ರಿಯಾಭಿಮಾನಿ ದೇವತೆಗಳ ಅಧೀನವಲ್ಲ. ಪ್ರಾಕೃತದೇಹ ನಿನಗಿಲ್ಲ. ಆದುದರಿಂದಲೇ ನಿನ್ನ ಕಣ್ಣು ಕಿವಿ ನಮ್ಮಂತೆ ಪ್ರಾಕೃತವಲ್ಲ. ಪಾದದಿಂದಲ್ಲದೇ ವೇಗ ಗತಿಯುಂಟು ನಿನಗೆ. ನೀನೆಲ್ಲವನ್ನೂ ಬಲ್ಲಿ. ಆದರೆ ನಿನ್ನನ್ನು ಮಾತ್ರ ಯಾರೂ ಅರಿಯಲಾರರು''. ಈ ರೀತಿಯಾಗಿ ಬ್ರಹ್ಮದೇವರು ಮಾಡಿದ ಪ್ರಾರ್ಥನೆಯನ್ನು ಕೇಳಿ ಪರಮಾತ್ಮನು ಸುಪ್ರಸನ್ನನಾಗಿ ತನ್ನ ವಿಶ್ವರೂಪವನ್ನು ಪ್ರಕಟಪಡಿಸಿ ಬ್ರಹ್ಮದೇವರಿಗೆ ಇಂತು ನುಡಿದನು - ''ಬ್ರಹ್ಮನ್, ನೀನು ಮತ್ತು ದೇವತೆಗಳು ನನ್ನಿಂದ ಏನಾಗಬೇಕೆಂದು

ಬಯಸುತ್ತಿದ್ದೀರಿ ತಿಳಿಸು. ನೀವು ಬಯಸಿದ್ದೆಲ್ಲವೂ ಸಿದ್ಧವಾಯಿತೆಂದೇ ತಿಳಿಯಿರಿ.'' ಪರಮಾತ್ಮನ ದಿವ್ಯವಾದ ಆ ವಿಶ್ವರೂಪವನ್ನು ಕಂಡು ಬ್ರಹ್ಮದೇವರಿಗೆ ಬ್ರಹ್ಮಾನಂದವಾಯಿತು. ದೇವತೆಗಳು ಭಗವಂತನ ಆ ವಿಶ್ವರೂಪವನ್ನು ಕಂಡು ಹೆದರಿ ಭಯ ಭಕ್ತಿಯಿಂದ ಕೈ ಮುಗಿದು ಹೃದಯತುಂಬಿ ಹೊಗಳಿ ಹಾಡಿದರು. ಬ್ರಹ್ಮ ದೇವರು ಆ ಪರಮಾತ್ಮನನ್ನು ಮತ್ತೆ ಸುತ್ತಿಸಿದರು.

## ಬ್ರಹ್ಮೋವಾಚ

''ನಮೋ ನಮಸ್ತೇऽಸ್ತು ಸಹಸ್ರಕೃತ್ವಃ ಸಹಸ್ರ ಬಾಹೋ ಬಹು ವಕ್ತ್ರಪಾದ ।
ನಮೋ ನಮಸ್ತೇ ಜಗತಃ ಪ್ರವೃತ್ತಿ ವಿನಾಶ ಸಂಸ್ಥಾನಕರಾಪ್ರಮೇಯ ॥''

''ಸ್ವಾಮಿನ್, ನಿನ್ನ ಅಡಿದಾವರೆಗಳಿಗೆ ಸಾವಿರ ಬಾರಿ ನಮ್ಮ ನಮಸ್ಕಾರವಿರಲಿ. ಸಾವಿರ ತೋಳುಗಳುಳ್ಳ ನಿನಗೆ ವಂದನೆ. ಅಸಂಖ್ಯ ಮುಖಪಾದಗಳುಳ್ಳ ನಿನಗೆ ಪ್ರಣಾಮ. ಜಗತ್ತಿನ ಪ್ರವೃತ್ತಿ - ಪ್ರಣಾಶ - ಪಾಲನಗಳನ್ನು ಮಾಡತಕ್ಕ ಅಪ್ರಮೇಯನಾದ ಶ್ರೀ ಹರಿಯೇ! ನಿನಗೆ ನಮ್ಮ ಅನಂತಾನಂತ ವಂದನೆಗಳು.

## ಭೂಭಾರ ಹರಣಕ್ಕಾಗಿ ಬ್ರಹ್ಮದೇವರ ಬಿನ್ನಹ

ಪ್ರಭೋ, ನೆಲದಲ್ಲಿ ಜನಿಸಿದ ನೀಚರಕ್ಕಸರಿಂದ ಈ ಭೂದೇವಿಯು ಪೀಡಿತಳಾಗಿದ್ದಾಳೆ. ದರ್ಪೋದ್ಧತರಾದ ಆ ದುಷ್ಟ ದೈತ್ಯರ ಉಪಟಳದಿಂದ ಚರಾ ಚರಾತ್ಮಕವಾದ ಪೃಥ್ವೀಮಂಡಲವೇ ದುಃಖಾಕ್ರಾಂತವಾಗಿದೆ. ಆ ದುರುಳ ದಾನವರ ಮಿತಿಮೀರಿದ ಭಾರದಿಂದ ಭಗ್ನಳೂ ಉದ್ವಿಗ್ನಳೂ ಆದ ಈ ಭೂದೇವಿಯು ನಿನಗೆ ಶರಣು ಬಂದಿದ್ದಾಳೆ. ತನ್ನ ಎದೆಯ ಮೇಲಿನ ಆ ಹೊರಲಾರದ ಹೊರೆಯನ್ನು ದೂರ ಮಾಡಬೇಕೆಂದು ನಿನ್ನನ್ನು ಬಿನ್ನವಿಸಿಕೊಳ್ಳುತ್ತಿದ್ದಾಳೆ. ಈ ಭೂಭಾರ ಹರಣಕ್ಕಾಗಿ ನೀನು ಭೂಮಿಯಲ್ಲಿ ಅವತಾರ ಮಾಡಬೇಕು. ಈ ನಿನ್ನ ಲೀಲಾವತಾರದಲ್ಲಿ ನಮಗೂ ಸೇವೆ ಸಲ್ಲಿಸುವ ಅವಕಾಶ ನೀಡು. ನಾನು ಏನು ಮಾಡಬೇಕು? ಈ ಇಂದ್ರ ಆ ವರುಣ, ಈ ಸೂರ್ಯ ಈ ಎಲ್ಲ ಏಕಾದಶ ರುದ್ರರು, ಅಷ್ಟವಸುಗಳು, ಈ ಉಳಿದೆಲ್ಲ ಮೂವತ್ತುಮೂರು ಕೋಟಿ ದೇವತೆಗಳು ನಿನ್ನ ಆಜ್ಞೆಗಾಗಿ ಕಾಯುತ್ತಲಿದ್ದಾರೆ. ಯಾರು ಏನು ಮಾಡಬೇಕು ಅಪ್ಪಣೆ ಕೊಡು.''

## ಶ್ರೀಮನ್ನಾರಾಯಣನ ಶುಕ್ಲಕೇಶ, ಕೃಷ್ಣಕೇಶ

ಈ ರೀತಿಯಾಗಿ ಬ್ರಹ್ಮದೇವರು ಬೆಸಗೊಂಡ ಬಳಿಕ ಪ್ರೀತನಾದ ಆ ಪರಮಾತ್ಮನು ತನ್ನ ಕರಿ ಮತ್ತು ಬಿಳಿ ಬಣ್ಣದ ಎರಡು ಕೂದಲುಗಳನ್ನು ಕಿತ್ತು ದೇವತೆಗಳ ಎದುರು ಹಿಡಿದನು ಮತ್ತು ನುಡಿದನು. ''ಸುರಪುಂಗವರೇ, ಈ ನನ್ನ ಶುಕ್ಲಕೇಶ ಮತ್ತು ಕೃಷ್ಣಕೇಶಗಳು ಭೂಮಿಯಲ್ಲಿ ಅವತಾರ ಮಾಡಿ ಧರಣಿಯ ಭಾರವನ್ನು ಇಳಿಸುತ್ತವೆ. ಜನರ ದುಃಖವನ್ನು ನಾಶಗೊಳಿಸುತ್ತವೆ. ನೀವೆಲ್ಲ ದೇವತೆಗಳು ನಿಮ್ಮ ನಿಮ್ಮ ಅಂಶಗಳಿಂದ ಮಹೀ ಮಂಡಲದಲ್ಲಿ ಅವತಾರ ಮಾಡಿರಿ. ನಿಮಗಿಂತಲೂ ಮೊದಲೇ

ಹುಟ್ಟಿದ ದುಷ್ಟ ದೈತ್ಯರೊಡನೆ ಯುದ್ಧ ಮಾಡಿರಿ. ನನ್ನ ದೃಷ್ಟಿಪಾತದಿಂದಲೇ ಅವರ ಆಯುಷ್ಯವೆಲ್ಲವನ್ನೂ ನಾನು ಹರಣ ಮಾಡಿ ಬಿಡುತ್ತೇನೆ. ಆದುದರಿಂದ ಆ ಹೋರಾಟದಲ್ಲಿ ನಿಮಗೆ ಗೆಲುವು ನಿಶ್ಚಿತ. ವಸುದೇವನ ಮಡದಿಯಾದ, ದೇವತೆಗೆ ಸಮಾನಳಾದ ದೇವಕೀದೇವಿಯಲ್ಲಿ ನಾನು ಹುಟ್ಟಿ ಬರುವೆನು. ಕಂಸನಾಗಿ ಹುಟ್ಟಿದ ಆ ಕಾಲನೇಮಿಯನ್ನು ಸಂಹರಿಸುವೆನು.'' ಹೀಗೆ ಹೇಳಿ ಶ್ರೀ ಹರಿಯು ಅಲ್ಲಿಯೇ ಅದೃಶ್ಯನಾದನು. ಅದೃಶ್ಯನಾದ ಆ ಭಗವಂತನಿಗೆ ನಮಸ್ಕಾರ ಮಾಡಿ ಎಲ್ಲ ಅಮರರು ಅಲ್ಲಿಂದ ಮೇರು ಶಿಖರಕ್ಕೆ ಬಂದು ಎಲ್ಲರೂ ಮಹೀತಲದಲ್ಲಿ ಅವತರಿಸಿದರು.

## ಚಾಡಿಕೋರನಾದ ನಾರದನಿಂದ ವಸುದೇವನು ಜೇಲು ಸೇರಿದ

ನಾರದರು ಕಂಸನ ಬಳಿಗೆ ಬಂದು ''ದೇವಕೀ ದೇವಿಯ ಎಂಟನೆಯ ಗರ್ಭವಾಗಿ ಸಾಕ್ಷಾತ್ ಶ್ರೀ ಹರಿಯೇ ಅವತಾರ ಮಾಡುವನು'' ಎಂದು ತಿಳಿಸಿದರು. ಅದನ್ನು ಕೇಳಿ ಕಂಸನಿಗೆ ಕೋಪ ಬಂದು ಅವನು ದೇವಕೀ ವಸುದೇವರನ್ನು ಹಿಡಿತರಿಸಿ ಬಂದೀಖಾನೆಯಲ್ಲಿರಿಸಿದನು. ವಸುದೇವನು ಕಂಸನಿಗೆ ಈ ಮೊದಲೇ ವಚನ ಕೊಟ್ಟಂತೆ ತನಗೆ ಹುಟ್ಟಿದ ಮಕ್ಕಳನ್ನೆಲ್ಲ ಅವನಿಗೆ ತಂದು ಒಪ್ಪಿಸುವುದೆಂದು ಸಂಕಲ್ಪಿಸಿದನು. ಹಿಂದೆ ಹಿರಣ್ಯಕಶ್ಯಿಪುವಿಗೆ ಷಡ್ಗರ್ಭ ಎಂಬ ಹೆಸರಿನ ಆರು ಜನ ಮಕ್ಕಳಿದ್ದರು. ಅವರನ್ನು ಶ್ರೀ ವಿಷ್ಣುವಿನ ಆಜ್ಞೆಯಂತೆ ಯೋಗ ಮಾಯೆಯು ದೇವಕೀ ದೇವಿಯ ಉದರದಲ್ಲಿ ತಂದು ಇರಿಸಬೇಕು. ಹುಟ್ಟಿದ ಈ ಎಲ್ಲ ತನ್ನ ಮಕ್ಕಳನ್ನು ವಸುದೇವನು ಕಂಸನ ಕೈಯಲ್ಲಿ ಕೊಡಬೇಕು. ಕಂಸನು ಅವರನ್ನೆಲ್ಲ ಕೊಲ್ಲುವನು.

## ಕೃಷ್ಣನ ಕಾರಸ್ಥಾನ

ಈ ಎಲ್ಲ ಯೋಜನೆಯನ್ನು ಮಾಡುವ ವೈಷ್ಣವೀ ಮಾಯೆಗೆ ಯೋಗನಿದ್ರಾ ಅಥವಾ ಮಹಾಮಾಯಾ ಎಂದು ಹೆಸರು. ಇದನ್ನೆಲ್ಲ ಮಾಡಲು ಅವಳಿಗೆ ಶ್ರೀಹರಿಯೇ ಅಪ್ಪಣೆ ಮಾಡಿದನು.

## ಶ್ರೀ ಭಗವಾನ ಉವಾಚ

''ನಿದ್ರೇ ಗಚ್ಛ ಮಮಾದೇಶಾತ್ ಪಾತಾಲ ತಲ ಸಂಶ್ರಯಾನ್ ।
ಏಕೈಕತ್ವೇನ ಷಡ್ಗರ್ಭಾನ್ ದೇವಕೀ ಜಠರಂ ನಯ'' ॥

''ಯೋಗನಿದ್ರೆಯೇ, ನನ್ನ ಅಪ್ಪಣೆಯಂತೆ ನೀನು ಪಾತಾಲ ಮೂಲಕ್ಕೆ ಹೋಗು. ಅಲ್ಲಿರುವ ಷಡ್ಗರ್ಭರನ್ನು ಒಬ್ಬೊಬ್ಬರನ್ನಾಗಿ ದೇವಕಿಯ ಗರ್ಭದಲ್ಲಿ ತಂದು ಕೂಡಿಸು. ಹುಟ್ಟಿದ ಕೂಡಲೇ ಅವರನ್ನೆಲ್ಲ ಕಂಸನು ಕೊಂದು ಹಾಕುವನು. ಹೀಗೆ ಆರು ಮಕ್ಕಳನ್ನು ಕಂಸನು ಕೊಂದ ಬಳಿಕ ಶೇಷ ಎಂಬ ಏಳನೇಯ ಗರ್ಭವು ನನ್ನ ಅಂಶದಿಂದ ಒಡಗೂಡಿ ದೇವಕಿಯ ಗರ್ಭದಲ್ಲಿ ಒಡಮೂಡುವುದು. ಗೋಕುಲದಲ್ಲಿ ರೋಹಿಣೀ ಎಂಬ ವಸುದೇವನ ಬೇರೊಬ್ಬ ಭಾರ್ಯೆ ಇರುವಳು. ದೇವಕಿಯ ಈ ಏಳನೇ ಗರ್ಭವನ್ನು ಸೆಳೆದು ರೋಹಿಣಿಯ ಗರ್ಭದಲ್ಲಿ ಅವಳ ಬಸಿರು ಬಾಣಂತಿತನಗಳಿಗೆ ಸರಿಯಾಗಿ ಹೊಂದುವಂತೆ ನೀನು ತಂದು ಒಯ್ದಿರಿಸಬೇಕು. ದೇವಕಿಯ ಈ ಏಳನೇಯ ಗರ್ಭವು ಬಂದೀಖಾನೆಯ

ಬಂಧನದಲ್ಲಿ ಕಂಸನ ಹೆದರಿಕೆಯಿಂದ ಗರ್ಭಸ್ರಾವವಾಗಿ ಹೊಟ್ಟೆ ಬಿದ್ದು ಹೋಯಿತು ಎಂದು ಜನರು ಮಾತನಾಡುವರು. ಗರ್ಭವನ್ನು ಸೆಳೆದು ತಂದದ್ದರಿಂದ ರೋಹಿಣಿಯ ಹೊಟ್ಟೆಯಿಂದ ಹುಟ್ಟಿದ ಆ ಮಗುವಿಗೆ ಸಂಕರ್ಷಣ ಎಂದು ಹೆಸರು ಬರುವುದು. ತನ್ನ ದೇಹದ ಶುಭ್ರಕಾಂತಿಯಿಂದ ಅವನೊಂದು ಬಿಳಿ ಬೆಟ್ಟದಂತೆ ಬೆಳಗುವನು. ಅನಂತರ ನಾನು ದೇವಕೀ ದೇವಿಯ ಗರ್ಭದಿಂದ ಅವತರಿಸುವೆನು. ಯೋಗ ಮಾಯೆ, ಅದೇ ವೇಳೆಯಲ್ಲಿ ನೀನು ಯಶೋದೆಯ ಗರ್ಭದಲ್ಲಿ ಮೂಡಿ ಬರಬೇಕು. ವರ್ಷಾಕಾಲ, ಶ್ರಾವಣಮಾಸ, ಕೃಷ್ಣಪಕ್ಷ ಅಷ್ಟಮಿಯ ಸರಿರಾತ್ರಿಯಲ್ಲಿ ನಾನು ದೇವಕಿಯ ಹೊಟ್ಟೆಯಿಂದ ಪ್ರಕಟನಾಗುವೆನು. ಮಧ್ಯರಾತ್ರಿಯ ಅನಂತರದಲ್ಲಿ ನೀನು ಜನಿಸುವುದರಿಂದ ನಿನ್ನ ಜನನವು ನವಮೀ ತಿಥಿಗೆ ಬೀಳುವುದು. ನನ್ನಿಂದ ಪ್ರೇರಿತನಾದ ವಸುದೇವನು ದೇವಕಿಯ ಪಕ್ಕದಲ್ಲಿ ಮಲಗಿದ ನನ್ನನ್ನು ಎತ್ತಿ ತಂದು ಯಶೋದೆಯ ಬಳಿಯಲ್ಲಿ ಮಲಗಿಸುವನು. ಯಶೋದೆಯ ಮಡಿಲಲ್ಲಿ ಕೂಸಾಗಿ ಪವಡಿಸಿದ ನಿನ್ನನ್ನು ಎತ್ತಿ ತಂದು ದೇವಕಿಯ ಹಾಸಿಗೆಯ ಮೇಲಿರಿಸುವನು.

ತನ್ನ ಪ್ರತಿಜ್ಞಾನುಸಾರವಾಗಿ ಕಂಸನು ದೇವಕಿಯ ಮಗ್ಗುಲಲ್ಲಿರುವ ನಿನ್ನನ್ನು ಎತ್ತಿಕೊಂಡು ಬೆಟ್ಟದ ಹೆಬ್ಬಂಡೆಗೆ ಜೋರಿನಿಂದ ಅಪ್ಪಳಿಸುವನು. ಆಗ ಅವನ ಕೈಯಿಂದ ಕೊಸರಿಕೊಂಡು ನೀನು ಜಾರಿ ಜಿಗಿದು ಮುಗಿಲಿಗೇರುವಿ. ಆ ಆಕಾಶದಲ್ಲಿಯೇ ನಿನಗೊಂದು ವಿಶಿಷ್ಟ ಸ್ಥಾನ, ವಿಶೇಷ ಮಾನಗಳು ಪ್ರಾಪ್ತವಾಗುವವು. ದೇವೇಂದ್ರನು ನನ್ನ ಮೇಲಿನ ಗೌರವದಿಂದ ನಿನಗೆ ನಮಸ್ಕಾರ ಮಾಡುವನು. ಮತ್ತು ನಿನ್ನ ಪಾದದಡಿಯಲ್ಲಿ ತಲೆತಗ್ಗಿಸಿ ನಿನ್ನನ್ನು ತಂಗಿ ಎಂದು ಪರಿಗ್ರಹಿಸುವನು. ನೀನಾದರೂ ಶುಂಭ, ನಿಶುಂಭ ಮೊದಲಾದ ಸಾವಿರಾರು ಜನ ದೈತ್ಯರನ್ನು ಕೊಂದು ನಿನ್ನ ಅನೇಕ ಸ್ಥಾನ ಮಂದಿರಗಳಿಂದ ಪೃಥ್ವೀಮಂಡಲವನ್ನೆಲ್ಲ ಅಲಂಕರಿಸುವಿ.

## ಶ್ರೀ ಕೃಷ್ಣ ಕಥಿತ ದೇವೀ ಸ್ತೋತ್ರ

"ತ್ವಂ ಭೂತಿಃ ಸನ್ನತಿಃ ಕ್ಷಾಂತಿಃ ಕಾಂತಿರ್ದ್ಯೌಃ ಪೃಥಿವೀ ಧೃತಿಃ ।
ಲಜ್ಜಾ ಪುಷ್ಟಿರುಷಾ ಯಾ ತು ಕಾಚಿದನ್ಯಾ ತ್ವಮೇವ ಸಾ ॥

ಯೇ ತ್ವಾಮಾರ್ಯೇತಿ ದುರ್ಗೇತಿ ವೇದಗರ್ಭಾಽಂಬಿಕೇತಿ ಚ ।
ಭದ್ರೇತಿಭದ್ರ ಕಾಲೀತಿ ಕ್ಷೇಮದಾ ಭಾಗ್ಯದೇತಿ ಚ ॥

ಪ್ರಾತಶ್ಚೈವಾಪರಾನ್ಹೇ ಚ ಸ್ತೋಷ್ಯಂತ್ಯಾನಮ್ರ ಮೂರ್ತಯಃ।
ತೇಷಾಂ ಹಿ ಪ್ರಾರ್ಥಿತಂ ಸರ್ವಂ ಮತ್ ಪ್ರಸಾದಾದ್ಭವಿಷ್ಯತಿ ॥

ಸುರಾಮಾಂಸೌ ವರ್ಜಯಿತ್ವಾ ಭಕ್ಷ್ಯ ಭೋಜ್ಯೈಶ್ಚ ಪೂಜಿತಾ ।
ನೃಣಾಮಶೇಷ ಕಾಮಾಂಸ್ತ್ವಂ ಪ್ರಸನ್ನಾ ಸಂಪ್ರದಾಸ್ಯಸಿ" ॥

ಜನರಿಗೆ ಭೋಗೈಶ್ವರ್ಯಗಳನ್ನೂ, ಉನ್ನತಿ ಸನ್ಮತಿಗಳನ್ನೂ, ಕ್ಷಾಂತಿ ಕಾಂತಿಗಳನ್ನೂ ಸ್ಥೈರ್ಯಧೈರ್ಯಗಳನ್ನೂ, ತುಷ್ಟಿಪುಷ್ಟಿಗಳನ್ನೂ, ಲಜ್ಜೆ ಜ್ಞಾನಗಳನ್ನೂ

ಕೊಡುವವಳು ನೀನೇ ಆಗಿರುವಿ. ಈ ಎಲ್ಲ ಸಿರಿಸೌಭಾಗ್ಯ ರೂಪದಿಂದ ಭಕ್ತರಲ್ಲಿ ನೆಲಿಸಿ ಅವರ ಭಾಗ್ಯೋದಯದ ಉಷಃ ಕಾಲಕ್ಕೆ ನೀನೇ ಕಾರಣಳಾಗುವಿ. ಆರ್ಯಾ, ದುರ್ಗಾ, ವೇದಗರ್ಭಾ, ಅಂಬಿಕಾ, ಭದ್ರಾ, ಭದ್ರಕಾಳೀ, ಕ್ಷೇಮದಾ, ಭಾಗ್ಯದಾ ಎಂದು ಮುಂತಾಗಿ ನಿನ್ನ ಶುಭ ನಾಮಗಳನ್ನು ಬೈಗು ಬೆಳಗುಗಳಲ್ಲಿ ಮತ್ತು ಮಧ್ಯಾಹ್ನದಲ್ಲಿ ಭಕ್ತಿ ಭರಿತರಾಗಿ ಯಾರು ಪಠಿಸುವರೋ ಅವರು ಬೇಡಿದ್ದನ್ನೆಲ್ಲ ನಾನು ನೀಡುತ್ತೇನೆ. ನನ್ನ ಪ್ರಸಾದದಿಂದ ನಿನ್ನನ್ನು ಧ್ಯಾನಿಸುವ ಜನರ ಇಷ್ಟಾರ್ಥಗಳೆಲ್ಲವೂ ಈಡೇರುತ್ತವೆ. ಶೆರೆ, ಮಾಂಸ, ಬಿಟ್ಟು ಉಳಿದ ಭಕ್ಷ್ಯ ಭೋಜ್ಯಗಳಿಂದ ನಿನ್ನನ್ನು ಪೂಜಿಸಿದ ಜನರ ಸರ್ವಕಾಮಗಳನ್ನೂ ಸುಪ್ರಸನ್ನಳಾದ ನೀನು ಅನುಗ್ರಹಿಸುವಿ. ನೀನು ಕೊಟ್ಟ ವರಗಳನ್ನೆಲ್ಲ ನಾನು ನಡೆಸಿ ಕೊಡುತ್ತೇನೆ. ಇದರಲ್ಲಿ ಸಂದೇಹ ಬೇಡ. ದೇವಿ, ನೀನು ಇನ್ನು ಇಲ್ಲಿಂದ ನಡೆ, ನಾನು ಹೇಳಿದಂತೆ ಮಾಡು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಪ್ರಥಮಾಧ್ಯಾಯ ಸಂಪೂರ್ಣ*



## ಕೃಷ್ಣಾವತಾರ

**ಅಧ್ಯಾಯ - ೨**

**ಪರಾಶರ** - ಆ ದೇವದೇವನ ಆದೇಶದಂತೆ ಜಗದ ತಾಯಿಯಾದ ಆ ಯೋಗ ಮಾಯೆಯು ಪಾತಾಲದಲ್ಲಿರುವ ಆ ಷಡ್ಗರ್ಭ ಕುಮಾರರನ್ನು ತಂದು ದೇವಕಿಯ ಹೊಟ್ಟೆಯಲ್ಲಿ ಒಂದೊಂದಾಗಿ ತಂದು ಇರಿಸಿದಳು. ದೇವಕಿಯ ಆ ಆರು ಮಕ್ಕಳನ್ನು ಕಂಸನು ಹುಟ್ಟಿದ ಕೂಡಲೇ ಕಸಿದು ಕೊಂದು ಹಾಕಿದನು. ಆ ಆರು ಮಕ್ಕಳ ಅನಂತರ ದೇವಕಿಯು ಮತ್ತೆ ಬಸಿರಾದಳು. ಈ ಏಳನೆಯ ಗರ್ಭವನ್ನು ಯೋಗಮಾಯೆಯು ಭಗವಂತನ ಆಜ್ಞೆಯ ಮೇರೆಗೆ ದೇವಕಿಯ ಉದರದಿಂದ ಸೆಳೆದು ರೋಹಿಣಿಯ ಗರ್ಭದಲ್ಲಿ ಒಯ್ದಿಟ್ಟಳು. ಅನಂತರ ಶ್ರೀಹರಿಯು ಮೂರು ಲೋಕಗಳಿಗೆಲ್ಲ ಉಪಕಾರ ಗೈಯಲು ದೇವಕಿಯ ಗರ್ಭವನ್ನು ಪ್ರವೇಶಿಸಿದನು. ಅದೇ ದಿನ ಯೋಗ ನಿದ್ರೆಯು ಯಶೋದೆಯ ಗರ್ಭದಲ್ಲಿ ಪ್ರವೇಶಿಸಿ ಭೂಮಿಯಲ್ಲಿ ಉತ್ಪನ್ನಳಾದಳು.

### ತದೇವ ಲಗ್ನಂ ಸುದಿನಂ ತದೇವ

ಭಗವಂತನ ಅವತಾರವಾಗುವಾಗ ಆಕಾಶದಲ್ಲಿ ಎಲ್ಲ ಗ್ರಹಗಳು ಚೆನ್ನಾಗಿ ಚಲಿಸಿದವು. ಋತುಗಳೆಲ್ಲವೂ ಶುಭಕರವಾಗಿ ಶೋಭಿಸಿದವು. ಪರಮೇಶ್ವರನು ಗರ್ಭದಲ್ಲಿ ಸನ್ನಿಹಿತನಾದಾಗ ದೇವಕಿಯ ಮುಖದ ಮೇಲೆ ವಿಲಕ್ಷಣವಾದ ಕಾಂತಿ, ತೇಜಸ್ಸುಗಳು ಉಕ್ಕತೊಡಗಿದವು. ಅತ್ಯುಜ್ವಲವಾದ ಪ್ರಭಾ ಪುಂಜದಿಂದ ದೇದೀಪ್ಯಮಾನಳಾದ ಅವಳನ್ನು ನೋಡಲಿಕ್ಕೂ ಜನರಿಗೆ ಶಕ್ಯವಾಗಲಿಲ್ಲ. ಅವಳ ಲೋಕ ವಿಲಕ್ಷಣವಾದ ತೇಜಃಪ್ರಕರ್ಷದಿಂದಲೇ ಅಲ್ಲಿ ಶ್ರೀ ಮಹಾ ವಿಷ್ಣುವಿನ ಸನ್ನಿಧಾನವನ್ನು ಗುರುತಿಸಿದ ದೇವತೆಗಳು ಜನರಿಗೆ ಕಾಣದಂತೆ ಅಲ್ಲಿ ಬಂದು ನಿಂತುಕೊಂಡು ಆ ದೇವಕೀ ದೇವಿಯನ್ನು ಸ್ತೋತ್ರ ಮಾಡತೊಡಗಿದರು.

### ದೇವತೆಗಳು ಮಾಡಿದ ದೇವಕೀ ಸ್ತೋತ್ರ

"ಸಮುದ್ರಾದ್ರಿನದೀದ್ವೀಪ ವನ ಪತ್ತನ ಭೂಷಣಾ ।
ಗ್ರಾಮಖರ್ವಟ ಖೇಟಾಢ್ಯಾ ಸಮಸ್ತಾ ಪೃಥಿವೀ ಶುಭೇ ॥

ಗೃಹರ್ಕ್ಷ ತಾರಕಾಚಿತ್ರಂ ವಿಮಾನ ಶತಸಂಕುಲಂ ।
ಅವಕಾಶಮಶೇಷಸ್ಯ ಯುದ್ದದಾತಿ ನಭಸ್ಥಲಂ ॥

ಭೂರ್ಲೋಕಶ್ಚ ಭುವರ್ಲೋಕಃ ಸ್ವರ್ಲೋಕೋಥ ಮಹರ್ಜನೌ ।
ತಪಶ್ಚ ಬ್ರಹ್ಮಲೋಕಶ್ಚ ಬ್ರಹ್ಮಾಂಡಮಖಿಲಂ ಶುಭೇ ॥

ತದಂತರೇ ಸ್ಥಿತಾ ದೇವಾಃ ದೈತ್ಯ ಗಂಧರ್ವ ಚಾರಣಾಃ ।
ಮಹೋರಗಾಸ್ತಥಾ ಯಕ್ಷಾ ರಾಕ್ಷಸಾಃ ಪ್ರೇತಗುಹ್ಯಕಾಃ ॥

ಮನುಷ್ಯಾಃ ಪಶವಶ್ಚಾನ್ಯೇ ಯೇಚ ಜೀವಾ ಯಶಸ್ವಿನಿ ।
ತೈರಂತಸ್ಥೈ ರನಂತೋಽಸೌ ಸರ್ವಗಃ ಸರ್ವ ಭಾವನಂ ॥

**ರೂಪ ಕರ್ಮ ಸ್ವರೂಪಾಣಿ ನ ಪರಿಚ್ಛೇದ ಗೋಚರೇ ।**
**ಯಸ್ಯಾಖಿಲ ಪ್ರಮಾಣಾನಿ ಸ ವಿಷ್ಣುರ್ಗರ್ಭಗಸ್ತವ ॥**

**ತ್ವಂ ಸ್ವಾಹಾ ತ್ವಂ ಸ್ವಧಾ ವಿದ್ಯಾ ಸುಧಾ ತ್ವಂ ಜ್ಯೋತಿರಂಬರೇ ।**
**ತ್ವಂ ಸರ್ವ ಲೋಕರಕ್ಷಾರ್ಥಂ ಅವತೀರ್ಣಾ ಮಹೀತಲೇ ॥**

**ಪ್ರಸೀದ ದೇವಿ ಸರ್ವಸ್ಯ ಜಗತಃ ಶಂ ಶುಭೇ ಕುರು ।**
**ಪ್ರೀತ್ಯಾ ತಂ ಧಾರಯೇಶಾನಂ ಧೃತಂ ಯೇನಾಖಿಲಂ ಜಗತ್ ॥**

ತಾಯಿ ! ಸಮುದ್ರ, ಬೆಟ್ಟ, ತೊರೆ, ನಡುಗಡ್ಡೆ, ಗಾಳಿ, ನಗರ, ಹಳ್ಳಿ -ಪಳ್ಳಿ ಗೃಹ, ಗುಡಿಸಲುಗಳಿಂದ ಒಡಗೂಡಿದ ಈ ಅಖಂಡ ಭೂಮಂಡಲವೆಲ್ಲವೂ ಆ ವಿಷ್ಣುವಿನ ಉದರದಲ್ಲಿದೆ. ಗೃಹ ನಕ್ಷತ್ರ ನೀಹಾರಿಕೆಗಳಂದ ನಿಚಿತವಾದ, ನೂರಾರು ವಿಮಾನಗಳಿಂದ ತುಂಬಿದ ಆಕಾಶವೂ ಅವನ ಉದರದಲ್ಲಿದೆ. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ, ಜನಲೋಕ, ತಪೋಲೋಕ, ಬ್ರಹ್ಮಲೋಕ, ಇಷ್ಟೇ ಏಕೆ ಇಡೀ ಬ್ರಹ್ಮಾಂಡವೇ ಆ ವಿಷ್ಣುವಿನ ಉದರದ ಏಕದೇಶದಲ್ಲಿದೆ. ಈ ಎಲ್ಲ ಲೋಕಗಳಲ್ಲಿರುವ ದೇವದಾನವರೂ, ನಾಗ - ಗಂಧರ್ವರೂ, ಯಕ್ಷ - ರಾಕ್ಷಸರೂ, ಮನುಷ್ಯ ಪಶುಗಳೂ ಮತ್ತು ಉಳಿದೆಲ್ಲ ಜೀವರಾಶಿಗಳೂ ಆ ವಿಷ್ಣುವಿನ ಕುಕ್ಷಿಯಲ್ಲಿವೆ. ಈ ಎಲ್ಲರ ಅಂತಸ್ಥನಾದ ಸರ್ವಾಂತರ್ಯಾಮಿಯಾದ ಆ ಅನಂತನು ನಿನ್ನ ಕುಕ್ಷಿಯಲ್ಲಿ ಇರುವನು. ತಾಯಿ, ನಿನ್ನ ಉದರದಲ್ಲಿ ಪ್ರಕಾಶಿಸುತ್ತಿರುವ ಆ ಶ್ರೀಗರ್ಭದ ರೂಪಕರ್ಮ ಸ್ವರೂಪಗಲು ನಮ್ಮ ಜ್ಞಾನ-ಶಕ್ತಿಗಳಿಗೆ ಗೋಚರವಾಗಲಾರವು. ಅಂಥ ಭಗವಂತನನ್ನು ಉದರದಲ್ಲಿ ಹೊತ್ತ ನೀನು ಸಾಮಾನ್ಯಳಲ್ಲ. ನೆಲದ ಬೆಂಕಿಯ ಬೆಳಕು ನೀನು. ಮುಗಿಲ ಮಣಿಗಳ ಜ್ಯೋತಿ ನೀನು. ಚಂದ್ರ ಮಂಡಲದ ಅಮೃತಧಾರೆಯೇ ನೀನು. ಎಲ್ಲ ಜಗತ್ತಿನ ರಕ್ಷಣೆಗಾಗಿ ನೀನು ಈ ಭೂಮಂಡಲದಲ್ಲಿ ಅವತಾರಮಾಡಿರುವೆ. ದೇವಿ, ನೀನು ಪ್ರಸನ್ನಳಾಗಿ ಜಗತ್ತಿಗೆ ಮಂಗಳವನ್ನುಂಟು ಮಾಡು. ಬ್ರಹ್ಮಾಂಡವನ್ನು ಧರಿಸಿದ ಆ ಭಗವಂತನನ್ನು ನೀನು ಧರಿಸು. ಬ್ರಹ್ಮಗರ್ಭಾ, ವೇದಗರ್ಭಾ, ದೇವಗರ್ಭಾ ಬೋಧಗರ್ಭಾ, ಧೈರ್ಯಗರ್ಭಾ, ಮೊದಲಾದವುಗಳು ತಾಯಿ, ನಿನ್ನ ಸಹಸ್ರಾರು ವಿಭೂತಿರೂಪಗಳಾಗಿವೆ.''

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಪಂಚಮಾಂಶದ ಎರಡನೇ ಅಧ್ಯಾಯ ಸಂಪೂರ್ಣ*

—o—

## ಹದಿನಾಲ್ಕು ಲೋಕಗಳ ಒಡೆಯ

**ಅಧ್ಯಾಯ - ೩**

ದೇವತೆಗಳು ಈ ರೀತಿಯಾಗಿ ಹೊಗಳುತ್ತಲಿರುವಾಗ ಜಗತ್ತನ್ನು ರಕ್ಷಿಸುವ ಪುಂಡರೀಕಾಕ್ಷನು ದೇವಕೀ ದೇವಿಯ ಬಸಿರಿನಲ್ಲಿ ಕಂಗೊಳಿಸಿದನು. ಪ್ರಪಂಚವೆಂಬ ಪುಂಡರೀಕಕ್ಕೆ ಸೂರ್ಯನಂತಿರುವ ಪರಮಾತ್ಮನು ಅರ್ಧರಾತ್ರಿಯಲ್ಲಿ ದೇವಕಿಯ ಜಠರದಿಂದ ಪ್ರಾದುರ್ಭೂತನಾದನು. ಜನಾರ್ದನನು ಜನಿಸುವಾಗ ಜಗತ್ತೇ ಪ್ರಸನ್ನವಾಗಿದ್ದಿತು. ನದಿಗಳೆಲ್ಲ ತಿಳಿಗಟ್ಟಿದವು. ಬಿರುಗಾಳಿಗಳೆಲ್ಲ ತಂಗಾಳಿಗಳಾಗಿ ತಂಪಿಂಪು ನೀಡತೊಡಗಿದವು. ಸಜ್ಜನರ ಹೃದಯದಲ್ಲಿ ಸಂತಸವುಕ್ಕಿ ಹರಿಯಿತು. ಸಾಗರಗಳು ತಮ್ಮ ತರಂಗಗಳಿಂದಲೇ ಜಲತರಂಗ ಬಾರಿಸಿದವು. ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಹೋಮ ಕುಂಡದಲ್ಲಿ ಅಗ್ನಿಗಳು ತಾವಾಗಿ ಹೊತ್ತಿ ಶಾಂತವಾಗಿ ಬೆಳಗಿದವು. ಮೋಡಗಳು ಮಂದ್ರ ದನಿಯಿಂದ ಮಧುರವಾಗಿ ಗುಡುಗಿದವು. ಮುಗಿಲಿನಿಂದ ಹೂಮಳೆ ಸುರಿಯಿತು. ದಶದಿಕ್ಕುಗಳೂ ಸುಪ್ರಸನ್ನವಾಗಿದ್ದವು. ಸರಿರಾತ್ರಿಯಲ್ಲಿ ಜನಿಸಿದ ಜಗನ್ನಾಥನನ್ನು ವಸುದೇವ ಅಚ್ಚರಿಯಿಂದ ಕಣ್ಣರಳಿಸಿ ನೋಡಿದ. ತಾವರೆಗಣ್ಣು, ನೈದಿಲೆಯ ಬಣ್ಣ, ನಾಕು ತೋಳು, ಎದೆಯಲ್ಲಿ ಶ್ರೀವತ್ಸದ ಗುರುತು. ಸುಂದರ ಮುಖ. ಆ ದಿವ್ಯ ಮೂರ್ತಿಯನ್ನು ಕಂಡು ವಸುದೇವನಿಗೆ ಒಮ್ಮೆ ಪರಮಾನಂದ, ಮತ್ತೊಮ್ಮೆ ಅತ್ಯಂತ ಹೆದರಿಕೆ. ಕಂಸನ ಕ್ರೌರ್ಯ ಅವನಲ್ಲಿ ನಡುಕ ಹುಟ್ಟಿಸಿತು. ಆದರೂ ಅವನು ಪ್ರಸನ್ನ ವಚನಗಳಿಂದ ಆ ಮಧುರ ಮೂರುತಿಯನ್ನು ಬಣ್ಣಿಸಿ ಭೀತಭೀತನಾಗಿ ನುಡಿದ. ''ಓಹ ! ಏನಿದು ಅದ್ಭುತರೂಪ ! ಶಂಖ ಚಕ್ರ ಗದಾ ಪದ್ಮಗಳಿಂದ ಕಂಗೊಳಿಸುವ ಈ ದಿವ್ಯ ರೂಪವನ್ನು ನೋಡಿದಾಗ ದೇವದೇವೋತ್ತಮನಾದ ಶ್ರೀ ಹರಿಯೇ ಇಲ್ಲಿ ಅವತಾರ ಮಾಡಿರುವ ಎಂದೆನಿಸುವುದು. ಸ್ವಾಮಿ, ನೀನಿಲ್ಲಿ ನನ್ನ ಬಂದಿಖಾನೆಯಲ್ಲಿ ಅವತರಿಸಿರುವಿ ಎಂಬ ಸಮಾಚಾರವನ್ನು ತಿಳಿದ ಮಾತ್ರಕ್ಕೇ ಕಂಸನು ನಿನ್ನನ್ನು ಕೊಂದು ಹಾಕುವನು. ಆದುದರಿಂದ ಭಗವನ್, ದಯವಿಟ್ಟು ನಿನ್ನ ಈ ಶಂಖ ಚಕ್ರೋಪೇತವಾದ ದಿವ್ಯ ವಿಗ್ರಹವನ್ನು ಉಪಸಂಹರಿಸು.'' ಭಗವಂತನ ವಿಶ್ವಮೋಹಕವಾದ ಆ ದಿವ್ಯ ಮೂರ್ತಿಯನ್ನು ಕಂಡು ದೇವಕಿಗೂ ಬಾಯಿ ಬಂದಿತು. ಭಕ್ತಿ ಉಕ್ಕಿತು. ಭಯ ನುಡಿಸಿತು.

**''ಯೋಽ ನಂತರೂಪೋಽಖಿಲ ವಿಶ್ವರೂಪೋ ।**
**ಗರ್ಭೇಽಪಿ ಲೋಕಾನ್ ವಪುಷಾ ಬಿಭರ್ತಿ ॥**
**ಪ್ರಸೀದತಾಮೇಷ ಸ ದೇವದೇವೋ।**
**ಯೋ ಮಾಯಾಯಾಽವಿಷ್ಕೃತ ಬಾಲರೂಪ : ॥**

ವಿಶ್ವವನ್ನೆಲ್ಲ ರೂಪಿಸಿದ ಅನಂತರೂಪಿಯಾದ ಶ್ರೀ ಹರಿಯು ನನ್ನ ಗರ್ಭದಲ್ಲಿಯೂ ಎಲ್ಲರ ಹೃದಯ ಗರ್ಭದಲ್ಲಿಯೂ ಇದ್ದು ಎಲ್ಲರನ್ನೂ ಕಾಪಾಡುತ್ತಾನೆ.

ಅಂಥ ಶ್ರೀ ಹರಿಯು ತನ್ನ ಮಾಯೆಯಿಂದ ಬಾಲರೂಪವನ್ನು ಪಡೆದು ಇಲ್ಲಿ ಪ್ರಕಟನಾಗಿದ್ದಾನೆ. ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲ ತನ್ನ ಗರ್ಭದಲ್ಲಿಯೇ

ಕಾಪಿಟ್ಟು ರಕ್ಷಿಸುವ ಈ ದೇವದೇವನು ನನ್ನ ಗರ್ಭದಲ್ಲಿ ಜನಿಸಿದವನಲ್ಲ. ತನ್ನ ಇಚ್ಛೆಯಿಂದಲೇ ಜಗದೋದ್ಧಾರಕ್ಕಾಗಿ ಈ ಬಾಲರೂಪದಿಂದ ವ್ಯಕ್ತನಾಗಿದ್ದಾನೆ. ಸ್ವಾಮಿನ್, ಇಂಥ ದೇವದೇವೋತ್ತಮನಾದ ನೀನು ನನ್ನ ಮೇಲೆ ಪ್ರಸನ್ನನಾಗಿ ಶಂಖ, ಚಕ್ರ, ಗದಾ, ಪದ್ಮಗಳನ್ನು ತಳೆದ, ನಾಲ್ಕು ತೋಳುಗಳುಳ್ಳ ಈ ನಿನ್ನ ದಿವ್ಯ ರೂಪವನ್ನು ಉಪಸಂಹರಿಸು. ಕಂಸ ರಕ್ಕಸನಿಗೆ ನಿನ್ನ ಅವತಾರದ ಸಮಾಚರವು ಗೊತ್ತಾಗದಂತಿರಲಿ.'' ದೇವಕಿಯ ಈ ವಚನವನ್ನು ಕೇಳಿ ಭಗವಂತನು ಮಾರ್ನುಡಿದ ''ದೇವಿ, ಹಿಂದೆ ನೀನು ಒಂದು ಮಗುವಿನ ಬಯಕೆಯಿಂದ ನನ್ನನ್ನು ಬಿನ್ನವಿಸಿ ತಪಿಸಿದ್ದೆ. ಅದಕ್ಕಾಗಿಯೇ ನಾನು ಈಗ ನಿನ್ನ ಹೊಟ್ಟೆಯಿಂದ ಹುಟ್ಟಿ ಬಂದಿದ್ದೇನೆ. ನಿನ್ನ ಬಯಕೆಯು ಈಡೇರಿದಂತಾಯಿತಲ್ಲವೇ !''

ಇಂತು ನುಡಿದು ಭಗವಂತನು ಮೌನವಾದನು. ವಸುದೇವನು ಮಗುವಾಗಿ ಪವಡಿಸಿದ ಆ ಜಗದೀಶ್ವರನನ್ನು ಎತ್ತಿಕೊಂಡು ಆ ಸರಿರಾತ್ರಿಯಲ್ಲಿಯೇ ಹೊರನಡೆದನು. ಬಂದೀಖಾನೆಯ ಕಾವಲುಗಾರರೆಲ್ಲರೂ ಯೋಗನಿದ್ರೆಯ ಮಾಯೆಯಿಂದ ಮೋಹಿತರಾಗಿ ಗಾಢನಿದ್ದೆಯಲ್ಲಿ ಮೂಢರಾಗಿ ಮಲಗಿದ್ದರು. ವಸುದೇವನು ಸುರಕ್ಷಿತವಾಗಿ ಹೊರಬಿದ್ದು ಮಥುರಾ ಪಟ್ಟಣದ ಅಗಸೆಯ ಬಾಗಿಲ ಬಳಿಗೆ ಬಂದನು. ಅಲ್ಲಿಯ ದ್ವಾರಪಾಲಕರೆಲ್ಲರೂ ಕುಳಿತಲ್ಲಿಯೇ ಗೊರಕೆ ಹೊಡೆಯುತ್ತಿದ್ದರು. ವಸುದೇವ ಮುನ್ನಡೆದ. ಮಧ್ಯರಾತ್ರಿಯ ಸಮಯ. ಕೃಷ್ಣ ಪಕ್ಷ. ಕಗ್ಗತ್ತಲೆಯಲ್ಲಿ ದಪ್ಪಾಗಿ ಹೆಪ್ಪುಗಟ್ಟಿ ನಿಂತಿರುವ ಗಾಢಾಂಧಕಾರ. ಮೇಲೆ ಒನಕೆಯಾಕಾರದಿಂದ ಘೋರಾಕಾರವಾಗಿ ಮಳೆ ಧಾರಾಕಾರವಾಗಿ ಸುರಿಯುತ್ತಲಿದೆ. ಮೋಡಗಳ ಗುಡುಗು. ಕಂಗೆಡಿಸುವ ಮಿಂಚು. ಇಂಥ ಕಾಳ ರಾತ್ರಿಯಲ್ಲಿ ಹರಿಯನ್ನು ಶಿರದಲ್ಲಿ ಹೊತ್ತು ವಸುದೇವ ಗೋಕುಲದೆಡೆಗೆ ಹೆಜ್ಜೆ ಹಾಕಿದ.

ಆಗ ಒಮ್ಮೆಲೇ ದಾರಿಗುಂಟ ವಿಲಕ್ಷಣವಾದ ಬೆಳಕು ತೂರಿ ಬಂತು ಸಂತತ ಧಾರೆಯಾಗಿ ಮಳೆ ಸುರಿಯುತ್ತಿದ್ದರೂ ಅವನ ನೆತ್ತಿಯ ಮೇಲೆ ಹೊತ್ತ ಮಗುವಿಗೆ ಮೇಲಾಗಲೀ, ವನ ಮೈ ಮೇಲಾಗಲೀ ಒಂದು ಹನಿ ಮಳೆ ಬೀಳಲಿಲ್ಲ. ಬಟ್ಟೆ ಕೂಡ ತೊಯ್ಯಲಿಲ್ಲ. ಇದರ ಗುಟ್ಟು ಪಾಪ ವಸುದೇವನಿಗೇನು ಗೊತ್ತು! ಈ ಕೃಷ್ಣ ಪಕ್ಷದ ಕಾಳರಾತ್ರಿಯಲ್ಲಿ ತಂದೆಯ ತಲೆಯ ಮೇಲಿನ ಬಾಲಕೃಷ್ಣನ ಈ ಏಕಾಂತ ಮೆರವಣಿಗೆಯನ್ನು ಆದಿಶೇಷನು ಹೇಗೋ ತಿಳಿದು ಅಲ್ಲಿಗೆ ಧಾವಿಸಿದನು. ವಸುದೇವನ ಕಣ್ಣಿಗೆ ಕಾಣದಂತೆ ಅವನ ಹಿಂದೆ ಹಿಂದೆ ಬರುತ್ತ ತನ್ನ ಹೆಡೆ ಬಿಡಿಸಿ ಕೊಡೆಯಂತೆ ಹರಿಯ ಮೇಲೆ ಹಿಡಿದನು. ಅವನ ಹೆಡೆಯಲ್ಲಿಯ ಉಜ್ವಲ ರತ್ನಗಳು ವಸುದೇವನ ಮುಂಭಾಗದಲ್ಲಿ ಬೆಳಕು ಬೀರಿ ಸರಿಯಾದ ದಾರಿ ತೋರಿದವು. ಮಳೆ ಹನಿಗಳೂ ಅವರ ಮೇಲೆ ಬೀಳಲಿಲ್ಲ.

ವಸುದೇವನಿಗೂ ಇತ್ತ ಗಮನವೇ ಇಲ್ಲ. ಹೇಗಾದರೂ ಮಾಡಿ ಮಗುವನ್ನು ಮಥುರೆಯ ಸೀಮೆಯನ್ನು ದಾಟಿಸಬೇಕು ಎನ್ನುವುದೊಂದೇ ಅವನ ಗುರಿಯಾಗಿದ್ದಿತು. ಅವನು ಒತ್ತರದಿಂದ ಧಾಪುಗಾಲಿಡುತ್ತ ಮುನ್ನಡೆದ. ಅವನಿಗೆ ಮುಂದೆ ಯಮುನಾ ನದಿ

ಬಂದಿತು. ಶ್ರಾವಣಮಾಸವಾದುದರಿಂದ ನದಿಯು ತುಂಬಿ ಹರಿಯುತ್ತಲಿತ್ತು. ಭಯಂಕರ ಸೆಳವು. ಅದರಲ್ಲಿ ಅನೇಕ ಸುಳಿವುಗಳು. ಈ ಘೋರ ನದಿಯನ್ನು ದಾಟುವುದು ಹೇಗೆಂದು ಚಿಂತಿಸುತ್ತಿರುವಾಗಲೇ ಇವನ ಮುಂದಿನ ಯಮುನೆಯ ಪಾತ್ರವು ಮೊಣಕಾಲಿನವರೆಗೆ ಮಾತ್ರ ನೀರುಳ್ಳದ್ದಾಯಿತು. ಪಾದ ಪ್ರಕ್ಷಾಲನವನ್ನು ಮಾಡುವಂತಿರುವ ಆ ತಿಳಿನೀರಿನ ಅಲ್ಪ, ಅತ್ಯಲ್ಪ ಪ್ರವಾಹದಲ್ಲಿ ಅನಾಯಾಸವಾಗಿ ನಡೆದು ವಸುದೇವನು ಆಚೆಯ ದಡವನ್ನು ಸೇರಿದ. ಯಮುನೆಯ ಆಚೆಯ ದಡದಲ್ಲಿ ಅನೇಕ ಗುಡಿಸಲುಗಳು ಕಂಡವು. ನಂದನೇ ಮೊದಲಾದ ಹಿರಿಯ ತುರುಗಾಹಿಗಳೆಲ್ಲ ಕಂಸನಿಗೆ ಕರಕೊಡಲಿಕ್ಕಾಗಿ ಮಥುರಾ ಪಟ್ಟಣಕ್ಕೆ ಹೋಗಬೇಕೆಂದು ಗೋಕುಲದಿಂದ ಹೊರಟು ಯಮುನೆಯ ಆ ದಡದಲ್ಲಿ ಬೀಡು ಬಿಟ್ಟಿದ್ದರು. ಅದೇ ಕಾಲದಲ್ಲಿ ಅದೇ ದಿನದ ಅಂದಿನ ರಾತ್ರಿಯಲ್ಲಿಯೇ ಯಶೋದೆಯ ಆ ಯಮುನಾ ತೀರದ ಗುಡಿಸಲಲ್ಲಿಯೇ ಹೆಣ್ಣು ಮಗುವನ್ನು ಹಡೆದಿದ್ದಳು. ಯೋಗನಿದ್ರೆಯ ಮಾಯೆಯಿಂದ ಸುಖಪ್ರಸವವಾದ ನಂತರ ಅವಳಿಗೂ ಅವಳ ಎಲ್ಲ ಪರಿವಾರದವರಿಗೂ ಗಾಢನಿದ್ರೆಯು ಆವರಿಸಿತು. ಅವರೆಲ್ಲರೂ ನಿದ್ದೆಯ ಸೆರಗಿನಲ್ಲಿ ಇದ್ದಾಗಲೇ ವಸುದೇವನು ಅಲ್ಲಿಗೆ ಬಂದನು. ವಸುದೇವನು ಇನಿತೂ ಸದ್ದು ಮಾಡದೆ ಯಶೋದೆಯು ಹಡೆದು ಮಲಗಿದ ಸ್ಥಳಕ್ಕೆ ಬಂದು ಅವಳ ಪಕ್ಕದಲ್ಲಿ ತಾನು ತಲೆಯ ಮೇಲೆ ಹೊತ್ತು ತಂದಂಥ ತನ್ನ ಚಿನ್ನನನ್ನು ಮಲಗಿಸಿದನು. ಮತ್ತು ಅವಳ ಮಡಿಲಲ್ಲಿಯ ಹೆಣ್ಣು ಮಗುವನ್ನು ತಾನು ಎತ್ತಿಕೊಂಡು ಅಲ್ಲಿಂದ ಭರದಿಂದ ನಡೆದು ಬಿಟ್ಟನು. ಯಶೋದೆಯು ಎಚ್ಚರಾದ ಬಳಿಕ ಕೂಸಿನ ಕಡೆಗೆ ನೋಡಿದಳು. ಆಗ ಅವಳಿಗೆ ಅಚ್ಚರಿಯಿಂದ ಹುಚ್ಚು ಹಿಡಿಯುವಂತಾಯಿತು. ತಾನು ಹಡೆದ ಹೆಣ್ಣು ಮಗು ಗಂಡಾಗಿ ಮುತ್ತಿನ ಚಂಡಾಗಿ ಮಡಿಲಲ್ಲಿ ಪವಡಿಸಿತ್ತು. ಕನ್ನೈದಿಲೆಯ ಕಾಂತಿ ಅಂಗಾಂಗಗಳಲ್ಲಿ ಸೂಸುತ್ತಲಿತ್ತು. ಇದನ್ನು ಕಂಡು ಅವಳ ಆನಂದಕ್ಕೆ ಪಾರವಿಲ್ಲದಂತಾಯಿತು. ಇತ್ತ ವಸುದೇವನು ಯಶೋದೆಯ ಆ ಕನ್ನೆಯನ್ನು ಕರೆದುಕೊಂಡು ಬಂದೀಮನೆಯ ತನ್ನ ಕೋಣೆಗೆ ಬಂದನು. ದೇವಕಿಯ ಪಕ್ಕದಲ್ಲಿ ಯಶೋದೆಯ ಕಂದಮ್ಮನನ್ನು ತಂದು ಮಲಗಿಸಿದನು. ತಾನು ಯಥಾ ಪ್ರಕಾರ ಅಲ್ಲಿಯೇ ಮೊದಲಿನಂತೆ ನಿಂತುಕೊಂಡನು. ಆ ಕೂಸು ಅಳತೊಡಗಲು ಕಾವಲುಗಾರರೆಲ್ಲರೂ ಗಡಬಡಿಸಿ ಎದ್ದರು. ಕಂಸನಿಗೆ ದೇವಕಿಯು ಹೆಣ್ಣು ಹಡೆದ ಸಮಾಚರವನ್ನು ತಿಳಿಸಿದರು.

ಕೂಡಲೇ ಕಂಸನು ಲಗುಬಗೆಯಿಂದ ಕಾರಕೃಹಕ್ಕೆ ಬಂದನು. ದೇವಕಿಯ ಹಡೆಯವ ಕೋಣೆಯಲ್ಲಿ ಹೊಕ್ಕನು. ಆ ಎಳೆ ಕೂಸನ್ನು ಕ್ರೌರ್ಯದಿಂದ ಕೈಯಲ್ಲಿ ತೆಗೆದುಕೊಂಡನು. ಆಗ ದೇವಕಿಯು ದೈನ್ಯದಿಂದ ಪಂಚಪ್ರಾಣಗಳನ್ನೂ ಕೊರಳ ತುದಿಗೆ ತಂದು, 'ಅಣ್ಣಾ, ಬೇಡ. ಈ ನನ್ನ ಕರುಳಿನ ಕಂದಮ್ಮನನ್ನು ಕೊಲ್ಲಬೇಡ'' ಎಂದು ಅಂಗಲಾಚಿ ಅಲ್ಪರಿದಳು. ಕ್ರೂರನಾದ ಆ ರಕ್ಕಸನು ಅವಳ ಆ ಕರುಣೆಯ ಕೂಗಾಟಕ್ಕೆ ಕಿವಿಗೊಡದೇ ಆ ಕೂಸನ್ನು ದೊಡ್ಡ ಹೆಬ್ಬಂಡೆಯ ತುದಿಗೆ ಅಪ್ಪಳಿಸಿದನು. ಕೂಡಲೇ ಆ ಎಳೆ ಕೂಸು ಅವನ ಕೈಯಿಂದ ಜಾರಿ, ಮುಗಿಲಿಗೆ ಏರಿ, ಮಹಾರೂಪವನ್ನು ಧರಿಸಿ ನಿಂತುಕೊಂಡಿತು. ಎಂಟು ತೋಳು, ಪ್ರತಿಯೊಂದು ನೀಳ್ದೋಳಿನ ಕೈಯಲ್ಲಿಯೂ

ಹೊಳೆ - ಹೊಳೆಯುವ ಆಯುಧಗಳು. ಉಗ್ರವಾದ ದೇವೀರೂಪವು ಕೋಪಾಟೋಪದಿಂದ ಕೆರಳಿ ಕಂಸನನ್ನು ಕುರಿತು ಇಂತು ನುಡಿಯಿತು - "ಮೂರ್ಖಾ, ನನ್ನನ್ನು ಈ ಕಗ್ಗಲ್ಲಿನ ಮಗ್ಗಲಿಗೆ ಅಪ್ಪಳಿಸಿದರೆ ಏನು ಬಂತು? ಕಂಸಾ, ನಿನ್ನನ್ನು ಕೊಲ್ಲುವವನು ಈ ಮೊದಲೇ ಹುಟ್ಟಿದ್ದಾನೆ. ಅವನು ದೇವತೆಗಳ ದೊಡ್ಡ ಸೊತ್ತು. ನಿನಗೆ ದೊಡ್ಡ ಕುತ್ತು. ಹಿಂದಿನ ಜನ್ಮದಲ್ಲಿ ನೀನು ಅವನಿಂದಲೇ ಮಣ್ಣು ಮುಕ್ಕಿದ್ದಿ. ಇದನ್ನೆಲ್ಲ ತಿಳಿದಾದರೂ ಒಳ್ಳೇ ರೀತಿಯಿಂದ ನಡೆ. ನಿನಗೆ ಹಿತವಾಗುವ ಹಾದಿಯನ್ನು ಹಿಡಿ."

ಅಷ್ಟಭುಜಳಾದ ಉಗ್ರಕಾಲಿಯ ರೂಪ ಧರಿಸಿದ ಆ ದೇವಿಯ ಅಟ್ಟಹಾಸವು ದಶದಿಕ್ಕುಗಳಲ್ಲಿಯೂ ಪ್ರತಿಧ್ವನಿತವಾಯಿತು. ಅವಳ ಕೊರಳಲ್ಲಿ ದೇವಲೋಕದ ಹೂಮಾಲೆಗಳು ಹೊಳೆಯುತ್ತಲಿದ್ದವು. ಮೈತುಂಬ ಬಳಿದ ಚೆಂದನದ ಗಂಧವು ಕಂಪನ್ನು ಬೀರುತ್ತಿತ್ತು. ಅವಳು ಧರಿಸಿದ ಆಭರಣಗಳ ಕಾಂತಿಯು ಕಣ್ಣು ಕುಕ್ಕುತ್ತಿತ್ತು. ಸಿದ್ಧರು ಅವಳನ್ನು ಬಾಯಿಂದ ಬಣ್ಣಿಸುತ್ತ ಮುಗಿಲಿನಲ್ಲಿ ನಿಂತುಕೊಂಡಿದ್ದರು. ಕಂಸನು ನೋಡುತ್ತಿರುವಂತೆಯೇ ಅವಳು ಮುಗಿಲು ಮಾರ್ಗದಲ್ಲಿ ಮೇಲೆ ನಡೆದಳು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂರನೇ ಅಧ್ಯಾಯ ಸಂಪೂರ್ಣ*



# ಬಂದಿಮನೆಯಿಂದ ವಸುದೇವ ದೇವಕಿಯರ ಬಿಡುಗಡೆ

ಅಧ್ಯಾಯ - ೪

ಯೋಗಮಾಯೆಯ ಎಚ್ಚರಿಕೆಯ ನುಡಿಗಳನ್ನು ಕೇಳಿ ಕಂಸ ಒಳಗೊಳಗೇ ಹೆದರಿದ. ಅಂತರಂಗದಲ್ಲಿ ಬೆದರಿದ. ಕೇಶಿ ಪ್ರಲಂಬ ಮುಂತಾದ ಬಲಿಷ್ಠರಾದ ದೈತ್ಯರನ್ನು ಕರೆಕಳಿಸಿದ. ಅಂತರಂಗದಲ್ಲಿ ಗಾಬರಿಯಾಗಿದ್ದರೂ ಮೇಲೆ ಅಬ್ಬರದಿಂದಲೇ ನುಡಿದ ಆ ಕಪಟಿ ಕಂಸ.

"ಎಲೈ ಪ್ರಲಂಬ, ಧೇನುಕ, ಕೇಶಿ ಹಾಗೂ ಸೋದರಿಯಾದ ಪೂತನಿಯೇ ! ಮತ್ತು ಅರಿಷ್ಟ ಮೊದಲಾದ ವೀರ ದಾನವರೇ ! ನನ್ನ ಮಾತನ್ನು ಆಲಿಸಿರಿ. ದುರುಳರಾದ ದೇವತೆಗಳು ನನ್ನನ್ನು ಘಾತಿಸಲಿಕ್ಕಾಗಿ ಮಹಾ ಪ್ರಯತ್ನವನ್ನು ಕೈಕೊಂಡಿದ್ದಾರೆ. ನನ್ನ ಬಲ ಬೀರಗಳಿಂದ ಹುರಪಳಿಸಿ ಹೋದ ಆ ದೇವತೆಗಳೆಂದರೆ ನನಗೇನು ಗಣನೆ ಇಲ್ಲ. ಬಲಹೀನನಾದ ಇಂದ್ರನಾಗಲೀ, ಒಂಟಿಯಾಗಿ ತಿರುಗುವ ಆ ಶಂಕರನಾಗಲೀ, ಸಂಧಿ ಸಿಕ್ಕಾಗ ದೈತರನ್ನು ಕೊಂದು ಹಾಕುವ ಆ ವಿಷ್ಣುವಾಗಲೀ ನನಗೇನು ಮಾಡಬಲ್ಲರು ! ಈ ಆದಿತ್ಯರದಂತೂ ನನಗೆ ಕಿಮ್ಮತ್ತಿಲ್ಲ. ಅಷ್ಟ ವಸುಗಳ ಲಕ್ಷ್ಯವಿಲ್ಲ. ವೀರ್ಯವೆಲ್ಲ ತಣ್ಣಗಾದ ಈ ಅಗ್ನಿಗಳಿಂದ ನನಗೇನಾಗಬೇಕಾಗಿದೆ ? ನನ್ನ ನೀಳ್ತೋಳುಗಳಿಂದ ಸೋತು ನಿರ್ವಿಣ್ಣರಾದ ಉಳಿದೆಲ್ಲ ಈ ದೇವತೆಗಳಿಂದ ನನಗೇನು ಅಂಜಿಕೆ ?

ನನ್ನ ಜೊತೆಗೆ ಹೋರಾಟಕ್ಕೆ ಬಂದ ಆ ಸುರರಾಜನ ದುರ್ದಶೆಯನ್ನು ನೀವೇ ಕಣ್ಣಾರೆ ಕಾಣಲಿಲ್ಲವೇ ? ನನ್ನ ಶಸ್ತ್ರಾಘಾತವನ್ನು ಎದೆಯೊಡ್ಡಿ ಎದುರಿಸಲಿಕ್ಕಾಗದೇ ಬೆನ್ನ ಮೇಲೆ ನನ್ನ ಎಲ್ಲ ಬಾಣ ಪ್ರಹಾರಗಳನ್ನು ವಹಿಸಿ, ಸಹಿಸಿ, ಸೋತುಹೋದ ಆ ಇಂದ್ರನ ಅಪಜಯವು ನಿಮಗೆ ಕಂಡದ್ದೇ ಇದೆ. ಈ ಸಿಟ್ಟಿನಿಂದ ನನ್ನ ರಾಷ್ಟ್ರದಲ್ಲಿ ದೇವೇಂದ್ರನು ಮಳೆಯನ್ನೇ ತಡೆದು ಹಿಡಿದಾಗ ಮೋಡ ಪಡೆಯ ಮೇಲೆಯೇ ನಾನು ಗುರಿಯಿಟ್ಟೆ; ಬಾಣ ಬಿಟ್ಟೆ. ಆಗ ಮೇಘಮಂಡಲವೆಲ್ಲವೂ ಕೂಡಲೇ ಯಥೇಚ್ಛವಾಗಿ ಮಳೆಯನ್ನು ಸುರಿಸಿದ್ದು ನಿಮಗೆ ಗೊತ್ತಿಲ್ಲವೇ ! ನನ್ನ ಬಾಹು ಬಲಕ್ಕೆ ಹೆದರಿ ಭೂಮಂಡಲದಲ್ಲಿರುವ ಎಲ್ಲ ರಾಜಮಹಾರಾಜರೂ ನನ್ನ ಎದುರು ಹಣೆ ಮಣೆದಿದ್ದಾರೆ; ತಲೆ ತಗ್ಗಿಸಿದ್ದಾರೆ. ಇಂದು ಜರಾಸಂಧನ ಹೊರತು ಎಲ್ಲ ರಾಜರೂ ನನಗೆ ಪಾದಾಕ್ರಾಂತರು. ದೈತ್ಯ ಬಂಧುಗಳೇ, ನನಗೆ ಇಂದು ನಿಜವಾಗಿಯೂ ದೇವತೆಗಳ ಬಗ್ಗೆ ಅತ್ಯಂತ ತಿರಸ್ಕಾರವೇ ಮೂಡಿದೆ. ಅವರು ಈಗ ನನ್ನನ್ನು ಕೊಲ್ಲಲು ಮಹಾ ಪ್ರಯತ್ನವನ್ನು ನಡೆಸಿರುವದನ್ನು ಕಂಡು ನನಗೆ ಹುಚ್ಚು ನಗೆ ಬರುತ್ತದೆ. ಆದರೆ ಮಿತ್ರರೇ, ಈ ದೇವತೆಗಳು ಜಾತ್ಯಾ ದುಷ್ಟರು; ಕಪಟಿಗಳು. ಅವರಿಗೆ ಅಪಕಾರವನ್ನು ಮಾಡಲಿಕ್ಕಾಗಿ ಅವರಿಗಿಂತ ಹೆಚ್ಚು ಪ್ರಯತ್ನಿಸುವದು. ಅತ್ಯಾವಶ್ಯಕವಾಗಿದೆ. ಈ ದೇವತೆಗಳಿಗೆ ಅಪಕಾರ ಮಾಡುವ ಒಂದು ಕ್ರಮವಿದೆ. ದೇವತೆಗಳಿಗೆ ಯಜ್ಞಗಳ ಆಹುತಿಯೇ ಮುಖ್ಯ ಆಹಾರ. ಅದನ್ನು ನಿಲ್ಲಿಸಿದರೆ ಅವರ ಪ್ರಾಣ ನಾಡಿಯ ಮಿಡಿತವನ್ನೇ ನಿಲ್ಲಿಸಿದಂತಾಗುವುದು. ಆದುದರಿಂದ ಈಗ ಭೂಮಂಡಲದಲ್ಲಿ ಇರುವ ಎಲ್ಲ ಯಜ್ಞ ಮಾಡುವವರನ್ನು ಹಿಡಿದು ತನ್ನಿರಿ. ಇಲ್ಲವೇ

ಕಡಿದು ಬನ್ನಿರಿ. ದೇವತೆಗಳಿಗೆ ಅಪಕಾರಗೈಯಬೇಕಾದರೆ ಮೊದಲು ಈ ಯಾಜ್ಞಿಕರನ್ನು ಕೊಂದು ಹಾಕಬೇಕು. ದೇವಕಿಯ ಹೊಟ್ಟೆಯಿಂದ ಹುಟ್ಟಿದ ಆ ಹಸುಳೆಯು ನನ್ನ ಮೃತ್ಯುವು ಈ ಮರ್ತ್ಯಲೋಕದಲ್ಲಿ ಮೊದಲೇ ಹುಟ್ಟಿದೆ ಎಂದು ಕಣಿ ಹೇಳಿದೆ. ಆದುದರಿಂದ ನೀವೆಲ್ಲರೂ ಮಹಾಪ್ರಯತ್ನ ಮಾಡಿ ಮಕ್ಕಳನ್ನೆಲ್ಲ ಊರೂರಿಗೆ ಹೋಗಿ ಕೊಂದು ಹಾಕಬೇಕು. ಅದರಲ್ಲಿಯೂ ಯಾವ ಬಾಲಕನಲ್ಲಿ ಮಹಾಬಲವು ಕಂಡು ಬರುವುದೋ ಅಂಥ ಬಾಲಕರನ್ನು ಅತ್ಯಂತ ಪ್ರಯತ್ನ ಪೂರ್ವಕವಾಗಿ ಕೊಂದು ಬನ್ನಿರಿ.'' ಹೀಗೆ ದೈತ್ಯರಿಗೆ ಅಪ್ಪಣೆಯನ್ನಿತ್ತ ಕಂಸನು ತನ್ನ ಮನೆಯಲ್ಲಿ ಪ್ರವೇಶಿಸಿದನು. ಮತ್ತು ವಸುದೇವ - ದೇವಕಿಯರನ್ನು ಕಾರಾಗೃಹದಿಂದ ಬಿಡುಗಡೆ ಮಾಡಿದನು. ಬಳಿಕ ಕಾರಾಗೃಹದಿಂದ ಹೊರಗೆ ಬಂದ ದೇವಕೀ - ವಸುದೇವರಿಗೆ ಪಶ್ಚಾತ್ತಾಪ ಬೆರತ ದನಿಯಲ್ಲಿ ಕೇಳಿಕೊಂಡನು.

''ನಾನು ವ್ಯರ್ಥವಾಗಿ ನಿಮ್ಮ ಮಕ್ಕಳನ್ನೆಲ್ಲ ಕೊಂದಂತಾಯಿತು. ನನ್ನನ್ನು ನಾಶಮಾಡಲಿಕ್ಕಾಗಿ ಬೇರಾವನೋ ಒಬ್ಬ ಬಾಲಕನು ಹುಟ್ಟಿದ್ದಾನಂತೆ ಆದುದರಿಂದ ಮನಸ್ಸಿಗೆ ದುಃಖವನ್ನು ಮಾಡಿಕೊಳ್ಳಬೇಡಿ. ಇದೆಲ್ಲವೂ ಪ್ರಾರಬ್ಧ. ಆಗಬೇಕಾದದ್ದು ಆಗಿಯೇ ತೀರುವದು.'' ಹೀಗೆ ದೇವಕಿ - ವಸುದೇವರನ್ನು ಸಂತೈಸಿ ಬಂಧನದಿಂದ ಬಿಡುಗಡೆ ಮಾಡಿ ಕಂಸನು ತನ್ನ ಮನೆಯೊಳಗೆ ನಡೆದನು. ಆದರೆ ಹೆದರಿಕೆ ಅಲ್ಲಿಯೂ ಅವನನ್ನು ಹಿಂಬಾಲಿಸಿತು.

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಪಂಚಮಾಂಶದ ನಾಲ್ಕನೇ ಅಧ್ಯಾಯ ಸಂಪೂರ್ಣ*

—o—

## ಪೂತನಿಯ ವಧೆ

ಅಧ್ಯಾಯ - ೫

ಕಂಸನ ಕಾರಾಗೃಹದ ಬಂಧನದಿಂದ ಬಿಡುಗಡೆ ಹೊಂದಿದ ವಸುದೇವನು ಯಮುನಾನದಿಯ ಆಚೆಗೆ ನಂದಗೋಪನು ಬೀಡುಬಿಟ್ಟ ಸ್ಥಳಕ್ಕೆ ತೆರಳಿದನು. ಅಲ್ಲಿ ಒಂದು ದೊಡ್ಡ ಬಂಡಿಯ ಬುಡದಲ್ಲಿ ನಂದನಾರಿಯ ಬಾಣಂತಿತನವು ನಡೆದಿತ್ತು. ಗಂಡು ಮಗು ಹುಟ್ಟಿದ್ದಾನೆಂದು ನಂದಗೋಪನು ಬ್ರಹ್ಮಾನಂದದಲ್ಲಿ ತೇಲಾಡುತ್ತಿರುವುದನ್ನು ಅವನು ಕಂಡ. ಮತ್ತು ಅವನನ್ನು ಅಭಿನಂದಿಸುತ್ತ, ''ನಂದ, ನೀನು ಒಳ್ಳೆ ದೈವಶಾಲಿ. ಮಹಾಭಾಗ್ಯವಂತ. ಇಂಥ ಮುಪ್ಪಿನ ಕಾಲದಲ್ಲಿಯೂ ಚಿನ್ನದಂಥ ಗಂಡು ಮಗನು ನಿನಗೆ ಜನಿಸಿದ್ದಾನೆ. ದೈವವು ನಿನ್ನ ಬೆಂಬಲಕ್ಕಿದೆ. ನೀವು ಇಲ್ಲಿಗೆ ಬಂದ ಕಾರ್ಯವು ಕೊನೆಗೊಂಡಂತಾಗಿದೆ. ಕಂಸನಿಗೆ ಕೊಡಬೇಕಾದ ಕಪ್ಪ ಕಾಣಿಕೆಗಳನ್ನು ನೀವು ಅವನಿಗೆ ಒಪ್ಪಿಸಿ ಬಂದಿದ್ದೀರಿ. ಮತ್ತೇಕೆ ನೀವು ಇನ್ನು ಮೇಲೆ ಇಲ್ಲಿ ನಿಲ್ಲುವುದು? ನಂದ, ನೀವು ಇನ್ನು ಮೇಲೆ ಇಲ್ಲಿ ಸರ್ವಥಾ ನಿಲ್ಲಕೂಡದು. ಇಲ್ಲಿಂದ ಕೂಡಲೇ ನೀವು ನಿಮ್ಮ ಗೋಕುಲಕ್ಕೆ ಹೋಗಿರಿ. ಗೋಕುಲದಲ್ಲಿ ನನ್ನ ಮಡದಿಯಾದ ರೋಹಿಣಿಯಿಂದ ಹುಟ್ಟಿದ ನನ್ನ ಮಗನು ಇರುತ್ತಾನೆ. ಈ ನಿನ್ನ ಮಗನಂತೆಯೇ ನೀನು ಆ ನನ್ನ ರೋಹಿಣಿಯ ಪುತ್ರನನ್ನು ಪುತ್ರ ವಾತ್ಸಲ್ಯದಿಂದ ಸಾಕಿ ಸಲುಹಬೇಕು. ಜೋಕೆಯಿಂದ ಬೆಳೆಸಬೇಕು. ಆದುದರಿಂದ ಬೇಗನೇ ಈ ಹೊಳೆದಂಡೆಯ ಬಿಡಾರವನ್ನು ಬಿಡು. ಗೋಕುಲಕ್ಕೆ ನಡೆ.''

ವಸುದೇವ ಈ ಹಿತನುಡಿಗಳನ್ನು ಮನ್ನಿಸಿ ನಂದಗೋಪ ಮೊದಲಾದ ಗೊಲ್ಲರೆಲ್ಲರೂ ಗೋಕುಲಕ್ಕೆ ಹೊರಟರು. ಕಂಸನಿಗೆ ತುಪ್ಪ-ಬೆಣ್ಣೆ, ಹಾಲು-ಮೊಸರುಗಳನ್ನು ಕೊಟ್ಟು ಖಾಲಿಯಾದ ಪಾತ್ರೆಗಳನ್ನೆಲ್ಲ ಚಕ್ಕಡಿಯಲ್ಲಿ ತುಂಬಿಕೊಂಡು ತಮ್ಮ ವಾಸಸ್ಥಳವಾದ ನಂದಗೋಕುಲಕ್ಕೆ ಬಂದು ನೆಲಸಿದರು. ಗೋಪ-ಗೋಪಿಯರೆಲ್ಲರೂ ಗೋಕುಲದಲ್ಲಿ ಸುಖದಿಂದ ವಾಸ ಮಾಡುತ್ತಲಿರುವಾಗ ಮಗುಗಳ ಮಾರಿಯಾದ ಪೂತನಿಯು ಅಲ್ಲಿಗೆ ಬಂದಳು. ನಡುರಾತ್ರಿಯಲ್ಲಿ ಅವಳು ಬಂದಾಗ ನಂದಗೋಕುಲವೆಲ್ಲವೂ ನಿಶ್ಶಬ್ದವಾಗಿ ನಿದ್ರಾದೇವಿಯ ಸೆರಗಿನಲ್ಲಿ ಒರಗಿತ್ತು. ಆಗ ಆ ಹೆಮ್ಮಾರಿಯು ಮೆಲ್ಲನೆ ಕೃಷ್ಣನು ಮಲಗಿದ್ದಲ್ಲಿಗೆ ಬಂದು ಅವನನ್ನು ಎತ್ತಿಕೊಂಡು ಅವನಿಗೆ ತನ್ನ ಮೊಲೆಯೂಡಿಸಿದಳು. ಕಾಳಿರುಳಿನಲ್ಲಿ ಆ ಕ್ರೂರ ರಕ್ಕಸಿಯು ಯಾವ ಮಗುವಿನ ಬಾಯಲ್ಲಿ ತನ್ನ ಮೊಲೆಯಿಡುತ್ತಿದ್ದಳೋ ಆ ಕೂಸು ತಕ್ಷಣವೇ ಸತ್ತು ಹೋಗುತ್ತಿತ್ತು. ಈ ಅನುಭವದ ಗರ್ವದಿಂದ ಆ ದುರುಳ ದಾನವಿಯು ಕೃಷ್ಣನನ್ನು ಕೊಲ್ಲಬೇಕೆಂದು ಅವನ ಬಾಯಿಯಲ್ಲಿ ತನ್ನ ಸ್ತನವನ್ನು ಇಟ್ಟಳು. ಆಗ ಕೃಷ್ಣನು ಕೋಪದಿಂದ ಕೆರಳಿ ತನ್ನ ಎರಡೂ ಕೈಗಳಿಂದ ಅವಳ ಮೊಲೆಯನ್ನು ಹಿಂಡಿ ಹಿಚುಕಿ ಪ್ರಾಣವನ್ನೇ ಹೀರಿದನು. ಅವಳ ಜೀವ ರಸವನ್ನೇ ಕುಡಿದುಬಿಟ್ಟನು. ಕೃಷ್ಣನ ಸ್ತನಪಾನದ ಕಚ್ಚಾಟ ಕೊಸರಾಟದಿಂದ ಅವಳ ದೇಹದಲ್ಲಿಯ ನರನಾಡಿಗಳೆಲ್ಲವೂ ಹರಿದು ಕಿತ್ತಿ ಬಂದವು. ಕೆಟ್ಟ ದನಿಯಿಂದ ಚೀರಿ ಆ ದುಷ್ಟ ರಕ್ಕಸಿಯು ಭೀಕರವಾದ ನಿಜರೂಪವನ್ನು ಧರಿಸಿ ಸತ್ತು ನೆಲಕ್ಕುರುಳಿದಳು.

ಸಾಯುವ ಸಂಕಟಕ್ಕೆ ಕರ್ಕಶವಾಗಿ ಕೂಗುತ್ತಲಿರುವ ಆ ಕ್ರೂರ ರಕ್ಕಸಿಯ ಘೋರ ಧ್ವನಿಯನ್ನು ಕೇಳಿ ಆ ವ್ರಜವಾಸಿಗಳೆಲ್ಲರೂ ಎಚ್ಚರಾದರು. ಇದೆಲ್ಲಿಯ ಭೀಷಣ ಧ್ವನಿ ಎಂದು ನೋಡುವಷ್ಟರಲ್ಲಿ ಪೂತನಿಯ ವಿಕರಾಳ ಶರೀರವು ಅವರ ಕಣ್ಣಿಗೆ ಬಿದ್ದಿತು. ಅವಳ ತೊಡೆಯ ಮೇಲೆ ಕೃಷ್ಣನು ಆಡುತ್ತಲಿದ್ದ. ಓಡಿಹೋಗಿ ಅವನನ್ನು ಅಲ್ಲಿಂದ ಎತ್ತಿಕೊಂಡು ತಂದು ದೃಷ್ಟಿ ತೆಗೆದರು. ಹಸುವಿನ ಬಾಲವನ್ನು ಆ ಶಿಶುವಿನ ಮುಖದ ಮೇಲಾಡಿಸಿದರು. ನಂದಗೋಪನಾದರೂ ಗೋಮಯವನ್ನು ತೆಗೆದುಕೊಂಡು ಬಂದು ಕೃಷ್ಣನ ತಲೆಗೆ ತಿಕ್ಕಿ ಈ ಕೆಳಗಿನ ಮಂತ್ರವನ್ನು ಹೇಳಿ ಅವನಿಗೆ ರಕ್ಷೆಯನ್ನು ಕೋರಿದನು.

## ನಂದಗೋಪ ಉವಾಚ

ರಕ್ಷತು ತ್ವಾಮಶೇಷಾಣಾಂ ಭೂತಾನಾಂ ಪ್ರಭವೋ ಹರಿಃ ।
ಯಸ್ಯ ನಾಭಿ ಸಮುದ್ಭೂತ ಪಂಕಜಾದಭವಜ್ಜಗತ್ ॥

ಯೇನ ದಂಷ್ಟ್ರಾಗ್ರವಿಧೃತಾ ಧಾರಯತ್ಯವನಿರ್ಜಗತ್ ।
ವರಾಹರೂಪಧೃಗ್ ದೇವಸ್ಸ ತ್ವಾಂ ರಕ್ಷತು ಕೇಶವಃ ॥

ನಖಾಂಕುರವಿನಿರ್ಭಿನ್ನ ವೈರಿ ವಕ್ಷಸ್ಥಲೋ ವಿಭುಃ ।
ನೃಸಿಂಹ ರೂಪೀ ಸರ್ವತ್ರ ರಕ್ಷತು ತ್ವಾಂ ಜನಾರ್ದನಃ ॥

ವಾಮನೋ ರಕ್ಷತು ಸದಾ ಭವಂತಂ ಯಃ ಕ್ಷಣಾದಭೂತ್ ।
ತ್ರಿವಿಕ್ರಮಃ ಕ್ರಮಾಕ್ರಾಂತ ತ್ರೈಲೋಕ್ಯಃ ಸ್ಫುರದಾಯುಧಃ ॥

ಶಿರಸ್ತೇ ಪಾತು ಗೋವಿಂದಃ ಕಂಠಂ ರಕ್ಷತು ಕೇಶವಃ ।
ಗುಹ್ಯಂ ಚ ಜಠರಂ ವಿಷ್ಣುಃ ಜಂಘೇ ತಾಲೂ ಜನಾರ್ದನಃ ॥

ಮುಖಂ ಬಾಹು ಪ್ರಬಾಹೂ ಚ ನಮಃ ಸರ್ವೇಂದ್ರಿಯಾಣಿ ಚ ।
ರಕ್ಷತ್ವವ್ಯಾಹತೈಶ್ವರ್ಯಃ ತವ ನಾರಾಯಣೋಽವ್ಯಯಃ ॥

ಶಾಂರ್ಗ - ಚಕ್ರ - ಗದಾ - ಪಾಣಿ ಶಂಖನಾದಹತಾಃ ಕ್ಷಯಂ ।
ಗಚ್ಛಂತು ಪ್ರೇತ ಕೂಷ್ಮಾಂಡ ರಾಕ್ಷಸಾ ಯೇ ತವಾಽ ಹಿತಾಃ ॥

ತ್ವಾಂ ಪಾತು ದಿಕ್ಷು ವೈಕುಂಠೋ ವಿದಿಕ್ಷು ಮಧುಸೂದನಃ ।
ಹೃಷಿಕೇಶೋಽಂಬರೇ ಭೂಮೌ ರಕ್ಷತು ತ್ವಾಂ ಮಹೀಧರಃ ॥

''ಎಲ್ಲ ಪ್ರಾಣಿಗಳ ಉತ್ಪತ್ತಿ ಕಾರಣನಾದ ಶ್ರೀ ಹರಿಯು ನಿನ್ನನ್ನು ರಕ್ಷಿಸಲಿ. ಅವನ ನಾಭಿಪದ್ಮ ದಿಂದಲೇ ಈ ಪ್ರಪಂಚವೆಲ್ಲವೂ ಉತ್ಪನ್ನವಾಯಿತು.

ಕೋರೆದಾಡೆಯ ಮೇಲೆ ಧರಾಮಂಡಲವನ್ನೆಲ್ಲ ಧರಿಸಿದ ವರಾಹ ರೂಪಿ ಕೇಶವನು ನಿನ್ನನ್ನು ರಕ್ಷಿಸಲಿ. ಉಗುರಿನಿಂದ ವೈರಿಯ ಎದೆಯನ್ನು ಹರಿದ ನರಸಿಂಹ ಸ್ವಾಮಿಯು ನಿನ್ನನ್ನು ಕಾಪಾಡಲಿ. ವಾಮನನಾದವನು ಒಮ್ಮೆಲೇ ತ್ರಿವಿಕ್ರಮನಾಗಿ ಬೆಳೆದು ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೇ ಆಕ್ರಮಿಸಿ ನಿಂತ ಆ ಉಪೇಂದ್ರನು ನಿನ್ನನ್ನು ಕಾಯಲಿ. ಗೋವಿಂದನು ನಿನ್ನ ತಲೆಯನ್ನು ರಕ್ಷಿಸಲಿ. ಕೇಶವನು ಕಂಠವನು ಕಾಯಲಿ.

ವಿಷ್ಣುವು ನಿನ್ನ ಗುಹ್ಯಾಂಗವನ್ನೂ, ಉದರವನ್ನು ರಕ್ಷಿಸಲಿ. ಜನಾರ್ದನನು ನಿನ್ನ ಕಾಲು, ಮೊಣಕಾಲುಗಳನ್ನು ಕಾಯಲಿ. ನಿನ್ನ ಮುಖ. ತೋಳು, ಚಿತ್ತ ಮತ್ತು ಎಲ್ಲ ಇಂದ್ರಿಯಗಳನ್ನು ನಾರಾಯಣನು ರಕ್ಷಿಸಲಿ. ಚಕ್ರಪಾಣಿಯಾದ ಆ ಗದಾಧರನ ದಿವ್ಯವಾದ ಶಂಖಧ್ವನಿಯಿಂದ ನಿನಗೆ ಕೇಡನ್ನು ಬಗೆಯುವ ಭೂತಪ್ರೇತಗಳೂ, ಕೂಷ್ಮಾಂಡ ರಾಕ್ಷಸರೂ ಹತರಾಗಿ ಹೋಗಲಿ.

ದಶದಿಕ್ಕುಗಳಲ್ಲಿಯೂ ನಿನ್ನನ್ನು ವೈಕುಂಠನು ರಕ್ಷಿಸಲಿ. ಉಪದಿಕ್ಕುಗಳಲ್ಲಿ ಮಧುಸೂದನನು ನಿನ್ನನ್ನು ಕಾಪಾಡಲಿ. ಆಕಾಶದಲ್ಲಿ ನಿನ್ನನ್ನು ಹೃಷೀಕೇಶನು ಪಾಲಿಸಲಿ. ನೆಲದ ಮೇಲೆ ನಿನ್ನನ್ನು ಭೂಮಂಡಲವನ್ನೆಲ್ಲ ಹೊತ್ತ ಕೂರ್ಮರೂಪಿಯಾದ ಶ್ರೀ ಹರಿಯು ಸಂರಕ್ಷಿಸಲಿ.'' ಹೀಗೆ ನಂದಗೋಪನು ರಕ್ಷಾಮಂತ್ರವನ್ನು ಹೇಳಿ ಕೃಷ್ಣನಿಗೆ ಎಲ್ಲ ರೀತಿಯಿಂದಲೂ ಶುಭಾಶಂಸನೆಗೈದು ಬಂಡಿಯ ಕೆಳಗೆ, ಚಿಕ್ಕ ಹೊರಿಸಿನ ಮೇಲೆ ಮಲಗಿಸಿದನು. ಎಲ್ಲ ಗೋಪಾಲಕರೂ ಪೂತನಿಯ ಸತ್ತು ಬಿದ್ದ ದೈತ್ಯಾಕಾರದ ದೇಹವನ್ನು ಕಂಡು ಬೆಕ್ಕಸಬೆರಗಾದರು. ಮತ್ತು ಹೆದರಿ ಹೌಹಾರಿದರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಐದನೇ ಅಧ್ಯಾಯ ಸಂಪೂರ್ಣ*



## ಶಕಟಾಸುರಸಂಹಾರ, ಕೃಷ್ಣನ ಬಾಲಲೀಲೆಗಳು | ಅಧ್ಯಾಯ - ೬

**ಪರಾಶರ** - ಒಂದು ದಿನ ಚಕ್ಕಡಿಯ ಕೆಳಗೆ ಮಲಗಿದ್ದಾಗ ಶ್ರೀ ಕೃಷ್ಣನು ಹಸಿವೆಯಾಗಿ ಕಾಲನ್ನು ಮೇಲೆ ಎತ್ತಿ ಅಳಲು ಪ್ರಾರಂಭಿಸಿದನು. ಅವನ ಪುಟ್ಟ ಕಾಲಿನ ಪ್ರಹಾರದಿಂದ ಒಮ್ಮೆಲೇ ಆ ಚಕ್ಕಡಿಯು ಹೊರಳಿ ಬಿದ್ದು ಬಿಟ್ಟಿತು. ಅದರಲ್ಲಿಯಿಟ್ಟ ಕೊಡ, ಪಾತ್ರೆ. ಪರಹೆಗಳೆಲ್ಲ ಒಡೆದು ಪುಡಿಪುಡಿಯಾದವು. ಆಗ ಎಲ್ಲ ಗೊಲ್ಲರೂ, ಗೊಲ್ಲತಿಯರೂ ಹಾಹಾಕಾರ ಮಾಡುತ್ತ ಅಲ್ಲಿಗೆ ಓಡಿಬಂದರು. ತನ್ನ ಚಿಕ್ಕಚರಣದ ಪ್ರಹಾರದಿಂದ ಚಕ್ಕಡಿಯನ್ನೇ ಬುಡಮೇಲಿ ಮಾಡಿ ಉರುಳಿಸಿ ಒಗೆದ ಬಾಲಕೃಷ್ಣನು ಅಂಗಾತ ಮಲಗಿ ಕಾಲನ್ನು ಮೇಲೆತ್ತಿ ಆಟವಾಡುತ್ತಲಿದ್ದ. ಕಾತರತೆಯಿಂದ ಕಂಗೆಟ್ಟ ಆ ದನಗಾಹಿಗಳು ''ಏನು? ಏನು? ಈ ಬಂಡಿಯನ್ನು ಹೀಗೆ ಉರುಳಿಸಿದವರಾರು?'' ಎಂದು ಉದ್ಗರಿಸಿದರು. ಆಗ ಅಲ್ಲಿಯೇ ಆಡುವ ಬಾಲಕರು ''ಈ ಮುದ್ದು ಕೃಷ್ಣನೇ ಈ ಬಂಡಿಯನ್ನು ಒದ್ದು ಕೆಡವಿದ್ದಾನೆ. ಅವನ ಕಾಲಿನ ತುದಿ ತಾಗಿ ಆ ಚಕ್ಕಡಿಯು ಹೊರಳಿದನ್ನು ನಾವು ಕಣ್ಣಾರೆ ಕಂಡಿದ್ದೇವೆ. ಆಗ ದೊಡ್ಡವರಾರೂ ಈ ಬಂಡಿಯ ಬಳಿಯಿರಲಿಲ್ಲ'' ಎಂದು ತಾವು ಪ್ರತ್ಯಕ್ಷ ಕಂಡದ್ದನ್ನು ವಿವರಿಸಿದರು. ಇದನ್ನು ಕೇಳಿದ ಬಳಿಕಂತೂ ಗೋಪಾಲಕರ ಕೌತುಕಕ್ಕೆ ಕಳಸವಿಟ್ಟಿತು. ಅತ್ಯಂತ ಅಚ್ಚರಿಯಿಂದ ಬೆಚ್ಚಿ ಬೆಪ್ಪಾದ ಅಪ್ಪ ನಂದಗೋಪನು ಆ ತನ್ನ ಮುದ್ದು ಮಗನನ್ನು ಕೈಯಿಂದ ಎತ್ತಿಕೊಂಡನು. ಮೈಗೆ ಒತ್ತಿಕೊಂಡನು. ಯಶೋದೆಯಾದರೂ ಆ ಚಕ್ಕಡಿಯಲ್ಲಿ ಇಟ್ಟ ಒಡಕ ಮಡಿಕೆ, ಕುಡಿಕೆ ತುಂಡುತುಣುಕುಗಳನ್ನು ಮತ್ತು ಆ ಚಕ್ಕಡಿಯನ್ನೂ ಹೂ-ಹಣ್ಣು ಕಾಯಿಗಳಿಂದ ಪೂಜಿಸಿದಳು. ಕೃಷ್ಣನಿಗೆ ದೃಷ್ಟಿ ತೆಗೆದಳು.

ಇತ್ತ ವಸುದೇವನು ಗವಳಿಗರ ಮನೆಯಲ್ಲಿ ಇರಿಸಿದ ತನ್ನ ಕ್ಷತ್ರಿಯ ಪುತ್ರರಾದ ಸಂಕರ್ಷಣ ಹಾಗೂ ವಾಸುದೇವರಿಗೆ ದ್ವಿಜರಿಗೆ ವಿಹಿತವಾದ ಸಂಸ್ಕಾರವನ್ನು ಮಾಡಲಿಕ್ಕಾಗಿ ತಮ್ಮ ಕುಲಗುರುಗಳಾದ ಗರ್ಗಾಚಾರ್ಯರನ್ನು ಗೋಕುಲಕ್ಕೆ ಕೊಟ್ಟು ಕಳುಹಿಸಿದನು. ಅವರು ರಹಸ್ಯವಾಗಿಯೇ ಆ ವಸುದೇವನ ಇಬ್ಬರು ಮಕ್ಕಳಿಗೆ ಉಚಿತ ಸಂಸ್ಕಾರಗಳನ್ನೂ ಮಾಡಿದರು. ರೋಹಿಣಿಯ ಮಗನಿಗೆ 'ರಾಮನೆಂದು' ಚಿಕ್ಕವನಾದ ಯಶೋದೆಯ ಪುತ್ರನಿಗೆ 'ಕೃಷ್ಣ' ಎಂದು ಹೆಸರಿಟ್ಟರು. ಸ್ವಲ್ಪ ಕಾಲದಲ್ಲಿಯೇ ಆ ರಾಮಕೃಷ್ಣರು ಗೋಕುಲದಲ್ಲಿ ಹೊಟ್ಟೆ ಸರಿದು, ನೆಲದಿ ಹರಿದು, ಅಂಬೆಗಾಲಿಟ್ಟು ಓಡಾಡತೊಡಗಿದರು. ಮೈಗೆಲ್ಲ ಮಣ್ಣು ಮೆತ್ತಿ ಬೂದಿ ಬಳಿದು, ಧೂಳಿ ಸ್ನಾನ ಮಾಡಿ, ಅತ್ತಿತ್ತ ಹರಿದಾಡುವ ಆ ಹುಡುಗರನ್ನು ಹಿಡಿಯುವುದು ಯಶೋದೆಗೆ ಬಹಳ ಕಷ್ಟವಾಯಿತು.

ತುಸು ದೊಡ್ಡವರಾದಾಗ ಅವರು ಒಮ್ಮೆ ದನದ ಕೊಟ್ಟಿಗೆಯಲ್ಲಿ ಇದ್ದರೆ, ಮರುಚಣದಲ್ಲಿ ಕರುಕಟ್ಟಿದ ಗೋದಲೆಯಲ್ಲಿ ಓಡಾಡುತ್ತಿದ್ದರು. ಅದೇ ಹುಟ್ಟಿದ ಆಕಳ ಕರುಗಳ ಬಾಲಗಳನ್ನು ಜಗ್ಗಿ ಎಳೆದಾಡಿ ಹಿಗ್ಗುತ್ತಿದ್ದರು. ಎಲ್ಲಿ ಹೋದರೂ ಜೋಡಾಗಿಯೇ ಕೂಡುತ್ತಿದ್ದರು. ಜೋಡಾಗಿಯೇ ಆಡುತ್ತಿದ್ದರು. ಇಬ್ಬರೂ ಬಹಳ ಚಪಲರು. ಇಲ್ಲಿ ಇದ್ದಾರೆನ್ನುವಷ್ಟರಲ್ಲಿ ಅಲ್ಲಿಗೆ ಓಡಿರುತ್ತಿದ್ದರು. ಮನೆಯಲ್ಲಿಯ

ವಸ್ತುಗಳನ್ನೆಲ್ಲ ಈಡಾಡುತ್ತಿದ್ದರು. ಕೊನೆಗೆ ಒಂದು ದಿನ ಯಶೋದೆಯು ಸಿಟ್ಟಿಗೆದ್ದು ಕೃಷ್ಣನನ್ನು ಒಂದು ಒರಳಿಗೆ ಹಗ್ಗದಿಂದ ಬಿಗಿದು ಕಟ್ಟಿದಳು. ''ಕಿಡಿಗೇಡಿಯೇ, ಇನ್ನು ಹೋಗು. ಎಲ್ಲಿ ಹೋಗಿವಿಯೋ ನೋಡುತ್ತೇನೆ'' ಎಂದು ನುಡಿದು ತನ್ನ ಕೆಲಸಕ್ಕೆ ನಡೆದಳು. ತನ್ನ ತಾಯಿಯು ಕೆಲಸದಲ್ಲಿ ತೊಡಗಿದುದ್ದನ್ನು ಕಂಡು ಆ ಕಮಲಗಣ್ಣಿನ ಕುಮಾರನು ಮೆಲ್ಲನೇ ಅಲ್ಲಿಂದ ಹೊರಟನು. ಯಶೋದೆಯು ಆ ಕೃಷ್ಣನ ಹೊಟ್ಟೆಗೆ ದೊಡ್ಡ ಹಗ್ಗ ಕಟ್ಟಿ ಅದರ ಇನ್ನೊಂದು ತುದಿಯನ್ನು ಭತ್ತ ಕುಟ್ಟುವ ಕಲ್ಲಿನ ದೊಡ್ಡ ಒರಳಿಗೆ ಕಟ್ಟಿದ್ದಳು. ಕೃಷ್ಣಕುಮಾರನು ಅಂಬೇಗಾಲಿಡುತ್ತ ಆ ಒರಳನ್ನು ಜಗ್ಗಿಕೊಂಡೇ ನಡೆದನು. ಮನೆಯ ಅಂಗಳ ದಾಟಿ ಅವನು ಬೀದಿಗೆ ಇಳಿದು ಆ ಒರಳನ್ನು ಎಳೆಯುತ್ತ ನೇರವಾಗಿ ಊರ ಹೊರಗಿರುವ ಎರಡು ಅವಳಿ ಗಿಡಗಳ ಬಳಿಗೆ ಬಂದನು. ಆ ಅವಳಿ - ಜವಳಿ ವೃಕ್ಷಗಳ ಎರಡರ ನಡುವೆ ಹಾದು ಕೃಷ್ಣನು ಆಚೆಗೆ ಹೋಗಿ ಆ ಒರಳನ್ನು ಜಗ್ಗಿದನು. ಆ ಕವಲು ಗಿಡಗಳ ಬೊಡ್ಡೆಗೆ ಅಡ್ಡ ಸಿಕ್ಕ ಆ ಕಲ್ಲಿನ ಒರಳನ್ನು ಆಚೆಗೆ ಹೋದ ಕೃಷ್ಣನು ಜೋರಿನಿಂದ 'ಝೂಟನಿ' ಹೊಡೆದು ಜಗ್ಗಿದಾಗ ಆ ಜೋಡು ಮರಗಳು 'ಛಟ, ಛಟ' ಎಂದು ಭಯಂಕರ ಸಪ್ಪಳ ಮಾಡುತ್ತ ಬೇರು ಸಹಿತ ಕಿತ್ತು ಉರುಳಿ ಬಿದ್ದವು. ಬಹುದಿನಗಳಿಂದ ಬೆಳೆದು ಬೀಗಿ ನಿಂದು ಭೂಮಿಯ ಆಳದಲ್ಲಿ ಬೇರು ಬಿಟ್ಟು ಗಟ್ಟಿಯಾಗಿ ನೆಲೆನಿಂತ ಆ ಹೆಮ್ಮರಗಳು ಮುರಿದು ಉರುಳಿ ಬೀಳುವ 'ಖಟ್ ಖಟಲ್, ಖಟಿಲ್ - ಛಿಟಿಲ್' ಎಂದು ಬ್ರಹ್ಮಾಂಡ ಬಿರಿಯುವಂತೆ ಸದ್ದಾಯಿತು. ಅದನ್ನು ಕಂಡು ಗೋಕುಲದ ಗವಳಿಗರೆಲ್ಲರೂ ಓಡಿ ಬಂದರು. ಎರಡೂ ಜೋಡುಗಿಡಗಳು ಮುರಿದು ತಾಯಿ ಬೇರನ್ನು ತೋರುತ್ತ ಧರೆಗುರುಳಿ ಬಿದ್ದವು. ಪುಟ್ಟ ಬಾಯಲ್ಲಿ ಅರೆಹುಟ್ಟಿದ ಹಲ್ಲುಗಳನ್ನು ತೋರುತ್ತ ಕೃಷ್ಣನು ಉರುಳಿಬಿದ್ದ ಆ ಎರಡೂ ಅರ್ಜುನ ಗಿಡಗಳ ನಡುವೆ ನಗುತ್ತಲಿದ್ದ. ಅವನ ಹೊಟ್ಟೆಯಲ್ಲಿ ತಾಯಿಯು ಬಿಗಿದು ಕಟ್ಟಿದ ಹಗ್ಗವು ಒರಳನ್ನು ಜಗ್ಗಿ ಜಗ್ಗಿ ಬಿಗಿಯಾಗಿ ಆ ಎಳೆ ಉದರದ ಮೇಲೆ ಬಾರುಗಳನ್ನು ಮೂಡಿಸಿತ್ತು. ಈ ಹಗ್ಗದ ಜಗ್ಗಾಟದಿಂದ ಹೊಟ್ಟೆಯಲ್ಲಿ ಮೂಡಿದ ಗೆರೆಕೊರೆಗಳಿಂದ 'ದಾಮೋದರ' ಎಂದು ಕೃಷ್ಣನಿಗೆ ಹೆಸರಾಯಿತು. ''ತತಶ್ಚ ದಾಮೋದರತಾಂ ಸ ಯಯೌ ದಾಮಬಂಧನಾತ್।''

## ಗೋಕುಲದಿಂದ ವೃಂದಾವನಕ್ಕೆ

ಅನಂತರ ನಂದಗೋಪನೇ ಮೊದಲಾದ ಗೋಪಾಲಕ ಹಿರಿಯರೆಲ್ಲರೂ ಸೇರಿ ಮಂತ್ರಾಲೋಚನೆ ನಡೆಸಿದರು. ಒಂದರ ಮೇಲೊಂದು ನಡೆದ ಈ ಉತ್ಪಾತ ಅನಾಹುತಗಳಿಂದ ಅವರೆಲ್ಲರೂ ಹೆದರಿ ಹೋಗಿದ್ದರು. ''ಈ ಗೋಕುಲದಲ್ಲಿದ್ದರೆ ನಮಗೆ ಇನ್ನು ಕ್ಷೇಮವಿಲ್ಲ. ಮತ್ತಾವುದಾದರೂ ಕಾಡು ಬೀಡಿಗೆ ಹೊರಟು ಹೋಗೋಣ. ಇಲ್ಲಿ ನಮ್ಮ ನಾಶಕ್ಕೆ ಕಾರಣವಾಗುವ ಅನರ್ಥಗಳು ಬಹಳ ಆಗುತ್ತಿವೆ. ಪೂತನಿಯ ದುರಂತ, ಆ ಹೆಬ್ಬಂಡಿಯ ಹೊರಳುವಿಕೆ. ಈ ಹೆಮ್ಮರಗಳ ಉರುಳುವಿಕೆ ಇವೆಲ್ಲವೂ ಏನೋ ಮಹಾ ಅನರ್ಥವನ್ನು ಸೂಚಿಸುತ್ತವೆ. ಇನ್ನೂ ಹೆಚ್ಚಿನ ಅನಾಹುತವು ತಲೆದೋರುವುದರೊಳಗಾಗಿ ಈ ಸ್ಥಳವನ್ನು ಬಿಟ್ಟು ಹೋಗೋಣ. ವೃಂದಾವನವು ಬಹಳ ಸುಂದರವಾದ ಸ್ಥಾನವಾಗಿದೆ ನಾವು ಅಲ್ಲಿಗೇ ಹೋಗಿ ನೆಲೆಸೋಣ.''

ಹೀಗೆ ವಿಚಾರಿಸಿ ಆ ಎಲ್ಲ ವ್ರಜವಾಸಿಗಳು ತಮ್ಮ ಹಸುಗಳ ಹಿಂಡುಗಳನ್ನು ಮತ್ತು ಎತ್ತು ಬಂಡಿಗಳನ್ನು ಕಟ್ಟಿಕೊಂಡು, ತಮ್ಮ ಎಲ್ಲ ಸಾಮಾನುಗಳನ್ನು ತೆಗೆದುಕೊಂಡು ಅಲ್ಲಿಂದ ಹೊರಟು ಹೋದರು. ಗೋಪಾಲಕರೆಲ್ಲ ಬಿಟ್ಟು ಹೋಗಿ ಬರಿದಾದ ಆ ಗೋಕುಲವು ಹರಕು-ಮುರುಕು ವಸ್ತುಗಳಿಂದಲೂ, ಅನುಪಯುಕ್ತ ಕಸಕಡ್ಡಿಗಳಿಂದಲೂ ತುಂಬಿ ಹೋಯಿತು. ಕಾಗೆ - ಗೂಗೆ , ನರಿ - ನಾಯಿಗಳೂ ಅದನ್ನು ವ್ಯಾಪಿಸಿದವು. ವೃಂದಾವನಕ್ಕೆ ಹೋದ ಬಳಿಕ ಶ್ರೀಕೃಷ್ಣನು ಗೋವುಗಳಿಗೂ ಗೋಪಾಲಕರಿಗೂ ಕಲ್ಯಾಣವಾಗಲಿ ಎಂದು ಮನಸ್ಸಿನಲ್ಲಿ ಚಿಂತಿಸಿದನು. ಅದರಿಂದಲೇ ಕೂಡಲೇ ಅಲ್ಲಿ ಹುಲ್ಲು-ಹಸಿರು, ಜಲ-ಸ್ಥಲ ಎಲ್ಲವೂ ಅನುಕೂಲವಾಯಿತು. ಎಂಥ ಉರಿ ಬೇಸಿಗೆಯಲ್ಲಿಯೂ ಅಲ್ಲಿ ಹಸಿರು, ಹುಲ್ಲು, ತಳಿರು, ತಣ್ಣೀರು, ತಂಬೆಲರು ತಪ್ಪುತ್ತಿದ್ದಿಲ್ಲ. ಈ ಎಲ್ಲ ಗೋಪಾಲಕರೂ ಅಲ್ಲಿ ಆನಂದದಿಂದ ಇರತೊಡಗಿದರು. ನಾಲ್ಕು ದಿಕ್ಕಿನಲ್ಲಿಯೂ ಅರ್ಧ ಚಂದ್ರಾಕಾರವಾಗಿ ಚಕ್ಕಡಿಗಳನ್ನು ನಿಲ್ಲಿಸಿ ಮಧ್ಯದಲ್ಲಿ ಬೇರೆ ಬೇರೆ ವಸತಿ - ವೀಥಿಗಳನ್ನು ನಿರ್ಮಿಸಿ ಗೋಪಾಲಕರು ಅದನ್ನೊಂದು ಸುಂದರವಾದ ಸ್ಥಾನವನ್ನು ಮಾಡಿಕೊಂಡರು. ವೃಂದಾವನದಲ್ಲಿ ರಾಮಕೃಷ್ಣರಿಬ್ಬರೂ ಹಸುಗಳನ್ನು ಕಾಯತೊಡಗಿದರು. ಗೋಷ್ಠದಲ್ಲಿ ನಿಂತು ಅನೇಕ ಆಟಗಳನ್ನು ಆಡುತ್ತಲಿದ್ದರು.

## ಹರಿಯ ಹುಡುಗಾಟ

ತಲೆಯ ತುದಿಯಲ್ಲಿ ನವಿಲುಗರಿ, ಕೊರಳಿನಲ್ಲಿ ಕಾಡು ಹೂಗಳ ಹಾರ, ಕೈಯಲ್ಲಿ ಕೊಳಲು, ಮುಂಗುರುಳಿನಲ್ಲಿ ಹಕ್ಕಿಯ ಪುಚ್ಚ. ನೋಡುವವರಿಗೆ ಬೆಂಕಿಯ ಬಾಲರೇನೋ ಎನ್ನುವಂತೆ ತೋರುತ್ತಿತ್ತು. ಯಾವಾಗಲೂ ಆಟ, ಹುಡುಗಾಟ, ಕಾರಣವಿಲ್ಲದ ನಗೆ, ಬೇಸರವರಿಯದ ಬಗೆ, ಇವರ ಲೀಲಾವಿಲಾಸಗಳಿಂದ ಇಡೀ ವೃಂದಾವನವೆಲ್ಲವೂ ಜೀವ ತುಂಬಿ ಕುಲುಕುಲುಸುತ್ತಿತ್ತು.

ಅವರು ತಮ್ಮ ಬಾಯಿಯಿಂದಲೇ ವೀಣೆಯ ದನಿಯನ್ನೂ, ಕೊರಳಿನ ಉಲಿಯನ್ನೂ, ಕೋಗಿಲೆಯ ಇಂಚರವನ್ನೂ, ನವಿಲಿನ ಕೇಕೆಯನ್ನೂ, ಬೇರೆ ಬೇರೆ ಹಕ್ಕಿಗಳ ದನಿಯನ್ನೂ ವಿವಿಧ ವಾದ್ಯಗಳ ಮಂಜುಳನಾದವನ್ನೂ ತೆಗೆದು ಸ್ವರವೆತ್ತಿ, ಹಾಡಿಪಾಡಿ, ಆಟವಾಡಿ, ಕುಣಿದು ಕುಪ್ಪಳಿಸಿ ನಕ್ಕು ನಲಿದಾಡುತ್ತಿದ್ದರು. ಒಬ್ಬರೊಬ್ಬರನ್ನು ಹೊತ್ತು ಓಡುತ್ತಿದ್ದರು. ಚಿಕ್ಕಮಕ್ಕಳನ್ನು ಎತ್ತಿ ತೂಗಾಡಿ ನಗಿಸುತ್ತಿದ್ದರು. ಕರುಗಳನ್ನು ಹುರಡುಗಟ್ಟಿ ಆಡಿಸಿ, ಓಡಿಸಿ, ತಣಿಯುತ್ತಿದ್ದರು. ಹೀಗೆ ರಾಮಕೃಷ್ಣರು ವೃಂದಾವನದಲ್ಲಿ ಮಾಡಿದ ಲೀಲೆಗೆ ಲೆಕ್ಕವಿಲ್ಲ. ಇಂತು ತುರುಕರುಗಳನ್ನು ಕಾಯುತ್ತ ಆ ರಾಮಕೃಷ್ಣರು ಏಳು ವರುಷದವರಾದರು. ಜಗತ್ಪಾಲಕರಾದ ಅವರು ಪಶು-ಪಾಲಕರಾದುದು ಒಂದು ಲೀಲಾ ವಿಡಂಬನೆಯಲ್ಲವೇ?

## ಶ್ರಾವಣದ ವೈಭವ

ರಾಮಕೃಷ್ಣರು ವೃಂದಾವನದಲ್ಲಿ ಕೈಶೋರ ಲೀಲೆಗಳನ್ನು ಮಾಡುತ್ತಲಿರುವಾಗ ಒಮ್ಮೆ ಮಳೆಗಾಲವು ಪ್ರಾಪ್ತವಾಯಿತು. ಮೋಡ ಪಡೆಗಳಿಂದ ಮುಗಿಲೆಲ್ಲವೂ

ಸ್ಥಗಿತವಾದಂತಾಯಿತು. ನಿರಂತರವಾಗಿ ಸುರಿಯುವ ಮಳೆಯ ಸಂತತ ಧಾರೆಗಳು ದಶದಿಕ್ಕುಗಳಲ್ಲಿ ಭಾವೈಕ್ಯವನ್ನು ನಿರ್ಮಿಸ ಹೊರಟಂತೆ ತೋರುತ್ತಿದ್ದವು. ಎಲ್ಲ ಕಡೆಗೂ ಹಸಿರು ಹಾಸಿದಂತಾಗಿ ಭೂಮಂಡಲವೆಲ್ಲ ಪಚ್ಚೆ ಮಣಿಗಳಿಂದ ನೆಲಗಟ್ಟಣೆ ಮಾಡಿದಂತೆ ಎಸೆಯುತ್ತಿತ್ತು. ಹೊಸ ನೀರು ತುಂಬಿ ತುಳುಕಿ ಮಹಾಪೂರದಿಂದ ಕಂಡ ಕಂಡಲ್ಲಿ ನುಗ್ಗಿ ಹರಿಯುವ ನದಿಗಳು, ಅವನೀತಲದಲ್ಲಿ ಹಣದ ಉಬ್ಬರವಾದಾಗ ನಡೆಯುವ ಉಚ್ಛೃಂಖಲ ಪ್ರವೃತ್ತಿಯಂತೆ ಕಾಣುತ್ತಿದ್ದವು. ನಿರ್ಮಲನಾದ ಚಂದ್ರನು ಕಪ್ಪು ಮೋಡಗಳ ದಟ್ಟಣೆಯಲ್ಲಿ ಎಲ್ಲಿಯೋ ಮೂಲೆಗುಂಪಾದನು. ಮೂರ್ಖರ ವಾಗಾಡಂಬರದ ಸದ್ದು ಗದ್ದಲದಲ್ಲಿ ನಿಜವಾದ ಜ್ಞಾನಿಗಳಿಗೆ ಅವಕಾಶವಾದರೂ ಎಲ್ಲಿ? ಅತ್ಯಂತ ಚಂಚಲವಾದ ಮಿಂಚು ಆಕಾಶದಲ್ಲಿ ಎಲ್ಲಿಯೂ ಸ್ಥಿರವಾಗಿ ನಿಲ್ಲಲಿಲ್ಲ. ಸಜ್ಜನರ ಜೊತೆಗೆ ಬೆಳಸಿದ ದುರ್ಜನರ ಗೆಳೆತನದಂತಿತ್ತು ಈ ಮಿಂಚಿನಾಟ. ಯಾವ ಗುಣವೂ ಇಲ್ಲದ, ಯಾರಿಗೂ ಉಪಯೋಗವಿಲ್ಲದ ಕಾಮನ ಬಿಲ್ಲು ಆಕಾಶದಲ್ಲಿ ಒಮ್ಮೆಲೇ ಪ್ರತಿಷ್ಠೆ ಹೊಂದಿ ಮಿನುಗತೊಡಗಿತು. ಅವಿವೇಕಿ ರಾಜರ ಆಸ್ಥಾನದಲ್ಲಿ 'ವಶೀಲಿ' ಯಿಂದ ಎಂಥ ದಡ್ಡರಿಗೂ ಮೆರೆಯುವ ಅವಕಾಶ ದೊರೆಯುವುದಿಲ್ಲವೇ!

ಈ ವರ್ಷಾಕಾಲದಲ್ಲಿ ನವಿಲುಗಳಂತೆ ಗರಿಗೆದರಿ ದನಿಗೈಯುವ ರಾಮಕೃಷ್ಣರು ತುರು-ಕರುಗಳನ್ನೆಲ್ಲ ಮರದಡಿಯಲ್ಲಿ ನಿಲ್ಲಿಸಿಕೊಂಡು ತಾವೂ ಗಾನತಾನಗಳನ್ನು ಹೊರಡಿಸುತ್ತಿದ್ದರು. ಕದಂಬ ಹೂಗಳ ಹಾರವನ್ನು ಧರಿಸಿ, ನವಿಲು ಗರಿಯನ್ನು ಸಿಕ್ಕಿಸಿಕೊಂಡು, ಪರ್ವತದ ಬಣ್ಣಬಣ್ಣದ ಧಾತುಗಳನ್ನು ಮೈಗೆ ಲೇಪವಾಗಿ ಬಳಿದುಕೊಂಡು ಗಿಡದಡಿಯ ತಳಿರುತಲ್ಪದಲ್ಲಿಯೂ ಹಸಿರು ಹಾಸಿಗೆಗಳಲ್ಲಿಯೂ ಪವಡಿಸಿ, ಸರಸ ಸಂಭಾಷಣೆಗಳನ್ನು ನಡೆಸುತ್ತಿದ್ದರು. ಮೋಡವು ಗುಡುಗಿದಾಗ ತಾವು ಜಿಗಿದು ನಿಂತು, ಅದರಂತೆಯೇ ಗರ್ಜನೆಗೈದು ನವಿಲುಗಳನ್ನು ಕುಣಿಸುತ್ತಿದ್ದರು. ಒಮ್ಮೊಮ್ಮೆ ಗೋಪಾಲಕ ಗೆಳೆಯರೆಲ್ಲರೂ ಕೂಡಿ ಗಾಯನ ಮಾಡುತ್ತ ಒಬ್ಬರಿಗೊಬ್ಬರು 'ಅಹೋರೂಪಮಹೋಧ್ವನಿಃ' ಎಂದು ಹೊಗಳಿ ಹಾಡಿ ನಕ್ಕು ನಲಿಯುತ್ತಿದ್ದರು. ಹೀಗೆ ಸಾಯಂಕಾಲದವರೆಗೆ ಹಚ್ಚಹಸಿರು ಹಾಸಿದ ವೃಂದಾವನದ ಬಯಲು ಭೂಮಿಗಳಲ್ಲಿ ತುರು - ಕರುಗಳನ್ನು ತಿನಿಸಿ ತಿರುಗಾಡಿಸಿ, ತಾವೆಲ್ಲ ಗೋಪಾಲಕ ಗೆಳೆಯರು ಆಟಪಾಟಗಳನ್ನಾಡಿ, ಸಾಯಂಕಾಲಕ್ಕೆ ಮರಳಿ ವ್ರಜಭೂಮಿಗೆ ಎಲ್ಲ ಗೋವುಗಳಿಂದಲೂ ಗೋಪಾಲಕರಿಂದಲೂ ಕೂಡಿ ಬರುತ್ತಲಿದ್ದರು. ಹೀಗೆ ರಾಮಕೃಷ್ಣರು ವೃಂದಾವನದಲ್ಲಿ ದೇವಕುಮಾರರಂತೆ ತಮ್ಮ ದಿವ್ಯ ಕಾಂತಿಯಿಂದ ದಶ - ದಿಶೆಗಳನ್ನು ಬೆಳಗುತ್ತ ಬಾಲಕ್ರೀಡೆಗಳನ್ನು ಆಡುತ್ತ ವಾಸಮಾಡಿದರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಐದನೇ ಅಂಶದ ಆರನೇ ಅಧ್ಯಾಯ ಸಂಪೂರ್ಣ*

—o—

## ಕಾಲಿಯ ಮರ್ದನ

## ಅಧ್ಯಾಯ - ೭

ಒಂದು ದಿನ ಶ್ರೀ ಕೃಷ್ಣನು ಬಲರಾಮನನ್ನು ಬಿಟ್ಟೇ ವೃಂದಾವನಕ್ಕೆ ಹೋದನು. ಅಲ್ಲಿ ಕಾಡುಕುಸುಮಗಳ ಸರಗಳನ್ನು ಕೊರಳಲ್ಲಿ ಧರಿಸಿ ಗೋಪಾಲಕರೊಂದಿಗೆ ಅತ್ತ ಇತ್ತ ಅಲ್ಲಿ ಇಲ್ಲಿ ತಿರುಗಾಡಿದನು. ತೆರೆಗಳನ್ನು ತೂರಿ ತುಳುಕಾಡುವ ಯಮುನೆಯ ತಡಿಗೆ ಬಂದನು. ದಂಡೆಯ ಬದಿಯ ಬುರುಗಿನಿಂದ ನದಿಯು ಹುಚ್ಚು ನಗೆ ನಗುತ್ತಲಿತ್ತು. ಅಲ್ಲಿ ಕಾಲಿಯ ನಾಗನ ಘೋರ ಮಡುವು ಕೃಷ್ಣನ ಕಣ್ಣಿಗೆ ಬಿದ್ದಿತು. ಕಾಲಿಯ ಸರ್ಪದ ಸಂಪರ್ಕದಿಂದ ಅಲ್ಲಿಯ ನೀರೆಲ್ಲವೂ ವಿಷವಾಗಿದ್ದಿತು. ಉಗ್ರವಾದ ಆ ವಿಷದ ಝಳದಿಂದ ದಂಡೆಯ ಗಿಡಗಳೆಲ್ಲವೂ ಕಮರಿ ಹೋಗಿದ್ದವು. ಆ ತೊರೆಯ ತೆರೆಯ ಮೇಲೆ ಬೀಸುವ ಗಾಳಿಯು ಸೋಕಿದರೂ ಸಾಕು. ಹಕ್ಕಿ ಪಕ್ಕಿಗಳು ಸುಟ್ಟು ಹೋಗುತ್ತಿದ್ದವು. ಅದೊಂದು ನೆಲದ ನಡುಮನೆಯಲ್ಲಿಯೇ ತೆರೆದ ಮೃತ್ಯುವಿನ ಮುಖವಾಗಿದ್ದಿತು. ಅದನ್ನು ಕಂಡು ಶ್ರೀ ಕೃಷ್ಣನು ಇಂತು ಆಲೋಚನೆಗೈದನು.

''ನನ್ನ ವಾಹನನಾದ ಗರುಡನಿಂದ ಏಟು ತಿಂದು ಓಡಿ ಬಂದ ದುಷ್ಟ ಕಾಲಿಯ ನಾಗನು ಸಮುದ್ರ ಬಿಟ್ಟು ಈ ಯಮುನೆಯ ಮಡುವಿನಲ್ಲಿ ಅವಿತುಕೊಂಡಿದ್ದಾನೆ. ಅವನಿಂದ ಈ ಯಮುನೆಯ ನೀರೆಲ್ಲವೂ ವಿಷದೂಷಿತವಾಗಿದೆ. ಇದರಿಂದ ಈ ಯಮುನಾನದಿಯ ನೀರನ್ನು ನರರು ಮುಟ್ಟುವಂತಿಲ್ಲ, ಪಶುಪಕ್ಷಿಗಳು ಮೂಸುವಂತಿಲ್ಲ, ನೀರಡಿಸಿದರೆ ಯಾರೂ ಕುಡಿಯುವಂತಿಲ್ಲ. ಆದುದರಿಂದ ನಾನೀಗ ಈ ಕ್ರೂರ ಹಾವನ್ನು ನಿಗ್ರಹಿಸಬೇಕು. ಅದರಿಂದ ಈ ನಾಡಿನ ಜನರೆಲ್ಲರೂ ಹೆದರಿಕೆ ಕಳೆದು ಹಾಯಾಗಿ ತಿರುಗಾಡುವರು. ನಾನು ಅವತಾರ ಮಾಡಿದ್ದೇ ಇದಕ್ಕಲ್ಲವೇ! ದಾರಿ ಬಿಟ್ಟು ನಡೆದ ದುರಾತ್ಮರ ದಮನವು ನನ್ನ ಮುಖ್ಯ ಕರ್ತವ್ಯವಾಗಿದೆ. ಆದುದರಿಂದ ಇಲ್ಲಿಯೇ ಸಮೀಪದ ಈ ಕದಂಬ ಮರವನ್ನು ಏರಿ ಗಾಳಿ ಕುಡಿಯುವ ಈ ಘೋರ ಸರ್ಪದ ಮಡುವಿನ ಮಡಿಲಲ್ಲಿ ಹಾರಿ ಧುಮುಕುವೆನು.''

ಈ ರೀತಿಯಾಗಿ ವಿಚಾರಿಸಿ ಕೃಷ್ಣನು ತನ್ನ ಕಚ್ಚೆ ಬಿಗಿದು ಟೊಂಕಕಟ್ಟಿ ಕದಂಬ ಗಿಡದ ನಡುನೆತ್ತಿಯ ಮೇಲಿಂದ ನಾಗ ಮಡುವಿನ ನಡುನೀರಿನಲ್ಲಿ ಜಿಗಿದು ಧೀಂಕಿಟ್ಟು ಧುಮುಕಿದನು. ಎತ್ತರದಿಂದ ಕೃಷ್ಣನು ಹಾರಿದ ರಭಸಕ್ಕೆ ಆ ದೊಡ್ಡ ಮಡುವು ಅಲ್ಲೋಲಕಲ್ಲೋಲವಾಗಿ ಮೇರೆಮೀರಿ ಉಕ್ಕಿ ದೂರ ದೂರದ ಗಿಡಗಳಿಗೂ ಕೂಡ ನೀರನ್ನು ಹನಿಸಿತು. ಆಗ ಕೃಷ್ಣನು ನೀರಿನಲ್ಲಿ ಬಿದ್ದು ತನ್ನ ತೋಳುಗಳನ್ನು ತಟ್ಟಿದನು. ಅವನ ಭುಜಗಳ ಆಸ್ಫಾಲನದ ಸದ್ದನ್ನು ಆಲಿಸಿದ ಕೂಡಲೇ ನಾಗನಾಯಕನಾದ ಕಾಲಿಯನು ಎದ್ದು ಬಂದನು. ಸಿಟ್ಟಿನಿಂದ ಅವನ ಕಣ್ಣುಗಳಲ್ಲಿ ಕೆಂಪು ಚಿಮ್ಮುತ್ತಿತ್ತು. ಕೂಡಲೇ ವಿಷದ ಜ್ವಾಲೆಗಳನ್ನು ಕಕ್ಕುವ ಗೋರ ಮುಖವುಳ್ಳ ಬೇರೆ ಹಾವುಗಳು ಕೃಷ್ಣನನ್ನು ಸುತ್ತುವರಿದು ಮುತ್ತಿದವು. ನೂರಾರು ನಾಗಪತ್ನಿಯರು ಅನೇಕ ಕೊರಳ ಪದಕಗಳಿಂದ ಕಂಗೊಳಿಸುವ ತಮ್ಮ ಬಳ್ಳಿ ಮೈಗಳನ್ನು ಬಳುಕಿಸುತ್ತ ಜೋಲಾಡುವ ಕರ್ಣಕುಂಡಲಗಳ ಕಾಂತಿಗಳನ್ನು ಸೂಸುತ್ತ ಬಂದು ಕೃಷ್ಣನನ್ನು ಸುತ್ತಿದರು;

ಮುತ್ತಿದರು; ತಮ್ಮ ನಾಗಪಾಶಗಳಿಂದ ಅವನನ್ನು ಬಿಗಿದರು; ವಿಷಯ ಉರಿಗಳನ್ನು ಉಗುಳುವ ತಮ್ಮ ಮುಖಗಳಿಂದ ರೊಚ್ಚಿಗೆದ್ದು ಅವನನ್ನು ಕಚ್ಚಿದರು. ಸೂಜಿ ಹಲ್ಲುಗಳನ್ನು ಚುಚ್ಚಿದರು. ಆ ಕಾಲಿಯ ಮಡುವಿನಲ್ಲಿ ಬಿದ್ದು ಹಾವುಗಳ ಮೈಯಿಂದ. ಸರ್ಪಪಾಶಗಳಿಂದ ಬಿಗಿದು ಬೀಳಿಸಲ್ಪಟ್ಟ ಕೃಷ್ಣನನ್ನು ನೋಡಿ ಗೋಪಾಲಕರೆಲ್ಲರೂ ಗಾಬರಿಯಾಗಿ ವೃಂದಾವನಕ್ಕೆ ಓಡಿ ಬಂದರು. ಮತ್ತು ಅಲ್ಲಿಯ ಜನರಿಗೆಲ್ಲ ಒದರಿ ಹೇಳಿದರು. ''ಅಯ್ಯೋ ಕೃಷ್ಣನು ಕಾಲಿಯ ಮಡುವಿನಲ್ಲಿ ಬಿದ್ದಿದ್ದಾನೆ. ಅಲ್ಲಿಯ ಹಾವುಗಳು ಅವನನ್ನು ಕಚ್ಚಿ ಮೂರ್ಛೆಗೊಳಿಸಿವೆ. ನಾಗಗಳ ನಾಯಕನಾದ ಕಾಲಿಯನು ಅವನನ್ನು ಕಬಳಿಸುತ್ತಾನೆ. ಬನ್ನಿ ಬನ್ನಿ.''

ಇದನ್ನು ಕೇಳಿ ವ್ರಜವಾಸಿಗಳಿಗೆಲ್ಲ ಸಿಡಿಲು ಎರಗಿದಂತಾಯಿತು. ಎಲ್ಲ ಗೋಪಾಲಕರೂ, ಗೋಪಿಕಾಸ್ತ್ರೀಯರೂ ಯಶೋದೆಯನ್ನು ಮುಂದೆ ಮಾಡಿಕೊಂಡು ಯಮುನೆಯ ನದಿಯ ಕಡೆಗೆ ಧಾವಿಸಿದರು. ''ಹಾಯ್! ಹಾಯ್! ಕೃಷ್ಣನೆಲ್ಲಿ? ನಮ್ಮ ಕಂದನೆಲ್ಲಿ? ಆ ನಂದಕುಮಾರನೆಲ್ಲಿ?'' ಎಂದು ಗೋಳಿಡುತ್ತ ಗೊಲ್ಲತಿಯರೆಲ್ಲ ಯಶೋದೆಯೊಂದಿಗೆ ತಲ್ಲಣಿಸಿ ಏಳುತ್ತ ಬೀಳುತ್ತ ನದಿಯ ಕಡೆ ನುಗ್ಗಿ ನಡೆದರು. ನಂದಗೋಪನೂ, ಕದನಕಲಿಯಾದ ಬಲರಾಮನೂ ಕೃಷ್ಣನನ್ನು ಕಾಣಲು ಕಾತರರಾಗಿ ಕಾಲಿಯ ಮಡುವಿಗೆ ಕಾಲಿರಿಸಿದರು. ಅಲ್ಲಿ ಅವರು ಬಂದಾಗ ಕಾಲಿಯ ಸರ್ಪನು ತನ್ನ ಹೆಬ್ಬಾವಿನ ಹರವು ಮೈಯಿಂದ ಕೃಷ್ಣನ ಶರೀರವನ್ನು ಸುತ್ತಿ ಬಿಗಿಯಾಗಿ ಬಿಗಿದು ತನ್ನ ವಶದಲ್ಲಿ ತೆಗೆದುಕೊಂಡಿದ್ದನು. ಕೃಷ್ಣನ ಎಲ್ಲ ಪ್ರಯತ್ನಗಳೂ ವಿಫಲವಾಗಿ ಅವನು ನಿಶ್ಚೇಷ್ಟನಾಗಿ ಆ ಸರ್ಪರಾಜನ ಸ್ವಾಧೀನನಾಗಿದ್ದ. ಇದನ್ನು ಕಂಡು ನಂದಗೋಪನೂ ಯಶೋದೆಯೂ ನಿಂತಲ್ಲಿಯೇ ಮೂರ್ಛಿತರಾಗಿ ನೆಲಕ್ಕುರುಳಿದರು. ಉಳಿದೆಲ್ಲ ಗೋಪಿಯರೂ ಆರ್ತರಾಗಿ ದೀನ ದನಿಯಿಂದ ಗದ್ಗದ ಕಂಠರಾಗಿ ಶೋಕ ಮಾಡಿದರು.

''ನಾವೆಲ್ಲರೂ ಯಶೋದೆಯೊಂದಿಗೆ ಈ ಕಾಲಿಯ ಮಡುವಿನಲ್ಲಿ ಬಿದ್ದು ಬಿಡೋಣ. ನಾವು ಇನ್ನು ನಮ್ಮ ವ್ರಜಭೂಮಿಗೆ ಮರಳಿ ಹೋಗುವುದೇ ಬೇಡ. ಸೂರ್ಯನಿಲ್ಲದ ಹಗಲು ಎಂಥದು ! ಚಂದ್ರನಿಲ್ಲದ ರಾತ್ರಿ ಎಂಥದು ! ಹೋರಿ ಇಲ್ಲದ ಹಸುಗಳ ಹಿಂಡು ಎಂಥದು ! ಕೃಷ್ಣನಿಲ್ಲದ ವೃಂದಾವನ ಎಂಥದು ! ಕೃಷ್ಣನಿಲ್ಲದ ಗೋಕುಲಕ್ಕೆ ನಾವು ಹೋಗಲಾರೆವು. ನೀರಿಲ್ಲದ ಸರೋವರಕ್ಕೆ ಯಾರು ಹೋಗುವರು ! ನಾವಂತೂ ಈ ತಾವರೆ ಕಣ್ಣಿನ ಕೃಷ್ಣನನ್ನು ಬಿಟ್ಟು ನಂದ ಗೋಕುಲಕ್ಕೆ ಮರಳಲಾರೆವು.'' ಗೋಪಿಕೆಯರ ಈ ದೀನ ನುಡಿಗಳನ್ನು ಕೇಳಿ ಮಹಾಬಲಿಷ್ಠನಾದ ಬಲರಾಮನು ತಮ್ಮ ಜನರೆಡೆಗೆ ದೃಷ್ಟಿಯನ್ನು ಬೀರಿದನು. ಗೋಪಾಲಕರೆಲ್ಲರೂ ಹೆದರಿ ಕಣ್ಣು ಮುಚ್ಚಿದ್ದರು. ನಂದಗೋಪನು ದೀನದೃಷ್ಟಿಯಿಂದ ಹಾವಿನ ಬಾಯಲ್ಲಿ ಬಿದ್ದ ತನ್ನ ಹಸುಳೆಯ ಮುಖವನ್ನೇ ನೋಡುತ್ತಿದ್ದನು. ಯಶೋದೆಯಂತೂ ಮೂರ್ಛೆಯಲ್ಲಿ ಮೈಮರೆತಿದ್ದಳು.

## ಕಾಲಿಯನನ್ನು ನಿಗ್ರಹಿಸಲು ನಾಗೇಶ ಬಲರಾಮನ ಕರೆ

ಇದನ್ನೆಲ್ಲ ಕಂಡು ಕರಗಿದ ಬಲದೇವನು ಕೃಷ್ಣನನ್ನು ಕುರಿತು ಇಂತು ನುಡಿದನು. ''ದೇವತೆಗಳ ಒಡೆಯನೇ, ಇದೇನು ನಿನ್ನ ಮಾನುಷಭಾವದ ಪ್ರಕಟನೆ ! ನೀನು ಸಾಕ್ಷಾತ್ ನಾರಾಯಣನೆಂಬುದನ್ನು ಮರೆತೆಯಾ ? ಸಾಕ್ಷಾತ್ ನಾರಾಯಣನಾದ ನೀನು ಭೂಭಾರ

ಹರಣಕ್ಕಾಗಿ ಮಾನವನಾಗಿ ಅವತಾರ ಮಾಡಿರುವಿ. ನಿನ್ನ ಭಗವತ್ಕಾರ್ಯಕ್ಕೆ ಸಹಾಯವನ್ನು ಸಲ್ಲಿಸಬೇಕೆಂದು ಎಲ್ಲ ದೇವತೆಗಳೂ ನಿನ್ನೊಟ್ಟಿಗೆ ಅವತರಿಸಿ ನಿನ್ನ ಲೀಲೆಗಳನ್ನು ಅನುಕರಿಸುತ್ತ ನಿನ್ನ ಜೊತೆಗೇ ಇರುತ್ತಾರೆ. ಮತ್ತು ಸುರಸುಂದರಿಯರನ್ನು ಮೊದಲು ಗೋಕುಲದಲ್ಲಿ ಗೋಪಿಕಾಸ್ತ್ರೀಯರ ರೂಪದಿಂದ ಅವತಾರವನ್ನು ಮಾಡಿಸಿ ಅನಂತರ ಕ್ರೀಡಾರ್ಥವಾಗಿ ನೀನು ಅವತಾರ ಮಾಡಿರುವಿ. ನಾನು ನಿನ್ನ ಅಂಶದಿಂದೊಡಗೂಡಿ ಹುಟ್ಟಿ ಬಂದಿದ್ದೇನೆ. ಇಲ್ಲಿ ಅವತಾರ ಮಾಡಿರುವ ನಮ್ಮಿಬ್ಬರಿಗೂ ಈ ಗೋಪ - ಗೋಪಿಯರೇ ಬಾಂಧವರಾಗಿದ್ದಾರೆ. ಭಕ್ತರಾದ ಈ ಬಂಧು-ಬಳಗವನ್ನು ನೀನು ಏಕೆ ಉಪೇಕ್ಷಿಸಿ ಬಿಡುತ್ತೀ! ನೀನು ಈಗ ಮಾನುಷಭಾವವನ್ನು ತೋರಿಸಿದಂತಾಯಿತು. ನಿನ್ನ ಬಾಲ ಚಾಪಲ್ಯವನ್ನು ತೀರಿಸಿಕೊಂಡಂತಾಯಿತು. ಕಾರಣ ಇನ್ನು ಮೇಲಾದರೂ ಕೃಷ್ಣ ಕಂಡವರನ್ನೆಲ್ಲ ಹಲ್ಲಿನಿಂದ ಕಚ್ಚಿ ಚುಚ್ಚಿ ಕೊಲ್ಲುವ ಈ ದುಷ್ಟ ಕಾಲಿಯ ನಾಗನನ್ನು ದಮನ ಮಾಡು.''

## ಹಾವಿನ ಹೆಡೆಯ ಮೇಲೆ ಕೃಷ್ಣನ ನಾಟ್ಯ

ಈ ರೀತಿಯಾಗಿ ಬಲರಾಮನು ಬಿನ್ನವಿಸಿ ಕೃಷ್ಣನಿಗೆ ಕರ್ತವ್ಯದ ಕರೆ ಕೊಟ್ಟಾಗ ಅವನು ತನ್ನ ಪಕಳೆ ದುಟಿದೆರೆದು ಮಿದುವಾಗಿ ನಕ್ಕನು. ಮೈಒಡ ಮುರಿದು ಮೇಲಕ್ಕೆ ಎದ್ದನು. ಅವನು ಬಿರುಸಾಗಿ ಕೈ ಕೊಡವಿ ಎದ್ದ ಕೂಡಲೇ ಆ ಕಾಲಿಯ ಸರ್ಪ ಕುಟುಂಬದವರ ಬಿಗಿದ ನಾಗಪಾಶ ಬಂಧನವು ತಾನಾಗಿ ಕಳಚಿ ಬಿದ್ದಿತು. ಕೃಷ್ಣನು ತನ್ನ ಎರಡೂ ಕೈಗಳಿಂದ ನಾಗನನ್ನು ಹಿಡಿದು ಮಣಿಸಿ ಆತನ ನಡುವಿನ ಹೆಡೆಯ ಮೇಲೆಯೇ ತನ್ನ ಅಡಿಯನ್ನಿರಿಸಿದನು. ಕೃಷ್ಣನ ಪಾದಪಾತದಿಂದ ಅವನ ಬಲ ಕುಗ್ಗಿ, ತಲೆ ತಗ್ಗಿ ಹೋಯಿತು. ಬಾಗಿದ ಆ ನಾಗಪತಿಯ ಫಣಾಮಂಡಲದಲ್ಲಿ ಬಾಲಗೋಪಾಲನ ಸ್ವಚ್ಛಂದ ಲೀಲಾತಾಂಡವವು ನಡೆಯಿತು. ಅವನನ್ನು ಕಚ್ಚಬೇಕೆಂದು ಎತ್ತಿದ ಹೆಡೆಯಮೇಲೆಯೇ ತನ್ನ ಚರಣವನ್ನಿಟ್ಟು ಕೃಷ್ಣನು ಒತ್ತಿ ಬಿಡುತ್ತಿದ್ದನು. ಆದರಿಂದ ಅದು ನೆತ್ತರ ಕಾರುತ್ತ ನಮ್ರವಾಗಿಬಿಡುತ್ತಿತ್ತು. ಪ್ರಶಸ್ತವಾದ ಆ ಪನ್ನಗಪತಿಯ ಫಣಾಮಂಡಲದ ಮೇಲೆ ಕೃಷ್ಣನು ಕುಂಡಲಾಕಾರವಾಗಿ ಕುಣಿದನು. ದಂಡಪಾತವೆಂಬ ಪ್ರಚಂಡ ನವನಾಟ್ಯವನ್ನು ಅಭಿನಯಿಸಿದನು. ಅವನ ಚಪಲ ಚರಣಗಳ ಮತ್ತು ನೃತ್ಯದ ತೊತ್ತುಳಿದಾಟ ಹಾಗೂ ಲತ್ತಾ ಪ್ರಹಾರಗಳಿಂದ ಕಾಲಿಯನು ಮೂರ್ಛಿತನಾದನು. ಅವನ ಎಲ್ಲ ಹೆಡೆಗಳಿಂದಲೂ ರಕ್ತದ ಕೋಡಿ ಹರಿಯಿತು. ಅವನ ಹೆಡೆಗಳೆಲ್ಲ ಒಡೆದು ಸಿಡಿದು ಹೋದವು. ಮುಖ ಮೈಗಳಿಂದ ನೆತ್ತರ ಬಸಿಯಹತ್ತಿತು. ಅವನ ಈ ದುರ್ದಶೆಯನ್ನು ಕಂಡು ಅವನ ಮಡದಿಯರಾದ ನಾಗನಾರಿಯರು ಓಡಿ ಬಂದು ಭಯ ಭ್ರಾಂತರಾಗಿ ಕೃಷ್ಣನಿಗೆ ಕೈಮುಗಿದು ಪ್ರಾರ್ಥಿಸಹತ್ತಿದರು.

### ನಾಗಪತ್ನ್ಯಃ ಊಚುಃ

''ಜ್ಞಾತೋಽಸಿ ದೇವದೇವೇಶ ಸರ್ವಜ್ಞಸ್ತ್ವ ಮನುತ್ತಮ ।
ಪರಂಜ್ಯೋತಿರಚಿಂತ್ಯಂ ಯತಃ ತದಂಶಃ ಪರಮೇಶ್ವರಃ ॥

ನ ಸಮರ್ಥಾಃ ಸುರಾಸ್ತೋತುಂ ಯಮನನ್ಯ ಭವಂ ವಿಭುಂ ।
ಸ್ವರೂಪ ವರ್ಣನಂ ತಸ್ಯ ಕಥಂ ಯೋಷಿತ್ ಕರಿಷ್ಯತಿ ॥
ನ ಯಸ್ಯ ಜನ್ಮನೇ ಧಾತಾ ಯಸ್ಯ ಚಾಂತಾಯ ನಾಂತಕಃ ।
ಸ್ಥಿತಿಕರ್ತಾ ನ ಚಾನ್ಯೋಽಸ್ತಿ ಯಸ್ಯ ತಸ್ಮೈ ನಮಸ್ಸದಾ ॥
ಕೋಪಃ ಸ್ವಲ್ಪೋಽಪಿ ತೇ ನಾಸ್ತಿ ಸ್ಥಿತಿ ಪಾಲನಮೇವ ತೇ ।
ಕಾರಣಂ ಕಾಲಿಯಸ್ಯಾಸ್ಯ ದಮನೇ ಶ್ರೂಯತಾಂ ವಚಃ ॥
ಸ್ತ್ರಿಯೋಽನುಕಂಪ್ಯಾಃ ಸಾಧೂನಾಂ ಮೂಢಾ ದೀನಾಶ್ಚ ಜಂತವಃ ।
ಯತಸ್ತತೋಽಸ್ಯ ದೀನಸ್ಯ ಕ್ಷಮ್ಯತಾಂ ಕ್ಷಮತಾಂ ವರ ॥
ಸಮಸ್ತ ಜಗದಾಧಾರೋ ಭವಾನ್ ಅಲ್ಪಬಲಃ ಫಣೀ ।
ತ್ವತ್ಪಾದ ಪೀಡಿತೋ ಜಹ್ಯಾತ್ ಮೂಹೂರ್ತಾರ್ಧೇನ ಜೀವಿತಮ್ ॥
ಕ್ವ ಪನ್ನಗೋಽಲ್ಪವೀರ್ಯೋಽಯಂ ಕ್ವ ಭಗವಾನ್ ಭುವನಾಶ್ರಯಃ ।
ಪ್ರೀತಿದ್ವೇಷೌ ಸಮೋತ್ಕೃಷ್ಟ ಗೋಚರೌ ಭವತೋಽವ್ಯಯ ॥
ತತಃಕುರು ಜಗತ್ಸ್ವಾಮಿನ್ ಪ್ರಸಾದಮವಸೀದತಃ ।
ಪ್ರಾಣಾಂಸ್ತ್ಯಜತಿ ನಾಗೋಯಂ ಭರ್ತೃ ಭಿಕ್ಷಾಂ ಪ್ರಯಚ್ಛ ನಃ ॥
ಭುವನೇಶ ಜಗನ್ನಾಥ ಮಹಾಪುರುಷ ಪೂರ್ವಜ।
ಪ್ರಾಣಾಂಸ್ತ್ಯಜತಿ ನಾಗೋಽಯಂ ಭರ್ತೃ ಭಿಕ್ಷಾಂ ಪ್ರಯಚ್ಛ ನಃ ॥
ವೇದಾಂತ ವೇದ ದೇವೇಶ ದುಷ್ಟದೈತ್ಯ ನಿಬರ್ಹಣ ।
ಪ್ರಾಣಾಂಸ್ತ್ಯಜತಿ ನಾಗೋಽಯಂ ಭರ್ತೃಭಿಕ್ಷಾ ಪ್ರದೀಯತಾಂ ॥

''ಸ್ವಾಮಿ, ನಮಗೆ ಈಗ ತಿಳಿಯಿತು, ನೀನು ಸಾಕ್ಷಾತ್ ಪರಮೇಶ್ವರ ಎಂದು. ಎಲ್ಲ ದೇವತೆಗಳಿಗೂ ನೀನು ದೇವರು. ಎಲ್ಲವನ್ನು ಬಲ್ಲವನು ನೀನು. ನಿನಗಿಂತ ಉತ್ತಮರು ಯಾರು ಇಲ್ಲ. ಯಾರು ಅರಿಯಲಾರದ ಪರಂಜ್ಯೋತಿಯ ಸಾಕ್ಷಾತ್ ಅವತಾರನೇ ನೀನು. ದೇವತೆಗಳೂ ನಿನ್ನನ್ನು ಬಣ್ಣಿಸಲು ಆರರು. ನೀನು ಬೇರೆ ಯಾರಿಂದಲೂ ಹುಟ್ಟಲಿಲ್ಲ. ಸ್ವಯಂಭೂ. ಇಂಥ ನಿನ್ನ ಸ್ವರೂಪವನ್ನು ನಮ್ಮಂಥ ಹೆಣ್ಣು ಹೇಗೆ ಬಣ್ಣಿಸಿತು ! ಸ್ವಾಮಿ, ನಿನ್ನನ್ನು ಹುಟ್ಟಿಸುವ ಬೇರೆ ಬ್ರಹ್ಮದೇವನಿಲ್ಲ. ಕೊಲ್ಲಲು ಯಮನೂ ಇಲ್ಲ ರಕ್ಷಿಸುವವನೂ ಬೇರೊಬ್ಬನಿಲ್ಲ ಈ ಕಾಲಿಯನನ್ನು ನೀನು ದಮನ ಮಾಡ ಹೊರಟದ್ದು ಲೋಕಪಾಲನೆಗಾಗಿಯೇ. ದಯಮಾಡಿ ನಮ್ಮ ಬಿನ್ನಪವನ್ನಾಲಿಸು. ದೊಡ್ಡವರು ಹೆಂಗಳೆಯರ ಮೇಲೆ ದಯೆತೋರುವವರು. ಮೂಢ ದೀನರ ಮೇಲೆಯೂ ಬುದ್ಧಿ ಹೀನರ ಮೇಲೆಯೂ ಕರುಣೆ ಬೀರುವರು ಆದುದರಿಂದ ಈ ದೀನದಲಿತನಾದ ಈ ಕಾಲಿಯನನ್ನು ಕ್ಷಮಿಸಬೇಕು. ಕ್ಷಮೆಯುಳ್ಳವರಲ್ಲಿ ನೀನೇ ಶ್ರೇಷ್ಠನಲ್ಲವೇ ? ಭಗವನ್, ಹದಿನಾಲ್ಕು ಲೋಕಗಳನ್ನು ಹೊತ್ತ ಹರಿ ನೀನು. ಈ ಕಾಲಿಯನೋ ಅತ್ಯಲ್ಪ ಬಲವುಳ್ಳ ಒಂದು ಹೀನ ಹಾವು. ನಿನ್ನ ಚರಣಾಘಾತಗಳಿಂದ ಅರೆಚಣದಲ್ಲಿ ಪ್ರಾಣ ಬಿಡುವನು. ಆದುದರಿಂದ

ಜಗದೊಡೆಯ ಸಾವನ್ನು ಅಪ್ಪಲಿರುವ ಈ ಹಾವಿಗೆ ಕರುಣೆದೋರು. ಈ ಪನ್ನಗವು ಪ್ರಾಣ ಬಿಡುತ್ತಲಿದೆ. ಅವನ ಸರ್ವ ಕುಟುಂಬಿನಿಯರಾದ ನಮಗೆ ಪತಿ ಭಿಕ್ಷೆಯನ್ನು ಕರುಣಿಸು. ಪ್ರಪಂಚಕ್ಕೆಲ್ಲ ಏಕಮಾತ್ರ ಪ್ರಭುವಾದ, ಜಗದಾದಿಯಾದ ಶ್ರೀ ಕೃಷ್ಣ, ನೀನು ಮಹಾಪುರುಷನಲ್ಲವೇ! ಜೀವ ಬಿಡುವ ಈ ಹಾವಿಗೆ ಪ್ರಸನ್ನನಾಗು. ಅವನ ಮಡದಿಯರಾದ ನಮಗೆ ಮಾಂಗಲ್ಯ ಭಿಕ್ಷೆಯನ್ನು ಕೊಡು. ವೇದಾಂತ ವೇದ್ಯನೂ, ದುಷ್ಟ ದೈತ್ಯರನ್ನು ನಿಗ್ರಹಿಸುವವನೂ ಆದ ದೇವ ದೇವ, ಈ ಕಾಲಿಯ ಸರ್ಪನು ಸಾಯಲಾಗಿದ್ದಾನೆ. ನಮಗೆ ಪತಿಭಿಕ್ಷೆಯನ್ನು ಕರುಣಿಸು''.

ಇಂತು ನಾಗ - ಪತ್ನಿಯರು ಬಾಗಿ ಬಿನ್ನವಿಸಿದ ಬಳಿಕ ಕಾಲಿಯನೂ ಕೂಡ ದಣಿದು, ಮಣಿದು, ಗಾಯಗೊಂಡ ತನ್ನ ದೇಹವನ್ನು ಹೇಗೋ ಸಾವರಿಸಿಕೊಂಡು ಭಗವಂತನ ಎದುರು ಬಾಗಿ ಕ್ಷೀಣವಾದ ಧ್ವನಿಯಲ್ಲಿ ಇಂತು ಉಸುರಿದನು. ''ದೇವತೆಗಳ ಒಡೆಯ, ಪ್ರಸನ್ನನಾಗು.'' ಕೃಷ್ಣನನ್ನು ನಮಿಸಿ ಬೇಡಿಕೊಂಡಿದ್ದರ ಫಲವಾಗಿ ಕಾಲಿಯನ ಜರ್ಜರವಾದ ದೇಹದಲ್ಲಿ ತುಸು ಬಲ ಬಂದಂತಾಯಿತು. ಚೆನ್ನಾಗಿ ಮಾತಾಡಲೂ ಬಾಯಿ ಬಂದಿತು. ಅವನು ಭಕ್ತಿಯಿಂದ ಭಗವಂತನನ್ನು ಬಣ್ಣಿಸತೊಡಗಿದ.

## ಕಾಲಿಯ ಉವಾಚ

''ತವಾಷ್ಟಗುಣಮೈಶ್ವರ್ಯಂ ನಾಥ ಸ್ವಾಭಾವಿಕಂ ಪರಂ ।
ನಿರಸ್ತಾತಿಶಯಂ ಯಸ್ಯ ತಸ್ಯ ಸ್ತೋಷ್ಯಾಮಿ ಕಿಂ ನ್ವಹಮ್ ॥
ಬ್ರಹ್ಮಾದ್ಯೈರರ್ಚಿತೋ ಯಸ್ತು ಗಂಧ ಪುಷ್ಪಾನು ಲೇಪನೈಃ ।
ನಂದನಾದಿ ಸಮುದ್ಭೂತೈಃ ಸೋಽರ್ಚ್ಯತೇ ನು ಕಥಂ ಮಯಾ ॥
ಯಸ್ಯಾವತಾರ ರೂಪಾಣಿ ದೇವರಾಜಃ ಸದಾರ್ಚತಿ ।
ನ ವೇತ್ತಿ ಪರಮಂ ರೂಪಂ ಸೋಽರ್ಚ್ಯತೇ ವಾ ಕಥಂ ಮಯಾ ॥
ಹೃದಿ ಸಂಕಲ್ಪ್ಯ ಯದ್ರೂಪಂ ಧ್ಯಾನೇನಾರ್ಚಂತಿ ಯೋಗಿನಃ ।
ಭಾವಪುಷ್ಪಾದಿನಾ ನಾಥಃ ಸೋಽರ್ಚ್ಯತೇ ವಾ ಕಥಂ ಮಯಾ ॥
ಸರ್ಪಜಾತಿರಿಯಂ ಕ್ರೂರಾ ಯಸ್ಯಾ ಜಾತೋಽಸ್ಮಿ ಕೇಶವ ।
ತತ್ಸ್ವಭಾವೋಽಯಮತ್ರಾಸ್ತಿ ನಾಪರಾಧೋ ಮಮಾಚ್ಯುತ ॥
ಸೃಜ್ಯತೇ ಭವತಾ ಸರ್ವಂ ತಥಾ ಸಂಹ್ರಿಯತೇ ಜಗತ್ ।
ಜಾತಿರೂಪ ಸ್ವಭಾವಶ್ಚ ಸೃಜ್ಯಂತೇ ಸೃಜತಾ ತ್ವಯಾ ॥
ಯಥಾಹಂ ಭವತಾ ಸೃಷ್ಟೋ ಜಾತ್ಯಾ ರೂಪೇನ ಚೇಶ್ವರ ।
ಸ್ವಭಾವೇನ ಚ ಸಂಯುಕ್ತಃ ತಥೇದಂ ಚೇಷ್ಟಿತಂ ಮಯಾ ॥
ಯದ್ಯನ್ಯಥಾ ಪ್ರವರ್ತೇಯಂ ದೇವ ದೇವ ತತೋ ಮಯಿ ।
ನ್ಯಾಯೋ ದಂಡನಿಪಾತೋ ವೈ ತವೈವ ವಚನಂ ಯಥಾ ॥

**ತಥಾಪ್ಯಜ್ಞೇ ಜಗತ್ಸ್ವಾಮಿನ್ ದಂಡಂ ಪಾತಿತವಾನ್ಮಯಿ ।**
**ಸ ಶ್ಲಾಘೋಽಯಂ ವರೋ ದಂಡಃ ತ್ವತ್ತೋಽಮೇ ನಾನ್ಯತೋ ವರಃ ॥**
**ಹತವೀರ್ಯೋ ಹತವಿಷೋ ದಮಿತೋಽಹಂ ತ್ವಯಾಚ್ಯುತ ।**
**ಜೀವಿತಂ ದೀಯತಾಮೇಕಮಾಜ್ಞಾಪಯ ಕರೋಮಿ ಕಿಂ ॥'**

''ಸ್ವಾಮಿನ್, ಜನ್ಮಾದ್ಯಷ್ಟ ಕರ್ತೃತ್ವ ರೂಪವಾದ ನಿನ್ನ ಗುಣಸಂಪದವು ಸ್ವಾಭಾವಿಕವಾದದ್ದು. ನಿನಗಿಂತ ಮಿಗಿಲಿಲ್ಲ. ನಿನ್ನ ಐಶ್ವರ್ಯಕ್ಕೆ ಎಣೆ ಇಲ್ಲ. ಇಂಥ ನಿನ್ನನ್ನು ನಾನೆಂತು ಸ್ತುತಿಸಬಲ್ಲೆ! ಬ್ರಹ್ಮನೇ ಮೊದಲಾದ ದೇವತೆಗಳು ನಂದನ ವನದ ಹೂಗಳಿಂದ ನಿನ್ನನ್ನು ಪೂಜಿಸುವಾಗ, ನಾನೆಂತು ಪೂಜಿಸಬಲ್ಲೆ? ಮನಸ್ಸಿನಲ್ಲಿ ನಿನ್ನ ಮೂರುತಿಯನ್ನು ನಿಲ್ಲಿಸಿಗೊಂಡು ಯೋಗಿಗಳು ತಮ್ಮ ಭಾವಪುಷ್ಪದಿಂದ ಅರ್ಚಿಸಿ ನಿನ್ನ ಮಾನಸ ಪೂಜೆಯನ್ನು ಮಾಡುವಾಗ, ನಾನಾವ ಪೂಜೆಯಿಂದ ಅರ್ಚಿಸಲಿ! ಕೇಶವ, ನಾನು ಹುಟ್ಟಿದುದು ಕ್ರೂರವಾದ ಹಾವಿನ ಜಾತಿಯಲ್ಲಿ. ಅದಕ್ಕೆ ಅನುಗುಣವಾಗಿ ಕ್ರೂರಕರ್ಮವನ್ನು ಮಾಡಿದ್ದೇನೆ. ಇದರಲ್ಲಿ ನನ್ನದೇನು ತಪ್ಪಿದೆ?

ಈ ಜಗತ್ತನ್ನೆಲ್ಲ ನೀನೇ ಸೃಷ್ಟಿ ಮಾಡಿರುವೆ. ನೀನೇ ಸಂಹಾರ ಮಾಡುವೆ. ಆ ಜಾತಿಗೆ ಅನುಗುಣವಾದ ಪ್ರಾಣಿಗಳ ಸ್ವಭಾವವನ್ನು ರೂಪಿಸಿದವನೂ ನೀನೇ. ನೀನು ಯಾವ ಜಾತಿಯ ಯಾವ ಸ್ವಬಾವವುಳ್ಳ ಪ್ರಾಣಿಯನ್ನಾಗಿ ನನ್ನನ್ನು ಸೃಷ್ಟಿ ಮಾಡಿರುವೆಯೋ ಅದಕ್ಕೆ ತಕ್ಕ ಕಾರ್ಯವನ್ನೇ ನಾನು ಮಾಡಿದ್ದೇನೆ. ನಿನ್ನ ಸೃಷ್ಟಿ ಕ್ರಮಕ್ಕೆ ವಿರುದ್ಧವಾಗಿ ನಾನೇನಾದರೂ ಆಚರಣ ಮಾಡಿದ್ದರೆ ನೀನು ನನ್ನನ್ನು ದಂಡಿಸುವುದು ನ್ಯಾಯ. ಆದರೂ ಅಜ್ಞನಾದ ನನ್ನನ್ನು ನೀನು ಈಗ ದಮನ ಮಾಡಿದ್ದು ಯೋಗ್ಯವಾಗಿದೆ. ಮತ್ತು ಶ್ಲಾಘ್ಯವೂ ಆಗಿದೆ. ನಿನ್ನ ಕೈಯಿಂದ ಶಾಸನವಾಗುವುದೇ ನನಗೊಂದು ವರವಿದ್ದಂತೆ. ಸ್ವಾಮಿ ಅಚ್ಯುತ, ನನ್ನ ಶಕ್ತಿ ವೀರ್ಯಗಳೆಲ್ಲ ಉಡುಗಿವೆ. ವಿಷದ ಉಲ್ಬಣತೆಯೂ ಅಡಗಿದೆ. ನನ್ನನ್ನು ನೀನು ಚೆನ್ನಾಗಿ ದಮನ ಮಾಡಿರುವೆ. ಇನ್ನು ನನಗೆ ಜೀವದಾನಕೊಡು. ನೀನು ಹೇಳಿದ ಮಾತನ್ನು ಕೇಳುತ್ತೇನೆ, ಅಪ್ಪಣೆಯೇನು ತಿಳಿಸು'' ಎಂದು ಕೈಮುಗಿದು ಕೇಳಿಕೊಂಡನು. ಆಗ ಶ್ರೀ ಕೃಷ್ಣನು ಆ ಕಾಲಿಯ ಸರ್ಪವನ್ನು ಕೈಬಿಟ್ಟು ಅವನಿಗೆ ಜೀವದಾನ ಕೊಟ್ಟು ಕರುಣೆಯಿಂದ ಇಂತು ನುಡಿದನು.

''ಕಾಲಿಯ, ನೀನಿನ್ನು ಮೇಲೆ ಈ ಯಮುನಾ ನದಿಯಲ್ಲಿರತಕ್ಕದ್ದಲ್ಲ. ಮಡದಿ ಮಕ್ಕಳ ಪರಿವಾರವನ್ನೆಲ್ಲ ಕಟ್ಟಿಕೊಂಡು ಸಮುದ್ರಕ್ಕೆ ಹೋಗು. ಇದೀಗ ನಾನು ನಿನ್ನ ಹೆಡೆಮುಡಿಗಳಲ್ಲಿ ನನ್ನ ಅಡಿಗಳನ್ನರಿಸಿ ಕುಣಿದಾಡಿದ್ದೂ ಕೂಡ ನಿನ್ನ ಹಿತಕ್ಕಾಗಿಯೇ. ನಿನ್ನ ಫಣಾಮಂಡಲದ ಮೇಲೆ ಮೂಡಿದ ನನ್ನ ಪಾದಚಿನ್ಹಗಳನ್ನು ಕಂಡು ನಿನ್ನ ಜಾತಿ ವೈರಿಯಾದ ಗರುಡನು ಇನ್ನು ನಿನಗೆ ಬಾಧಕ ಮಾಡಲಾರ. ನೀನು ಸಮುದ್ರದಲ್ಲಿ ವಾಸ ಮಾಡಿದರೂ ನಿನ್ನ ತಲೆಯ ಮೇಲೆ ಚಿತ್ರಿತವಾದ ನನ್ನ ಚರಣ ಚಿಹ್ನವನ್ನು ಕಂಡು ಸರ್ಪಶತ್ರುವಾದ ಗರುಡನು ಹೊಡೆಯಲಾರ. ನಿನ್ನನ್ನು ಹಿಡಿಯಲೂ ಆರ.'' ಭಗವಂತನು ಕಾಲಿಯನಿಗೆ ಹೀಗೆ ಆದೇಶವಿತ್ತು ಅವನನ್ನು ಬಿಟ್ಟುಕೊಟ್ಟನು. ಆಗ ಕಾಲಿಯ

ಕೃಷ್ಣ ಸರ್ಪನು ಕೃಷ್ಣನ ಚರಣಗಳಿಗೆ ನಮಿಸಿ ಕಡಲಿನೆಡೆಗೆ ನಡೆದನು. ಅವನ ಎಲ್ಲ ನಾಗನಾರಿಯರೂ, ಪನ್ನಗ ಪುತ್ರರೂ, ನಾಗಭೃತ್ಯರೂ ಅವನೊಡನೆಯೇ ಯಮುನೆಯ ಮಡುವನ್ನು ಬಿಟ್ಟು ಎಲ್ಲ ಪ್ರಾಣಿಗಳ ಕಣ್ಣೆದುರೇ ಹೊರಟು ಹೋದರು.

ಕಾಲಿಯನು ಕಾಣೆಯಾದ ಬಳಿಕ ಗೋಪಾಲಕರು ಮರಣ ಹೊಂದಿ ಮತ್ತೆ ಹುಟ್ಟಿ ಬಂದಂತಿರುವ ಕೃಷ್ಣನನ್ನು ಕಂಡು ಹರ್ಷಬಾಷ್ಪಗಳನ್ನು ಉದುರಿಸಿದರು. ಕೃಷ್ಣನ ಈ ಕಾಲಿಯಮರ್ದನದ ಕೃತಿಯನ್ನು ಕಂಡು ಎಲ್ಲರಿಗೂ ಕೌತುಕವೆನಿಸಿತು. ಗೋವಿಂದನ ದೃಷ್ಟಿ ಪ್ರಸಾದದಿಂದ ಯಮುನೆಯ ನೀರು ವಿಷವಳಿದು, ಕಹಿ ಕಳೆದು, ಮೊದಲಿನಂತೆ ಮತ್ತೆ ತಿಳಿಗಟ್ಟಿ ಸ್ವಚ್ಛ ಸುಂದರವಾಗಿ ಶೋಭಿಸಿತು. ಸವಿ ಕಟ್ಟಾಗಿ ಹೊಳೆಯಿತು. ಗವಳಿಗರೆಲ್ಲರೂ ಅವನ ಈ ಗೈಮೆಯನ್ನು ಗಾನರೂಪದಿಂದ ಹಾಡಿದರು. ಗೋಪವನಿತೆಯರು ಗೀತಗಾಥಾರೂಪವಾಗಿ ಈ ಕೃಷ್ಣ ಚರಿತ್ರವನ್ನು ಪಾಡಿದರು. ಅವರೆಲ್ಲರ ಬಗೆ ಬಗೆಯ ಬಣ್ಣನೆಗಳನ್ನು ಕೇಳುತ್ತ ಕೃಷ್ಣನು ವೃಂದಾವನಕ್ಕೆ ಮರಳಿದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಐದನೇ ಅಂಶದ ಏಳನೇ ಅಧ್ಯಾಯ ಸಂಪೂರ್ಣ*



# ಬಲರಾಮನಿಂದ ಧೇನುಕಾಸುರನ ವಧೆ

ಅಧ್ಯಾಯ - ೮

ಹಸುಗಳನ್ನು ಕಾಯಲಿಕ್ಕಾಗಿ ರಾಮ-ಕೃಷ್ಣರು ಅನುದಿನವು ವನ-ವನ ತಿರುಗುತ್ತಿದ್ದರು. ಹಸಿರು ಕುಸುರೊಡೆದು ಕಸುವಿನಿಂದ ಬೆಳೆದ ಹಚ್ಚಗಿನ ಹುಲ್ಲು ಪಯರನ್ನು ಕಂಡಲ್ಲೆ ಅವರು ತಮ್ಮ ದನಗಳ ಹಿಂಡನ್ನು ಕೊಂಡೊಯ್ದು ಮೇಯಿಸಿಕೊಂಡು ಬರುತ್ತಿದ್ದರು. ವೃಂದಾವನದಿಂದ ತುಸು ದೂರ ವನಾಂತರದಲ್ಲಿ ಫಲಭರಿತವಾದ ಒಂದು ತಾಲ - ವನವಿದ್ದಿತು. ಧೇನುಕ ಎಂಬ ದೈತ್ಯನು ಕತ್ತೆಯ ರೂಪವನ್ನು ತೊಟ್ಟು ಮೃಗಗಳ ಮಾಂಸವನ್ನು ತಿಂದು ಅದನ್ನು ಕಾಯುತ್ತಲಿದ್ದನು. ರಸ ತುಂಬಿದ ಹಣ್ಣುಗಳ ಭಾರದಿಂದ ಬಾಗಿನಿಂದ ಆ ತಾಳೆ ಬನವನ್ನು ಕಂಡು ಗೋಪಾಲಕರಿಗೆ ಆಶೆಯಾಯಿತು. ಅಲ್ಲಿಯ ಪಕ್ವಫಲಗಳನ್ನು ಹರಿದು ತಿನ್ನಬೇಕೆಂದು ಚಪಲ ಉಂಟಾದ ಆ ಗೋವಳ ಬಾಲಕರು ರಾಮಕೃಷ್ಣರಿಗೆ ಬಿನ್ನವಿಸಿದರು.

''ಸೋದರರೆ, ಈ ತಾಳೆ ಬನವನ್ನು ಧೇನುಕಾಸುರನು ಹಗಲಿರುಳೂ ಜಾಗರೂಕನಾಗಿ ರಕ್ಷಿಸುತ್ತಿದ್ದಾನೆ. ಕಳಿತ ಹಣ್ಣುಗಳ ಮಧುರ ವಾಸನೆಯು ನಮ್ಮ ನಾಲಿಗೆಯಲ್ಲಿ ನೀರನ್ನು ಊರಿಸಿದೆ. ಈ ಹಣ್ಣುಗಳ ತನಿರಸದ ಸುಗಂಧವು ದಶೆದಸೆಗೂ ಹರಡಿದೆ. ನಮಗೇನೋ ಅದನ್ನು ತಿನ್ನಬೇಕೆಂದು ಅಭಿಲಾಷೆಯಾಗಿದೆ. ಇದು ನಿಮಗೆ ಸಮ್ಮತವಾದಲ್ಲಿ ಈ ಹಣ್ಣುಗಳನ್ನು ಉದುರಿಸಿರಿ'' ಗವಳಿಗ ಗೆಳೆಯರ ಈ ಬಯಕೆಯನ್ನು ಕೇಳಿ ಬಲರಾಮನು ಎದ್ದು ಗಿಡಗಳನ್ನು ಹಂದಾಡಿಸಿದನು. ಕೃಷ್ಣನು ಕೆಲವು ಗಿಡಗಳನ್ನು ಅಲುಗಾಡಿಸಿ ಕೆಲವು ಹಣ್ಣುಗಳನ್ನು ಬಳಬಳ ಉದುರಿಸಿದನು. ರಸದುಂಬಿದ ಹಣ್ಣುಗಳು ನೆಲಕ್ಕೆ ಬಿದ್ದ 'ಪಟಪಟ' ಶಬ್ದವನ್ನು ಕೇಳಿ ಧೇನಕಾಸುರನು ಇದ್ದಲ್ಲಿಂದ ಎದ್ದು ಬಂದನು. ಕಾಡುಕತ್ತೆಯ ರೂಪದಲ್ಲಿದ್ದ ಆ ದುಷ್ಟನು ಓಡುತ್ತ ಬಂದು ತನ್ನ ಎರಡೂ ಹಿಂಗಾಲುಗಳನ್ನು ಎತ್ತಿ ಬಲರಾಮನ ಎದೆಗೆ ಒದ್ದನು.

ಎತ್ತರ ನಿಲುವಿನ ತನ್ನ ಎದೆಗೆ ಹಿಂಗಾಲುಗಳನ್ನು ಎತ್ತರಿಸಿ ಜೋರಿನಿಂದ ಲತ್ತಾ ಪ್ರಹಾರವನ್ನಿತ್ತ ಆ ಕತ್ತೆ ದೈತ್ಯನ ಉನ್ಮತ್ತ ಕೃತ್ಯವನ್ನುಕಂಡು ಬಲರಾಮನಿಗೆ ಕೋಪಬಂದಿತು. ತನಗೆ ಏಟುಹಾಕಿದ ಆ ಕತ್ತೆಯ ಎರಡೂ ಹಿಂಗಾಲುಗಳನ್ನು ಗಟ್ಟಿಯಾಗಿ ಹಿಡಿದು ಮುಗಿಲಿನಲ್ಲಿ ಗಿಮಿ ಗಿಮಿ ತಿರುಗಿಸಿದನು. ಅವನ ಈ ವೇಗದ ತಿರುಗಿಸುವಿಕೆಯ ರಭಸಕ್ಕೆ ಆಕಾಶದಲ್ಲಿಯೇ ಉಸುರುಗಟ್ಟಿ ಆ ದುಷ್ಟ ದೈತ್ಯನ ಜೀವ ಹೋಯಿತು. ಆಗ ಬಲದೇವನು ಶವಪ್ರಾಯವಾದ ದೈತ್ಯ ಕತ್ತೆಯ ಶರೀರವನ್ನು ತನ್ನ ಮುಂದಿರುವ ಒಂದು ದೊಡ್ಡ ತಾಳೆಗಿಡದ ಮೇಲೆ ಒಗೆದನು. ಅವನ ಒಳ್ಳೆ ವೇಗದ ಎಸೆತದಿಂದ ಆ ತಾಳೇ ಗಿಡವು ಅದರ ಮುಂದಿನ ಇನ್ನೊಂದು ತಾಳೇಗಿಡಕ್ಕೆ ಅದು ಅದರ ಮುಂದಿನ ಮರಕ್ಕೆ, ಅದು ಮತ್ತೊಂದು,

ಮತ್ತೊಂದು ಮಗದೊಂದು, ಬಡಿದು ಬಾಗಿ ತಾಗಿ ಎಲ್ಲ ಗಿಡಗಳೂ ಒಂದಕ್ಕೊಂದು ಬಡೆದು ತಾಕಲಾಡಿ ಎಲ್ಲ ಗಿಡಗಳ ಹಣ್ಣುಗಳೂ ಪಳಪಳ ನೆಲಕ್ಕೆ ಉದುರಿಬಿದ್ದವು. ಆ ಧೇನುಕಾಸುರನು ಪರಿವಾರದ ಅನೇಕ ಕತ್ತೆಗಳೂ ತಮ್ಮ ಈ ವನ ವಿಧ್ವಂಸನದ ಕೃತ್ಯವನ್ನ ಕಂಡು ಕೋಪದಿಂದ ಕೆಂಡದಂತಾಗಿ ಗೋಪಕುಮಾರರ ಮೇಲೇರಿಬಂದವು. ಆಗ ರಾಮಕೃಷ್ಣರು ಅವರೆಲ್ಲರನ್ನೂ ಎತ್ತಿ ಮುಗಿಲಿನಲ್ಲಿ ಕಳ್ಳೆ-ಮಿಳ್ಳೆ ಆಡಿಸಿ ಮರಗಳ ಮೇಲೆಸೆದರು. ಹೀಗೆ ಕೆಲವೇ ಕ್ಷಣಗಳಲ್ಲಿ ಆ ತಾಳೇವನದ ತುಂಬ ಒಂದೆಡೆ ರಾಶಿ ರಾಶಿಯಾಗಿ ಉದುರಿಬಿದ್ದ ತಾಳೇ ಹಣ್ಣುಗಳು. ಇನ್ನೊಂದೆಡೆ ಸತ್ತುಬಿದ್ದ ಮತ್ತ ಕತ್ತೆಗಳು. ಅದೊಂದು ಪ್ರೇಕ್ಷಣೀಯ ದೃಶ್ಯವಾಗಿತ್ತು. ಅನಂತರ ಗೋಪಾಲಕರು ಆ ತನಿವಣ್ಣುಗಳನ್ನು ತಿಂದರು. ಮಾದಕವಾದ ಆ ತಾಡೀಫಲದ ರಸವನ್ನು ಹೀರಿದರು. ಮೀಸಲು ಮುರಿಯದ ಅಲ್ಲಿಯ ಹೊಸ ಹಸಿರು ಹುಲ್ಲಿನ ರಸಕವಳಗಳನ್ನು ತಮ್ಮ ಹಸುಗಳಿಗೆ ತಿನಿಸಿದರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಪಂಚಮಾಂಶದ ಎಂಟನೇ ಅಧ್ಯಾಯ ಸಂಪೂರ್ಣ*



## ರಾಮಕೃಷ್ಣರ ಲೀಲಾ ಖೇಲಾ ಕುತೂಹಲ

ಅಧ್ಯಾಯ - ೯

ಧೇನಾಕಾಸುರನು ತನ್ನ ಪರಿವಾರ ಸಹಿತವಾಗಿ ಕತ್ತೆಯ ರೂಪದಿಂದಲೇ ಮೃತ್ಯುಮುಖವನ್ನು ಸೇರಿದ ಬಳಿಕ ರಮಣೀಯವಾದ ಆ ತಾಳೆ ಬನವು ಗೋಪಾಲಬಾಲಕರಿಗೂ ಗೋಪಿಕಾ ಸ್ತ್ರೀಯರಿಗೂ ಮನದ ಬೇಸರವನ್ನು ಕಳೆಯುವ ಒಳ್ಳೇ ಉತ್ತಮವಾದ ಆಡುಂಬೊಲವಾಯಿತು. ರಾಮಕೃಷ್ಣರಿಬ್ಬರೂ ಆ ದುಷ್ಟಧೇನುಕ ದೈತ್ಯನನ್ನು ಕೊಂದು ಭಾಂಡೀರ ಎಂಬ ಆಲದ ಮರದ ಬಳಿಗೆ ಬಂದರು. ಶಾಖೋಪ ಶಾಖವಾಗಿ ಹಮ್ಮಿ ಬಾನಗಲ ಬೆಳೆದು ನಿಂತ ಆ ಹೆಮ್ಮರದ ದಟ್ಟ ನೆರಳಿನ ಕೆಳಗೆ ಗೆಳೆಯರೊಂದಿಗೆ ಅನೇಕ ಆಟಗಳನ್ನು ಆಡಿದರು. ಅನೇಕ ಹಾಡುಗಳನ್ನು ಹಾಡಿದರು. ಮತ್ತೆ ಅಲ್ಲಿಂದ ಗಿಡಮರಗಳನ್ನು ಹುಡುಕುತ್ತ ವನ-ವನ ಅಲೆದರು. ಹಚ್ಚ ಹಸಿರು ಮುರಿಯುವ ಹುಲ್ಲು ಹಾಸಿದಲ್ಲೆಲ್ಲ ತಮ್ಮ ಹಸುಗಳನ್ನು ಮೇಯಬಿಟ್ಟರು. ಪ್ರತಿಯೊಂದು ಕರುವಿಗೂ ಅವರು ಒಂದೊಂದು ಹೆಸರು ಇಟ್ಟಿದ್ದರು. ಪ್ರತಿಯೊಂದು ತರುವಿಗೂ ಒಂದೊಂದು ಹೆಸರು ಕೊಟ್ಟಿದ್ದರು. ಆ ಹೆಸರಿನಿಂದ ಕೂಗಿದ ಕೂಡಲೇ ಆ ತುರು-ಕರುಗಳು ಇದ್ದಲ್ಲಿಂದ ಓಡಿ ಬಂದು ನೇಹದಿಂದ ಇವರ ಅಡಿತಡಿಗಳನ್ನು ಮೂಸುತ್ತಿದ್ದವು. ವನಮಾಲೆಯಿಂದ ಭೂಷಿತರಾದ ಆ ರಾಮಕೃಷ್ಣರು ಯಮುನಾ ತೀರದ ವಿಪಿನ ಗರ್ಭದಲ್ಲಿ ಹೊಸದಾಗಿ ಮೂಡಿದ ಕೋಡುಗಳುಳ್ಳ ಹೋರಿಗಳಂತೆ, ಇಂದ್ರಚಾಪದಿಂದ ಸುಂದರವಾದ ಕರಿಬಿಳಿ ಮೋಡಗಳಂತೆ, ವನಭೂಮಿಯ ಹಸಿರು ಹಾಸಿಗೆಯಲ್ಲಿ ಕಣ್ಗೆಸೆದರು. ವಿಶ್ವದ ಒಡೆಯರಾದ ಅವರಿಬ್ಬರೂ ಮಾನವರಾಗಿ ಅವತರಿಸಿ ಮನುಷ್ಯ ಜಾತಿಗೆ ಉಪಯುಕ್ತವಾದ ಆಟಗಳನ್ನಾಡಿ ನಲಿದರು. ಗೆಳೆಯರೊಂದಿಗೆ ಅವರಿಬ್ಬರೂ ಮರಬಳ್ಳಿಗಳ ಜೋಕಾಲಿ ಜೀಕಿದರು. ಮುಷ್ಟಿಯುದ್ಧ ಮಾಡಿ ಗುದ್ದಾಡಿದರು. ಕಲ್ಲುಗುಂಡುಗಳನ್ನು ಕಿತ್ತಿ ಎತ್ತಾಡಿದರು. ಕಾಷ್ಠ-ಶಿಲಾಯುಧಗಳನ್ನು ಒಬ್ಬರಿಗೊಬ್ಬರು ಎಸೆದಾಡಿದರು. ಬಗೆ ಬಗೆಯ ಆಟ-ಪಾಟಗಳನ್ನು ಆಡಿ ದಣಿದರು. ಕೂಗಿ ಕುಣಿದರು. ಬಗೆಬಗೆಯ ವ್ಯಾಯಾಮ ಮಾಡಿ ತಣಿದರು.

ರಾಮ-ಕೃಷ್ಣರ ವಿವಿಧ ಖೇಲಾಕುತೂಹಲವನ್ನೂ, ಲೀಲಾವಿಲಾಸವನ್ನೂ, ಕಂಡ ಪ್ರಲಂಬನೆಂಬ ದೈತ್ಯನು ಇದೇ ಆಟದ ನೆವದಿಂದ ರಾಮ-ಕೃಷ್ಣರಿಬ್ಬರನ್ನೂ ಹೊತ್ತು ಕೊಂಡೊಯ್ಯಬೇಕೆಂದು ಹೊಂಚು ಹಾಕಿದನು. ಅವರಿಗೆ ಗುರುತಾಗಬಾರದೆಂದು ಅವನು ಗೋಪಾಲ ಬಾಲಕರ ವೇಷವನ್ನೇ ತೊಟ್ಟುಕೊಂಡು ಆ ಗೋವಳ ಗೆಳೆಯರ ಗುಂಪಿನಲ್ಲಿ ಸೇರಿಕೊಂಡನು. ಆ ವಸುದೇವಕುಮಾರನನ್ನು ಸಂಹರಿಸಲು ಇದೇ ಒಳ್ಳೇ ಸಂಧಿ ಎಂದು ಆ ದೈತ್ಯನು ಭಾವಿಸಿದನು.

### ಹರಿಯ ಹರಿಣಾಕ್ರೀಡ

ಆ ಗೋಪಬಾಲರೆಲ್ಲರೂ 'ಹರಿಣಾಕ್ರೀಡ' ಎಂಬ ಜಿಂಕೆಯ ಆಟವನ್ನು ಸುರು ಮಾಡಿದರು. ಈ ಚಿಗರೆಯಾಟದಲ್ಲಿ ಇಬ್ಬಿಬ್ಬರು ಬಾಲಕರು ಜೋಡಾಗಿ ಚಿಗರೆಯಂತೆ

ಜಗಿಯುತ್ತ ಹೋಗಬೇಕು. ನಿರ್ದಿಷ್ಟ ಗುರಿಯನ್ನು ಮೊದಲು ಮುಟ್ಟಿದವರು ಗೆದ್ದಂತೆ. ಅವರಿಬ್ಬರಲ್ಲಿ ಸೋತ ಹುಡುಗನು ಗೆದ್ದ ಹುಡುಗನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡು ತಾವು ಹೊರಟಸ್ಥಳಕ್ಕೆ ಓಡುವುದು. ಇದಕ್ಕೆ 'ಹರಿಣಾಕ್ರೀಡ' ಎಂದು ಹೆಸರು. ಈ ಆಟವನ್ನಾಡಲು ಉಪಕ್ರಮಿಸಿದರು. ಗೋಪಾಲ ಬಾಲಕರು ಜೋಡಿ ಜೋಡಿಯಾಗಿ ಜಗಿಯುತ್ತ ಓಡತೊಡಗಿದರು. ಕೃಷ್ಣನ ಜೊತೆಗೆ ಶ್ರೀದಾಮ ಎಂಬ ಗೋಪಕುಮಾರನು, ಬಲರಾಮನ ಜೊತೆಗೆ ಗೋಪವೇಷದಲ್ಲಿ ಗೂಢನಾಗಿ ಬಂದ ಪ್ರಲಂಭಾಸುರನೂ, ಜತ್ತಾಗಿ ಜಗಿಯತೊಡಗಿದರು. ಈ ಚಿಗರೆ ಜಗಿತದಲ್ಲಿ ಕೃಷ್ಣನು ಶ್ರೀದಾಮನನ್ನೂ, ಬಲರಾಮನು ಪ್ರಲಂಬಾಸುರನನ್ನೂ ಸೋಲಿಸಿ ಗೆದ್ದರು. ಇದರಂತೆ ಉಳಿದ ಕೃಷ್ಣನ ಪಕ್ಷದವರು ಬಲರಾಮನ ಪಕ್ಷದವರನ್ನು ಸೋಲಿಸಿದರು. ಸೋತವರು ಗೆದ್ದವರನ್ನು ತಮ್ಮ ಬೆನ್ನ ಮೇಲೆ ಹೊತ್ತುಕೊಂಡು ಕುದುರೆಯಾಗಿ ಓಡತೊಡಗಿದರು. ಮತ್ತು ಭಾಂಡೀರ ಎಂಬ ಆಲದ ಮರವನ್ನು ಮುಟ್ಟಿ ಮತ್ತೆ ಸೋತವರೆಲ್ಲರೂ ವಿಜಯಶಾಲಿಗಳನ್ನು ಹೊತ್ತುಕೊಂಡೇ ತಾವು ಮೊದಲು ಹೊರಟ ಸ್ಥಳಕ್ಕೇ ಬಂದು ತಲುಪಿಸಿದರು. ಶ್ರೀ ಕೃಷ್ಣ ಶ್ರೀದಾಮನ ಮೇಲೆ ಸವಾರಿಯಾಗಿದ್ದನು. ಪ್ರಲಂಬಾಸುರನ ಬೆನ್ನಿನ ಮೇಲೆ ಬಲರಾಮನು ಆರೋಹಣ ಮಾಡಿದ್ದ. ಅವರಿಬ್ಬರೂ ಕೃಷ್ಣರಾಮರನ್ನು ಹೊತ್ತುಕೊಂಡು ಭಾಂಡೀರ ಮರವನ್ನು ಮುಟ್ಟಿದರು. ಅಲ್ಲಿಂದ ಶ್ರೀ ಕೃಷ್ಣನನ್ನು ಎತ್ತಿದ ಶ್ರೀದಾಮನು ಹೊರಟ ಸ್ಥಳಕ್ಕೆ ಮರಳಿದ. ಆದರೆ ಬಲರಾಮನನ್ನು ಹೊತ್ತ ಪ್ರಲಂಬಾಸುರನು ಮಾತ್ರ ಇತ್ತ ಬಾರದೆ, ಒಮ್ಮೆಲೇ ಗಕ್ಕನೇ ಗಗನಕ್ಕೆ ಹಾರಿದ. ಬೆನ್ನ ಮೇಲೆ ಬಲರಾಮನನ್ನು ಹೊತ್ತು ಮುಗಿಲಿಗೆ ಜಗಿದ ಆ ರಕ್ಕಸನು ಚಂದ್ರನನ್ನು ಬಗಲಲ್ಲಿ ಎತ್ತಿದ ಮುಗಿಲಿನ ತುಂಡಿನಂತೆ ತೋರಿದ. ಬಲರಾಮನ ಭಯಂಕರವಾದ ಭಾರವನ್ನು ತಾಳಲಾರದೇ ಆ ರಕ್ಕಸನು ಆ ಗೋಪವೇಷವನ್ನು ಬಿಟ್ಟು ಕರಾಳವಾದ ದೈತ್ಯ ದೇಹವನ್ನು ಧರಿಸಿ ಬಾನಗಲ ಬೆಳೆದು ನಿಂತ. ಕಾಡ್ಗಿಚ್ಚಿನಿಂದ ಸುಟ್ಟು ಕರಕಾದ ಬೆಟ್ಟದ ತುಟ್ಟತುದಿಯಲ್ಲಿ ನಿಂತಂತೆ ಎನಿಸಿತು ಆ ಬಲರಾಮನಿಗೆ. ಚಂಡುಹೂವಿನ ದುಂಡು ಮಾಲೆಗಳು ಅವನ ರುಂಡದಲ್ಲಿ ಜೋತಾಡುತ್ತಿದ್ದವು. ತಲೆಯ ಮೇಲೆ ಶಿಖರದಂಥ ಟೊಪ್ಪಿಗೆ. ಬಂಡಿಯ ಗಾಲಿಯಂತೆ ಗರಗರ ತಿರುಗುವ ಕಣ್ಣುಗಳು. ಕಾಲೂರಿದರೆ ನೆಲ ನಡುಗುತ್ತಿತ್ತು. ಇಂಥ ಭೀಮ ಭೈರವನಾದ ದಾನವನಿಂದ ಆಗಸದ ಅಂತರಾಳಕ್ಕೆ ಒಮ್ಮೆಲೇ ಎತ್ತಲ್ಪಟ್ಟ ಬಲರಾಮನು ಗಗನ ಗೋಪುರದಿಂದಲೇ ಕೃಷ್ಣನಿಗೆ ಕೇಳಿದನು- ''ಕೃಷ್ಣಾ, ಕೃಷ್ಣಾ, ಕಪಟದಿಂದ ಗೋಪಾಲನ ವೇಷವನ್ನು ತೊಟ್ಟ ಇವನಾವನೋ ದುಷ್ಟದೈತ್ಯನು ನನ್ನನ್ನು ಹೊತ್ತು ಮೇಲೋಯ್ಯುತ್ತಿದ್ದಾನೆ. ಈಗ ಇವನು ಗುಡ್ಡದಂಥ ದೊಡ್ಡ ದೇಹವನ್ನು ಧರಿಸಿ ಮುಗಿಲಿಗೆ ನೆಗೆಗಿದ್ದಾನೆ. ಈಗ ನಾನೇನು ಮಾಡಬೇಕು ಹೇಳು. ಇವನು ಮರಳಿ ಭೂಮಿಗೆ ಬರಲು ಏನಾದರೂ ಉಪಾಯವುಂಟೇ ತಿಳಿಸು.'' ಇದನ್ನು ಕೇಳಿ ಕೃಷ್ಣನ ತುಟಿಯಂಚಿನಲ್ಲಿ ತುಂಟನಗೆ ತಾಂಡವಾಡಿತು. ಅವನಿಗೆ ಚೆನ್ನಾಗಿ ಗೊತ್ತು, ಬಲರಾಮನ ಬಲವೀರ್ಯಗಳು ಎಷ್ಟು ಎಂದು. ಅವನಿಗೆ ಅವನ ಶೌರ್ಯವನ್ನು ಜ್ಞಾಪಿಸುತ್ತ ಧೈರ್ಯ ತರಿಸುವ ಮಾತುಗಳನ್ನು ಒದರಿ ಹೇಳಿದ ನೆಲದಲ್ಲಿ ನಿಂತೇ ಶ್ರೀ ಕೃಷ್ಣ.-

## ಮಾನವನಂತೆ ಹೆದರದೆ ದಾನವನನ್ನು ನಿಗ್ರಹಿಸು

"ಅಣ್ಣ, ಹೀಗೇಕೆ ಮಾನವರಂತೆ ಮಾಡುತ್ತಿರುವೆ ? ಮನುಷ್ಯನಾಗಿ ಅವತರಿಸಿದ ನೀನು ಥೇಟ ಮನುಷ್ಯನೇ ಆಗಿಬಿಟ್ಟಿರುವೆಯಾ ! ನಿನ್ನ ನಿಜವಾದ ರೂಪವನ್ನು ನೆನೆದುಕೋ. ನಿನ್ನ ಮೂಲರೂಪದ ಶಕ್ತಿಯ ಮುಂದೆ ಈ ದೈತ್ಯಾಧಮನು ಎಷ್ಟರವನು ! ಸಮಸ್ತ ಜಗದಾಧಾರವಾದ ನಿನ್ನ ಆ ಅನಂತರೂಪವು ಸಾಮಾನ್ಯವೇ? ಮೇಲೆ ನೀನು ಸರ್ವ ಜಗತ್ಕಾರಣನಾದ ಆ ಪರಬ್ರಹ್ಮಾಂಶ ಸಂಭೂತನೇ ಆಗಿರುವೆ. ಈ ಅವತಾರದಲ್ಲಿಯೂ ಗುಹ್ಯಾತ್ ಗುಹ್ಯತರವಾದ ಜಗತ್ಕಾರಣವಾದ ಆ ಪರತತ್ವದ ಅಣ್ಣನಾಗಿಯೇ ನೀನು ಜನಿಸಿರುವೆ. ಪ್ರಳಯಜಲಧಿಯಲ್ಲಿ ಪವಡಿಸಿದ ಆ ಪರಮಾತ್ಮನಿಗೆ ನೀನು ಹಾಸಿಗೆಯಾಗಿದ್ದೆ. ಭೂಭಾರವನ್ನು ಹರಣಮಾಡಲಿಕ್ಕಾಗಿ ನಾನು, ನೀನು ಇಬ್ಬರೂ ಮಾನವರಾಗಿ ಅವತಾರಮಾಡಿರುವೆವು. ಇದು ನಿನಗೆ ಗೊತ್ತಿಲ್ಲವೇ? ಆದುದರಿಂದ ಅಣ್ಣ ನಿನ್ನ ಮೂಲರೂಪವನ್ನು ನೆನೆದುಕೊ. ಈ ಮಾನವರೂಪದಿಂದಲೇ ಈ ದಾನವನನ್ನು ಸಂಹರಿಸು. ಬಂದುಗಳಿಗೆಲ್ಲ ಸಂತೋಷವನ್ನುಂಟು ಮಾಡು. ವಿಶ್ವವ್ಯಾಪಿಯೂ ವಿರಾಟ್ ರೂಪಿಯೂ ಸಹಸ್ರಶೀರ್ಷನೂ ಸಹಸ್ರಪಾದನೂ ಸಹಸ್ರಬಾಹುವೂ ಆದ ಶ್ರೀ ಮನ್ನಾರಾಯಣನ ಶುಕ್ಲಕೇಶದ ಆವೇಶಾವತಾರಿಯೇ ನೀನು. ಇದನ್ನೆಲ್ಲ ನೀನು ಸ್ಮರಿಸು" ಮಹಾನುಭಾವನಾದ ಶ್ರೀಕೃಷ್ಣನ ಈ ಸ್ಮಾರಕೋಪನ್ಯಾಸದಿಂದ ಬಲರಾಮನಿಗೆ ಒಮ್ಮೆಲೇ ತನ್ನ ಆತ್ಮದ ಅರಿವು ಮೂಡಿ ಬಂದಿತು. ಕೂಡಲೇ ಬಲರಾಮನೂ ನಕ್ಕು ತನ್ನ ಕೆಳಗಿದ್ದ ಆ ಪ್ರಲಂಬಾಸುರರನ್ನು ಹಿಚುಕಿದನು. ಕೋಪದಿಂದ ಕಣ್ಣು ಕೆಂಪಗೆ ಮಾಡಿ ಆ ದುಷ್ಟನ ನಡುನೆತ್ತಿಯ ಮೇಲೆ ತನ್ನ ಬಲಿಷ್ಠವಾದ ಮುಷ್ಟಿಯಿಂದ ಒಂದು ಬಲವಾದ ಏಟನ್ನು ಕೊಟ್ಟನು. ಆ ಮುಷ್ಟಿ ಪ್ರಹಾರದಿಂದ ಪ್ರಲಂಬಾಸುರನ ಎರಡೂ ಕಣ್ಣು ಗುಡ್ಡೆಗಳು ಹೊರಬಿದ್ದವು. ಮಿದುಳಿನಲ್ಲಿ ನರಗಳು ಸಿಡಿದು ಹೊರಗೆ ಬಂದವು. ಬಾಯಿಯಿಂದ ನೆತ್ತರವನ್ನು ಕಕ್ಕುತ್ತ ಆ ದುರಳದಾನವನು ನೆಲದ ಮೇಲೆ ಉರುಳಿ ಬಿದ್ದನು. ಅವನ ಪ್ರಾಣ ಪಕ್ಷಿಯು ಹಾರಿಹೋಯಿತು.

ಮಹಾಬಲಶಾಲಿಯಾದ ಬಲದೇವನು ಬಲಿಷ್ಠನಾದ ಪ್ರಲಂಬಾಸುರನನ್ನು ವಧಿಸಿದ್ದನ್ನು ಕಂಡು ಗೋವಳರು ಓಗ್ಗಿ ಹಾರಾಡಿದರು. ಬಹಳ ಒಳ್ಳೆಯದಾಯಿತು. ಚೆನ್ನಾಯಿತು ಎಂದು ನುಡಿದು ಬಲರಾಮನನ್ನು ಹೊಗಳಿದರು. ಗೋಪಾಲಕರ ಬಣ್ಣನೆಯ ನುಡಿಗಳನ್ನು ಆಲಿಸುತ್ತ ರಾಮಕೃಷ್ಣರು ಸಂತಸದಿಂದ ವೃಂದಾವನವನ್ನು ಪ್ರವೇಶಿಸಿದರು

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಪಂಚಮಾಂಶ ಒಂಭತ್ತನೇ ಅಧ್ಯಾಯ ಸಂಪೂರ್ಣ*

—o—

## ಬಂತಿದೋ ಶೃಂಗಾರ ಮಾಸ ।

## ಅಧ್ಯಾಯ - ೧೦

ರಾಮ - ಕೃಷ್ಣರು ವೃಂದಾವನದ ಸುತ್ತ ಮುತ್ತಲೂ, ಕಾಲಿಂದಿಯ ನೀರ ಪರಿಸರದಲ್ಲಿಯೂ, ಮತ್ತು ಸುದೂರ ವನಾಂತರಗಳಲ್ಲಿಯೂ ಗೆಳೆಯರನ್ನು ಕಟ್ಟಿಕೊಂಡು, ಗೋವುಗಳನ್ನು ಅಟ್ಟಿಕೊಂಡು, ಕಾಡು - ಮೇಡುಗಳಲ್ಲಿ ಸಂಚರಿಸುತ್ತಲಿರುವಾಗ ಮಳೆಗಾಲವು ಕಳೆಯಿತು. ಶರತ್ಕಾಲವು ಪ್ರಾಪ್ತವಾಯಿತು. ಕಮಲಗಳು ಅರಳಿದವು. ಸಂಸಾರವೆಲ್ಲವೂ ಅಸಾರವೆಂದರಿತ ಯೋಗಿಗಳಂತೆ ನವಿಲುಗಳು ಅಹಂಕಾರವನ್ನು ತೊರೆದವು. ಮೌನವನ್ನು ಸ್ವೀಕರಿಸಿದವು. ಜ್ಞಾನಿಗಳು ಮನೆ-ಮಾರುಗಳನ್ನು ತೊರೆಯುವಂತೆ ಮೋಡಗಳು ತಮ್ಮ ಸರ್ವಸ್ವವಾದ ನೀರನ್ನೆಲ್ಲ ದಾನವಿತ್ತು ಪರಿಶುಭ್ರವಾದ ನಿರ್ಮಲ ಮೂರ್ತಿಗಳಾಗಿ ಆಕಾಶವನ್ನು ಬಿಟ್ಟವು. ನಕ್ಷತ್ರನಿಚಿತವಾದ ನೀಲಮುಗಿಲಿನಲ್ಲಿ ಪೂರ್ಣಚಂದ್ರನು ಶೋಭಿಸಿದನು. ಅಪರೋಕ್ಷಜ್ಞಾನಿಗಳ ವಂಶದಲ್ಲಿ ಯೋಗಸಿದ್ಧನು ತನ್ನ ಚರಮದೇಹದಿಂದ ಮೆರೆಯುವಂತೆ. ಜಲಾಶಯಗಳು ಮೆಲ್ಲಮೆಲ್ಲನೆ ತೀರವನ್ನು ಬಿಟ್ಟುಬಿಟ್ಟವು ಹೊಲ-ಮನೆ-ಮಕ್ಕಳಲ್ಲಿ ಮೋಹಮಮತೆಗಳನ್ನು ಬಲ್ಲವರು ಬಿಡುವಂತೆ. ವಿಷ್ಣುವಿನ ದರ್ಶನದಿಂದ ಮೇಧಾವಿಗಳ ಮನಸ್ಸು ನಿರ್ಮಲವಾಗುವಂತೆ, ಶರತ್ಕಾಲದಿಂದ ಜಲಾಶಯಗಳ ನೀರು ನಿರ್ಮಲವಾಯಿತು. ಸೂರ್ಯನ ಕಿರಣಗಳಿಂದಾಗುವ ತಾಪವನ್ನು ಚಂದ್ರನು ಅಹಂಕಾರ ಮೂಲಕವಾದ ದುಃಖವನ್ನು ವಿವೇಕವು ಕಡಿಮೆ ಮಾಡುವಂತೆ ಶಮನಗೊಳಿಸಿದನು. ಮಳೆಗಾಲದಲ್ಲಿ ನೀರುಗಳು ಬಂದು ತುಂಬಿಹೋದ ಸರೋವರಗಳು ಪೂರಕವನ್ನು ಮಾಡಿ ಈಗ ಪ್ರತಿದಿನವೂ ನೀರನ್ನು ಒಂದೆಡೆಗೆ ಶೇಖರಿಸಿಟ್ಟು ತುಸು ಭಾಗವು ಒಣಗುತ್ತ ನಡೆದಿದ್ದರಿಂದ, ರೇಚಕ - ಕುಂಭಕಾದಿ ವಿಧಿಗಳನ್ನು ಮಾಡಿ ಪ್ರಾಣಾಯಾಮವನ್ನು ಅಭ್ಯಾಸಮಾಡುವಂತೆ ತೋರುತ್ತಿತ್ತು. ತೊಳೆದಿಟ್ಟಂತಿರುವ ತಿಳಿ-ಆಕಾಶ, ಹೊಳೆ-ಹೊಳೆಯುವ ನಕ್ಷತ್ರಗಳು, ಪ್ರಸನ್ನ ವಾತಾವರಣ. ಇಂಥ ಮನೋಹರವಾದ ಶರತ್ಕಾಲವು ಬಂದ ಬಳಿಕ ಗೋಪಾಲಕರೆಲ್ಲರೂ ಇಂದ್ರ ಸಮಾರಂಭದ ತಯಾರಿಯನ್ನು ಮಾಡತೊಡಗಿದರು. ಗೋಕುಲದಲ್ಲಿ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಆ ಉತ್ಸವದ ಆಗಮನವು ಉತ್ಸಾಹವನ್ನು ಮೂಡಿಸಿತ್ತು. ಈ ಪೂರ್ವಸಿದ್ಧತೆಯನ್ನು ನೋಡಿಯೇ ಕೃಷ್ಣನಿಗೆ ಕೌತುಕವೆನಿಸಿತು. ಅವನು ಕೇಳಿಯೇ ಬಿಟ್ಟ ಹಿರಿಯತುರುಗಾಯಿಗಳನ್ನು ''ಇದೇನು ಉತ್ಸವ? 'ಇಂದ್ರ ಯಜ್ಞ' ಎಂದರೇನು? ನೀವು ಎಲ್ಲರೂ ಇಷ್ಟು ಹಿಗ್ಗುವುದಕ್ಕೆ ಏನು ಕಾರಣ?'' ಬಾಲಕೃಷ್ಣನ ಈ ಪ್ರಶ್ನೆಯನ್ನು ಕೇಳಿ ನಂದಗೋಪನು ಅತ್ಯಂತ ಆನಂದದಿಂದ ತನ್ನ ಆ ಪ್ರೀತಿಯ ಕಂದನನ್ನು ಬಳಿಗೆ ಕೂಡಿಸಿಕೊಂಡು ತಿಳಿಸಿ ಹೇಳಿದನು.

''ಮೋಡ ಮಳೆಗಳಿಗೆಲ್ಲ ಒಡೆಯ ದೇವರಾಜನಾದ ಇಂದ್ರ. ಅವನ ಪ್ರೇರಣೆಯಿಂದಲೇ ಮೇಘಗಳು ಮಳೆಗರೆಯುತ್ತವೆ. ಆ ಮಳೆಯಿಂದ ಬೆಳೆ ಬರುತ್ತದೆ. ಬೆಳೆಗಳಿಂದ ನಾವೂ ಮತ್ತು ಎಲ್ಲ ಪ್ರಾಣಿಗಳೂ ಬದುಕುತ್ತೇವೆ. ಮತ್ತು ಆ

ಧನಧಾನ್ಯಗಳಿಂದಲೇ ಯಜ್ಞಯಾಗಗಳನ್ನು ಮಾಡಿ ನಾವು ದೇವತೆಗಳನ್ನು ಸಂತೋಷಪಡಿಸುತ್ತೇವೆ. ವೃಷ್ಟಿಯಿಂದ ಎಲ್ಲಕಡೆಗೂ ಹುಲುಸಾಗಿ ಬೆಳೆದ ಹುಲ್ಲು-ಹಸಿರುಗಳಿಂದ ಹಸುಗಳು ಪುಷ್ಟವಾಗಿ ಹಾಲು ಕರೆಯುತ್ತವೆ. ಹಳ್ಳಿ-ಪಳ್ಳಿಗಳಲ್ಲಿ ಹೈನವು ಹೆಚ್ಚಾಗುತ್ತದೆ. ಅವುಗಳ ಕರು - ಮರಿಗಳಿಂದ ಹೋರಿ-ಎತ್ತುಗಳಿಂದ ಗೋಧನವು ಬೆಳೆಯುತ್ತದೆ. ಆ ಗೋಧನದಿಂದ ಹೊಲ-ನೆಲಗಳನ್ನು ಉತ್ತಿ-ಬಿತ್ತಿ ಬೆಳೆಮಾಡುವ ಕೃಷಿ ಕಾರ್ಯವು ಸುಸಂಪನ್ನವಾಗಿ ನೆರವೇರುತ್ತದೆ. ಆದರಿಂದ ಜಗತ್ತಿನಲ್ಲಿ ಶಾಂತಿ - ಸಂತಸ, ಸಂಪದ - ಸೌಭಾಗ್ಯ, ತುಷ್ಟಿ-ಪುಷ್ಟಿ ಎಲ್ಲವೂ ಸಮೃದ್ಧವಾಗಿ ಜನರು ನೆಮ್ಮದಿಯಿಂದ ಬಾಳುವಂತಾಗುತ್ತದೆ. ಆದುದರಿಂದ ನಾವು ಮಳೆಗಾಲದಲ್ಲಿ ಮಳೆ - ಬೆಳೆಗಳನ್ನು ಕೊಡುವ, ಮೋಡ ಪಡೆಗಳಿಗೆ ಪ್ರೇರಣೆಯನ್ನು ನೀಡುವ ದೇವೇಂದ್ರನನ್ನು ಈ ಇಂದ್ರಯಜ್ಞದಿಂದ ಪೂಜಿಸುತ್ತೇವೆ. ಇದರಂತೆ ಎಲ್ಲ ಮಾನವರೂ ಇಂದ್ರ ಪೂಜೆಯನ್ನು ಮಾಡುವರು''.

## ಇಂದ್ರಯಜ್ಞದ ಬದಲು ಜೀವನಯಜ್ಞ ಮಾಡಿರಿ.

ನಂದಗೋಪನ ಈ ಮಾತನ್ನು ಕೇಳಿ ದಾಮೋದರನು ಆ ಗೋಪವೃದ್ಧರ ಇಂದ್ರಯಾಗದ ವಿಷಯದಲ್ಲಿ ತನ್ನ ಖಚಿತವಾದ ಅಭಿಪ್ರಾಯವನ್ನು ಸ್ಪಷ್ಟವಾದ ಶಬ್ದದಲ್ಲಿ ಇಂತು ತಿಳಿಸಿದ.

**''ನ ವಯಂ ಕೃಷಿಕರ್ತಾರಃ ವಾಣಿಜ್ಯೋ ಜೀವಿನೋ ನ ಚ ।**
**ಗಾವೋsಸ್ಮದ್ದೈವತಂ ಪೂಜ್ಯಂವಯಂ ವನಚರಾ ಯತಃ'' ॥**

''ಅಪ್ಪ, ಬೇಸಾಯವು ನಮ್ಮ ಕಸುಬು ಅಲ್ಲ. ವ್ಯಾಪಾರವು ನಮ್ಮ ಉದ್ಯೋಗವಲ್ಲ, ಹಸುಗಳೇ ನಮ್ಮ ದೇವರು. ಯಾಕೆಂದರೆ ನಾವು ವನಚರರು. ಆನ್ವೀಕ್ಷಿಕೀ, ತ್ರಯೀ, ದಂಡನೀತಿ ಮತ್ತು ವಾರ್ತಾ ಎಂಬ ವಿದ್ಯೆಗಳು ನಾಲ್ಕು ಬಗೆಯಾಗಿ ಇವೆ. ಅನ್ವೀಕ್ಷಿಕೀ ಎಂದರೆ ತರ್ಕಶಾಸ್ತ್ರ. ತ್ರಯೀ ಅಂದರೆ ವೇದ, ದಂಡನೀತಿ ಎಂದರೆ ರಾಜಕಾರಣ. ಕೊನೆಯದೇ ವಾರ್ತಾ. ಈ ವಾರ್ತಾ ಎಂಬ ನಾಲ್ಕನೆಯ ವಿದ್ಯೆಯು ಕೃಷಿ, ವಾಣಿಜ್ಯ ಮತ್ತು ಗೋರಕ್ಷಣ ಎಂದು ಮೂರು ಬಗೆಯಾಗಿದೆ. ರೈತರಿಗೆ ಕೃಷಿಯೇ ವೃತ್ತಿಯಾಗಿದೆ. ವೈಶ್ಯರಿಗೆ ವ್ಯಾಪಾರ. ನಮಗೆ ಮಾತ್ರ ಗೋವು. ಈ ಪಶುಪಾಲನವೇ ನಮ್ಮ ಮುಖ್ಯ ವೃತ್ತಿ. ಪ್ರಧಾನ ವಿದ್ಯೆ. ಯಾವ ವಿದ್ಯೆಯಿಂದ ಅಥವಾ ವೃತ್ತಿಯಿಂದ ಮಾನವನು ಬದುಕಿ ಬಾಳುವನೋ ಅದೇ ಅವನಿಗೆ ದೇವರು. ತನಗೆ ಅನ್ನವನ್ನು ಇತ್ತು ಉಪಕರಿಸುವ ಆ ವೃತ್ತಿಯನ್ನೇ ಅವನು ದೈವವೆಂದು ಬಗೆದು ಅದನ್ನು ಅರ್ಚಿಸಬೇಕು. ಮತ್ತು ಪೂಜಿಸಬೇಕು. ನಾವು ಉಣ್ಣುವುದು ಒಂದು ದೈವದ ಫಲ. ನಾವು ಪೂಜಿಸುವುದು ಮತ್ತೊಂದು ದೈವ ಎಂತಾದರೆ ಅಂಥ ಮನುಷ್ಯನಿಗೆ ಇಲ್ಲಿ ಸುಖವಿಲ್ಲ. ಪರತ್ರ ಸದ್ಗತಿಯಿಲ್ಲ.

ನಾವು ಬದುಕುವುದು ಗೋಗಳಿಂದ. ಆ ಗೋಗಳು ಬದುಕುವುದು ಗುಡ್ಡಗಳಿಂದ. ಈ ಗಿರಿಗಳು ಹುಲ್ಲು, ನೀರು, ನೆಲ, ಮಳೆ ಮುಂತಾದವುಗಳಿಂದ ನಮಗೂ ನಮ್ಮ ಹಸುಗಳಿಗೂ ಉಪಕಾರವಾಗಿರುತ್ತವೆ. ಬೇಸಾಯ ಮಾಡುವ ನೆಲಹೊಲಗಳ ಹಾಸಿಗೆ

ಚಾಚಿರುವವರೆಗೆ ನಾಗರಿಕತೆಯ ಸೀಮೆ. ಅದರಾಚೆಗೆ ವನರಾಜ್ಯ. ವನಗಳ ಸೀಮೆಯ ಆಚೆಗೆ ಗಿರಿಗಳ ಗಡಿಯು ಪ್ರಾರಂಭವಾಗುತ್ತದೆ. ನಮಗೆ ಈ ವನಗಿರಿಗಳೇ ಗತಿ. ನಾಲ್ಕು ಗೋಡೆಗಳ ನಡುವೆ ಬಾಗಿಲ ಹಾಕಿಕೊಂಡು ಸ್ವಯಂಕಲ್ಪಿತವಾದ ಗೃಹ ಬಂಧನದ ಆವರಣಗಳಲ್ಲಿರುವವರಿಗೆ ನಿಜವಾದ ಸುಖವಿಲ್ಲ. ಮನೆ, ಹೊಲ, ಊರು ಎಂದು ಒಂದೆಡೆ ನೆಲೆಯೂರಿ ನಿಂತವರಿಗೂ ನೆಮ್ಮದಿ ಇಲ್ಲ. ಈ ಜಗತ್ತಿನಲ್ಲಿ ನಿಜವಾದ ಸುಖಿಗಳೆಂದರೆ ಚಕ್ರಚಾರಿಗಳಾದ ಸಂಚಾರೀ ಜನಾಂಗ. ಪಶುಪಾಲನೆಯ ವೃತ್ತಿಯನ್ನು ಕೈಕೊಂಡು ಬೆಟ್ಟ ಬಯಲುಗಳಲ್ಲಿ ತಿರುಗುವ ಗೊಲ್ಲ-ಭಿಲ್ಲ ಜನರಿಗೆ ಕಾಮರೂಪಿಗಳಾದ ಈ ಗಿರಿದೇವತೆಗಳು ಎಲ್ಲ ರೀತಿಯಿಂದಲೂ ರಕ್ಷಣೆಯನ್ನೊದಗಿಸುತ್ತವೆ. ಇವರಿಗೆ ತೊಂದರೆ ಕೊಡುವ ಮಾನವರನ್ನು, ಪ್ರಾಣಿಗಳನ್ನೂ, ಹುಲಿ, ಸಿಂಹಗಳ ರೂಪದಿಂದ ಸಂಹಾರ ಮಾಡಿ ಸಂರಕ್ಷಣೆಯನ್ನು ನೀಡುತ್ತವೆ. ಆದುದರಿಂದ ನಾವು 'ಗಿರಿಯಜ್ಞ'ವನ್ನು ಮಾಡೋಣ. ಗೋಯಜ್ಞವನ್ನು ಮಾಡೋಣ. ಇಂದ್ರನಿಂದ ನಮಗೇನಾಗಬೇಕಾಗಿದೆ! ಗೋ ಮತ್ತು ಗಿರಿಗಳೇ ನಮ್ಮ ದೇವರು.

**''ಮಂತ್ರಯಜ್ಞ ಪರಾ ವಿಪ್ರಾಃ ಸೀರಯಜ್ಞಾಶ್ಚ ಕರ್ಷಕಾಃ ।**
**ಗಿರಿಗೋಯಜ್ಞ ಶೀಲಾಶ್ಚ ವಯಮದ್ರಿವನಾಶ್ರಯಾಃ ॥**
**''ತಸ್ಮಾತ್ ಗೋವರ್ಧನಃ ಶೈಲೋ ಭವದ್ಭಿಃ ವಿವಿಧಾರ್ಹಣೈಃ ।**
**ಅರ್ಚ್ಯತಾಂ ಪೂಜ್ಯತಾಂ ವಿಪ್ರಾ ಭೋಜ್ಯಂತಾಂ ಚ ವಿಧಾನತಃ ॥**

''ಬ್ರಾಹ್ಮಣರು ಮಂತ್ರ ಯಜ್ಞವನ್ನು ಮಾಡಬೇಕು. ಒಕ್ಕಲಿಗರು ನೇಗಿಲ ಯಜ್ಞ ಮಾಡಬೇಕು. ವನ-ಗಿರಿಗಳಲ್ಲಿರುವ ನಾವು ಗಿರಿಯಜ್ಞ ಮತ್ತು ಗೋಯಜ್ಞಗಳನ್ನು ಮಾಡುವುದು ನಮ್ಮ ಕರ್ತವ್ಯವಾಗಿದೆ. ಆದುದರಿಂದ ನೀವೆಲ್ಲರೂ ಗೋಪಾಲಕರೂ ಒಮ್ಮತದಿಂದ ಕೂಡಿ ಗೋವರ್ಧನ ಬೆಟ್ಟವನ್ನೇ ಬಗೆ ಬಗೆಯ ಪೂಜೆಗಳಿಂದ ಅರ್ಚಿಸಿರಿ. ಭಕ್ತಿಭಾವದಿಂದ ಪೂಜಿಸಿರಿ. ವಿಧಿ ಪೂರ್ವಕವಾಗಿ ಬ್ರಾಹ್ಮಣರ ಭೋಜನವನ್ನು ಮಾಡಿಸಿರಿ. ಈ ವಿಷಯದಲ್ಲಿ ವಿಚಾರ ಮಾಡುವುದೇ ಬೇಡ. ಘೋಷವಾಸಿಗಳೆಲ್ಲರೂ ಒಂದು ಗೂಡಿ ಈ ಗಿರಿಯಜ್ಞವನ್ನು ಸಾಂಗ ಮಾಡಿರಿ. ಬಂದ ಯಾಚಕರಿಗೆ ಬೇಡಿದ್ದನ್ನು ಕೊಡಿರಿ. ಹೋಮ ಹವನಗಳನ್ನು ಮಾಡಿರಿ. ಹೊಸ ಹೂಗಳನ್ನು ಕೋಡಿನಲ್ಲಿ ಮುಡಿದುಕೊಂಡು ನಮ್ಮ ಹಸುಗಳು ಈ ಗೋವರ್ಧನ ಗಿರಿಗೆ ಪ್ರದಕ್ಷಿಣೆ ಹಾಕಲಿ. ಇದು ನನ್ನ ಅಭಿಪ್ರಾಯ. ಇದನ್ನು ನೀವು ಪ್ರೀತಿಯಿಂದ ಮಾಡಿದರೆ ಈ ಗಿರಿರಾಜನಿಗೆ ತುಷ್ಟಿ ಗೋಗಳಿಗೆ ಪುಷ್ಟಿ ನನಗೂ ತೃಪ್ತಿ''.

ಕೃಷ್ಣನ ಈ ಮಾತುಗಳನ್ನು ಕೇಳಿ ನಂದನೇ ಮೊದಲಾದ ವ್ರಜವಾಸಿಗಳಿಗೆ ಆನಂದವಾಗಿ ಅವರ ಎಲ್ಲ ಮುಖಗಳೂ ಅರಳಿ ಅರವಿಂದವಾದವು. ''ಸರಿ, ಸರಿ. ಬಹಳ ಒಳ್ಳೇ ಮಾತು. ಯುಕ್ತಿಯುಕ್ತವಾದ ವಚನ'' ಎಂದೆಲ್ಲರೂ ಪ್ರಶಂಸಿದರು. ಕೃಷ್ಣನು ಹೇಳಿದ ಮಾತು ನಮ್ಮೆಲ್ಲರ ಹಿತಕ್ಕಾಗಿಯೇ ಇದೆ. ನಾವು ಅದರಂತೆ ಆಚರಿಸೋಣ ಎಂದು ನಿರ್ಧರಿಸಿ ಅವರು ಗಿರಿಯಜ್ಞವನ್ನೇ ಸುರು ಮಾಡಿದರು. ಹಾಲು, ಮೊಸರು, ಮಾಂಸ,

ಪಾಯಸ ಮುಂತಾದ ವಿವಿಧ ಭಕ್ಷ್ಯ ಭೋಜ್ಯಗಳನ್ನು ಆ ಶೈಲಕ್ಕೆ ಬಲಿಯಿತ್ತರು. ಸಾವಿರಾರು ಜನ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನ ಮಾಡಿಸಿದರು. ಆಕಳುಗಳನ್ನು ಪೂಜಿಸಿದರು, ಅವುಗಳಿಗೆ ಪ್ರದಕ್ಷಿಣೆ ಹಾಕಿದರು. ಅಲಂಕಾರಗಳಿಂದ ಮೆರೆಯುವ ಆ ಗೋವುಗಳು ಹಿಂಡು ಹಿಂಡಾಗಿ ಸಡಗರದಿಂದ ಆ ಗಿರಿಗೆ ಪ್ರದಕ್ಷಿಣೆಯನ್ನು ಹಾಕಿದವು. ನೀರು ತುಂಬಿದ ಮೋಡಗಳು ಗುಡುಗಿದಂತೆ, ಮದ ತುಂಬಿದ ಎತ್ತುಗಳು ತಮ್ಮ ಬಾಲದ ಚಾಮರ ಎತ್ತಿ ಡುರಿಕೆ ಹಾಕಿದವು.

ಕೃಷ್ಣನಾದರೂ ಆ ಗೋವರ್ಧನ ಬೆಟ್ಟದ ಶಿಖರದ ತುದಿಯಲ್ಲಿ ಮೂರ್ತಿಮಂತನಾಗಿ ನಿಂತು ''ನಾನೇ ಈ ಶೈಲಸ್ವಾಮಿ, ಶೈಲಾಂತರ್ಯಾಮಿ'' ಎಂದು ಹೇಳಿ ಎಲ್ಲ ಗೋಪ ವರೇಣ್ಯರು ತಂದಿತ್ತ ಬಗೆ ಬಗೆಯ ಭಕ್ಷ್ಯ ಭೋಜ್ಯ ಪಕ್ವಾನ್ನ ನೈವೇದ್ಯಗಳನ್ನು ಸ್ವೀಕರಿಸಿದನು. ಮತ್ತು ತನ್ನದೇ ಇನ್ನೊಂದು ರೂಪವಾದ ಕೃಷ್ಣ ರೂಪದಿಂದ ಎಲ್ಲ ಗೋಪಾಲರೊಡನೆ ಆ ಗಿರಿ ಶಿಖರವನ್ನು ಏರಿ ಶೈಲರೂಪಿಯಾದ ಶ್ರೀ ಹರಿಯನ್ನು ಸಂಭ್ರಮದಿಂದ ಪೂಜಿಸಿದನು. ಮತ್ತು ತನ್ನನ್ನು ಭಕ್ತಿಯಿಂದ ಪೂಜಿಸಿದ ಗೋಪಗೋಪಿಯರಿಗೆಲ್ಲರಿಗೂ ವರಗಳನಿತ್ತು ಅನುಗ್ರಹಿಸಿ ಅಂತರ್ಧಾನವನ್ನು ಹೊಂದಿದನು. ಹೀಗೆ ಗೋಪಾಲಕರೆಲ್ಲರೂ ಗಿರಿಯಜ್ಞವನ್ನು ಕೃಷ್ಣನು ಹೇಳಿದಂತೆ ವಿಧಿಪೂರ್ವಕವಾಗಿ ಯಥಾ ಸಾಂಗ ನೆರವೇರಿಸಿ ಗಿರಿಧಾರಿಯ ಅನುಗ್ರಹ ಪಡೆದು ಸ್ವಗೋಷ್ಠಗಳಿಗೆ ಮರಳಿದರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹತ್ತನೇ ಅಧ್ಯಾಯ ಸಂಪೂರ್ಣ*

—o—

## ಬೆರಳ ಮೇಲೆ ಬೆಟ್ಟವನ್ನು ತರಳ ಕೃಷ್ಣ ಎತ್ತಿ ಹಿಡಿದ | ಅಧ್ಯಾಯ - ೧೧

ಇಂದ್ರಯಜ್ಞವು ಕೃಷ್ಣನಾಜ್ಞೆಯಿಂದ ನಿಂತು ಹೋಗಲು ದೇವೇಂದ್ರನಿಗೆ ಬಹಳ ಕೋಪ ಬಂದಿತು. ಸಂವರ್ತಕ ಎಂಬ ಮೋಡಗಳ ಪಡೆಗೆ ಅವನು ಅಪ್ಪಣೆ ನೀಡಿದ ''ಎಲೋ ಮೋಡಗಳೇ, ನಂದವ್ರಜದ ಮೇಲೆ ಭಯಂಕರವಾದ ಮಳೆಗರೆಯಿರಿ. ಕೃಷ್ಣನ ಆಶ್ರಯದ ಬಲದಿಂದ ಆ ನಂದಗೋಪನಿಗೆ ದುರ್ಬುದ್ಧಿ ಬಂದಿದೆ. ಮಗನ ಬಲದ ಭರವಸೆಯಿಂದ ಉಬ್ಬಿ ಕೊಬ್ಬಿದ ಮಂದಮತಿಯಾದ ಆ ನಂದಗೋಪನು ಈ ವರ್ಷ ಇಂದ್ರಯಜ್ಞವನ್ನೇ ನಿಲ್ಲಿಸಿ ಬಿಟ್ಟಿದ್ದಾನೆ. ಆ ಗೋವಳರಿಗೆಲ್ಲ ಗೋವುಗಳೇ ಜೀವನಾಧಾರ. ಆ ಗೋಗಳನ್ನು ನೀವೀಗ ನನ್ನ ಆದೇಶದಂತೆ ಬಿರುಗಾಳಿಯಿಂದ ಕೂಡಿದ ಭೀಕರವಾದ ಜಡಿಮಳೆಯಿಂದ ಪೀಡಿಸಿರಿ. ನಾನಾದರೂ ಬೆಟ್ಟದ ಕೋಡುಗಲ್ಲಿನಂತೆ ಎತ್ತರವಾದ ನನ್ನ ಐರಾವತವನ್ನು ಏರಿ ಬಂದು ನಿಮಗೆ ಸಹಾಯ ಮಾಡುತ್ತೇನೆ.''

ದೇವೇಂದ್ರನ ಆಜ್ಞೆಯಂತೆ ಮೋಡಗಳು ಹಿಂಡುಹಿಂಡಾಗಿ ಭೂಮಂಡಲದ ಮೇಲೆ ದಂಡಯಾತ್ರೆಗೈದವು. ಮುಗಿಲೆಲ್ಲವೂ ಕಪ್ಪು ಮೋಡಗಳಿಂದ ತುಂಬಿಹೋಯಿತು. ಭಯಂಕರ ಚಂಡಮಾರುತದೊಡನೆ ಧಾರಾಕಾರವಾಗಿ ಮಳೆಯು ''ಧೋಧೋ'' ಸುರಿಯತೊಡಗಿತು. ಆ ನಿರಂತರ ವೃಷ್ಟಿಧಾರೆಗಳಿಂದ ಭೂಮಿ- ಆಕಾಶ-ದಿಕ್ಕು ಎಲ್ಲವೂ ಏಕವಾದವು. ಮಿಂಚಿನ ಬಳ್ಳಿಗಳೆಂಬ ಚಾವಟಿಯ ಏಟಗಳನ್ನು ತಿಂದು ಹೆದರಿದಂತಿರುವ ಮೋಡಗಳು ದಶದಿಕ್ಕುಗಳಲ್ಲೆಲ್ಲ ಓಡಿ ಭಯಂಕರ ಸಪ್ಪಳವನ್ನು ಮಾಡುತ್ತ ಜಡಿಮಳೆಯನ್ನು ಸುರಿಸಹತ್ತಿದವು. ಹಗಲು ಹೊತ್ತಿನಲ್ಲಿಯೇ ಗಾಢಾಂಧಕಾರವಾಗಿ ಸುತ್ತೆಲ್ಲ ಕತ್ತಲೆ ಕವಿದು ನಿರಂತರ ಮಳೆಯಿಂದ ಪ್ರಪಂಚವೆಲ್ಲವೂ ಜಲಮಯವಾಯಿತು. ಇಂಥ ಭೀಕರವಾದ ಬಿರುಗಾಳಿ ಸತತ ಜಡಿಮಳೆಗಳಿಂದ ಆಕಳುಗಳು ಮೂರ್ಛಿತವಾದವು. ಹಲವು ಹಸುಗಳಿಗೆ ತಲೆ ಸಿಡಿತವಾಯಿತು. ಕೆಲವು ದನಗಳು ನಡು ಮುರಿಯಿತು. ತಮ್ಮ ಕರುಗಳನ್ನು ತಮ್ಮ ಕಾಲಬುಡದಲ್ಲಿ ಅಡಗಿಸಿಕೊಂಡು ಎಷ್ಟೋ ಹಸುಗಳು ಪ್ರಾಣಾಂತಕ ಪರಿಸ್ಥಿತಿಯಲ್ಲಿ ನಿಂತುಕೊಂಡವು. ಕರುಗಳಂತೂ ಬಿರುಗಾಳಿಗೆ ಗೋಣು ತಿರುವಿದಂತಾಗಿ ಕೃಷ್ಣನೆಡೆಗೆ ದೀನದೃಷ್ಟಿಯಿಂದ ನೋಡಿದವು. 'ಸ್ವಾಮೀ, ನಮ್ಮನ್ನು ರಕ್ಷಿಸು' ಎಂಬ ಕಾತರತೆ ಇತ್ತು ಆ ಮೂಕ ನೋಟದಲ್ಲಿ. ಗೋಗಳೂ, ಗೋಪಿಯರೂ, ಗೋಪಾಲಕರೂ ಈ ಧಾರಾಕಾರವಾದ ಆ ಮಳೆಯ ಹಾವಳಿಯಿಂದ ಹೌಹಾರಿ ಹೋದರು. ಕೃಷ್ಣನಿಗೆ ತಿಳಿದು ಹೋಯಿತು. ಇಂದ್ರಯಜ್ಞದ ಭಂಗದಿಂದ ಸಿಟ್ಟಿಗೆದ್ದ ದೇವೇಂದ್ರನ ಕಾರಸ್ಥಾನವಿದು ಎಂದು ಸುರರಾಜನಿಂದ ಸಂತ್ರಸ್ತವಾದ ಈ ಗೋ-ಗೋಪರನ್ನು ರಕ್ಷಿಸುವದು ನನ್ನ ಕರ್ತವ್ಯ, ಎಂದು ನಿರ್ಧರಿಸಿದನು. ಹೀಗೆ ಯೋಚಿಸಿ ಅವನು ಆ ಗೋವರ್ಧನ ಪರ್ವತವನ್ನು ಕಿತ್ತಿ ಒಂದೇ ಕೈಯಿಂದ ಎತ್ತಿ ಕೊಡೆಯಂತೆ ಗೋಕುಲದ ಮೇಲೆ ಹಿಡಿದನು. ಇಂಥ ಬೃಹದ್ ಬೆಟ್ಟವನ್ನು ಎತ್ತಿಹಿಡಿಯುವದೂ ಭಗವಂತನಿಗೆ ಒಂದು ಸಹಜ ಲೀಲೆಯಾಗಿದ್ದಿತು.

ಆ ದೊಡ್ಡ ಗುಡ್ಡವನ್ನು ಕಿತ್ತಿ, ಕೈಯಿಂದ ಎತ್ತಿ, ಕೊಡೆಯಂತೆ ನೆಗಹಿಡಿದ ಹರಿಯು ಮುಗುಳನಗೆ ನಗುತ್ತ ಆ ಗೋವಳಿರಿಗೆ ''ನೀವೆಲ್ಲರೂ ಬೇಗನೇ ಈ ಬೆಟ್ಟದಡಿಯಲ್ಲಿ

ಬನ್ನಿರಿ. ಇಲ್ಲಿ ಮಳೆ ಬಾರದಂತೆ ಮಾಡಿದ್ದೇನೆ. ಇಲ್ಲಿ ಬಿರುಗಾಳಿಯ ಭಯವೂ ಇಲ್ಲ. ಈ ನಿವಾಂತ ಪ್ರದೇಶದಲ್ಲಿ ನೀವು ಸುಖವಾಗಿ ಕುಳಿತುಬಿಡಿರಿ. ಇಲ್ಲಿ ನಿಮಗಾವ ಹೆದರಿಕೆಯೂ ಬೇಡ. ಈ ಬೆಟ್ಟವೂ ಕುಸಿದು ಬೀಳುವದೆಂಬ ಭಯ ಬೇಡ. ಗಟ್ಟಿಯಾಗಿಯೇ ನಾನು ಇದನ್ನು ಎತ್ತಿ ಹಿಡಿದಿದ್ದೇನೆ. ನೀವೆಲ್ಲರೂ ನಿರ್ಭಯವಾಗಿ ಬನ್ನಿರಿ. ಮಡದಿ ಮಕ್ಕಳು, ಕರುತುರುಗಳನ್ನೂ ಕೂಡ ನೀವಿಲ್ಲಿಗೇ ಕರೆ ತನ್ನಿರಿ''

ಕೃಷ್ಣನ ಬಾಯಿಯಿಂದ ಈ ಮಾತು ಬರುವದೇ ತಡ ಗೋಪ-ಗೋಪಿಯರೆಲ್ಲರೂ ತಮ್ಮ ತಮ್ಮ ಬಂಡಿಗಳಲ್ಲಿ ಭಾಂಡಿ ಪಾತ್ರೆಗಳನ್ನು ಹಾಕಿಕೊಂಡು ದನಕರು, ಮಕ್ಕಳು ಮರಿಗಳೊಂದಿಗೆ ಕೃಷ್ಣನಿದ್ದ ಬೆಟ್ಟದ ಬುಡದ ಬೆಚ್ಚಗಿನ ಸ್ಥಳಕ್ಕೆ ನುಗ್ಗಿದ್ದರು. ಮಳೆಗಾಳಿಗಳ ಭಯವಿಲ್ಲದೇ ಅಲ್ಲಿಯೇ ಸುಖವಾಗಿ ಉಳಿದುಕೊಂಡರು. ಕೃಷ್ಣನ ಬೆರಳ ಮೇಲೆ ಆ ಬೆಟ್ಟವು ಕೊಡೆಗಿಂತ ಹಗುರವಾಗಿ ಆಚೀಚೆ ವಾಲದೆ ನಿಶ್ಚಲವಾಗಿ ನಿಂತುಕೊಂಡಿತ್ತು. ಅದನ್ನು ನೋಡಿ ಗೋಪ ಗೋಪಿಯರಿಗೆ ಒಂದೆಡೆ ಹರ್ಷ, ಇನ್ನೊಂದೆಡೆಗೆ ಆಶ್ಚರ್ಯ. ಮತ್ತೊಂದೆಡೆಗೆ ಅಭಿಮಾನ ಮತ್ತು ಕೃತಜ್ಞತೆ. ಅವರು ಎಲ್ಲರೂ ಎವೆಪಿಳಿಕಿಸದೇ ನೋಡತೊಡಗಿದರು. ಅವನ ಅದ್ಭುತವಾದ ಮಹಿಮೆಯನ್ನು ಹಾಡತೊಡಗಿದರು. ಕೃಷ್ಣನ ಬೊಟ್ಟು ಆ ಬೆಟ್ಟವನ್ನು ಲಕ್ಷ್ಯವಿಲ್ಲದೇ ಲೀಲಾಜಾಲವಾಗಿ ಎತ್ತಿ ಹಿಡಿದಿದ್ದಿತು. ಹೀಗೆ ಏಳು ಹಗಲು, ಏಳು ಇರುಳುಗಳವರೆಗೆ ಆ ಮಹಾ ಮೇಘಗಳು ಸಪ್ತ ಸಾಗರಗಳ ನೀರನ್ನೆಲ್ಲ ತಂದು ಆ ಬೆಟ್ಟದ ಸುತ್ತುಮುತ್ತಲೂ ಬೊಕ್ಕ ಬೋರಲಬಿದ್ದು ಸುರಿದವು. ನೀರು ನದಿಯಾಗಿ ಹರಿದವು. ಇಂದ್ರನ ಆಜ್ಞೆಯೇನೋ ಪಾಲಿಸಲ್ಪಟ್ಟಿತು. ಆದರೆ ಕೃಷ್ಣನು ಲೀಲೆಯಿಂದ ಶೈಲವನ್ನೇ ಎತ್ತಿ ಹಿಡಿದಿದ್ದರಿಂದ ಆ ಮೇಘಗಳ ಪ್ರಯತ್ನವು ವ್ಯರ್ಥವಾಯಿತು. ಈ ಗೋಪಾಲಕರನ್ನೆಲ್ಲ ವೃಷ್ಟಿಯಿಂದಲೇ ನಷ್ಟ ಮಾಡಿಬಿಡುತ್ತೇನೆ ಎಂಬ ಇಂದ್ರನ ಪ್ರತಿಜ್ಞೆಯು ಸುಳ್ಳಾಯಿತು. ಗೋಪಾಲಕರಿಗೆ ಒಂದೂ ಮಳೆಹನಿ ತಾಕದೇ, ಚಳಿ ಮಳೆ ಗಾಳಿಗಳ ಸುಳುವು ಸೋಂಕು ಇಲ್ಲದೇ ಗೋವರ್ಧನ ಬೆಟ್ಟದ ಬುಡದಲ್ಲಿ ಕೃಷ್ಣನ ಕರುಣೆಯ ರಕ್ಷೆಯಲ್ಲಿ ಸುರಕ್ಷಿತವಾಗಿ ಉಳಿದು ಬಿಟ್ಟರು. ಇದನ್ನು ಕಂಡು 'ಕೃಷ್ಣನ ಕೃಪಾ ಪಾತ್ರರಾದವರ ಮೇಲೆ ತನ್ನದೇನೂ ನಡೆಯದೂ' ಎಂದು ಇಂದ್ರನಿಗೆ ಖಾತ್ರಿಯಾಗಿ ಅವನು ಮೋಡಗಳಿಗೆ ಹಿಂತಿರುಗಿ ಹೋಗಲು ಅಪ್ಪಣೆಗೈದನು. ತುಂಬಿ ಬಂದು ತೋಯಧಾರೆಯನ್ನು ಸಂತತ ಧಾರೆಯಾಗಿ ಸುರಿಸುವ ಇಂದ್ರ ಮೇಘದೂತರೆಲ್ಲರೂ ಅವನ ಆಣತಿಯಂತೆ ಚದುರಿದರು. ಮುಗಿಲು ಬೆಳ್ಳಗಾಯಿತು. ಈಗ ಗೋಪಾಲಕರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿ ವಸತಿಯನ್ನು ಮಾಡಿದರು. ಅನಂತರ ಕೃಷ್ಣನನ್ನು ಎಲ್ಲ ಗೋಪಾಲಕರೂ ಆಶ್ಚರ್ಯದಿಂದ ಕಣ್ಣಗಲಿಸಿ ನೋಡುತ್ತಿರುವಂತೆಯೇ ಆ ಬೆಟ್ಟವನ್ನು ಅವನು ಮೊದಲಿದ್ದಂತೆಯೇ ಇಟ್ಟು ಬಿಟ್ಟನು. ಗೋವಳರ ಕೌತುಕಕ್ಕೆ ಕೊನೆಯಿಲ್ಲ.

*ಶ್ರೀ ವಿಷ್ಣು ಮಹಾಪುರಾಣದಲ್ಲಿ ಪಂಚಮಾಂಶದ ಹನ್ನೊಂದನೇ ಅಧ್ಯಾಯ ಸಂಪೂರ್ಣ*

—o—

## ಇಂದ್ರನಿಂದ ಗೋವಿಂದನ ಪಟ್ಟಾಭಿಷೇಕ

## ಅಧ್ಯಾಯ - ೧೨

ಕೃಷ್ಣನು ಗೋವರ್ಧನ ಗಿರಿಯನ್ನು ಎತ್ತಿ ಹಿಡಿದು ಗೋಕುಲವನ್ನೆಲ್ಲ ರಕ್ಷಿಸಿದ್ದನ್ನು ಕಂಡು ದೇವೇಂದ್ರನು ಶ್ರೀಕೃಷ್ಣನ ದರ್ಶನವನ್ನು ತೆಗೆದುಕೊಳ್ಳಬೇಕೆಂದು ಬಯಸಿದನು. ಕೂಡಲೇ ಅವನು ಐರಾವತವನ್ನು ಏರಿದನು. ಗೋವರ್ಧನ ಗಿರಿಗೆ ಧಾವಿಸಿದನು. ಅಲ್ಲಿ ಆ ದೇವತೆಗಳ ಅರಸನು ದೇವದೇವೋತ್ತಮನ ದರ್ಶನವನ್ನು ತೆಗೆದುಕೊಂಡನು. ಹದಿನಾಲ್ಕು ಲೋಕಗಳ ಒಡೆಯನು ಹಸುಗಳನ್ನು ಕಾಯುವ ಹದನವನ್ನು ಕಂಡು ಅವನಿಗೇ ಕೌತುಕವಾಯಿತು. ಆ ದೇವತಾ ಸಾರ್ವಭೌಮನ ದನಗಾಹಿಯ ಸ್ವರೂಪವನ್ನು ಕಂಡು ಅವನ ಸಾವಿರ ಕಣ್ಣುಗಳೂ ಆಶ್ಚರ್ಯದಿಂದ ಅರಳಿದವು. ಮೇಲೆ ಆಗಸದಲ್ಲಿ ಗರುಡನು ಅದೃಶ್ಯನಾಗಿ ನಿಂತುಕೊಂಡು ತನ್ನ ಎರಡೂ ರೆಕ್ಕೆಗಳನ್ನು ಮೇಲೆತ್ತಿ ಕೃಷ್ಣನ ಶರೀರದ ಮೇಲೆ ಬಿಸಿಲು ಬೀಳದಂತೆ ಬಿಡಿಸಿ ಹಿಡಿದಿದ್ದನು. ದೇವೇಂದ್ರನು ಐರಾವತದಿಂದ ಇಳಿದು ಆ ಮಧುಸೂದನನನ್ನು ಕುರಿತು ಏಕಾಂತದಲ್ಲಿ ನಗುತ್ತ ನುಡಿದನು. ''ಕೃಷ್ಣ, ನಾನು ಈಗ ನಿನ್ನ ಬಳಿಗೆ ಬಂದ ಕಾರಣವನ್ನು ತಿಳಿಸುತ್ತೇನೆ ಕೇಳು. ಅಖಿಲಜಗದಾಧಾರನಾದ ನೀನು ಧರೆಯ ಹೊರೆಯನ್ನು ಹಗುರಗೊಳಿಸಲಿಕ್ಕಾಗಿ ನೆಲಕ್ಕೆ ಇಳಿದ ಸಾಕ್ಷಾತ್ ನಾರಾಯಣನೇ ಸರಿ. ನನಗಾಗಿ ಪ್ರತಿವರ್ಷವೂ ಮಾಡುವ ಯಜ್ಞಭಂಗವಾದುದನ್ನು ನೋಡಿ ನನಗೆ ಕೋಪ ಬಂದಿತು. ಪ್ರಚಂಡವಾದ ಮುಗಿಲಿನ ಹಿಂಡುಗಳನ್ನು ಕರೆದು ಗೋಕುಲವನ್ನೇ ನಾಶಮಾಡಿಬಿಡಲು ಆಜ್ಞೆಗೈದೆ. ಅದರಿಂದಲೇ ಇಷ್ಟೆಲ್ಲ ಅನರ್ಥವಾದುದು. ಆದರೆ ಗೋವರ್ಧನ ಗಿರಿಯನ್ನೇ ಕಿತ್ತಿ ಎತ್ತಿಹಿಡಿದು ನೀನು ಗೋಗಳನ್ನು ರಕ್ಷಿಸಿದಿ. ಗೋಪಾಲಕರನ್ನು ಕಾಪಾಡಿದಿ. ನಿನ್ನ ಈ ಶೂರ ಸಾಹಸವು ಅತ್ಯದ್ಭುತವಾದುದು. ಇದರಿಂದ ನಾನೂ ಬಹಳ ಹಿಗ್ಗಿದ್ದೇನೆ. ಒಂಟಿಗೈಯಿಂದ ಆ ದೊಡ್ಡ ಗುಡ್ಡವನ್ನು ಎತ್ತಿದುದು ಒಂದು ಅದ್ಭುತವಾದ ದಿವ್ಯಕಾರ್ಯ. ಇದರಿಂದ ದೇವತೆಗಳಿಗೆಲ್ಲ ನೀನು ಯಾರು ಎನ್ನುವ ಅರಿವು ನಿಚ್ಚಳವಾಗಿ ಹೃದಯದಲ್ಲಿ ಮೂಡಿದೆ. ನೀನು ಗೋಗಳನ್ನು ರಕ್ಷಣೆಮಾಡಿದುದನ್ನು ಕಂಡು ಸಂತಸಗೊಂಡ ಕಾಮಧೇನುವೇ ಮೊದಲಾದ ಆಕಳುಗಳು ನಿನ್ನನ್ನು ಸತ್ಕರಿಸಬೇಕೆಂದು ಇಲ್ಲಿಗೇ ನನ್ನನ್ನೇ ಕೊಟ್ಟು ಕಳಿಸಿರುತ್ತವೆ. ಆ ಗೋಮಾತೆಗಳ ಮಾತಿನಂತೆ ನಾನು ನಿನಗೆ ಉಪೇಂದ್ರಪದದಲ್ಲಿ ಪಟ್ಟಾಭಿಷೇಕಮಾಡುತ್ತೇನೆ. ಇಂದಿನಿಂದ ನೀನು ಗೋವುಗಳ ಇಂದ್ರನಾಗಿ 'ಉಪೇಂದ್ರ' ಎಂದು ಕರೆಯಲ್ಪಡುವಿ.''

ಹೀಗೆ ನುಡಿದ ಆ ಶಚೀಪತಿಯು ಐರಾವತದ ಮೇಲೆ ಇರಿಸಿರುವ ಘಂಟೆ ಮೊದಲಾದ ಪೂಜಾದ್ರವ್ಯಗಳನ್ನು ತೆಗೆದುಕೊಂಡು ಬಂದು ಪವಿತ್ರವಾದ ನೀರಿನಿಂದ ಶ್ರೀ ಕೃಷ್ಣನಿಗೆ ಅಭಿಷೇಕ ಮಾಡಿದನು. ಇಂದ್ರನು ಗೋವರ್ಧನ ಗಿರಿಯಲ್ಲಿ ಉಪೇಂದ್ರನ ಪಟ್ಟಾಭಿಷೇಕ ಮಾಡುತ್ತಿರುವಾಗ ಎಲ್ಲ ಹಸುಗಳೂ ಹರ್ಷಾತಿರೇಕದಿಂದ ತೊರೆಬಿಟ್ಟು ಹಾಲನ್ನು ಸುರಿಸಿದವು. ಧಾರಾಕಾರವಾಗಿ ಸೋರಿದ ಆ ಕ್ಷೀರಧಾರೆಗಳಿಂದ ಭೂಮಂಡಲವೆಲ್ಲವೂ ನನೆದು ಹೋಯಿತು. ಇಂತು ಗೋವುಗಳ ವಾಕ್ಯದಂತೆ ಇಂದ್ರನು ಕೃಷ್ಣನಿಗೆ ಕ್ಷೀರಾಭಿಷೇಕವನ್ನು ಮಾಡಿ ಶ್ರದ್ಧೆಯಿಂದ ಒಡಗೂಡಿ ಪ್ರೀತಿಪೂರ್ವಕವಾಗಿ ನುಡಿಗಳನ್ನಾಡಿದನು.

''ಮಹಾನುಭಾವ'' ಗೋವುಗಳ ಮಾತಿನಂತೆ ನಿನಗೆ ಅಭಿಷೇಕ ಮಾಡಿದ್ದಾಯಿತು. ಈಗ ನನ್ನದೊಂದು ಮಾತನ್ನು ದಯಮಾಡಿ ನಡೆಸಿಕೊಡಬೇಕು. ಭೂಭಾರ ಹರಣರೂಪವಾದ ಭಗವತ್ಕಾರ್ಯದಲ್ಲಿ ಯಥಾಶಕ್ತಿ ಸೇವೆ ಸಲ್ಲಿಸಲಿಕ್ಕಾಗಿ ನನ್ನ ಅಂಶಭೂತನಾದ ಅರ್ಜುನನು ಭೂಮಿಯಲ್ಲಿ ಅವತರಿಸಿದ್ದಾನೆ, ಅವನನ್ನು ರಕ್ಷಿಸುವ ಹೊಣೆ ನಿನ್ನದು. ಭೂಭಾರಹರಣರೂಪವಾದ ನಿನ್ನ ಕಾರ್ಯದಲ್ಲಿ ಅವನಿಂದ ಶಕ್ಯವಿದ್ದ ಸೇವಾಸಹಾಯವನ್ನು ನೀನು ಸ್ವೀಕರಿಸಬೇಕು. ಮತ್ತು ನನ್ನ ಪ್ರತಿರೂಪದಂತೆ ಇದ್ದ ಅವನನ್ನು ಕರುಣೆಯಿಂದ ಕಾಪಾಡಬೇಕು''. ಇಂದ್ರನ ಈ ನುಡಿಯನ್ನು ಕೇಳಿ ಅರ್ಜುನನನ್ನು ರಕ್ಷಿಸುವ ಆಶ್ವಾಸನೆಯನ್ನೀಯುತ್ತ ಕೃಷ್ಣನು ನುಡಿದನು. ''ದೇವರಾಜ, ನಿನ್ನ ಅಂಶಸಂಭೂತನಾದ ಪಾರ್ಥನನ್ನು ನಾನು ಚೆನ್ನಾಗಿ ಬಲ್ಲೆ. ನಾನು ನೆಲದ ಮೇಲೆ ಇರುವವರೆಗೂ ಅರ್ಜುನನ್ನು ಕಾಯುತ್ತೇನೆ. ನಾನಿರುವಾಗ ಅವನನ್ನು ಯಾರೂ ಯುದ್ಧದಲ್ಲಿ ಗೆಲ್ಲಲಾರರು. ಕಂಸ, ಅರಿಷ್ಟ, ಕೇಶಿ, ಕುವಲಯಾಪೀಡ, ನರಕಾಸುರ ಮುಂತಾದ ದುಷ್ಟ ದೈತ್ಯರೆಲ್ಲರ ವಿನಾಶವಾದ ಬಳಿಕ ಕುರುಕ್ಷೇತ್ರದಲ್ಲಿ ಮಹಾಯುದ್ಧವಾಗುವದು. ಭೂಮಿಯ ಭಾರವು ಇಳಿಯುವದು, ಈ ಯುದ್ಧದಲ್ಲಿಯೇ. ಇಂದ್ರ, ನೀನಿನ್ನು ಹೋಗಬಹುದು. ನಿನ್ನ ಪುತ್ರನಾದ ಅರ್ಜುನನ ಬಗೆಗೆ ನೀನೇನೂ ಯೋಚಿಸುವ ಕಾರಣವಿಲ್ಲ. ಕುರುಕ್ಷೇತ್ರದಲ್ಲಿ ಘನಘೋರವಾದ ಕುರುಪಾಂಡವರ ಸಂಗ್ರಾಮವು ಮುಗಿದ ಬಳಿಕ ನಿನ್ನ ಮಗನಾದ ಅರ್ಜುನ ಸಹಿತ ಪಂಚಪಾಂಡವರನ್ನು ತಾಯಿ ಕುಂತೀದೇವಿಗೆ ಸುರಕ್ಷಿತವಾಗಿ ಒಪ್ಪಿಸುವಭಾರ ನನ್ನದು.''

ಸುರಪತಿಯು ಈ ಶ್ರೀ ಕೃಷ್ಣನ ಮಾತನ್ನು ಕೇಳಿ ಸಂತುಷ್ಟನಾಗಿ ಐರಾವತವನ್ನು ಏರಿ ಸ್ವರ್ಗಕ್ಕೆ ಪ್ರಯಾಣಮಾಡಿದನು. ಕೃಷ್ಣನು ಗೋಗಳಿಂದಲೂ, ಗೋಪಾಲಕರಿಂದಲೂ ಕೂಡಿಕೊಂಡು ಗೋಪಿಯರ ದೃಷ್ಟಿಪಾತದಿಂದ ಪೂತವಾದ ಪಥದಿಂದ ವ್ರಜಭೂಮಿಗೆ ದಯಮಾಡಿದನು.

*ಶ್ರೀ ವಿಷ್ಣುಮಹಾಪುರಾಣದಲ್ಲಿನ ಪಂಚಮಾಂಶದ ಹನ್ನೆರಡನೇ ಅಧ್ಯಾಯ ಸಂಪೂರ್ಣ*

—o—

## ಕೃಷ್ಣನೆಂದರೆ ಯಾರು ?

ಅಧ್ಯಾಯ - ೧೩

ಇಂದ್ರನು ಅಮರಾವತಿಗೆ ನಡೆದ ಬಳಿಕ ಇತ್ತ ಗೋಪಾಲಕರು ಕೃಷ್ಣನ ಸುತ್ತು ಮುತ್ತು ನೆರೆದರು. ಕೃಷ್ಣನ ಲೋಕೋತ್ತರವಾದ ಗೈಮೆಗಳನ್ನು ಕಂಡು ಅವರಿಗೆ ಉಂಟಾದ ಭಾವನೆಗಳು ಅವರನ್ನು ಕೌತುಕದ ಶಿಖರಕ್ಕೆ ತೂರಿದ್ದವು. ಗೋವರ್ಧನ ಬೆಟ್ಟವನ್ನು ಬೆರಳತುದಿಯ ಮೇಲೆ ಕುಣಿಸಿದ್ದಂತೂ ಅವರ ಕುತೂಹಲಕ್ಕೆ ಕಳಸವಿಟ್ಟಿತು. ಇವನ ನಿಜವಾದ ಸ್ವರೂಪವನ್ನು ತಿಳಿದು ಬಿಡಬೇಕೆಂದು ಸಂಕಲ್ಪಿಸಿ ಅವನಲ್ಲಿಗೆ ಬಂದರು. ಮತ್ತು ಅವರು ನೇರವಾಗಿ ಕೃಷ್ಣನಿಗೆ ಸವಾಲು ಹಾಕಿದರು ''ಕೃಷ್ಣಾ ನಿಜಹೇಳು. ನೀನು ಯಾರು ? ನೀನು ಒಬ್ಬ ಮಹಾನುಭಾವ ಎನ್ನುವದರಲ್ಲಿ ನಮಗಿನ್ನು ಸಂದೇಹವುಳಿದಿಲ್ಲ. ನಮ್ಮನ್ನು ಎಂಥೆಂಥ ಸಂಕಟಗಳಿಂದ ನೀನು ಪಾರು ಮಾಡಿರುವೆಯೆಲ್ಲ ! ಬೆಟ್ಟವನ್ನು ಎತ್ತುವದು ಏನು ಸಾಮಾನ್ಯ ಕೆಲಸವೇ ! ನಿನ್ನ ಬಾಲಲೀಲೆಗಳನ್ನು ನೋಡಿದರೆ ಅವೆಲ್ಲವೂ ದಿವ್ಯ ಕರ್ಮಗಳಾಗಿ ನಮಗೆ ಕಂಡು ಬರುತ್ತವೆ. ಇಂಥ ಮಹಾ ಮಹಿಮೋಪೇತನಾದ ನಿನಗೆ ಈ ಗವಳಿಗರ ಕುಲದಲ್ಲಿ ಹುಟ್ಟು ಹೇಗಾಯಿತು ? ನೀನು ಜಲದಲ್ಲಿ ಕಾಲಿಯನನ್ನು ಕೊಂದಿ. ನೆಲದಲ್ಲಿ ಧೇನುಕನನ್ನು ಸಂಹರಿಸಿದಿ. ಗೋವರ್ಧನ ಗಿರಿಯನ್ನು ಮಳೆಕೊಡೆಯನ್ನಾಗಿ ನೆಗಹಿ ಹಿಡಿದೆ. ಇದನ್ನೆಲ್ಲ ನೋಡಲಾಗಿ ನಮಗೇಕೋ ಸಂಶಯ ಬರುತ್ತಲಿದೆ. ದೇವರ ಪಾದಮುಟ್ಟಿ ನಾವು ಆಣೆ ಮಾಡಿ ಹೇಳುತ್ತೇವೆ. ಕೃಷ್ಣ ನೀನು ನರನಲ್ಲ. ಶಿಶುವಾಗಿದ್ದಾಗಿನಿಂದ ನಿನ್ನ ಶೌರ್ಯ, ಧೈರ್ಯ ಹಾಗೂ ಕಾರ್ಯಗಳನ್ನು ಕಣ್ಣಾರೆ ಕಂಡು ಯಾರಾದರೂ ಹೇಳಬಹುದು ಕೃಷ್ಣ ಮನುಷ್ಯನಲ್ಲವೆಂದು. ನಿನ್ನ ಗುರುತರವಾದ ಗೈಮೆಗಳೋ ದೇವಾಧಿದೇವತೆಗಳಿಗೂ ಮಾಡಲು ಅಶಕ್ಯವಾಗಿವೆ. ಆದರೆ ನಿನ್ನ ಹುಟ್ಟು ನಮ್ಮಂಥ ಹೀನ ಕುಲದಲ್ಲಿ. ಇದು ಏನು ಗುಟ್ಟು ? ಇಂಥ ಎಳಮೆಯಲ್ಲಿ ದೇವಮಾನವ ದುರ್ಲಭವಾದ ಇಂಥ ಶೌರ್ಯ, ಸಾಹಸಗಳು ನಿನ್ನಲ್ಲಿ ಬಂದದ್ದು ಹೇಗೆ? ನಾವು ಎಷ್ಟು ವಿಚಾರಿಸಿದರೂ ಈ ನಮ್ಮ ಶಂಕೆಗೆ ಸಮಾಧಾನವೇ ದೊರಕದಂತಾಗಿದೆ. ಆದರೆ ಕೃಷ್ಣಾ, ನೀನು ದೇವನೋ ! ದಾನವನೋ ! ಯಕ್ಷನೋ ! ಗಂಧರ್ವನೋ ! ಯಾವನೇ ಆಗಿರಲಿ. ಅದರ ವಿಚಾರ ನಮಗೇಕೆ ? ಆದರೆ ''ಏವಂ ಗುಣವಿಶೇಷ ವಿಶಿಷ್ಟ''ನಾದ ನೀನು ನಮ್ಮ ಕುಲದಲ್ಲಿ ಜನಿಸಿದ್ದು ನಮ್ಮ ದೊಡ್ಡ ಭಾಗ್ಯ. ನಮ್ಮ ಬಾಂಧವನಾದದ್ದಂತೂ ನಮಗೆ ತೀರ ಹಿಗ್ಗು. ಭಾರೀ ಹೆಮ್ಮೆ, ಕೃಷ್ಣ, ನೀನು ಯಾರಿದ್ದರೂ ನಿನಗೆ ನಮ್ಮ ಸಾಷ್ಟಾಂಗ ನಮಸ್ಕಾರ.''

### ನಾನೊಬ್ಬ ಗೋಪ ಬಂಧು

ಇದನ್ನು ಕೇಳಿ ಕೃಷ್ಣನು ಒಂದು ಕ್ಷಣ ಸುಮ್ಮನೇ ಕುಳಿತನು. ತುಸು ಕೋಪ, ಅದೂ ಕೂಡ ಪ್ರಣಯ ಕೋಪ. ಮಹಾಬುದ್ಧಿವಂತನಾದ ಆ ಭಗವಂತ ತನ್ನ ಮೇಲೆ ವಿಲಕ್ಷಣ ಶ್ರದ್ಧೆಯನ್ನು ತೋರಿಸಿದ ಆತ್ಮೀಯರನ್ನು ಕುರಿತು ಮೆಲ್ಲನೇ ನುಡಿದ. ''ನಾನು ನಿಮ್ಮ ಸಂಬಂಧಿಕನಾಗಿದ್ದು ನಿಮಗೇನೂ ನಾಚಿಕೆಯಿಲ್ಲವಷ್ಟೆ! ನಿಮಗೆ ನನ್ನ ಮೇಲೆ ನಿಜವಾಗಿ ಪ್ರೀತಿಯಿದ್ದರೆ ನನಗೆ ಅಷ್ಟೇ ಸಾಕು. ನೀವು ನನ್ನನ್ನು ಹೊಗಳುವಂತಾಗಿದ್ದರೆ ಅದು ನನ್ನ

ಧನ್ಯತೆ. ನೀವೆಲ್ಲರೂ ನನ್ನನ್ನು ನಿಮ್ಮ ಎಲ್ಲ ಬಂಧುಗಳಂತೆ ಒಬ್ಬ ಆತ್ಮೀಯ ಬಂಧು ಎಂದು ಭಾವಿಸಿಬಿಡಿರಿ. ಇನ್ನೇನುಬೇಕು? ನಾನಾವ ದೇವನೂ ಅಲ್ಲ, ದಾನವನೂ ಅಲ್ಲ, ಯಕ್ಷನೂ ಅಲ್ಲ, ಗಂಧರ್ವನೂ ಅಲ್ಲ. ನಾನೊಬ್ಬ ಗೋಪಾಲ ಬಂಧು. ಸಾಕಲ್ಲವೇ ? ಇದರ ಹೊರತು ಬೇರಾವ ವಿಚಾರವನ್ನೂ ನೀವೂ ತಲೆಯಲ್ಲಿ ಹಾಕಿಕೊಳ್ಳಬೇಡಿರಿ.''

ಕೃಷ್ಣನ ಈ ನುಡಿಗಳನ್ನಾಲಿಸಿ ಯಾವ ಗೋಪಾಲಕರೂ ಪ್ರತಿಯಾಗಿ ನುಡಿಯಲಿಲ್ಲ. ಕೃಷ್ಣನ ಹುಸಿಮುನಿಸು ಅವರೆಲ್ಲರ ಬಾಯಿಗೆ ಬೀಗಹಾಕಿತು. ಎದ್ದು ಅವರೆಲ್ಲರೂ ವನಕ್ಕೆ ತೆರಳಿದರು.

## ಕೃಷ್ಣನ ರಾಸ ಕ್ರೀಡೆ

ಕೃಷ್ಣನು ವನಾಂತರದಲ್ಲಿ ಶಾಂತಮನಸ್ಸಿನಿಂದ ನಿಂತು ದಿಗಂತದೆಡೆಗೆ ದೃಷ್ಟಿಹರಿಸಿದ. ಸುತ್ತು ಮುತ್ತಲಿನ ನಿಸರ್ಗನಟಿಯ ಪಟಪರಿವರ್ತನದೆಡೆಗೆ ತನ್ನ ನೋಟವನ್ನು ತಿರುಗಿಸಿದ. ಶರತ್ಕಾಲ. ರಾತ್ರಿಯ ಸಮಯ. ತಿಳಿನೀಲವಾದ ಮುಗಿಲಿನಲ್ಲಿ ಚಾರುಚಂದ್ರನು ತುಂಡು ಮೋಡಗಳೊಂದಿಗೆ ತೇಲಾಡುತ್ತಲಿದ್ದಾನೆ. ನೆಲದಲ್ಲಿ ಬಿರಿದ ನೈದಿಲೆಗಳ ಕಮ್ಮನೆಯ ಮರವಾಸನೆಯು ದಿಗಂತರಾಳದಲ್ಲೆಲ್ಲ ಕಂಪಿಡಿಸಿದೆ. ಬನ ಬನಗಳಲ್ಲಿ ನಗುವ ಹೂಗಳು. ಹೂಗಳಲ್ಲಿ ತುಂಬಿರುವ ದುಂಬಿಗಳು. ದುಂಬಿಗಳ ದಂಡು ಜೇನಿನ ಬೇಟೆಗೆ ನಡೆದಲ್ಲೆಲ್ಲ ಗುಂಜಾರವದ ಮಂಜುಘೋಷ. ಪ್ರಕೃತಿಯೆಲ್ಲವೂ ಮನೋಹರವಾಗಿ ಕಂಗಳೆದುರು ಕಂಗೊಳಿಸುತಲಿದೆ.

ನಿಸರ್ಗದ ಈ ಸೊಬಗನ್ನು ಕಂಡು ಕೃಷ್ಣನು ಗೋಪಿಕಾಸ್ತ್ರೀಯರ ಜೊತೆಗೆ ಲೀಲಾವಿಲಾಸವನ್ನು ಮಾಡಲು ಬಯಸಿದನು. ಬಲರಾಮನಿಲ್ಲದೇ ಅವನು ಒಂದು ದಿನ ಶರದ್ ರಾತ್ರಿಯಲ್ಲಿ ಒಂದು ಮಂಜುಲತಾಕುಂಜದಲ್ಲಿ ಕುಳಿತು ಮಧುಕಂಠದಿಂದ ಗಾಯನ ಮಾಡಿದನು. ಅವನ ಆ ರಮ್ಯ ಗಾಯನವನ್ನು ಕೇಳಿ ಗೋಪವನಿತೆಯರು ಮನೆ-ಮಾರುಗಳನ್ನು ತೊರೆದು ಅವಸರದಿಂದ ಅಲ್ಲಿಗೆ ಬಂದರು. ಒಬ್ಬ ಗೋಪಾಂಗನೆಯು ಶ್ರೀ ಕೃಷ್ಣನ ಗಾನಗಿರಡಿಯನ್ನು ಅನುಸರಿಸಿ ಅವನ ದನಿಗೂಡಿಸಿ ಆ ಕಾಲಕ್ಕೆ ತಕ್ಕಂತೆ ಮೆಲ್ಲನೇ ಹಾಡಿದಳು. ಕೃಷ್ಣನ ಕೊರಳ ಮುರಳಿಯ ಮಧುರ ನಾದವನ್ನು ಕೇಳಿ ಮತ್ತೊಬ್ಬ ಗೋಪಮಾನಿನಿಯೂ ಅದರಲ್ಲಿಯೇ ಮೈಮರೆತಳು. ಮಗದೊಬ್ಬಳು, ''ಕೃಷ್ಣಾ, ಕೃಷ್ಣಾ'' ಎಂದು ಕೃಷ್ಣನ ನಾಮವನ್ನು ಉಚ್ಚರಿಸುತ್ತಿರುವಂತೆಯೇ ಲಜ್ಜಿತಳಾದಳು. ಪ್ರೇಮಾಂಧಳಾಗಿ ಅವನ ಪಕ್ಕದಲ್ಲಿಯೇ ಮಗದೊಬ್ಬಳು ಹೋಗಿನಿಂತಳು.

ಇನ್ನೊಬ್ಬಳು ಕೃಷ್ಣನ ಆ ದನಿಯನ್ನು ಕೇಳಿ ಅವನೆಡೆಗೆ ಹೋಗಬೇಕೆಂದು ಹೊರಟು ಮನೆಯ ಹೊರಗೆ ಬಂದಾಗ ಬಾಗಿಲ ಬಳಿಯಲ್ಲಿಯೇ ಗುರು-ಹಿರಿಯರೂ ನಿಂತಿದ್ದನ್ನು ಕಂಡಳು. ಅವರನ್ನು ಉಲ್ಲಂಘಿಸಿ ಕೃಷ್ಣನೆಡೆಗೆ ಹೋಗಲವಳಿಗೆ ಸಾಧ್ಯವಾಗಲಿಲ್ಲ. ಅವಳು ನಿಂತಲ್ಲಿಯೇ ಕಣ್ಣು ಮುಚ್ಚಿ ತನ್ಮಯಳಾಗಿ ಗೋವಿಂದನನ್ನು ಏಕ ಚಿತ್ತದಿಂದ ಧ್ಯಾನ ಮಾಡಿದಳು. ಕೃಷ್ಣನನ್ನು ಕಾಣುವ ಭಾಗ್ಯವು ತನಗೆ ದೊರೆಯದ್ದಕ್ಕಾಗಿ ಅವಳಿಗೆ ಬಹಳ ಪಶ್ಚಾತ್ತಾಪವಾಯಿತು. ಆ ಪಶ್ಚಾತ್ತಾಪದಿಂದಲೇ ಅವಳ ಪಾಪರಾಶಿಯು ಕರಗಿತು.

ಕೃಷ್ಣನನ್ನು ಕಾಣದಿದ್ದರೆ ಈ ಜೀವದಿಂದಿದ್ದೇನು ಫಲ ಎಂದು ಚಿಂತಿಸಿ ಅವನನ್ನು ಅನನ್ಯ ಚಿತ್ತದಿಂದ ಚಿಂತಿಸಿ ಮುಕ್ತಿಯನ್ನೇ ಹೊಂದಿದಳು. ಇತ್ತ ಗೋವಿಂದನು ಗೋಪಿಕಾಸ್ತ್ರೀಯರಿಂದ ಸುತ್ತುವರಿಯಲ್ಪಟ್ಟು ಚಂದ್ರಸುಂದರವಾದ ಈ ಶಾರದ ರಾತ್ರಿಯಲ್ಲಿ ರಾಸಕ್ರೀಡೆಯನ್ನಾರಂಭಿಸಿದನು. ಲೀಲಾಲೋಲನಾದ ಕೃಷ್ಣನು ಆ ಸ್ಥಳವನ್ನು ಬಿಟ್ಟು ಬೇರೆಡೆಗೆ ಹೋದಾಗ ಗೋಪಿಕಾಸ್ತ್ರೀಯರು ವೃಂದಾವನದ ಒಳಭಾಗದಲ್ಲಿ ತಿರುಗಾಡಿದರು. ಅವನನ್ನೇ ಹುಡುಕಿದರು. ಮಿಡುಕಿದರು. ಕೊನೆಗೆ ಹಾಡುತ್ತ ಪಾಡುತ್ತ ಕುಳಿತರು.

## ಕೃಷ್ಣನ ಪಾತ್ರದಲ್ಲಿ ಗೋಪಾಂಗನೆಯರು

ಅವರಿಗೆ ಎಲ್ಲಿದ್ದರೂ ಕೃಷ್ಣನದೇ ಧ್ಯಾನ. ಅವರ ಹೃದಯಕ್ಕೆ ನಿರಂತರವೂ ಕೃಷ್ಣನದೇ ಧ್ಯಾಸ. ಅವರು ಮಾತನಾಡಿದರೆ ಕೃಷ್ಣನ ಮಾತೇ. ಹಾಡು ಹಾಡಿದರೆ ಕೃಷ್ಣನದೇ ಹಾಡು. ಆಟವಾಡಿದರೂ ಕೂಡ ಕೃಷ್ಣನದೇ ಆಟ. ಅವರಲ್ಲಿ ಒಬ್ಬಳು 'ನಾನು ಕೃಷ್ಣನಾಗಿದ್ದೇನೆ, ಕೃಷ್ಣನಂತೆಯೇ ನಡೆಯುತ್ತೇನೆ' ಎಂದು ಹೇಳಿ ಆ ಮುಕುಂದನ ಬೆಡಗಿನ ನಡಿಗೆಯ ಸಡಗರವನ್ನು ಅನುಕರಿಸುತ್ತಿದ್ದಳು. ಮತ್ತೊಬ್ಬಳು ಕೃಷ್ಣನಾಗಿ ಅವನಂತೆಯೇ ದನಿ ತೆಗೆದು ಹಾಡುತ್ತಿದ್ದಳು. ಮಗದೊಬ್ಬಳು. ''ಎಲೋ ದುಷ್ಟ ಕಾಲಿಯ, ನಿಲ್ಲು ನಿಲ್ಲು ಇದೋ ಕೃಷ್ಣನಾದ ನಾನೀಗಲೇ ಬಂದೆ'' ಎಂದು ಹೇಳಿ ತನ್ನ ಕೈ ಕಾಲುಗಳಿಂದ ಕಾಲಿಯಾ ಮರ್ದನದ ಕತೆಯನ್ನೆಲ್ಲ ಅಭಿನಯ ಮಾಡಿ ತೋರಿಸುತ್ತಿದ್ದಳು. ಮತ್ತೊಬ್ಬಳು ಗೋವರ್ಧನೋದ್ಧಾರದ ಸಂದರ್ಭವನ್ನು ಅಭಿನಯಿಸುತ್ತ ''ಎಲೋ ಗೋಪಾಲಕರೇ, ಗಾಬರಿಯಾಗಬೇಡಿರಿ. ಇನ್ನು ಮಳೆಯ ಅಂಜಿಕೆಯಿಲ್ಲ. ಈ ಗೋವರ್ಧನ ಬೆಟ್ಟವನ್ನು ನಾನು ಎತ್ತಿ ಹಿಡಿದಿದ್ದೇನೆ. ನೀವೆಲ್ಲರೂ ಯಾವ ಶಂಕಾಂತಕವಿಲ್ಲದೇ ಇಲ್ಲಿ ಬಂದು ನಿಲ್ಲಿರಿ' ಎಂದು ನುಡಿದು ನಟಿಸಿದಳು. ಈ ರೀತಿಯಾಗಿ ನಾನಾಪ್ರಕಾರದ ಕೃಷ್ಣ ಲೀಲೆಗಳನ್ನು ಆಡುತ್ತ, ಹಾಡುತ್ತ, ಪಾಡುತ್ತ ರಮಣೀಯವಾದ ವೃಂದಾವನದ ತುಂಬ ಕೃಷ್ಣನನ್ನು ಕಾಣದೇ ಕಾತರರಾಗಿ ತಿರುಗಾಡಿದರು.

## ಗೋಪಿಯರ ಗೋಳಾಟ

ದಾರಿಯಲ್ಲಿ ಓರ್ವ ಗೋಪಾಂಗನೆಯು ನೆಲವನ್ನು ನಿರುಕಿಸಿ ಒಮ್ಮೆಲೇ ಪುಲಕಿತಳಾಗಿ ನಿಂತಳು. ಕಣ್ಣು ಅರಳಿಸಿ ಮಣ್ಣಿನಲ್ಲಿ ಮೂಡಿದ ಧ್ವಜ, ವಜ್ರ, ಕಮಲಗಳಿಂದ ಚಿನ್ಹಿತವಾದ ಪಾದರೇಖೆಗಳನ್ನು ಕಂಡಳು. ಅದನ್ನು ಕಂಡಕೂಡಲೇ ಅವಳ ಮೈತುಂಬ ಹಿಗ್ಗಿನ ಮುಳ್ಳು ಮೂಡಿ ನುಡಿದಳು. ''ಕೃಷ್ಣನ ಹೆಜ್ಜೆಗಳು, ಸಖಿಯರೇ ಬನ್ನಿರಿ. ಲೀಲೆಯಿಂದ ಲಲಿತವಾಗಿ ಹೆಜ್ಜೆ ಇರಿಸುವ ಆ ಕೃಷ್ಣನ ಪಾದಗಳು ಇಲ್ಲಿ ಮೂಡಿವೆ ನೋಡಿ. ಅವನ ಜೊತೆಗೆ ಯಾರೋ ಓರ್ವ ಪುಣ್ಯ ಮಾಡಿದ ಹೆಣ್ಣಿರಬಹುದು, ಕೃಷ್ಣನ ಹೆಜ್ಜೆಯ ಅಕ್ಕಪಕ್ಕದಲ್ಲಿ ಮೂಡಿದ ಈ ಚಿಕ್ಕ ಚಿಕ್ಕ ಚರಣ ಚಿಹ್ನೆಗಳು ಕೃಷ್ಣನ ಜೊತೆಗೆ ನಡೆದು ಹೋದ ಅವನ ಪ್ರೇಯಸಿಯೋರ್ವಳ ಗುರುತನ್ನು ತೋರುವವು. ದಾಮೋದರನು ಇಲ್ಲಿ ನಿಶ್ಚಿತವಾಗಿಯೂ ಅವಳಿಗಾಗಿ ಈ ಬಳ್ಳಿಯಿಂದ ಹೂಗಳನ್ನು ಹರಿದಿದ್ದಾನೆ. ಏಕೆಂದರೆ ಇಲ್ಲಿಯ, ಹೆಜ್ಜೆಗಳ ಮುಂಭಾಗವು ಮಾತ್ರ ಹುಡಿಯಲ್ಲಿ ಹೆಚ್ಚು ಹೂತು ಕೂತಂತಾಗಿದೆ.

## ಮತ್ಸರದ ಕಿಡಿ ಕಿಚ್ಚಾದಾಗ

ಇಲ್ಲಿ ಆ ಕೃಷ್ಣನು ಕುಳಿತುಕೊಂಡು ಹರಿದ ಹೂಗಳಿಂದ ಯಾವಳೋ ಭಾಗ್ಯವತಿಯನ್ನು ಅಲಂಕಾರ ಮಾಡಿದ್ದಾನೆ. ನಿಜವಾಗಿಯೂ ಆ ಅದೃಷ್ಟಶಾಲಿಯು ಜನ್ಮಾಂತರದಲ್ಲಿ ಶ್ರೀ ವಿಷ್ಣುವನ್ನು ಹೂಗಳಿಂದ ಅರ್ಚಿಸಿದ್ದಾಳೆ. ಸ್ವಯಂ ಕೃಷ್ಣನೇ ಹೂಗಳಿಂದ ಮಾಲೆಕಟ್ಟಿ ಮೌಲಿಯಲ್ಲಿ ಅವಳಿಗೆ ತನ್ನ ಕೈಯಿಂದಲೇ ಮುಡಿಸಿ ಮನ್ನಣೆಯಿತ್ತದ್ದರಿಂದ ಆ ಮಾನಿನಿಯ ಮನದಲ್ಲಿ ತುಸು ಅಹಂಕಾರ ಮೂಡಿರಬಹುದು. ಆದುದರಿಂದ ಅವಳನ್ನು ಬಿಟ್ಟು ಬೇರೆ ಮಾರ್ಗದಿಂದಲೇ ಆ ನಂದಕುಮಾರನು ಇಲ್ಲಿಂದ ಹೊರಟುಹೋಗಿದ್ದಾನೆ. ಆ ಕೃಷ್ಣನ ಹೆಜ್ಜೆ ಹಿಡಿದೇ ಹೋಗೋಣ ಬನ್ನಿ, ಓ, ಇಲ್ಲಿಯೂ ಅದೇ ಹಾಡು. ಯಾವಳೋ ಹರವು ಬೆನ್ನಿನ ಒಂದು ಹೆಣ್ಣು ಅವನ ಬೆನ್ನು ಹತ್ತಿದ್ದಾಳೆ. ಇವಳು ಕೃಷ್ಣನ ಹಿಂದಿನಿಂದ ಒಳ್ಳೆ ಅವಸರದಿಂದ ನಡೆದು ಹೋಗಿದ್ದಾಳೆ. ಆದುದರಿಂದಲೇ ಈ ಚರಣ ತುದಿಯ ಚಿಹ್ನವು ಮಣ್ಣಿನಲ್ಲಿ ಆಳವಾಗಿ ಹೂಳಿದೆ.

ಇತ್ತ ಓರ್ವಸಖಿಯು ಕೃಷ್ಣನ ಕೈಯಲ್ಲಿ ಕೈ ಹಾಕಿಕೊಂಡು ನಡೆದಿದ್ದಾಳೆ. ಇವಳ ಮೈಭಾರವೆಲ್ಲವೂ ಕೃಷ್ಣನ ಮೇಲೆಯೇ ಬಿದ್ದಿದೆ. ಆದುದರಿಂದಲೇ ಇಲ್ಲಿಯ ಈ ಹೆಜ್ಜೆಯ ಸಾಲುಗಳು ಪರಾಧೀನವಾದ ಪಾದ ವಿನ್ಯಾಸಗಳ ಗುರುತು ತೋರುತ್ತಿವೆ. ಇಗೋ ಇತ್ತ ನೋಡಿ, ಮತ್ತೊಬ್ಬ ಮನಸ್ವಿನಿಯನ್ನು ಕೃಷ್ಣನ ಬರಿಮೋರೆಯ ಮೇಲೆ ಕೈ ಎಳೆದು ಅವಮಾನಿಸಿದಂತಿದೆ. ನಿರಾಶಳಾದ ಅವಳು ಇಲ್ಲಿಂದ ತಿರುಗಿ ಹೋದದ್ದು ಈ ಎದುರು ಹೆಜ್ಜೆಗಳಿಂದ ತಿಳಿಯುತ್ತದೆ. ಇಲ್ಲಿಂದ ಮುಂದೆ ಕೃಷ್ಣನು ನಿಬಿಡವಾದ ವನಮಧ್ಯದಲ್ಲಿ ಪ್ರವೇಶಮಾಡಿದ್ದಾನೆ. ಅಲ್ಲಿ ಗಾಢಾಂಧಕಾರ. ಚಂದ್ರನ ಬೆಳದಿಂಗಳಿನ ಬೆಳಕು ಅಲ್ಲಿ ಕಾಣುವದಿಲ್ಲ. ಆದುದರಿಂದ ಇಲ್ಲಿಂದಲೇ ತಿರುಗಿರಿ'' ಎಂದು ಅಂದು ಆ ಗೋಪಿಕೆಯರು ಅಲ್ಲಿಂದ ಮರಳಿ ಯಮುನೆಯ ದಂಡೆಗೆ ಬಂದರು. ಕೃಷ್ಣನನ್ನು ಕಾಣದ್ದರಿಂದ ನಿರಾಶರಾದ ಅವರು ಅವನ ದಿವ್ಯವಾದ ಚರಿತ್ರವನ್ನು ಗಾನಮಾಡತೊಡಗಿದರು. ಅವರ ಪ್ರೇಮ ಪೂರ್ಣವಾದ ಆ ಗೀತವನ್ನು ಕೇಳಿ ಕೃಷ್ಣನು ಮತ್ತೆ ಕಾಣಿಸಿಕೊಂಡನು. ಅರಳಿದ ಹೊಂದಾವರೆಯಂತೆ ಸುಂದರವಾಗಿ ಕಂಡಿತು ಅವನ ಮುಖ.

## ''ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ''

ಓರ್ವ ಗೋಪ ಮಹಿಳೆಯು ದೂರದಿಂದಲೇ ಗೋವಿಂದನು ಬರುವದನ್ನು ಕಂಡು ಹಿಗ್ಗಿನಿಂದ 'ಕೃಷ್ಣಾ, ಕೃಷ್ಣಾ, ಕೃಷ್ಣಾ' ಎಂದು ನುಡಿದಳು. ಕೊರಳು ಬಿಗಿದು ಹೋದ ಅವಳಿಗೆ ಮುಂದೆ ಮಾತನಾಡಲಿಕ್ಕೇ ಬರಲಿಲ್ಲ. ಇನ್ನೊಬ್ಬಳು ಹುಬ್ಬು ಮುರಿದು, ಹಣೆಯನ್ನು ಆಕುಂಚನೆಗೈದು ಕೃಷ್ಣನನ್ನು ಚಿವುಗಣ್ಣಿನಿಂದ ನಿಟ್ಟಿಸಿದಳು. ದುಂಬಿಯು ತಾವರೆಯ ರಸವನ್ನು ಹೀರುವಂತೆ ತನ್ನ ನೇತ್ರವೆಂಬ ಭೃಂಗಗಳಿಂದ ಕೃಷ್ಣನ ಮುಖ ಕಮಲದ ಸೌಂದರ್ಯವನ್ನು ಪಾನಮಾಡಿದಳು. ಮಗದೊಬ್ಬಳು ಕೃಷ್ಣನನ್ನು ಕಂಡು ಆನಂದತುಂದಿಲಳಾಗಿ ಯೋಗಾರೂಢಳಂತೆ ಕಣ್ಣು ಮುಚ್ಚಿ

ಕುಳಿತುಕೊಂಡಳು. ಕೃಷ್ಣನ ರೂಪವು ಅವಳಿಗೆ ಧ್ಯಾನಗೋಚರವಾಗಿ ಕಂಗೊಳಿಸುತ್ತಿತ್ತು. ಕೃಷ್ಣನು ಕೆಲವರಿಗೆ ಮಧುರ ಮಾತುಗಳನ್ನಾಡಿ, ಮತ್ತೆ ಕೆಲವರಿಗೆ ಕಣ್ಣಿನಿಂದ ನೋಡಿ, ಇನ್ನೂ ಹಲವರಿಗೆ ಮೈಕೈ ಮುಟ್ಟಿ ಅವರೆಲ್ಲರನ್ನೂ ಸಂತೈಸಿದನು. ಆದುದರಿಂದ ಸಂತಸಗೊಂಡ ಗೋಪಿಯರಿಂದೊಡಗೂಡಿ ಶ್ರೀ ಕೃಷ್ಣನು ರಾಸಕ್ರೀಡೆಯನ್ನಾಡಿದನು.

## ರಾಸ ಲೀಲಾ ವಿಲಾಸ

ಮೊದಲು ಕೃಷ್ಣನು ಎಲ್ಲ ಗೋಪಿಯರ ಕೈ ಹಿಡಿದು ಸರಿಯಾದ ಸ್ಥಾನದಲ್ಲಿ ಅವರನ್ನು ಕುಂಡಲಾಕಾರವಾಗಿ ದುಂಡಾಗಿ ನಿಲ್ಲಿಸಿ, ರಾಸಮಂಡಲವನ್ನು ರಚಿಸಿದನು. ಕೃಷ್ಣನ ಕೈಸೋಕಿದ ಕೂಡಲೇ ಗೋಪಿಯರಿಗೆ ರೋಮಾಂಚನವಾಗುತ್ತಿತ್ತು. ಆ ರಾಸ ಮಂಡಲದಲ್ಲಿ ಕೃಷ್ಣನು ತನ್ನ ಸುಮಧುರ ಕಂಠದಿಂದ ಶರತ್ ಕಾಲವನ್ನೂ ಶರಚ್ಚಂದ್ರನನ್ನೂ ಕುರಿತು ಹಾಡತೊಡಗಿದನು. ಗೋಪಿಯರು ಕೃಷ್ಣನ ಚರಿತ್ರವನ್ನೇ ತಮ್ಮ ಕಾಂತಕೋಮಲ ವಾದ ಕಿನ್ನರ ಕಂಠದಿಂದ ಮೈದುಂಬಿ ಹಾಡಿಪಾಡಿದರು. ಅವರ ಕೈಗಳಲ್ಲಿಯ ಬಳೆಗಳ ಝುಣತ್ಕಾರವು ತಾಳ ಹಿಡಿಯುತ್ತಿತ್ತು. ಗೋಪಾಲವಿಲಾಸಿಯರಿಗೆ ಕೃಷ್ಣನ ಹೆಸರನ್ನು ತಮ್ಮ ಬಾಯಿಂದ ಎಷ್ಟು ಬಾರಿ ನೆನೆದು ಹಾಡಿದರೂ ತೃಪ್ತಿಯಿಲ್ಲ. ಮತ್ತೆ ಮತ್ತೆ ಕೃಷ್ಣನ ನಾಮ ಮತ್ತು ಕೃಷ್ಣಲೀಲೆಗಳನ್ನು ಅವರು ಕೊರಳೆತ್ತಿ ತಮ್ಮ ಕೋಕಿಲ ಕಂಠದಿಂದ ಹಾಡಿ ಕುಣಿದರು. ಕುಣಿದು ದಣಿದರು. ದಣಿದು ತಣಿದರು ತಣಿದು ನಲಿದರು.

ರಾಸವಿಲಾಸದಲ್ಲಿ ದುಂಡು ಸುತ್ತಿ ಸಾಮೂಹಿಕ ನೃತ್ಯಕ್ಕೆ ಸರಿಯಾಗಿ ಹೆಜ್ಜೆ ಹಾಕಿ ದಣಿದ ಗೋಪಾಂಗನೆಯೊಬ್ಬಳು ಗಾನತಾನಕ್ಕೆ ಸರಿಯಾಗಿ ತಾಳಹಿಡಿದ ತನ್ನ ಕೈಕಂಕಣಗಳನ್ನು ಝುಣತ್ಕರಿಸುತ್ತ ಕೃಷ್ಣನ ಹೆಗಲಮೇಲೆ ತೋಳನ್ನಿರಿಸಿ ಧನ್ಯತೆಯನ್ನು ಅನುಭವಿಸಿದಳು. ಮತ್ತೊಬ್ಬಳು ಸುಸ್ವರಕಂಠದಿಂದ ಗಾನಗಿರಡಿಗಳನ್ನು ಹೊರಡಿಸುವ ಕೃಷ್ಣನ ದಿವ್ಯ ಸಂಗೀತವನ್ನು ಬಣ್ಣಿಸುವ ನೆವದಿಂದ ತನ್ನ ತೋಳುಗಳಿಂದ ಅವನನ್ನು ತಬ್ಬಿಕೊಂಡು ಚುಂಬನಗೈದು ಕೃತಾರ್ಥಳಾದಳು. ಕೃಷ್ಣನು ಉಚ್ಚಕಂಠದಿಂದ ರಾಸೋಲ್ಲಾಸಕಾರಿಯಾದ ಮಧುರಗೀತೆಯ ಪಲ್ಲವಿಯನ್ನು ನುಡಿದಾಗ ಎಲ್ಲ ಗೋಪಿಯರೂ ''ಧನ್ಯಕೃಷ್ಣ, ದೇವ ಕೃಷ್ಣ, ಭಲರೆ ಕೃಷ್ಣ, ಭಾಪು ಕೃಷ್ಣ'' ಎಂದು ಇಮ್ಮಡಿಸಿದ ಹುಮ್ಮಸ್ಸಿನಿಂದ ಮಧುರಗಾನ ತಾನಗಳನ್ನು ಹೊಮ್ಮಿಸಿ ದುಂಡು ತಿರುಗಿ ನರ್ತನಗೈಯುತ್ತ ಹಾಡು ಹಾಡುತ್ತಿದ್ದರು. ಕೃಷ್ಣನ ಮುಂದೆ ಹೋದಾಗ ಅವರೂ ಅವನ ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತಿದ್ದರು. ಅವನು ತಿರುಗಿದಾಗ ತಾವೂ ಅವನ ತಾಲಗತಿಯಲ್ಲಿ ಲೀಲಾ ಲಾಸ್ಯವಾಡುತ್ತಿದ್ದರು. ಹೀಗೆ ಒಮ್ಮೆ ಕೃಷ್ಣನ ಎದುರಬದಿರಾಗಿ ಕುಣಿದರೆ ಮತ್ತೊಮ್ಮೆ ಅವನ ಗಾನಕ್ಕೆ ಹಿಮ್ಮೇಳದವರಾಗಿ ಹಾಡಿ ಅವನ ವೃತ್ತ ನೃತ್ಯಕ್ಕೆ ಜೊತೆಗೂಡಿ ತಾಳಕ್ಕೆ ತಕ್ಕಂತೆ ಮಣಿದು ಕುಣಿದು ನಲಿಯುತ್ತಿದ್ದರು. ಈ ರೀತಿಯಾಗಿ ಶ್ರೀಕೃಷ್ಣನು ಗೋಪಾಲ

ಪ್ರಮದೆಯರೊಂದಿಗೆ ಶಾರದ ಶುಕ್ಲ ಪಕ್ಷದ ರಾತ್ರಿಗಳಲ್ಲಿ ಬೆಳದಿಂಗಳಲ್ಲಿ ರಾಗರಸಿಕರಾಗಿ ರಾಸಲೀಲೆಯನ್ನು ಆಡುತ್ತಿದ್ದನು. ಗೋಪಿಯರಿಗೆ ಕೃಷ್ಣನನ್ನು ಒಂದರೆಕ್ಷಣ ಅಗಲುವದೆಂದರೆ ಕೋಟಿ ವರ್ಷ ಕಳೆದಂತೆನಿಸುತ್ತಿತ್ತು. ತಂದೆ, ತಾಯಿ, ಗಂಡ, ಅಣ್ಣ, ಯಾರು ಬೇಡವೆಂದರೂ ಕೇಳದೇ ಅವರು ರಾತ್ರಿ ಬಂದು ಕೃಷ್ಣನೊಡನೆ ರಾಸಕ್ರೀಡೆಯನ್ನಾಡಿ ನಲಿಯುತ್ತಿದ್ದರು. ಕೃಷ್ಣನಿಗೆ ಆಗಿನ್ನೂ ಪ್ರಾಯ ಬಂದಿರಲಿಲ್ಲ ಅವನಿನ್ನೂ ಚಿಕ್ಕ ಬಾಲಕ ಕಿಶೋರ ವಯಸ್ಸು. ಆದುದರಿಂದ ಅವನಿಗೆ ಗೋಪ ಗೋಪಿಯರ ಜೊತೆಗೆ ಸ್ವಚ್ಛಂದವಾಗಿ ಲೀಲಾವಿಹಾರಗೈಯಲಿಕ್ಕೂ ಹಾಡುಹಾಡಲಿಕ್ಕೂ ಕ್ರೀಡೆಯಾಡಲಿಕ್ಕೂ ಯಾವ ಸಂಕೋಚವೂ ಎನಿಸುತ್ತಿರಲಿಲ್ಲ. ಆ ಗೋಪಾಂಗನೆಯರಲ್ಲಿಯೂ ಅವರ ಪತಿಗಳಲ್ಲಿಯೂ ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ನಿಂತುಕೊಂಡ ಸರ್ವತ್ರ ತುಂಬಿದ ಆ ಶ್ರೀ ಹರಿಯು ಆ ಗೋಪ ವಧೂಗಳ ಜೊತೆಗೆ ಶಾರದದ ರಸ ರಾತ್ರಿಗಳಲ್ಲಿ ಕೇಳಿಯಾಡಿ ಅವರನ್ನು ರಮಿಸಿದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹದಿಮೂರನೇ ಅಧ್ಯಾಯ ಸಂಪೂರ್ಣ*



## ಅರಿಷ್ಟಾಸುರನ ವಧೆ

ಅಧ್ಯಾಯ - ೧೪

ಒಂದು ದಿನ ಕೃಷ್ಣನು ಸಂಧ್ಯಾಕಾಲದಲ್ಲಿಯೇ ರಾಸವಿಲಾಸವಾಡುತ್ತಿರುವಾಗ ಮದೋನ್ಮತ್ತನಾದ ದೈತ್ಯನೊಬ್ಬನು ಎತ್ತಿನ ರೂಪದಿಂದ ವೃಂದಾವನದಲ್ಲಿ ಹೊಕ್ಕನು. ಕಪ್ಪು ಮೋಡದಂತೆ ದಪ್ಪದೇಹವುಳ್ಳ ಆ ಕರೀ ಎತ್ತು ತನ್ನ ಖುರಪುಟದಿಂದ ನೆಲವನ್ನು ಕೆದರಿ ಉರಿಗಣ್ಣಿನಿಂದ ಇರಿವ ಕೋಡನ್ನು ಮುಂದೆ ಮಾಡಿ ಬಂದಿತು. ಕೋಪಾಟೋಪದಿಂದ ಬಾಲ ಎತ್ತಿ ಬಡೆದು, ನಾಲಿಗೆ ಚಾಚಿ, ಹಲ್ಲು ಕಚ್ಚಿ, ಅದು ಗುಟುರು ಹಾಕಿದ ಕೂಡಲೇ ಎಷ್ಟೋ ಹಸುಗಳು ಅಸು ನೀಗಿದವು. ಅದರ ಗುಡುಗಾಟಕ್ಕೆ ಗಬ್ಬಾದ ಆಕಳುಗಳ ಗರ್ಭನಿರ್ಭೇದವಾಗಿ ಹೋಗುತ್ತಿತ್ತು. ಮೈಗೆಲ್ಲ ಶೆಗಣಿ ಮೆತ್ತಿದ ಆ ದೈತ್ಯ ಎತ್ತು ತಪಸ್ವಿಗಳಾದ ಋಷಿಮುನಿಗಳನ್ನು ಕೊಲ್ಲುತ್ತ ವನಗಳಲ್ಲಿ ತಿರುಗುತ್ತಿತ್ತು.

ವೃಷಭರೂಪಿಯಾದ ಈ ಅರಿಷ್ಟನಾಮಕನಾದ ದುಷ್ಟ ದೈತ್ಯನು ಅಂದು ವೃಂದಾವನದಲ್ಲಿ ಕಾಲಿರಿಸಿದ ಕೂಡಲೇ ಗವಳಿಗರೂ, ಗೋಪವನಿತೆಯರೂ ಗಾಬರಿಯಾಗಿ ''ಕೃಷ್ಣ ಕೃಷ್ಣ'' ಎಂದು ಕೂಗತೊಡಗಿದರು. ಆಗ ಕೃಷ್ಣನು ಸಿಂಹನಾದ ಮಾಡಿ ಚಪ್ಪಳೆ ಹೊಡೆದನು. ಅದನ್ನು ಕೇಳಿ ಆ ಮತ್ತ ಎತ್ತು ಕೃಷ್ಣನಿದ್ದ ಕಡೆಗೇ ನಡೆಯಿತು. ತನ್ನ ಇರಿವಗೊಡನ್ನು ಮುಂದೆ ಮಾಡಿ ಕೃಷ್ಣನ ಹೊಟ್ಟೆಯನ್ನೇ ಹರಿಯಬೇಕೆಂದು ಹೊಂಚು ಹಾಕಿ ಅದು ಓಡಿ ಬಂತು. ಅದರ ಹುಚ್ಚು ಹುರುಡು, ರೌಸು ರೊಚ್ಚುಗಳನ್ನು ಕಂಡು ಕೃಷ್ಣನಿಗೆ ನಗೆ ಬಂದಿತು. ಅವನು ನಿಂತ ಸ್ಥಳದಿಂದ ಒಂದು ಗೆರೆ ಕೂಡ ಹಿಂದೆ ಸರಿಯಲಿಲ್ಲ. ಹತ್ತಿರ ಬಂದ ಆ ಎತ್ತಿನ ಎರಡೂ ಕೋಡುಗಳನ್ನು ಗಟ್ಟಿಯಾಗಿ ಹಿಡಿದು ಮೊಣಕಾಲಿನಿಂದ ಹೊಟ್ಟೆಗೆ ಏಟು ಹಾಕಿದನು. ಮತ್ತು ಅದರ ಎರಡೂ ಕೋಡುಗಳನ್ನು ಮಣಿಸಿ ಒದ್ದೆ ಬಟ್ಟೆ ಹಿಂಡುವಂತೆ ಹಿಂಡಿ ಒಗೆದನು. ಅನಂತರ ಅದರ ಒಂದು ಕೋಡನ್ನು ಕಿತ್ತಿ ಅದರಿಂದಲೇ ಅದನ್ನು ಹೊಡೆದು ಕೊಂದನು. ಬಾಯಿಂದ ರಕ್ತಕಾರಿ ಆ ಎತ್ತು ಸತ್ತು ಬಿದ್ದಿತು. ಆ ದುಷ್ಟ ದೈತ್ಯನು ಸತ್ತದ್ದನ್ನು ಕಂಡು ಹರ್ಷಗೊಂಡ ಗೋಪ ಗೋಪಿಯರೆಲ್ಲರೂ ಜಂಭಾಸುರನನ್ನು ಕೊಂದ ದೇವೇಂದ್ರನನ್ನು ದೇವತೆಗಳು ಹೊಗಳುವಂತೆ ಕೃಷ್ಣನನ್ನು ಬಣ್ಣಿಸಿದರು. ನಿರ್ಭಯವಾಗಿ ನಲಿದಾಡಿದರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹದಿನಾಲ್ಕನೇ ಅಧ್ಯಾಯ ಸಂಪೂರ್ಣ*

—o—

## "ಕಂಸನೆದುರು ನಾರದ, ಎಲ್ಲ ಗುಪಿತ ಬೀರಿದ" | ಅಧ್ಯಾಯ - ೧೫

ನಾರದರು ಕಂಸನ ಆಸ್ಥಾನಕ್ಕೆ ದಯಮಾಡಿಸಿದರು. ಮತ್ತು ಅವನಿಗೆ ಕೃಷ್ಣನು ಕತ್ತೆಯ ರೂಪದ ಧೇನುಕಾಸುರನನ್ನೂ ಎತ್ತಿನ ರೂಪದ ಅರಿಷ್ಟಾಸುರನನ್ನೂ ಕೊಂದ ಕತೆಯನ್ನು ಬಿತ್ತರಿಸಿದರು. ಪ್ರಲಂಬನ ಪ್ರಣಾಶದ ಸುದ್ದಿ ತಿಳಿಸಿದರು. ಗೋವರ್ಧನ ಬೆಟ್ಟವನ್ನು ಕೈತುದಿಯಲ್ಲಿ ತೂಗಿದ ಕೌತುಕವನ್ನು ಹೇಳಿದರು. ಕಾಲಿಯಮರ್ದನ, ಯಮಳಾರ್ಜುನ ಭಂಗ, ಪೂತನಾ ಸಂಹಾರ, ಶಕಟಭಂಜನ ಮುಂತಾಗಿ ಗೋಕುಲ ವೃಂದಾವನಗಳಲ್ಲಿ ನಡೆದ ಸತ್ಯ ಸಂಗತಿಗಳನ್ನೆಲ್ಲ ಬಿಚ್ಚಿ ಬಿಡಿಸಿ ಹೇಳಿದರು. ಮತ್ತು ರಹಸ್ಯವಾಗಿ ಕಂಸನಿಗೆ ರೋಹಿಣೀ ದೇವಕಿಯರ ಬಸಿರುಗಳ ಬದಲಾವಣೆ, ಯಶೋದಾ ದೇವಕಿಯರ ಶಿಶುಗಳ ಅದಲು ಬದಲಾಟ, ನಂದಗೋಪನ ಮಂದಿರದಲ್ಲಿ ದೇವಕಿಯ ಕಂದನ ಸ್ವಚ್ಛಂದ ಬೆಳವಣಿಗೆ, ಆ ವಸುದೇವನಂದನು ಕಂದನಿರುವಾಗಲೇ ಇಷ್ಟು ಜನ ದುಷ್ಟದಾನವರನ್ನು ಕೊಂದು ಹಾಕಿದ ವಿಕ್ರಮದ ವಾರ್ತೆ ಎಲ್ಲವನ್ನೂ ಪ್ರತ್ಯಕ್ಷದರ್ಶಿಗಳಂತೆ ಪ್ರಮಾಣಿಸಿ ತಿಳಿಸಿದರು. ಹೀಗೆ ನಾರದರು ಬಂದು ಕೃಷ್ಣನ ಹುಟ್ಟಿದ ಗುಟ್ಟನ್ನು ರಟ್ಟು ಮಾಡಿ ಅವನಿದ್ದ ಊರು, ಮನೆ, ಅವನು ಮಾಡಿದ ಘೋರ ಕೃತ್ಯಗಳ ಸತ್ಯವೃತ್ತವನ್ನೆಲ್ಲ ಬಯಲು ಮಾಡಿದಾಗ ಕಂಸನಿಗೆ ವಸುದೇವನ ಮೇಲೆ ವಿಪರೀತ ಕೋಪ ಬಂದಿತು. ಕೂಡಲೇ ಅವನು ಎಲ್ಲ ಯಾದವರ ಒಂದು ಅವಸರದ ಸಭೆ ಕರೆದು ಯಾದವರನ್ನೆಲ್ಲ ಬಾಯಿಗೆ ಬಂದಂತೆ ತೆಗಳಿದನು. ಮತ್ತು ಮುಂದೆ ತಾನು ಕೈಕೊಳ್ಳಬೇಕಾದ ಮುಂಜಾಗ್ರತೆಯ ಕ್ರಮವನ್ನು ನಿರ್ಧರಿಸಿ ಆ ರಾಮಕೃಷ್ಣರನ್ನು ಕೊಲ್ಲಲಿಕ್ಕೆ ಬಗೆ ಬಗೆಯ ಹಂಚಿಕೆಗಳನ್ನು ಹಾಕಿದನು.

### ಕಂದಮ್ಮಗಳನ್ನೆಲ್ಲ ಕೊಂದು ಹಾಕಿರಿ

"ಈ ರಾಮಕೃಷ್ಣರು ಕೂಸಿದ್ದಾಗಲೇ ಇಂಥ ಶೌರ್ಯ ಸಾಹಸದ ಕಾರ್ಯಗಳನ್ನು ಎಸಗುತ್ತಿರುವಾಗ ಅವರು ಪ್ರಾಯಪ್ರಬುದ್ಧರಾದ ಬಳಿಕಂತೂ ಅವರನ್ನು ಎದುರಿಸಿ ಮರ್ದಿಸುವ ಅದಟು ಯಾರಿಗೆ ಬಂದೀತು ! ಆದುದರಿಂದ ಅವರಿಬ್ಬರೂ ಬಾಲಕರು ಇನ್ನೂ ಎಳೆ ಹಸುಳೆಗಳಿದ್ದಾಗಲೇ ಅವರನ್ನು ಮಸಣಗಟ್ಟಿಗೆ ಅಟ್ಟಿ ಹಾಕುವಂತೆ ಮಾಡಬೇಕು. ನನ್ನ ಆಸ್ಥಾನದಲ್ಲಿ ಚಾಣೂರ ಮುಷ್ಟಿಕ ಎಂಬ ಮಲ್ಲರಿದ್ದಾರೆ. ಅವರಿಬ್ಬರೂ ಈ ಪ್ರಪಂಚದಲ್ಲಿ ಅಪ್ರತಿಮಲ್ಲರೇ ಸರಿ. ಅವರಿಂದ ಈ ಇಬ್ಬರೂ ವಸುದೇವ ಪುತ್ರರನ್ನು ಕೊಲ್ಲಿಸಿ ಬಿಡಬೇಕು. ಈ ಮಥುರಾ ಪಟ್ಟಣದಲ್ಲಿ ಬಿಲ್ಲಿನ ಹಬ್ಬವನ್ನು ಹೂಡಿ ಆ ನೆಪದಿಂದ ಅವರಿಬ್ಬರನ್ನೂ ಹಂಚಿಕೆ ಮಾಡಿ ಇಲ್ಲಿಗೆ ಕರಿಸುವೆನು. ಅವರಿಬ್ಬರೂ ಇಲ್ಲಿಗೆ ಬಿಲ್ಲಿನ ಉತ್ಸವಕ್ಕೆ ಬಂದರೆ ಅವರನ್ನು ಕೊಲ್ಲುವದು ನಮ್ಮ ಮಲ್ಲರಿಗೆ ಏನು ಅಸಾಧ್ಯವಲ್ಲ. ಅವರನ್ನು ಕರೆತರಲಿಕ್ಕಾಗಿ ಯದು ಕುಲದಲ್ಲಿ ಸರ್ವ ಮಾನ್ಯನಾದ ಅಕ್ರೂರನನ್ನು ಕಳಿಸಿಕೊಡುವೆನು.

## ''ಈಸು ವೀರರ ಮುಂದೆ ಕೂಸು ಮಾಡುವದೇನು !''

ಆದಷ್ಟು ಅವರಿಬ್ಬರೂ ಇಲ್ಲಿಗೆ ಬರುವಷ್ಟರಲ್ಲಿ ಅಲ್ಲಿಯೇ ಅವರನ್ನು ಸಂಹರಿಸಿ ಬಿಡಲು ಕೇಶಿ ದೈತ್ಯನಿಗೆ ಹೇಳಿ ಕಳಿಸುತ್ತೇನೆ. ಅವನೀಗ ಹೇಗೂ ವೃಂದಾವನದ ಹತ್ತಿರದ ಕಾಡಿನಲ್ಲಿಯೇ ತಿರುಗುತ್ತಿದ್ದಾನೆ. ಆ ಕೇಶಿಯು ಘೋರ ಕಲಿ. ಅವನ ಬೀರಕ್ಕೆ ಎದುರಿಲ್ಲ. ಅಂಥ ಮಹಾ ವೀರ ಕೇಶಿಯ ಮುಂದೆ ಈ ಕೂಸುಗಳು ಏನು ಮಾಡಬಲ್ಲವು! ಇಷ್ಟಾಗಿಯೂ ಕೇಶಿಯ ಕೈಯಿಂದ ಪಾರಾಗಿ ಬಂದರೆ ನನ್ನ ಮದ್ದಾನೆಯಾದ ಕುವಲಯಾಪೀಡವು ಸಿದ್ಧವೆ ಇದೆ. ಅವರಿಲ್ಲಿಗೆ ಬರುವಷ್ಟರಲ್ಲಿ ಬಾಗಿಲುಬಳಿಯಲ್ಲಿ ಅವರನ್ನು ಅದು ತುಳಿದು ಸಿಗಿದು ಹಾಕುವದು''. ಈ ರೀತಿಯಾಗಿ ದುರಾಲೋಚನೆಗೈದು ಕಂಸನು ಅಕ್ರೂರನನ್ನು ಕರೆದು ''ಅಕ್ರೂರ, ನಿನಗೆ ನನ್ನ ಮೇಲೆ ನಿಜವಾದ ಪ್ರೀತಿಯಿದ್ದರೆ ನನ್ನ ಒಂದು ಕೆಲಸಮಾಡು. ನೀನಿಗಲೇ ರಥವನ್ನು ಏರು. ನಂದಗೋಕುಲಕ್ಕೆ ಹೋಗು. ಅಲ್ಲಿ ವಿಷ್ಣುವಿನ ಅಂಶಭೂತರಾದ ವಸುದೇವನ ಇಬ್ಬರು ಮಕ್ಕಳು ಇರುವರು. ಅವರು ಹುಟ್ಟಿರುವದು ನನ್ನನ್ನು ಕೊಲ್ಲಲ್ಲಿಕ್ಕಾಗಿಯೇ. ಆ ದುಷ್ಟ ಬಾಲಕರಿಬ್ಬರೂ ದಿನ ದಿನಕ್ಕೆ ಬೆಳೆಯುತ್ತಲಿದ್ದಾರೆ.

## ಬಿಲ್ಲಿನ ಯುದ್ಧಕ್ಕಾಗಿ ಗೊಲ್ಲಬಾಲಕರು ಬರಲಿ

ನಮ್ಮಲ್ಲಿ ಹೇಗೂ ನಾಳಿನ ಚತುರ್ದಶಿಯ ದಿನ ಧನುಸ್ಸಿನ ಉತ್ಸವವಿದೆ. ನಮ್ಮಲ್ಲಿಯ ಬಿಲ್ಲು ಹಬ್ಬಕ್ಕಾಗಿ ಆ ಗೊಲ್ಲಬಾಲಕರೀರ್ವರೂ ಬರಲಿ. ಇಲ್ಲಿ ಮಲ್ಲಯುದ್ಧ ಮಾಡಲಿ. ಚಾಣೂರ ಮುಷ್ಟಿಕರಿಬ್ಬರೂ ನಮ್ಮ ಆಸ್ಥಾನದಲ್ಲಿ ಒಳ್ಳೆ ಪಳಗಿದ ಜಟ್ಟಿಗಳಾಗಿದ್ದಾರೆ. ರಾಮ - ಕೃಷ್ಣರು ಇವರೊಡನೆ ಮುಷ್ಟಿಯುದ್ಧ ಮಾಡುವದನ್ನು ಜಾತ್ರೆಗೆ ಸೇರಿದ ಜನರೆಲ್ಲರೂ ನೋಡಲಿ. ನಾನು ನಮ್ಮ ಮಾವುತನಿಗೂ ಹೇಳಿ ಇಟ್ಟಿದ್ದೇನೆ ''ರಾಮಕೃಷ್ಣರು ಬಂದ ಕೂಡಲೇ ಮದ ತುಂಬಿದ ಕುವಲಯಾಪೀಡವನ್ನು ಅವರ ಮೇಲೆ ಬಿಡು'' ಎಂದು ಆ ನಮ್ಮ ಮದ್ದಾನೆಯು ಇವರಿಬ್ಬರನ್ನೂ ಮರ್ದಿಸಿ ಮುದ್ದೆ ಮಾಡಿಬಿಡುವದು ನಿಶ್ಚಿತ. ಅವರಿಬ್ಬರನ್ನು ಕೊಂದಬಳಿಕ ಅವರ ತಂದೆಯಾದ ವಸುದೇವನನ್ನು ಕೊಲ್ಲುತ್ತೇನೆ. ಅನಂತರ ನನ್ನ ತಂದೆಯಾದ ಉಗ್ರಸೇನನನ್ನೂ ಮಣ್ಣು ಮುಕ್ಕಿಸುತ್ತೇನೆ. ಉಗ್ರಸೇನನಿಗೆ ಬುದ್ಧಿ ಕೆಟ್ಟು ಹೋಗಿದೆ. ಈ ಪಿತೃ ವಧೆಯಾದ ಬಳಿಕ ನನ್ನ ಸಾವನ್ನು ಬಯಸುವ ನಂದಾದಿ ಎಲ್ಲ ಗೋಪಾಲಕರ ಧೇನುಗಳನ್ನು ಅಪಹರಿಸುವೆ. ಧನವನ್ನು ಕಸಿದುಕೊಳ್ಳುವೆ. ಮತ್ತು ಅಕ್ರೂರ ನಿನ್ನೊಬ್ಬನನ್ನು ಬಿಟ್ಟು ಉಳಿದ ಯಾದವರೆಲ್ಲರೂ ನನ್ನ ವೈರಿಗಳಾಗಿದ್ದಾರೆ. ಅವರೆಲ್ಲರನ್ನೂ ಕ್ರಮವಾಗಿ ಕೊಂದು ಹಾಕಲಿಕ್ಕೆ ಪ್ರಯತ್ನಿಸುತ್ತೇನೆ. ಇವರೆಲ್ಲರೂ ಮರಣವನು ಹೊಂದಿದ ಬಳಿಕವೇ ನನ್ನ ರಾಜ್ಯವು ನಿಷ್ಕಂಟಕವಾಗುವದು. ಈ ಪೃಥ್ವಿಯಲ್ಲಿ ಯಾದವರಿಲ್ಲದಂತೆ ಮಾಡುವದೇ ನನ್ನ ಉದ್ದೇಶವಾಗಿದೆ. ಆದುದರಿಂದ ನನಗೆ ಪ್ರೀತಿಯನ್ನುಂಟು

ಮಾಡುವದಕ್ಕಾಗಿ ನಂದಗೋಕುಲಕ್ಕೆ ಹೋಗು. ಆ ಇಬ್ಬರೂ ಕಂದರನ್ನೂ ಕರೆತಂದು ನನಗೆ ಒಪ್ಪಿಸು. ಮತ್ತು ಬೆಣ್ಣೆ ತುಪ್ಪಗಳನ್ನು ತೆಗೆದುಕೊಂಡು ಕಪ್ಪ ಕಾಣಿಕೆಗಳೊಂದಿಗೆ ನಮ್ಮಲ್ಲಿ ನಡೆಯುವ ಚಾಪೋತ್ಸವಕ್ಕೆ ಬರಬೇಕೆಂದು ಗೋಪರಿಗೆ ತಿಳಿಸು.''

ಅಕ್ರೂರ ಮಹಾಭಗವದ್ಭಕ್ತ. ಕ್ರೂರ ಕಂಸನ ಘೋರಾದೇಶವನ್ನು ಕೇಳಿ ಅವನಿಗೆ ಆನಂದವೇ ಆಯಿತು. ಈ ನೆವದಿಂದ ನಾಳೆ ಬೆಳಗಾಗುವಷ್ಟರಲ್ಲಿ ಕೃಷ್ಣನನ್ನು ಕಾಣುತ್ತೇನೆಂಬ ಸಂತಸ ಅವನಿಗೆ ಉತ್ಸಾಹವನ್ನುತಂದಿತು. ಅವನು ಸಂಭ್ರಮದಿಂದ ಕಂಸನಿಗೆ ಹಾಗೇ ಆಗಲೆಂದು ಹೇಳಿದನು. ಮತ್ತು ಕೃಷ್ಣನನ್ನು ಕಾಣುವ ತವಕದಿಂದ ಕೂಡಲೇ ರಥವನ್ನೇರಿ ಮಥುರಾ ಪಟ್ಟಣದಿಂದ ಹೊರಟು ಬಿಟ್ಟನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹದಿನ್ನೆದನೇ ಅಧ್ಯಾಯ ಸಂಪೂರ್ಣ*



## ಕೇಶಿದೈತ್ಯನು ನಾಶ ಹೊಂದಿದ

ಅಧ್ಯಾಯ - ೧೬

ತನ್ನ ಬಲವೀರ್ಯದ ಮದದಿಂದ ಕೊಬ್ಬಿದ ಕೇಶಿ ಎಂಬ ದೈತ್ಯನಿಗೆ ಕಂಸನು ದೂತನ ಮುಖಾಂತರ "ವೃಂದಾವನಕ್ಕೆ ಹೋಗಿ ವಸುದೇವನ ಕುಮಾರನನ್ನು ಕೊಂದು ಬರಬೇಕೆಂದು" ಹೇಳಿಕಳಿಸಿದನು. ಅವನ ಅಪ್ಪಣೆಯ ಮೇರೆಗೆ ದರ್ಪಾಧ್ಮಾತನಾದ ಆ ದುರುಳ ದೈತ್ಯನು ಕೃಷ್ಣನನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ವೃಂದಾವನಕ್ಕೆ ಬಂದನು. ಅವನು ಭೀಕರವಾದ ಕುದುರೆಯ ರೂಪವನ್ನು ಧರಿಸಿದ್ದನು. ಅವನ 'ಖುರ' ಪುಟದಿಂದ ಬಡಿದರೆ ನೆಲ ನಡುಗುತ್ತಿತ್ತು. ಕೊರಳ ಮೇಲಿನ ಕೂದಲನ್ನು ಝಾಡಿಸಿದರೆ ಮೋಡಗಳೆಲ್ಲ ಚದುರಿ ಹೋಗುತ್ತಿದ್ದವು. ಅವನು ವೇಗದಿಂದ ಓಡಿ ಬಂದನು. ಗೋಪಾಲಕರೆಲ್ಲರೂ ಅದರ ಕೆನೆದಾಟವನ್ನು (ಹೇಕರಿಕೆಯನ್ನು) ಕೇಳಿಯೇ ಹೆದರಿ ಹೌಹಾರಿದರು. ಗೋಪಿಯರಂತೂ ಬೆಚ್ಚಿ ಬೆದರಿ ಹುಚ್ಚೆದ್ದು ಹರಿದಾಡಿದರು. ಎಲ್ಲ ಗೋಪಾಲಕರೂ ಭಯಭ್ರಾಂತರಾಗಿ ಶ್ರೀ ಕೃಷ್ಣನಿಗೆ ಶರಣು ಹೋದರು. ಗೋಕುಲದ ಆ ಬಾಲ ಗೋಪಾಲರ ಹಾಗೂ ಅಬಲೆಯರ 'ತ್ರಾಹಿ ತ್ರಾಹಿ ಎಂಬ ಆರ್ತ ಮೊರೆಯನ್ನು ಕೇಳಿದ ಮುರಾರಿಯು ಇಂತು ನುಡಿದನು. ನೀರು ತುಂಬಿದ ಮೋಡದಂತೆ ಗಂಭೀರವಾಗಿತ್ತು ಅವನ ಧ್ವನಿ.

### ಬೆದರ ಬೇಡಿರಿ ಕುದುರೆ -ಕತ್ತೆಗೆ

"ಗೋಪಾಲಕರೇ ಹೆದರಬೇಡಿರಿ. ಗೋಪ ಜಾತಿಯವರಾದ ನೀವಿಷ್ಟೇಕೆ ಹೆದರುವಿರಿ ! ಈ ಕೀಳು ಕುದುರೆಯಲ್ಲಿ ಬರೀ ಕೆನೆತ, ಖುರಪುಟದ ಸಪ್ಪಳದ ಆಟೋಪ ಅಬ್ಬರಗಳೇ ಬಹಳ. ಶಕ್ತಿ ಕಡಿಮೆ. ದೈತ್ಯರೆಲ್ಲರೂ ಇದನ್ನು ಡೊಗ್ಗಿಸಿ ಮೇಲೆ ಹತ್ತುತ್ತಾರೆ. ಇದು ಇಲ್ಲಿ ಬಂದು ಈ ಹಾರಾಟವನ್ನು ನಡೆಸಿದೆ" ಎಂದು ಗೋಪಾಲಕರೆಲ್ಲರನ್ನೂ ಸಂತೈಸಿದನು. ಆ ಕೇಶಿ ದೈತ್ಯನನ್ನು ಎದುರಿಸಿದನು. "ಎಲೈ ದುಷ್ಟ, ಇತ್ತಬಾ. ನಾನೇ ಕೃಷ್ಣನು. ಹಿಂದೆ ದಕ್ಷಯಜ್ಞದಲ್ಲಿ ವೀರಭದ್ರನು ಪೂಷಾದೇವತೆಯ ಹಲ್ಲನ್ನು ಕಿತ್ತಿದಂತೆ ನಾನೂ ನಿನ್ನ ಮುಖದಿಂದ ಹಲ್ಲುಗಳೆಲ್ಲವೂ ಉದುರಿಬೀಳುವಂತೆ ಮಾಡುತ್ತೇನೆ" ಎಂದು ನುಡಿದು ತೋಳು ತಟ್ಟಿ ಜಿಗಿದು ಕೇಶಿಯ ಎದುರು ಬಂದು ನಿಂತನು.

### ಕುದುರೆಯನ್ನು ಎದುರಿಸಿದ ಹಲ್ಲುಗಳನ್ನು ಉದುರಿಸಿದ

ಆ ದುಷ್ಟ ದೈತ್ಯಾಶ್ವವು ಬಾಯ್ದೆರೆದು ಕೃಷ್ಣನ ಮೇಲೇರಿ ಬಂದಿತು. ಆಗ ಕೃಷ್ಣನು ತನ್ನ ನಿಡಿದೋಳನ್ನು ಇಡಿಯಾಗಿಯೇ ಆ ಕ್ರೂರ ಕುದುರೆಯ ಮುಖದಲ್ಲಿ ತುರುಕಿದನು. ವೇಗದಿಂದ ತೋಳನ್ನು ಕೇಶಿಯ ಮುಖದಲ್ಲಿ ತೂರುವಾಗಲೇ ಅವನ ಹಲ್ಲುಗಳೆಲ್ಲವೂ ಪಳಪಳ ಉದುರಿದವು. ಕೇಶಿಯ ಮುಖದಲ್ಲಿ ಹೋದಬಳಿಕ ಕೃಷ್ಣನ ತೋಳು ಉಪೇಕ್ಷೆ ಮಾಡಿಬಿಟ್ಟ ರೋಗದಂತೆ ಬಲಿತು ಬೆಳೆದು ದೊಡ್ಡದಾಯಿತು. ಅದು ಉಬ್ಬಿದಂತೆ ಕೇಶಿಯ ತಲೆ ಒಡೆಯಿತು. ಕಟಬಾಯಿ ಹರಿಯಿತು. ಉಸುರುಗಟ್ಟಿತು. ಬಾಯಿಂದ ಬುರುಗು ಬರಹತ್ತಿತ್ತು. ನೆತ್ತರ ಸುರಿಯಿತು. ಅವನ ಎರಡೂ ಕಣ್ಣು ಬೆಳ್ಳಗಾದವು. ಒಳಗಿನ

ಮಾಡುವದಕ್ಕಾಗಿ ನಂದಗೋಕುಲಕ್ಕೆ ಹೋಗು. ಆ ಇಬ್ಬರೂ ಕಂದರನ್ನೂ ಕರೆತಂದು ನನಗೆ ಒಪ್ಪಿಸು. ಮತ್ತು ಬೆಣ್ಣೆ ತುಪ್ಪಗಳನ್ನು ತೆಗೆದುಕೊಂಡು ಕಪ್ಪ ಕಾಣಿಕೆಗಳೊಂದಿಗೆ ನಮ್ಮಲ್ಲಿ ನಡೆಯುವ ಚಾಪೋತ್ಸವಕ್ಕೆ ಬರಬೇಕೆಂದು ಗೋಪರಿಗೆ ತಿಳಿಸು.''

ಅಕ್ರೂರ ಮಹಾಭಗವದ್ಭಕ್ತ. ಕ್ರೂರ ಕಂಸನ ಘೋರಾದೇಶವನ್ನು ಕೇಳಿ ಅವನಿಗೆ ಆನಂದವೇ ಆಯಿತು. ಈ ನೆವದಿಂದ ನಾಳೆ ಬೆಳಗಾಗುವಷ್ಟರಲ್ಲಿ ಕೃಷ್ಣನನ್ನು ಕಾಣುತ್ತೇನೆಂಬ ಸಂತಸ ಅವನಿಗೆ ಉತ್ಸಾಹವನ್ನುತಂದಿತು. ಅವನು ಸಂಭ್ರಮದಿಂದ ಕಂಸನಿಗೆ ಹಾಗೇ ಆಗಲೆಂದು ಹೇಳಿದನು. ಮತ್ತು ಕೃಷ್ಣನನ್ನು ಕಾಣುವ ತವಕದಿಂದ ಕೂಡಲೇ ರಥವನ್ನೇರಿ ಮಥುರಾ ಪಟ್ಟಣದಿಂದ ಹೊರಟು ಬಿಟ್ಟನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹದಿನೈದನೇ ಅಧ್ಯಾಯ ಸಂಪೂರ್ಣ*



## ಕೇಶಿದೈತ್ಯನು ನಾಶ ಹೊಂದಿದ

**ಅಧ್ಯಾಯ - ೧೬**

ತನ್ನ ಬಲವೀರ್ಯದ ಮದದಿಂದ ಕೊಬ್ಬಿದ ಕೇಶಿ ಎಂಬ ದೈತ್ಯನಿಗೆ ಕಂಸನು ದೂತನ ಮುಖಾಂತರ ''ವೃಂದಾವನಕ್ಕೆ ಹೋಗಿ ವಸುದೇವನ ಕುಮಾರನನ್ನು ಕೊಂದು ಬರಬೇಕೆಂದು'' ಹೇಳಿಕಳಿಸಿದನು. ಅವನ ಅಪ್ಪಣೆಯ ಮೇರೆಗೆ ದರ್ಪಾಧ್ಮಾತನಾದ ಆ ದುರುಳ ದೈತ್ಯನು ಕೃಷ್ಣನನ್ನು ಕೊಲ್ಲಬೇಕೆಂಬ ಇಚ್ಛೆಯಿಂದ ವೃಂದಾವನಕ್ಕೆ ಬಂದನು. ಅವನು ಭೀಕರವಾದ ಕುದುರೆಯ ರೂಪವನ್ನು ಧರಿಸಿದ್ದನು. ಅವನ 'ಖುರ' ಪುಟದಿಂದ ಬಡಿದರೆ ನೆಲ ನಡುಗುತ್ತಿತ್ತು. ಕೊರಳ ಮೇಲಿನ ಕೂದಲನ್ನು ಝಾಡಿಸಿದರೆ ಮೋಡಗಳೆಲ್ಲ ಚದುರಿ ಹೋಗುತ್ತಿದ್ದವು. ಅವನು ವೇಗದಿಂದ ಓಡಿ ಬಂದನು. ಗೋಪಾಲಕರೆಲ್ಲರೂ ಅದರ ಕೆನೆದಾಟವನ್ನು (ಹೇಕರಿಕೆಯನ್ನು) ಕೇಳಿಯೇ ಹೆದರಿ ಹೌಹಾರಿದರು. ಗೋಪಿಯರಂತೂ ಬೆಚ್ಚಿ ಬೆದರಿ ಹುಚ್ಚೆದ್ದು ಹರಿದಾಡಿದರು. ಎಲ್ಲ ಗೋಪಾಲಕರೂ ಭಯಭ್ರಾಂತರಾಗಿ ಶ್ರೀ ಕೃಷ್ಣನಿಗೆ ಶರಣು ಹೋದರು. ಗೋಕುಲದ ಆ ಬಾಲ ಗೋಪಾಲರ ಹಾಗೂ ಅಬಲೆಯರ 'ತ್ರಾಹಿ ತ್ರಾಹಿ ಎಂಬ ಆರ್ತ ಮೊರೆಯನ್ನು ಕೇಳಿದ ಮುರಾರಿಯು ಇಂತು ನುಡಿದನು. ನೀರು ತುಂಬಿದ ಮೋಡದಂತೆ ಗಂಭೀರವಾಗಿತ್ತು ಅವನ ಧ್ವನಿ.

### ಬೆದರ ಬೇಡಿರಿ ಕುದುರೆ -ಕತ್ತೆಗೆ

''ಗೋಪಾಲಕರೇ ಹೆದರಬೇಡಿರಿ. ಗೋಪ ಜಾತಿಯವರಾದ ನೀವಿಷ್ಟೇಕೆ ಹೆದರುವಿರಿ ! ಈ ಕೀಳು ಕುದುರೆಯಲ್ಲಿ ಬರೀ ಕೆನೆತ, ಖುರಪುಟದ ಸಪ್ಪಳದ ಆಟೋಪ ಅಬ್ಬರಗಳೇ ಬಹಳ. ಶಕ್ತಿ ಕಡಿಮೆ. ದೈತ್ಯರೆಲ್ಲರೂ ಇದನ್ನು ಡೊಗ್ಗಿಸಿ ಮೇಲೆ ಹತ್ತುತ್ತಾರೆ. ಇದು ಇಲ್ಲಿ ಬಂದು ಈ ಹಾರಾಟವನ್ನು ನಡೆಸಿದೆ'' ಎಂದು ಗೋಪಾಲಕರೆಲ್ಲರನ್ನೂ ಸಂತೈಸಿದನು. ಆ ಕೇಶಿ ದೈತ್ಯನನ್ನು ಎದುರಿಸಿದನು. ''ಎಲೈ ದುಷ್ಟ, ಇತ್ತ ಬಾ. ನಾನೇ ಕೃಷ್ಣನು. ಹಿಂದೆ ದಕ್ಷಯಜ್ಞದಲ್ಲಿ ವೀರಭದ್ರನು ಪೂಷಾದೇವತೆಯ ಹಲ್ಲನ್ನು ಕಿತ್ತಿದಂತೆ ನಾನೂ ನಿನ್ನ ಮುಖದಿಂದ ಹಲ್ಲುಗಳೆಲ್ಲವೂ ಉದುರಿಬೀಳುವಂತೆ ಮಾಡುತ್ತೇನೆ'' ಎಂದು ನುಡಿದು ತೋಳು ತಟ್ಟಿ ಜಗಿದು ಕೇಶಿಯ ಎದುರು ಬಂದು ನಿಂತನು.

### ಕುದುರೆಯನ್ನು ಎದುರಿಸಿದ ಹಲ್ಲುಗಳನ್ನು ಉದುರಿಸಿದ

ಆ ದುಷ್ಟ ದೈತ್ಯಾಶ್ವವು ಬಾಯ್ದೆರೆದು ಕೃಷ್ಣನ ಮೇಲೇರಿ ಬಂದಿತು. ಆಗ ಕೃಷ್ಣನು ತನ್ನ ನಿಡಿದೋಳನ್ನು ಇಡಿಯಾಗಿಯೇ ಆ ಕ್ರೂರ ಕುದುರೆಯ ಮುಖದಲ್ಲಿ ತುರುಕಿದನು. ವೇಗದಿಂದ ತೋಳನ್ನು ಕೇಶಿಯ ಮುಖದಲ್ಲಿ ತೂರುವಾಗಲೇ ಅವನ ಹಲ್ಲುಗಳೆಲ್ಲವೂ ಪಳಪಳ ಉದುರಿದವು. ಕೇಶಿಯ ಮುಖದಲ್ಲಿ ಹೋದಬಳಿಕ ಕೃಷ್ಣನ ತೋಳು ಉಪೇಕ್ಷೆ ಮಾಡಿಬಿಟ್ಟ ರೋಗದಂತೆ ಬಲಿತು ಬೆಳೆದು ದೊಡ್ಡದಾಯಿತು. ಅದು ಉಬ್ಬಿದಂತೆ ಕೇಶಿಯ ತಲೆ ಒಡೆಯಿತು. ಕಟಬಾಯಿ ಹರಿಯಿತು. ಉಸುರುಗಟ್ಟಿತು. ಬಾಯಿಂದ ಬುರುಗು ಬರಹತ್ತಿತ್ತು. ನೆತ್ತರ ಸುರಿಯಿತು. ಅವನ ಎರಡೂ ಕಣ್ಣು ಬೆಳ್ಳಗಾದವು. ಒಳಗಿನ

ಗುಡ್ಡೆಗಳು ತಿರುಗಿ ಹೋದವು. ಅವನು ಸಾಯುವ ಸಂಕಟಕ್ಕೆ ಒದ್ದಾಡತೊಡಗಿದನು. ಅವನ ಕಾಲುಗಳು ನೆಲದಲ್ಲಿ ಹೊರಳಿದವು. ನಿಂತಲ್ಲಿಯೇ ಮಲಮೂತ್ರ ವಿಸರ್ಜನೆ ಮಾಡಿತು. ಬೆವರು ಹರಿದು ಮೈಯೆಲ್ಲ ತಣ್ಣಗಾಯಿತು. ಕೊನೆಗೆ ಕೈ ಸಾಗದೆ ಆ ದೈತ್ಯನು ನಿಂತುಬಿಟ್ಟನು. ಆಗ ಕೃಷ್ಣನು ಅವನ ಮುಖವನ್ನು ಸೀಳಿ ಎರಡು ಭಾಗ ಮಾಡಿ ನೆಲದ ಮೇಲೊಗೆದನು. ಈ ರೀತಿಯಾಗಿ ಭಗವಂತನು ಕೇಶಿಯನ್ನು ಲೇಶವೂ ಆಯಾಸವಿಲ್ಲದೇ ಕೊಂದು ಆನಂದದಿಂದ ಒಡಗೂಡಿದ ಗೋಪಾಲಕರೊಡನೆ ನಗುತ್ತ ಅಲ್ಲಿಯೇ ನಿಂತನು. ಆಗ ಗೋಪಿಯರಿಗೆ ಪ್ರೇಮ ಉಕ್ಕಿ ಬಂದು ಅವನನ್ನು ಹಾಡಿ ಪಾಡಿ ಹೊಗಳಿದರು.

## ಕೇಶಿಯನ್ನು ಶವ ಮಾಡಿದ್ದರಿಂದ 'ಕೇಶವ' ಹೆಸರು

ಕೇಶಿ ಕುದುರೆಯು ಸತ್ತು ಬಿದ್ದುದನ್ನು ನೋಡಿದ ನಾರದರು ಹಿಡಿಸಲಾರದ ಹರ್ಷದಿಂದ ಹಿಗ್ಗಿ ಮುಗಿಲು ಮರೆಯಲ್ಲಿ ನಿಂತು ಕೃಷ್ಣನಿಗೆ ಹೇಳಿದರು. ''ಭಲರೇ ಕೃಷ್ಣ, ದೇವತೆಗಳಿಗೂ ಪೀಡೆ ಕಾಡಾಟಗಳನ್ನು ಕೊಡುವ ಈ ಕೇಶಿ ಅಸುರನನ್ನು ನೀನು ವಧಿಸಿ ಮೃತ್ಯುಮುಖದಲ್ಲಿ ತಳ್ಳಿದ್ದು ಬಹಳ ಒಳ್ಳೆಯ ಕೆಲಸವಾಯಿತು. ನರರೂಪಧಾರಿಯಾದ ನಿನ್ನ ಹಾಗೂ ಈ ಕೇಶಿ ದಾನವನ ನಡುವೆ ನಡೆಯುವ ಈ ಹೋರಾಟವನ್ನು ಕಣ್ಣಾರೆ ಕಾಣಬೇಕೆಂದೇ ನಾನು ಸ್ವರ್ಗದಿಂದ ಬಂದಿದ್ದೆ. ಕೃಷ್ಣಾ, ಈ ಅವತಾರದಲ್ಲಿ ನೀನು ಮಾಡಿದ ಅದ್ಭುತ ಕಾರ್ಯಗಳನ್ನೂ ವಿವಿಧ ಲೀಲೆಗಳನ್ನೂ ಕಂಡ ನನಗೆ ಬಹಳ ಕೌತುಕವು ಆಗಿದೆ; ಅತ್ಯಂತ ಆನಂದವೂ ಆಗಿದೆ. ಈ ದುಷ್ಟ ಕೇಶಿ ದೈತ್ಯನು ಕೂದಲುಗಳನ್ನು ನಿಮಿರಿಸಿ, ಕೋಪದಿಂದ ಕಾಲು ಕೆದರಿ ಕೆನೆಯುತ್ತ ಮೇಲೆ ಮುಗಿಲ ಕಡೆಗೆ ನೋಡಿದರೆ ಸಾಕ್ಷಾತ್ ಇಂದ್ರನು ಕೂಡ ಗದಗುಟ್ಟ ನಡುಗುತ್ತಿದ್ದನು. ಇಂಥ ಈ ಕರಾಳ ಕುದುರೆಯಾದ ಕೇಶಿಯನ್ನು ಲೀಲೆಯಿಂದ ಸಂಹರಿಸಿದ್ದರಿಂದ ನಿನಗೆ 'ಕೇಶವ' ಎಂಬ ಹೆಸರು ಬರುತ್ತದೆ. ಸ್ವಾಮಿ ನಿನಗೆ ನನ್ನ ನಮಸ್ಕಾರ.

ನೀನು ಕಂಸನನ್ನು ಹಿಂಸಿಸುವಾಗ ನಾನು ಮತ್ತೆ ಬಂದು ನಿನ್ನನ್ನು ಕಾಣುವೆನು. ಉಗ್ರಸೇನನ ಮಗನಾದ ಈ ಕಂಸನನ್ನು ಅವನು ಅನುಯಾಯಿಗಳೊಂದಿಗೆ ಯಮಪುರಿಗೆ ಕಳಿಸಿದ ಬಳಿಕ ನಿನ್ನ ನೆಲದಾಯಿಯ ಭಾರವನ್ನು ಇಳಿಸುವ ಕಾರ್ಯವು ಬಗೆ ಬಗೆಯ ರೀತಿಯಿಂದ ಮುಂದುವರೆಯುತ್ತದೆ. ರಾಜ ಮಹಾರಾಜರ ಜೊತೆಗೆ ನೀನು ಮಾಡಲಿರುವ ಯುದ್ಧಗಳನ್ನೂ ನಾನು ನೋಡಬೇಕಾಗಿದೆ. ಗೋವಿಂದನೇ, ಈ ಕೇಶಿಯನ್ನು ಕೊಂದು ನೀನೀಗ ಬಹುದೊಡ್ಡದಾದ ದೇವತಾ ಕಾರ್ಯವನ್ನು ಮಾಡಿದಂತಾಯಿತು. ನಾನಿನ್ನು ಬರುವೆನು'' ಎಂದು ಹೇಳಿ ನಾರದರು ಮುಗಿಲಿನ ಮಹಡಿಯನ್ನೇರಿದರು. ಅನಂತರ ಗೋಪಾಲಕರೆಲ್ಲರೂ ಕೃಷ್ಣನನ್ನು ಗೌರವಿಸಿದರು. ಗೋಪಿಕೆಯರಂತೂ ಹಸಿದ ಕಂಗಳಿಂದ ಕೃಷ್ಣನನ್ನು ಕುಡಿದು ಬಿಟ್ಟರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹದಿನಾರನೇ ಅಧ್ಯಾಯ ಸಂಪೂರ್ಣ*

—o—

## ಕೃಷ್ಣನನ್ನು ಕಾಣಲು ಅಕ್ರೂರನ ತವಕ

## ಅಧ್ಯಾಯ - ೧೭

ಅಕ್ರೂರನು ಮಥುರಾ ಪಟ್ಟಣದಿಂದ ಹೊರಟು ವೇಗವಾದ ರಥದಿಂದ ನಂದಗೋಕುಲಕ್ಕೆ ತೆರಳಿದನು. ತನಗೆ ಕೃಷ್ಣನ ದರ್ಶನವಾಗುವದೆಂದು ಸಂತಸ ತುಂಬಿದ ಅವನ ಹೃದಯವು ಗರಿಗೆದರಿತ್ತು. ಅವನು ತನ್ನಲ್ಲಿ ತಾನೇ ಎಂದುಕೊಂಡ.

ಶ್ರೀಮನ್ನಾರಾಯಣನ ಸಾಕ್ಷಾದವತಾರಭೂತನಾದ ಶ್ರೀ ಕೃಷ್ಣನನ್ನು ಇಂದು ರಾತ್ರಿಯಾಗುವಷ್ಟರಲ್ಲಿ ಕಾಣಲಿರುವ ನನ್ನಂಥ ಧನ್ಯಸಾರು ? ಇಂದು ನನ್ನ ಬದುಕು ಸಾರ್ಥಕವಾಯಿತು. ಇಂದಿನ ದಿನವೇ ಶುಭದಿನ, ಇಂದಿನ ಬೆಳಗು ಸುಪ್ರಭಾತ. ಅರಳಿದ ತಾವರೆಯಂತಿರುವ ಕೃಷ್ಣನನ್ನು ನಾನು ಕಾಣಲಿರುವೆನು. ಅವನನ್ನು ನೆನೆದರೆ ಸಾಕು, ಜನರ ಪಾಪಗಳೆಲ್ಲವೂ ಪರಿಹಾರವಾಗಿ ಹೋಗುತ್ತವೆ. ವೇದಗಳೆಲ್ಲವೂ ಅವನ ಉಸಿರು. ವೇದಾಂತವು ಅವನು ಗೈಮೆ. ಅವನು ತೇಜಸ್ಸಿನ ತವನಿಧಿ. ಯೋಗಿಗಳು ಈ ಪುರುಷೋತ್ತಮನನ್ನು ಉದ್ದೇಶಿಸಿಯೇ ಯಜ್ಞದಲ್ಲಿ ಆಹುತಿಯನ್ನೀಯುವರು. ನೂರು ಯಜ್ಞಗಳಿಂದ ಅವನನ್ನು ಪೂಜಿಸಿ ಶಚೀಪತಿಯು ಇಂದ್ರಪದವಿಯನ್ನು ಹೊಂದಿದನು. ಇಂದ್ರ, ರುದ್ರ, ಅಶ್ವಿನೀಕುಮಾರ, ಅಷ್ಟವಸುಗಳು, ಮರದ್ಗಣಗಳು ಯಾರೂ ಅವನನ್ನು ಪೂರ್ಣವಾಗಿ ಅರಿಯರು. ಇಂಥ ಕಮಲಗಣ್ಣಿನ ಕೃಷ್ಣನನ್ನು ನಾನು ಕಾಣಲಿರುವೆನು. ಮೀನನಾಗಿ, ಆಮೆಯಾಗಿ, ಹಂದಿಯಾಗಿ, ಸಿಂಹವಾಗಿ ಅವತರಿಸಿ ಬಾಳಿನ ಗೋಳನ್ನು ಪರಿಹರಿಸಿದ ಆ ಬ್ರಹ್ಮಾಂಡ ನಾಯಕನೊಂದಿಗೆ ನಾನು ಇಂದು ಮಾತನಾಡಲಿರುವೆ. ಇಂಥ ಜಗದೊಡೆಯನು ತನ್ನ ಉದ್ದಿಷ್ಟವಾದ ಕಾರ್ಯ ಪೂರ್ತಿಗಾಗಿ ಕೃಷ್ಣ ರೂಪದಿಂದ ನೆಲದಲ್ಲಿ ನರನಾಗಿ ಅವತರಿಸಿರುವ. ಅವನಿಗೆ ನಾಶವಿಲ್ಲ. ತನ್ನ ಇಚ್ಛೆಯಿಂದ ಅವನು ತನಗೆ ಬೇಕಾದ ದೇಹವನ್ನು ಧಾರಣಮಾಡಬಲ್ಲನು. ಭೂಮಂಡಲವನ್ನೆಲ್ಲ ಮುಕುಟದಂತೆ ತನ್ನ ಮಸ್ತಕದ ಮೇಲೆ ಧರಿಸಿದ ಆದಿಶೇಷನ ಅವತಾರಭೂತನಾದ ಬಲರಾಮನು ಇಂದು ನನ್ನನ್ನು ''ಏನಪ್ಪಾ ಅಕ್ರೂರ ಹೇಗಿರುವೆ !'' ಎಂದು ಮಾತನಾಡಿಸಲಿರುವನು. ಯಾವನನ್ನು ಯೋಗಿಗಳು ಯಜ್ಞಪುರುಷನೆಂದೂ ಯಾದವರೂ ವಾಸುದೇವನೆಂದೂ, ವೇದಾಂತಿಗಳು ವಿಷ್ಣು ಎಂದು ಕರೆಯುತ್ತಾರೋ. ಅಂಥ ಶ್ರೀ ಹರಿಯನ್ನು ನಾನು ನಮಸ್ಕರಿಸುತ್ತೇನೆ.

**ಯಜ್ವಭಿರ್ಯಜ್ಞಪುರುಷೋ ವಾಸುದೇವಶ್ಚ ಸಾತ್ವತೈಃ ।**
**ವೇದಾಂತವೇದಿಭಿರ್ವಿಷ್ಣುಃ ಪ್ರೋಚ್ಯತೇ ಯೋ ನತೋಽಸ್ಮಿ ತಂ ॥**

**ಸ್ಮೃತೇ ಸಕಲ ಕಲ್ಯಾಣ ಭಾಜನಂ ಯತ್ರ ಜಾಯತೇ ।**
**ಪುರುಷಸ್ತಮಜಂ ನಿತ್ಯಂ ವ್ರಜಾಮಿ ಶರಣಂ ಹರಿಂ ॥**

''ಯಾವನ ಸ್ಮರಣ ಮಾಡುವದರಿಂದ ಮಾನವನು ಎಲ್ಲ ವಿಧವಾದ ಶುಭಸಂಪದಗಳಿಗೂ ಪಾತ್ರನಾಗುವನೋ ಅಂಥ ಹುಟ್ಟು ಇಲ್ಲದ ಶಾಶ್ವತನಾದ ಶ್ರೀಹರಿಗೇ ನಾನು ಶರಣುಹೋಗುತ್ತೇನೆ'' ಎಂದು ವಿಚಾರಿಸುತ್ತ ಅಕ್ರೂರನು ಸಾಯಂಕಾಲದ

ಹೊತ್ತಿಗೆ ಗೋಕುಲಕ್ಕೆ ಬಂದನು. ಅವನ ಹೃದಯದಲ್ಲಿ ಕೃಷ್ಣ ಭಕ್ತಿಯು ತುಂಬ ತುಂಬಿತ್ತು. ಅದೇ ಆಗ ಸೂರ್ಯನು ಪಡುವಣದ ಕಡಲಿನ ಅಂಚಿಗೆ ಇಳಿಯುತ್ತಲಿದ್ದನು.

## ಗೋಷ್ಠದಲ್ಲಿ ಗೋವಿಂದ

ಅಕ್ರೂರನು ನೇರವಾಗಿ ನಂದಗೋಪನ ಮನೆಗೆ ಬಂದ. ಅದು ಹಸುಗಳನ್ನು ಹಿಂಡುವ ಹೊತ್ತು. ದನದ ಕೊಟ್ಟಿಗೆಯಲ್ಲಿ ಕರುಗಳ ಗುಂಪಿನ ನಡುವೆ ನೈದಿಲೆಯಂತೆ ನೀಲಬಣ್ಣದ ಕೃಷ್ಣನು ನಿಂತುಕೊಂಡಿದ್ದ. ಅವನನ್ನು ಅಕ್ರೂರನು ಭಕ್ತಿಯಿಂದ ಅಡಿಯಿಂದ ಮುಡಿಯವರೆಗೆ ನಿರುಕಿಸಿದ. ಹೊಂದಾವರೆಯಂತೆ ಹೊಳೆಯುವ ಸುಂದರ ಕಂಗಳು. ಶ್ರೀವತ್ಸ ಚಿಹ್ನದಿಂದ ಶೋಭಿಸುವ ಎದೆ. ನೀಳವಾದ ತೋಳುಗಳು. ನಿಡಿದಾದ ಮೂಗು. ಹರವಾದ ವಕ್ಷಸ್ಥಳ ಮಂದಹಾಸವನ್ನು ಸೂಸುವ ಮುಖ. ಕೆಂಪ ಉಗುರುಳ್ಳ ಪಾದಗಳು. ಎರಡು ಪಟ್ಟೆ ಪೀತಾಂಬರಗಳು. ಕೊರಳಲ್ಲಿ ಕಾಡು ಹೂವಿನ ಮಾಲೆ. ಕೊಟ್ಟಿಗೆಯಲ್ಲಿಯ ಕರುಗಳ ಮೇಲೆ ಕರುಣಾಪೂರ್ಣವಾದ ದೃಷ್ಟಿಕ್ಷೇಪ. ಇದನ್ನೆಲ್ಲ ನೋಡಿ ಇವನೇ ಶ್ರೀಕೃಷ್ಣನೆಂದು ಅಕ್ರೂರನು ನಿರ್ಧರಿಸಿದನು. ಅವನ ಪಕ್ಕದಲ್ಲಿಯೇ ನಿಂತವನು ಬಲರಾಮನೆಂದು ಅವನು ತರ್ಕಿಸಿ ತಿಳಿದನು. ಅವನ ಬಣ್ಣವು ಹಂಸದಷ್ಟು ಬೆಳ್ಳಗೆ. ಚಂದ್ರನಂತೆ ಸುಂದರ ಮುಖ. ಅವನು ಹೊದ್ದದ್ದು ನೀಲಾಂಬರ. ಎತ್ತರವಾದ ನಿಲುವು. ಕೃಷ್ಣನಂಥ ಚೆಲುವು. ಅರಳಿದ ಮುಖ. ಕಪ್ಪು ಬಣ್ಣದ ದುಪ್ಪಟ್ಟಿಯನ್ನು ಹೊದ್ದುಕೊಂಡ ಆ ಬಲರಾಮನು ಮೋಡ ಮುಡಿದ ಕೈಲಾಸ ಗಿರಿಯಂತೆ ಕಾಣುತ್ತಿದ್ದ.

## ಕೃಷ್ಣನನ್ನು ಕಂಡಾಗ

ಸುಂದರವಾದ ಆ ವಸುದೇವ ನಂದನರನ್ನು ನೋಡಿ ಅಕ್ರೂರನ ಮುಖವು ಆನಂದದಿಂದ ಅರಳಿತು. ಹಿಗ್ಗಿನ ಮುಳ್ಳು ಮೈತುಂಬ ಮೂಡಿದವು. ಆ ರಾಮ ಕೃಷ್ಣರನ್ನು ಕಂಡು ''ಅವರಿಬ್ಬರೂ ಮಾನವರಲ್ಲ. ಸಾಕ್ಷಾತ್ ಪರಬ್ರಹ್ಮನೇ ಮನುಷ್ಯರೂಪದಿಂದ ಇಬ್ಬಗೆಯಾಗಿ ರಾಮಕೃಷ್ಣರಾಗಿ ನಿಂತಿದೆ.'' ಎಂದು ಅವನು ಭಾವಿಸಿದನು.

**'ತದೇತತ್ ಪರಮಂಧಾಮ ತದೇತತ್ ಪರಮಂ ಪದಂ ।**
**ಭಗವದ್ ವಾಸುದೇವಾಂಶೋ ದ್ವಿಧಾ ಯೋಽಯಂ ವ್ಯವಸ್ಥಿತಃ**
**ಸಾಫಲ್ಯಮಕ್ಷ್ಣೋರ್ಯುಗಮೇತದತ್ರ ।**
**ದೃಷ್ಟೇ ಜಗದ್ಧಾತರಿ ಯಾತಮುಚ್ಚೈಃ ॥**
**ಅಪ್ಯಂಗಮೇತದ್ ಭಗವತ್ ಪ್ರಸಾದಾತ್ ।**
**ತದಂಗಸಂಗೇ ಫಲವನ್ ಮಮ ಸ್ಯಾತ್ ॥**
**ಅಪ್ಯೇಷ ಪೃಷ್ಠೇ ಮಮ ಹಸ್ತಪದ್ಮಂ ।**
**ಕರಿಷ್ಯತಿ ಶ್ರೀಮದನಂತ ಮೂರ್ತಿಃ ॥**
**ತಸ್ಯಾಂಗುಲಿಸ್ಪರ್ಶ ಹತಾಖಿಲಾಘೈಃ ।**
**ಅವಾಪ್ಯತೇ ಸಿದ್ಧಿರಪಾಸ್ತದೋಷಾ ॥**

ಯತ್ರಾಂಬು ವಿನ್ಯಸ್ಯ ಬಲಿರ್ಮನೋಜ್ಞಾ
ನವಾಪ ಭೋಗಾನ್ ವಸುಧಾತಲಸ್ಥಃ ॥

ತಥಾಮರತ್ವಂ ತ್ರಿದಶಾಧಿಪತ್ವಂ ।
ಮನ್ವಂತರಂ ಪೂರ್ಣಮಪೇತ ಶತ್ರುಂ ॥

ಅಪ್ಯೇಷ ಮಾಂ ಕಂಸಪರಿಗ್ರಹೇಣ ।
ದೋಷಾಸ್ಪದೀಭೂತಮದೋಷದುಷ್ಟಂ ॥

ಕರ್ತಾಪಮಾನೋಪಹತಂ ಧಿಗಸ್ತು ।
ತಜ್ಜನ್ಮ ಯತ್ಸಾಧು ಬಹಿಷ್ಕೃತಸ್ಯ ॥

ಜ್ಞಾನಾತ್ಮಕಸ್ಯಾಮಲಸತ್ವರಾಶೇ-
ರಪೇತದೋಷಸ್ಯ ಸದಾ ಸ್ಫುಟಸ್ಯ ॥

ಕಿಂ ವಾ ಜಗತ್ಯತ್ರ ಸಮಸ್ತ ಪುಂಸಾ-
ಮಜ್ಞಾತಮಸ್ಯಾಸ್ತಿ ಹೃದಿ ಸ್ಥಿತಸ್ಯ ॥

ತಸ್ಮಾದಹಂ ಭಕ್ತಿವಿನಮ್ರ ಚೇತಾಃ
ವ್ರಜಾಮಿ ಸರ್ವೇಶ್ವರಮೀಶ್ವರಾಣಾಂ ।

ಅಂಶಾವತಾರಂ ಪುರುಷೋತ್ತಮಸ್ಯ
ಯನ್ನಾದಿ ಮಧ್ಯಾಂತರಮಜಸ್ಯ ವಿಷ್ಣೋಃ ॥

ವಿಶ್ವದ ಶಿಲ್ಪಿಯಾದ ಇವನನ್ನು ಕಂಡು ನನ್ನ ಕಣ್ಣು ಸಾರ್ಥಕವಾದವು. ಆದರೆ ಇನ್ನು ಅವನ ಮೈ ಮುಟ್ಟಿ ನನ್ನ ಅಂಗಾಂಗಗಳೂ ಸಫಲವಾಗಬಹುದೇ!

ಈ ಸಿರಿಯ ಒಡೆಯನು ಸಾಕ್ಷಾತ್ ಸೌಭಾಗ್ಯದಂತಿರುವ ತನ್ನ ವರದ ಹಸ್ತವನ್ನು ನನ್ನ ಬೆನ್ನ ಮೇಲೆ ಆಡಿಸಬಹುದೇ ! ಅವನ ಕೈ ತಾಕಿದರೆ ಸಾಕು. ಬೆರಳು ಸೋಕಿದರೆ ಸಾಕು. ದೋಷಗಳೆಲ್ಲ ತಳ ಕಿತ್ತುತ್ತವೆ. ಸಿದ್ಧಿಗಳೆಲ್ಲ ಕೈಗೆ ಹತ್ತುತ್ತವೆ. ಹಿಂದೆ ಬಲಿಚಕ್ರವರ್ತಿಯು ಇವನಿಗೆ ಮೂರು ಪಾದ ಭೂಮಿಯಿತ್ತು ಕೃಷ್ಣಾರ್ಪಣ ಎಂದು ಹನಿ ನೀರು ಬಿಟ್ಟ ಮಾತ್ರಕ್ಕೆ ಭೂಲೋಕದಲ್ಲಿ ಭೋಗಭಾಗ್ಯಗಳನ್ನೆಲ್ಲ ಭೋಗಿಸಿದ. ಕೊನೆಗೆ ಸ್ವರ್ಗದ ಸಿರಿಸಂಪದಗಳ ಸುಖವನ್ನೂ ಸೂರೆಗೊಂಡ. ಅವನ ಆ ಇಂದ್ರಭೋಗದ ಅವಧಿ ಇಡೀ ಒಂದು ಮನ್ವಂತರ. ಕಂಸನಂಥ ದುಷ್ಟ ಮನುಷ್ಯನ ದಾಸನಾಗಿ ಬಂದ ನನ್ನನ್ನು ಈ ಕೃಷ್ಣನು ಪರಿಗ್ರಹಿಸಬಹುದೇ ! ಇದರಲ್ಲಿ ನನ್ನದೇನೂ ತಪ್ಪಿಲ್ಲ. ಆದರೆ ಇಂಥ ನೀಚರ ಸೇವೆ ಮಾಡುವದೇ ದೊಡ್ಡ ತಪ್ಪು. ಅದಕ್ಕಾಗಿ ಕೃಷ್ಣನು ನನಗೆ ಅವಮಾನ ಮಾಡುವನೋ ಏನೋ ! ಹಾ ! ಧಿಕ್. ದೊಡ್ಡವರನ್ನು ಬಹಿಷ್ಕರಿಸಿದ ಮಾನವ ಜನ್ಮಕ್ಕೆ ಧಿಕ್ಕಾರವಿರಲಿ. ದೋಷರಹಿತನಾದ ಈ ಕೃಷ್ಣನು ಸತ್ವಮೂರ್ತಿಯಾಗಿದ್ದಾನೆ. ಇವನು ಜ್ಞಾನ ಸ್ವರೂಪಿಯು. ಎಲ್ಲ ಪ್ರಾಣಿಗಳ ಹೃದಯದಲ್ಲಿರುವ ಆಶಯ ಅಭಿಪ್ರಾಯ ಭಾವಗಳನ್ನೆಲ್ಲ ಅವನು ಚೆನ್ನಾಗಿ ಬಲ್ಲ. ಅವನಿಗೆ ತಿಳಿಯದ ವಿಷಯವಾವುದಿದೆ! ಅವನು

ಜೀವಿಗಳ ಹೃದಯದಲ್ಲಿಯೇ ಇರುವವನಲ್ಲವೇ ? ಆದುದರಿಂದಲೇ ಅವನು 'ನನ್ನಲ್ಲಿ ತಪ್ಪಿಲ್ಲ. ನನ್ನ ಹೃದಯದಲ್ಲಿಯೂ ದುರ್ಭಾವನೆಯಿಲ್ಲ' ಎಂಬುದನ್ನೂ ಸರಿಯಾಗಿ ಅರಿತಿದ್ದಾನೆ.

ಆದುದರಿಂದ ಎಲ್ಲಾ ದೇವಾಧಿದೇವತೆಗಳಿಗೂ ಒಡೆಯನಾದ ಈ ಶ್ರೀ ಕೃಷ್ಣನಿಗೇ ಭಕ್ತಿಯಿಂದ ಶರಣು ಹೋಗುತ್ತೇನೆ. ಪುರುಷೋತ್ತಮನಾದ ಆ ಶ್ರೀ ಹರಿಯ ಅಂಶಾವತಾರಿಯಾದ, ತುದಿಮೊದಲಿಲ್ಲದ ಇವನ ಶ್ರೀ ಚರಣಗಳೇ ನನಗೆ ಶರಣು. ಅವನು ಬಳಿಗೆ ನಾನು ಹೋಗುತ್ತೇನೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹದಿನೇಳನೇ ಅಧ್ಯಾಯ ಸಂಪೂರ್ಣ*



## ಕೃಷ್ಣನ ಮಥುರಾ ಪ್ರಯಾಣ, ಗೋಪಿಯರ ಪ್ರಲಾಪ | ಅಧ್ಯಾಯ - ೧೮

ಅಕ್ರೂರನು ಹೀಗೆ ಯೋಚಿಸುತ್ತ ಶ್ರೀ ಕೃಷ್ಣನ ಬಳಿಗೆ ಬಂದು ಅವನು ಚರಣಗಳಿಗೆ ವಂದಿಸಿದನು. ಮತ್ತು ನಾನು ಅಕ್ರೂರ ಎಂದು ಹೇಳಿ ಆತ್ಮಪರಿಚಯವನ್ನು ಮಾಡಿಕೊಟ್ಟನು. ಅಲ್ಲಿಯೇ ಬಲದೇವನಿಗೂ ನಮಸ್ಕರಿಸಿದನು. ಕೃಷ್ಣನು ತನ್ನ ಚಕ್ರಚಿನ್ಹಿತವಾದ ಕೈಯಿಂದ ಅವನನ್ನು ಹಿಡಿದೆತ್ತಿ ತೋಳುಚಾಚಿ ತಬ್ಬಿಕೊಂಡನು. ಕೈಯಿಂದ ನೇಹತುಂಬಿ ನೇವರಿಸಿದನು. ಪ್ರೇಮಪೂರ್ವಕವಾಗಿ ಮಾತನಾಡಿಸಿದನು. ಮತ್ತು ಅಕ್ರೂರನ ಕೈ ಹಿಡಿದು ಕೃಷ್ಣನು ತಮ್ಮ ಮನೆಯೊಳಗೆ ಕರೆದುಕೊಂಡು ಹೋದನು. ಅಲ್ಲಿ ಅಕ್ರೂರನಿಗೆ ಆದರದ ಉಪಚಾರ, ಪ್ರೀತಿಯ ಆತಿಥ್ಯ, ಸ್ನೇಹದುಂಬಿದ ಸತ್ಕಾರ ಕಾದಿತ್ತು. ಅವನು ಸ್ನಾನ ಸಂಧ್ಯಾವಂದನೆಗಳನ್ನು ಮಾಡಿ ಕೃಷ್ಣ ರಾಮರ ಜೊತೆಗೆ ಊಟಮಾಡಿದನು. ಭೋಜನೋತ್ತರ ಅಕ್ರೂರನು ಕೃಷ್ಣ ರಾಮರಿಗೆ ಕಂಸನ ದುರ್ನಡತೆ ಹಾಗೂ ದುರ್ವಿಚಾರಗಳನ್ನೂ ತಿಳಿಸಿದನು. ವಸುದೇವ ದೇವಕಿಯರಿಗೆ ಅವನು ಕೊಟ್ಟ ಹಿಂಸೆ, ಭರ್ತ್ಸನೆಗಳನ್ನು ಅರುಹಿದನು. ಉಗ್ರಸೇನರಾಜನ ಗೋಳಾಟವನ್ನು ಹೇಳಿದನು. ಮತ್ತು ಈಗ ಬಿಲ್ಲಿನ ಹಬ್ಬದ ನೆಪಮಾಡಿ ರಾಮಕೃಷ್ಣರನ್ನು ಬರಮಾಡಕೊಳ್ಳುವ ಅವನು ದುರುದ್ದೇಶವನ್ನು ತಿಳಿಸಿ ''ಅದಕ್ಕಾಗಿಯೇ ಈಗ ನನ್ನನ್ನು ನಿಮ್ಮ ಬಳಿಗೆ ಕಳಿಸಿಕೊಟ್ಟಿದ್ದಾನೆ'' ಎಂದು ನಿರೂಪಿಸಿದನು. ಅಕ್ರೂರನ ಹೇಳಿಕೆಯನ್ನೆಲ್ಲ ಸಾವಧಾನವಾಗಿ ಕೇಳಿಕೊಂಡ ಬಳಿಕ ಕೃಷ್ಣನು ಅವನಿಗೆ ''ಅಕ್ರೂರ, ನನಗೆ ಕಂಸನ ಕಾರಸ್ಥಾನವೆಲ್ಲ ತಿಳಿದಿದೆ. ನೀನೇನು ಹೆದರಬೇಕಿಲ್ಲ. ನಾನು ಇದಕ್ಕೆಲ್ಲ ಉಪಾಯಮಾಡುತ್ತೇನೆ. ಕಂಸನು ಸತ್ತನೆಂದೇ ತಿಳಿ. ಇಂದಿನಿಂದ ಮೂರು ಇರುಳು ಉರುಳವಷ್ಟರಲ್ಲಿ ಕಂಸನನ್ನು ಕೊಂದು ಹಾಕುತ್ತೇನೆ. ನಾನು ನನ್ನ ಅಣ್ಣ ಬಲದೇವನೂ ನಾಳೆಯೇ ಮಥುರಾ ಪಟ್ಟಣಕ್ಕೆ ತೆರಳುತ್ತೇವೆ. ನಮ್ಮ ತುರುಗಾಹಿ ಹಿರಿಯರೂ ಹಾಲು-ಬೆಣ್ಣೆ ತೆಗೆದುಕೊಂಡು ಮಥುರಾ ಪಟ್ಟಣಕ್ಕೆ ಬರುತ್ತಾರೆ. ನೀನು ಇಂದು ರಾತ್ರಿ ನಿಶ್ಚಿಂತವಾಗಿ ಮಲಗಿಕೋ'' ಎಂದು ಹೇಳಿದನು. ಕೃಷ್ಣ ಬಲರಾಮ ಅಕ್ರೂರರು ಅಂದು ನಂದಗೋಪನ ಮನೆಯಲ್ಲಿ ಸುಖನಿದ್ರೆಯನ್ನು ಮಾಡಿದರು.

ಬೆಳಗಾದ ಬಳಿಕ ಕಾಂತಿಯ ಕೈವಾರಿಗಳಾದ ಕೃಷ್ಣರಾಮರು ಅಕ್ರೂರನ ಜೊತೆಗೆ ಮಥುರಾ ಪಟ್ಟಣಕ್ಕೆ ಹೊರಟು ನಿಂತರು. ಆಗ ನಂದಗೋಕುಲದಲ್ಲಿಯ ಗೊಲ್ಲನಾರಿಯರಿಗೆಲ್ಲ ದುಃಖ ಉಕ್ಕಿ ಬಂದಿತು. ಅವರ ಕಂಗಳಿಂದ ಕಣ್ಣೀರು ಹರಿಯಿತು. ಕರುಳು ಸುಟ್ಟು ಬಿಸಿಯಾದಂತೆ ನಿಟ್ಟುಸಿರು ಹೊರಸೂಸುತೊಡಗಿತು. ಕೃಷ್ಣನ ಪ್ರಸ್ಥಾನವನ್ನು ಕಂಡು ಅವರು ಅತ್ತು ಗೋಗರೆದರು.

### ಗೋಪಿಯರ ಗೋಳಾಟ

ಅಯ್ಯೋ! ವಿಧಿಯೆ ಇಂದು ಗೋಕುಲದ ಸರ್ವಸ್ವವನ್ನೇ ನಮ್ಮಿಂದ ಕಸಿದು ಕೊಂಡು ಗೋಪಾಂಗನೆಯರ ಮೇಲೆ ಎಂಥ ಪ್ರಹಾರಗೈದೆ ! ಮಥುರಾ ಪಟ್ಟಣಕ್ಕೆ ಹೋದ ಬಳಿಕ

ಕೃಷ್ಣನು ಇನ್ನೇನು ಇಲ್ಲಿಗೆ ತಿರುಗಿಬರುತ್ತಾನೆ ! ನಗರನಾರಿಯರ ಶೃಂಗಾರ, ಸಡಗರ, ಮಧುರಮಾತುಗಳಿಗೆ ಮನಸೋತ ಅವನು ನಮ್ಮಂಥ ಹಳ್ಳಿಗಾಡ ಹೆಂಗಸರ ಕಡೆಗೆ ಮತ್ತೇಕೆ ಚಿತ್ತವನ್ನು ಹರಿಸುವನು ! ಪಟ್ಟಣದ ಪ್ರಮದೆಯರು ಮಹಾ ಬೆಡಗು ಗಾತಿಯರು. ಆ ಬಿಂಕದ ಸಿಂಗಾರಿಯರಲ್ಲಿ ಒನಪು ಬಹಳ. ವೈಯಾರ ಜಾಸ್ತಿ. ಅವರಲ್ಲಿ ಮಾತು ಮಾತಿಗೆ ಮಂದಹಾಸ. ಹೆಜ್ಜೆ ಹೆಜ್ಜೆಗೂ ಹಾಸಭಾಸ. ಅವರ ನೋಟದಲ್ಲಿಯೂ ಒಂದು ಹೂಟ. ಅವರ ಮೈ ಮಣಿತ ಕೈಕುಣಿತಗಳಲ್ಲೆಲ್ಲ ಏನೋ ಒಂದು ಮಾಟ. ಜೀವನವೇ ಅವರಿಗೊಂದು ಹುಡುಗಾಟ. ಬಣ್ಣದ ಚಿಟ್ಟೆಗಳಂತಿರುವ ಆ ಶಹರದ ಹೆಣ್ಣುಗಳ ಕಣ್ಣಿನ ಹಾವಭಾವ, ಬೆಡಗು ಬಿನ್ನಾಣಗಳಿಗೆ ಮಾರುಹೋಗುವ ಕೃಷ್ಣನಿಗೆ ಈ ಕಾಡುಬೀಡಿನ ಗೊಲ್ಲಕಾಂತೆಯರು ಹೇಗೆ ಹಿಡಿಸುವರು ! ಅಯ್ಯೋ ! ಇವನು ಅಕ್ರೂರನಂತೆ. ಆದರೆ ಇವನಂಥ ಕ್ರೂರನಾರು ! ಇವನು ಕೃಷ್ಣನನ್ನು ಮೋಸ ಮಾಡಿ ಕರೆದೊಯ್ಯುತ್ತಿದ್ದಾನೆ. ನಮ್ಮ ಕಣ್ಣಿನ ತಂಪನ್ನೇ ಸೆಳೆಯುತ್ತಾನೆ. ನಮ್ಮ ಬ್ಧದುಕಿನ ತೃಪ್ತಿಯನ್ನೇ ಕಸಿಯುತ್ತಿದ್ದಾನೆ. ನಮ್ಮ ಜೀವನದ ಆನಂದದ ಝರಿಯನ್ನೇ ಇಂಗಿಸುತ್ತಿದ್ದಾನೆ. ಆದರೆ ಈ ಕ್ರೂರ ಅಕ್ರೂರನಿಗೆ ಗೊತ್ತಿದ್ದಂತಿಲ್ಲ 'ಗೋಪಿಯರ ಪಂಚ ಪ್ರಾಣವನ್ನೇ ತಾನು ಇಂದು ಸೆಳೆದೊಯ್ಯುತ್ತಿದ್ದೇನೆಂದು'. ಆದುದರಿಂದ ನಡೆಯಿರಿ. ರಥವನ್ನು ತಡೆಯಿರಿ. ಕುದುರೆಗಳನ್ನು ಹಿಡಿಯಿರಿ. ಕೃಷ್ಣನನ್ನು ತಿರುಗಿಸಿರಿ.'' ಗೋಪಿಕಾ ಸ್ತ್ರೀಯರು ತಮ್ಮ ತಮ್ಮಲ್ಲಿ ಇಂತು ಗೋಳಾಡುತ್ತಿರುವಾಗಲೇ ಅವರ ಗಂಡ, ಮಾವ ಮೈದುನ, ಅಣ್ಣ, ತಮ್ಮ, ತಂದೆ, ಬಂಧು ಬಳಗದವರೆಲ್ಲರೂ ಕೃಷ್ಣರಾಮರನ್ನು ಬೀಳ್ಕೊಡಲಿಕ್ಕೆ ಬಂದರು. ಅದನ್ನು ಕಂಡು ಆ ಗುರುಹಿರಿಯರ ಮುಂದೆ ಗೋವಿಂದನ ರಥವನ್ನು ತಡೆಯಲಿಕ್ಕೆ ಅವರಿಗೆ ನಾಚಿಕೆಯಾಯಿತು. ಅವರು ಮತ್ತೆ ತಮ್ಮ ತಮ್ಮಲ್ಲಿ ದುಃಖಿಸ ಹತ್ತಿದರು. ''ಗುರುಹಿರಿಯರಿದ್ದರೆ ಏನಾಯಿತು ! ಕೃಷ್ಣರಾಮರನ್ನು ನಿಲ್ಲಿಸೋಣ ನಡೆಯಿರಿ. ಹಿರಿಯರೇನು ಮಾಡುವರು ! ನಮ್ಮ ಎದೆಯೇ ಉರಿದು ಹೋಗುತ್ತಲಿದೆ. ಕರುಳುಗಳೆಲ್ಲ ಸುಟ್ಟು ಕರಕಾಗುತ್ತಲಿವೆ. ಇಂಥ ವೇಳೆಯಲ್ಲಿ ಹಿರಿಯರದೇನು ಹೆದರಿಕೆ!

ಅಲ್ಲ ! ಈ ಗಂಡಸರು ಎಂಥ ಕಠೋರರು ! ಮತ್ತು ಎಷ್ಟು ಬುದ್ಧಿಶೂನ್ಯರು! ನಂದಗೋಪನೇ ಮೊದಲಾದ ಗೋಪಾಲಕರೆಲ್ಲರೂ ಅಕ್ರೂರನನ್ನು ಬೈದು ಕಳಿಸಿ ಕೃಷ್ಣನನ್ನು ರಥದಿಂದ ಇಳಿಸುವದನ್ನು ಬಿಟ್ಟು ಅವನನ್ನು ಊರಿಗೆ ಕಳಿಸಲಿಕ್ಕೆ ಬಂದಿದ್ದಾರೆ. ನಿರೋಪಕೊಟ್ಟು ನಿಂದಿದ್ದಾರೆ. ಅಯ್ಯೋ ಇವರಾರೂ ರಾಮಕೃಷ್ಣರನ್ನು ಮನೆಗೆ ಕರೆತರುವ ಎತ್ತುಗಡೆಯಲ್ಲಿ ಇಲ್ಲ. ಹಾಗಾದರೆ ನಮಗೆ ಇದೇ ಕೃಷ್ಣನ ಕೊನೆಯ ಭೇಟಿಯೇ ! ನಾಳೆ ಬೆಳಿಗ್ಗೆ ನಮಗೆ ಶ್ರೀ ಕೃಷ್ಣನ ಮುಖ ಕಾಣುವಂತಿಲ್ಲ. ಇಂದೇ ನಮಗೆ ಸುಪ್ರಭಾತ. ಇಂದು ನಮ್ಮ ಕಣ್ಗೊಂಬೆಗಳು ಕೃಷ್ಣನ ತುಂಬುತಾವರೆಯ ಸೊಬಗಿನ ಮುಖವನ್ನು ದಿಟ್ಟಿಸಿ ಧನ್ಯವಾಗಿವೆ.

ಇವರ ಜೊತೆಗೆ ಮಥುರೆಗೆ ನಡೆದ ಈ ಗೋವಳಿಗ ಗಂಡಸರೂ ಭಾಗ್ಯವಂತರೇ ಸರಿ. ಮಥುರಾ ಪಟ್ಟಣವನ್ನು ಮುಟ್ಟುವವರೆಗೂ ಅವರು ಈ

ಮುಕುಂದನ ಸುಂದರ ಮುಖವನ್ನು ನಿಟ್ಟಿಸಿ ನೋಡಬಲ್ಲರು. ಅದನ್ನು ಕಂಡವರಿಗೆಲ್ಲ ಮೈ ಮೇಲೆ ಹಿಗ್ಗಿನ ಮುಳ್ಳು ನಿಮಿರಿ ನಿಲ್ಲುತ್ತವೆ. ಅಷ್ಟು ಮುದ್ದು ಈ ಕೃಷ್ಣನ ಮುಖ. ಮಥುರೆಯ ಹೆಂಗೆಳೆಯರ ಕಂಗಳಿಗೆಲ್ಲ ಇಂದು ಒಂದು ದೊಡ್ಡ ಹಬ್ಬ. ಅವರಿಗೆ ಇಂದು ಶುಭ ಶಕುನಗಳಾಗಿರಬಹುದು. ಅವರು ಇಂದು ಯಾವದೋ ಶುಭ ಸೂಚಕವಾದ ಕನಸನ್ನು ಕಂಡಿರಬಹುದು. ಆದುದರಿಂದಲೇ ಇಂದು ಅವರ ಕಣ್ಣಿವೆಗಳಿಗೆಲ್ಲ ಹುಣ್ಣಿಮೆಯ ಸಾಕ್ಷಾತ್ಕಾರ. ಬೆಳದಿಂಗಳನ್ನೆಲ್ಲ ಕಡೆದಿಟ್ಟ ಬೆಣ್ಣೆಯ ಮುದ್ದೆಯಂತೆ ಮುದ್ದು ಮೂರುತಿ ಕೃಷ್ಣ ಅವರ ಕಣ್ಣುಗಳಲ್ಲಿ ಗೊಂಬೆಯಾಗಿ ಮೂಡುವನು. ಅವರ ಹುಬ್ಬಿದ ದಿಬ್ಬದ ಕೆಳಗೆ ಹಬ್ಬಿದ ಆ ಹರವು ಗಣ್ಣುಗಳಿಗೆಲ್ಲ ಇಂದು ಎಂಥ ಉಬ್ಬು! ಎಷ್ಟು ಕೊಬ್ಬು! ಏನು ಹಬ್ಬ! ವಿಧಿಯು ಈ ಗೋಪಿಯರಿಗೆಲ್ಲ ಇಷ್ಟು ದಿನ ಒಂದು ದೊಡ್ಡ ನಿಧಿಯನ್ನು ಕೊಟ್ಟು ಇಂದು ಒಮ್ಮಿಂದೊಮ್ಮೆಲೆ ಅದನ್ನು ನಮ್ಮಿಂದ ಎತ್ತಿಕೊಂಡಿತು. ಜೊತೆಗೆ ನಮ್ಮ ಕಣ್ಣುಗಳನ್ನೇ ಕಿತ್ತಿಕೊಂಡಿತು. ಕೃಷ್ಣನಿಗೆ ನಮ್ಮ ಮೇಲೆ ಪ್ರೀತಿ ಸಡಿಲಾದಂತಾಯಿತು. ಆದುದರಿಂದ ನಮ್ಮ ಕೈಯಲ್ಲಿ ಬಳೆ ಕಂಕಣಗಳೂ ಕೂಡ ಈಗ ಸಡಿಲಾಗಿ ಬೀಳುತ್ತಲಿವೆ. ಅಬ್ಬ! ಈ ಅಕ್ರೂರ ಎಷ್ಟು ಕ್ರೂರನಾಗಿದ್ದಾನೆ ನೋಡಿರಿ. ಕುದುರೆಗಳನ್ನು ಎಷ್ಟು ಬೇಗ ಬೇಗ ಹೊಡೆಯುತ್ತಿದ್ದಾನೆ! ಆರ್ತರಾದ ಈ ಗೋಪವನಿತೆಯರ ಮೇಲೆ ಅವನಿಗೂ ಇನಿತೂ ದಯೆಯಿಲ್ಲ. ಕೃಷ್ಣನ ರಥವನ್ನು ಅವನು ವೇಗದಿಂದ ಹೊಡೆದು ಆ ರಥವು ನಮ್ಮ ಕಣ್ಣಿಗೆ ಕಾಣದಂತೆ ಮಾಡಿದ. ಈ ವರೆಗೆ ಕಾಣುತ್ತಿದ್ದ ರಥದ ಹಿಂದಿನ ಧೂಳು ಕೂಡ ಈಗ ಕಾಣದಂತಾಯಿತು. ಈಗ ಕೃಷ್ಣನ ಮೂರ್ತಿ ಪೂರ್ತಿ ಕಣ್ಮರೆಯಾದಂತಾಯಿತು.''

ಹೀಗೆ ಗೋಪಿಯರು ವಿರಹ ವ್ಯಾಕುಲತೆಯಿಂದ ಶೋಕಿಸುತ್ತಿರುವಾಗ ಕೃಷ್ಣ ರಾಮರ ರಥವು ವೃಂದಾವನದಿಂದ ಹೊರಟು ವೇಗದಿಂದ ಓಡತೊಡಗಿತು. ನಾಗಾಲೋಟದಿಂದ ಓಡುವ ಕುದುರೆಗಳು ಮಧ್ಯಾಹ್ನದ ವೇಳೆಗೆ ಅವರನ್ನು ಯಮುನಾ ನದಿಯವರೆಗೆ ತಂದು ತಲುಪಿಸಿದವು. ಆಗ ಅಕ್ರೂರನು ರಥವನ್ನು ನಿಲ್ಲಿಸಿದನು. ರಾಮಕೃಷ್ಣರಿಗೇ ರಥದಲ್ಲಿಯೇ ಕುಳಿತಿರಲು ಹೇಳಿ ತಾನು ಯಮುನಾನದಿಯಲ್ಲಿ ಸ್ನಾನಾಹ್ನಿಕವನ್ನು ಪೂರೈಯಿಸಿಗೊಂಡು ಬರುತ್ತೇನೆಂದು ತಿಳಿಸಿದನು.

## ಯಮುನೆಯ ಆಳದಲ್ಲಿ ಅಕ್ರೂರ ಕಂಡ ಆಶ್ಚರ್ಯ

ಅಕ್ರೂರನು ನದಿಯಲ್ಲಿ ಇಳಿದು, ಸ್ನಾನ ಮಾಡಿ ಆಚಮನ ಗೈದು, ಯಮುನೆಯ ಮಡುವಿನಲ್ಲಿ ಮುಳುಗಿ ಪರಮಾತ್ಮನ ಧ್ಯಾನ ಮಾಡತೊಡಗಿದನು. ಅಲ್ಲಿ ಅವನ ಕಣ್ಣಿಗೆ ಒಂದು ವಿಚಿತ್ರವಾದ ದೃಶ್ಯವು ಕಂಡು ಬಂದಿತು. ಯಮುನೆಯ ಆ ಅಗಾಧ ಮಡುವಿನ ತಳದಲ್ಲಿ ಆದಿಶೇಷನ ರೂಪದಿಂದ ಬಲರಾಮನು ಕಂಗೊಳಿಸುತ್ತಿದ್ದ. ಸಾವಿರ ಹೆಡೆಗಳು, ಎಸಳು ತೆರೆದ ಬಿಸಜದಂತಿರುವ ಕಂಗಳು, ಕೊರಳಲ್ಲಿ ಸರಗಟ್ಟಿ

ಶೋಭಿಸುವ ಕುಂದ ಕುಸುಮಗಳು. ಅಕ್ಕಪಕ್ಕದಲ್ಲಿ ರಂಭ ವಾಸುಕಿ ಮುಂತಾದ ನಾಗಾಧುರೀಣರು ನಿಂತು ನುತಿಸುತ್ತಿದ್ದಾರೆ. ಕತ್ತಿನಲ್ಲಿ ಬಾಯ್ಬಿರಿದ ಬನಕುಸುಮ ಮಾಲೆಗಳ ಕಮ್ಮನೆಯ ಮರುವಾಸನೆ ಮೂಗಿಗೆ ಬಡೆಯುತ್ತಲಿದೆ. ಆ ಆದಿಶೇಷನ ತೊಡೆಯ ಮೇಲೆ ಶ್ರೀ ಕೃಷ್ಣನು ಒರಗಿದ್ದಾನೆ. ಅಕ್ರೂರ ತುಸು ಬಾಗಿ ನಿರುಕಿಸಿ ನೋಡಿದ. ರಾಮಕೃಷ್ಣರನ್ನು ತಾನು ಇದೀಗ ರಥದಲ್ಲಿ ಬಿಟ್ಟು ಬಂದದ್ದರಿಂದ ಅವರಾಗದೇ ಇವರು ಬೇರೆಯಾಗಿರಬಹುದೇ ಎಂಬ ಸಂಶಯದಿಂದ ಮತ್ತೆ ಮತ್ತೆ ಕಣ್ಣಗಲಿಸಿ, ನಿರುಕಿಸಿ, ಪರಿಕಿಸಿದ. ಅದೇ ರಾಮ. ಅದೇ ಕೃಷ್ಣ. ರಾಮನು ಆದಿಶೇಷನಾಗಿದ್ದಾನೆ. ಆದರೆ ಕೃಷ್ಣ ಮಾತ್ರ ಥೇಟ ಅವನೇ. ಅದೇ ಮುಗಿಲು ಬಣ್ಣ. ಬೊಗಸೆ ಗಣ್ಣು, ಕಾಡುಕುಸುಮಗಳ ಕೊರಳ ಮಾಲೆ ಮೋಡಗಳ ಮಡಿಲಲ್ಲಿ ಮಿಂಚು ಗೊಂಚಲಗಟ್ಟಿದಂತೆ ಕಾಣುತ್ತಿತ್ತು. ಎದೆಯ ಮೇಲೆ ಶ್ರೀವತ್ಸದ ಲಾಂಛನ. ಇವಲ್ಲದೇ ಅಲ್ಲಿಯ ಕೃಷ್ಣನ ವಿಶೇಷವೆಂದರೆ ನಾಲ್ಕು ತೋಳು, ನಾಲ್ಕೂ ಕೈಗಳಲ್ಲಿ ಒಂದೊಂದು ಆಯುಧ. ಒಂದರಲ್ಲಿ ಚಕ್ರ, ಮತ್ತೊಂದರಲ್ಲಿ ಶಂಖ, ಇನ್ನೊಂದರಲ್ಲಿ ಗದೆ, ಮಗದೊಂದರಲ್ಲಿ ಪದ್ಮ. ಉಟ್ಟದ್ದು ಪೀತಾಂಬರ. ತೊಟ್ಟದ್ದು ಹಳದಿಪಟ್ಟೆ. ಹೊಳೆಯುವ ಮಕರಕುಂಡಲಗಳು. ಜುಟ್ಟದಲ್ಲಿ ಒಂದು ಚೆಂದ ಕೆಂದಾವರೆಯ ಕುಸುಮ. ಅವನ ಎಡಬಲದಲ್ಲಿ ಸನಕ ಸನಂದನ ಮೊದಲಾದ ಮಹಾಮುನಿಗಳು ನಿಂತು ಕೈಜೋಡಿಸಿ ಹೊಗಳುತ್ತಿದ್ದಾರೆ. ಅದನ್ನು ಕಂಡು ಅಕ್ರೂರನಿಗೆ ಅತ್ಯಂತ ಅಚ್ಚರಿ. ಇದೀಗ ರಥದಲ್ಲಿ ಇದ್ದವರು ಇಷ್ಟು ಬೇಗ ಇಲ್ಲಿಗೆ ಹೇಗೆ ಬಂದರು! ಅಲ್ಲಿಯೇ ಆ ಹಾವಿನ ಮೇಲೆ ಮೈಚೆಲ್ಲಿ ಪವಡಿಸಿದ ಕೃಷ್ಣನನ್ನು ಕೇಳಬೇಕೆಂದು ಬಯಸಿದ. ಆದರೆ ಆ ಶೇಷಶಾಯಿ ಕೃಷ್ಣ ಅಕ್ರೂರನಿಗೆ ಸುಮ್ಮನಿರಲು ಸನ್ನೆಗೈದ. ಕೂಡಲೇ ಅಕ್ರೂರನು ನೀರಿನಿಂದ ದಿಗ್ಗನೇ ಮೇಲಕ್ಕೆದ್ದ. ಅದೇ ಒದ್ದೆ ಬಟ್ಟೆಯಿಂದ ಓಡುತ್ತ ರಥವಿದ್ದಲ್ಲಿಗೆ ಬಂದ. ಕಣ್ಣಟ್ಟು ನೋಡಿದ. ರಾಮಕೃಷ್ಣರಿಬ್ಬರೂ ಅದೇ ರಥದಲ್ಲಿ ಹಾಗೇ ಕುಳಿತಿದ್ದಾರೆ. ಅವರು ತಾವು ಕುಳಿತು ಸ್ಥಳದಿಂದ ಕದಲಿರಲಿಲ್ಲ. ಅವರು ಬಟ್ಟೆಯ ಸೆರಗೂ ಕೂಡ ನೆನೆದಿರಲಿಲ್ಲ.

ಅಲ್ಲಿಂದ ಹಾಗೇ ಅಕ್ರೂರನು ಕೌತುಕಪಟ್ಟು ತೀರಕ್ಕೆ ಬಂದು ನೀರಿಗಿಳಿದ. ಕೆಳಗೆ ಮುಳುಗಿದ. ಅಲ್ಲಿಯೂ ಮತ್ತೇ ಅದೇ ರಾಮಕೃಷ್ಣರು, ಅದೇ ಮುಖ, ಅದೇ ಬಗೆ. ಅಲ್ಲಿ ಅಕ್ಕಪಕ್ಕದಲ್ಲಿ ನಿಂತು ಋಷಿಮುನಿಗಳು ''ದೇವದೇವೋತ್ತಮ'' ಎಂದು ಹೊಗಳುತ್ತಿದ್ದಾರೆ. ಗಂಧರ್ವರು 'ಶ್ರೀ ವಿಷ್ಣೋ ಪಾಹಿ ಮಾಂ ಸದಾ' ಎಂದು ಹಾಡುತ್ತಿದ್ದಾರೆ. ಹಾವುಗಳು ಕೊಂಡಾಡುತ್ತಲಿವೆ. ಅದನ್ನೆಲ್ಲ ಕೇಳಿ ಅಕ್ರೂರನಿಗೆ ನಿಜತತ್ವ ತಿಳಿಯಿತು. ''ಈ ಕೃಷ್ಣ ನಮ್ಮಂತೆ ಮನುಷ್ಯನಲ್ಲ. ಸಾಕ್ಷಾತ್ ದೇವ ದೇವ ಶ್ರೀ ವಿಷ್ಣು ಎಂದು. ಅವನು ಹೃದಯದಲ್ಲಿ ಭಕ್ತಿಭಾವ ಕಡಲಾಡತೊಡಗಿತು. ಅವನ ದರ್ಶನದ ಆನಂದೋದ್ರೇಕದಿಂದ ಹೊರಬಿದ್ದ ಹೃದಯದ ಹಿಗ್ಗು ನಲ್ಮೆಯ ಹಾಡಾಗಿ ಹೊಮ್ಮಿ ಹರಿಯಿತು. ಅವನು ಶ್ರೀ ಕೃಷ್ಣನನ್ನು ಬಗೆ ಬಗೆಯಿಂದ ಬಣ್ಣಿಸಿ ಧನ್ಯನಾದ.

**''ಓಂ ನಮೋ ವಾಸುದೇವಾಯ ನಮಃ ಸಂಕರ್ಷಣಾಯ ಚ ।**
**ಪ್ರದ್ಯುಮ್ನಾಯ ನಮಸ್ತುಭ್ಯಮನಿರುಧ್ಧಾಯ ತೇ ನಮಃ ॥**
**ತ್ವಂ ಬ್ರಹ್ಮಾ ಪಶುಪತಿರರ್ಯಮಾ ವಿಧಾತಾ ।**
**ಧಾತಾ ತ್ವಂ ತ್ರಿದಶಪತಿಃ ಸಮೀರಣೋಽಗ್ನಿಃ ॥**
**ತೋಯೇಶೋ ಧನಪತಿರಂತಕಸ್ತ್ವ ಮೇಕೋ ।**
**ಭಿನ್ನಾರ್ಥೈರ್ಜಗದಭಿಪಾಸಿ ಶಕ್ತಿಭೇದೈಃ ॥**

ಓಂಕಾರ ಶಬ್ದ ವಾಚ್ಯನಾಗಿ ಗುಣಪರಿಪೂರ್ಣನಾದ ಶ್ರೀ ಕೃಷ್ಣನಿಗೆ ನಮಸ್ಕಾರ. ಪಾಪಗಳನ್ನೆಲ್ಲ ಕರಗಿಸುವ ಸಂಕರ್ಷಣನಿಗೆ ವಂದನೆ. ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂಬ ಚತುಮೂರ್ತಿಯಾದ ಶ್ರೀಮನ್ನಾರಾಯಣನಿಗೆ ನಮಿಸುವೆ. ಸ್ವಾಮಿನ್ ಶ್ರೀ ಕೃಷ್ಣ, ನೀನೇ ಬ್ರಹ್ಮ, ನೀನೇ ರುದ್ರ, ನೀನೇ ಇಂದ್ರ, ಅಗ್ನಿ ವಾಯು, ಕುಬೇರ, ವರುಣ ಯಮ ಎಲ್ಲವೂ ನೀನೇ. ಈ ಎಲ್ಲ ದೇವತೆಗಳಲ್ಲಿ ಇದ್ದು ಆ ನಾಮಗಳ ಮುಖ್ಯ ಪ್ರತಿಪಾದ್ಯನಾಗಿ ಅವರೆಲ್ಲರನ್ನು ನಿಯಮಿಸಿ ಕಾರ್ಯ ಮಾಡಿಸುವವನು ನೀನೇ ಆಗಿರುತ್ತಿ. ಭಿನ್ನ ಭಿನ್ನ ಅಧಿಕಾರಿಗಳಲ್ಲಿ ನಿನ್ನ ಶಕ್ತಿ ವಿಶೇಷಗಳನ್ನು ಆವಿಷ್ಕಾರಗೊಳಿಸಿ ಜಗತ್ತನ್ನು ಸಂರಕ್ಷಿಸುವ ಮಹಾಪ್ರಭು ನೀನೇ ಆಗಿರುವೆ. ನಿನಗೆ ನನ್ನ ಅನಂತ ವಂದನೆಗಳಿರಲಿ'' ಎಂದು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹದಿನೆಂಟನೇ ಅಧ್ಯಾಯ ಸಂಪೂರ್ಣ*



## ಅಧ್ಯಾಯ - ೧೯

ಅಕ್ರೂರನು ನೀರಿನಲ್ಲಿಯೇ ನಾರಾಯಣನನ್ನು ಈ ಬಗೆಯಾಗಿ ನೆನೆದು ಸ್ತುತಿಸಿದನು. ಅತ್ಯಂತ ಭಕ್ತಿಯಿಂದ ಹೊರಗಿನ ಪ್ರಪಂಚದ ಅರಿವು ಇಲ್ಲದಂತೆ ತನ್ಮಯನಾಗಿ ಆ ಶ್ರೀಕೃಷ್ಣನ ಮಾನಸ ಪೂಜೆಯನ್ನು ಮಾಡಿದನು. ಮನೋಮಯವಾದ ಧೂಪ, ದೀಪ, ಗಂಧ, ತುಳಸಿ, ನೈವೇದ್ಯ, ಮಂತ್ರ, ಪುಷ್ಪ, ಮುಂತಾಗಿ ಷೋಡಶೋಪಚಾರದಿಂದ ಆ ಭಗವಂತನನ್ನು ಪೂಜಿಸಿ, ಕೊನೆಗೆ ಅವನನ್ನು ಪ್ರಾರ್ಥಿಸುತ್ತ ಅಕ್ರೂರನು ಧ್ಯಾನಾರೂಢನಾದನು. ಬಾಹ್ಯ ಪ್ರಪಂಚದ ಪರಿಜ್ಞಾನವಿಲ್ಲದೆ ಎಷ್ಟೋ ಹೊತ್ತು ಅಸಂಪ್ರಜ್ಞಾತ ಸಮಾಧಿಯಲ್ಲಿ ಸ್ಮರಣೆಗೈದು ಅನಂತರ ಅರಿವಿಗೆ ಮರಳಿದನು. ಬಳಿಕ ನೀರಿನಿಂದ ಮೇಲಕ್ಕೆ ಎದ್ದನು. ಭಗವಂತನ ದಿವ್ಯ ರೂಪ ದರ್ಶನದಿಂದ ಅವನ ಹೃದಯದಲ್ಲಾದ ಸಂತೃಪ್ತಿಯು ರೋಮಾಂಚನ ರೂಪದಿಂದ ವ್ಯಕ್ತವಾಗುತ್ತಿತ್ತು. ತನ್ನ ಜನ್ಮವೇ ಧನ್ಯವಾಯಿತು. ಎಂದುಕೊಂಡ ಆ ಅಕ್ರೂರ.

ಅನಂತರ ಧನ್ಯಮನ್ಯನಾದ ಅವನು ಯಮುನೆಯ ನೀರಿನಿಂದ ಮೇಲಕ್ಕೆ ಎದ್ದು ತಾನು ರಥವನ್ನು ನಿಲ್ಲಿಸಿದಲ್ಲಿಯೇ ನಡೆದು ಬಂದನು. ರಾಮ ಕೃಷ್ಣರು ನಗುತ್ತ ಮಾತನಾಡುತ್ತ ಮೊದಲಿನಂತೆಯೇ ಕುಳಿತಿದ್ದರು. ಅವರನ್ನು ಕಂಡು ಅಕ್ರೂರನ ಹೃದಯವು ಅರಳಿತು. ತುಟಿಯ ತಟದಲ್ಲಿ ನಗೆಮುಗುಳು ತೆರೆಯಿತು. ಅವನ ಅಂಗಾಂಗಗಳಿಂದ ಕೃತ ಕೃತ್ಯತೆಯ ಭಾವವು ಸೂಸುತ್ತಿತ್ತು. ಅವನ ನಗೆ ಮೊಗವನ್ನು ಕಂಡು ಕೃಷ್ಣನು ಕೇಳಿದನು. ''ಅಕ್ರೂರ ಯಮುನೆಯ ನೀರಿನಲ್ಲಿ ನೀನು ಏನೋ ಒಳ್ಳೇ ಕೌತುಕವನ್ನು ಕಂಡಂತಿದೆ. ಯಾಕೆಂದರೆ ನಿನ್ನ ಮುಖವು ಅರಳಿದೆ. ಕಣ್ಣು ಅಗಲವಾಗಿದೆ. ಯಾವುದೋ ವಿಲಕ್ಷಣವಾದ ಉಲ್ಲಾಸವು ನಿನ್ನಲ್ಲಿ ತೋರಿದೆ. ಆ ಯಮುನೆಯ ಮಡುವಿನಲ್ಲಿ ನೀನು ಅಂಥದೇನು ಆಶ್ಚರ್ಯವನ್ನು ನೋಡಿದೆ?'' ಕೃಷ್ಣನ ಮಾತನ್ನು ಕೇಳಿ ಅಕ್ರೂರನು ಮಿದುವಾಗಿ ನುಡಿದನು - ''ಅಚ್ಯುತ ಅಲ್ಲಿ ನೀರಿನಲ್ಲಿ ನೋಡಿದ್ದನ್ನು ಈ ತೇರಿನಲ್ಲಿಯೂ ಈಗ ನಾನು ಕಾಣುತ್ತಲಿದ್ದೇನೆ. ಅಲ್ಲಿ ಜಲದಲ್ಲಿ ಕಂಡ ಆಶ್ಚರ್ಯವು ನನ್ನ ಎದುರೇ ಈ ಸ್ಥಳದಲ್ಲಿ ಮೂರ್ತಿಮಂತಾಗಿ ನಿಂತುಕೊಂಡಿದೆ. ಈ ಜಗದಂಡ ಮಂಡಲವೆಲ್ಲವೂ ಮಹಾಶಕ್ತಿಯ ಸ್ಥೂಲವಾದ ಆಶ್ಚರ್ಯಸ್ವರೂಪವಾಗಿದೆ. ಅಂಥ ಮಹಾಮಹಿಮನಾದ ಆಶ್ಚರ್ಯರೂಪನಾದ ನಿನ್ನ ಸಂಗಸಹವಾಸಗಳು ನನ್ನಂತಹ ಪಾಮರಜೀವಿಗಳಿಗೆ ಆದದ್ದೇ ಪರಮಾಶ್ಚರ್ಯವಾಗಿದೆ. ಅದಿರಲಿ ಕೃಷ್ಣ, ನಾವು ಈಗ ಮಥುರಾ ಪಟ್ಟಣಕ್ಕೆ ಬೇಗ ಹೋಗೋಣ. ನನಗೆ ಕಂಸನ ಹೆದರಿಕೆ ಬಹಳ. ಮತ್ತೊಬ್ಬರ ಪಿಂಡೋಪಜೀವಿಗಳಾದ ನಮ್ಮಂಥವರ ಪರಾಧೀನ ಬಾಳುವಿಗೆ ಧಿಕ್ಕಾರವಿರಲಿ'' ಎಂದು ಹೇಳಿ ಅಕ್ರೂರನು ಕುದುರೆಗಳನ್ನು ನೂಕಿದನು. ಕೂಡಲೇ ಆ ಅಶ್ವಗಳು ಗಾಳಿಯ ವೇಗದಿಂದ ಓಡುತ್ತ ಸಾಯಂಕಾಲದ ಹೊತ್ತಿಗೆ ಆ ತೇರನ್ನು ಮಥುರಾಪಟ್ಟಣದ ಅಗಸೆಯ ಬಾಗಿಲಿಗೆ ತಂದು ನಿಲ್ಲಿಸಿದವು. ಅದನ್ನು ನೋಡಿ ಅಕ್ರೂರನು ರಾಮಕೃಷ್ಣರಿಗೆ ಅಲ್ಲಿಯೇ ಇಳಿಯಲಿಕ್ಕೆ ಹೇಳಿದನು. ''ವೀರ ಸೋದರರೇ, ನೀವಿಬ್ಬರು ಇಲ್ಲಿ ಇಳಿದು

ಕಾಲುನಡಿಗೆಯಿಂದಲೇ ಈ ನಗರದಲ್ಲಿ ಪ್ರವೇಶಮಾಡಿರಿ. ದಯಮಾಡಿ ನೀವಿಬ್ಬರು ವಸುದೇವನ ಮನೆಗೆ ಮಾತ್ರ ಹೋಗಬೇಡಿರಿ. ನೀವು ಅಲ್ಲಿ ಹೋದರೆ ಕಂಸನು ಅವನನ್ನು ಅದಕ್ಕಾಗಿ ಉಗ್ರರೀತಿಯಿಂದ ಹಿಂಸೆಗೆ ಒಳಪಡಿಸುವನು.''ಇಂತು ರಾಮಕೃಷ್ಣರು ಮಥುರಾ ಪಟ್ಟಣದ ಒಳಗೆ ಪ್ರವೇಶಿಸಿ ರಾಜಬೀದಿಗೆ ಬಂದರು. ಅವರ ಗತಿ ಗಂಭೀರವಾಗಿತ್ತು. ಚೆಲುವಿನ ಚಿಟ್ಟಾನೆಯಂತೆ ದಿಟ್ಟ ಹೆಜ್ಜೆ ಇಡುತ್ತ ಅವರು ಆ ಪಟ್ಟಣದಲ್ಲಿ ನಡೆದಿದ್ದರು. ಗಂಡಸರು ಕೌತುಕದಿಂದ ಅವರೆಡೆಗೆ ನೋಡಿದರು. ಹೆಂಗಸರು ಉಲ್ಲಸಿತ ನೇತ್ರಗಳಿಂದ ಅವರನ್ನು ನಿರೀಕ್ಷಿಸಿದರು.

## ಅಕ್ಷಯಾಂಬರವನಿತ್ತವನ ವಸ್ತ್ರಭಿಕ್ಷೆ

ದಾರಿಯಲ್ಲಿ ಬಟ್ಟೆಗೆ ಬಣ್ಣ ಹಾಕುವ ಅಗಸ ಅವರ ಕಣ್ಣಿಗೆ ಕಾಣಿಸಿದ. ಅವನಲ್ಲಿ ತರತರದ ಪಟ್ಟೆ ಪೀತಾಂಬರಗಳು ಇದ್ದವು. ರಾಮಕೃಷ್ಣರು ತಮಗೆ ಹಾಕಿಕೊಳ್ಳಲಿಕ್ಕಾಗಿ ಬಟ್ಟೆಗಳನ್ನು ಕೊಡಬೇಕೆಂದು ಅವನನ್ನು ಕೇಳಿದರು. ಅವನು ಕಂಸನ ಬಟ್ಟೆಗಳಿಗೆ ಬಣ್ಣ ಹಾಕುವವ. ಅರಸರ ಅಗಸ. ಮಹಾ ಉನ್ಮತ್ತ. ಗೊಲ್ಲ ಬಾಲಕರು ರಾಜವಸ್ತ್ರ ಕೇಳುವದನ್ನು ನೋಡಿ ಅವನು ನಕ್ಕು ಉಪಹಾಸ ಮಾಡಿದ. ವಸ್ತ್ರ ಕೊಡದೆ ತೆಗಳಿ ನುಡಿದ. ಕೃಷ್ಣನಿಗೆ ಕೋಪ ಬಂದಿತು. ಕೂಡಲೇ ಮುಂಗೈಯಿಂದ ಅಗಸನಿಗೆ ಒಂದು ಏಟುಕೊಟ್ಟ. ಬಣ್ಣಗಾರನ ಕುತ್ತಿಗೆಯೇ ಕತ್ತರಿಸಿ ನೆಲದಲ್ಲಿ ನೆತ್ತರ ಕಾರುತ್ತ ಬಿದ್ದಿತು. ರಾಮಕೃಷ್ಣರು ತಮಗೆ ಬೇಕಾದ ಬಣ್ಣ ಬಣ್ಣದ ಬಟ್ಟೆಗಳನ್ನು ತೆಗೆದುಕೊಂಡರು. ಬಲರಾಮನು ಮುಗಿಲು ಬಣ್ಣದ ತಿಳಿನೀಲಿಯ ನಯವಾದ ಬಟ್ಟೆ ಧರಿಸಿದ. ಕೃಷ್ಣನು ಪೀತಾಂಬರವನ್ನು ತೊಟ್ಟುಕೊಂಡ.

## ಹೂವನಿತ್ತವನ ದೈವ ತೆರೆಯಿತು

ಅಲ್ಲಿಂದ ಅವರಿಬ್ಬರೂ ಪುಷ್ಪದ ಪದಕಗಳನ್ನು ಕಟ್ಟುವ ಹೂವಾಡಿಗನ ಮನೆಗೆ ತೆರಳಿದರು. ಅವರಿಬ್ಬರನ್ನು ಕಂಡ ಕೂಡಲೇ ಆ ಮಾಳಿಯ ಮುಖವು ಹೂವಿನಂತೆಯೇ ಅರಳಿ ಅಗಲವಾಯಿತು. ಇಂಥ ತೇಜಸ್ವಿ ತರಳರನ್ನು ಅವನು ಎಂದೂ ಕಂಡಿರಲಿಲ್ಲ. ಪೀತಾಂಬರ, ನೀಲಾಂಬರಗಳನ್ನು ತೊಟ್ಟು ಬಂದ ಅವರೀರ್ವರ ಮುಖದ ಮೇಲೆ ಮಿಂಚಾಡುವ ವಿಲಕ್ಷಣವಾದ ಕಾಂತಿಯನ್ನು ಕಂಡ ಅವನಿಗೆ ''ಇವರು ಮಾನವರಲ್ಲ. ಯಾರೋ ದೈವೀಪುರುಷರೆಂದು'' ಎನಿಸಿತು. ರಾಮಕೃಷ್ಣರು ಕುಸುಮ ಮಾಲೆಗಳನ್ನು ಕೇಳಿದ ಕೂಡಲೇ ಅವನಿಗೆ ಹೃದಯ ತುಂಬಿ ಬಂದಿತು. ಅವನು ಎದ್ದು ಅವರ ಎದುರು ನೆಲದುದ್ದ ಅಡ್ಡಬಿದ್ದು ನಮಸ್ಕಾರ ಮಾಡಿದ. ಅವರ ಪಾದತುದಿಗೆ ಹಣೆ ಹಚ್ಚಿದ.

''ಸ್ವಾಮಿ, ತಾವು ನನ್ನ ಮನೆಗೆ ಬಂದು ನಮ್ಮನೆಯಲ್ಲಿ ತಮ್ಮ ಪಾದಧೂಳಿ ಹಾಕಿದ್ದರಿಂದ ನಾನು ಧನ್ಯನಾದೆ. ತಮ್ಮಲ್ಲಿ ನನ್ನದೊಂದು ಬೇಡಿಕೆ. ನಾನೇ ಈ ಹೂವಿನ ಮಾಲೆಗಳನ್ನು ತಮ್ಮ ಮೈಗೆ ಇಡಿಸಿ, ಕೈಗೆ ತೊಡಿಸಿ, ಮುಡಿಗೆ ಮುಡಿಸಿ ಅಲಂಕಾರ ಮಾಡುತ್ತೇನೆ. ನನ್ನ ಈ ಪುಷ್ಪಾರ್ಚನೆಯನ್ನು ತಾವು ದಯವಿಟ್ಟು ಸ್ವೀಕರಿಸಬೇಕು'' ಎಂದು ದೈನ್ಯದಿಂದ ಬಿನ್ನವಿಸಿದ. ಅವನ ಬಿನ್ನಹವನ್ನು ರಾಮಕೃಷ್ಣರು ಮನ್ನಿಸಿದರು. ಕೂಡಲೇ ಆ

ಮಾಳಿಯು ಬಗೆ ಬಗೆಯ ಬಣ್ಣ ಬಣ್ಣದ ಹೂಗಳನ್ನು ತಂದು ರಾಮಕೃಷ್ಣರ ಮುಂದೆ ಹಿಡಿದ ಅವುಗಳ ಕಂಪು ಸೊಂಪಿಡಿದು ಎಲ್ಲೆಡೆ ಸೂಸಿತು. ಸೌಂದರ್ಯದಿಂದಲೇ ಸೌಗಂಧ ಸೂಸುವ ಅಂದಚಂದದ ಹೂಗಳನ್ನು ತೋರಿಸಿದ. ಅವರು ಬಯಸಿದ ಕಂಪು ಬೀರುವ ಕುಸುಮಗಳನ್ನು ಅವರಿಗೆ ಕೊಟ್ಟು ಇಡಿಸಿ ತೊಡಿಸಿ ಅವನು ಆನಂದ ಪಟ್ಟ.

ತನ್ನ ಈ ಪುಷ್ಪ ಪೂಜೆಯನ್ನು ಪ್ರಸನ್ನ ಚಿತ್ತದಿಂದ ಸ್ವೀಕರಿಸಿದ್ದಕ್ಕಾಗಿ ಅವನು ಕೃತಜ್ಞತೆಯ ಭಾರದಿಂದ ಬಾಗಿ ಮತ್ತೆ ಮತ್ತೆ ಅವರ ವಂದನೆಗೈದ. ಗಂಧಾಢ್ಯವಾದ ಅನೇಕ ಸುಂದರ ಹೂಗಳನ್ನು ಅವರಿಗಿತ್ತು ಕೈ ಮುಗಿದ. ಅದರಿಂದ ಸಂತುಷ್ಟನಾದ ಶ್ರೀ ಕೃಷ್ಣನು ಅವನಿಗೆ "ಮಾಲಾಕಾರ, ನನ್ನ ಅನುಗ್ರಹದಿಂದ ನಿನಗೆ ಎಂದೂ ಐಶ್ವರ್ಯಕ್ಕೆ ಕೊರತೆಯಾಗುವುದಿಲ್ಲ. ಸೌಭಾಗ್ಯಕ್ಕೆ ಚ್ಯುತಿ ಇಲ್ಲ. ನಿನ್ನಲ್ಲಿ ಬಲಕ್ಕೆ ಹಾನಿ ಇಲ್ಲ. ಸತ್ಸಂತಾನಕ್ಕೆ ನಿನ್ನ ವಂಶದಲ್ಲಿ ಎಂದೂ ವಿಚ್ಛೇದವಿಲ್ಲ. ಧರ್ಮ ಶ್ರದ್ಧೆಗೆ ಲೋಪವಿಲ್ಲ. ಇರುವವರೆಗೆ ನೀನು ಸಂತಾನ, ಸಂಪತ್ತು, ಸೌಭಾಗ್ಯಗಳ ಸುಖವನ್ನು ಅನುಭವಿಸಿ ಕೊನೆಗೆ ದಿವ್ಯಗತಿಯನ್ನು ಹೊಂದುವದರಲ್ಲಿ ಸಂದೇಹವಿಲ್ಲ. ಸೂರ್ಯನು ಮುಗಿಲಿನಲ್ಲಿ ಇರುವವರೆಗೆ ನಿನ್ನ ಸಂತತಿಯವರು ಭೂಮಂಡಲದಲ್ಲಿ ಬೆಳಗುವರು" ಎಂದು ಆಶೀರ್ವಾದ ಮಾಡಿ ಶ್ರೀ ಕೃಷ್ಣನು ಬಲರಾಮನೊಂದಿಗೆ ಹೂವಾಡಿಗನ ಮನೆಯಿಂದ ಹೊರಬಿದ್ದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಹತ್ತೊಂಬನೇ ಅಧ್ಯಾಯ ಸಂಪೂರ್ಣ*



## ಗೂನಿಯ ಮೈಯಲ್ಲಿ ಅಪ್ಸರೆಯ ಚೆಲುವನ್ನು ಅರಳಿಸಿದ ಕೃಷ್ಣ

## ಅಧ್ಯಾಯ - ೨೦

ಮುಂದೆ ರಾಜಬೀದಿಯಲ್ಲಿ ನಡೆದ ಆ ಬಲ್ಲವ ಬಂಧುಗಳ ಕಣ್ಣಿಗೆ ದಾರಿಯಲ್ಲಿ ಗೂನಿಯೊಬ್ಬಳು ಕಂಡಳು. ಆ ತರುಣ ಕುಬ್ಜೆಯ ಕೈಯಲ್ಲಿ ಗಂಧದ ಬಟ್ಟಲವಿದ್ದಿತು. ಅದನ್ನು ನೋಡಿ ಕೃಷ್ಣ ಒಲವುದೋರಿ ಕೇಳಿದ. ''ನೈದಿಲೆಗಣ್ಣಿನ ನಾರಿಯೇ! ಈ ಗಂಧದ ಕರಂಡಕವನ್ನು ಯಾರಿಗಾಗಿ ವೈಯ್ಯುತ್ತಲಿರುವೆ ? ನಿಜಹೇಳು''. ಕೃಷ್ಣನ ನೇಹದುಂಬಿದ ನೋಟದ ಅರ್ಥಮಾಡಿಕೊಂಡ ಆ ಕುಬ್ಜೆಯು ನಲುಮೆದುಂಬಿ ಹೇಳಿದಳು. ''ಕಾಂತ, ನಾನು ಕಂಸನ ದಾಸಿ. ನಿಮಗೆ ತಿಳಿಯದೇ! ಅನೇಕವಕ್ರಾ ನನ್ನ ಹೆಸರು. ಕಂಸನಿಗೋ ನಾನು ತೇದುಕೊಟ್ಟ ಗಂಧವೇ ಆಗಬೇಕು. ಬೇರೊಬ್ಬರ ಗಂಧವನ್ನು ಅವನೆಂದೂ ಪೂಸುವುದಿಲ್ಲ. ಮೂಸುವದೂ ಇಲ್ಲ. ನನ್ನದೇ ಆಗಬೇಕು ಅವನ ಮೈಗೆ ಬಳೆದುಕೊಳ್ಳುವ ಶ್ರೀಗಂಧ.'' ಅವಳ ಮುಗುಳುನಗೆ ಮನದ ಬಗೆಯನ್ನು ಸೂಚಿಸುತ್ತಿತ್ತು. ಅವಳ ಕಂಗಳಿಗೆ ಕೃಷ್ಣನ ಮಂಗಳ ಮೂರುತಿಯನ್ನು ನೋಡಿದಷ್ಟೂ ಆಸೆ ಹೆಚ್ಚುತ್ತಲಿತ್ತು. ಅವಳು ಕೈಯಲ್ಲಿ ಪಿಡಿದ ಶ್ರೀಗಂಧದ ಸುಗಂಧ ಗಾಳಿಗೋಪುರದಲ್ಲೆಲ್ಲ ಕಂಪಿನ ಅಲೆಗಳನ್ನು ಹರಡಿತ್ತು.

ಕೃಷ್ಣ ಹೇಳಿದ ''ಸುಂದರಿ, ನಿನ್ನ ಈ ಕೈಯಲ್ಲಿಯ ಚಂದನವು ಅರಸುಮಕ್ಕಳ ಮೈಗೆ ಲೇಪಿಸಲು ಯೋಗ್ಯವಾಗಿದೆ. ನಮ್ಮ ದೇಹಕ್ಕೆ ಬಳಿಯಲು ತುಸು ಗಂಧವನ್ನು ಕೊಡು.'' ಕೃಷ್ಣನ ಬಯಕೆ ಕುಬ್ಜೆಯ ಬೇಡಿಕೆಯೇ ಆಗಿದ್ದಿತು. ಅವಳು ಅತ್ಯಂತ ಆನಂದದಿಂದ ಕೊಟ್ಟ ಕಂಪೊಗೆಯುವ ಆ ತಂಪು ಚಂದನದ ರಾಡಿಯನ್ನು ಮೈಗೆ ಬಳೆದುಕೊಂಡರು. ಮಿಂಚು ಮೈಗೂಡಿದ ಕರಿಬಿಳಿ ಮೋಡಗಳಂತೆ ಶೋಭಿಸಿತು ಚಂದನಚರ್ಚಿತವಾದ ಅವರ ಸುಂದರ ಶರೀರ. ಗಂಧ ಹಚ್ಚಿ ಚೆಂದಕಾಣುವ ಕೃಷ್ಣನ ಸುಂದರ ದೇಹವನ್ನು ಕಂಡು ಆ ಗೂನಿಗೆ ಆನಂದದೊಡನೆ ಅನುರಾಗವೂ ಉಂಟಾಯಿತು. ಆಗ ಕೃಷ್ಣನು ಅವಳೆಡೆಗೆ ನೋಡಿದ. ಅವಳ ಮೈ ಮೂರುನಾಕು ಕಡೆಗೆ ಮಣಿದು ಅಂಕುಡೊಂಕಾಗಿ ವಿದ್ರೂಪವಾಗಿತ್ತು. ಗಂಧವಿತ್ತು ತನ್ನ ಸೇವೆ ಮಾಡಿದ ಅವಳಿಗೆ ಪ್ರತ್ಯುಪಕಾರ ಮಾಡಬೇಕು ಎನಿಸಿತು.

ಅವನು ತನ್ನ ನೀಳವಾದ ಬೆರಳುಗಳಿಂದ ಆ ಗೂನಿಯ ಗದ್ದ ಹಿಡಿದು ಮೇಲಕ್ಕೆ ಎತ್ತಿದ. ಗಂಟುಮೈ ಗೂನಿಗಳನ್ನು ಸರಳ ಸುಂದರ ಶರೀರಗಳನ್ನಾಗಿ ಮಾಡುವ ಚಾತುರ್ಯ ಕೃಷ್ಣನಿಗೇನು ಅಪರಿಚಿತವೇ ! ಅವಳ ಮುಂಗಾಲುಗಳ ಮೇಲೆ ತನ್ನ ಅಂಗಾಲಿನ ಅಂಚನ್ನಿರಿಸಿ ಮುಂಬೆರಳುಗಳಿಂದ ಗದ್ದ ಹಿಡಿದೆತ್ತಿದ. ಆಚೀಚೆ ಹೊರಳಿಸಿದ. ಸೊಟ್ಟ ಪಟ್ಟ ಶರೀರವನ್ನು ಸರಳ ಸಬಳವಾಗುವಂತೆ ಮಾಡಿದ. ಕೃಷ್ಣನ ಕೈ ಸೋಂಕಿನಿಂದ ಎಂಟು ಕಡೆಗೆ ಮಣಿದು ಗಂಟುಗಟ್ಟಿದ ಆ ಗೂನಿಯ ಶರೀರವು ಅಪ್ಸರೆಯ ಶರೀರದಂತೆ ಅತ್ಯಂತ ಸುಂದರವಾಗಿ ಶೋಭಿಸತೊಡಗಿತು. ನಾರಿಯರ ಕುಲದಲ್ಲಿ ಇಂಥ ಚೆಲುವೆಯೇ ಇಲ್ಲವೆನ್ನುವಷ್ಟು ಲಾವಣ್ಯ ಅವಳ ತಾರುಣ್ಯ ತುಂಬಿದ ದೇಹದಲ್ಲಿ ತೂರಿಬಂದಂತಾಯಿತು. ಅವಳ ಲಲಿತ ದೇಹವು ಹೊಸ ನಿಲುವಿನ ಜೊತೆಗೆ ಹೊಸ

ಚೆಲುವನ್ನೂ ಪಡೆದು ಮೀಸಲುಮುರಿಯದ ಕುಸುಮದಂತೆ ಎಸೆಯತೊಡಗಿತು. ಆಗ ಅವಳು ಕುರೂಪಿಯಾದ ತನಗೆ ದಿವ್ಯ ಸೌಂದರ್ಯವನ್ನು ಇತ್ತ ಕೃಷ್ಣನೆಡೆಗೆ ಒನಪು ವೈಯ್ಯಾರದಿಂದ ಒಲಿದು ಬಂದಳು. ಅವಳ ಕಣ್ಣಿನಂಚಿನಲ್ಲಿ ಕಾಮ, ಮುಗುಳು ನಗೆಯಲ್ಲಿ ಪ್ರೇಮ ತೋರಿಬಂದವು. ಕೃಷ್ಣನ ರೂಪಸಿರಿಯನ್ನು ಕಂಡು ಮುಗ್ಧಳಾದ ಅವಳು ಅವನ ಬಟ್ಟೆಯ ಸೆರಗನ್ನು ಹಿಡಿದು ''ನಲ್ಲ, ನನ್ನ ಮನೆಗೆ ಬಾ'' ಎಂದು ಕರೆದಳು. ಆಗ ಕೃಷ್ಣನು ಮೆಲುನಗೆಯನ್ನು ಬೀರಿ ಬಲರಾಮನೆಡೆಗೆ ನೋಡಿ ಅವಳಿಗೆ ''ನಾನು ಇಲ್ಲಿಯ ಕೆಲಸ ಮುಗಿದ ಬಳಿಕ ನಿನ್ನ ಮನೆಗೆ ಬರುವೆನು'' ಎಂದು ನುಡಿದು ಸಂತೈಯಿಸಿ ಕಳಿಸಿದನು. ಹೀಗೆ ಸುಂದರವೇಷ, ಸುಗಂಧಲೇಪನ, ಸುವಾಸನೆಯ ಹಾರಹೂಗಳಿಂದ ಅಲಂಕೃತರಾಗಿ ರಾಮಕೃಷ್ಣರಿಬ್ಬರೂ ಬಿಲ್ಲು ಶಾಲೆಗೆ ತೆರಳಿದರು.

## ಘೋರ ಬಿಲ್ಲನ್ನು ಕಬ್ಬಿನ ಜಲ್ಲೆಯಂತೆ ಮುರಿದ ಕೃಷ್ಣ ಕುಂಜರ

ಧನುಃ ಶಾಲೆಯಲ್ಲಿ ಬಹಳ ದೊಡ್ಡದಾದ ಒಂದು ಬಿಲ್ಲು ಇಡಲ್ಪಟ್ಟಿತ್ತು. ಬಿಚ್ಚುಗತ್ತಿಯ ಕಾವಲುಗಾರರು ಅದನ್ನು ಕಾಯುತ್ತಲಿದ್ದರು. ದೇವೇಂದ್ರನ ಧನುಷ್ಯದಂತಿರುವ ಬೃಹದಾಕಾರದ ಈ ಬಿಲ್ಲಿನ ಉದ್ದೇಶವಾಗಿಯೇ ಕಂಸನು ಈ ಚಾಪೋತ್ಸವವನ್ನು ಏರ್ಪಡಿಸಿದ್ದನು. ಕೃಷ್ಣನು ಆ ಭಯಂಕರವಾದ ಬಿಲ್ಲನ್ನು ಕಂಡು ಕೌತುಕಪಟ್ಟು ಚಂಗನೆ ಜಗಿದು ಅದನ್ನಿಟ್ಟ ಸ್ಥಳಕ್ಕೆ ಹೋದನು. ಒಮ್ಮಿಂದೊಮ್ಮೆಲೆ ಆ ಭೀಮಕಾಯದ ಬಿಲ್ಲನ್ನು ಲೀಲಾಜಾಲವಾಗಿ ಎತ್ತಿ ಮಣಿಸಿ, ಹೆದೆ, ಏರಿಸಿ ದಾರವನ್ನು ಜಗ್ಗ ತೊಡಗಿದನು. ಕೂಡಲೇ ಆ ಬೃಹಚ್ಚಾಪವು ಚಟ್ ಚಟ್ ಎಂದು ಸದ್ದನ್ನು ಮಾಡುತ್ತ ಮುರಿದು ಬಿದ್ದಿತು. ಬ್ರಹ್ಮಾಂಡ ಬಿರಿಯುವಂತಹ ಭೀಕರ ಶಬ್ದದಿಂದ ಮಥುರಾ ಪಟ್ಟಣವೆಲ್ಲವೂ ನಡುಗಿ ಹೋಯಿತು. ಕೂಡಲೇ ಅದರ ಕಾವಲುಗಾರರು ರಾಮಕೃಷ್ಣರನ್ನು ಹೊಡೆಯ ಬಂದರು. ಆಗ ಅವರಿಬ್ಬರು ಆ ಕಾವಲುಗಾರರನ್ನೆಲ್ಲ ತಮ್ಮ ಅಂಗೈಮುಂಗೈಗಳಿಂದ ಹೊಡೆದು ಬಡೆದು ಕೆಡಹಿ ಕೊಂದು ಹಾಕಿದರು. ಅನಂತರ ಆ ಧನುಷಾಗಾರವನ್ನೆಲ್ಲ ಸುತ್ತಾಡಿ ನೋಡಿ ಅಲ್ಲಿಂದ ಅವರಿಬ್ಬರೂ ಹೊರಬಿದ್ದರು.

ಅತ್ತ ಕಂಸನಿಗೆ ಅಕ್ರೂರನು ರಾಮಕೃಷ್ಣರನ್ನು ಮಥುರಾ ಪಟ್ಟಣಕ್ಕೆ ಕರೆತಂದ ಸಮಾಚಾರ ತಿಳಿಸಿದನು. ಅದರ ಜೊತೆಗೇ ಆ ಗೊಲ್ಲ ಬಾಲಕರು ನೂರಾರು ಜನರು ಕೂಡಿದರೂ ಎತ್ತಲಿಕ್ಕೆ ಆಗದ ಆ ಘೋರವಾದ ಬಿಲ್ಲನ್ನು ಮದ್ದಾನೆಯು ನೆಲಕಬ್ಬನ್ನು ಮುರಿಯುವಂತೆ ಲೀಲೆಯಿಂದ ಮುರಿದೊಗೆದ ಸಮಾಚಾರವು ಕಂಸನಿಗೆ ತಿಳಿಯಿತು. ಅದನ್ನು ಕೇಳಿ ಹೆದರಿ ಹೋದ ಕಂಸನು ಚಾಣೂರ, ಮುಷ್ಟಿಕ ಎಂಬ ಮಹಾ ಮಲ್ಲರನ್ನು ಕರೆಸಿ ಹೇಳಿದನು. ''ಮಲ್ಲರೆ, ಇಂದು ಇಲ್ಲಿಗೆ ತುರುಗಾಹಿ ತರಳರಿಬ್ಬರೂ ಬಂದಿದ್ದಾರೆ. ಅವರ ಉದ್ದೇಶ ನನ್ನ ಪ್ರಾಣವನ್ನೇ ಹೀರಬೇಕೆಂದಿದೆ. ನೀವು ಅವರಿಬ್ಬರನ್ನೂ ಮಲ್ಲಯುದ್ಧದಲ್ಲಿ ನನ್ನ ಎದುರೇ ಕೊಲ್ಲಬೇಕು. ನ್ಯಾಯದಿಂದಾಗಲಿ, ಅನ್ಯಾಯದಿಂದಾಗಲಿ ಆ ಗೊಲ್ಲ ಬಾಲಕರನ್ನು ಗೆಲ್ಲುವದರಿಂದ ಮತ್ತು ಕೊಲ್ಲುವದರಿಂದ ನನಗಾಗುವ ಆನಂದಕ್ಕೆ ಎಣೆಯಿಲ್ಲ. ನೀವು ಅವರನ್ನು ಕೊಂದು ಬಂದರೆ ನನ್ನ ಈ ಎಲ್ಲ

ಸಾಮ್ರಾಜ್ಯವನ್ನು ಆನಂದದಿಂದ ನಾನು ನೀವು ಸಮನಾಗಿ ಹಂಚಿಕೊಳ್ಳೋಣ. ನಿಮಗೆ ಬೇಡಿದ್ದನ್ನು ಕೊಡುವೆನು. ಏನಾದರೂ ಹಂಚಿಕೆ, ಮೋಸ, ಮಾಟ ಮಾಡಿ ಅವರನ್ನು ಸಂಹರಿಸಿರಿ''. ಅನಂತರ ಕಂಸನು ಮಾವುತನನ್ನು ಕರೆಸಿ ಅಬ್ಬರಿಸಿ ಹೇಳಿದನು. ''ಗಜಪಾಲ, ಇಂದು ಮಥುರಾ ಪಟ್ಟಣಕ್ಕೆ ದ್ವಂದ್ವ ಯುದ್ಧ ಮಾಡಲಿಕ್ಕೆ ಇಬ್ಬರೂ ದನಕಾಯುವ ಹುಡುಗರು ಬಂದಿದ್ದಾರೆ. ರಂಗ ಭೂಮಿಯ ಹೊರಬಾಗಿಲದಲ್ಲಿಯೇ ನೀನು ಕುವಲಯಾಪೀಡ ಎಂಬ ನಮ್ಮ ಮದ್ದಾನೆಯನ್ನು ಮತ್ತಿಷ್ಟು ಸೊಕ್ಕಿಗೆ ತರಿಸಿ ರೇಗಿಸಿ ನಿಲ್ಲಿಸು. ಅವಳಿ ಮಕ್ಕಳಂತಿರುವ ಆ ಗವಳಿ ಮಕ್ಕಳು ಆ ಕುಸ್ತೀಕಣದ ಹೊರಬಾಗಿಲ ಬಳಿ ಬಂದಾಗ ಅವರ ಮೇಲೆ ನಮ್ಮ ಈ ಮಥುರೆಯ ಐರಾವತವನ್ನು ನೂಕಿ ಬಿಡು. ಅದು ಆ ಗೋಪಬಾಲಕರಿಬ್ಬರನ್ನು ಹೊಸೆದು ಹಾಕಿಬಿಡಲಿ.''

ಹೀಗೆ ಮಲ್ಲರಿಗೂ ಕೃಷ್ಣನ ಹತ್ಯೆಗಾಗಿ ಅಪ್ಪಣೆಯಿತ್ತು ಕಂಸನು ಮರುದಿವಸ ಕೂಡಲಿರುವ ಮಹಾಸಭೆಯ ರಂಗ ಸಜ್ಜಿಕೆಯನ್ನು ನೋಡಲಿಕ್ಕೆಂದು ತೆರಳಿದನು. ಅಲ್ಲಿಯ ಏರ್ಪಾಡೆಲ್ಲವೂ ಅವನ ಮನಸ್ಸಿಗೆ ತಕ್ಕಂತೆ ಆಗಿತ್ತು. ಅದನ್ನು ನೋಡಿಕೊಂಡು ಕಂಸನು ಅರಮನೆಗೆ ಮರಳಿದಾಗ ಮೂಡಲದ ಮುಗಿಲಿನಲ್ಲಿ ಸೂರ್ಯ ದೇವನು ಮೂಡಿದ್ದ. ಸಾವು ಸಮೀಪಿಸಿದ ಕಂಸನು ಆ ದಿನ ತನ್ನ ಬಾಳಿನಲ್ಲಿಯ ಕೊನೆಯ ಸೂರ್ಯೋದಯವನ್ನು ನಿರೀಕ್ಷಿಸಿದನು. ಅನಂತರ ಒಬ್ಬೊಬ್ಬರಾಗಿ ನಾಗರಿಕರು ರಂಗಮಂಟಪಕ್ಕೆ ಬರತೊಡಗಿದರು. ಅಲ್ಲಿ ಎಲ್ಲ ಜನರಿಗೂ ಕೂಡಲಿಕ್ಕೆ ಮಂಚಗಳನ್ನು ಹಾಕಲಾಗಿತ್ತು. ರಾಜ ಪುರುಷರಿಗಾಗಿ ಪ್ರತ್ಯೇಕ ಮಂಚ ಪೀಠಗಳನ್ನು ಇರಿಸಿದ್ದರು.

ರಂಗಭೂಮಿಯ ನಟ್ಟ ನಡುವೆ ಮಲ್ಲಯುದ್ಧ ನಿರ್ಣಾಯಕರ ಮಂಚವನ್ನು ಇರಿಸಲಾಗಿತ್ತು. ಎಲ್ಲಕ್ಕಿಂತ ಎತ್ತರವಾದ ಅಟ್ಟದ ಮೇಲೆ ಕಂಸನ ಉಚ್ಚ ಮಂಚಪೀಠವು ಕಂಗೊಳಿಸುತ್ತಿತ್ತು. ಅಂತಃಪುರದ ನಾರಿಯರಿಗಾಗಿ ಹಾಗೂ ಪೌರಮಹಿಳೆಯರಿಗಾಗಿ ಬೇರೆ ಬೇರೆ ಮಂಚದ ಸಾಲುಗಳನ್ನು ಏರ್ಪಡಿಸಲಾಗಿತ್ತು. ಅದರಲ್ಲಿಯೂ ಕುಲಕಾಮಿನಿಯರ ಮಂಚಾಸನಗಳೂ, ಬೆಲೆವೆಣ್ಣುಗಳ ಮಂಚಗಳೂ ಬೇರೆ ಬೇರೆಯಾಗಿಯೇ ಇರಿಸಲ್ಪಟ್ಟಿದ್ದವು. ಸೂರ್ಯೋದಯಕ್ಕೆ ಸರಿಯಾಗಿ ಕುತೂಹಲಭರಿತರಾಗಿ ಜನರು ಹಿಂಡು ಹಿಂಡಾಗಿ ಬಂದು ತಮ್ಮ ತಮ್ಮ ಸ್ಥಳಗಳನ್ನು ಹಿಡಿದುಕೊಂಡು ಕುಳಿತರು. ನಂದಗೋಪನೇ ಮೊದಲಾದ ಗವಳಿಗರ ಗುಂಪೆಲ್ಲವೂ ಒಂದು ಕಡೆಗೆ ಮಂಚ ಏರಿ ಕುಳಿತಿತು. ಅದನ್ನು ನೋಡಿಕೊಂಡು ವಸುದೇವ ಹಾಗೂ ಅಕ್ರೂರರು ಅವರ ಪಕ್ಕದ ಮಂಚಶ್ರೇಣಿಯನ್ನೇ ಆಕ್ರಮಿಸಿ ಬಂದು ಕುಳಿತರು. ಮಗನ ಮೇಲಿನ ಮೋಹ ಮಮತೆಗಳಿಂದ ಕಾತರಳಾದ ದೇವಕಿಯೂ ಪೌರನಾರಿಯರ ಸಾಲಿನಲ್ಲಿ ಮಂಚಾರೂಢಳಾಗಿ ಬಂದು ಕುಳಿತಳು. ಅವಳ ಹೃದಯದಲ್ಲಿ ತಳಮಳ. ''ನನ್ನ ಮಗ ಕೃಷ್ಣನ ಬಾಲಲೀಲೆಯನ್ನು ಕಾಣಲಿಲ್ಲ. ಹುಟ್ಟಿದ ಮೇಲೆ ಒಮ್ಮೆಯೂ ಮಗನ ಮುಖ ನೋಡಲಿಲ್ಲ. ಈಗ ಈ ಕುಸ್ತಿಯ ಕಣದಲ್ಲಿ ಜಗಜಟ್ಟಿಗಳಿಂದ ಅವನು ಸಾಯುವದನ್ನೇ ನೋಡಬೇಕಾಯಿತಲ್ಲ ! ಎಂದು ಅವಳ ಕರುಳು ಕುದಿಯತೊಡಗಿದ್ದವು. ಆದರೂ

ಸಾಯುವ ಮುನ್ನ ಒಮ್ಮೆಯಾದರೂ ತನ್ನ ಕಂದನ ಸುಂದರವಾದ ಮುಖವನ್ನು ಕಣ್ಣುತುಂಬ ನೋಡಿ ತಣಿಯಬೇಕೆಂದು ಆತುರ ಕಾತರಗಳಿಂದ ಅಲ್ಲಿಗೆ ಬಂದಿದ್ದಳು. ದುಃಖದ ಬೇಗೆಯಲ್ಲಿ ಬೆಂದಿದ್ದಳು. ಕಂಸನಿಂದ ತನ್ನ ಆ ಕಂದಮ್ಮನಿಗೆ ಒದಗಬಹುದಾದ ಸಾವನ್ನು ನೆನೆದು ನೊಂದಿದ್ದಳು. ಹೀಗೆ ಎಲ್ಲ ಜನರೂ ಬಂದೂ ತಮ್ಮ ತಮ್ಮ ತಾಣದಲ್ಲಿ ಕುಳಿತ ಬಳಿಕ ಮುಂದಿನ ಕಾರ್ಯಕ್ರಮ ಪ್ರಾರಂಭವಾಯಿತು. ರಣವಾದ್ಯಗಳು ಮೊಳಗತೊಡಗಿದವು. ಮಲ್ಲಯುದ್ಧದಲ್ಲಿ ಅಪ್ರತಿ ಮಲ್ಲನಾದ ಚಾಣೂರ ಬಂದ. ಕುಸ್ತಿಯ ಕಣದಲ್ಲಿ ನಿಂದ. ಮುಷ್ಟಿಕನೂ ಬಂದು ರಂಗ ಮಧ್ಯದಲ್ಲಿ ನಿಂತ. ಅವರಿಬ್ಬರೂ ಜಗಿದು ನಿಂತು ತಮ್ಮ ತೋಳುಗಳನ್ನು ತಟ್ಟಿದರು. ತೊಡೆಗಳನ್ನು ಹೊಡೆದುಕೊಂಡು ಸದ್ದು ಮಾಡಿದರು. ಅವರ ಕುಣಿತ ಹುಂಕಾರಗಳನ್ನು ಕೇಳಿ ಜನರೆಲ್ಲರೂ 'ಹಾಯ ಹೂಯ ಹೋಹೋ' ಎಂದು ಕೇಕೆ ಹಾಕಿ ಉತ್ಸಾಹವನ್ನು ಪ್ರದರ್ಶಿಸಿದರು.

## ಕುವಲಯಾಪೀಡವನ್ನು ಪೀಡಿಸಿದ. ಯಮನೆಡೆಗೆ ಓಡಿಸಿದ

ಇಷ್ಟರಲ್ಲಿ ರಂಗಭೂಮಿಯ ಹೊರಗೆ ಬಲರಾಮ ಕೃಷ್ಣರು ಬಂದರು. ಅವರು ಮುಗುಳುನಗುತ್ತಲೇ ಬಂದರು. ಇದಾವುದರ ಲಕ್ಷ್ಯವೇ ಇರಲಿಲ್ಲ ಅವರಿಗೆ. ಅವರ ಮುಖದ ಮೇಲೆ ಕಾಣಬರುವದು ಚಿಂತೆಯಲ್ಲ, ಭೀತಿ ಇಲ್ಲ. ನಿರ್ಭಯದ ನಗೆ, ನಿಶ್ಚಿಂತತೆಯ ಭಾವ ಅಲ್ಲಿ ಹೂವಾಗಿ ಅರಳಿತ್ತು. ದನಕಾಯುವ ಗೋಪಾಲಕರ ವೇಷದಲ್ಲಿ ಅವರೀರ್ವರೂ ಮಲ್ಲಶಾಲೆಯ ಬಾಗಿಲ ಬಳಿ ಬಂದ ಕೂಡಲೇ ಮಾವುತನು ಮಸ್ತಿಗೆ ಬಂದು ಮದೋದ್ರೇಕದಿಂದ ಝೂಲಾಡುತ್ತಿರುವ ಕುವಲಯಾಪೀಡ ಎಂಬ ಮದ್ದಾನೆಯನ್ನು ಅಂಕುಶದಿಂದ ತಿವಿದು ಅವರ ಮೇಲೆ ಬಿಟ್ಟ. ಅವರಿಬ್ಬರನ್ನೂ ಹಿಡಿದು ತುಳಿದು ಹಾಕಬೇಕೆಂದು ಮದೋದ್ಭ್ರಾಂತವಾದ ಆನೆ ಅವರ ಮೇಲೆ ಏರಿ ಹೋಯಿತು. ಜನರೆಲ್ಲರೂ ಅಯ್ಯೋ ಎಂದು ಚೀರಿದರು.

ರಂಗಮಂಟಪವನ್ನು ಅತ್ತಿತ್ತ ನೋಡುತ್ತ ನಿಂತ ಕೃಷ್ಣನನ್ನು ಬಲರಾಮನು ಎಚ್ಚರಿಸಿದ "ಕೃಷ್ಣ, ಮೊದಲು ಈ ಮದ್ದಾನೆಯನ್ನು ಮರ್ದಿಸಬೇಕು. ಮಾವುತನು ಇದನ್ನು ನಮ್ಮನ್ನು ಕೊಲ್ಲಲಿಕ್ಕಾಗಿ ಪ್ರೇರಿಸಿ ನಮ್ಮೆಡೆಗೆ ನೂಕಿದ್ದಾನೆ." ಆಗ ಕೃಷ್ಣನು ಆ ಮದ ತುಂಬಿ ಕೊಬ್ಬಿದ ಆ ಹೆಬ್ಬಾನೆಯನ್ನು ಕಂಡು ಉಬ್ಬಿ ಉತ್ಸಾಹಗೊಂಡು ಅದರ ಎದುರು ಜಗಿದು ನಿಂತ. ಕೂಡಲೇ ಆ ಕುವಲಯಾಪೀಡವು ತನ್ನ ನಿಡಿದಾದ ಸೊಂಡೆಯನ್ನು ಚಾಚಿ ಕೃಷ್ಣನನ್ನು ಎತ್ತಿಕೊಳ್ಳ ಬಂದಿತು. ಕೂಡಲೇ ಕೃಷ್ಣನು ತನ್ನ ಕೈಯಿಂದ ಆ ಆನೆಯ ಸೊಂಡೆಯನ್ನು ಗಟ್ಟಿಯಾಗಿ ಹಿಡಿದು ಅದನ್ನು ಗಿಮಿಗಿಮಿ ತಿರುಗಿಸಿ ಕಳ್ಳೆಮಿಳ್ಳೆ ಆಡಿಸಿದ. ಕೃಷ್ಣನ ವೇಗಕ್ಕೆ ಅದು ಗರಗರ ಗಿರಿಗಿರಿ ತಿರುಗತೊಡಗಿತು. ಕೃಷ್ಣನು ತನ್ನ ಕೈಯಿಂದ ಬಿಗಿಯಾಗಿ ಹಿಡಿದ ಅದರ ಸೊಂಡೆಯನ್ನು ಬಿಟ್ಟು ತಾನು ಅದರ ಕಾಲಿನ ಬಳಿ ಹೋಗಿ ನಿಂತ. ಅವನನ್ನು ಸೆಳೆಯಬೇಕೆಂದು ಅದು ಸೊಂಡೆಯಾಡಿಸಿದಾಗ ಮತ್ತೆ ನುಣುಚಿ ಮಗದೊಂದು ಪಾದದ ಬಳಿ ಜಾರಿಕೊಂಡಿರುತ್ತಿದ್ದ. ಹೀಗೆ ಅದರ ಅಡಿತಡಿಗಳಲ್ಲಿ ಕೆಲ ನಿಮಿಷ ಆಚೀಚೆ ಸರಿದಾಡಿ ಅದರ ಕೈಗೆ ಸಿಗದೆ ಕೊನೆಗೆ ಕೃಷ್ಣ ಅದರ ಎಡಬದಿಯ ಕೋರೆ ದಾಡೆಯನ್ನು ತನ್ನ ಬಲಗೈಯಿಂದ ಹಿಡಿದು ಕಿತ್ತಿದ. ಮತ್ತು ಅದನ್ನು ಆನೆಯ ಮೇಲೆ ಕುಳಿತ ಮಾವುತನ ತಲೆಗೆ

ಬೀಸಿದ. ಮಾವುತನ ತಲೆ ನಾಕಾರು ಹೋಳಾಗಿ ನೆಲಕ್ಕೆ ಉರುಳಿತು. ಬಲರಾಮನು ಆ ಆನೆಯ ಬಲಕೋರೆದಾಡೆಯನ್ನು ಕಿತ್ತಿ ಅಕ್ಕಪಕ್ಕದ ಗಜಪಾಲರನ್ನೆಲ್ಲ ಹೆಣ ಹಾಕಿದ. ಅನಂತರ ಬಲರಾಮನು ಜಿಗಿದು ಆ ಕುವಲಯಾಪೀಡದ ಗಂಡ ಸ್ಥಲಕ್ಕೆ ಹಾರಿ ಜೋರಿನಿಂದ ಒದ್ದು ಬಿಟ್ಟನು. ಬಲಿಷ್ಠನಾದ ಬಲಭದ್ರನ ಭಯಂಕರವಾದ ಪಾದ ಪ್ರಹಾರದಿಂದ ಆ ಮದ್ದಾನೆಯು ಒದ್ದಾಡುತ್ತ ನೆಲದ ಮೇಲೆ ಬಿದ್ದು ಪ್ರಾಣ ಬಿಟ್ಟಿತ್ತು. ಇಂದ್ರನು ವಜ್ರಾಯುಧದಿಂದ ಬೆಟ್ಟಕ್ಕೆ ಏಟ ಇಟ್ಟಂತಿತ್ತು ಅವನ ಆ ಪಾದಾಘಾತ. ಹೀಗೆ ಆಟಿಗೆಯಲ್ಲಿಯ ಬೆಂಡಿನ ಆನೆಯನ್ನು ಮುರಿದೊಗೆಯುವಂತೆ ಕುವಲಯಾಪೀಡವನ್ನು ಕೊಂದೊಗೆದು ಮಾವುತರನ್ನೆಲ್ಲ ಮಣ್ಣು ಮುಕ್ಕಿಸಿ ರಾಮಕೃಷ್ಣರು ರಂಗ ಸ್ಥಳದ ನಡುವೆ ಬಂದರು. ಅವರ ಮೈಗೆಲ್ಲ ಆನೆಯ ಮದ, ನೆತ್ತರ, ಮೆತ್ತಿ ಅದೂ ಒಂದು ಅವರಿಗೆ ಅಲಂಕಾರವೇ ಆಯಿತು. ರಾಮಕೃಷ್ಣರಿಬ್ಬರೂ ಒಂದೊಂದು ಆನೆಯ ಕೋರೆಯನ್ನು ಕೈಯಲ್ಲಿ ಪಿಡಿದು ರಂಗದಲ್ಲಿ ನಿಂತು ಸಿಂಹದಂತೆ ಸಭಿಕರೆಡೆಗೆ ಗಂಭೀರ ಗತಿಯಲ್ಲಿ ಧೀರದೃಷ್ಟಿ ಬೀರಿದರು. ಕೂಡಲೇ ಜನರು ಜಂಗುಳಿಯ ಹರ್ಷೋದ್ರೇಕದಿಂದ ಕೂಗಾಡಿ ಕೋಲಾಹಲಗೈದಿತು.

''ಇವನು ರಾಮ, ಅವನು ಕೃಷ್ಣ. ಕೂಸಿದ್ದಾಗಲೇ ಪೂತನೆಯನ್ನು ಕೊಂದವನೀತ. ಪುಟ್ಟಪಾದದಿಂದ ಬೆಟ್ಟದಂಥ ಚಕ್ಕಡಿಯನ್ನು ಒದ್ದು ಉರುಳಿಸಿದ ಧೀರನೀತ. ಕಾಲಿಯ ಸರ್ಪವನ್ನು ಮಣಿಸಿ ಅದರ ಫಣಾಮಂಡಲದಲ್ಲಿ ತಾಂಡವ ನೃತ್ಯ ಮಾಡಿದ ಪ್ರಚಂಡ ಬಾಲಕನು ಇವನೇ. ಏಳು ದಿನಗಳವರೆಗೆ ಗೋವರ್ಧನ ಗುಡ್ಡವನ್ನು ಎತ್ತಿ ಹಿಡಿದ ಗಿರಿಧಾರಿ ಪ್ರಭು ಇವನೇ. ಅರಿಷ್ಟಾಸುರನನ್ನು ಮಣ್ಣು ಮುಕ್ಕಿಸಿದ ಮಹಾವೀರನೂ ಇವನೇ. ಧೇನುಕನನ್ನು ಧ್ವಂಸಗೊಳಿಸಿದ ಧೀರ ಪುರುಷನೂ ಇವನೇ. ಕೇಶಿಯನ್ನು ನಾಶಗೊಳಿಸಿದ ಕೇಶವನೇ ಇವನು. ಒಟ್ಟಾರೆ ದುಷ್ಟ ಭ್ರಷ್ಟರಾದ ಕೆಟ್ಟ ಜನರನ್ನು ನಷ್ಟಗೊಳಿಸಿ ಮಸಣಗಟ್ಟಿಗೆ ಅಟ್ಟುವ ದಿಟ್ಟ ಮೂರುತಿಯಾದ ಪುಟ್ಟ ಕೃಷ್ಣ ಇವನೇ.

ಇವನ ಮುಂದೆ ನಿಂತಿರುವನೇ ಇವನ ಅಣ್ಣ ಬಲರಾಮ. ಅವನ ರೂಪ ನೋಡಿ ಎಷ್ಟು ಸುಂದರನಾಗಿದ್ದಾನೆ. ಅವನ ಮೈಕಟ್ಟು ನೋಡಿದರೇ ಹೆಂಗಳೆಯರಿಗೆ ಹಿಗ್ಗಿನ ಹಬ್ಬ ಎನಿಸೀತು. ಪುರಾಣಗಳಲ್ಲಿ ದುಷ್ಟ ನಿಗ್ರಹಕ್ಕಾಗಿ ದೇವರು ಅವತಾರ ಮಾಡುತ್ತಾನೆ ಎಂದು ನಾವು ಕೇಳಿದ ವಿಷ್ಣುವೇ ಈ ಕೃಷ್ಣ. ನೆಲದ ಭಾರವನ್ನು ಇಳಿಸಲಿಕ್ಕಾಗಿ ಯದುವಂಶದಲ್ಲಿ ಇವನು ಹುಟ್ಟಿ ಬಂದಿದ್ದಾನೆ.'' ಎಂದು ಮುಂತಾಗಿ ಜನರು ತಮ್ಮ ತಮ್ಮಲ್ಲಿ ರಾಮಕೃಷ್ಣರನ್ನು ಒಬ್ಬರಿಗೊಬ್ಬರು ತೋರಿಸುತ್ತ ಮಾತನಾಡತೊಡಗಿದರು. ಇತ್ತ ಹೆಂಗಳೆಯರ ಗುಂಪಿನಲ್ಲಿ ಕುಳಿತ ದೇವಕಿಗಂತೂ ಕೃಷ್ಣನ ಮುಗ್ಧ ಮನೋಹರವಾದ ಮುದ್ದು ಮೈ, ಮುಖ, ಮೂರುತಿಯನ್ನು ಕಂಡು ಸಂತಸವು ಮನಸ್ಸಿನಲ್ಲಿ ತೆರೆಯಾಡಿತು. ಅಂತಃಕರಣವು ಉಕ್ಕೇರಿ ಹೃದಯ ತೂರೆಬಿಟ್ಟಿತು. ಅವಳ ಎದೆಯಿಂದ ಪ್ರೀತಿಯ ನೆರೆಯಾಗಿ ನೊರೆಯಾಗಿ ಹಾಲು ಸೋರಹತ್ತಿತ್ತು. ಅವಳ ಕಣ್ಣಿಗೆ ಅದೊಂದು ಹಬ್ಬ. ಹೃದಯಕ್ಕೆ ಹಿಗ್ಗು. ಸಂತೋಷದ ಸುಗ್ಗಿ. ಆನಂದದ ಬುಗ್ಗಿ ಚಿಮ್ಮಿ ಚೆಲ್ವರಿಯಿತು. ಮಥುರೆಯ ಮಾನಿನಿಯರೂ ಕೂಡ ಕೃಷ್ಣರಾಮರ ರೂಪಸಿರಿಯನ್ನು ಮನದಣಿಯಾಗಿ ತಮ್ಮ ಕಣ್ಣು ಕುಡಿಕೆಗಳಿಂದ ಕುಡಿದು ಪರಸ್ಪರ ಮಾತನಾಡಿದರು. ''ಸಖಿಯರೇ,

ಮದ್ದಾನೆಯ ಜೊತೆಗೆ ಗುದ್ದಾಡಿ ಬೆವರಿಡಿದ ಕೃಷ್ಣನ ಮುಖವನ್ನು ನೋಡಿರಿ. ಮಂಜುವನಿಗಳಿಂದ ರಂಜಿಸುವ ಪ್ರಫುಲ್ಲ ಕಮಲಕ್ಕಿಂತ ಮುದ್ದಾಗಿದೆ. ಅದನ್ನೊಮ್ಮೆ ನೋಡಿದರೆ ಸಾಕು. ಹುಟ್ಟಿದ್ದು ಸಾರ್ಥಕವಾಯಿತೆಂದೆನಿಸುವದು. ಅವನ ಎದೆಯ ಬದಿಯಲ್ಲಿ ಶ್ರೀವತ್ಸವು ಎಷ್ಟು ಸುಂದರವಾಗಿ ಕಂಗೊಳಿಸುತ್ತದೆ ನೋಡಿದಿರಾ ! ಅಕೋ, ಅವನ ಆ ಹರವಾದ ವಕ್ಷಸ್ಥಳ. ಆ ನೀಳದೋಳುಗಳು ಎಷ್ಟು ವೈರಿಗಳನ್ನು ವಿಧ್ವಂಸಗೈದಿವೆಯೋ! ಅಕೋ, ಅತ್ತ ನೋಡಿರಿ ಬಲರಾಮ. ಅವನ ಹಾಲು ಬಿಳಿಬಣ್ಣವು ಚಂದ್ರನಂತೆ ಚಂದ ಕಾಣುತ್ತದೆ. ಅವನ ದುಗ್ಧಧವಲವಾದ ಆ ದೇಹಕ್ಕೆ ಆ ಕಪ್ಪು ಮೇಲುದ ಎಷ್ಟು ಚೆನ್ನಾಗಿ ಒಪ್ಪುತ್ತಿದೆ ! ಕುಸ್ತಿಯ ಕಣದಲ್ಲಿ ಚಾಣೂರ ಮುಷ್ಟಿಕರೊಡನೆ ಅವನು ಹುಡುಗಾಟ ನಡೆಸಿದ್ದಾನೆ. ಅಬ್ಬ ! ಈ ಕೃಷ್ಣನಂತೂ ಆ ಜಗಜಟ್ಟಿಗಳನ್ನು ಉಪಹಾಸ ಮಾಡಿ ಮಾತಾಡುತ್ತಿದ್ದಾನೆ. ಓಹ, ಏನು ಈ ಗೊಲ್ಲಮಲ್ಲರ ಅದಟು !

ಅದೋ ಅತ್ತ ಕೃಷ್ಣನು ಆ ದೈತ್ಯಮಲ್ಲ ಚಾಣೂರನನ್ನು ಕೆಣಕಿ ಕುಸ್ತಿಗೆ ಇಳಿಯುತ್ತಿದ್ದಾನೆ. ಇವನು ಹಾಲ್ಗಲ್ಲದ ಹಸುಳೆ. ಸಣ್ಣ ಕೂಸು. ಅವನೋ ಜಗಜಟ್ಟಿ. ಅಪ್ರತಿಮಲ್ಲ ಮಲ್ಲ.''ಕೃಷ್ಣನು ಇನ್ನೂ ಹರೆಯದ ಹೊಸ್ತಿಲಲ್ಲಿ ಕೂಡ ಕಾಲು ಇರಿಸಿಲ್ಲ. ಇವನೋ ಪಳಗಿದ ಹುಲಿ. ಅವನಿನ್ನೂ ಎಳೆದೊಗಲಿನ ಹಸುಗೂಸು. ಇವನೂ ವಜ್ರ ಕಠೋರವಾದ ಗಟ್ಟಿದೇಹದ ಜಟ್ಟಿ. ಇವರಿಬ್ಬರಲ್ಲಿ ದ್ವಂದ್ವ ಯುದ್ಧವು ಸಮಾನ ಯುದ್ಧವಾಗಲಾರದು. ಇಲ್ಲಾರೂ ಮಧ್ಯಸ್ಥರಿಲ್ಲವೇ ! ನ್ಯಾಯಾನ್ಯಾಯವನ್ನು ಹೇಳುವ ಕೇಳುವ ಹಿರಿಯರು ಯಾರು ಇಲ್ಲವೇ ! ಇದ್ದರೆ ಅವರೆಲ್ಲರೂ ಉದಾಸೀನರಾಗಿ ಈ ವಿಷಮ ಯುದ್ಧವನ್ನು ನೋಡುತ್ತ ತೆಪ್ಪನೇ ಕುಳಿತಿದ್ದಾರೆ ! ಇದೆಂಥ ನಿರ್ನ್ಯಾಯಕತೆ ! ಅವರೆಲ್ಲರೂ ಪಕ್ಷಪಾತಿಗಳಾಗಿದ್ದಾರೆ!''

ಹೀಗೆ ಮಥುರೆಯ ಪೌರನಾರಿಯರು ಮಿಡುಕುತ್ತಿರುವಾಗಲೇ ಕೃಷ್ಣನು ಟೊಂಕಕಟ್ಟಿ ಕದನಕ್ಕಿಳಿದ. ಅವನು ಇಟ್ಟ ದಿಟ್ಟ ಹೆಜ್ಜೆಗೆ ನೆಲ ನಡುಗಿತು. ಕಂಸನ ಧೈರ್ಯ ಉಡುಗಿತು. ಅತ್ತ ಬಲರಾಮನೂ ಷಡ್ಡು ಹೊಡೆಯುತ್ತ ಕುಸ್ತಿಯ ಕಣಕ್ಕಿಳಿದ. ಅವನು ತನ್ನ ತೊಡೆ ತೋಳುಗಳನ್ನು ತಟ್ಟುತ್ತ ಒಳ್ಳೇ ಒಗರಿನಿಂದ ರಂಗದಲ್ಲಿ ತಿರುಗಿದ. ಅವನು ದರ್ಪದಿಂದ ಬಿರುಸಾಗಿ ಆಢ್ಯತೆಯಿಂದ ಹೆಜ್ಜೆ ಇಡುವದನ್ನು ನೋಡಿದರೆ ಆಗ ಭೂಕಂಪವಾಗದೆ ಇರುವದೇ ಆಶ್ಚರ್ಯವೆನಿಸುತ್ತಿತ್ತು. ಎಣೆಯಿಲ್ಲದ ಬಲಬೀರಗಳುಳ್ಳ ಕೃಷ್ಣನು ಚಾಣೂರನೊಡನೆ ಹೋರಾಡಹತ್ತಿದ. ಕದನ ಕಲಿಯಾದ ಬಲದೇವ ಮುಷ್ಟಿಕನೊಡನೆ ಸೆಣೆಸ್ಯಾಡತೊಡಗಿದ. ಚಾಣೂರನ ಮೇಲೆ ಕೃಷ್ಣನು ಹದ್ದಿನಂತೆ ಎರಗಿದ. ಹಾವಿನಂತೆ ಬಳಸಿದ. ಹುಲಿಯಂತೆ ಮೇಲೆ ಬಿದ್ದ. ಮೈತುಂಬ ಗುದ್ದಿದ. ಕಾಲಿನಿಂದ ಒದ್ದು ಹಾಕಿದ. ಮುಷ್ಟಿ ಏಟುಗಳಿಂದ ಹೊಡೆದು ಹಣ್ಣು ಮಾಡಿದ. ಎತ್ತಿ ನೆಲಕ್ಕೆ ಇಕ್ಕರಿಸಿದ. ಕೈ ಹಿಡಿದು ಸುತ್ತೆಲ್ಲ ತಿರುಗಿಸಿದ. ಪಟ್ಟವರಸೆಗಳಿಂದ ಬೀಳಿಸಿ ಪೆಟ್ಟು ಪ್ರಹಾರಗಳನ್ನು ಕೊಟ್ಟು ಮರ್ದಿಸಿದ. ಚಾಣೂರನೂ ಪ್ರತಿಯಾಗಿ ಕೃಷ್ಣನ ಮೇಲೆ ಬಿದ್ದು ಇದರಂತೆಯೇ ಹಣಾಹಣೆಯಾಗಿ ಹೋರಾಡಿದ. ಕಣ್ಣಿನಿಂದ ಕಿಡಿ ಕಾರಿದ. ಮೇಲೆ ಹಾರಿದ. ಬಳಿಗೆ ಸಾರಿದ. ಕೆಳಗೆ ತೂರಿದ. ಮೇಲೆ ಏರಿದ. ಕೊನೆಗೆ ಅವನ ಏಟ ತಾಳಲಾರದೆ ಚಾಣೂರ ಕೆಟ್ಟದನಿಯಿಂದ ಚೀರಿದ. ಹೀಗೆ ಕೃಷ್ಣ ಚಾಣೂರರ ನಡುವೆ ಘನಘೋರವಾದ ದ್ವಂದ್ವವು ನಡೆಯಿತು. ಇಬ್ಬರೂ

ತಮ್ಮ ಪ್ರಾಣಗಳನ್ನೇ ಪಣಕ್ಕಿಟ್ಟು ಕಾದಿದರು. ತಮ್ಮಲ್ಲಿದ್ದ ತ್ರಾಣವೀರ್ಯಗಳನ್ನೆಲ್ಲ ಪಣಕ್ಕೆ ಹಚ್ಚಿ ಹೋರಾಡಿದರು. ಚಾಣೂರನ ಮೈಯೆಲ್ಲ ಬೆವತಿತು. ದೇಹವೆಲ್ಲ ದಣಿಯಿತು. ಆದರೆ ಕೃಷ್ಣನು ಮಾತ್ರ ಅಶ್ರಾಂತಕಾಂತನಾಗಿಯೇ ನಿಂತಿದ್ದ. ಹಳೆ ಹುಡೆಯಂತೆ ಮುಗಿಲೆತ್ತರ ನಿಂತ ಆ ದೈತ್ಯ ದೇಹದ ಜಟ್ಟಿಯೊಡನೆ ಮಾಟ ಮೈಯುಳ್ಳ ಕೃಷ್ಣನು ಚೂಟಿಯಾಗಿ ಕಲಿತನದಿಂದ ಕಾದಿದರೂ ಅವನ ಮುಖದ ಮೇಲೆ ತೋರಿದ್ದು ಆಯಾಸವಲ್ಲ, ಉಲ್ಲಾಸ. ಅವನ ದೇಹದಲ್ಲಿ ಕಂಡಿದ್ದು ದಣಿವಲ್ಲ, ತಣಿವು. ವಿಷಾದವಲ್ಲ, ಪ್ರಸಾದ.

ಯುದ್ಧ ಮಾಡಿದಂತೆ ಕೃಷ್ಣನಿಗೆ ಹುರುಪು. ಚಾಣೂರನ ಮೈಯೆಲ್ಲ ಉರುಪು. ಇವನ ಶಕ್ತಿ ಹಿಗ್ಗಿತು. ಅವನ ಶಕ್ತಿ ಕುಗ್ಗಿತು. ಚಾಣೂರನ ಮೈ ತುಂಬ ಬೆವರು. ಅದನ್ನು ಕಂಡು ಕೃಷ್ಣನ ಮೈಯಲ್ಲಿ ನವಿರು. ಪ್ರೇಕ್ಷಕರಿಗೆ ತಿಳಿದುಹೋಯಿತು ಚಾಣೂರನು ಥಕಾಸಿ ಮುಗ್ಗರಿಸುತ್ತಲಿದ್ದಾನೆ. ಕೃಷ್ಣ ಹೊಸ ಉತ್ಸಾಹದಿಂದ ಉಬ್ಬುತ್ತಿದ್ದಾನೆ ಎಂದು. ಕೃಷ್ಣನ ಈ ಗೆಲವು ಮೇಲ್ಮೆಗಳನ್ನು ಕಂಡು ಜನರು ಹರ್ಷೋದ್ಗಾರಗಳನ್ನು ತೆಗೆದು ಚಪ್ಪಾಳೆ ತಟ್ಟಿದ್ದರು. ಅದನ್ನು ಕೇಳಿ ಓಲಗದವರೂ ಉತ್ಸಾಹದಿಂದ ವಾದ್ಯತೂರ್ಯಗಳನ್ನು ಊದಿ ಬಾರಿಸತೊಡಗಿದರು. ಅದನ್ನು ಕೇಳಿ ಕಂಸನಿಗೆ ಅವಮಾನವಾದಂತಾಯಿತು. ಅವನು ಕೂಡಲೇ ಗದರಿಸಿದ. ತಾಲ ತಮ್ಮಟೆ ವಾದ್ಯ ವಾಲಗ ಬಾಜಾ ಬಜಂತ್ರಿಗಳನ್ನು ತಕ್ಷಣ ಬಂದುಮಾಡಿಸಿದ. ಅವನ ಕಣ್ಣೆದುರೇ ಅವನು ನಂಬಿದ ಜಟ್ಟಿ ಜರ್ಜರಿತನಾಗಿ ಕೃಷ್ಣನ ಎದುರೇ ಕಸುವುಗೆಟ್ಟು ಕುಸಿಯುವುದನ್ನು ಕಂಡಿತು. ಕಂಸನ ಹೃದಯದಲ್ಲಿ ಕಸಿವಿಸಿಯಾಯಿತು.

ಕಂಸನು ವಾದ್ಯ ವೈಭವಗಳನ್ನು ಬಂದು ಮಾಡಿದಕೂಡಲೇ ದೇವದುಂದುಭಿಗಳು ಮೊಳಗತೊಡಗಿದವು. ಕೃಷ್ಣನ ಈ ಕದನ ಕೌಶಲ್ಯವನ್ನು ಕಂಡು ಹಿಗ್ಗಿ ಹೂವಾದ ದೇವತೆಗಳು ಹರ್ಷಪುಲಕಿತರಾಗಿ ಅದೃಶ್ಯರೂಪದಿಂದಲೇ ''ಜಯ ಗೋವಿಂದ ಚಾಣೂರಂ, ಜಹಿ ಕೇಶವ ದಾನವಂ'' ಎಂದು ಜಯಘೋಷ ಮಾಡತೊಡಗಿದರು. ಹೀಗಾಗಿ ಕೃಷ್ಣನ ವಿಜಯವನ್ನು ಸಾರುವ ವಾದ್ಯಗಳನ್ನು ಕಂಸ ತಡೆದರೆ ಅದರ ಇಮ್ಮಡಿ ಹುಮ್ಮಸ್ಸಿನಿಂದ ದೇವತೂರ್ಯಗಳು ಮೊಳಗಿ ಕೃಷ್ಣನ ಗೆಲುವನ್ನು ಸಾರಿದವು. ಹೀಗೆ ಕೃಷ್ಣನು ಚಾಣೂರನೊಡನೆ ಎಷ್ಟೋ ಹೊತ್ತಿನವರೆಗೆ ಸರಸವಾಡಿದಂತೆ ಯುದ್ಧಮಾಡಿದ. ಕೊನೆಗೆ ಅವನನ್ನು ಎರಡೂ ಕೈಯಿಂದ ಮೇಲಕ್ಕೆತ್ತಿ ಮುಗಿಲಿನಲ್ಲಿಯೇ ಗರಗರ-ಭರಭರ ತಿರುಗಿಸತೊಡಗಿದ. ಅವನ ಈ ಭ್ರಾಮಣದ ವೇಗಾವರ್ತದಲ್ಲಿಯೇ ಚಾಣೂರನು ಉಸುರುಗಟ್ಟಿ ಸತ್ತು ಹೋದನು. ಹೀಗೆ ನೂರು ಬಾರಿ ತಿರುಗಿಸಿ ಕೃಷ್ಣನು ಅವನನ್ನು ಬೀಸಾಡಿ ನೆಲಕ್ಕೆ ಅಪ್ಪಳಿಸಿದನು. ನೋಡಿದಾಗ ಚಾಣೂರ ಚಿಪ್ಪಾಡಿಯಾಗಿದ್ದ. ಕೋಡಿಟ್ಟು ಹರಿದ ಅವನ ನೆತ್ತರದಿಂದ ನೆಲದ ತುಂಬ ಕೆಸರು. ಇತ್ತ ಬಲರಾಮನಾದರೂ ದೈತ್ಯ ಮಲ್ಲನಾದ ಮುಷ್ಟಿಕನೊಡನೆ ಮುಷ್ಟಿ ಯುದ್ಧ ಮಾಡಿದ. ಕೃಷ್ಣನು ಚಾಣೂರನ ಕತೆ ಮುಗಿಸಿದ್ದನ್ನು ಕಂಡುಬಲದೇವನು ರೋಷಗೊಂಡು ಮುಷ್ಟಿಕನ ನೆತ್ತಿಗೊಂದು ಮುಷ್ಟಿ ಇಟ್ಟನು. ಎದೆಗೊಂದು ಗುದ್ದುಕೊಟ್ಟನು. ಅಷ್ಟರಿಂದಲೇ ಝೋಲಿ ಹೊಡೆಯತಕ್ಕ ಆ ದುಷ್ಟನನ್ನು ಸೆಳೆದು ನೆಲಕ್ಕೆ ಒಗೆದು ತನ್ನ ಮೊಣಕಾಲಿನಿಂದ ಒತ್ತಿ ಜಜ್ಜಿ ಮುದ್ದೆ ಮಾಡಿ ಮಣ್ಣಿನಲ್ಲಿಟ್ಟನು. ಅನಂತರ ತೋಶಲ ಎಂಬ ಮತ್ತೊಬ್ಬ ಕುಸ್ತಿಯ ಆಳು ಕಣದಲ್ಲಿ ಕಾಣಿಸಿ ಕೊಂಡನು. ಕೂಡಲೇ ಕೃಷ್ಣನು ಅವನನ್ನು ಎಡಗೈಯಿಂದ ತೊನಶಿ

ಹೊಡೆಯುವಂತೆ ಹೊಡೆದು ಭೂಮಿಯ ಮೇಲೆ ಬೊಕ್ಕ ಬೋರಲಾಗಿ ಬೀಳುವಂತೆ ಮಾಡಿದ. ಹೀಗೆ ಚಾಣೂರ ಯಮನೂರ ಕಂಡ. ಮುಷ್ಟಿಕ ಮಣ್ಣು ಮುಕ್ಕಿದ. ತೋಶಲ ಕೀರಿಹೋದ. ಇದನ್ನು ನೋಡಿದ ಉಳಿದ ಎಲ್ಲ ಮಲ್ಲರೂ 'ಬದುಕೆಲೋ ಜೀವ' ಎಂದು ಓಟ ಕಿತ್ತಿದರು.

ಆಗ ರಾಮಕೃಷ್ಣರು ಚಿಕ್ಕ ಚಿಟ್ಟಾನೆಗಳಂತೆ, ಸಿಂಹದ ಮರಿಗಳಂತೆ ಸಿಂಹನಾದ ಮಾಡುತ್ತ ರಂಗಸ್ಥಳದ ತುಂಬ ಉತ್ಸಾಹದಿಂದ ಕುಣಿದಾಡಿದರು. ಮತ್ತು ಅಲ್ಲಿಯೇ ಈ ಯುದ್ಧಕೇಳಿಯನ್ನು ನೋಡುತ್ತ ಕುಳಿತ ತಮ್ಮ ಗೋಕುಲದ ಗೆಳೆಯ ಗೋಪಾಲಕರನ್ನು ಪ್ರೇಕ್ಷಕರ ಗ್ಯಾಲರಿಯಿಂದ ಎಳೆದು ಅವರೊಡನೆ ಉಬ್ಬಿನಿಂದ ಕುಸ್ತಿಯ ಕಣವನ್ನೆಲ್ಲ ತುಳಿದಾಡಿ ತೂಗಾಡಿದರು.

ಅದನ್ನು ಕಂಡ ಕಂಸನಿಗೆ ಭಾರೀ ಸಿಟ್ಟು ಬಂದಿತು. ಅವನು ತಲೆಕೆಟ್ಟಂತೆ ಕೂಗಾಡತೊಡಗಿದ. ''ಎಲೋ ಯಾರಿದ್ದೀರಿ ಅಲ್ಲಿ! ದನಕಾಯುವ ಈ ಗೊಲ್ಲರನ್ನು ಈ ರಂಗಮಂಟಪದಿಂದ ಹೊರಗೆ ಹಾಕಿರಿ. ಹೋಗದಿದ್ದರೆ ಈ ಪಾಪಿಗಳನ್ನು ಕತ್ತಿನ ಮೇಲೆ ಕೈಕೊಟ್ಟು ಹೊರಗೆ ಹಾಕಿರಿ. ಹೊರಗೆ ದಬ್ಬಿರಿ. ಆ ನಂದಗೋಪನ ಕಾಲಿಗೆ ಕೈಕಾಲುಗಳಿಗೂ ನಿರ್ದಾಕ್ಷಿಣ್ಯವಾಗಿ ಕೊಳಗ ತೊಡಿಸಿ ಕೊಂದು ಹಾಕಿರಿ. ಕೃಷ್ಣನ ಈ ಗೆಲುವನ್ನು ಕಂಡು ಕುಣಿದಾಡುವ ಈ ಎಲ್ಲ ಗೋಪಾಲರನ್ನೂ ಹಿಡಿಯಿರಿ ಹೊಡೆಯಿರಿ.'' ಎತ್ತರ ಮಂಚದ ಮೇಲೆ ಕುಳಿತು ಕಂಸನು ಹೀಗೆ ಸಿಟ್ಟಿನಿಂದ ಒಟ್ಟರಿಸಿ ಒದರುವದನ್ನು ಕೃಷ್ಣನು ಕೆಳಗೆ ರಂಗಮಂಟಪದಲ್ಲಿ ನಿಂತೇ ನೋಡಿದನು. ಸಿಂಹವು ತನ್ನ ಬೇಟೆಯನ್ನು ನಿಟ್ಟಿಸಿದಂತಿತ್ತು ಅವನ ಉಗ್ರನೋಟ. ತನ್ನ ತಂದೆ-ತಾಯಿಗಳನ್ನು ಬಂದೀ ಖಾನೆಯಲ್ಲಿರಿಸಲು ಹೇಳಿದ ಅವನ ಮಾತು ಕೃಷ್ಣನಿಗೆ ತಾಳದಾಯಿತು. ಅವನು ಒಮ್ಮಿಂದೊಮ್ಮೆಲೇ ರಂಗಭೂಮಿಯಿಂದ ಚಿಮ್ಮಿ ಚಂಗನೇ ಮೇಲೆ ಹಾರಿ ಕಂಸನ ಮಂಚಕ್ಕೆ ಜಿಗಿದು ಬಂದ. ಅವನ ಕೂದಲು ಹಿಡಿದು ಮಂಚದಿಂದ ಕೆಳಗೆ ಜಗ್ಗಿದ. ಅಲ್ಲಿಯೇ ಅವನನ್ನು ಎರಡೂ ಕೈಗಳಿಂದ ಮೇಲೆತ್ತಿ ರಂಗ ಭೂಮಿಯ ನಡುವೆ ತೂರಿ ಒಗೆದ. ಅವನು ಸಾವರಿಸಿಗೊಂಡು ಏಳಬೇಕೆನ್ನುವಷ್ಟರಲ್ಲಿ ಕೃಷ್ಣ ಕಂಸನು ಮೊದಲು ಕುಳಿತ ಅತ್ಯಂತ ಎತ್ತರವಾದ ಮಂಚದ ತುದಿಯಿಂದ ಹಾರಿ ತೂರಿ ಕಂಸನ ಮೈಮೇಲೆ ಬಂದು ವೇಗದಿಂದ ಅಪ್ಪಳಿಸಿದ. ಅದರಿಂದ ಅಲ್ಲಿಯೇ ಕಂಸನ ಜೀವಜ್ಯೋತಿ ಹಾರಿಹೋಯಿತು. ಆಗ ಕೃಷ್ಣನು ಕಂಸನ ಉದ್ದ ಕೂದಲುಗಳನ್ನು ಕೈಯಲ್ಲಿ ಹಿಡಿದು ರಂಗಭೂಮಿಯ ಸುತ್ತಲೂ ಅವನ ದೇಹವನ್ನು ಎಳೆದ. ರಕ್ತ ಬಸಿಯುವ ಅವನ ಕೊಬ್ಬಿದ ದೇಹವನ್ನು ಸುತ್ತಲೂ ಎಳೆದಾಡಿದ್ದರಿಂದ ರಂಗಮಂಟಪದ ಗಡಿಗುಂಟ ಕೆರೆಕಟ್ಟಿದಂತೆ ಗೆರೆಬಿದ್ದು ಪರಿಖೆಯನ್ನು ರಚಿಸಿದಂತಾಯಿತು. ನೆರೆದ ಜನರೆಲ್ಲರೂ ಹಿಗ್ಗಿನಿಂದ ಕೇಕೆಹಾಕಿದರು. ಆ ಮಹಾ ಕೋಲಾಹಲದಲ್ಲಿ ಕೃಷ್ಣನು ತೂರಿಕೊಂಡು ವಸುದೇವನಿದ್ದ ಮಂಚಕ್ಕೆ ಬಂದು ತಂದೆಯ ಚರಣಗಳ ಮೇಲೆ ಶಿರವಿಟ್ಟು ತನ್ನ ಕಣ್ಣೀರಿನಿಂದ ಅವನ ಕಾಲು ತೊಳೆದನು. ಅದನ್ನು ನೋಡಿ ದೇವಕಿಯೂ ಅಲ್ಲಿಗೆ ಧಾವಿಸಿ ಬಂದಳು. ಕೃಷ್ಣನು ಆ ತಾಯಿಯ ಪಾದಗಳನ್ನು ಗಟ್ಟಿಯಾಗಿ ಹಿಡಿದು ಅವುಗಳ ಮೇಲೆ ತನ್ನ ತಲೆ ಇಟ್ಟು ಅವಳ ಪಾದ ಧೂಳಿಯನ್ನು ಹಣೆಗೆ ಹಚ್ಚಿಕೊಂಡನು. ಆಗ ದೇವಕೀ ವಸುದೇವರು ಅವನನ್ನೆತ್ತಿ ಬಿಗಿದಪ್ಪಿಕೊಂಡರು.

ಆನಂದೋದ್ರೇಕದಿಂದ ಅವರಿಗೆ ಮಾತೇ ಬಾರದಾಗಿತ್ತು. ಕೃಷ್ಣನ ಅದ್ಭುತ ಗೈಮೆಯನ್ನು ಕಂಡು ಅವರಿಬ್ಬರಿಗೂ ''ಇವನು ನಮ್ಮ ಮಗನಲ್ಲ, ಸಾಕ್ಷಾತ್ ದೇವರೇ'' ಎಂದು ಖಚಿತವಾಗಿ ತಿಳಿದು ಹೋಗಿದ್ದಿತು. ಆದುದರಿಂದಲೇ ಅವರು ಭಕ್ತಿಯಿಂದ ಅವನ ಕೈ ಮುಗಿದು ತಲೆಬಾಗಿ ನಿಂತರು. ಜ್ಞಾನಿಯಾದ ವಸುದೇವನು ಕೊರಳು ಬಿಗಿದು ಗದ್ಗದ ಧ್ವನಿಯಲ್ಲಿ ಹೇಗೋ ಇಂತು ನುಡಿದನು.

## ವಸುದೇವ ಉವಾಚ

ಪ್ರಸೀದ ಸೀದತಾಂ ದತ್ತೋ ದೇವಾನಾಂ ಯೋ ವರಃ ಪ್ರಭೋ ।
ತಥಾಽವಯೋಃ ಪ್ರಸಾದೇನ ಕೃತೋದ್ಧಾರಃ ಸ ಕೇಶವ ॥

ಆರಾಧಿತೋ ಯದ್ ಭಗವಾನವತೀರ್ಣೋ ಗೃಹೇ ಮಮ ।
ದುರ್ವೃತ್ತನಿಧನಾರ್ಥಾಯ ತೇನ ನಃ ಪಾವಿತಂ ಕುಲಂ ॥

ಸಾಪನ್ಹವಂ ಮಮ ಮನೋ ಯದೇತತ್ವಯಿ ಜಾಯತೇ ।
ದೇವಕ್ಯಾಶ್ಚಾತ್ಮಜ ಪ್ರೀತ್ಯಾ ತದತ್ಯಂತ ವಿಡಂಬನಾ ॥

ತ್ವಂ ಕರ್ತಾ ಸರ್ವಭೂತಾನಾಮನಾದಿನಿಧನೋ ಭವಾನ್ ।
ಜಗದೇತಜ್ಜಗನ್ನಾಥ ಸಂಭೂತಮಖಿಲಂ ಯತಃ ।

ಕಯಾ ಯುಕ್ತ್ಯಾ ವಿನಾ ಮಾಯಾಂ ಸೋಽಸ್ಮತ್ತಃ ಸಂಭವಿಷ್ಯತಿ ।
ಯಸ್ಮಿನ್ ಪ್ರತಿಷ್ಠಿತಂ ಸರ್ವಂ ಜಗತ್ ಸ್ಥಾವರ ಜಂಗಮಂ ॥

ಶೇಷೋತ್ಸಂಗ ಶಯನೋ ಮಾನುಷೋ ಜಾಯತೇ ಕಥಂ ।
ಸ ತ್ವಂ ಪ್ರಸೀದ ಪರಮೇಶ್ವರ ಪಾಹಿ ವಿಶ್ವ -
ಮಂಶಾವತಾರಕರಣೈರ್ನ ಮಮಾಸಿ ಪುತ್ರಃ ।
ಆಬ್ರಹ್ಮಪಾದಪಮಿದಂ ಜಗದೇತದೀಶ

ತ್ವತ್ತೋ ವಿಮೋಹಯಸಿ ಕಿಂ ಪುರುಷೋತ್ತಮಾಸ್ಮಾನ್ ॥
ಮಾಯಾವಿಮೋಹಿತದೃಶಾಂ ತನಯೋ ಮಮೇತಿ ।
ಕಂಸಾದ್ಭಯಂ ಕೃತಮಪಾಸ್ತಭಯಾತಿತೀವ್ರಮ್ ॥

ನೀತೋಽಸಿ ಗೋಕುಲಮರಾತಿ ಭಯಾಕುಲೇನ
ವೃದ್ಧಿಂ ಗತೋಽ ಸಿ ಮಮ ನಾಸ್ತಿ ಮಮತ್ತ್ವಮೀಶ ॥
ಕರ್ಮಾಣಿ ರುದ್ರಮರುದಶ್ವಿ ಶತಕ್ರತೂನಾಂ ।
ಸಾಧ್ಯಾನಿ ಯಸ್ಯ ನ ಭವಂತಿ ನಿರೀಕ್ಷಿತಾನಿ ॥
ತ್ವಂ ವಿಷ್ಣುರೀಶ ಜಗತಾಮುಪಕಾರ ಹೇತೋಃ ।
ಪ್ರಾಪ್ತೋಽಸಿ ನಃ ಪರಿಗತೋ ವಿಗತೋ ಹಿ ಮೋಹಃ ॥

''ಸ್ವಾಮಿ, ಕೇಶವ, ನಮ್ಮ ಮೇಲೆ ಪ್ರಸನ್ನನಾಗು. ನೀನು ದೇವತೆಗಳಿಗೆ ಕೊಟ್ಟ ವರವನ್ನು ಪೂರ್ತಿಗೊಳಿಸುವಲ್ಲಿ ನನ್ನ ಮೇಲೆಯೂ ಅನುಗ್ರಹಮಾಡಿದಂತಾಯಿತು.

ದುಷ್ಟರನ್ನು ದಮನ ಮಾಡಲಿಕ್ಕಾಗಿ ದೇವತೆಗಳು ನಿನ್ನನ್ನು ಆರಾಧಿಸಿದರು. ಅದಕ್ಕಾಗಿ ನೀನು ಅವತಾರ ಮಾಡಿದ್ದು ಮಾತ್ರ ನನ್ನ ಮನೆಯಲ್ಲಿ. ಇದರಿಂದ ಪ್ರಭು, ನಾನು ಧನ್ಯನಾದೆ. ನಮ್ಮ ಕುಲ ಪಾವನವಾಯಿತು. ಭಗವನ್, ನೀನು ನಮ್ಮಿಂದ ಹುಟ್ಟಿದ್ದರಿಂದ ದೇವಕಿಗೂ ನನಗೂ ನಿನ್ನಲ್ಲಿ ನಮ್ಮ ಮಗ ಎಂದು ಬುದ್ಧಿ ಭ್ರಾಂತಿಯು ಹುಟ್ಟುತ್ತಲಿದೆ. ಮಗನಂತೆ ನಿನ್ನ ಮೇಲೆ ನಮಗೆ ಪುತ್ರ ವಾತ್ಸಲ್ಯವು ಉಕ್ಕೇರುತ್ತಲಿದೆ. ಇದಕ್ಕಿಂತ ನಗೆಗೀಡಾದ ಮಾತು ಯಾವುದಿದೆ ? ಸರ್ವ ಪ್ರಾಣಿಗಳನ್ನು ಹುಟ್ಟಿಸಿದ ಜನನ ಮರಣ ರಹಿತನಾದ ನಿನ್ನನ್ನು 'ಮಗ' ಎಂದು ಈ ನಾಲಿಗೆ ಹೇಗೆ ನುಡಿದೀತು !

ಜಗನ್ನಾಥ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಹುಟ್ಟಿರುವಾಗ ನೀನು ನಮ್ಮಿಂದ ಹುಟ್ಟಿದೆ ಎಂದು ಯಾವ ಯುಕ್ತಿಯಿಂದ ಹೇಳಲಿಕ್ಕುಂಟು ! ಇದಕ್ಕೆ ನಿನ್ನ ಮಾಯಾ, ನಿನ್ನ ಇಚ್ಛೆಯೇ ಕಾರಣ. ನೀನು ಮಾಯಾ ಮಾನವ. ಸ್ಥಾವರ ಜಂಗಮಾತ್ಮಕವಾದ ಈ ಬ್ರಹ್ಮಾಂಡವೆಲ್ಲವೂ ಯಾವನ ವಶದಲ್ಲಿರುವದೋ ಅಂಥ ನೀನು ಯಾರ ಹೊಟ್ಟೆಯಲ್ಲಿ ಹಿಡಿಸಬಲ್ಲಿ ! ತೊಡೆಯ ಮೇಲೆ ಯಾರು ನಿನ್ನನ್ನು ಹೊತ್ತು ಆಡಿಸಬಲ್ಲರು ! ಭಗವನ್, ನೀನು ಸಾಕ್ಷಾತ್ ಪರಮಾತ್ಮನೇ. ನೀನು ಅಂಶಾವತಾರ ಮಾಡಿ ನಮ್ಮಲ್ಲಿ ಬಂದಿರುವೆ. ನೀನು ನನ್ನ ಮಗನಲ್ಲ. ಯಾರ ಮಗನೂ ಅಲ್ಲ. ಎಲ್ಲರ ತಂದೆ. ಗಿಡ ಗಂಟಿಯಿಂದ ಆರಂಭಿಸಿ ನುಡಿಯೊಡೆಯ ಬ್ರಹ್ಮನವರೆಗೆ ಎಲ್ಲರನ್ನೂ ಹುಟ್ಟಿಸಿದವನೇ ನೀನು. ಸ್ವಾಮಿ, ನಮ್ಮನ್ನೇಕೆ ಮಗನೆಂದು ಮೋಹ ಗೊಳಿಸುವೆ ! ಪ್ರಭು, ಪ್ರಸನ್ನನಾಗು. ನೀನು ಅವತಾರ ಮಾಡಿದ ಮುಖ್ಯ ಉದ್ದೇಶವಾದ ಜಗದ್ರಕ್ಷಮಾ ರೂಪವಾದ ಕಾರ್ಯವನ್ನು ಮಾಡು. ಜಗದೀಶ, ನಿನ್ನ ಮಾಯೆಯಿಂದ ಮುಗ್ಧನಾದ ನಾನು ಅಂದು ನೀನು ನನ್ನ ಕಾರಾಗೃಹದಲ್ಲಿ ಪ್ರಕಟನಾದಾಗ ನಿಜವಾಗಿಯೂ ನೀನು ನನ್ನ ಹೊಟ್ಟೆಯಿಂದ ಹುಟ್ಟಿದ ಮಗನೆಂದೇ ಬಗೆದೆ. ಆ ಮಗನಿಗೆ ಕಂಸನಿಂದ ಘಾತವಾದೀತೆಂದು ಬೆದರಿದೆ. ಅದಕ್ಕಾಗಿಯೇ ಹೆದರಿ ಸರಿ ರಾತ್ರಿಯಲ್ಲಿಯೇ ನಿನ್ನನ್ನು ವೈಯ್ದು ಗೋಕುಲದಲ್ಲಿ ಇಟ್ಟು ಬಂದೆ. ಇದೆಂಥ ನನ್ನ ಅಜ್ಞಾನ ! ಅಂದಾದರೂ ಈ ಕಂಸ ನಿನಗೇನು ಮಾಡಬಲ್ಲವನಾಗಿದ್ದ ! ಆದರೂ ನಾನು ಹೆದರಿ ನಿನ್ನನ್ನು ನಂದಗೋಪನ ಮನೆಯಲ್ಲಿ ವೈಯ್ದಿಟ್ಟೆ. ಇದೆಲ್ಲವೂ ನಿನ್ನ ಮಾಯೆ, ನೀನು ಅಲ್ಲಿಯೇ ಗೋಕುಲದಲ್ಲಿ ಬೆಳೆದು ದೊಡ್ಡವನಾದೆ. ಈಗ ಸ್ವಾಮಿ ನನ್ನ ಆ ಮಾಯೆಯ ಮಂಜು ಹರಿದಿದೆ. ಈಗ ನೀನು 'ನನ್ನ ಮಗನಲ್ಲ. ಜಗತ್ಪಿತಾ' ಎಂಬ ಜ್ಞಾನೋದಯವಾಗಿದೆ. ಯಾಕೆಂದರೆ ಇಂದ್ರ, ರುದ್ರ, ಅಶ್ವಿನೀ, ಮರುತ ಮುಂತಾದ ದೇವತಾ ಧುರೀಣರಿಗೂ ಕೂಡ ಮಾಡಲು ಶಕ್ಯವಾಗದ ಮಹಾಕಾರ್ಯಗಳನ್ನು ನೀನು ಮಾಡಿದ್ದೀಯ. ಅವುಗಳನ್ನೆಲ್ಲ ನಾವು ಪ್ರತ್ಯಕ್ಷವಾಗಿ ಕಂಡಿದ್ದೇವೆ. ಆದುದರಿಂದ ನೀನು ಜಗದೋದ್ಧಾರಕ್ಕಾಗಿ ಬಂದ ಸಾಕ್ಷಾತ್ ಶ್ರೀ ವಿಷ್ಣುವೇ ಎಂದು ನಮಗೀಗ ನಿಶ್ಚಿತವಾಗಿದೆ. ಮಗ ಎಂಬ ಮೋಹ ಕಳೆದಿದೆ. ನನ್ನ ಬುದ್ಧಿ ಪರಮಾರ್ಥವನ್ನು ತಿಳಿದಿದೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ತನೇ ಅಧ್ಯಾಯ ಸಂಪೂರ್ಣ*

—o—

ಅಧ್ಯಾಯ - ೨೧

"ತಂದೆತಾಯಿಗಳನು ಪಾರುಗೈದು ಬಂದಿವನೆಯ ಬೇಡಿ
ಬಿಡಿಸಿ ಉಗ್ರಸೇನನನ್ನು ಮಥುರೆಯರಸನನ್ನು ಮಾಡಿ
ರಾಮಕೃಷ್ಣರೋದಲಿಕ್ಕೆ ಗುರುಕುಲಕ್ಕೆ ನಡೆದರು.
ಕೆಲವೆ ದಿನಗಳಲಿ ಎಲ್ಲ ವಿದ್ಯೆಗಳನು ಕಲಿತು ಅವರ
ಸತ್ತ ಮಗನ ಮತ್ತೆ ತಂದು ಕೊಟ್ಟು ಮನೆಗೆ ಬಂದರು."

ಶ್ರೀ ಕೃಷ್ಣನು ಮಾಡಿದ ಕಂಸವಧವೇ ಮೊದಲಾದ ಅಸಾಧಾರಣ ಕಾರ್ಯಗಳನ್ನು ಕಂಡು ವಸುದೇವ ಮತ್ತು ದೇವಕಿಯರಿಗೆ ಇವನು ನಮ್ಮ ಮಗನಲ್ಲ. ಸಾಕ್ಷಾತ್ ಪರಬ್ರಹ್ಮನೇ ಎಂಬ ಬುದ್ಧಿಯು ಉತ್ಪನ್ನವಾಯಿತು. ಆಗ ಶ್ರೀ ಕೃಷ್ಣನು ಅವರ ಮೇಲೆ ತನ್ನ ವೈಷ್ಣವೀಮಾಯೆಯನ್ನು ಬೀರಿದನು. ಆದರಿಂದ ಗೋಪಾಲಕರಿಗೆಲ್ಲ ಇವನೊಬ್ಬ ತಮ್ಮಂತೆ ಗವಳಿಗ ಎಂದು ಬುದ್ಧಿಯು ಉದಿಸಿತು. ವಸುದೇವ ದೇವಕಿಯರಿಗೂ ಅದೇ ತರಹದ ಬುದ್ಧಿಯನ್ನು ಹುಟ್ಟಿಸುತ್ತ ಕೃಷ್ಣನು 'ಅಮ್ಮ', 'ಅಪ್ಪ' ಎಂದು ಅವರನ್ನು ಸಂಭೋದಿಸಿ ಪಶ್ಚಾತ್ತಾಪದ ದನಿಯಿಂದ ಇಂತು ಬಿನ್ನವಿಸಿದನು.

"ತಾಯಿ ತಂದೆಗಳೇ! ನಿಮ್ಮನ್ನು ಕಾಣಬೇಕೆಂದು ಬಹುದಿವಸಗಳಿಂದ ನಾನು ಚಡಪಡಿಸುತ್ತಲಿದ್ದೆ. ಆದರೆ ಏನು ಮಾಡುವದು! ಕಂಸನ ಹೆದರಿಕೆ ಇದ್ದಿತಲ್ಲ! ಅವನ ಭಯದಿಂದ ಈ ಬಲರಾಮನಿಗಾಗಲಿ ನನಗಾಗಲಿ ನಿಮ್ಮನ್ನು ಕಾಣಲು ಬರಲಿಕ್ಕೆ ಆಗಲಿಲ್ಲ. ತಾಯಿತಂದೆಗಳ ಸೇವೆಯನ್ನು ಮಾಡದ ಮಾನವನ ಜನ್ಮವು ವ್ಯರ್ಥವಾದಂತೆಯೇ ಸರಿ. ಪಿತೃಗಳ ಸೇವೆ ಮಾಡದೇ ನಿರರ್ಥಕ ಕಾಲಹರಣ ಮಾಡುವವರು ಪರಮ ನೀಚರು. ಗುರುಗಳು, ದೇವತೆಗಳು, ಮತ್ತೂ ಬ್ರಾಹ್ಮಣರು ಹಾಗೂ ತಾಯಿತಂದೆಗಳು ಇವರ ಸೇವೆ, ಇವರ ಪೂಜೆ ಮಾಡುವದರಿಂದ ಮನುಷ್ಯರ ಜನ್ಮವು ಸಫಲವಾಗುತ್ತದೆ. ಆದರೆ ಕಂಸನ ಶೌರ್ಯ, ಕ್ರೌರ್ಯಗಳಿಂದ ಅಂಜಿದ ನಾವು ತಾಯಿತಂದೆಗಳಾದ ನಿಮ್ಮ ಸೇವೆಯನ್ನು ಮಾಡಲಿಲ್ಲ. ಇದು ನಮ್ಮ ದೊಡ್ಡ ತಪ್ಪು. ದಯವಿಟ್ಟು ನೀವು ನಮ್ಮ ಈ ಮಹಾ ಅಪರಾಧವನ್ನು ಕ್ಷಮಿಸಬೇಕು!" ಎಂದು ಅವರಿಬ್ಬರ ಪಾದಗಳಿಗೂ ಕೃಷ್ಣರಾಮರು ನಮಸ್ಕಾರ ಮಾಡಿದರು. ಅನಂತರ ಎಲ್ಲ ಯಾದವರ ಕುಲದ ಹಿರಿಯರನ್ನೂ ಕ್ರಮವಾಗಿ ನಮಸ್ಕರಿಸಿ ಯಥಾಯೋಗ್ಯವಾಗಿ ಅವರೆಲ್ಲರ ಪೂಜೆಯನ್ನು ಮಾಡಿದರು. ಮತ್ತು ಮಥುರಾ ಪಟ್ಟಣದ ಎಲ್ಲ ನಾಗರಿಕರನ್ನೂ ಸತ್ಕರಿಸಿದರು.

ಅನಂತರ ಕಂಸನ ಮಡದಿಯರೂ, ಮಾತೆಯರೂ ಅಳುತ್ತ ಬಂದು ಕಂಸನ ಶವದ ಸುತ್ತಲೂ ಕುಳಿತು ಅತ್ಯಂತ ದುಃಖಸಂತಪ್ತರಾಗಿ ಅತ್ತು ಗೋಗರೆದರು. ಅವರ ಕರುಣ ವಿಲಾಪವನ್ನು ಕೇಳಿ ಕೃಷ್ಣನಿಗೂ ಎದೆ ಕರಗಿ ಅವನು ಆ ಎಲ್ಲ ಕಂಸ ಕಾಮಿನಿಯರನ್ನು ಮಿದುಮಾತುಗಳಿಂದ ಸಂತೈಸಿದನು. ಕಂಸನ ತಾಯಂದಿರ ದೀನ ಆಕ್ರಂದನವನ್ನು ಕೇಳಿ ಕೃಷ್ಣನ ಕಣ್ಣಲ್ಲಿಯೂ ನೀರು ಚಿಮ್ಮಿತು. ಅವರನ್ನೂ ಸಾಂತ್ವನಪರವಾದ ಉಕ್ತಿಗಳಿಂದ ಸಮಾಧಾನ ಪಡಿಸಿದ ಸ್ವಯಂ ಶ್ರೀ ಕೃಷ್ಣ.

ಅನಂತರ ರಾಮಕೃಷ್ಣರು ಕಂಸನ ಕಾರಾಗೃಹಕ್ಕೆ ಹೋದರು. ಆ ದುಷ್ಟ ದೈತನು ತನ್ನ ಹಡೆದ ತಂದೆಯಾದ ಉಗ್ರಸೇನ ಮಹಾರಾಜನನ್ನು ಕೂಡ ಕ್ರೌರ್ಯದಿಂದ ಕಾರಾಗೃಹದಲ್ಲಿಟ್ಟು ಬಂಧನದಲ್ಲಿ ಕೊಳೆ ಹಾಕಿದ್ದನು. ಶ್ರೀ ಕೃಷ್ಣನು ಕಂಸನನ್ನು ಕೊಂದ ಕೂಡಲೇ ಮೊದಲು ಆ ಬಂದೀಖಾನೆಗೆ ಹೋಗಿ ಉಗ್ರಸೇನ ಮಹಾರಾಜನ ಬೇಡಿಗಳನ್ನು ಕಳಚಿ ಅವನನ್ನು ಬಂಧನದಿಂದ ಬಿಡುಗಡೆ ಮಾಡಿದನು. ಮತ್ತೂ ಆದರದಿಂದ ಕರೆತಂದು ಪ್ರೀತಿಯಿಂದ ಆಲಿಂಗಿಸಿಕೊಂಡನು. ಕಂಸನ ತರುವಾಯ ಆ ಮಥುರಾ ರಾಜ್ಯವನ್ನು ತಾನು ತೆಗೆದುಕೊಳ್ಳದೇ ಉಗ್ರಸೇನ ಮಹಾರಾಜನಿಗೇ ಒಪ್ಪಿಸಿಬಿಟ್ಟನು. ಅವನನ್ನು ಸಿಂಹಾಸನದ ಮೇಲೆ ಕೂಡಿಸಿ ಎಲ್ಲ ಯಾದವರೊಂದಿಗೆ ಸಂಭ್ರಮದಿಂದ ಅವನ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದನು. ಶ್ರೀ ಕೃಷ್ಣನಿಂದ ಪಟ್ಟಾಭಿಷಿಕ್ತನಾದ ಉಗ್ರಸೇನ ಮಹಾರಾಜನು ತನ್ನ ಮಗನಾದ ಕಂಸನ ಉತ್ತರ ಕ್ರಿಯೆಯನ್ನು ಯಥಾ ಸಾಂಗವಾಗಿ ಮಾಡಿದನು. ಆ ರಂಗ ಮಂಟಪದಲ್ಲಿ ಕೊಲ್ಲಲ್ಪಟ್ಟ ಎಲ್ಲ ಕಂಸನ ಅನುಜ ಅನುಯಾಯಿಗಳ ಔರ್ಧ್ವ ದೇಹಿಕ ಕ್ರಿಯಾ ಕಲಾಪಗಳನ್ನೂ ಮಾಡಿ ಮುಗಿಸಿದನು.

ಇಂತು ತನ್ನಿಂದ ಕರ್ತವ್ಯವಾದ ಉತ್ತರಕ್ರಿಯೆಗಳನ್ನೆಲ್ಲ ಮಾಡಿ ಮುಗಿಸಿ ಸಿಂಹಾಸನಾ ರೂಢನಾದ ಉಗ್ರಸೇನ ಮಹಾರಾಜನನ್ನು ಕುರಿತು ಶ್ರೀ ಕೃಷ್ಣನು ನುಡಿದನು. ''ಮಹಾರಾಜರೇ, ನಾನು ಏನು ಮಾಡಬೇಕು ! ಆಜ್ಞಾಪಿಸೋಣವಾಗಲಿ. ಯಯಾತಿ ಮಹಾರಾಜನ ಶಾಪದಿಂದ ನಮ್ಮ ಮನೆತನಕ್ಕೆ ರಾಜ್ಯಾಧಿಕಾರವಿಲ್ಲ. ಆದರೆ ನಾನು ನಿಮ್ಮ ದಾಸನಾಗಿ ಇರುವಾಗ ಬರೇ ಮಾನವರಿಂದ ಮಾತ್ರವಲ್ಲ, ದೇವತೆಗಳಿಂದಲೂ ಬೇಕಾದ ಕೆಲಸವನ್ನು ಮಾಡಿಸಬಹುದು. ಏನಾಗಬೇಕು ಅಪ್ಪಣೆಯಾಗಲಿ'' ಉಗ್ರಸೇನ ಮಹಾರಾಜನಿಗೆ ಹೀಗೆ ಹೇಳಿ ಕೃಷ್ಣನು ತನ್ನ ಮನಸ್ಸಿನಿಂದ ವಾಯುದೇವನನ್ನು ನೆನೆದನು. ಕೂಡಲೇ ಪವನನು ಅಲ್ಲಿಗೆ ಬಂದು ''ಏನಪ್ಪಣೆ ಪ್ರಭು'' ಎಂದು ಬೆಸಗೊಂಡನು. ಅದಕ್ಕೆ ಕೃಷ್ಣನು ''ವಾತದೂತ ! ಕೂಡಲೇ ನೀನು ಸ್ವರ್ಗ ಲೋಕಕ್ಕೆ ಹೋಗು. ಅಲ್ಲಿ ಅಮರಾವತಿಯಲ್ಲಿ ಆಳುತ್ತಿರುವ ಇಂದ್ರನಿಗೆ ಅವನ ಸುಧರ್ಮ ಸಭೆಯನ್ನು ನಮ್ಮ ಉಗ್ರಸೇನ ರಾಜನಿಗೆ ಕೊಡಲಿಕ್ಕೆ ಹೇಳು. ಒಣಗರ್ವವು ಸಾಕು. ಈ ಸುಧರ್ಮ ಸಭೆಯು ಒಂದು ಉತ್ತಮವಾದ ರತ್ನವಿದ್ದಂತೆ. ಅದು ಯಾದವರಿಗೆ ಸಭೆಯನ್ನು ನಡೆಸಲು ಈಗ ಬೇಕಾಗಿದೆ. ಕೃಷ್ಣನು ಅದನ್ನು ತೆಗೆದುಕೊಂಡು ಬರಲಿಕ್ಕೆ ಹೇಳಿದ್ದಾನೆ. ಕೂಡಲೇ ಕೊಡಬೇಕೆಂದು ತಿಳಿಸು.''

ವಾಯುವು ಶ್ರೀ ಕೃಷ್ಣನ ಆ ಅಣತಿಯನ್ನು ತಲೆಯಲಾಂತು ಸುರಪುರಕ್ಕೆ ನಡೆದನು. ಅಲ್ಲಿ ಶಚೀದೇವಿಯ ಗಂಡನನ್ನು ಕಂಡು ಶ್ರೀ ಕೃಷ್ಣನ ಆದೇಶವನ್ನು ತಿಳಿಸಿದನು. ಆಗ ಇಂದ್ರದೇವನು ಶ್ರೀ ಕೃಷ್ಣ ಆಜ್ಞೆಯನ್ನು ಶಿರಸಾ ಮಾನ್ಯಮಾಡಿ ಆ ಸುಧರ್ಮ ಸಭೆಯನ್ನು ಬೇಡಲು ಬಂದ ವಾಯುದೇವನ ಕೈಯಲ್ಲಿಯೇ ಕೊಟ್ಟು ಕಳಿಸಿದನು. ವಾಯುವು ತಂದ ಆ ದಿವ್ಯವಾದ ಸಭೆಯಲ್ಲಿ ಯಾದವ ಕುಲದ ಹಿರಿ ಕಿರಿಯರೆಲ್ಲರೂ ಕುಳಿತು ಶ್ರೀ ಕೃಷ್ಣನ ಬಾಹುಬಲದ ಆಶ್ರಯದಿಂದ ಆ ದೇವ ಭೋಗ್ಯವಾದ ಸುಧರ್ಮ ಸಭೆಯ ಸಕಲ ವಿಧವಾದ ಭೋಗಭಾಗ್ಯಗಳನ್ನು ಅನುಭವಿಸಿದರು.

## ಶ್ರೀ ರಾಮಕೃಷ್ಣರ ಗುರುಕುಲವಾಸ

ಮಹಾಜ್ಞಾನಿಯಾದ ಬಲದೇವನೂ, ಸಾಕ್ಷಾತ್ ಜ್ಞಾನಸ್ವರೂಪಿಯಾದ ಶ್ರೀ ಕೃಷ್ಣನೂ ಮತ್ತೊಬ್ಬರಲ್ಲಿ ವಿದ್ಯೆಯನ್ನು ಕಲಿಯಬೇಕೇ ? ಸರ್ವಜ್ಞರಾದ ಅವರಿಗೆ ತಿಳಿಯದ ವಿದ್ಯೆ ಯಾವದಿದೆ ! ಆದರೂ ಜಗತ್ತಿನಲ್ಲಿಯ ಜನರಿಗೆ ಗುರುಕುಲದಲ್ಲಿ ಇದ್ದು ವಿದ್ಯಾ ಅಧ್ಯಯನ ಮಾಡುವದರ ಆವಶ್ಯಕತೆಯನ್ನು ಒತ್ತಿ ಹೇಳಲಿಕ್ಕಾಗಿಯೂ ಎತ್ತಿ ಸಾರಲಿಕ್ಕಾಗಿಯೂ ಅವರಿಬ್ಬರೂ ಸಾಂದೀಪನಿ ಎಂಬ ಗುರುಗಳ ಮನೆಗೆ ಹೋದರು. ಸಾಂದೀಪನಿಮುನಿಗಳು ಆ ಕಾಲದಲ್ಲಿ 'ವೇದಮೂರ್ತಿ' ಎಂದೂ ಸರ್ವವಿದ್ಯಾಪಂಡಿತರೆಂದೂ ಪ್ರಸಿದ್ಧರಾಗಿದ್ದರು. ಅವರು ಹುಟ್ಟಿದ್ದು ಕಾಶೀ ಪಟ್ಟಣದಲ್ಲಾದರೂ ಸಂಸ್ಕೃತ ಪಾಠಶಾಲೆಯನ್ನು ಇಟ್ಟದ್ದು ಆವಂತೀ ನಗರದಲ್ಲಿ. ವಸುದೇವ ದೇವಕಿಯರು ಮಥುರಾ ಪಟ್ಟಣದಲ್ಲಿ ಉಗ್ರಸೇನ ಮಹಾರಾಜನ ಬೆಂಬಲದಿಂದ ಶ್ರೀ ರಾಮಕೃಷ್ಣರ ಉಪನಯನ ಮಹೋತ್ಸವವನ್ನು ಸಂಭ್ರಮದಿಂದ ನೆರವೇರಿಸಿದರು. ಅನಂತರ ಅವರಿಬ್ಬರೂ ಅವಂತೀ ಪಟ್ಟಣಕ್ಕೆ ಬಂದು ಸಾಂದೀಪನಿಯ ಶಿಷ್ಯರಾಗಿ ವೇದಾಭ್ಯಾಸವನ್ನು ಪ್ರಾರಂಭ ಮಾಡಿದರು. ಲೋಕ ಶಿಕ್ಷಣ ದಕ್ಷರಾದ ಆ ಶ್ರೀರಾಮ ಕೃಷ್ಣರು ಗುರುಕುಲದಲ್ಲಿ ಸೇವಾ ಶುಶ್ರೂಷಾದಿಗಳನ್ನು ಮಾಡುತ್ತ ಜಗತ್ತಿಗೆಲ್ಲ ಗುರುಕುಲದಲ್ಲಿ ಹೇಗೆ ಇರಬೇಕು ಎಂಬುದನ್ನು ತೋರಿಸಿಕೊಟ್ಟರು. ಅವರಿಬ್ಬರೂ ಈ ರೀತಿಯಾಗಿ ಗುರುಗಳ ಸೇವೆಯನ್ನು ಮಾಡುತ್ತ ವೇದ ವೇದಾಂಗಗಳನ್ನು ಓದಿದರು. ವೇದಾಂತ ಶಾಸ್ತ್ರಗಳನ್ನು ಕಲಿತರು. ಧನುರ್ವೇದವನ್ನು ಅಭ್ಯಸಿಸಿ ಅದರ ರಹಸ್ಯವನ್ನು ಅರಿತರು. ಹೀಗೆ ಶಸ್ತ್ರ ವಿದ್ಯೆ, ಶಾಸ್ತ್ರ ವಿದ್ಯೆ ಎರಡನ್ನೂ ಅವರು ಸಾಂದೀಪನಿ ಮುನಿಗಳಲ್ಲಿ ಓದಿ ಎಲ್ಲ ವಿದ್ಯೆಗಳಲ್ಲಿಯೂ ಸರ್ವ ಕಲಾಕೌಶಲ್ಯಗಳಲ್ಲಿಯೂ ಮಹಾ ಪಂಡಿತರಾದರು. ಶ್ರೀ ರಾಮಕೃಷ್ಣರು ಒಟ್ಟು ಗುರುಕುಲದಲ್ಲಿದ್ದದ್ದು ಅರವತ್ತು ನಾಲ್ಕು ದಿನಗಳು ಮಾತ್ರ. ಅಷ್ಟರಲ್ಲಿ ಅವರು ಗುರುಗಳಲ್ಲಿ ಕಲಿತದ್ದು, ನಾಲ್ಕು ವೇದ, ಆರು ವೇದಾಂಗ, ಆರು ಶಾಸ್ತ್ರ, ಹದಿನಾಲ್ಕು ವಿದ್ಯೆಗಳು, ಅರವತ್ತು ನಾಲ್ಕು ಕಲೆಗಳು. ಎಲ್ಲ ಶಸ್ತ್ರಾಸ್ತ್ರವಿದ್ಯೆ ಮತ್ತು ಅವುಗಳ ಪ್ರಯೋಗ, ಎರಡರಲ್ಲಿಯೂ ಅವರಿಗೆ ಪೂರ್ಣ ಪ್ರಭುತ್ವ ಬಂದಿತು.

ಇದನ್ನು ಕಂಡು ಅವುಗಳನ್ನು ಕಲಿಸಿದ ಸಾಂದೀಪನಿ ಮುನಿಗಳಿಗೆ ಅತ್ಯಂತ ಆಶ್ಚರ್ಯವಾಯಿತು. ಮತ್ತು ಸುದೃಢವಾದ ನಿಶ್ಚಯವೂ ಆಯಿತು - 'ಇವರಿಬ್ಬರೂ ಮನುಷ್ಯರು ಅಲ್ಲ' ಎಂದು ಸಾಕ್ಷಾತ್ ಸೂರ್ಯ ಚಂದ್ರರೇ ತಮ್ಮ ವಿದ್ಯಾ ಅಭ್ಯಾಸದ ನೆಪದಿಂದ ತಮ್ಮಲ್ಲಿ ಶಿಷ್ಯರಾಗಿ ಬಂದಿದ್ದಾರೆ ಎಂದು ಅವರಿಗೆ ಅನಿಸಿತು. ಅರವತ್ತೈದನೆಯ ದಿನ ರಾಮಕೃಷ್ಣರು ತಮ್ಮ ವಿದ್ಯಾ ಅಧ್ಯಯನವನ್ನೆಲ್ಲ ಪೂರ್ತಿ ಮುಗಿಸಿ ಗುರುಕುಲದಿಂದ ಹೊರಟು ನಿಂತರು. ಹೊರಡುವ ಮುನ್ನ ಅವರಿಬ್ಬರೂ ಸಾಂದೀಪನಿಗೆ ವಂದಿಸಿ ''ಪೂಜ್ಯರೇ, ತಾವು ಕಲಿಸಿದ ಅಪಾರವಾದ ಈ ವಿದ್ಯಾರಾಶಿಗೆ ನಾವು ಏನು ಪ್ರತಿಯಾಗಿ ಕೊಡಬಲ್ಲೆವು ! ಆದರೂ ಯಥಾಶಕ್ತಿ ತಮಗೆ ಗುರು ದಕ್ಷಿಣೆಯನ್ನು ಕೊಡಬೇಕೆಂದು ಮಾಡಿದ್ದೇವೆ. ತಮಗೆ ಏನು ಅಪೇಕ್ಷೆ ಇದೆ ಅಪ್ಪಣೆ ಆಗಲಿ' ಎಂದು ಕೇಳಿದರು. ರಾಮ ಕೃಷ್ಣರಿಬ್ಬರೂ ಮಾನವರ ಇಂದ್ರಿಯ ಅಗೋಚರವಾದ ಮಹಾಮಹಿಮೆಯುಳ್ಳವರೆಂದೂ ದೇವತಾ ಪುರುಷರೆಂದೂ ಸಾಂದೀಪನಿಗಳಿಗೆ ನಿಸ್ಸಂದೇಹವಾಗಿ ತಿಳಿದು ಹೋಗಿದ್ದಿತು.

ಎಂದಿನಿಂದಲೂ ಒಂದು ವೇದನೆ ಸಾಂದೀಪನಿ ದಂಪತಿಗಳ ಹೃದಯವನ್ನು ಕೊರೆಯುತ್ತಲೇ ಇತ್ತು. ಅವರಿಗಿದ್ದ ಒಬ್ಬನೇ ಒಬ್ಬ ಮಗನು ಪ್ರಭಾಸ ತೀರ್ಥದಲ್ಲಿ ಸಮುದ್ರ ಸ್ನಾನಕ್ಕೆ ಹೋದವನು ಮೇಲೆ ಏಳಲೇ ಇಲ್ಲ. ಮರಳಿ ಬರಲೇ ಇಲ್ಲ. ಸಮುದ್ರದಲ್ಲಿ ಮುಳುಗಿಸತ್ತ ಆ ಮಗನನ್ನು ನೆನೆದು ಅವರು ಅನುದಿನವೂ ಕಣ್ಣೀರು ಕರೆಯುತ್ತಿದ್ದರು. ''ಆ ಮಡಿದು ಹೋದ ಮಗನನ್ನು ಮರಳಿ ತಂದು ಕೊಡಬೇಕು'' ಎಂದು ಅವರು ರಾಮಕೃಷ್ಣರಿಗೆ ಹೇಳಿದರು. ತಕ್ಷಣವೇ ರಾಮಕೃಷ್ಣರು ಪ್ರಭಾಸ ಪಟ್ಟಣಕ್ಕೆ ಹೋಗಿ ಸಾಗರಕ್ಕೆ ಸಾಗರಬಿದ್ದು ಅದರ ಆಳಕ್ಕಿಳಿದರು. ಸಮುದ್ರ ರಾಜನು ಅವರಿಗೆ ಸ್ವಾಗತ ನೀಡಿದನು. ಸತ್ಕಾರ ಮಾಡಿದನು. ತನ್ನ ಬಳಿಯಲ್ಲಿ ಇರುವ ಅನೇಕ ಅನರ್ಘ್ಯ ರತ್ನಗಳನ್ನು ಕಾಣಿಕೆಯಾಗಿ ನೀಡಿದನು. ಮತ್ತು ಅವರು ತನ್ನಲ್ಲಿ ಬಂದ ಉದ್ದೇಶವನ್ನು ತಿಳಿದು ಹೀಗೆ ನುಡಿದ ''ಸಾಂದೀಪನಿ ಋಷಿಯ ಮಗನು ಮುಳುಗಿದಾಗ ಅಪಹರಿಸಿದವನು ನಾನಲ್ಲ. ಆದರೆ ನನ್ನ ಸಾಗರದ ಆಗರದಲ್ಲಿರುವ ಪಂಚಜನ ಎಂಬ ರಕ್ಕಸನು ಆ ಮುನಿ ಕುಮಾರನನ್ನು ಕದ್ದೊಯ್ದ ಕಳ್ಳ. ಅವನು ನನ್ನಲ್ಲಿಯೇ ಇದ್ದಾನೆ''. ಅದನ್ನು ಕೇಳಿ ಕೃಷ್ಣನು ಆ ಕಡಲಿನ ಒಡಲಿನಲ್ಲಿ ಹೊಕ್ಕು ಎಲ್ಲ ಕಡೆಗೂ ಹುಡುಕಾಡಿ, ತಳದವರೆಗೂ ತಳಕಾಡಿ ಪಂಚಜನನು ಇದ್ದಲ್ಲಿಗೆ ಬಂದನು. ಶ್ರೀ ಕೃಷ್ಣನು ಆ ದುಷ್ಟ ದೈತ್ಯನನ್ನು ಸಂಹರಿಸಿದನು. ಮತ್ತೂ ಅವನ ಎಲುಬಿನಿಂದ ನಿರ್ಮಿತವಾದ ಪಾಂಚಜನ್ಯ ಎಂಬ ಶಂಖವನ್ನು ತಾನು ತೆಗೆದುಕೊಂಡನು. ಆ ಪಾಂಚಜನ್ಯ ಶಂಖದಿಂದ ಮೊಳಗಿಬರುವ ಗಂಭೀರ ಧ್ವನಿಯನ್ನು ಕೇಳಿಯೇ ದೈತ್ಯರ ಜಂಘಾಬಲವು ಉಡುಗಿ ಹೋಗುತ್ತಿತ್ತು. ಅಧರ್ಮದ ಸದ್ದು ಅಡಗಿ ಹೋಗುತ್ತಿತ್ತು. ದೇವತೆಗಳ ತೇಜಸ್ಸು ಬೆಳೆಯುತ್ತಿತ್ತು. ಇಂಥ ಪಾಂಚಜನ್ಯ ಶಂಖವನ್ನು ಊದುತ್ತ ರಾಮಕೃಷ್ಣರು ಯಮದೇವರ ಪಟ್ಟಣವಾದ ಸಂಯಮನೀಪುರಕ್ಕೆ ನಡೆದರು. ಅಲ್ಲಿ ಸಾಂದೀಪನಿಯ ತನಯನು ಯಾತನಾಶರೀರದಿಂದ ತನ್ನ ಕರ್ಮ ಫಲವನ್ನು ಭೋಗಿಸುತ್ತಲಿದ್ದನು. ಅವನನ್ನು ಒಳ್ಳೇ ಮಾತಿನಿಂದ ತಮಗೆ ಕೊಡಲು ಯಮದೇವರು ಸಮ್ಮತಿಸದಿದ್ದಾಗ ಶ್ರೀ ಕೃಷ್ಣನು ಆ ಯಮಧರ್ಮನನ್ನು ನಿಗ್ರಹ ಮಾಡಿ ಗೆದ್ದು ಆ ಗುರುಪುತ್ರನನ್ನು ತೆಗೆದುಕೊಂಡು ಬಂದನು. ಮತ್ತು ಅವನಿಗೆ ಮೊದಲಿದ್ದಂತೆಯೇ ಪೂರ್ವದೇಹವನ್ನು ಒದಗಿಸಿ ಸಾಂದೀಪನಿಗಳಿಗೆ ಗುರುದಕ್ಷಿಣೆಯಾಗಿ ರಾಮಕೃಷ್ಣರು ಕೊಟ್ಟರು. ಅದನ್ನು ಕಂಡು ಸಾಂದೀಪನಿಯ ದಂಪತಿಗಳಿಗೆ ಕಳೆದು ಹೋದ ಜೀವವೇ ಮರಳಿ ಬಂದಂತೆ ಆಯಿತು. ಮೃತ್ಯುವಿನ ಮುಷ್ಟಿಯಿಂದ ಮುಕ್ತನಾಗಿ ಬಂದ ಆ ಮಗನಿಗಿಂತ ಮೊದಲು ಅವನನ್ನು ತಂದುಕೊಟ್ಟ ಕೃಷ್ಣನನ್ನೇ ಅವರು ಬಲವಾಗಿ ಬಿಗಿದಪ್ಪಿ ಹರ್ಷ ಪುಲಕಿತರಾಗಿ ''ಕೃಷ್ಣಾ, ನೀನು ನರನಲ್ಲ, ನಾರಾಯಣ'' ಎಂದು ಸಂತಸದುಂಬಿ ಹೇಳಿದರು. ಹೀಗೆ ಅಸಾಮಾನ್ಯವಾದ ಗುರುದಕ್ಷಿಣೆಯಿಂದ ಗುರುಗಳ ನೊಂದ ಹೃದಯಕ್ಕೆ ಕಂದನನ್ನು ತಂದುಕೊಟ್ಟು ಆನಂದವನ್ನುಂಟುಮಾಡಿ ಆ ಗೋವಿಂದ ಬಲರಾಮರಿಬ್ಬರು ಮಥುರಾ ಪಟ್ಟಣಕ್ಕೆ ಮರಳಿ ಬಂದರು. ಅವರನ್ನು ನೋಡಿ ಮಥುರೆಯ ಮಹಿಳೆಯರಿಗೆ ಹರ್ಷಪ್ರಕರ್ಷವಾದರೆ ಅಲ್ಲಿಯ ಗಂಡಸರಿಗೆಲ್ಲ ಉತ್ಸಾಹ ಉಲ್ಲಾಸಗಳುಂಟಾದವು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ತೊಂದನೇ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೨೨

**ಅಳಿಯ ಕಂಸನನ್ನು ಕೃಷ್ಣ ಕೊಂದನೆಂತೆಂದು ಮನದಿ ನೊಂದ ।**
**ಮಗಧರಾಜ ಉರಿದೆದ್ದು ಸೈನ್ಯದೊಡಗೂಡಿ ಏರಿ ಬಂದ ॥**
**ರಾಮಕೃಷ್ಣರತ್ಯುಗ್ರ ಅಸ್ತ್ರಗಳ ಘೋರ ಹೊಡೆತ ತಿಂದ ।**
**ಸೋತು ಮತ್ತೆ ಹದಿನೆಂಟುಬಾರಿ ನಿರ್ವಿಣ್ಣನಾಗಿ ನಿಂದ ॥**

ಕೃಷ್ಣನು ಕಂಸನನ್ನು ಕೊಂದುದನ್ನು ಕೇಳಿ ಜರಾಸಂಧನಿಗೆ ಬಹಳ ಕೋಪ ಬಂದಿತು. ಜರಾಸಂಧನು ಆಸ್ತಿ ಪ್ರಾಸ್ತಿ ಎಂಬ ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಕಂಸನಿಗೆ ಕೊಟ್ಟು ಮದುವೆ ಮಾಡಿದ್ದನು. ತನ್ನ ಅಳಿಯನನ್ನು ಕೃಷ್ಣನು ಬಂದು ಕೊಂದುದನ್ನು ಕೇಳಿ ಅವನ ಕೋಪ ಕೆರಳಿತು. ಮಗಧ ದೇಶದ ಅಧಿಪತಿಯಾದ ಆ ಜರಾಸಂಧನು ತನ್ನ ಪ್ರಚಂಡವಾದ ಸೇನೆಯನ್ನು ಕಟ್ಟಿಕೊಂಡು ಎಲ್ಲ ಯಾದವ ಸಹಿತವಾಗಿ ಕೃಷ್ಣನನ್ನು ಕೊಲ್ಲಬೇಕೆಂದು ಮಥುರಾಪಟ್ಟಣದ ಮೇಲೆ ಸಾಗಿ ಬಂದನು. ಆ ಮಗಧ ರಾಜನ ಇಪ್ಪತ್ಮೂರು ಅಕ್ಷೋಹಿಣೀ ಸೈನ್ಯವು ಮಥುರಾ ಪಟ್ಟಣಕ್ಕೆ ಬಲವಾದ ಮುತ್ತಿಗೆಯನ್ನು ಹಾಕಿತು. ಅದನ್ನು ಕಂಡು ಬಲರಾಮ ಹಾಗೂ ಕೃಷ್ಣರು ಭದ್ರವಾಗಿ ಕೋಟೆಯ ಬಾಗಿಲುಗಳನ್ನು ಹಾಕಿ ತಾವಿಬ್ಬರೇ ಪರಿಮಿತಿ ಪರಿವಾರದೊಂದಿಗೆ ಕೋಟೆಯಿಂದ ಹೊರಬಿದ್ದು ಜರಾಸಂಧನ ಸೇನಸಾಗರವನ್ನು ಎದುರಿಸಿದರು.

ಮೊದಲು ರಾಮಕೃಷ್ಣರು ತಮ್ಮ ಪುರಾತನವಾದ ಆಯುಧಗಳನ್ನು ನೆನೆದರು. ಕೂಡಲೇ ಶ್ರೀ ಹರಿಯ ಶಾಂರ್ಗಧನಸ್ಸು, ಬಾಣ, ಬತ್ತಳಿಕೆ, ಕೌಮೋದಕಿ ಎಂಬ ಗದೆ, ಎಲ್ಲವೂ ಮುಗಿಲಿನಿಂದ ಇಳಿದು ಬಂದವು. ಅದರಂತೆ ಬಲರಾಮದೇವರು ನೆನೆದ ಕೂಡಲೇ ಅವರ ಹಲ, ಮುಸಲ (ನೇಗಿಲ ವನಿಕೆ) ಎಂಬ ಎರಡು ಆಯುಧಗಳು ಆಕಾಶದಿಂದ ಬಂದವು. ಈ ತಮ್ಮ ಶಸ್ತ್ರಾಸ್ತ್ರಗಳಿಂದ ರಾಮಕೃಷ್ಣರಿಬ್ಬರೂ ಜರಾಸಂಧನ ಸೈನ್ಯವನ್ನೆಲ್ಲ ಹೊಡೆದಟ್ಟಿದರು. ಬಡೆದು ಪುಡಿಗಟ್ಟಿದರು. ಜರಾಸಂಧನ ಸೈನ್ಯವೆಲ್ಲವೂ ರಾಮಕೃಷ್ಣರ ಭೀಕರ ಶಸ್ತ್ರಾಸ್ತ್ರಗಳ ಘಾತ ಪ್ರತ್ಯಾಘಾತಗಳನ್ನು ಎದುರಿಸಲಾಗದೆ ಹೆದರಿ ಬೆದರಿ ಚದುರಿ ಚಿಪ್ಪಾಡಿಯಾಗಿ ಹೋಯಿತು. ರಾಮಕೃಷ್ಣರಿಬ್ಬರೂ ಜಯಶಾಲಿಗಳಾಗಿ ಮಥುರಾ ಪಟ್ಟಣವನ್ನು ಪ್ರವೇಶಮಾಡಿದರು.

ಆದರೆ ಶ್ರೀ ಕೃಷ್ಣನಿಗೆ ಮಾತ್ರ ಜರಾಸಂಧನು ಬದುಕಿ ಹೋದದ್ದರಿಂದ ಈ ಯುದ್ಧವು ಮುಗಿದಂತೆ ಆಗಲಿಲ್ಲ ಎನಿಸಿತು. ಅವನ ನಿರೀಕ್ಷೆ ಸುಳ್ಳಾಗಲಿಲ್ಲ. ಆ ಮಗಧರಾಜನು ಮುಂದೆ ಕೆಲವೇ ದಿನಗಳಲ್ಲಿ, ಮಥುರಾ ಪಟ್ಟಣದ ಮೇಲೆ ಸೈನ್ಯದೊಂದಿಗೆ ಏರಿಬಂದು ಮತ್ತೆ ಮುತ್ತಿಗೆ ಹಾಕಿದನು. ಆಗ ರಾಮಕೃಷ್ಣರು ಪುನಃ ಅವರೊಡನೆ ಸೆಣಸಿದರು. ಅವನ ಸೈನ್ಯವನ್ನೆಲ್ಲ ದಣಿಸಿದರು. ಜರಾಸಂಧನ ಗರ್ವವನ್ನು ಮಣಿಸಿದರು. ಮತ್ತೆ ಅವನನ್ನು ಸೋಲಿಸಿದರು. ಸೈನ್ಯಸಹಿತವಾಗಿ ಪುನಃ ಅವನನ್ನು ಹೊಡೆದು ಓಡಿಸಿದರು. ಮಥುರೆಯ ಮೇಲೆ ಕೆಲವು ದಿನಗಳ ಬಳಿಕ ಜರಾಸಂಧನು ಮತ್ತೆ ದಾಳಿ ಇಟ್ಟ. ಅಪರಂಪಾರ ಸೈನ್ಯವನ್ನು

ಕೂಡಿಸಿದ. ಮಥುರೆಗೆ ಲಗ್ಗೆ ಹತ್ತಿದ. ರಾಮಕೃಷ್ಣರಿಂದ ಮತ್ತೆ ಏಟಬಿದ್ದು ಮೆತ್ತಗಾಗಿ ಸತ್ತು ಕೆಟ್ಟು ಊರಿಗೆ ಮರಳಿದ. ಹೀಗೆ ಹದಿನೆಂಟುಬಾರಿ ಛಲವಾದಿಯಾದ ಆ ಜರಾಸಂಧನು ಮಥುರಾ ಪಟ್ಟಣದಮೇಲೆ ದಾಳಿ ಧೂಳಿ ಎಬ್ಬಿಸಿ ರಾಮಕೃಷ್ಣರೊಡನೆ ಹಣಾಹಣಿ ಹೋರಾಡಿದ. ಹೊಡೆತ ತಿಂದು ಗೋಳಾಡಿದ. ಈ ಹದಿನೆಂಟು ಯುದ್ಧಗಳಲ್ಲಿ ಒಮ್ಮೆಯೂ ಗೆಲವು ಜರಾಸಂಧನೆಡೆಗೆ ತನ್ನ ಒಲವು ತೋರಲಿಲ್ಲ. ಪ್ರತಿಸಲವೂ ಸೋಲು ಅವನ ಸೆರಗಿಗೇ ಅಂಟುತ್ತಿತ್ತು. ಹದಿನೆಂಟು ಪರಾಜಯಗಳು ಅವನ ಪದರಿಗೇ ಗಂಟು ಬಿದ್ದವು.

ಯಾದವರ ಬಲವು ಅತ್ಯಲ್ಪ. ಜರಾಸಂಧನ ಬಲವು ಅಪರಂಪಾರ. ಆದರೂ ಜಯಲಕ್ಷ್ಮಿಯು ಹದಿನೆಂಟುಬಾರೆ ಯಾದವರ ಕತ್ತಿನಲ್ಲಿಯೇ ತನ್ನ ಮಾಲೆ ಹಾಕಿದಳು. ಇದೆಲ್ಲವು ಕೃಷ್ಣನ ಮಹಿಮೆ. ಅವನ ಸನ್ನಿಧಾನದ ಪ್ರಭಾವ. ಇದೂ ಒಂದು ರೀತಿಯಿಂದ ಮಾನವನಾಗಿ ಅವತರಿಸಿದ ಆ ಮಹಾ ಪ್ರಭುವಿನ ಲೀಲೆಯ ಆವಿಷ್ಕಾರವೇ ಅಲ್ಲವೇ ! ಇಲ್ಲದಿದ್ದರೆ ಮನಸ್ಸಿನಿಂದಲೇ ಜಗತ್ತಿನ ಸೃಷ್ಟಿ ಸಂಹಾರಗಳನ್ನು ಮಾಡುವ ಪರಾಶಕ್ತಿ ರೂಪನಾದ ಆ ಭಗವಂತನು ಕೆಲವು ಪ್ರಾಣಿಗಳನ್ನು ಕೊಲ್ಲಲಿಕ್ಕಾಗಿ ಶಸ್ತ್ರಾಸ್ತ್ರಗಳನ್ನು ಎತ್ತುವ ಅವಶ್ಯಕತೆ ಏನಿದೆ! ವೈರಿಗಳನ್ನು ಕೊಲ್ಲಲಿಕ್ಕಾಗಿ ಇಷ್ಟೆಲ್ಲ ಯುದ್ಧದ ಸಿದ್ಧತೆಗಳನ್ನು ಅವನು ಏಕೆ ಮಾಡಬೇಕಾಗುವದು !

ಆದರೂ ಮಾನವನಾಗಿ ಅವತರಿಸಿದ ಅವನು ಮನುಷ್ಯ ಧರ್ಮವನ್ನೇ ಅನುಸರಿಸುತ್ತಾನೆ. ಬಲಿಷ್ಠರ ಜೊತೆಗೆ ಯುದ್ಧವನ್ನೂ ಹೂಡುತ್ತಾನೆ. ಸಾಮ, ಭೇದ, ದಾನ, ದಂಡಾದಿ ಎಲ್ಲ ಉಪಾಯಗಳನ್ನೂ ಮಾಡುತ್ತಾನೆ. ಒಮ್ಮೊಮ್ಮೆ ವೈರಿಗಳಿಗೆ ಹೆದರಿ ಓಡಿ ಹೋಗುವದೂ ಉಂಟು. ಯಾಕೆಂದರೆ ಅವನೂ ಮಾನವನಾಗಿ ಹುಟ್ಟಿದ ಬಳಿಕ ಮನುಷ್ಯರಂತೆ ವರ್ತಿಸಬೇಡವೇ ! ಒಟ್ಟಾರೆ ಎಲ್ಲವೂ ಅವನ ಲೀಲೆ. ಜಗತ್ತೆಲ್ಲವೂ ಅವನ ಇಚ್ಛೆಯಂತೆ ನಡೆಯುತ್ತದೆ.

*ಶ್ರೀ ವಿಷ್ಣು ಮಹಾಪುರಣದಲ್ಲಿನ ಪಂಚಮಾಂಶದ ಇಪ್ಪತ್ತೆರಡನೆಯ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೨೩

**ಕೃಷ್ಣನು ಕಡಲಿನ ಮಡಿಲಲಿ ದ್ವಾರಕ**
**ನಗರಿಯ ನಿರ್ಮಿಸಿ ನಿಲ್ಲಿಸಿದ.**
**ತನ್ನನು ಬೆನ್ನಟ್ಟಿದ ಕಾಲ್‌ಯವನನ**
**ಕಣ್ ಕಿಡಿಯಿಂದಲೇ ಕೊಲ್ಲಿಸಿದ.**
**ಗುಹೆಯಲಿ ಮಲಗಿದ ಆ ಮುಚಕುಂದನು**
**ಪ್ರಾರ್ಥನೆ ಮುಕುಂದಗೆ ಸಲ್ಲಿಸಿದ.**

ಒಂದು ದಿನ ಮಥುರಾ ಪಟ್ಟಣದಲ್ಲಿ ಯಾದವ ತರುಣರೆಲ್ಲರೂ ಗಪ್ಪಾಗೋಷ್ಠಿ ಹೊಡೆಯುತ್ತ ಕುಳಿತುಕೊಂಡಾಗ ಅಲ್ಲಿಗೆ ಗಾರ್ಗ್ಯಮುನಿಯು ಬಂದ. ಗಾರ್ಗ್ಯನು ಜಿತೇಂದ್ರಿಯನಾಗಿ ತನ್ನ ಮಡದಿಯ ಮೈಯನ್ನು ಕೂಡ ಮುಟ್ಟಿರಲಿಲ್ಲ. ಅದರಿಂದ ಮನನೊಂದ ಅವನ ಭಾವಮೈದುನನಾದ ಶಾಲನು ಗಾರ್ಗ್ಯನು ಷಂಢನಿದ್ದಾನೆ ಎಂದು ನುಡಿದ. ಅದನ್ನು ಕೇಳಿ ಆ ಗಾರ್ಗ್ಯನು ಅವಮಾನಿತನೂ, ಕುಪಿತನೂ ಆಗಿ ಅಲ್ಲಿಂದ ಹೊರಟು ದಕ್ಷಿಣಾಪಥಕ್ಕೆ ಬಂದು ಅಲ್ಲಿ ನಿಂತು ಮಹಾದೇವರನ್ನು ಕುರಿತು ತಪಸ್ಸನ್ನು ಆಚರಿಸಿದನು. ಅವನ ತಪಸ್ಸು ಅತ್ಯುಗ್ರವಾಗಿಯೇ ಸಾಗಿತು. ಯಾದವರನ್ನು ಸಂಹರಿಸತಕ್ಕಂಥ ಅತ್ಯಂತ ಶೂರನಾದ ಮಗನು ತನಗೆ ಜನಿಸಬೇಕೆಂದು ಹನ್ನೆರಡು ವರ್ಷ ಘೋರ ತಪೋನುಷ್ಠಾನ ಗೈದ. ಆ ಕಾಲದಲ್ಲಿ ಅವನು ಎಲ್ಲ ಆಹಾರವನ್ನೂ ಬಿಟ್ಟು ಬರೀ ಉಕ್ಕಿನ ಪುಡಿಯನ್ನೇ ಮುಕ್ಕುತ್ತಿದ್ದ.

ಈ ರೀತಿ ಹನ್ನೆರಡು ವರ್ಷ ಅತಿ ಘೋರ ತಪಶ್ಚರಣೆಯನ್ನು ಮಾಡಿದ ಬಳಿಕ ಶ್ರೀ ಮಹಾದೇವರು ಅವನಿಗೆ ಅಪೇಕ್ಷಿತವಾದ ವರವನ್ನಿತ್ತು ಅನುಗ್ರಹಿಸಿದರು. ವರ ಪಡೆದು ಗಾರ್ಗ್ಯನು ಮರಳಿ ಬರುವಾಗ ದಾರಿಯಲ್ಲಿ ಓರ್ವ ಯವನ ದೊರೆಯು ಅವನಿಗೆ ವಿಶೇಷ ಆದರ ಸತ್ಕಾರಗಳನ್ನು ಮಾಡಿ ಸಂತೋಷ ಪಡಿಸಿದ. ಆ ಯವನ ನೃಪನಿಗೆ ಮಕ್ಕಳಿದ್ದಿಲ್ಲ. ಸಂತಾನವನ್ನು ಕರುಣಿಸಬೇಕೆಂಬ ಅವನ ಬಿನ್ನಹವನ್ನು ಗಾರ್ಗ್ಯನಿಗೆ ಅಲ್ಲಗಳೆಯಲಿಕ್ಕಾಗಲಿಲ್ಲ. ಅವನ ಪ್ರಾರ್ಥನೆಯಂತೆ ಗಾರ್ಗ್ಯ ಮುನಿಯು ಆ ಯವನ ನರೇಶನ ಸುಂದರ ಮಡದಿಯೊಡನೆ ಕೂಡಿದನು. ಕಾಮಕೇಳಿಯಾಡಿದನು. ಅಮೋಘವೀರ್ಯನಾದ ಅವನು ಆ ಯವನ ರಮಣಿಗೆ ಒಂದು ಗಂಡು ಸಂತತಿಯನ್ನು ಕರುಣಿಸಿದನು. ಅವನೇ ಕಾಲಯವನ. ಯವನ ದೊರೆಯು ಕಾಲಯವನನ್ನು ದೊಡ್ಡವನಾದ ಬಳಿಕ ಅವನನ್ನೇ ತನ್ನ ರಾಜ್ಯದ ಗದ್ದುಗೆಯ ಮೇಲೆ ಕೂಡಿಸಿ ತಾನು ತಪೋನುಷ್ಠಾನಕ್ಕೆಂದು ಅರಣ್ಯಕ್ಕೆ ತೆರಳಿದನು. ಅನಂತರ ರಾಜ್ಯಾರೂಢನಾದ ಕಾಲಯವನನು ತನ್ನ ಪ್ರಾಯದುಂಬಿದ ಕಾಯದಲ್ಲಿ ಉಕ್ಕುತ್ತಲಿರುವ ಬಲಪೌರುಷಗಳಿಂದ ಸೊಕ್ಕಿ ಸಕಲ ವೈರಿಗಳನ್ನೂ ತಿಕ್ಕಿ ಮುಕ್ಕಿದನು. ಎಲ್ಲರೂ ಅವನಿಗೆ ಪಾದಾಕ್ರಾಂತರಾದ ಬಳಿಕ ಅವನ ಗರ್ವವು ಇನ್ನು ಉಬ್ಬಿ ಕೊಬ್ಬಿ ''ಯಾರನ್ನು ಹೊಡೆಯಲಿ ? ಯಾರನ್ನು ಬಡೆಯಲಿ ? ಯಾರನ್ನು ಗೆಲ್ಲಲಿ ? ಯಾರನ್ನು ಕೊಲ್ಲಲಿ ?''ಎನ್ನುತ್ತಿದ್ದ ಅವನು ತನ್ನ

ತೋಳತೀಟೆ ತೀರಿಸಿಕೊಳ್ಳಲಿಕ್ಕಾಗಿ ವೀರನನ್ನು ಹುಡುಕತೊಡಗಿದನು. ಒಂದು ದಿನ ಆಕಸ್ಮಾತ್ತಾಗಿ ಅವನಿಗೆ ನಾರದರ ದರ್ಶನವಾದಾಗ 'ಸ್ವಾಮಿ ಈಗ ಭೂಮಂಡಲದಲ್ಲಿ ನನ್ನೊಡನೆ ಹೋರಾಡಬಲ್ಲ ಶೂರರು ಯಾರಾದರೂ ಇರುವರೇ ! ಎಂದು ಕೇಳಿದನು. ಅದಕ್ಕೆ ನಾರದರು "ನಿನ್ನಂಥ ವೀರಪುರುಷನ ಜೊತೆಗೆ ಹೋರಾಡಲು ಯೋಗ್ಯರೆಂದರೆ ಈಗ ಭೂತಲದಲ್ಲಿ ಯಾದವರು ಮಾತ್ರ ಸಮರ್ಥರು" ಎಂದು ಹೇಳಿದರು. ದೇವಮುನಿಯ ಈ ಮಾತನ್ನು ಆಲಿಸಿ ಕಾಲಯವನನು ಕೂಡಲೇ ತನ್ನ ಕೋಟ್ಯಾವಧಿ ಮ್ಲೇಂಛ ವೀರರೊಡನೆ ಒಡಗೂಡಿ ಚತುರಂಗ ಸೇನಾಸಾಗರವನ್ನು ಸಾಗಿಸಿಕೊಂಡು ಮಥುರಾ ಪಟ್ಟಣದೆಡೆಗೆ ನಡೆದನು.

ಬೇಹುಗಾರರಿಂದ ಕೃಷ್ಣನಿಗೆ ಸಮಾಚಾರ ಬಂದಿತು ಅಸಂಖ್ಯಸೇನಾ ಸನ್ನಾಹದೊಂದಿಗೆ ಯವನರಾಜನು ಮಥುರಾಪಟ್ಟಣದ ಮೇಲೆ ಏರಿಬರುತ್ತಲಿದ್ದಾನೆ ಎಂದು. ಕೃಷ್ಣನಿಗೆ ಯೋಚನೆಗಿಟ್ಟಿತು. "ಈಗ ಏನುಮಾಡುವದು !" ಜರಾಸಂಧನ ಜೊತೆಗೆ ಹದಿನೆಂಟು ಬಾರಿ, ಬಾರಿ ಬಾರಿಗೂ ಯುದ್ಧಮಾಡಿ ಯಾದವರ ಸೈನ್ಯವೆಲ್ಲವೂ ಕ್ಷೀಣವೂ ನಿತ್ರಾಣವೂ ಆಗಿದ್ದಿತು. ಮೇಲಾಗಿ ಈ ಕಾಲಯವನನ ಸೇನೆ ಜರಾಸಂಧನ ಸೇನೆಯಂತೆ ಯುದ್ಧಮಾಡಿ ಹಣ್ಣಾದದ್ದಲ್ಲ. ಇನ್ನೂ ಕಾದಿಟ್ಟ ಸೈನ್ಯದಿಂದ ಹೊಸಹುರುಪಿನಿಂದ ಹೋರಾಡುವ ಶಕ್ತಿ ಸಂಪನ್ನವಾದ ಸೈನ್ಯವಾಗಿದೆ. ಮತ್ತು ನಾವಿತ್ತ ಕಡೆ ಕಾಲಯವನ ಜೊತೆಗೆ ಕದನವಾಡ ತೊಡಗಿದಾಗ ಅತ್ತ ಜರಾಸಂಧನೂ ತನ್ನ ಪ್ರಚಂಡ ಸೈನ್ಯದೊಂದಿಗೆ ನಮ್ಮ ಮೇಲೆ ಎರಗಿ ಯಾದವರನ್ನು ಹಣೆಯುವನು. ನಾವು ಅತ್ತ ತಿರುಗಿ ಜರಾಸಂಧನ ಜೊತೆಗೆ ಹೋರಾಡ ತೊಡಗಿದರೆ ಇತ್ತ ಕಾಲಯವನನು ಬೆನ್ನ ಮೇಲೆ ಬಂದು ಯಾದವರ ವಂಶವನ್ನೇ ಧ್ವಂಸಮಾಡಿ ಒಗೆಯುವನು. ಆದುದರಿಂದ ಈಗೇನು ಉಪಾಯ ! ಎಲ್ಲಿ ಹೋದರೂ ಯಾದವರಿಗೆ ಗಂಡಾಂತರ. ಇತ್ತ ಪುಲಿ ಅತ್ತ ದರಿ. ಇದಕ್ಕಾಗಿ ನಾನೊಂದು ಉಪಾಯ ಮಾಡುವೆ. ಯಾರಿಗೂ ಭೇದಿಸಲಿಕ್ಕೆ ಅಶಕ್ಯವಾದ ದುರ್ಗವೊಂದನ್ನು ರಚಿಸಿ ಬಿಡುತ್ತೇನೆ. ಅಚ್ಛೇದ್ಯ ಅಭೇದ್ಯವಾದ ಆ ಭದ್ರ ಕೋಟೆಯಲ್ಲಿ ಕುಳಿತು ಬರೀ ಹೆಣ್ಣು ಮಕ್ಕಳು ಹುಡುಗರೇ ಆಡಾಡುತ್ತ ಯುದ್ಧ ಮಾಡಬಹುದು. ಅಂದರೆ ನನಗೂ ನಿಶ್ಚಿಂತೆಯಾಗುವದು.

ನಾನು ಬೇರೆಲ್ಲಿಯಾದರೂ ಹೋದರೆ, ವಿಶ್ರಾಂತಿಗಾಗಿ ಒರಗಿದರೆ, ಅಥವಾ ಕಾರ್ಯಾಂತರದಲ್ಲಿ ಮೈಮರೆತರೆ ಯಾರೂ ಯಾದವರನ್ನು ಆಕ್ರಮಿಸಿದಂತೆ ಒಂದು ಗಟ್ಟಿಮುಟ್ಟಿಯಾದ ಅಚ್ಛೇದ್ಯ ಅಭೇದ್ಯವಾದ ಕೋಟೆಯನ್ನು ನಿರ್ಮಿಸುವೆನು. ಹೀಗೆ ಸಂಕಲ್ಪಗೈದು ಶ್ರೀ ಕೃಷ್ಣನು ಸಮುದ್ರದೊಳಗಿಂದ ಹನ್ನೆರಡು ಯೋಜನ ಸ್ಥಳವನ್ನು ಪಡೆದನು. ಅದರಲ್ಲಿ ಇಂದ್ರನ ಅಮರಾವತಿಯಂತೆ ಅತ್ಯಂತ ಸುಂದರವಾದ ಒಂದು ದಿವ್ಯ ನಗರವನ್ನು ನಿರ್ಮಿಸಿದನು. ಅದರಲ್ಲಿ ನೂರು ತಿಳಿನೀರಿನ ಸರೋವರಗಳು ಕಂಗೊಳಿಸುತ್ತಲಿದ್ದವು. ಅನೇಕ ನಂದನವನದಂಥ ಸುಂದರವಾದ ಉಪವನಗಳು ಅರಳು ಮೊಗ್ಗೆಗಳಿಂದ ಸೌರಭವನ್ನು ಸೂಸುತ್ತಲಿದ್ದವು. ನಗರದ ಒಳಗೂ, ಹೊರಗೂ ಹಸಿರು

ಮುರಿಯುವ ಹುಲ್ಲು ಹಾಸಿಗೆಗಳು. ಹೂ-ಹಣ್ಣುಗಳ ಭಾರದಿಂದ ತುಂಬಿ ತೊನೆದಾಡುವ ತರು-ರಾಜಿಗಳು. ಸಾಲುಸಾಲಾಗಿ ಕಂಗೊಳಿಸುವ ಮುಗಿಲಿಗೆ ಮುತ್ತಿಡುವ ಎತ್ತರದ ಕಟ್ಟಡಗಳಿಂದ ಆ ದ್ವಾರಕಾ ಪಟ್ಟಣವು ಸಮುದ್ರದ ಸಲಿಲ ರಾಶಿಯ ನಡುವೆ ಅರಳಿ ನಿಂತ ಇಂದ್ರಪುರಿಯಂತೆ ಶೋಭಿಸುತ್ತಲಿತ್ತು. ಶ್ರೀ ಕೃಷ್ಣನು ಮಥುರಾ ಪಟ್ಟಣದಲ್ಲಿದ್ದ ಎಲ್ಲ ಜನರನ್ನೂ ತನ್ನ ನವನಿರ್ಮಿತವಾದ ಈ ದ್ವಾರಕಾಪುರಿಗೆ ತಂದು ಭದ್ರವಾಗಿರಿಸಿದನು. ಇತ್ತ ಕಾಲಯವನನು ತನ್ನ ಪ್ರಚಂಡ ಸೇನಾಸಾಗರವನ್ನೆಳೆಯುತ್ತ ಮಥುರಾ ಪಟ್ಟಣದ ಸಮೀಪಕ್ಕೆ ಬರುವಷ್ಟರಲ್ಲಿ ಕೃಷ್ಣನು ದ್ವಾರಕೆಯಿಂದ ಮಥುರಾಪುರಿಗೆ ಬಂದು ಅದರ ದ್ವಾರವನ್ನು ಭದ್ರಪಡಿಸಿದನು. ಕಾಲಯವನನು ಬಂದು ಆ ಮಥುರಾ ಪುರಿ ಸುತ್ತ ಬಿಗಿಯಾದ ಮುತ್ತಿಗೆಯನ್ನು ಹಾಕಿ ಕುಳಿತನು.

ಆಗ ಕೃಷ್ಣನು ಒಬ್ಬೊಂಟಿಗನಾಗಿ ಮಥುರಾಪಟ್ಟಣದಿಂದ ಹೊರಬಿದ್ದನು. ಅವನ ಕೈಯಲ್ಲಿ ಒಂದೂ ಆಯುಧವಿರಲಿಲ್ಲ. ಮಥುರೆಯಿಂದ ಹೊರಬಿದ್ದು ನಿರಾಯುಧನಾಗಿ ಭರದಿಂದ ಹೊರಟಿರುವ ಕೃಷ್ಣನನ್ನು ಕಂಡು, ಕಾಲಯವನನು ಅವನನ್ನು ಹಿಡಿಯಬೇಕೆಂದು ತಾನೂ ಅವನ ಹಿಂದಿನಿಂದ ಓಡಹತ್ತಿದನು. ಮಹಾಯೋಗಿಗಳ ಮನೋಯೋಗಕ್ಕೂ ನಿಲುಕದ ಆ ಕೃಷ್ಣನು ಈ ಕಾಲಯವನನಂಥ ಖಳಪುರುಷನಿಗೆ ದೊರಕುವನೇ? ಆದರೂ ಆ ಕಾಲಯವನನು ಅವನನ್ನು ಬೆನ್ನಟ್ಟಿ ನಡೆದನು. ಮುಂದೆಮುಂದೆ ಹರಿಣದಂತೆ ಚಪಲಚರಣನಾದ ಕೃಷ್ಣ ಅವನ ಹಿಂದೆ ಏದುತ್ತ ತೇಕುತ್ತ ಸಾಗಿದ ಕಾಲಯವನ. ಕೃಷ್ಣನಿಗೂ ಇದು ಒಂದು ಸಹಜವಾದ ಆಟ. ಕಾಲಯವನನಿಗೆ ಈ ಓಟ ನಾಗಾಲೋಟವೆನಿಸಿ ಅವನ ಕಾಲುಗಳು ಸೋತು ಸುಣ್ಣವಾದವು.

ಕೊನೆಗೆ ಕೃಷ್ಣನು ಒಂದು ದೊಡ್ಡ ಗುಹೆಯಲ್ಲಿ ಪ್ರವೇಶಿಸಿದನು. ಅವನ ಬೆನ್ನ ಹಿಂದೆಯೇ ಕಾಲಯವನನು ಆ ಗವಿಯಲ್ಲಿ ಹೊಕ್ಕನು. ಆ ಗುಹೆಯಲ್ಲಿ ಪ್ರವೇಶಿಸಿದ ಕೂಡಲೇ ಕಾಲಯವನನ ಕಣ್ಣಿಗೆ ಹಾಸಿಗೆ ಹಾಸಿಕೊಂಡು ಸುಖನಿದ್ರೆಯಲ್ಲಿ ಪವಡಿಸಿದ ಮುಚುಕುಂದ ಮಹಾರಾಜನು ಕಾಣಿಸಿದನು. ಕಾಲಯವನನಿಗೆ ಕೃಷ್ಣನೇ ತನ್ನ ಕಣ್ಣು ತಪ್ಪಿಸಿಕೊಂಡು ಓಡಿಬಂದು ಮಲಗಿಕೊಂಡಿದ್ದಾನೆನಿಸಿತು. ಕೂಡಲೇ ಅವನು ದುರ್ಬುದ್ಧಿಯಿಂದ ಮಲಗಿದವನನ್ನು ಜಾಡಿಸಿ ಒದ್ದು ಬಿಟ್ಟನು. ಅದರಿಂದ ಮುಚಕುಂದ ಮಹಾರಾಜನಿಗೆ ನಿದ್ರಾಭಂಗವಾಗಿ ಅವನು ಒಮ್ಮೆಲೇ ಎದ್ದು ಕುಳಿತನು. ತನ್ನನ್ನು ಕಾಲಿನಿಂದ ಒದ್ದು ನಿದ್ದೆಗೇಡಿಮಾಡಿದ ಬುದ್ಧಿಗೇಡಿಯು ಯಾವನೆಂದು ಅವನು ಕಣ್ಣಾಡಿಸಿ ನೋಡಿದನು. ಮೊದಲು ಅವನ ಕಣ್ಣಿಗೆ ಬಿದ್ದ ವ್ಯಕ್ತಿ ಕಾಲಯವನ. ಆಯಿತು ಕಾಲಯವನನ ಅವಸ್ಥೆ. ಮುಚಕುಂದ ಮಹಾರಾಜನ ಕೋಪೋದ್ದೀಪಿತವಾದ ಕಣ್ಣಿನಿಂದ ಕಿಡಿ ಹಾರಿದವು. ಬೆಂಕಿಯು ಭುಗಿಲ್ಲೆಂದಿತು. ಅದರಿಂದ ಅರೆಚಣದಲ್ಲಿ ಕಾಲಯವನನು ಸುಟ್ಟು ಬೂದಿಯಾಗಿಬಿದ್ದನು. ಹಿಂದಕ್ಕೆ ದೇವದಾನವರಲ್ಲಿ ಘನಘೋರವಾದ ಸಮರವು ಮಸಗಿತು. ಆ ಯುದ್ಧದಲ್ಲಿ ದೇವತೆಗಳಿಗೆ ಸಹಾಯಮಾಡಬೇಕೆಂದು ಮುಚಕುಂದ ಮಹಾರಾಜ ದೈತ್ಯರ ವಿರುದ್ಧ ಕಾದಿದನು. ಅಸುರರನ್ನೆಲ್ಲ ಕೊಂದನು. ದೇವತಾ ಪಕ್ಷಕ್ಕೆ

ಗೆಲುವನ್ನು ತಂದನು. ಆದರಿಂದ ಅವನಿಗೆ ದಣಿವಾಗಿ ಅವನು ದೇವತೆಗಳಿಗೆ ನಿದ್ರೆಯ ವರವನ್ನು ಕೇಳಿದನು. ಆಗ ದೇವತೆಗಳು ಅವನಿಗೆ ಚಿರನಿದ್ರೆಯ ವರವನ್ನಿತ್ತು 'ನೀನು ಮಲಗಿದಾಗ ಯಾವನು ಎಬ್ಬಿಸುವನೋ ಅವನು ತಕ್ಷಣದಲ್ಲಿ ನಿನ್ನ ನೇತ್ರಾಗ್ನಿಯಿಂದ ಸುಟ್ಟು ಬೂದಿಯಾಗುವನು' ಎಂದು ಹೇಳಿದರು. ದೇವತೆಗಳ ವರದಿಂದ ಮುಚಕುಂದ ಮಹಾರಾಜನು ಭೂಲೋಕಕ್ಕೆ ಬಂದು ಒಂದು ಪರ್ವತದ ಗುಹೆಯಲ್ಲಿ ಮಲಗಿ ನಿದ್ರಿಸುತ್ತಿದ್ದನು. ಇದನ್ನೆಲ್ಲ ತಿಳಿದ ಸರ್ವಜ್ಞದೇವನಾದ ಶ್ರೀ ಕೃಷ್ಣಪ್ರಭು ಕಾಲಯವನನನ್ನು ಆ ಗಿರಿ ಗುಹೆಗೆ ಎಳೆದು ತಂದು ಮುಚಕುಂದ ಮಹಾರಾಜನ ನೇತ್ರಾಗ್ನಿಯಿಂದ ಸುಟ್ಟು ಬೂದಿಯಾಗುವಂತೆ ಮಾಡಿದನು. ಅನಂತರ ಮುಚಕುಂದ ಮಹಾರಾಜನು ಅಲ್ಲಿಯೇ ನಿಂತುಕೊಂಡ ಶ್ರೀ ಕೃಷ್ಣನನ್ನು ನೋಡಿ ನೀನು ಯಾರು ಎಂದು ಕೇಳಿದನು. ಅದಕ್ಕೆ ಮಧುಸೂದನನು. ''ಚಂದ್ರವಂಶದ ಯದು ಕುಲದಲ್ಲಿ ಜನಿಸಿದ ನನಗೆ ವಾಸುದೇವ ಎಂದು ಹೆಸರು'' ಎಂದು ಹೇಳಿದನು.

ವಾಸುದೇವ ಎಂಬ ಹೆಸರು ಕೇಳಿದ ಕೂಡಲೆ ಆ ಮುಚಕುಂದ ಮಹಾರಾಜನಿಗೆ ತಾನು ಈ ನಿದ್ರಾ ಸಮಾಧಿಯನ್ನು ತೆಗೆದುಕೊಳ್ಳುವದಕ್ಕಿಂತ ಮೊದಲು ಮುದುಕನಾದ ಗಾರ್ಗ್ಯ ಮುನಿಯು ಹೇಳಿದ ಮಾತು ಸ್ಮರಣಕ್ಕೆ ಬಂದಿತು. ಮತ್ತು ತನ್ನ ಎದುರಿಗೆ ನಿಂತ ವ್ಯಕ್ತಿಯು ಸರ್ವೇಶ್ವರನಾದ ಶ್ರೀ ಹರಿಯು ಎಂದು ನಿಶ್ಚಯವಾಯಿತು.

ಕೂಡಲೇ ಅವನು ಎದ್ದು ಕೃಷ್ಣನ ಎರಡೂ ಪಾದಗಳನ್ನು ಗಟ್ಟಿಯಾಗಿ ಹಿಡಿದು ''ಸ್ವಾಮಿ, ಈಗ ನನಗೆ ತಿಳಿದಂತಾಯಿತು ನೀನು ಸಾಕ್ಷಾತ್ ಪರಮೇಶ್ವರ ಎಂದು. ಹಿಂದೆ ಗಾರ್ಗ್ಯ ಮುನಿಗಳು ಇಪ್ಪತ್ತೆಂಟನೇ ದ್ವಾಪರಯುಗದಲ್ಲಿ ಮಹಾವಿಷ್ಣುವು ಶ್ರೀ ಕೃಷ್ಣನಾಗಿ ಅವತಾರ ಮಾಡುವನು ಎಂದು ಹೇಳಿದ್ದರು. ಆ ಮಹಾಮುನಿಗಳ ವಚನವು ಇಂದು ನಿಜವಾಗಿದೆ. ದ್ವಾಪರಯುಗದ ಈ ಕೊನೆಯ ಭಾಗದಲ್ಲಿ ಯದುವಂಶದಲ್ಲಿ ಅವತಾರ ಮಾಡಿದ ಆ ಸಾಕ್ಷಾತ್ ಶ್ರೀ ಹರಿಯೇ ನೀನು. ಮಾನವರಿಗೆ ಉಪಕಾರ ಮಾಡಲಿಕ್ಕಾಗಿಯೇ ಈ ನಿನ್ನ ಅವತಾರ. ನಿನ್ನತೇಜಸ್ಸನ್ನು ನೋಡಿದರೆ ನನ್ನ ಕಣ್ಣು ಕುಕ್ಕುತ್ತವೆ. ನೀನು ಹೆಜ್ಜೆ ಇರಿಸಿದರೆ ನೆಲ ನಡುಗುತ್ತದೆ. ಮಾತನಾಡಿದರೆ ಮೇಘ ಗುಡುಗುತ್ತದೆ. ದೇವಾಸುರ ಯುದ್ಧದಲ್ಲಿ ಹಿಂದೆ ನಿನ್ನ ತೇಜಸ್ಸನ್ನು ದೈತ್ಯ ವೀರರು ಸಹಿಸದೆ ಹೋದರು. ಇಂಥ ಮಹಾ ತೇಜಸ್ವಿಯಾದ ನನಗೂ ಕೂಡ ನಿನ್ನ ತೇಜಃ ಪ್ರಕರ್ಷವನ್ನು ಈಗ ಸಹಿಸಲಿಕ್ಕಾಗಲೊಲ್ಲದು.

''ಸಂಸಾರ ಪತಿತಸ್ಯೈಕೋ ಜಂತೋಸ್ತ್ವಂ ಶರಣಂ ಪರಂ ।
ಪ್ರಸೀದ ತ್ವಂ ಪ್ರಪನ್ನಾರ್ತಿಹರ ನಾಶಯ ಮೇಽಶುಭಮ್
ಮಯಾ ಸಂಸಾರ ಚಕ್ರೇಽಸ್ಮಿನ್ ಭ್ರಮತಾ ಭಗವನ್ ಸದಾ
ತಾಪತ್ರಯಾಭಿಭೂತೇನ ನ ಪ್ರಾಪ್ತಾ ನಿರ್ವೃತಿಃ ಕ್ವಚಿತ್ ॥
ದುಃಖಾನ್ಯೇವ ಸುಖಾನೀತಿ ಮೃಗತೃಷ್ಣಾ ಜಲಾಶಯಾ
ಮಯಾ ನಾಥ ಗೃಹೀತಾನಿ ತಾನಿ ತಾಪಾಯ ಮೇಽ ಭವನ್

ರಾಜ್ಯಮುರ್ವೀ ಬಲಂ ಕೋಶೋ ಮಿತ್ರಪಕ್ಷಸ್ತಥಾತ್ಮಜಾಃ ।
ಭಾರ್ಯಾ ಭೃತ್ಯಜನೋ ಯೇ ಚ ಶಬ್ದಾದ್ಯಾ ವಿಷಯಾಃ ಪ್ರಭೋ ॥

ಸುಖಬುದ್ಧ್ಯಾ ಮಯಾ ಸರ್ವಂ ಗೃಹೀತಮಿದಮವ್ಯಯ ।
ಪರಿಣಾಮೇ ತದೇವೇಶ ತಾಪಾತ್ಮಕಮಭೂವನ್ ಮಮ ॥

ದೇವಲೋಕಗತಿಂ ಪ್ರಾಪ್ತೇ ನಾಥ ದೇವಗಣೋಪಿ ಹಿ
ಮತ್ತಃ ಸಾಹಾಯ್ಯ ಕಾಮೋಽಭೂತ್ ಶಾಶ್ವತೀ ಕುತ್ರ ನಿರ್ವೃತಿಃ॥

ತ್ವಾಮನಾರಾಧ್ಯ ಜಗತಾಂ ಸರ್ವೇಷಾಂ ಪ್ರಭವಾಸ್ಪದಮ್
ಶಾಶ್ವತೀ ಪ್ರಾಪ್ಯತೇ ಕೇನ ಪರಮೇಶ್ವರ ನಿರ್ವೃತಿಃ ॥

ತ್ವನ್ಮಾಯಾ ಮೂಢ ಮನಸೋ ಜನ್ಮ ಮೃತ್ಯುಜರಾದಿಕಮ್ ।
ಅವಾಪ್ಯ ತಾಪಾನ್ ಪಶ್ಯಂತಿ ಪ್ರೇತರಾಜಮನಂತರಮ್ ॥

ತತೋ ನಿಜ-ಕ್ರಿಯಾ-ಸೂತಿ-ನರಕೇಷ್ವತಿ ದಾರುಣಮ್
ಪ್ರಾಪ್ನುವಂತಿ ನರಾ ದುಃಖಮಸ್ವರೂಪವಿದಸ್ತವ ॥

ಅಹಮತ್ಯಂತ ವಿಷಯೈಃ ಮೋಹಿತಸ್ತವ ಮಾಯಯಾ ।
ಮಮತ್ವ ಗರ್ವಗರ್ತಾಂತಭ್ರಮಾಮಿ ಪರಮೇಶ್ವರ ॥
ಸೋಽಹಂ ತ್ವಾಂ ಶರಣಪಾರಮಪ್ರಮೇಯ

ಸಂಪ್ರಾಪ್ತಃ ಪರಮಪದಾಯ ತೇನಕಿಂಚಿತ್।
ಸಂಸಾರ ಭ್ರಮ ಪರಿತಾಪತಪ್ತಚೇತಾ ನಿರ್ವಾಣೇ ಪರಿಣತಧಾಮ್ನಿ ಸಾಭಿಲಾಷಃ ॥

ಸಂಸಾರ ಚಕ್ರದಲ್ಲಿ ಬಿದ್ದ ಪ್ರಾಣಿಗೆ ನೀನೊಬ್ಬನೇ ಮುಖ್ಯ ಆಧಾರನಾಗಿರುವೆ. ಶರಣಾಗತರ ದುಃಖವನ್ನು ನಾಶಮಾಡತಕ್ಕ ಶ್ರೀ ಕೃಷ್ಣನೇ! ನೀನು ನನ್ನ ಅಮಂಗಳವನ್ನೆಲ್ಲ ನಾಶಗೊಳಿಸು. ಭಗವನ್ ಈ ಸಂಸಾರ ಚಕ್ರದಲ್ಲಿ ತಿರುಗತಕ್ಕಂಥ ಮತ್ತು ತಾಪತ್ರಯಗಳಿಂದ ದುಃಖಿತನಾದ ನಾನು ಈವರೆಗೆ ಎಲ್ಲಿಯೂ ಶಾಂತಿಯನ್ನು ಹೊಂದಲಿಲ್ಲ. ನಾನು ಈವರೆಗೆ ದುಃಖವನ್ನೇ ಸುಖವೆಂದು ಭ್ರಮಿಸಿದೆ, ನೀರೆಂದು ಬಿಸಿಲುಗುದುರೆಯ ಬೆನ್ನು ಹತ್ತಿ ಓಡಿದೆ. ನಾನು ಹಿಡಿದುದೆಲ್ಲವೂ ನನಗೆ ತಾಪಕ್ಕೆ ಕಾರಣವಾಯಿತು. ರಾಜ್ಯ, ನೆಲ, ಬಲ, ಸಂಪತ್ತು, ಗೆಳೆಯರು, ಮಕ್ಕಳು, ಮಡದಿ, ಸೇವಕರು ಮತ್ತೂ ಶಬ್ದಾದಿ ವಿಷಯಗಳೂ ಇವೆಲ್ಲವೂ ಸುಖ ಭ್ರಾಂತಿಯಿಂದ ಸಂಪಾದಿಸಲ್ಪಟ್ಟವು. ಆದರೆ ಪರಿಣಾಮದಲ್ಲಿ ಇದಾವುದರಿಂದಲೂ ನನಗೆ ಶಾಂತಿ ದೊರೆಯದೆ ಮನಸ್ಸಿಗೆ ತಾಪಮಾತ್ರ ಉಂಟಾಯಿತು. ಇದೆಲ್ಲವನ್ನೂ ತೊರೆದು ನಾನು ದೇವಲೋಕಕ್ಕೆ ಹೋದರೂ ನನಗೆ ಈ ದುಃಖವು ತಪ್ಪಲಿಲ್ಲ. ಅಲ್ಲಿಯ ದೇವತೆಗಳೂ ಕೂಡ ಆರ್ತರಾಗಿ ನನಗೇ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಅಂದ ಬಳಿಕ ಆ ದೇವತೆಗಳಿಂದ ನನಗೆಲ್ಲಿ ಸುಖ ಶಾಂತಿಗಳು ದೊರಕಬೇಕು? ಎಲ್ಲ ಜಗತ್ತಿನ

ಸೃಷ್ಟಿಕರ್ತನಾದ ನಿನ್ನನ್ನು ಆರಾಧಿಸದೆ ಶಾಶ್ವತವಾದ ಶಾಂತಿಯನ್ನು ಯಾರು ಪಡೆದಿದ್ದಾರೆ ? ನಿನ್ನ ಮಾಯೆಯಿಂದ ಮೂಢರಾಗಿ ಅರಿವು ಗೆಟ್ಟ ಮರುಳು ಮಾನವರು ಜನನ, ಮರಣ, ಮುಪ್ಪು, ಮುಂತಾದ ತಾಪಗಳನ್ನು ಹೊಂದಿ ಕೊನೆಗೆ ಯಮರಾಜನನ್ನು ಕಾಣುವರು. ನಿನ್ನ ಸ್ವರೂಪವನ್ನು ತಿಳಿಯದ ಅಜ್ಞ ಜನರು ಅನೇಕ ಪಾಪ ಕರ್ಮಗಳನ್ನು ಮಾಡಿ ನರಕದಲ್ಲಿ ಘೋರ ದುಃಖವನ್ನು ಹೊಂದುವರು. ಪರಮೇಶ್ವರನೇ ! ನಿನ್ನ ಮಾಯೆಯಿಂದ ಮೋಹಿತನಾದ ನಾನು ಅತ್ಯಂತ ವಿಷಯಲಂಪಟನಾಗಿದ್ದೇನೆ. ನಾನು ನನ್ನದು ಎಂಬ ಗರ್ವ ತೆಗ್ಗಿನಲ್ಲಿ ಬಿದ್ದು ಹೊರಳಾಡುತ್ತಿದ್ದೇನೆ. ಇಂಥ ನಾನು ಅಪ್ರಮೇಯನಾದ ನಿನಗೆ ಶರಣು ಬಂದಿದ್ದೇನೆ. ನಿನಗಿಂತ ಹೆಚ್ಚಿನ ಸ್ಥಾನವು ಯಾವದೂ ಇಲ್ಲ. ಸಂಸಾರದಲ್ಲಿ ಬಗೆಬಗೆಯ ತೊಳಲಾಟ ಬಳಲಾಟಗಳಿಂದ ಬೆಂದುಬೆಂಡಾದ ನನಗೆ ತಂಪೆರೆವ ಶಾಂತಿದಾಯಕವಾದ ಸ್ಥಾನವೆಂದರೆ ನೀನು. ತೇಜೋರೂಪಿಯಾದ ನಿನ್ನಲ್ಲಿಯೇ ನನ್ನ ಚಿತ್ತವು ಲೀನವಾಗಿದೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ತೂರನೇ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೨೪

**"ನಂದ ಕಂದ ಮುಕ್ಕುಂದನನ್ನು ಮುಚಕುಂದ ನುತಿಸಿ ನುಡಿದು**
**ತಪಕೆ ತೆರಳೆ, ಬಲರಾಮ ನಡೆದು ಗೋಕುಲದ ಹಾದಿ ಹಿಡಿದು"**

ಬುದ್ಧಿ ಶಾಲಿಯಾದ ಮುಚಕುಂದ ಮಹಾರಾಜನ ಈ ಹೊಗಳಿಕೆಯ ನುಡಿ ಕೇಳಿ ಸಂತುಷ್ಟನಾದ ಶ್ರೀ ಹರಿಯು ಅವನಿಗೆ ಇಂತು ಆದೇಶವಿತ್ತ -

"ಮಹಾರಾಜ, ನೀನು ಬಯಸಿದ ದಿವ್ಯ ಲೋಕಗಳಿಗೆ ನೀನು ಇನ್ನು ಹೋಗಬಹುದು. ನನ್ನ ಪ್ರಸಾದದಿಂದ ನಿನಗೆ ಪರಮ ಐಶ್ವರ್ಯವು ಪ್ರಾಪ್ತವಾಗುವದು. ಅಲ್ಲಿ ದೇವದುರ್ಲಭವಾದ ಅನೇಕ ಸುಖೋಪ ಭೋಗಗಳನ್ನು ಅನುಭವಿಸಿ ಅನಂತರ ಮತ್ತೆ ನೀನು ದೊಡ್ಡ ಕುಲದಲ್ಲಿ ಜನಿಸಿ ಬರುವೆ. ಆ ಜನ್ಮದಲ್ಲಿ ನನ್ನ ಧ್ಯಾನದಿಂದ ಮೋಕ್ಷವನ್ನು ಹೊಂದುವೆ."

ಅಚ್ಯುತನ ಈ ದಿವ್ಯ ವಚನವನ್ನು ಕೇಳಿ ಹರುಷ ಭರಿತನಾದ ಮುಚುಕುಂದ ರಾಜನು ಶ್ರೀ ಕೃಷ್ಣನಿಗೆ ವಂದನೆ ಗೈದು, ಆ ಗಿರಿ ದರಿಯ ಗುಹೆಯಿಂದ ಹೊರಬಿದ್ದು ನಡೆದನು. ತ್ರೇತಾಯುಗದ ಮಾನವನಾದ ಅವನಿಗೆ ಆ ದ್ವಾಪರ ಯುಗದ ಜನರೆಲ್ಲರೂ ಅತ್ಯಂತ ಕುಳ್ಳರಾಗಿ ಅಲ್ಪರಾಗಿ ಕಂಡರು. ಕಲಿಯುಗವು ಹೊಳವುಹಾಕಿದೆ ಎಂದು ಎನಿಸಿತು ಆ ಮಹಾಮಾನವನಿಗೆ. ಅನಂತರ ಆ ರಾಜರ್ಷಿಯು ನರ ನಾರಾಯಣರ ಆಶ್ರಮದಲ್ಲಿ ನಿಂತು ತಪಂಗೈಯಬೇಕೆಂದು ಗಂಧಮಾದನ ಪರ್ವತಕ್ಕೆ ನಡೆದನು. ಇತ್ತ ಕೃಷ್ಣನೂ ಕೂಡ ಉಪಾಯದಿಂದ ಕಾಲಯವನನನ್ನು ಸಂಹರಿಸಿ ಮುಚಕುಂದನಿಂದ ಪೂಜಿತನಾಗಿ ಮಥುರಾ ಪಟ್ಟಣಕ್ಕೆ ಬಂದನು. ಅಲ್ಲಿ ತನ್ನನ್ನು ಎದುರಿಸಬಂದ ಕಾಲಯವನ ಶೂರ ಸೇನಾಪತಿಗಳನ್ನೆಲ್ಲ ನಿಗ್ರಹಿಸಿ ಅವನ ಆನೆ, ಕುದುರೆ, ಕಾಲಾಳು, ರಥ, ಮುಂತಾದ ಚದುರಂಗ ಬಲದಿಂದ ಒಡಗೂಡಿದ ಸೇನಾ ಸನ್ನಾಹವನ್ನೆಲ್ಲ ತಂದು ಉಗ್ರಸೇನನ ಸ್ವಾಧೀನಮಾಡಿದನು. ಅಂದಿನಿಂದ ಯಾದವರ ಕುಲವು ಶತ್ರುಗಳ ಭಯಾಪಾಯಗಳಿಂದ ಪಾರಾಗಿ ಯಾರೂ ಎಂದಿಗೂ ಏರಿ ಬರಲು ಅಶಕ್ಯವಾದ ಸಮುದ್ರ ನಟ್ಟ ನಡುವೆ ಇರುವ ದುರ್ಗಮ ದುರ್ಗ ದ್ವಾರಕಾಪಟ್ಟಣದಲ್ಲಿ ನಿಶ್ಚಿಂತೆಯಿಂದ ನಿವಾಸಗೈದಿತು. ಇತ್ತ ಬಲರಾಮನು ಎಲ್ಲ ವೈರಿಗಳ ಶಮನವಾದ ಬಳಿಕ ತನ್ನ ಹಿಂದಿನ ಸ್ನೇಹಸಂಬಂಧಿಗಳ ದರ್ಶನಕ್ಕೆಂದು ನಂದಗೋಕುಲಕ್ಕೆ ಹೋದನು. ಅಲ್ಲಿರುವ ಗೋಪಿಕಾ ಸ್ತ್ರೀಯರನ್ನೂ, ಗೋಪಾಲಕರನ್ನೂ ಅವನು ಪ್ರೀತಿಯಿಂದ ಸಂಧಿಸಿದನು. ಗೌರವದಿಂದ ಮಾತನಾಡಿಸಿದನು. ಗೆಳೆಯಂದಿರನ್ನು ಆಲಂಗಿಸಿದನು.

ಗೋಕುಲದಲ್ಲಿಯ ಎಲ್ಲ ಹಿರಿಯರೂ ಬಲರಾಮನನ್ನು ಸ್ನೇಹದಿಂದ ತಬ್ಬಿಕೊಂಡು ಮಾತನಾಡಿಸಿದರು. ಮತ್ತು ಗೋಪ-ಗೋಪಿಯರ ಬಳಗದಲ್ಲಿ ಕೂಡಿಕೊಂಡು ಅವನು ನಕ್ಕು, ನಲಿದು, ನುಡಿದು, ವಿನೋದವಾಡಿ ಮಾತನಾಡಿದನು. ಹಿಂದೆ ನಡೆದ ಅನೇಕ ಘಟನೆಗಳನ್ನು ಅವರ ಜೊತೆಗೆ ನೆನಿಸಿಕೊಂಡು ಎಲ್ಲರೂ ನಲಿದಾಡಿದರು. ಗೋಪಿಯರಂತೂ ಪ್ರೇಮದಿಂದ ಕುಪಿತರಾದಂತೆ, ಅಸೂಯೆಯಿಂದ ಆತುರರಾದಂತೆ ನುಡಿದರು. "ಶಹರ ಸುಂದರಿಯರಿಗೆ ಮರುಳಾದ ನಿನ್ನ ತಮ್ಮ ಕೃಷ್ಣನು ಸುಖವಾಗಿರುವನೇ? ಅವನ

ಪ್ರೇಮವು ಬಹಳ ಚಂಚಲವಾದುದು. ಆ ಪಟ್ಟಣದ ಪ್ರಮದೆಯರ ಎದುರು ಗ್ರಾಮಸ್ತ್ರಿಯರಾದ ನಮ್ಮನ್ನು ಉಪಹಾಸ ಮಾಡುವದಿಲ್ಲವಷ್ಟೇ ? ಆ ಪುರನಾರಿಯರ ಮುಂದೆ ನಮ್ಮಂಥ ಹಳ್ಳಿಗಾಡ ಹೆಂಗಳೆಯರನ್ನು ಹೀಯಾಳಿಸಿ ಅವರ ಅಹಂಕಾರವನ್ನು ಇಮ್ಮಡಿಸುವುದಿಲ್ಲವಷ್ಟೇ ! ಆ ಕೃಷ್ಣನು ನಮ್ಮನ್ನು ಎಂದಾದರೂ ನೆನೆಸುವನೋ ? ಈ ವೃಂದಾವನದಲ್ಲಿ ನಡೆದ ಮಧುರಗೀತ - ಗುಂಜಾರವ ಮಧುರಸ್ಮೃತಿ ಅವನಿಗೆ ಸ್ವಲ್ಪಾದರೂ ಉಳಿದಿದೆಯೇ ! ಈ ನಂದಗೋಕುಲದಲ್ಲಿ ಅವನ ತಾಯಿ ಇರುವಳೆಂದು ಕೃಷ್ಣನಿಗೆ ಗೊತ್ತಿಲ್ಲವೋ ! ತನ್ನ ಮಾತೆಯನ್ನು ಕಾಣಲು ಆ ಪುಣ್ಯಾತ್ಮನು ಎಂದಾದರೂ ಒಮ್ಮೆ ಇಲ್ಲಿ ಬರಲಿಕ್ಕುಂಟೋ !

ಅಥವಾ ಅವನ ಮಾತು ತೆಗೆದುಕೊಂಡು ನಮಗಾದರೂ ಏನು? ಬೇರೆ ಏನಾದರೂ ಮಾತನಾಡುವಾ. ಯಾವನಿಗೆ ನಮ್ಮಿಂದೇನೂ ಆಗಬೇಕಾಗಿಲ್ಲವೋ ನಮಗಾದರೂ ಅವನಿಂದೇನಾಗಬೇಕಾಗಿದೆ ? ಯಾವನ ಸಲುವಾಗಿ ನಾವು ತಾಯಿ-ತಂದೆ, ಅಣ್ಣ-ತಮ್ಮ, ಗಂಡ-ಮಕ್ಕಳು ಹಾಗೂ ಎಲ್ಲ ಬಂಧು-ಬಾಂಧವರನ್ನು ಬಿಟ್ಟು ಬಂದಿದ್ದೆವೋ ಅಂಥ ಕೃಷ್ಣನು ನಮ್ಮನ್ನು ಒಮ್ಮೆಯೂ ನೆನೆಸುವದಿಲ್ಲವೆಂದರೆ, ಅದು ಕೃಷ್ಣನ ಕೃತಘ್ನತನದ ಕಳಸವಿದ್ದಂತೆ. ಆದರೂ ನಮ್ಮ ಹೃದಯವು ಅವನಿಗಾಗಿ ತುಡಿಯುತ್ತದೆ ; ಅವನ ವಿರಹದಿಂದ ನಮ್ಮ ಕರುಳು ಮಿಡಿಯುತ್ತದೆ.

ಬಲರಾಮ, ನೀನು ನಿಜಹೇಳು. ಆ ಕೃಷ್ಣನು ಎಂದಾದರೂ ಇತ್ತ ಬರುವ ವಿಷಯದಲ್ಲಿ ಏನಾದರೂ ಮಾತನಾಡುತ್ತಿದ್ದನೋ ? ಪೌರನಾರಿಯರಿಗೆ ಮನಸೋತ ಆ ಗೋವಿಂದನಿಗೆ ನಮ್ಮ ಮೇಲಿನ ಪ್ರೀತಿಯು ಪೂರ್ಣವಾಗಿ ಕಡಿದು ಹೋಗಿದೆ. ನಮಗಂತೂ ಇನ್ನು ಮೇಲೆ ಅವನ ದರ್ಶನವೇ ಆಗುವದಿಲ್ಲ ಎನಿಸುತ್ತದೆ''ಇವೇ ಮೊದಲಾಗಿ ಗೋಪಿಕಾಸ್ತ್ರೀಯರು ಕೃಷ್ಣನನ್ನು ''ಗೋವಿಂದ, ದಾಮೋದರ'' ಮೊದಲಾದ ಅವನ ನಾಮಗಳನ್ನು ಉಚ್ಚರಿಸಿ, ಅವನ ಬಗೆ-ಬಗೆಯ ಚರಿತ್ರೆಗಳನ್ನು ನೆನೆದು ನಕ್ಕರು : ಪ್ರೇಮ ತುಂಬಿ ಹಾಡಿದರು. ರಾಗ ತೆಗೆದು ಪಾಡಿದರು. ಕೃಷ್ಣನ ಸ್ಮರಣದಿಂದ ಅವರ ಮನಸ್ಸು ಸಂಪೂರ್ಣ ಪರವಶವಾಯಿತು. ಅನಂತರ ಬಲರಾಮ ಆ ಗೋಪಿಯರಿಗೆ ಶ್ರೀ ಕೃಷ್ಣನ ಪ್ರೇಮಗರ್ಭಿತವಾದ ಮಧುರ ಸಂದೇಶವನ್ನು ತಿಳಿಸಿ ಸಂತೈಸಿದನು.

ಸಾಂತ್ವನಪರವಾದ ಕೃಷ್ಣನ ಸಂದೇಶದ ಒಂದೊಂದು ಅಕ್ಷರವೂ ಆ ಗೋಪಾಂಗನೆಯರಿಗೆ ಸರಸ ಸುಂದರವಾಗಿಯೂ, ಮಧುರ ಮನೋಹರವಾಗಿಯೂ ಹೃದಯಕ್ಕೆ ಪರಮಾನಂದವನ್ನು ನೀಡಿತು. ಅಮೃತ ಗರ್ಭಿತವಾದ ಅವನ ಸಂದೇಶವು ಅವರ ಹೃದಯಕ್ಕೆ ಕಳೆದುಹೋದ ಆನಂದವನ್ನು ಮರಳಿ ತಂದಿತು. ಮೊದಲಿನಂತೆ ಬಲರಾಮನು ಎಲ್ಲ ಗೋಪಾಲಕರೊಡನೆ ನಗೆಚಾಟಿಕೆಯ ಮತ್ತು ವಿವಿಧ ವಿನೋದಭರಿತವಾದ ಮಾತುಗಳನ್ನಾಡಿ, ತಾನು ಹಿಂದೆ ಬಾಲ್ಯದಲ್ಲಿ ಆಟವಾಡಿದ ವ್ರಜಭೂಮಿಯ ಪರಿಸರದ ಪ್ರದೇಶಗಳಲ್ಲಿ ಮೊದಲಿನಂತೆ ಸ್ವಚ್ಛಂದವಾಗಿ ಗೆಳೆಯಂದಿರೊಂದಿಗೆ ವಿಹರಿಸಿದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ನಾಲ್ಕನೇ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೨೫

''ಮದ್ಯ ಕುಡಿದು ಬಲರಾಮನಲ್ಲಿ ಮೂಡಿತ್ತು ಮತ್ತ ಪ್ರೇಮ ।
ನೀರ ನೀರೆ ! ವಿಹರಿಸಲು 'ಬಾರೆ ಕರೆದಿತ್ತು ಅವನ ಕಾಮ' ॥

ಬಾರದಿರುವ ಯಮುನೆಯನು ಸೆಳೆದ ನೇಗಿಲವ ಹಾಕಿ ಜಗ್ಗಿ ।
ಶರಣು ಬರಲು ನದಿ ಕಾಲಿವ್ಯಾಗಿ ನುಗ್ಗಿತ್ತು ಹೊಲಕ್ಕೆ ಸುಗ್ಗಿ'' ॥

ಹೀಗೆ ತಾನು ಬಾಲ್ಯದಲ್ಲಿ ಓಡಾಡಿದ ಮತ್ತು ಕ್ರೀಡೆಯಾಡಿದ ಯಮುನಾ ತೀರದ ವನಪ್ರಾಂತದಲ್ಲಿ ಸ್ವೈರಸಂಚಾರವನ್ನು ಕೈಕೊಂಡನು. ಮನುಷ್ಯ ರೂಪದಲ್ಲಿ ಮುಚ್ಚಿದ ಆ ಆದಿಶೇಷ ಸ್ವರೂಪಿಯಾದ ಬಲರಾಮನನ್ನು ಕಂಡು ವರುಣನು 'ವಾರುಣಿ' ಎಂಬ ಮದ್ಯವನ್ನು ಕಳುಹಿಸಿಕೊಟ್ಟನು. ಭೂಮಂಡಲವನ್ನು ಹೆಡೆಯಲ್ಲಿ ಹೊತ್ತ ಶೇಷದೇವನು ಬಲರಾಮ ರೂಪದಿಂದ ಅವತರಿಸಿ ಅನೇಕ ಲೋಕೋಪಕಾರಿ ಕಾರ್ಯಗಳನ್ನು ಗೈದಿದ್ದನು. ಕೃತಕೃತ್ಯನಾದ ಆ ವೀರಪುರಷನಿಗೆ ಉಪಭೋಗಕ್ಕಾಗಿ ವರುಣನಿಂದ ಆದಿಷ್ಟವಾದ 'ವಾರುಣಿ' ಎಂಬ ಮದ್ಯವು ಅಲ್ಲಿ ಸನ್ನಿಹಿತವಾಯಿತು.

ಬಲರಾಮನ ಮೂಗಿಗೆ ವೃಂದಾವನದಲ್ಲಿ ಬೆಳೆದು ಬೀಗಿನಿಂತ ಕದಂಬ ಗಿಡಗಳ ಒಂದು ಹೊದರಿನಿಂದ ಮಾದಕವಾದ ಮದ್ಯದ ಸುಗಂಧವು ಒಮ್ಮೆಲೇ ಎದ್ದು ಬಡೆಯತೊಡಗಿತು. ಅದರ ವಾಸನೆಯನ್ನು ಮೂಸಿಯೇ ಬಲರಾಮನಿಗೆ ಮದ್ಯದ ಅಭಿಲಾಷೆಯುಂಟಾಯಿತು. ಅವನು ತನ್ನ ಆಶೆಗಣ್ಣುಗಳನ್ನು ಅಗಲಿಸಿ ಆಚೀಚೆ ನೋಡಿದನು. ಕದಂಬ ವೃಕ್ಷದಿಂದ ಮದ್ಯದ ಧಾರೆಯು ಜಿನುಗುತ್ತಿತ್ತು. ಆ ಸುರೆಯ ಸೋನೆಯನ್ನು ಕಂಡಕೂಡಲೇ ಬಲಭದ್ರನಿಗೆ ಪರಮಾನಂದವಾಯಿತು. ಅವನು ಅತ್ಯಂತ ಉಲ್ಲಾಸದಿಂದ ಗೋಪಗೋಪಿಯರಿಂದೊಡಗೂಡಿ ಆ 'ವಾರುಣಿ' ಮದ್ಯವನ್ನು ಪಾನ ಮಾಡಿದನು. ಆ ಮದ್ಯದ ಮದವು ಮಸ್ತಕಕ್ಕೇರಿ ಮನಸ್ಸಿನಲ್ಲಾದ ಆನಂದವು ಮುಖದಲ್ಲಿ ಗಾನರೂಪದಿಂದ ತಾನ ತೆಗೆದುಕೊಂಡು ಹೊಮ್ಮಿ ಬರತೊಡಗಿತು. ಸಂಗೀತ ಕಲೆಯಲ್ಲಿ ನಿಪುಣರಾದ ಗೋಪಾಲಕರು ಬಲರಾಮನ ಮಧುರಕಂಠದ ಗಾಯನಕ್ಕೆ ಹಿಮ್ಮೇಳವನ್ನು ಒದಗಿಸಿದರು. ಆನಂದದಿಂದ ಹಾಡಿ ಪಾಡಿ, ಕುಣಿದು ದಣಿದ ಅವನ ಮುಖದ ಮೇಲೆ ಬೆವರು ಮುತ್ತಿನ ಮಾಲೆಕಟ್ಟಿತು. ಮದ ತುಂಬಿ ತೂಗಾಡುವ ಬಲರಾಮನು ಅಲ್ಲಿಯೇ ಹರಿಯುವ ಯಮುನಾನದಿಯನ್ನು ಸ್ನಾನಕ್ಕಾಗಿ ಆಹ್ವಾನಿಸಿದನು.

ಬಲರಾಮನ ಈ ಪ್ರಣಯ ನಿಮಂತ್ರಣಕ್ಕೆ ಉತ್ತರ ಕೊಡದೇ ಆ ಯಮುನಾ ನದಿಯು ತನ್ನ ನೊರೆಯ ನಗೆಯಿಂದ ಉಪಹಾಸ ಮಾಡಿದಂತೆ ಮಾಡಿ ಮುಂದೆ ಹರಿಯಿತು. ಅದನ್ನು ಕಂಡು ಬಲರಾಮನಿಗೆ ಕೋಪ ಬಂದು ಅವನು ತನ್ನ ನೇಗಿಲನ್ನೆತ್ತಿ ನದಿಯ ಪಾತ್ರದಲ್ಲಿ ಹಾಕಿ ಜಗ್ಗಿದನು. ಮದವೇರಿದ ಅವನು ಬಾಯಿಂದ ''ಎಲೈ ದುಷ್ಟ ನದಿಯೇ, ನಾನು ಕರೆದರೆ ನೀನು ಬರಲಿಲ್ಲವಲ್ಲವೇ? ಇನ್ನು ಹೋಗು, ನೀನು ಎಲ್ಲಿ

ಹೋಗುತ್ತೀಯೋ ನೋಡುತ್ತೇನೆ.'' ಎಂದು ನುಡಿದು ನೇಗಿಲ ಹಾಕಿ ಎಳೆದನು. ಇದರಿಂದ ಯಮುನೆಯು ಒಮ್ಮೆಲೇ ತನ್ನ ಪಾತ್ರವನ್ನೇ ಬದಲಿಸಿ ಬಲರಾಮನು ನೇಗಿಲ ಹಾಕಿ ಜಗ್ಗಿದ ತಗ್ಗು ನೆಲದಲ್ಲಿಯೇ ಹರಿದು ಆ ವೃಂದಾವನದ ವನಭೂಮಿಯನೆಲ್ಲ ನೀರಿನಿಂದ ತೊಯ್ಸಿದಳು. ಮತ್ತು ಕೂಡಲೇ ಅವಳು ಹೆದರಿ ಕಂಗಾಲಾಗಿ ದೇಹವನ್ನು ಧರಿಸಿ ಅವನ ಬಳಿಗೆ ಬಂದು ''ಒನಕೆಯನ್ನು ಆಯುಧವನ್ನಾಗಿ ಮಾಡಿಕೊಂಡ ವೀರಪುರುಷನೇ, ನನ್ನ ಮೇಲೆ ಪ್ರಸನ್ನನಾಗು, ನನ್ನ ಅಪರಾಧವನ್ನು ಕ್ಷಮಿಸು, ನನ್ನನ್ನು ಬಿಟ್ಟುಬಿಡು'' ಎಂದು ಬೇಡಿಕೊಂಡಳು. ಅವಳ ಈ ಆರ್ತ ನುಡಿಯನ್ನು ಕೇಳಿ ಬಲರಾಮನು ''ಯಮುನೆಯೇ, ನೀನು ನನ್ನನ್ನು ಅವಮಾನಿಸಿರುವೆ. ನಾನು ಆಮಂತ್ರಿಸಿದಾಗ ಬರಲಿಲ್ಲ. ನೀನು ನನ್ನ ಶೌರ್ಯವನ್ನೂ ವ್ಯಕ್ತಿತ್ವವನ್ನೂ ಧಿಕ್ಕರಿಸಿ ಅವಮಾನ ಪಡಿಸಿರುವೆ. ಆದುದರಿಂದ ನಾನು ಈಗ ನನ್ನ ಈ ನೇಗಿಲವನ್ನು ಎಲ್ಲ ಕಡೆಗೂ ಹಾಕಿ ಎಳೆದು ಸೆಳೆದು ನಿನ್ನನ್ನು ಸಾವಿರ ಸೀಳಾಗಿ, ಅಷ್ಟೇ ಹೋಳಾಗಿ ಹರಿದು ಹಂಚಿ ಹೋಗುವಂತೆ ಮಾಡುತ್ತೇನೆ '' ಎಂದು ಗುಡುಗಿದನು.

ಆಗ ಭಯಭ್ರಾಂತಳಾದ ಯಮುನೆಯು ಬಲಭದ್ರನ ಈ ಗುಡುಗಾಟ ನೇಗಿಲಾಟಗಳನ್ನು ಕಂಡು ಹೆದರಿ ಅವನಿಗೆ ಶರಣು ಬಂದಳು. ಅವನು ಹೇಳಿದಂತೆ ಕೇಳುತ್ತೇನೆ ಎಂದು ಬಾಗಿ ಬಿನ್ನವಿಸಿದಳು. ಆಗ ಬಲದೇವನು ಆ ಯಮುನೆಯನ್ನು ತಾನು ನೇಗಿಲ ಎಳೆದು ತಗ್ಗಾದ ನೆಲದಲ್ಲಿ ಹರಿಯಿಸಿ ಅದರಿಂದ ವೃಂದಾವನದ ಸುತ್ತಲಿನ ಪ್ರದೇಶವೆಲ್ಲವೂ ಸುಜಲ ಸುಫಲ ಆಗುವಂತೆ ಮಾಡಿದನು.

ಯಮುನಾ ನದಿಯಲ್ಲಿ ಅನಂತರ ಸ್ನಾನ ಮಾಡಿದ ಬಲರಾಮನ ಕಾಯ ಕಾಂತಿಯು ಇಮ್ಮಡಿಸಿತು. ನದಿಯಲ್ಲಿಯ ಒಂದು ನೈದಿಲೆಯನ್ನು ತೆಗೆದು ಕುಂಡಲವನ್ನಾಗಿ ಧರಿಸಿದನು. ಸಮುದ್ರರಾಜನು ಕಳಿಸಿದ ಬಾಡಲಾರದ ಹೂಗಳುಳ್ಳ ಹೊಸ ಮಾಲೆಯನ್ನು ಧರಿಸಿದನು. ಸಾಗರದಂತೆ ನೀಲ ಕಾಂತಿಯುಳ್ಳ ಎರಡು ಬಟ್ಟೆಗಳನ್ನು ತೊಟ್ಟನು. ಹೀಗೆ ಬಲರಾಮನು ನಂದಗೋಕುಲದಲ್ಲಿ ಎರಡು ತಿಂಗಳು ಸುಖಸಂಕಥಾ ವಿನೋದ ವಿಹಾರಗೈಯುತ್ತ ಕಾಲಕಳೆದು ದ್ವಾರಕೆಗೆ ಬಂದನು. ದ್ವಾರಕೆಯಲ್ಲಿ ರೇವತಿಯೊಡನೆ ಮದುವೆ ಮಾಡಿಕೊಂಡು ನಿಶಠ ಉಲ್ಮುಖ ಎಂಬ ಇಬ್ಬರು ಮಕ್ಕಳನ್ನು ಹಡೆದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ತೈದನೇ ಅಧ್ಯಾಯ ಸಂಪೂರ್ಣ*

—o—

ಅಧ್ಯಾಯ - ೨೬

**"ರುಕ್ಮಿಯು ಶಿಶುಪಾಲಗೆ ನಿಜಸೋದರಿ ರುಕ್ಮಿಣಿಯನು ಕೊಡಮಾಡಿದ್ದ**
**ಸುದ್ದಿಯ ಕೇಳಿದ ಹದ್ದನು ಏರಿದ ಹರಿತಾನಲ್ಲಿಗೆ ಓಡಿದ್ದ"**
**ಕನ್ನೆಯ ಕದ್ದನು ರಿಪುಗಳನೊದ್ದನು ನೆಲದಲ್ಲಿ ಬಿದ್ದನು ಶಿಶುಪಾಲ**
**ರುಕ್ಮಿಯ ಮುಂಡನ ಕೃಷ್ಣಗೆ ಮಂಡನ ನರಿಗೆಟಕುವದೇ ಹರಿಪಾಲ !**

## ರುಕ್ಮಿಣೀ ಸ್ವಯಂವರ

ವಿದರ್ಭದೇಶದ ರಾಜಧಾನಿಯಾದ ಕುಂಡಿನಪುರದಲ್ಲಿ ಭೀಷ್ಮಕನೆಂಬ ರಾಜನಿದ್ದನು. ಅವನಿಗೆ ರುಕ್ಮಿ ಎಂಬ ಗಂಡು ಮಗ ರುಕ್ಮಿಣೀ ಎಂಬ ಹೆಣ್ಣುಮಗಳೂ ಇದ್ದರು. ರುಕ್ಮಿಣಿಯು ಅಸಾಧಾರಣ ಸುಂದರಿ. ಅವಳಿಗೆ ಕೃಷ್ಣನನ್ನು ಮದುವೆಯಾಗುವ ಬಯಕೆ. ಕೃಷ್ಣನಿಗೂ ರುಕ್ಮಿಣಿಯ ಕೈ ಹಿಡಿಯುವ ಅಭಿಲಾಷೆಯಿದ್ದಿತು. ಆದರೆ ರುಕ್ಮಿಯು ತನ್ನ ಸೋದರಿಯನ್ನು ಜರಾಸಂಧನ ಸಲಹೆಯಂತೆ ಶಿಶುಪಾಲನಿಗೆ ಕೊಡುವದೆಂದು ನಿರ್ಧರಿಸಿದ್ದ. ಶಿಶುಪಾಲನೂ ಬಹುದಿನಗಳಿಂದ ರುಕ್ಮಿಣಿಯನ್ನು ತನಗೇ ಕೊಡಬೇಕೆಂದು ರುಕ್ಮಿಗೆ ದುಂಬಾಲು ಬಿದ್ದಿದ್ದ. ಭೀಷ್ಮಕ ರಾಜನೂ ತನ್ನ ಜ್ಯೇಷ್ಠ ಪುತ್ರನಾದ ರುಕ್ಮಿಯ ಸಲಹೆಯಂತೆ ರುಕ್ಮಿಣಿಯನ್ನು ಶಿಶುಪಾಲನಿಗೇ ಕೊಡುವದೆಂದು ಸಂಕಲ್ಪಿಸಿದ್ದ. ಅದರಂತೆ ವಿವಾಹದ ಸಿದ್ಧತೆ ನಡೆಯಿತು. ವರಪಕ್ಷದ ಶಿಶುಪಾಲನ ಸಂಬಂಧಿ ಸ್ನೇಹಿತರೂ ಕಲ್ಯಾಣ ಮಹೋತ್ಸವಕ್ಕೆಂದು ಕುಂಡಿನ ಪುರಕ್ಕೆ ಬಂದರು. ಇತ್ತ ಕೃಷ್ಣನೂ ಬಲರಾಮ ಮುಂತಾದ ಯಾದವರಿಂದ ಕೂಡಿಕೊಂಡು ಶಿಶುಪಾಲನ ಮದುವೆಯ ಮುಹೂರ್ತಕ್ಕೆ ಬಂದು ಒದಗಿದರು.

ಮದುವೆಯ ದಿನವೇ ವೈರಿಗಳನ್ನು ವಿನಾಶ ಮಾಡುವ ಭಾರವನ್ನು ಅಣ್ಣ ಬಲರಾಮನಿಗೆ ಒಪ್ಪಿಸಿ ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿದನು. ಪೌಂಡ್ರಕ ವಾಸುದೇವ, ದಂತವಕ್ರ, ವಿದೂರಥ, ಶಿಶುಪಾಲ, ಜರಾಸಂಧ, ಶಾಲ್ವ ಮುಂತಾದ ರಾಜರೆಲ್ಲರೂ ಕೃಷ್ಣನನ್ನು ಕೊಲ್ಲಬೇಕಂದು ಹರಿಯ ಮೇಲೆ ಹರಿದು ಬಂದರು. ಆದರೆ ಬಲರಾಮ ಮುಂತಾದ ಯಾದವರು ತಮ್ಮ ಶೌರ್ಯದಿಂದ ಅವರೆಲ್ಲರನ್ನೂ ಬಡಿದೋಡಿಸಿದರು. ಎಲ್ಲರೂ ಸೋತು ಸುಣ್ಣಾಗಿ ಮರಳಿದರೂ ರುಕ್ಮಿಯು ಕನ್ನೆಯನ್ನು ಕದ್ದ ಕೃಷ್ಣನನ್ನು ಕೊಲ್ಲದೇ ನಾನು ಕುಂಡಿನಪುರದಲ್ಲಿ ಪ್ರವೇಶಮಾಡುವದಿಲ್ಲ" ಎಂದು ಪ್ರತಿಜ್ಞೆ ಮಾಡಿ ಕೃಷ್ಣನ ಬೆನ್ನು ಹತ್ತಿ ದಾರಿಯಲ್ಲಿ ಕೃಷ್ಣ ರುಕ್ಮಿಣಿಯರ ರಥವನ್ನು ತಡೆದ. ತನ್ನ ಚತುರಂಗ ಸೇನೆಯಿಂದ ಒಡಗೂಡಿ ಒಂಟಿ ಕೃಷ್ಣನ ಮೇಲೆ ಕೋಪದಿಂದ ಕಿಚ್ಚಾಗಿ ಎರಗಿದ.

ಆದರೆ ಕೆಲ ನಿಮಿಷಗಳಲ್ಲಿಯೇ ಕೃಷ್ಣನು ರುಕ್ಮಿಯ ಆನೆಗಳನ್ನು ಕೊಂದ. ಕುದುರೆ ದಳವನ್ನು ಧ್ವಂಸಗೈದ. ರಥಗಳನ್ನೆಲ್ಲ ಪುಡಿಗಟ್ಟಿದ. ಪದಾತಿಗಳನ್ನು ಮಣ್ಣು ಮುಕ್ಕಿಸಿದ. ಕೊನೆಗೆ ರುಕ್ಮಿಯನ್ನುಸೋಲಿಸಿ ರುಕ್ಮಿಣಿಯ ದಾಕ್ಷಿಣ್ಯದಿಂದ ತಲೆ ಬೋಳಿಸಿ ಜೀವಂತ ಬದುಕಲು ಬಿಟ್ಟ. ಅನಂತರ ಶ್ರೀ ಕೃಷ್ಣನು ದ್ವಾರಕೆಗೆ ಬಂದು ರುಕ್ಮಿಣಿಯೊಂದಿಗೆ ವೈಭವದಿಂದ ವಿವಾಹವನ್ನು ವಿಧಿಪೂರ್ವಕವಾಗಿ ಮಾಡಿಕೊಂಡನು. ರುಕ್ಮಿಣಿಯಲ್ಲಿ ಶ್ರೀ ಕೃಷ್ಣನಿಗೆ ಕಾಮನ ಅಂಶಭೂತನಾದ ಪ್ರದ್ಯುಮ್ನನು ಜನಿಸಿದನು. ಅವನನ್ನು ಶಂಬರಾಸುರನು ಅಪಹರಿಸಿದ. ಶಂಬರಾಸುರನನ್ನು ಪ್ರದ್ಯುಮ್ನ ಪ್ರಬುದ್ಧನಾಗಿ ಸಂಹರಿಸಿದ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ತಾರನೇ ಅಧ್ಯಾಯ ಸಂಪೂರ್ಣ*

ಅಧ್ಯಾಯ - ೨೭

ಕಂದ ಕೃಷ್ಣನಿಂದ ಮುಂದೆ
ತನಗೆ ಸಾವು ಬರುವದೆಂದೆ
ಶಂಬರಾಖ್ಯದೈತ್ಯ ಮುದ್ದು
ಕೃಷ್ಣಪುತ್ರನನ್ನು ಕದ್ದು
ಶರಧಿ ಮಧ್ಯದಲ್ಲಿ ಒಗೆದ ;
ಸಾವು ಗೆದ್ದೆ ಎಂದು ಬಗೆದ.

ಕಂದ ಮೀನದುದರಕಿಳಿದ
ರಾಜಗೃಹದಿ ಬಂದು ಬೆಳೆದ
ತನ್ನ ಪತಿಯೆ ಎಂದು ತಿಳಿದ
ರತಿಯ ಚಿತ್ತವನ್ನು ಸೆಳೆದ;
ಮಾಯೆ ಮಂತ್ರಗಳನು ಕಲಿತ;
ಶಸ್ತ್ರಶೌರ್ಯದಲ್ಲಿ ಬಲಿತ;
ಶಂಬರಾರಿಯನ್ನು ಕೊಂದ;
ಮಡದಿಯೊಡನೆ ಮನೆಗೆ ಬಂದ

## ಪ್ರದ್ಯುಮ್ನನ ಅಪಹಾರ, ಶಂಬರಾಸುರನ ಸಂಹಾರ

**ಮೈತ್ರೇಯ** - ಮಹಾವೀರನಾದ ಶಂಬರಾಸುರನು ಪ್ರದ್ಯುಮ್ನನನ್ನು ಹೇಗೆ ಕದ್ದ ? ಏಕೆ ಕದ್ದ ? ಪ್ರದ್ಯುಮ್ನನಾದರೂ ಅಂಥ ವೀರದೈತ್ಯವನ್ನು ಹೇಗೆ ಕೊಂದ ? ಅದನ್ನು ನಮಗೆ ಹೇಳಬೇಕು.

**ಪರಾಶರ** - ಪ್ರದ್ಯುಮ್ನ ತನ್ನನ್ನು ಕೊಲ್ಲುವನು ಎಂದು ಮೊದಲೇ ತಿಳಿದ ಶಂಬರಾಸುರನು ರುಕ್ಮಿಣಿಯು ಹೆತ್ತ ಆರನೆಯ ದಿನವೇ ಆ ಹಸುಗೂಸನ್ನು ಹೊತ್ತು ಅಪಹರಿಸಿದ. ಘೋರ ತೆರೆಗಳಿಂದ ಘೂರ್ಮಿಸುವ ಭೀಕರವಾದ ಉಪ್ಪಿನ ಸಮುದ್ರದ ಮಧ್ಯದಲ್ಲಿ ತೂರಿ ಒಗೆದು ಬಿಟ್ಟ. ಇಷ್ಟಾದರೂ ಆ ಕೂಸು ಸಾಯಲಿಲ್ಲ. ಒಂದು ದೊಡ್ಡ ಮೀನು ಆ ಕೂಸನ್ನು ನುಂಗಿಬಿಟ್ಟಿತು. ಆ ಮೀನದ ಜಠರಾಗ್ನಿಯ ಝಳತಾಗಿದರೂ ಏನೂ ಆಗದೇ ಆ ಹಸುಳೆಯು ಮೀನಗರ್ಭದಲ್ಲಿ ಸುರಕ್ಷಿತವಾಗಿಯೇ ಬೆಳೆಯಿತು. ಮುಂದೆ ಸಮುದ್ರದ ಜಾಲಗಾರರು ಗಾಳಹಾಕಿದಾಗ ಅನೇಕ ಮೀನಗಳ ಜೊತೆಗೆ ಅದೂ ಆ ಬಲೆಯಲ್ಲಿ ಬಿದ್ದಿತು. ಅವರು ಅದನ್ನು ತಮ್ಮ ರಾಜನಾದ ಶಂಬರಾಸುರನಿಗೆ ವೈಯ್ದು ಕೊಟ್ಟರು. ಶಂಬರನ ಮಡದಿ ಮಾಯಾವತಿ ಬಹಳ ಒಳ್ಳೆ ಹೆಣ್ಣು ಮಗಳು. ಅವಳು ಆ ದೈತ್ಯ ರಾಜನ ಅಂತಃಪುರ, ಅರಮನೆಗಳ ಸರ್ವಾಧಿಕಾರಿಣಿ. ಪಾಕಗೃಹದ ಕಾರ್ಯಗಳೆಲ್ಲವೂ ಅವಳ ನಿರೀಕ್ಷಣೆಯಲ್ಲಿಯೇ ನಡೆಯುತ್ತಿದ್ದವು. ಅಡುಗೆಯವರು ತರಕಾರಿಯನ್ನು ಮಾಡಲಿಕ್ಕಾಗಿ ಅಂದೇ ಮೀನುಗಾರರು ತಂದು ಕೊಟ್ಟ ಮೀನವೊಂದನ್ನು ಹೆಚ್ಚಿದಾಗ ಅದರ ಹೊಟ್ಟೆಯಲ್ಲಿ ಒಂದು ಸುಂದರವಾದ ಮಗುವು ಕಂಡಿತು. ಮೀನಗರ್ಭದಲ್ಲಿ ಅಂಥ ಸೌಂದರ್ಯದ ಕಂದನನ್ನು ಕಂಡು ಅವಳಿಗೆ ಕೌತುಕವೆನಿಸಿತು. ಹಿಂದೆ ಮಹಾದೇವರ ಕೋಪಾಗ್ನಿಯಿಂದ ಕಮರಿದ ಕಾಮ - ವೃಕ್ಷದ ಪ್ರಥಮಾಂಕುರವೇ ಆ ಪ್ರದ್ಯುಮ್ನ. ಅವನೀಗ ರುಕ್ಮಿಣೀದೇವಿಯ ಹೊಟ್ಟೆಯಿಂದ ಲೋಕಮೋಹನ ದೇಹವನ್ನು ತೊಟ್ಟು ಮತ್ತೆ ಹುಟ್ಟಿ ಬಂದಿದ್ದ. ಮಾಯಾವತಿಗೆ ಇದಾವ ಹಿನ್ನೆಲೆ ತಿಳಿಯದೇ ಮತ್ಸ್ಯ ಗರ್ಭದಿಂದ ಇಂಥ ಸುಕುಮಾರ ಸುಂದರ ಮಗು ಜನಿಸಿದ್ದೆಂತು ಎಂದು ಆಶ್ಚರ್ಯದಿಂದ ಚಿಂತಿಸುತ್ತಿರುವಾಗ ಅಲ್ಲಿಗೆ ನಾರದರು ಬಂದು ಸತ್ಯಸಂಗತಿಯನ್ನು ತಿಳಿಸಿದರು.

''ಸಮಸ್ತ ಲೋಕಪಾಲಕ ಶ್ರೀ ಕೃಷ್ಣನ ಪಟ್ಟದರಸಿ ರುಕ್ಮಿಣಿದೇವಿಯ ಕುಮಾರನಾದ ಇವನು ಸಾಕ್ಷಾತ್ ಕಾಮದೇವ. ಶಂಬರಾಸುರನು ಮಾಯೆಯಿಂದ ಈ ಮಗುವನ್ನು ಬಾಣಂತಿಯ ಕೋಣೆಯಿಂದ ಕದ್ದು ತಂದು ಉಪ್ಪಿನ ಕಡಲಿನ ನಡುನೀರಿನಲ್ಲಿ ಎಸೆದಿದ್ದ. ಅದನ್ನು ನುಂಗಿದ ಮೀನು ನಿಮ್ಮ ಮನೆಗೆ ಬಂದಿದೆ. ಇದೊಂದು ಮನುಕುಲದ ರತ್ನ. ಇದನ್ನು ನೀನು ಜೋಕೆಯಿಂದ ಬೆಳಿಸಿ ದೊಡ್ಡವನನ್ನಾಗಿ ಮಾಡು'' ಎಂದು ಹೇಳಿದರು. ನಾರದರ ಈ ನುಡಿಯನ್ನು ಕೇಳಿ ಮಾಯಾವತಿಗೆ ಹಿಂದಿನ ತನ್ನ ಕಥೆಯನ್ನು ನೆನೆದು ಮೈ ರೋಮಾಂಚನವಾಯಿತು.

ಪಾರ್ವತಿಯ ಜೊತೆಗೆ ಪರಮೇಶ್ವರನನ್ನು ಕೂಡಿಸಲಿಕ್ಕಾಗಿ ದೇವತೆಗಳ ಪ್ರೇರಣೆಯಂತೆ ತನ್ನ ಪತಿಯಾದ ಕಾಮನು ಮಹಾದೇವರ ಮನಸ್ಸನ್ನು ಚಂಚಲಗೊಳಿಸಲಿಕ್ಕಾಗಿ ಬಾಣ ಹೂಡಿದ. ಅದನ್ನು ಕಂಡು ಕುಪಿತನಾದ ಮಹಾದೇವ ಕಣ್ತೆರೆದು ನುಡಿದಾಗ ಆ ಕೋಪಾಗ್ನಿಯಲ್ಲಿ ಕಾಮ ಸುಟ್ಟು ಬೂದಿಯಾದ. ಆಗ ಸತಿಹೋಗಲು ಸಿದ್ಧಳಾದ ರತಿದೇವಿಯನ್ನು ಆಕಾಶವಾಣಿಯು ತಡೆದು ''ಶಂಬರಾಸುರನನ್ನು ಸಂಹರಿಸಲಿಕ್ಕೆ ನಿನ್ನ ಪತಿ ಪ್ರದ್ಯುಮ್ನನಾಗಿ ಹುಟ್ಟಿ ಬರುವನು. ಅವರೆಗೆ ನೀನು ಆ ದೈತ್ಯನ ಮನೆಯಲ್ಲಿಯೇ ಕಾಯುತ್ತಲಿರು'' ಎಂದು ನುಡಿಯಿತು. ಅದರಂತೆ ಅವಳೀಗ ತನ್ನ ಮಾಯೆಯಿಂದ ಮಾಯಾವತಿ ಎಂದು ಸುಂದರವಾದ ಸ್ತ್ರೀ ರೂಪವನ್ನು ಹೊಂದಿ ಆ ದೈತ್ಯನ ಮಡದಿಯಾಗಿ ತನ್ನ ನಲ್ಲನ ದಾರಿ ಕಾಯುತ್ತಲಿದ್ದಳು. ನಾರದರ ಮಾತು ಕೇಳಿ ಅವಳಿಗೆ ಕಳೆದು ಹೋದ ತನ್ನ ಪತಿಯು ಮರಳಿ ತನ್ನ ಕೈಗೆ ಕೂಸಾಗಿ ದೊರೆತಂತಾಯಿತು. ಆ ಪ್ರದ್ಯುಮ್ನನ ಮುಗ್ಧ ಮನೋಹರವೂ ಶೈಶವ ಸುಂದರವೂ ಆದ ಸುಕುಮಾರ ಶರೀರವನ್ನು ಕಂಡು ಅವಳ ಪ್ರೇಮವುಕ್ಕೇರಿ ಬಂದಿತು. ಅತ್ಯಂತ ಪ್ರೇಮದಿಂದ ಅವಳು ಅವನನ್ನು ಬೆಳಿಸಿ ದೊಡ್ಡವನನ್ನಾಗಿ ಮಾಡಿದಳು. ತಾರುಣ್ಯದಿಂದ ಪ್ರದ್ಯುಮ್ನನ ದೇಹದಲ್ಲಿ ಲಾವಣ್ಯವು ತುಂಬಿ ಸೂಸತೊಡಗಿತು. ಮಾಯಾವತಿಗೆ ಇಷ್ಟು ದಿನ ಅವನ ಮೇಲಿದ್ದ ಪ್ರೇಮವು ಈಗ ಅವನ ಪ್ರಾಯದುಂಬಿದ ಉಬ್ಬಿದ ದೇಹದಲ್ಲಿ ಅರಳಿದ ಚಾರು ಚೆಲ್ವಿಕೆಯನ್ನು ಕಂಡು ಕಾಮರೂಪವಾಗಿ ಪರಿಣಿತವಾಯಿತು. ಅವಳು ಆ ಪ್ರದ್ಯುಮ್ನನಿಗೆ ಎಲ್ಲ ಮಾಯಾ ತಂತ್ರಗಳನ್ನು ಕಲಿಸಿಕೊಟ್ಟಳು. ಕಲಿಸುವಾಗಲಂತೂ ಅವನ ಮೈ ಕೈ ಮುಟ್ಟಿ ತಟ್ಟಿ ನಿಕಟ ಸಂಪರ್ಕದಿಂದ ಅವಳ ದೇಹ 'ಜುಮ್ಮ್' ಎಂದಿತು. ರಾಗಪರಾಗವು ಪರಿಮಳಿಸಿ ಅವಳು ಸ್ನೇಹದುಂಬಿದ ಕುಡಿ ನೋಟದಿಂದ ಪ್ರದ್ಯುಮ್ನನ ಪರಿಪುಷ್ಟವಾದ ಅಂಗಾಂಗಳನ್ನು ನೋಡುತ್ತ ನಿಂತಳು.

ಪ್ರದ್ಯುಮ್ನನು ಅವಳನ್ನು ತಾಯಿಯೆಂದೇ ಇಷ್ಟು ದಿನ ಬಗೆದಿದ್ದ. ಆದರೆ ಈಗ ಅವಳ ಪ್ರೇಮ ಪೂರ್ಣವಾದ ಕಡೆನೋಟ ಕುಡಿನೋಟ ಮತ್ತು ಕಾಮಾತುರವಾದ ಸ್ಪರ್ಶಹರ್ಷಗಳನ್ನು ಕಂಡು ದಿಗ್‌ಭ್ರಮೆಯಾದಂತಾಗಿ ಅವನು ಕೇಳಿಬಿಟ್ಟ. ''ತಾಯಿ, ಇದೇನು ! ಇಂದು ನಿನ್ನ ನಡತೆಯೆ ಬದಲಾಗಿದೆಯಲ್ಲ ! ಹೀಗೇಕೆ ?''ಎಂದು ಕೇಳಿದ. ಆಗ ಅವಳು ಅವನಿಗೆ ಹೇಳಿದಳು - ''ನಾಥ, ನಾನು ನಿನ್ನ ತಾಯಿಯಲ್ಲ; ನೀನು ನನ್ನ

ಮಗನೂ ಅಲ್ಲ. ನೀನು ಕಳೆದ ಜನ್ಮದಲ್ಲಿ ಕಾಮ, ನಾನು ರತಿ. ನೀನು ಶಿವನನ್ನು ಕೆಣಕಿ ಕೆಟ್ಟೆ. ದುಃಖಾಗ್ನಿಯಲ್ಲಿ ನನ್ನನ್ನೂ ಸುಟ್ಟೆ. ಸತೀ ಹೋಗಲು ಉದ್ಯುಕ್ತಳಾದ ನನ್ನನ್ನು ಆಕಾಶವಾಣಿಯು ನಿನ್ನ ಪ್ರದ್ಯುಮ್ನಾವತಾರವನ್ನು ಸಾರಿ ಸಂತೈಯಿಸಿತು. ಶಂಬರಾಸುರನನ್ನು ಸಂಹರಿಸಲಿಕ್ಕಾಗಿಯೇ ನೀನು ಅವತರಿಸಿ ಬರುವೆ ಎಂದು ತಿಳಿದ ನಾನು ವೇಷಪಲ್ಲಟ ಮಾಡಿಕೊಂಡು ಮಾಯಾವತಿಯಾಗಿ ಶಂಬರಾಸುರನ ಮನೆಯಲ್ಲಿ ಸೇರಿಕೊಂಡು ನಿನ್ನ ಮಾರ್ಗವನ್ನು ನಿರೀಕ್ಷಿಸುತ್ತಲಿದ್ದೇನೆ. ನಾನೆಂದೂ ಅವನ ದೇಹವನ್ನು ಈವರೆಗೆ ಸ್ಪರ್ಶಿಸಿಲ್ಲ.

ನಾರದರಿಂದ ತನಗೆ ನಿನ್ನಿಂದ ಒದಗಬಹುದಾದ ಮೃತ್ಯುವಿನ ಸಮಾಚಾರ ತಿಳಿದ ಈ ದೈತ್ಯನು ಎಳಮೆಯಲ್ಲಿಯೇ ನಿನ್ನನ್ನು ನಿರ್ನಾಮ ಮಾಡಬೇಕೆಂದು ಮಾಯೆಯಿಂದ ಬಾಣಂತೀ ಕೋಣೆಯಿಂದಲೇ ಕದ್ದೊಯ್ದು ಕಡಲಿನ ತೆರೆನೊರೆಗಳ ಮಧ್ಯದಲ್ಲಿ ಎಸೆದು ಗೆದ್ದೆನೆಂದು ನಿಟ್ಟುಸಿರು ಬಿಟ್ಟ. ಆದರೆ ಭವಿತವ್ಯತೆ ಹೇಗೆ ಬದಲಾದೀತು ! ಸಾಗರದ ತಳದಿಂದಲೂ ನೀನು ಸುರಕ್ಷಿತವಾಗಿ ಮೀನ ಗರ್ಭವನ್ನು ಸೇರಿ ಅದರ ಮುಖಾಂತರ ಈ ದೈತ್ಯನ ಅರಮನೆಗೆ ಬಂದೆ. ನಾರದರು, ನೀನು ಶಿಶುವಿದ್ದಾಗಲೇ ನನಗೆ ಗುರುತು ಮಾಡಿಕೊಟ್ಟು 'ನಿನ್ನ ಈ ಪತಿಯನ್ನು ಕಾಪಾಡು' ಎಂದು ಆಜ್ಞೆಯಿತ್ತರು. ಅವರ ಆಣತಿಯಂತೆ ನಾನು ಈವರೆಗೆ ನಿನ್ನನ್ನು ಬೆಳೆಸಿದ್ದೇನೆ. ಈಗ ನಿನ್ನ ಮೈಯಲ್ಲಿ ಯೌವನದ ಚೈತ್ರ ಚುಂಬನಕ್ಕೆ ಪೌರುಷ - ಪುಷ್ಪವು ಅರಳಿದ್ದನ್ನು ಕಂಡು ನನಗೆ ಜನ್ಮಾಂತರದ ಸ್ಮರಣ ಮರುಕಳಿಸಿ ರಾಗೋದ್ದೀಪನವಾಗಿದೆ. ಪ್ರೇಮಾಭಿಲಾಷೆಯುಂಟಾಗಿದೆ. ನಾಥ, ಜನ್ಮ ಜನ್ಮಾಂತರದ ದಾಸಿಯಾದ ನಾನು ನಿನಗೆ ಎಲ್ಲ ಮಾಯಾತಂತ್ರಗಳನ್ನು ಕಲಿಸಿದ್ದೇನೆ. ಪ್ರಬುದ್ಧನಾದ ನೀನು ಈಗ ಆ ಶಂಬರಾಸುರನನ್ನು ನಿಗ್ರಹಿಸು. ನಿಮ್ಮ ತಾಯಿಯು ಬಹಳ ಶೋಕಸಂತಪ್ತಳಾಗಿ ಇನ್ನೂ ನಿನ್ನ ಸಲುವಾಗಿ ಅಳುತ್ತಲೇ ಇದ್ದಾಳೆ'' ಎಂದು ಹೇಳಿದಳು. ಮಾಯಾವತಿಯ ವಚನವನ್ನು ಕೇಳಿ ಸಂತಪ್ತನಾಗಿ ಪ್ರದ್ಯುಮ್ನನು ಶಂಬರಾಸುರನನ್ನು ಯುದ್ಧಕ್ಕೆ ಆಹ್ವಾನಿಸಿದನು. ಸಿಟ್ಟಿನಿಂದ ಅವನ ಕಣ್ಣು ಕೆಂಪು ಕೆಂಜಗವಾಗಿತ್ತು. ಆ ಯಾದವ ಯುವಕನು ಏಕಾಕಿಯಾಗಿದ್ದರೂ ಕಲಿತನದಿಂದ ಹೋರಾಡಿ ಶಂಬರಾಸುರನ ಸೈನ್ಯವನ್ನೆಲ್ಲ ಸಂಹರಿಸಿದನು. ಮಹಾ ಮಾಯಾವಿಯಾದ ಶಂಬರಾಸುರನು ತನ್ನ ಮೇಲೆ ಪ್ರಯೋಗಿಸಿದ ಏಳು ಮಾಯೆಗಳನ್ನೂ ಮೀರಿ ಅವನ ಮೇಲೆ ಎಂಟನೆಯ ಮಾಯೆಯನ್ನು ಪ್ರದ್ಯುಮ್ನನು ಪ್ರಯೋಗಿದನು. ಭೀಕರವಾದ ಆ ಮಾಯೆಯು ಶಂಬರಾಸುರನನ್ನು ತಿಕ್ಕಿ ಮುಕ್ಕಿ ಹೊಸೆದು ಹಾಕಿತು. ಅವನ ಸೇನೆಯೆಲ್ಲವೂ ಪ್ರದ್ಯುಮ್ನ ಕುಮಾರನ ಘೋರಾಸ್ತ್ರಕ್ಕೆ ಬಲಿಯಾಯಿತು. ಶಂಬರನು ಹತನಾದ.

ಅನಂತರ ಕೂಡಲೇ ಪ್ರದ್ಯುಮ್ನನು ಮಾಯಾವತಿಯೊಂದಿಗೆ ಮುಗಿಲಿಗೆ ಜಿಗಿದು ಆಕಾಶ ಮಾರ್ಗದಿಂದ ಹಾರಿ ದ್ವಾರಕೆಗೆ ಬಂದ. ರುಕ್ಮಿಣೀ ದೇವಿಯ ಅಂತಃಪುರಕ್ಕೆ ಬಂದಿಳಿದ ಇವನನ್ನು ಕಂಡಕೂಡಲೇ ' ಸಾಕ್ಷಾತ್ ಕೃಷ್ಣನೇ ಬಂದ ' ಎಂದು ಎಲ್ಲ ಕೃಷ್ಣನ ಮಡದಿಯರು ಎದ್ದು ನಿಂತರು. ಆದರೆ ರುಕ್ಮಿಣಿಗೆ ಮಾತ್ರ ಅವನನ್ನು ಕಂಡ ಕೂಡಲೇ ತನ್ನ ಮಗ ಪ್ರದ್ಯುಮ್ನನ ನೆನಪಾಯಿತು. ಅವಳ ಕಣ್ಣು ಹನಿಗೂಡಿತು. ಅವಳು ತನ್ನ

ಮನಸ್ಸಿನಲ್ಲಿ "ಈ ಕುಮಾರನನ್ನು ಹಡೆದ ತಾಯಿಯು ಧನ್ಯಳಾಗಿದ್ದಾಳೆ. ನನ್ನ ಮಗನಾದ ಪ್ರದ್ಯುಮ್ನನು ಬದುಕಿದ್ದರೆ ಇದೇ ವಯಸ್ಸಿನವನಿರುತ್ತಿದ್ದ" ಎಂದು ತನ್ನಷ್ಟಕ್ಕೆ ಮನಸ್ಸಿನಲ್ಲಿ ಎಂದುಕೊಂಡು ಅವನಿಗೆ ಕೇಳಿದಳು.

"ಮಗು, ನಿನ್ನನ್ನು ಹಡೆದ ಪುಣ್ಯಾತ್ಮಳು ಯಾರಪ್ಪ ! ನನಗೇಕೋ ನಿನ್ನ ಮೇಲೆ ಬಹಳ ಪ್ರೀತಿಯು ಉಕ್ಕಿ ಬರುತ್ತಲಿದೆ. ನಿನ್ನ ಮುಖ, ಹಾಗೂ ಚೆಲುವು ನಿಲುವುಗಳನ್ನು ಕಂಡರೆ ನಮ್ಮ ಪತಿ ಕೃಷ್ಣಪ್ರಭುವಿನ ತದ್ರೂಪದಂತಿದೆ. ನೀನು ಅವರ ಮಗನೇ ಆಗಿರಬೇಕು. ನೀನಾರು ಹೇಳು ?". ಇಷ್ಟರಲ್ಲಿ ಅಲ್ಲಿಗೆ ಶ್ರೀಕೃಷ್ಣನೊಂದಿಗೆ ನಾರದರು ಬಂದರು. ತಾಯಿ ರುಕ್ಮಿಣೀ ದೇವಿಗೆ ಸಂತೋಷಭರಿತರಾಗಿ ಹೇಳಿದರು. "ತಾಯಿ, ಇವನು ನಿನ್ನ ಮಗ ಪ್ರದ್ಯುಮ್ನ. ಇವನನ್ನು ಕೂಸಿದ್ದಾಗಲೇ ಮಾಯೆಯಿಂದ ಕದ್ದೊಯ್ದ ದುಷ್ಟ ಶಂಬರಾಸುರನನ್ನು ಕೊಂದು ಈಗ ನಿನ್ನ ಬಳಿಗೆ ಬಂದಿದ್ದಾನೆ. ಇವಳು ಅವನ ಮಡದಿಯಾದ ಮಾಯಾವತಿ. ಇವಳು ಶಂಬರಾಸುರನ ಪತ್ನಿಯಲ್ಲ. ಹಿಂದೆ ಮಹಾದೇವನ ಕಣ್ಣಿನಿಂದ ದಗ್ಧನಾದ ಕಾಮನೇ ಈಗ ಈ ಪ್ರದ್ಯುಮ್ನನಾಗಿ ಜನಿಸಿದ್ದಾನೆ. ಅವನ ಪತ್ನಿ ರತಿದೇವಿಯೇ ಮಾಯಾವತಿಯಾಗಿ ಕಾಮದಹನದ ನಂತರ ಆಕಾಶವಾಣಿಯನ್ನು ಆಲಿಸಿ ಸತಿ ಹೋಗದೇ ಶಂಬರಾಸುರನ ಮನೆಯಲ್ಲಿದ್ದಳು. ತನ್ನ ಮಾಯೆಯಿಂದ ಬೇರೊಬ್ಬ ಸ್ತ್ರೀಯನ್ನು ಆ ದೈತ್ಯನ ಸೇವೆಗೆ ನಿಯೋಜಿಸಿ ತಾನು ಅವನನ್ನು ಸ್ಪರ್ಶ ಕೂಡ ಮಾಡದೇ ತನ್ನ ಪತಿಯ ಬರುವನ್ನು ನಿರೀಕ್ಷಿಸುತ್ತ ವಾಸವಾಗಿದ್ದಳು. ಶಂಬರಾಸುರನು ನಾರದರ (ನನ್ನ) ಬಾಯಿಂದ ತನ್ನನ್ನು ಕೊಲ್ಲಲ್ಲು ಜನಿಸಿದ ಪ್ರದ್ಯುಮ್ನನ ಉತ್ಪತ್ತಿಯ ಸುದ್ದಿ ಕೇಳಿ, ಮಾಯೆಯಿಂದ ದ್ವಾರಕೆಗೆ ಬಂದು ಬಾಣಂತಿಯ ಕೋಣೆಯಿಂದ ಈ ಕೂಸನ್ನು ಅಪಹರಿಸಿ ಕಡಲಿನಲ್ಲಿ ಚೆಲ್ಲಿದನು. ಅದನ್ನು ಮೀನು ನುಂಗಿತು. ಆ ಮೀನವನ್ನು ಮೀನುಗಾರರು ಬಲಿಹಾಕಿ ಹಿಡಿದು ಶಂಬರಾಸುರನ ಮನೆಗೆ ತಂದು ಕೊಟ್ಟರು. ಅದರ ಹೊಟ್ಟೆಯಲ್ಲಿರುವ ಈ ಮಗುವನ್ನು ಇವಳು ಬೆಳೆಸಿದಳು. ತಂದೆ-ತಾಯಿಗಳ ದರ್ಶನಕ್ಕಾಗಿ ಬಂದಿದ್ದಾನೆ. ಇವನು ನಿನ್ನ ಮಗ. ಇವಳು ನಿನ್ನಸೊಸೆ. ಇವ ಕಾಮ; ಇವಳು ಅವನ ಕಾಮಿನಿ ರತಿ" ಎಂದು ಎಲ್ಲ ಸಮಾಚಾರವನ್ನು ತಿಳಿಸಿ ಹೇಳಿದರು.

ಅದನ್ನು ಕೇಳಿ ರುಕ್ಮಿಣೀ ಶ್ರೀ ಕೃಷ್ಣರಿಗೆ ಪರಮಾನಂದವಾಯಿತು. ಬಹುವರ್ಷದಿಂದ ಕಳೆದು ಹೋದ ಆ ಶ್ರೀ ಕೃಷ್ಣಕುಮಾರನು ಮರಳಿ ದ್ವಾರಕೆಗೆ ಬಂದದ್ದನ್ನು ಕಂಡು ಇಡೀ ದ್ವಾರಕಾ ಪಟ್ಟಣವೆಲ್ಲವೂ ಆನಂದದಿಂದ ಕುಣಿದಾಡಿತು. ಅವರೆಲ್ಲರೂ ಆಶ್ಚರ್ಯದಿಂದ ರುಕ್ಮಿಣೀ ದೇವಿಯ ಭಾಗ್ಯವನ್ನು ಕೊಂಡಾಡಿದರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ತೇಳನೇ ಅಧ್ಯಾಯ ಸಂಪೂರ್ಣ*

—o—

**"ಕೃಷ್ಣನ ಮೊಮ್ಮಗ ರುಕ್ಮಿಯ ಮೊಮ್ಮಗಳೀರ್ವರ ಮದುವೆಗೆ ಕೂಡಿದರು**
**ಇಬ್ಬಣ ಬೀಗರು ಮದುವೆಯ ನಂತರ ಮೋಜಿನ ಲೆತ್ತವನಾಡಿದರು ।**
**ರುಕ್ಮಿ ಕಲಿಂಗನ ಸಲಹೆಯ ಮೇರೆಗೆ ಬಲನಿಗೆ ಮೋಸವ ಮಾಡಿದನು**
**ಬಲ ತಾ ಲೆತ್ತವನೆಸೆಯುತ ರುಕ್ಮಿಯ ಮಸಣದ ಗೀತವ ಹಾಡಿದನು ॥**

## ರುಕ್ಮಿಯ ವಧ

ಶ್ರೀ ರುಕ್ಮಿಣೀದೇವಿಗೆ ಪ್ರದ್ಯುಮ್ನನಲ್ಲದೇ ಮತ್ತೆ ಬೇರೆ ಹತ್ತು ಜನ ಮಕ್ಕಳಾದರು. ಚಾರುದೇಷ್ಣ, ಸುದೇಷ್ಣ, ಚಾರುದೇಹ, ಸುಷೇಣ, ವೀರ್ಯವಾನ್, ಚಾರುಗುಪ್ತ, ಭದ್ರಚಾರು, ಅರವಿಂದ, ಸುಚಾರು, ಚಾರು ಎಂದು ಅವರ ಹೆಸರು. ರುಕ್ಮಿಣೀದೇವಿಯಲ್ಲದೆ ಶ್ರೀ ಕೃಷ್ಣದೇವನಿಗೆ ಕಾಲಿಂದೀ, ಸತ್ಯಭಾಮಾ, ಮಿತ್ರವಿಂದಾ, ನಗ್ನಜಿತನ ಮಗಳಾದ ಸತ್ಯಾ, ಜಾಂಬವತೀ, ಭದ್ರಾ, ಲಕ್ಷ್ಮಣಾ ಎಂದು ಏಳು ಜನರು ಮಡದಿಯರಿದ್ದರು. ಇವರಲ್ಲದೇ ಹದಿನಾರು ಸಾವಿರದ ನೂರ ಹೆಂಡಂದಿರು ಬೇರೆ ಇದ್ದರು. ರುಕ್ಮಿಣಿಯ ಮಗನಾದ ಪ್ರದ್ಯುಮ್ನನು ತನ್ನ ಸೋದರಮಾವ ರುಕ್ಮಿಯ ಮಗಳ ಸ್ವಯಂವರಕ್ಕೆ ಹೋಗಿದ್ದನು. ಅವನನ್ನು ರುಕ್ಮವತಿಯು ಸ್ವಯಂವರದಲ್ಲಿ ವರಿಸಿ ಮಾಲೆ ಹಾಕಿದಳು. ಅವಳಲ್ಲಿ ಪ್ರದ್ಯುಮ್ನನಿಗೆ ಅನಿರುದ್ಧ ಎಂಬ ಮಗನು ಹುಟ್ಟಿದನು. ಆ ಅನಿರುದ್ಧನಿಗೆ ರುಕ್ಮಿಯ ಮೊಮ್ಮಗಳನ್ನು ಕೊಡಬೇಕೆಂದು ಕೃಷ್ಣನು ಕೇಳಿದನು. ಅದಕ್ಕೆ ರುಕ್ಮಿಯು ಸಮ್ಮತಿಸಿದ. ಯಾದವರೆಲ್ಲರೂ ಭೋಜಕಟ ಪಟ್ಟಣಕ್ಕೆ ಮದುವೆಗೆ ಹೋಗಿದ್ದರು. ವಿವಾಹವು ಸಾಂಗವಾಗಿ ನೆರವೇರಿತು. ಕೊನೆಯ ದಿನ ಕಲಿಂಗರಾಜ ಮೊದಲಾದವರು ರುಕ್ಮಿಯ ಬಳಿಗೆ ಬಂದು ಸಲಹೆ ಮಾಡಿದರು. "ಬಲರಾಮನಿಗೆ ಲೆತ್ತವಾಡುವ ವ್ಯಸನವಿದೆ. ಆದರೆ ಅವನಿಗೆ ಆ ಆಟದಲ್ಲಿ ಕೌಶಲ್ಯವಿಲ್ಲ. ಅವನು ಅದರಲ್ಲಿ ತೀರದಡ್ಡ. ಅವನನ್ನು ಯುದ್ಧದಲ್ಲಿ ಎಂದಿಗೂ ಗೆಲ್ಲಲಾರದ ನಾವು ಈ ದ್ಯೂತದಲ್ಲಿಯಾದರೂ ಈಗ ಏಕೆ ಗೆಲ್ಲಬಾರದು ?"

ಮದಾಂಧನಾದ ರುಕ್ಮಿಗೆ ಕಲಿಂಗರಾಜನ ಈ ಸಲಹೆಯು ಸೂಕ್ತವೆನಿಸಿತು. ಅವನು ಬಲರಾಮನನ್ನು ದ್ಯೂತಕ್ಕೆ ಆಹ್ವಾನಿಸಿದನು. ರಾಜ ದರ್ಬಾರದಲ್ಲಿಯೇ ಜೂಜಾಟವು ಪ್ರಾರಂಭವಾಯಿತು. ಆಟದ ಮೊದಲಿಗೇ ಬಲರಾಮನಿಂದ ರುಕ್ಮಿಯು ಸಾವಿರ ಬಂಗಾರದ ನಾಣ್ಯಗಳನ್ನು ಗೆದ್ದನು. ಎರಡನೆಯ ಆಟದಲ್ಲಿಯೂ ಮತ್ತೆ ಸಾವಿರ ಸುವರ್ಣ ಮುದ್ರೆಗಳನ್ನು ಬಲರಾಮನು ಪಣಕ್ಕೆ ಒಡ್ಡಿದ. ಅವುಗಳನ್ನೂ ರುಕ್ಮಿಯು ಗೆದ್ದ. ಅನಂತರ ಹತ್ತು ಸಾವಿರ ಪಣಗಳನ್ನು ಬಲದೇವನು ಪಣಕ್ಕೆ ಇಟ್ಟ. ರುಕ್ಮಿಯು ಇಂಥ ಜೂಜಾಟದಲ್ಲಿಯೇ ಜನ್ಮ ಕಳೆದ ಜಾಣ. ಆ ಪಣವನ್ನೂ ಅರೆಚಣದಲ್ಲಿಗೆದ್ದು ಬಿಟ್ಟ. ಅದನ್ನು ಕಂಡು ಕಲಿಂಗರಾಜನು ಅಟ್ಟಹಾಸ ಗೈದು ನಕ್ಕ. ಅದರಿಂದ ರುಕ್ಮಿಗೂ ಮದವೇರಿತು. ವಿವೇಕಭ್ರಷ್ಟನಾಗಿ ನುಡಿದ - "ಈ ಬಲರಾಮನಿಗೆ ದ್ಯೂತದಲ್ಲಿ

ಜ್ಞಾನವಿಲ್ಲ. ಆಡುವದನ್ನು ಬಿಡುವದಿಲ್ಲ. ನಾನು ಇವನನ್ನು ಕ್ಷಣದಲ್ಲಿ ಗೆದ್ದುಬಿಟ್ಟೆ. ಇವನಂಥ ದಡ್ಡರೊಡನೆ ಆಟವಾಡುವದೆಂದರೆ ನಮ್ಮಂಥ ದ್ಯೂತಕೋವಿದರಿಗೆ ಅಪಮಾನವಾದಂತೆಯೇ ಸರಿ. ಇಂಥ ಅನಭಿಜ್ಞನು ನಮ್ಮೊಡನೆ ಆಡಿದ್ದೇಕೆ ? ನಮಗೆ ಅವಮಾನ ಮಾಡಿದ್ದೇಕೆ ?'' ಅದನ್ನು ಕೇಳಿ ಕಲಿಂಗರಾಜನು ಹಲ್ಲು ಕಿರಿದು ನಕ್ಕನು. ಅದನ್ನು ಕಂಡು, ಕೇಳಿ ಬಲದೇವನಿಗೆ ಸಿಟ್ಟು ಸಿಡಿದೆದ್ದಿತು. ಆದರೂ ಸಂಯಮಿಯಾದ ಅವನು ಬೇರೆ ಮಾತನಾಡದೆ ಒಂದು ಕೋಟಿ ಸುವರ್ಣ ನಾಣ್ಯಗಳನ್ನು ತೆಗೆದು ಪಣದ ಪಟ್ಟದ ಮೇಲಿರಿಸಿದನು. ರುಕ್ಮಿಯು ಆಗ ಅತ್ಯಾನಂದದಿಂದ ದಾಳಗಳನ್ನು ಕೈಯಲ್ಲಿ ತೆಗೆದುಕೊಂಡು ಪಟ್ಟದ ಮೇಲೆ ಉರುಳಿಸಿದ. ಅವನ ಇಚ್ಛೆಯಂತೆ 'ಘಾಸಿ' ಬೀಳಲಿಲ್ಲ. ಬಲರಾಮನ ಪಾಳಿ ಬಂದಾಗ ಬಲರಾಮನು ಬಯಸಿದಂತೆಯೇ ದಾಳಗಳು ಉರುಳಿ 'ಘಾಸಿ' ಬಿದ್ದಿತು. ಅದನ್ನು ಕಂಡು ಬಲರಾಮನು 'ನಾನು ಗೆದ್ದೆ!' ಎಂದು ಕೂಗಿದ. 'ನಾನು ಗೆದ್ದೆ!' ಎಂದು ರುಕ್ಮಿಯು ಚೀರಿದ. ಬಾಯಿಗೆ ಬಾಯಿ ಹತ್ತಿತು.

''ನೀನು ಸುಳ್ಳಾಡುವಿ...........''
''ನೀನು ಸುಳ್ಳಾಡುವಿ...........''
''ನೀನು ಸೋತಿರುವಿ...........''
''ನೀನು ಸೋತಿರುವಿ...........''

ಈ ಕೋಲಾಹಲದಲ್ಲಿ ಆ ಅರಮನೆ ಹಾಗೂ ದೇಶ ದೊರೆಯಾದ ರುಕ್ಮಿಯು ದೊಡ್ಡದನಿ ತೆಗೆದು ದರ್ಪದಿಂದ ಬಲರಾಮನಿಗೆ ನುಡಿದನು - ''ಬಲದೇವ, ನೀನು ಪಣವನ್ನು ಒಡ್ಡಿದ್ದೂ ನಿಜ, ದಾಳಗಳನ್ನು ಉರುಳಿಸಿದ್ದೂ ನಿಜ. ಆದರೆ ಆ ದಾಳಗಳು ಮಾತ್ರ ನೀನು ಬಯಸಿದಂತೆ ಬೀಳಲಿಲ್ಲ. ನೀನು ಸುಮ್ಮನೆ ಗೆದ್ದೆನೆಂದು ಕೂಗಾಡುತ್ತಲಿರುವೆ. ಇದಕ್ಕೆ ಸರ್ವಥಾ ನನ್ನ ಸಮ್ಮತಿ ಇಲ್ಲ. ನೀನು ಸುಳ್ಳು ಮಾತನಾಡಬೇಡ. ಸರಿಯಾಗಿ ದಾಳಗಳು ಘಾಸಿಬೀಳದೆ ನೀನು ಈ ಆಟವನ್ನು ಗೆಲ್ಲುವದಾದರೆ, ನಾನೇಕೆ ಗೆದ್ದಂತಾಗಬಾರದು ?'' ರುಕ್ಮಿಯು ಇಂತು ನುಡಿಯುತ್ತಿರಲಾಗಿ ಒಮ್ಮೆಲೆ ಆಕಾಶವಾಣಿಯಾಯಿತು - ''ಬಲರಾಮನು ನಿಜವಾಗಿಯು ಈ ಆಟದಲ್ಲಿ ನ್ಯಾಯವಾಗಿ ಗೆದ್ದಿದ್ದಾನೆ. ರುಕ್ಮಿಯು ಸುಳ್ಳು ಮಾತನಾಡುತ್ತಿದ್ದಾನೆ.''

ಇದನ್ನು ಕೇಳಿ ಬಲರಾಮನಿಗೆ ರುಕ್ಮಿಯು ಮೋಸ ಮಾಡುತ್ತಲಿದ್ದಾನೆ ಎಂದು ನಿಶ್ಚಯವಾಗಿ ಕೋಪದಿಂದ ಅವನು ಕಿಡಿ ಕಿಡಿಯಾದನು. ಕ್ರುದ್ಧ ಮುದ್ರೆಯಿಂದ ಅವನು ಒಮ್ಮೆಲೆ ಎದ್ದು ನಿಂತು ಕೈಯಲ್ಲಿರುವ ದಾಳದಿಂದ ರುಕ್ಮಿಗೆ ಹೊಡೆದನು. ಮತ್ತು ದುರ್ಬುದ್ಧಿಯಿಂದ ಅಲ್ಲಿಯೇ ಕೊಬ್ಬಿನಿಂತಿರುವ ಕಲಿಂಗರಾಜನನ್ನು ಎಳೆದು ಬಾಯಿ ಮೇಲೆ ಬಡೆದನು. ಅದರಿಂದ ಹಲ್ಲು ಕಿರಿದು ನಕ್ಕು ಬಲರಾಮನನ್ನು ಉಪಹಾಸಗೈದ ಆ ಕಲಿಂಗನ ಹಲ್ಲುಗಳೆಲ್ಲವೂ ಪಳ- ಪಳ ಉದುರಿ ಬಿದ್ದವು. ಅನಂತರ ಬಲರಾಮನು ಆ ರಾಜ ದರ್ಬಾರದಲ್ಲಿ ಇರುವ ಒಂದು ಬಂಗಾರದ ಕಂಬವನ್ನು ಕಿತ್ತಿ ಉಳಿದೆಲ್ಲ ರುಕ್ಮಿಯ ಅನುಚರರಾದ ರಾಜರನ್ನು ಹೊಡೆದು ಹೆಣಹಾಕಿದನು. ಅವನ ಏಟನ್ನು ತಾಳಲಾರದೆ

ರುಕ್ಮಿಯು ಆಟದ ಪಟ್ಟದ ಮೇಲೆಯೇ ಬಿದ್ದು ಪ್ರಾಣ ಬಿಟ್ಟನು. ಅದನ್ನು ಕಂಡು ನೆರೆದವರೆಲ್ಲರೂ ಹಾಹಾಕಾರಮಾಡಿದರು. ಉಳಿದವರೆಲ್ಲರೂ ಓಡಿಹೋದರು. ಬಲರಾಮನ ಆ ರೌದ್ರಾವತಾರವನ್ನು ನೋಡಿ ನೆರೆದ ಎರಡೂ ಪಕ್ಷದ ನಿಬ್ಬಣದ ಜನರು ಉದ್ಭ್ರಾಂತರಾಗಿ ನಡುಗ ಹತ್ತಿದರು. ಕೃಷ್ಣನಿಗೂ ಉಭಯ ಸಂಕಟ. ಬಲರಾಮ ಮಾಡಿದ್ದು ಸರಿಯೆಂದರೆ ರುಕ್ಮಿಣಿಗೆ ಸಿಟ್ಟು. ತಪ್ಪು ಎಂದರೆ ತನ್ನ ಅಣ್ಣನಿಗೆ ಸಿಟ್ಟು. ಆದುದರಿಂದ ಅವನು ಏನನ್ನೂ ಮಾತನಾಡದೆ ಸುಮ್ಮನೆ ಕುಳಿತನು. ಮತ್ತು ತನ್ನ ಮೊಮ್ಮಗನಾದ ಅನಿರುದ್ಧ ಮತ್ತು ಮದುಮಗಳಾದ ರುಕ್ಮಿಯ ಮೊಮ್ಮಗಳು ಇವರಿಬ್ಬರನ್ನು ಕರೆದುಕೊಂಡು ದ್ವಾರಕೆಗೆ ನಡೆದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತೆಂಟನೇ ಅಧ್ಯಾಯ ಸಂಪೂರ್ಣ*



## ಅಧ್ಯಾಯ - ೨೯

**"ಇಂದ್ರ ಬಂದು ಪ್ರಾರ್ಥಿಸಿದ "ಕೃಷ್ಣ ನೀನಿಂದು ಆರ್ತ ಬಂಧು**
**ನರಕನೆಂಬ ಸುರರಿಪುವ ಕೊಂದು ನೀನೆಮ್ಮ ಪೊರೆಯೊ" ಎಂದು.**
**ಗರುಡನೇರಿ ಹರಿ ಮಡದಿಯೊಡನೆ ಮುರಪಾಶಗಳನು ಕಡಿದ**
**ವಧಿಸಿ ನರಕನನು ಅದಿತಿಕುಂಡಲೋಪ್ಪಿಸಲು ದಿವಿಗೆ ನಡೆದ"**

### ನರಕಾಸುರನ ಸಂಹಾರ ಸ್ವರ್ಗಲೋಕದ ಸಂಚಾರ

ಶ್ರೀ ಕೃಷ್ಣನು ದ್ವಾರಕೆಯಲ್ಲಿ ವಾಸ ಮಾಡಿದಾಗ ದೇವೇಂದ್ರನು ಐರಾವತವನ್ನು ಏರಿಕೊಂಡು ಅಲ್ಲಿಗೆ ಬಂದನು. ಶ್ರೀ ಕೃಷ್ಣನನ್ನು ಭೇಟಿಯಾಗಿ ನರಕಾಸುರನ ಉಪಟಳ ಉಪದ್ವ್ಯಾಪಗಳನ್ನು ಅವನಿಗೆ ತಿಳಿಸಿದನು. "ದೇವರೊಡನೆಯ, ನೀನು ಮಾನವನಾಗಿ ಇದ್ದರೂ ದೇವಮಾನವರೆಲ್ಲರ ದುಃಖಗಳನ್ನು ಅಳಿದಿರುವೆ. ಚಿಂತೆಗಳನ್ನು ಕಳೆದಿರುವೆ. ತಾಪಗಳನ್ನು ತೊಳೆದಿರುವೆ. ತಪಸ್ವಿಗಳಿಗೆ ತೊಂದರೆ ಕೊಡುವ ಅರಿಷ್ಟನನ್ನು ಕೊಂದಿರುವೆ. ದೇವಕನನ್ನು ವಧಿಸಿರುವೆ. ಕೇಶಿಯನ್ನು ಸಂಹರಿಸಿರುವೆ. ಕಂಸನನ್ನು ಧ್ವಂಸಗೈದಿರುವೆ. ಕುವಲಯಾಪೀಡನನ್ನು ಮರ್ದಿಸಿರುವೆ. ಮಕ್ಕಳ ಮಾರಿಯಾದ ಪೂತನಿಯನ್ನು ನಾಶ ಮಾಡಿರುವೆ. ಇವರಲ್ಲದೆ ಇನ್ನೂ ಅನೇಕ ಲೋಕ ಕಂಟಕರಾದ ದುರುಳದಾನವರನ್ನು ಹೊಡೆದು ಯಮಸದನಕ್ಕೆ ಅಟ್ಟಿರುವೆ. ನಿನ್ನ ಬಾಹುಬಲದಿಂದ ಸಂರಕ್ಷಿತವಾದ ಈ ಮೂರು ಲೋಕಗಳಲ್ಲಿ ವ್ಯವಸ್ಥಿತವಾಗಿ ಯಜ್ಞಯಾಗಾದಿಗಳು ನಡೆಯುತ್ತಿರುವದರಿಂದ ದೇವತೆಗಳಿಗೆಲ್ಲ ತೃಪ್ತಿ ಉಂಟಾಗಿದೆ.

ಕೃಷ್ಣ, ನಾನೀಗ ಒಂದು ವಿಶೇಷ ಕಾರ್ಯಕ್ಕಾಗಿ ನಿನ್ನ ಬಳಿಗೆ ಬಂದಿದ್ದೇನೆ. ಪ್ರಾಗ್ ಜ್ಯೋತಿಷ ಪಟ್ಟಣದ ಒಡೆಯನಾದ ನರಕಾಸುರನು ಜನರಿಗೆಲ್ಲ ಬಹಳ ಪೀಡೆಯನ್ನು ಕೊಡುತ್ತಲಿದ್ದಾನೆ. ಆ ದುಷ್ಟನಾದ ದೈತ್ಯರಾಜನು ಅನೇಕ ದೇವತೆಗಳನ್ನು ಗೆದ್ದು, ಸಿದ್ಧರನ್ನು ಸೋಲಿಸಿ, ದಾನವರನ್ನುಕೊಂದು, ಮಾನವರನ್ನು ನಿಗ್ರಹಿಸಿ, ಅವರೆಲ್ಲರ ಮನೆತನಗಳಲ್ಲಿಯ ಕನ್ಯೆಯರನ್ನು ಕೈಸೆರೆಗೈದು, ಗೆದ್ದು ತಂದು, ಅವರೆಲ್ಲರನ್ನೂ ತನ್ನ ಅಂತಃಪುರದಲ್ಲಿ ಇರಿಸಿಗೊಂಡಿದ್ದಾನೆ. ಇದರಂತೆ ನೀರನ್ನು ಸಿಂಪಡಿಸುವ ವರುಣನ ಛತ್ರವನ್ನು ಹೊತ್ತು ತಂದಿದ್ದಾನೆ. ಮಂದರ ಪರ್ವತದ ಮಣಿಪರ್ವತವೆಂಬ ಶಿಖರವನ್ನು ಹೊತ್ತು ತಂದಿದ್ದಾನೆ. ನನ್ನ ತಾಯಿಯಾದ ಅದಿತಿದೇವಿಯ ಅಮೃತ ಸುರಿಸುವ ಎರಡೂ ಕರ್ಣಕುಂಡಲಗಳನ್ನು ಕಸಿದು ತಂದಿದ್ದಾನೆ. ಈಗ ಅವನು ನನ್ನ ಐರಾವತ ಆನೆಯನ್ನು ಕೂಡ ಅಪಹರಿಸಬೇಕೆಂದು ಹೊಂಚು ಹಾಕಿದ್ದಾನೆ. ಅದಕ್ಕಾಗಿ ಅವನಿಗೆ ಏನು ಮಾಡಬೇಕು? ನೀನೇ ಯೋಚಿಸಿ ಮಾಡು". ಅದನ್ನು ಕೇಳಿ ಆ ದೇವಕಿಯ ಕುಮಾರನಾದ ಕೃಷ್ಣನು ನಸುನಗೆಯನ್ನು ಬೀರಿ ಇಂದ್ರನ ಕೈ ಹಿಡಿದು, ಆಸನದಿಂದ ಎದ್ದನು. ತನ್ನ ವಾಹನವಾದ ಗರುಡನನ್ನು ನಿಂತಲ್ಲಿಯೇ ನೆನೆದನು. ಕೂಡಲೇ ಗರುಡನು ಅಲ್ಲಿಗೆ ಬಂದು ಕೈ ಮುಗಿದು ನಿಂತ. ಆಗ ಕೃಷ್ಣನು ತನ್ನ ಮೆಚ್ಚಿನ ಮಡದಿಯಾದ ಸತ್ಯಭಾಮೆಯನ್ನು

ಗರುಡನ ಮೇಲೆ ಮೊದಲು ಏರಿಸಿ ಕೂಡಿಸಿ ನಂತರ ತಾನೂ ಆರೋಹಣ ಮಾಡಿದನು. "ದ್ವಾರಕೆಯಿಂದ ನೇರವಾಗಿ ಪ್ರಾಗ್ಜ್ಯೋತಿಷ ಪುರಕ್ಕೆ ನಡೆ" ಎಂದು ಗರುಡನಿಗೆ ಅಪ್ಪಣೆಗೈದನು. ಅದರಂತೆ ಕೃಷ್ಣ ಸತ್ಯಭಾಮೆಯರನ್ನು ಹೆಗಲ ಮೇಲೆ ಹೊತ್ತು ಗರುಡನು ಗಗನಕ್ಕೆ ಗಕ್ಕನೆ ನೆಗೆದು ಪ್ರಾಗ್ಜ್ಯೋತಿಷ ಪುರದೆಡೆಗೆ ನಡೆದನು. ಇತ್ತ ಇಂದ್ರನೂ ಐರಾವತವನ್ನು ಏರಿಕೊಂಡು ಸ್ವರ್ಗಕ್ಕೆ ತೆರಳಿದನು. ಶ್ರೀ ಕೃಷ್ಣ ಮತ್ತು ಸತ್ಯಭಾಮೆಯರು ಗರುಡಾರೂಢರಾಗಿ ನಡೆದುದನ್ನು ನೋಡಿ ದ್ವಾರಕಾನಗರಿಯ ನಾಗರೀಕ ನರನಾರಿಯರೆಲ್ಲರೂ ಆಶ್ಚರ್ಯಪಟ್ಟರು. ಪ್ರಾಗ್ಜ್ಯೋತಿಷಪುರದ ಸುತ್ತು ಮುತ್ತ ನೂರು ಯೋಜನ ವರೆಗೆ ಮುರ ಎಂಬ ದೈತ್ಯನು ಖಡ್ಗಧಾರೆಯಂತೆ ಅತ್ಯಂತ ಚೂಪಾದ ಮೊನೆಯುಳ್ಳ ಘೋರವಾದ ಪಾಶಗಳನ್ನು ಬಲವಾಗಿ ಬಿಗಿದು ಕಟ್ಟಿದನು. ಆ ಎಲ್ಲ ಮುರಪಾಶಗಳನ್ನು ಶ್ರೀ ಕೃಷ್ಣನು ತನ್ನ ಸುದರ್ಶನ ಚಕ್ರದಿಂದ ಚಟ ಪಟ ಹರಿದು ಹಾಕಿದನು. ಆಗ ಕೃಷ್ಣನನ್ನು ಹೊಡೆಯಬೇಕೆಂದು ಎದ್ದು ಬಂದ ಮುರದೈತ್ಯನನ್ನು ಗೆದ್ದು ಒದ್ದು ಒಣ ಹಾಕಿದನು. ಮುಂದೆ ತನ್ನ ಎದುರಿಸಿದ ಅವನ ಏಳುಸಾವಿರ ಮಕ್ಕಳನ್ನೂ ಹೊಡೆದು ಹೆಣ ಹಾಕಿದನು. ಅವನ ಸೈನಿಕರೆಲ್ಲರೂ ಶ್ರೀ ಕೃಷ್ಣನ ಸುದರ್ಶನ ಚಕ್ರದ ಬೆಂಕಿಯ ಜ್ವಾಲೆಯಲ್ಲಿ ಬೆಂದು ದೀಪದ ಹುಳಗಳಂತೆ ಪಟಪಟ ಬಿದ್ದು ಸುಟ್ಟು ಬೂದಿಯಾದರು.

ಹೀಗೆ ಶ್ರೀ ಹರಿಯು ಮುರ, ಹಯಗ್ರೀವ ಮತ್ತು ಪಂಚಜನ ಮುಂತಾದ ದೈತ್ಯರನ್ನೆಲ್ಲ ಕೊಂದು ಒಳ್ಳೇ ವೇಗದಿಂದ ಪ್ರಾಗ್ಜ್ಯೋತಿಷಪುರಕ್ಕೆ ಧಾವಿಸಿದನು. ಅಲ್ಲಿ ನರಕಾಸುರನಿಗೂ ಶ್ರೀ ಕೃಷ್ಣನಿಗೂ ಘೋರ ಯುದ್ಧವಾಯಿತು. ಕೃಷ್ಣನು ನರಕಾಸುರನ ಅಪರಂಪಾರವಾದ ಸೇನಾಸಾಗರವನ್ನೆಲ್ಲ ತನ್ನ ಸುದರ್ಶನ ಚಕ್ರದಿಂದ ಹುರಿದು, ಹರಿದು, ತರಿದು ಹಾಕಿದನು. ನರಕಾಸುರನು ಗೋವಿಂದನ ಮೇಲೆ ಒಂದೇ ಸವನೆ ಭೀಕರವಾದ ಶಸ್ತ್ರಾಸ್ತ್ರಗಳನ್ನು ಎಸೆಯುತ್ತಲೇ ಇದ್ದನು. ಆಗ ಕೃಷ್ಣನು ಅವನ ಮೇಲೆ ಸುದರ್ಶನ ಚಕ್ರವನ್ನು ಬಿಟ್ಟನು. ನೀಚನಾದ ನರಕಾಸುರನ ಆ ದೀರ್ಘದೇಹವನ್ನು ಸುದರ್ಶನ ಚಕ್ರವು ಎರಡು ಹೋಳು ಮಾಡಿ ನೆಲಕ್ಕೆ ಬೀಳಿಸಿತು. ಆಗ ನರಕಾಸುರನ ತಾಯಿಯಾದ ಭೂದೇವಿಯು ನರಕಾಸುರನು ಕದ್ದು ತಂದ ಅದಿತಿದೇವಿಯ ಕರ್ಣಕುಂಡಲಗಳನ್ನು ತಂದು ಕೃಷ್ಣನ ಮುಂದೆ ಇರಿಸಿ ಕೈ ಮುಗಿದು ಇಂತು ಪ್ರಾರ್ಥಿಸಿದಳು.

"ನಾಥ, ನೀನು ವರಾಹ ಅವತಾರವನ್ನು ತಾಳಿ ಸಮುದ್ರದಲ್ಲಿ ಮುಳುಗಿದ ನನ್ನನ್ನು ಎತ್ತಿ ಮೇಲಕ್ಕೆ ತಂದೆ. ಆಗ ನೀನು ಮುಟ್ಟಿದ್ದರಿಂದ ಹುಟ್ಟಿದ ಈ ಮಗನೇ ನರಕಾಸುರ. ಈ ಮಗನನ್ನು ಆಗ ಕೊಟ್ಟವನೂ ನೀನೆ. ಈಗ ಕೊಂದವನೂ ನೀನೇ. ಅವನು ಅಪಹರಿಸಿತಂದ ಈ ಕುಂಡಲಗಳನ್ನು ಸ್ವೀಕರಿಸು. ಈ ನರಕನ ಸಂತತಿಯನ್ನು ಸಂರಕ್ಷಿಸು. ನನ್ನ ಮೈಮೇಲಿನ ಭಾರವನ್ನು ಹಗುರಗೊಳಿಸಲಿಕ್ಕಾಗಿಯೇ ನೀನು ವೈಕುಂಠದಿಂದ ಇಳಿದು ಬಂದಿರುವಿಯಷ್ಟೇ ? ಸರ್ವಾಂತರ್ಯಾಮಿಯಾದ ಶ್ರೀ ಹರಿಯೇ ! ನೀನು ಪ್ರಸನ್ನನಾಗು. ನರಕಾಸುರನು ಮಾಡಿದ ಅಪರಾಧವನ್ನು ಕ್ಷಮಿಸು." ಭೂದೇವಿಯ ಈ ಬಿನ್ನಹವನ್ನು ಮನ್ನಿಸಿ ಆ ಜಗನ್ನಾಥನು ಆ ನರಕಾಸುರನ ಮನೆಯಲ್ಲಿರುವ ರತ್ನದ ರಾಶಿಯನ್ನೆಲ್ಲ ತೆಗೆದುಕೊಂಡ. ಅಲ್ಲಿಂದ ಕೃಷ್ಣನು ನರಕಾಸುರನ ಅಂತಃಪುರಕ್ಕೆ ಬಂದಾಗ ಅಲ್ಲಿ

ಹದಿನಾರು ಸಾವಿರದ ಒಂದುನೂರು ಕನ್ಯೆಯರನ್ನು ಸೆರೆ ಗೈದು ಇರಿಸಿದ್ದು ಕಂಡು ಬಂದಿತು. ಮುಂದೆ ನರಕನ ಗಜಶಾಲೆಯಲ್ಲಿ ನಾಕುಕೋರೆಗಳುಳ್ಳ ಆರು ಸಾವಿರ ಆನೆಗಳು ಝೂಲಾಡುತ್ತಿದ್ದವು. ಅಶ್ವಶಾಲೆಯಲ್ಲಿ ಇಪ್ಪತ್ತೊಂದು ಲಕ್ಷ ಕಾಂಬೋಜ ದೇಶದ ಕುದುರೆಗಳು ಕೆನೆಯುತ್ತಲಿದ್ದವು. ಗೋವಿಂದನು ಆ ನರಕನ ಸೇವಕರಿಗೆ ಅಪ್ಪಣೆಗೈದು ಆ ಎಲ್ಲ ಮುತ್ತು ರತ್ನ ಹಾಗೂ ಆನೆ ಕುದುರೆಗಳನ್ನು ಅರಸ ಉಗ್ರಸೇನನಿಗೆ ಕಳಿಸಿ ಕೊಟ್ಟನು. ಮತ್ತು ವರುಣನ ಛತ್ರ ಹಾಗೂ ಮಣಿ ಪರ್ವತ ಶಿಖರಗಳನ್ನು ಗರುಡನ ಮೇಲೆ ಹೇರಿ ಸತ್ಯಭಾಮೆಯೊಂದಿಗೆ ಅವನ ಹೆಗಲ ಮೇಲೆ ಕುಳಿತು ಅದಿತಿದೇವಿಗೆ ಕುಂಡಲಗಳನ್ನು ಕೊಡಲಿಕ್ಕಾಗಿ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಇಪ್ಪತ್ತೊಂಬತ್ತನೇ ಅಧ್ಯಾಯ ಸಂಪೂರ್ಣ*



## ನರಕನ ಸೆರೆಯ ನರಕದಿಂದ ನಾರಿಯರ ಬಿಡುಗಡೆ | ಅಧ್ಯಾಯ - ೩೦

**ನರಕನ ಅರಮನೆ ನರಕದಿ ನೆರಳಿದ ಕಿತ್ತದ ಹರಿ ಬಯಸಿದ ನಂದನ - ಸತಿ**
**ಸ್ತ್ರೀಯರ ಬಿಡಿಸುತ ಕೃಷ್ಣನು ತೆರಳಿದ. ವನದಲಿ ಬೆಳೆದಿಹ ತರು ಹರಿ ಚಂದನ.**
**ಸ್ವರ್ಗಕೆ ಅದಿತಿಗೆ ಕುಂಡಲ ನೀಡಿದ ಶಚಿ ಸಲಹೆಗೆ ಹೋರಾಡಿದ ಇಂದ್ರನ**
**ಇಂದ್ರನು ಕೃಷ್ಣಗೆ ಆದರ ಮಾಡಿದ. ಸೋಲಿಸಿ ಗಿಡ ತಂದನು ಯದುನಂದನ.**

ಗರುಡನು ವರುಣನ ಕೊಡೆಯನ್ನು ಮಣಿಪರ್ವತಶೃಂಗವನ್ನೂ, ಸತ್ಯಭಾಮೆಯನ್ನೂ, ಶ್ರೀಹರಿಯನ್ನೂ ಲೀಲೆಯಿಂದ ಹೊತ್ತುಕೊಂಡು ಮುಗಿಲಿನಾಳದಲ್ಲಿ ಮೇಲೆ ಮೇಲಕ್ಕೆ ಏರುತ್ತೇರುತ್ತ ಸ್ವರ್ಗದ ಬಾಗಿಲಿಗೆ ಬಂದು ತಲುಪಿದನು. ಆಗ ಕೃಷ್ಣನು ತನ್ನ ಕೈಯಲ್ಲಿಯ ಶಂಖವನ್ನು ಊದಿದನು. ಅದನ್ನು ಕೇಳಿ ದೇವತೆಗಳೆಲ್ಲರೂ ಅರ್ಘ್ಯಪಾದ್ಯಾದಿಗಳನ್ನು ಕೈಯಲ್ಲಿ ಹಿಡಿದುಕೊಂಡು ಶ್ರೀ ಕೃಷ್ಣನನ್ನು ಸ್ವಾಗತಿಸಿ ಪೂಜೆಗೈದರು. ಆ ಬಳಿಕ ಕೃಷ್ಣನು ದೇವಮಾತೆಯಾದ ಅದಿತಿ ದೇವಿಯ ಮನೆಗೆ ಹೋದನು. ಸ್ಫಟಿಕಾಚಲದ ಶಿಖರದಂತಿರುವ ಅದಿತಿಯ ಮನೆಯಲ್ಲಿ ಇಂದ್ರನೊಂದಿಗೆ ಪ್ರವೇಶಿಸಿ ಆ ದೇವಮಾತೆಗೆ ವಂದನೆ ಮಾಡಿದನು. ಅವಳ ಕುಂಡಲಗಳನ್ನು ಅವಳಿಗೆ ಕೊಟ್ಟು ನರಕಾಸುರನ ಸಂಹಾರದ ಸಮಾಚಾರವನ್ನು ಅವಳಿಗೆ ತಿಳಿಸಿದನು. ಅದರಿಂದ ಅದಿತಿಗೆ ಬಹಳ ಸಂತೋಷವಾಯಿತು. ಅವಳು ಶ್ರೀ ಕೃಷ್ಣನನ್ನು ಸ್ತೋತ್ರ ಮಾಡಿದಳು.

**''ನಮಸ್ತೇ ಪುಂಡರೀಕಾಕ್ಷ ಭಕ್ತಾನಾಮಭಯಂಕರ**
**ಸನಾತನಾತ್ಮನ್ ಸರ್ವಾತ್ಮನ್ ಭೂತಾತ್ಮನ್ ಭೂತಭಾವನ ॥**

**ಬ್ರಹ್ಮಾದ್ಯಾಃ ಸಕಲಾ ದೇವಾ ಮನುಷ್ಯಾಃ ಪಶವಸ್ತಥಾ ।**
**ವಿಷ್ಣು-ಮಾಯಾ-ಮಹಾವರ್ತ-ಮೋಹಾಂಧ-ತಮಸಾऽವೃತಾಃ ॥**

**ಆರಾಧ್ಯ ತ್ವಾಮಭೀಪ್ಸಂತೆ ಕಾಮಾನಾತ್ಮಭವಕ್ಷಯಮ್ ।**
**ಯದೇತೇ ಪುರುಷಾ ಮಾಯಾ ಸೈವೇಯಂ ಭಗವಂಸ್ತವ ॥**

**ಮಯಾ ತ್ವಂ ಪುತ್ರಕಾಮಿನ್ಯಾ ವೈರಿಪಕ್ಷಜಯಾಯಚ**
**ಆರಾಧಿತೋ ನ ಮೋಕ್ಷಾಯ ಮಾಯಾವಿಲಸಿತಂ ಹಿ ತತ್ ॥**

**ಕೌಪೀನಾಚ್ಛಾದನ-ಪ್ರಾಯಾ ವಾಂಛಾ ಕಲ್ಪದ್ರುಮಾದಪಿ**
**ಜಾಯತೇ ಯದಪೂರ್ಣಾನಾಂ ಸೋऽಪರಾಧಃ ಸ್ವದೋಷಜಃ**

**ನಮಸ್ತೇ ಶಾಂರ್ಗಹಸ್ತಾಯಚಕ್ರಹಸ್ತಾಯ ತೇ ನಮಃ**
**ಗದಾಹಸ್ತಾಯ ತೇ ವಿಷ್ಣೋ ಶಂಖಹಸ್ತಾಯ ತೇ ನಮಃ ।**

ಭಕ್ತರಿಗೆ ಅಭಯ ವರವನ್ನು ಕೊಡುವ ಕಮಲಾಕ್ಷನೇ ಸರ್ವಾಂತರ್ಯಾಮಿಯೂ, ಸರ್ವ ಪ್ರಾಣಿ ನಿಯಾಮಕನೂ, ಜೀವಿಗಳನ್ನು ರಕ್ಷಿಸುವವನೂ, ಸನಾತನ ಸ್ವರೂಪಿಯೂ ಆದ ನಿನಗೆ ನನ್ನ ನಮಸ್ಕಾರ. ಭಗವನ್ ಬ್ರಹ್ಮಾದಿ ಸಕಲ ದೇವತೆಗಳೂ, ಮನುಷ್ಯರೂ,

ಪಶುಗಳೂ, ನಿನ್ನ ವಿಷ್ಣು ಮಾಯೆಯಿಂದ ಮೋಹಿತರಾಗುತ್ತಾರೆ. ಪ್ರಾಣಿಗಳ ಹುಟ್ಟು ಸಾವುಗಳ ಮೂಲವನ್ನೇ ಕಡಿದು ಬಿಡುವ ನಿನ್ನ ಬಳಿಗೆ ಬಂದು ನಿನ್ನಿಂದ ಮತ್ತೆ ಬೇರೆ ವಿಷಯೋಪಭೋಗಗಳನ್ನು ಬೇಡಿ ಪಡೆದುಕೊಂಡು ಹೋಗುತ್ತಾರೆ. ಇದೆಂಥ ಆಶ್ಚರ್ಯ! ಇದೂ ಒಂದು ನಿನ್ನ ಮಾಯೆಯೇ ಸರಿ. ಹೆರವರ ಮಾತೇಕೆ! ನಾನಾದರೂ ಕೂಡ ನಿನ್ನ ಆರಾಧನೆಯನ್ನು ಸಂತಾನದ ಅಪೇಕ್ಷೆಯಿಂದಾಗಲೀ ವೈರಿಗಳು ನಾಶವಾಗಬೇಕೆಂಬ ಅಪೇಕ್ಷೆಯಿಂದಾಗಲೀ ಮಾಡಿದ್ದೇನೆ. ಕೇವಲ ಮೋಕ್ಷವನ್ನು ಬಯಸಿ ನಾನೆಂದೂ ನಿನ್ನನ್ನು ಆರಾಧಿಸಿಲ್ಲ. ಇದು ಕೂಡ ನಿನ್ನ ಮಾಯೆಯ ಪ್ರಭಾವವೇ ಸರಿ. ಭಾಗ್ಯಹೀನನ ಕೈಯ್ಯಳತೆಯಲ್ಲಿ ಕಲ್ಪವೃಕ್ಷವು ಬಂದರೂ ಅವನು ಬರೀ ಲಂಗೋಟಿ ಮತ್ತೂ ಹೊದ್ದುಕೊಳ್ಳುವ ಬಟ್ಟೆಯ ತುಂಡನ್ನು ಕೇಳಿದರೆ ಕಲ್ಪವೃಕ್ಷದ್ದೇನು ತಪ್ಪು! ಅದು ಬೇಡಿಕೊಳ್ಳುವವನದೇ ತಪ್ಪು. ಆದ್ದರಿಂದ ಜಗದೊಡೆಯ, ಪ್ರಸನ್ನನಾಗು. ನಿಖಿಲ ಜಗತ್ತನ್ನೂ ನಿನ್ನ ಮಾಯೆಯಿಂದ ಮೋಹಗಳಿಸುವ ನೀನು ನನ್ನ ಅಜ್ಞಾನವನ್ನು ನಾಶಗೊಳಿಸು. 'ನಾನು ಮಹಾ ಜ್ಞಾನಿ' ಎಂದು ಅತ್ಯಲ್ಪ ಜ್ಞಾನವುಳ್ಳವರಿಗೆ ಅಹಂಕಾರವೂ ಅದರಿಂದ ಮತ್ತೆ ಅಜ್ಞಾನವೂ ಉಂಟಾಗಿರುತ್ತದೆ. ನೀನೀಗ ಅದೆಲ್ಲವನ್ನೂ ದೂರ ಮಾಡು. ನಾಲ್ಕೂ ಕೈಗಳಲ್ಲಿ ಶಂಖ, ಚಕ್ರ, ಗದಾ ಹಾಗೂ ಶಾರ್ಂಗ ಬಿಲ್ಲುಗಳನ್ನು ಹಿಡಿದ ಕೃಷ್ಣಾ, ನಿನಗೆ ನಮಸ್ಕಾರ. ವಿಷ್ಣು, ನಿನಗೆ ನಮಸ್ಕಾರ. ನಿನ್ನ ಸ್ಥೂಲ ರೂಪವನ್ನು ಏನೋ ನಾನು ಕಾಣುತ್ತಲಿದ್ದೇನೆ. ಆದರೆ ನಿನ್ನ ಮಹಾಮಹಿಮೆಯ ದಿವ್ಯಸ್ವರೂಪದ ಸೂಕ್ಷ್ಮ ಜ್ಞಾನವು ನನಗೆ ಇನ್ನೂ ಆಗಿಲ್ಲ. ಅದನ್ನು ನೀನು ಕರುಣಿಸಿ ಅಪರೋಕ್ಷ ಜ್ಞಾನವು ಉಂಟಾಗುವಂತೆ ಅನುಗ್ರಹಿಸು.'' ಅದಿತಿದೇವಿಯು ಈ ರೀತಿಯಾಗಿ ಸ್ತೋತ್ರ ಮಾಡಲು ಶ್ರೀ ಕೃಷ್ಣ ಪರಮಾತ್ಮನು ಮಂದಹಾಸ ಮಾಡಿ, ಆ ದೇವ ಕುಲದ ತಾಯಿಯನ್ನು ಕುರಿತು, ''ಅಮ್ಮಾ, ನೀನು ನನಗೆ ತಾಯಿ. ಆದುದರಿಂದ ನನಗೆ ಪುತ್ರಪ್ರೇಮದಿಂದ ವರವನ್ನು ಕೊಡು'' ಎಂದು ಬಿನ್ನಹ ಮಾಡಿಕೊಂಡನು.

ಕೃಷ್ಣನ ಈ ಮಾತನ್ನು ಕೇಳಿ ಸುಪ್ರಸನ್ನಳಾದ ಅದಿತಿ ದೇವಿಯು ಅತ್ಯಂತ ಸಂತುಷ್ಟಳಾಗಿ ''ಹಾಗೆಯೇ ಆಗಲಿ. ನರೋತ್ತಮನಾದ ಕೃಷ್ಣ, ನೀನು ಜಗತ್ತಿನಲ್ಲಿ ಎಲ್ಲ ದೇವ ದಾನವರಿಂದ ಅಜೇಯನಾಗುವೆ. ನಾನು ನಿನ್ನ ಇಚ್ಛಾನುಸಾರವಾಗಿಯೇ ಈ ವರವನ್ನು ನಿನಗೆ ಕೊಟ್ಟಿದ್ದೇನೆ'' ಎಂದು ನುಡಿದಳು. ಅನಂತರ ಕೃಷ್ಣನ ಪ್ರೀತಿಯ ಪತ್ನಿಯಾದ ಸತ್ಯಭಾಮಾದೇವಿಯು ಇಂದ್ರನ ಸುಂದರಿಯಾದ ಶಚೀ ರಾಣಿಯೊಡನೆ ಅದಿತಿ ಮಾತೆಗೆ ನಮಸ್ಕಾರ ಮಾಡಿ ''ತಾಯಿ, ಪ್ರಸನ್ನಳಾಗು. ಅಮ್ಮ, ಅನುಗ್ರಹವನ್ನು ಮಾಡು. ಅಂಬೆ, ಕರುಣೆದೋರು'' ಎಂದು ಮುಂತಾಗಿ ಭಕ್ತಿಯಿಂದ ಮತ್ತೆ ಮತ್ತೆ ಬಾಗಿ ಬೇಡಿಕೊಂಡಳು. ಅದರಿಂದ ಸುಪ್ರಸನ್ನಳಾದ ಅದಿತಿಯು ಸತ್ಯಭಾಮೆಗೆ ವರವನ್ನು ಕೊಟ್ಟಳು.

''ನನ್ನ ಪ್ರೀತಿಯ ಸೊಸೆಮುದ್ದೆ, ನಿನಗೆ ಮುಂದೆಂದೂ ಮುಪ್ಪು ಅಡರುವದಿಲ್ಲ. ಸೌಂದರ್ಯವು ಕುಂದುವುದಿಲ್ಲ. ನನ್ನ ವರದಿಂದ ನಿನಗೆ ನಿತ್ಯ ಯೌವನವು ಪ್ರಾಪ್ತವಾಗುತ್ತದೆ.'' ಅದಿತಿ ದೇವಿಯು ತನ್ನ ಮಗ ದೇವೇಂದ್ರನಿಗೆ ''ಕೃಷ್ಣ ಸತ್ಯಭಾಮೆಯರನ್ನು ವಿಶೇಷ ಗೌರವಾದರಗಳಿಂದ ಪೂಜಿಸು, ಆತ್ಮೀಯ ಸ್ನೇಹದಿಂದ

ಪುರಸ್ಕರಿಸು, ತುಂಬಿದ ಹೃದಯದಿಂದ ಅವರನ್ನು ಭೂಲೋಕಕ್ಕೆ ಬೀಳ್ಕೊಡು'' ಎಂದು ಅಪ್ಪಣೆಗೈದಳು. ತಾಯಿಯ ಆಜ್ಞೆಯಂತೆ ಶಚೀಪತಿಯು ಶ್ರೀ ಕೃಷ್ಣನನ್ನು ಅತ್ಯಾದರದಿಂದ ಪೂಜಿಸಿದನು. ಆದರೆ ಅವನ ಮಡದಿಯಾದ ಶಚೀರಾಣಿಗೆ ಮಾತ್ರ 'ಇವಳೊಬ್ಬ ಮಾನವಿ' ಎಂಬ ಭಾವನೆಯು ಬಂದು ಅವಳು ಸತ್ಯಭಾಮೆಗೆ ಹೆಚ್ಚಿನ ಆದರವನ್ನು ತೋರಿಸಲಿಲ್ಲ. ಪಾರಿಜಾತದ ಮಧುರ ಪುಷ್ಪವನ್ನು ತಂದು ತಾನೊಬ್ಬಳೇ ಮುಡಿದುಕೊಂಡು ತನ್ನನ್ನು ಸಿಂಗರಿಸಿಕೊಂಡಳು. ''ನರಲೋಕದ ನಾರಿಯರು ಇಂಥ ದೇವಭೋಗ್ಯವಾದ ಪಾರಿಜಾತದ ಹೂವನ್ನು ಧರಿಸಲು ಅನರ್ಹರು'' ಎಂದು ಭಾವಿಸಿ ಸತ್ಯಭಾಮೆಗೆ ಆ ದೇವ ಕುಸುಮವನ್ನು ಕೊಡಲಿಲ್ಲ. ಅನಂತರ ಕೃಷ್ಣನು ಸ್ವರ್ಗ ಲೋಕದ ಸುಂದರ ಉದ್ಯಾನವಾದ ನಂದನವನಕ್ಕೆ ಸತ್ಯಭಾಮೆಯೊಂದಿಗೆ ಬಂದನು. ಆ ನಂದನವನದಲ್ಲಿ ಪಾರಿಜಾತ ಗಿಡವು ತನ್ನ ಹೊಂದಳಿರುಗಳಿಂದಲೂ ಸುಂದರ ಹೂವುಗಳಿಂದಲೂ ಸೌಗಂಧವನ್ನು ಬೀರುತ್ತಲಿತ್ತು. ಹಿಂದೆ ದೇವದಾನವರು ಕೂಡಿ ಹಾಲ್ಗಡಲನ್ನು ಕಡೆಯ ತೊಡಗಿದಾಗ ಈ ಪಾರಿಜಾತ ವೃಕ್ಷವು ಸಮುದ್ರ ಮಧ್ಯದಿಂದ ಉದಿಸಿ ಬಂದಿದ್ದಿತು. ಅದರ ಕಂಪಿಂಪುಗಳನ್ನು ಸೂಸುವ ಕೆಂಪುಬಣ್ಣದ ಚಿಗುರೆಲೆಗಳನ್ನು ನೋಡಿದರೆ ಸಾಕು ಪರಮಾನಂದವಾಗುತ್ತಿತ್ತು. ಅದರ ತೊಗಟೆಯು ಬಂಗಾರದ ಬಣ್ಣದಿಂದ ಹೊಳೆಯುತ್ತಿತ್ತು.

ಅದನ್ನು ಕಂಡು ಕೃಷ್ಣನಿಗೆ ಸಂತೋಷವಾಯಿತು. ಸತ್ಯಭಾಮೆಗೆ ಉತ್ಸಾಹವೆನಿಸಿತು. ''ಇದನ್ನು ನಾವು ದ್ವಾರಕೆಗೆ ಏಕೆ ಒಯ್ಯಬಾರದು ! ಸ್ವಾಮಿ, ನೀನು ಯಾವಾಗಲೂ ನನ್ನನ್ನು ಪ್ರೀತಿಯ ರಾಣಿ ಎಂದು ಕರೆಯುತ್ತಲಿರುವೆ. ಆ ಮಾತು ನಿಜವಾದರೆ ಈ ಪಾರಿಜಾತ ವೃಕ್ಷವನ್ನು ನನ್ನ ಮನೆಯ ಮುಂದಿನ ಕೈದೋಟದಲ್ಲಿ ಸ್ಥಾಪಿಸಲು ದ್ವಾರಕೆಗೆ ತೆಗೆದುಕೊಂಡು ನಡೆ. ''ನನಗೆ ರುಕ್ಮಿಣಿಯ ಮೇಲೆ ಅಷ್ಟು ಪ್ರೀತಿಯಿಲ್ಲ. ಜಾಂಬುವತಿಯ ಮೇಲೆ ನಿನ್ನಷ್ಟು ಪ್ರೇಮವಿಲ್ಲ. ಭಾಮೆ, ನನಗೆ ನಿನ್ನ ಮೇಲೆಯೇ ನಿರತಿಶಯ ಪ್ರೇಮವಿದೆ'' ಎಂದು ಆಗಾಗ ನೀವು ಹೇಳುವ ಮಾತು ಔಪಚಾರಿಕವಲ್ಲದಿದ್ದರೆ ಈ ಪಾರಿಜಾತ ಮರವನ್ನು ಕಿತ್ತಿ ತಂದು ನನ್ನ ಮನೆಯನ್ನು ಬೆಳಗುವಂತೆ ಮಾಡಿರಿ. ಈ ಪಾರಿಜಾತ ವೃಕ್ಷದ ಎಸಳು ಕುಸುಮಗಳನ್ನು ನನ್ನ ನೀಳ್ಗೂದಲಗಳ ಹೆರಳಿನಲ್ಲಿ ಮುಡಿದುಕೊಂಡು ನನ್ನ ಸವತಿಯರ ನಡುವೆ ನಿನ್ನ ಹೆಚ್ಚಿನ ಮೆಚ್ಚಿನ ಮಡದಿಯೆಂದು ತಲೆಯೆತ್ತಿ ತಿರುಗಾಡುವಂತೆ ಕರುಣೆದೋರು' ಎಂದು ಬಿನ್ನವಿಸಿದಳು. ಅದನ್ನು ಕೇಳಿ ಕೃಷ್ಣನು ಮಂದಹಾಸ ಮಾಡಿ ಸತ್ಯಭಾಮೆಯೊಂದಿಗೆ ಸರಸ ವಿನೋದವಾಡಿ ಆ ಪಾರಿಜಾತ ವೃಕ್ಷವನ್ನು ಕೈಯಿಂದ ಕಿತ್ತಿ ಗರುಡನ ಮೇಲೆ ಇಟ್ಟನು. ಆಗ ಆ ನಂದನವನವನ್ನು ಕಾಯುವ ಸೇವಕರು ಕೃಷ್ಣನಿಗೆ ನುಡಿದರು -

''ಗೋವಿಂದ, ದೇವೇಂದ್ರನ ಪಟ್ಟದರಸಿಯಾದ ಶಚೀದೇವಿಯು ಆ ಪಾರಿಜಾತ ವೃಕ್ಷವನ್ನು ತನ್ನದನ್ನಾಗಿ ಮಾಡಿಕೊಂಡು ಪ್ರೀತಿಯಿಂದ ಪೋಷಿಸುತ್ತಿದ್ದಾಳೆ. ದೇವದಾನವರು ಸಮುದ್ರ ಮಂಥನ ಮಾಡುವಾಗ ಹುಟ್ಟಿದ ಈ ಹೂವಿನ ಗಿಡವನ್ನು ದೇವತೆಗಳೆಲ್ಲರೂ ಕೂಡಿ ದೇವೇಂದ್ರನಿಗೆ ಕೊಟ್ಟರು. ಇಂದ್ರನು ಇದನ್ನು ತನ್ನ

ಮಡದಿಯಾದ ಶಚೀದೇವಿಗೆ ಆಭರಣ ಅಲಂಕಾರಗಳಿಗಾಗಿ ಕೊಟ್ಟಿದ್ದಾನೆ. ಆ ಶಚಿಯ ಮುಖನೋಡಿ ಅವಳ ಇಚ್ಛೆಯಂತೆಯೇ ನಡೆಯುವ ದೇವೇಂದ್ರನು ಈ ಪಾರಿಜಾತ ವೃಕ್ಷವನ್ನು ನಿನಗೆಂದೂ ಬಿಟ್ಟು ಕೊಡುವದಿಲ್ಲ. ಶಚೀಲಂಪಟನಾದ ಆ ಸುರರಾಜನು ಈ ಪಾರಿಜಾತವನ್ನು ಮುಟ್ಟಿದವರ ಮೇಲೆ ತನ್ನ ವಜ್ರಾಯುಧವನ್ನೇ ಎತ್ತಿಕೊಂಡು ಏರಿ ಬರುವನು. ಎಲ್ಲ ದೇವತೆಗಳೂ ಅವನನ್ನು ಹಿಂಬಾಲಿಸಿ ನಿನ್ನೊಡನೆ ಹೋರಾಡುವರು. ಆದುದರಿಂದ ಕೃಷ್ಣ, ನೀನು ಈ ಪಾರಿಜಾತದ ಆಶೆಯನ್ನು ಬಿಡು. ಅದನ್ನು ಎತ್ತಿ ಅದು ಮೊದಲಿದ್ದಲ್ಲಿ ಇಡು. ಅದನ್ನು ಮುಟ್ಟಿದರೆ ನೀನು ಇಲ್ಲಿಂದ ಕ್ಷೇಮದಿಂದ ತೆರಳಲಾರೆ. ಸುರಕ್ಷಿತವಾಗಿ ಮನೆಗೆ ಮರಳಲಾರೆ. ಇಷ್ಟೆಲ್ಲ ದೇವತೆಗಳ ವಿರೋಧವನ್ನು ಕಟ್ಟಿಕೊಳ್ಳಬೇಡ. ಪರಿಣಾಮದಲ್ಲಿ ಸಂಕಟವನ್ನು ತರುವ ಕಾರ್ಯವನ್ನು ವಿವೇಕಿಗಳು ಎಂದೂ ಮಾಡುವುದಿಲ್ಲ. ಆದುದರಿಂದ ಈ ಪಾರಿಜಾತ ವೃಕ್ಷವನ್ನು ಮರಳಿಕೊಟ್ಟು ಬಿಡು. ಇದರ ಆಶೆಯನ್ನು ಬಿಟ್ಟು ಬಿಡು. ಇದನ್ನು ಮೊದಲಿನ ಸ್ಥಾನದಲ್ಲಿಯೇ ಇಟ್ಟುಬಿಡು.'' ಆ ವನಪಾಲರ ನುಡಿಗಳನ್ನು ಕೇಳಿ ಸತ್ಯಭಾಮೆಯು ಕೋಪದಿಂದ ಕಿಡಿಕಿಡಿಯಾದಳು. ಸಿಡಿಲು ಸವಾರಿಯೇರಿದ ಆ ಕೃಷ್ಣ ಕಾಮಿನಿಯು ಆ ಉಪವನ ಪಾಲಕರಿಗೆ ಇಂತು ಬಿರುನುಡಿಗಳನ್ನಾಡಿದಳು -

''ಯಾರವಳು ಶಚೀ ಎಂದರೆ ? ಅವಳಿಗೂ ಈ ಪಾರಿಜಾತಗಿಡಕ್ಕೂ ಏನು ಸಂಬಂಧ ! ಇಂದ್ರನು ದೇವತೆಗಳ ಒಡೆಯನಾದರೆ ಈ ಗಿಡದ ಮೇಲೆ ಅಧಿಕಾರ ನಡೆಸಲು ಅವನು ಎಷ್ಟರವನು! ಸಮುದ್ರದಲ್ಲಿ ಹುಟ್ಟಿದ ಗಿಡ - ಗಂಟಿಗಳ ಮೇಲೆ ಸ್ವರ್ಗದವರ ಅಧಿಕಾರವೇಕೆ ! ನೀರಿನಲ್ಲಿ ಹುಟ್ಟಿದ ಪದಾರ್ಥಗಳ ಮೇಲೆ ಮನುಷ್ಯರೆಲ್ಲರಿಗೂ ಅಧಿಕಾರ ಉಂಟು. ಅದನ್ನು ಇಂದ್ರನು ಬಲತ್ಕಾರದಿಂದ ತನ್ನ ಮನೆಯಲ್ಲಿ ತಂದಿರಿಸಿಕೊಂಡದ್ದೇ ತಪ್ಪು. ಸಮುದ್ರದಲ್ಲಿ ಹುಟ್ಟಿದ ಚಂದ್ರನು ನಮ್ಮ ಮನೆಗೆ ಮಾತ್ರ ಬೆಳದಿಂಗಳನ್ನು ಕೊಡಬೇಕು ಎಂದು ಯಾರಾದರು ಹೇಳುವರೇ ? ಚಂದ್ರನು ಯಾರ ಮನೆಯ ಸೊತ್ತೂ ಅಲ್ಲ. ಅವನು ಎಲ್ಲರ ಸೊತ್ತು. ಅದರಂತೆ ಸಮುದ್ರದಿಂದ ಹುಟ್ಟಿದ ಸಿರಿಯೂ, ಸೆರೆಯೂ ಎಲ್ಲರ ಒಡೆತನದ್ದಾಗಿವೆ. ಅದರಂತೆ ಈ ಪಾರಿಜಾತ ವೃಕ್ಷವಾದರೂ ಸರ್ವಾಧಿಕಾರವಾಗಿದೆ. ಇದರ ಮೇಲೆ ಶಚಿಗೆ ಇದ್ದಷ್ಟು ಹಕ್ಕು ನನಗೂ ಇರುತ್ತದೆ. ಗಂಡನ ಬಾಹುಬಲದ ಗರ್ವದಿಂದ ಅವಳು ನನ್ನನ್ನು ತಡೆಯ ಬಯಸಿದರೆ ಅವಳಿಗೆ ನೀವು ಈ ನನ್ನ ಸಂದೇಶವನ್ನು ಸ್ಪಷ್ಟವಾಗಿ ಹೇಳಿ ಬನ್ನಿರಿ -

'ಸತ್ಯಭಾಮೆಯಾದ ನಾನು, ಪಾರಿಜಾತ ವೃಕ್ಷವನ್ನು ಕೊಂಡೊಯ್ಯುತ್ತಿದ್ದೇನೆ. ನಿನ್ನ ಗಂಡನು ನಿನ್ನ ಕೈಯಲ್ಲಿದ್ದರೆ, ನಿನ್ನ ಗಂಡನ ಮುಂಗೈಯಲ್ಲಿ ಬಲವಿದ್ದರೆ, ನನ್ನ ಹಾಗೂ ನನ್ನ ಪತಿಯೊಡನೆ ಹೋರಾಡಿ ಆ ಪಾರಿಜಾತವನ್ನು ಉಳಿಸಿಕೊ. ನಿನ್ನ ಹಾಗೂ ನಿನ್ನ ಗಂಡನ ಬಲ ಪೌರುಷಗಳು ಎಷ್ಟಿವೆ ಎಂಬುದು ನನಗೆ ಗೊತ್ತಿದೆ. ದೇವತೆಗಳ ಒಡೆಯನೆಂದು ಗರ್ವವು ನಿಮಿಗಿದ್ದರೆ ಮನುಷ್ಯ ಮಾತ್ರಳಾದ ನಾನು ನಿಮ್ಮೆಲ್ಲರ ಸಮಕ್ಷಮವೇ ಈ ಗಿಡವನ್ನು ಕಿತ್ತಿ ಒಯ್ಯುತ್ತಲಿದ್ದೇನೆ. ಶಕ್ತಿ ಇದ್ದರೆ ಬನ್ನಿರಿ. ಅಭಿಮಾನವಿದ್ದರೆ ತಡೆಯಿರಿ. ನಾವು ದೇವತೆಗಳು ಎಂಬ ಮದ ತುಂಬಿದ ನಿಮ್ಮ ನೀರಾದರೂ ಎಷ್ಟಿದೆ ಎಂಬುದನ್ನು

ನರನಾರಿಯಾದ ನಾನು ನೋಡಿ ಬಿಡಬೇಕೆಂದು ನಿರ್ಧರಿಸಿದ್ದೇನೆ'' ಎಂದು ಹೇಳಿ ''ಈ ನನ್ನ ಗರ್ವೋಕ್ತಿಯನ್ನು ಓಡಿ ಹೋಗಿ ನಿಮ್ಮ ಒಡತಿಗೆ ತಿಳಿಸಿ ಬನ್ನಿರಿ'' ಎಂದು ಆ ನಂದನ ವನವನ್ನು ಕಾಯುವ ಆಳು ಮಕ್ಕಳನ್ನೆಲ್ಲ ಭಾಮೆಯು ಶಚಿಯ ಮನೆಗೆ ಅಟ್ಟಿದಳು. ವನರಕ್ಷಕರು ಓಡಿ ಬಂದು ಶಚೀರಾಣಿಯ ಮುಂದೆ ಸತ್ಯಭಾಮೆಯ ಗರ್ವ ಪೂರ್ಣವಾದ ಮಾತುಗಳನ್ನೆಲ್ಲ ಹೇಳಿದರು. ಆಗ ಆ ಸ್ವರ್ಗದ ಅರಸಿಯು ದೇವತೆಗಳ ಒಡೆಯನಾದ ದೇವೇಂದ್ರನ ಬಳಿಗೆ ಬಂದು ಅವನೆದರು ಕೃಷ್ಣ ಕಾಮಿನಿಯಾದ ಸತ್ಯಭಾಮೆಯ ಅಹಂಕಾರದ ನುಡಿಗಳಿಗೆಲ್ಲ ಬಣ್ಣ ಬಳೆದು ಹೇಳಿದಳು. ಮತ್ತು ಕೃಷ್ಣನ ಜೊತೆಗೆ ಯುದ್ಧಮಾಡಲು ಅವನನ್ನು ಹುರಿದುಂಬಿಸಿದಳು. ಎಲ್ಲ ದೇವತಾ ಸೇನೆಯೊಂದಿಗೆ ಒಡಗೂಡಿಕೊಂಡು ದೇವೇಂದ್ರನು ಕೃಷ್ಣನ ಮೇಲೆ ಏರಿ ಬಂದನು. ಸಮಸ್ತ ದೇವತೆಗಳು ಭಯಂಕರವಾದ ಶಸ್ತ್ರಾಸ್ತ್ರಗಳನ್ನು ಹಿಡಿದು ಕೃಷ್ಣನಿದ್ದ ಕಡೆಗೆ ಧಾವಿಸಿದರು. ಐರಾವತದ ಮೇಲೆ ಕುಳಿತು ವಜ್ರಾಯುಧವನ್ನು ಕೈಯಲ್ಲಿ ಹಿಡಿದುಕೊಂಡು ಪ್ರಚಂಡವಾದ ದೇವ ಸೇನೆಯೊಂದಿಗೆ ಯುದ್ಧಕ್ಕಾಗಿ ಸಿದ್ಧನಾಗಿ ಬಂದ ಇಂದ್ರನನ್ನು ಕಂಡು ಕೃಷ್ಣನು ತನ್ನ ಶಂಖವನ್ನು ಊದಿದನು. ಎಲ್ಲ ದೇವತೆಗಳೂ ಕೃಷ್ಣನ ಮೇಲೆ ಏಕಕಾಲದಲ್ಲಿ ತಮ್ಮ ತಮ್ಮ ಭೀಕರವಾದ ಶಸ್ತ್ರಾಸ್ತ್ರಗಳನ್ನು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಎಸೆದರು. ಈ ಎಲ್ಲ ಸಾವಿರ ಸಾವಿರ ಸಂಖ್ಯೆಯಲ್ಲಿ ಸಿಡಿದು ಬರುವ ದೇವ ಬಾಣಗಳನ್ನೆಲ್ಲ ಶ್ರೀ ಹರಿಯು ಲೀಲೆಯಿಂದಲೇ ಮುರಿದು ಮಧ್ಯದಲ್ಲಿಯೇ ನಾಶಪಡಿಸಿದನು.

ಕೃಷ್ಣನ ವಾಹನವಾದ ಗರುಡನು ವರುಣನ ಪಾಶವನ್ನು ಅವನ ಕೈಯಿಂದ ಕಸಿದು ಹಾವನ್ನು ಹರಿದು ಹಾಕುವಂತೆ ಅದನ್ನು ಮುರಿದು ಹಾಕಿದ. ತನ್ನ ಮೈ ಮೇಲೆ ಯಮಧರ್ಮನು ಪ್ರಹರಿಸಿದ ಯಮದಂಡವನ್ನು ಕೃಷ್ಣನು ತನ್ನ ಕೈಯಲ್ಲಿಯೇ ಗದೆಯನ್ನು ಬೀಸಿ ನೆಲದ ಮೇಲೆ ಬೀಳಿಸಿದನು. ಕುಬೇರನ ಪಲ್ಲಕ್ಕಿಯನ್ನು ಕೃಷ್ಣನು ಸುದರ್ಶನ ಚಕ್ರದಿಂದ ಪುಡಿಗೈದನು. ಕೃಷ್ಣನ ಕಣ್ಣಿನಲ್ಲಿ ಮಿಂಚುವ ಕಾಂತಿಕಿರಣಗಳಿಂದಲೇ ಸೂರ್ಯನ ಕಣ್ಣು ಕುಕ್ಕಿ ಅವನ ತೇಜೋವಧೆಯಾಯಿತು. ಅಷ್ಟವಸುಗಳು ಕೃಷ್ಣನ ವೀರ್ಯವನ್ನು ತಾಳಲಾಗದೇ ಅಷ್ಟ ದಿಕ್ಕುಗಳಿಗೆ ಓಡಿ ಹೋದರು. ಏಕಾದಶ ರುದ್ರಗಳ ಕೈಗಳಲ್ಲಿಯ ಶೂಲಯುಧಗಳೆಲ್ಲ ಮುರಿದು ನೆಲಕ್ಕುರುಳಿದವು. ಸಾಧ್ಯರೂ ವಿಶ್ವೇದೇವತೆಗಳೂ ಉಳಿದ ದೇವರುಗಳೂ ಮರುದ್ಗಣಗಳೂ ಗೋವಿಂದನು ಬಿಟ್ಟ ಭೀಕರ ಬಾಣಗಳಿಂದ ಮುಗಿಲಿನಲ್ಲಿ ಅರಳೆಗಳಂತೆ ತೂರಲ್ಪಟ್ಟರು.

ಆ ಗೋಪಾಲ ಕೃಷ್ಣನ ವಾಹನವಾದ ಗರುಡನೂ ಕೂಡ ತನ್ನ ಕೊಕ್ಕೆ ಹಾಗೂ ಪಕ್ಕಗಳಿಂದ ಹೊಡೆದನು. ಅನೇಕ ದೇವತೆಗಳನ್ನು ಬಡಿದು, ಹಿಡಿದು, ಕುಕ್ಕಿ, ಉಗುರುಗಳಿಂದ ಹರಿದು, ಮುಕ್ಕಿ ಸೀಳಿ ಹಾಕಿದನು. ಅನಂತರ ಇಂದ್ರ ಕೃಷ್ಣರಲ್ಲಿ ಭಯಂಕರ ಯುದ್ಧವಾಯಿತು. ಗರುಡ ಐರಾವತಗಳು ಕಲಿತನದಿಂದ ಕಾದಿದವು. ಬಾಣಗಳ ಮಹಾ ವೃಷ್ಟಿಯೇ ನಡೆಯಿತು. ಕೊನೆಗೆ ದೇವತೆಗಳ ಶಸ್ತ್ರಾಸ್ತ್ರಗಳನ್ನೆಲ್ಲ ಕೃಷ್ಣನು ಕತ್ತರಿಸಿ ಹಾಕಿದನು. ಒಬ್ಬ ದೇವತೆಯ ಕೈಯಲ್ಲಿಯೂ ಒಂದು ಅಸ್ತ್ರವು ಉಳಿಯಲಿಲ್ಲ. ಆಗ ಪರಿಕುಪಿತನಾದ ದೇವೇಂದ್ರನು ವಜ್ರಾಯುಧವನ್ನು ಎತ್ತಿ ಹರಿಯನ್ನು ಹೊಡೆಯ

ಹೊರಟ. ಇತ್ತ ಕೃಷ್ಣನೂ ಸುದರ್ಶನ ಚಕ್ರವನ್ನು ಹಿಡಿದು ನಿಂತ. ಅದನ್ನು ಕಂಡು ಮೂರು ಲೋಕದ ಜನರೆಲ್ಲರೂ ಹೌಹಾರಿ ನಿಂತರು. ಇಂದ್ರನು ತನ್ನ ಅಮೋಘ ವಜ್ರಾಯುಧವನ್ನು ಬೀಸಿ ಕೃಷ್ಣನ ಮೇಲೆ ಒಗೆದ. ಆದರೆ ಕೃಷ್ಣನು ಮಾತ್ರ ತನ್ನ ಕೈಯಲ್ಲಿಯ ಸುದರ್ಶನ ಚಕ್ರವನ್ನು ಬಿಡಲಿಲ್ಲ. ಇಂದ್ರನು ಒಗೆದ ವಜ್ರಾಯುಧವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಇಂದ್ರನಿಗೆ 'ಇನ್ನು ಗಟ್ಟಿಯಾಗಿ ನಿಲ್ಲು' ಎಂದು ಹೇಳಿದ. ತನ್ನ ವಜ್ರವನ್ನು ನಿರ್ವೀರ್ಯ ಗೊಳಿಸಿ ಕೈಯಲ್ಲಿ ಹಿಡಿದ ಕೃಷ್ಣನ ಅದ್ಭುತ ಶಕ್ತಿಯನ್ನು ಕಂಡು ಇಂದ್ರನು ಗಾಬರಿಯಾಗಿ ಓಡತೊಡಗಿದ. ಪಲಾಯನ ಗೈಯುವ ಇಂದ್ರನನ್ನು ಕಂಡು ಸತ್ಯಭಾಮೆಯು ನಕ್ಕು ನುಡಿದಳು. ''ಶಚಿಯ ಗಂಡನಾದ ನೀನು ಯುದ್ಧದಲ್ಲಿ ಸೋತು ಹೀಗೆ ಓಡುವದು ಸರಿಯಲ್ಲ. ಮೂರು ಲೋಕದ ಒಡೆಯನಾದ ನೀನು ರಣಾಂಗಣದಲ್ಲಿ ಮಾನವರಿಗೆ ಬೆನ್ನು ತೋರಿಸುವದೇ ! ಹೀಗೆ ಹೇಡಿಯಂತೆ ಓಡಿಹೋದರೆ ನಿನ್ನ ರಾಣಿ ಶಚಿಯು ನಿನ್ನ ಹತ್ತಿರ ಹೇಗೆ ಬಂದಾಳು ! ನಲುಮೆಯ ನಲ್ಲೆಯ ನಗುಮುಖದ ನೇಹದುಂಬಿದ ನೋಟಬೇಟ ಹಾಸ ವಿಲಾಸಗಳಿಲ್ಲದಿದ್ದರೆ ನಿನಗೆ ಸ್ವರ್ಗ ಸಾಮ್ರಾಜ್ಯವು ಎಂತು ಸಂತೋಷದಾಯಕವೆನಿಸೀತು ! ಪಾರಿಜಾತ ಹೂಗಳ ಮಾಲೆಯನ್ನು ಮುಡಿದು ಕೊಂಡು ಪ್ರಣಯೋತ್ಫುಲ್ಲ ಗಲ್ಲಳಾದ ನಲ್ಲೆ ಶಚಿಯ ಉಲ್ಲಾಸ ಸರಸ ವಿಲಾಸಗಳೇ ನಿನ್ನ ಸುಖ ಸರ್ವಸ್ವಲ್ಲವೇ ! ಆದರೆ ಇಂದ್ರ, ಹೀಗೆ ಯುದ್ಧದಲ್ಲಿ ಅಂಜಿ ಓಡಿ ಹೋದರೆ ನೀನು ಈ ಎಲ್ಲ ಸುಖ ಸೌಭಾಗ್ಯಗಳಿಗೂ ಎರವಾಗುವೆ.''

ಸತ್ಯಭಾಮೆಯ ಈ ನುಡಿಯನ್ನು ಕೇಳಿ ಓಡತೊಡಗಿದ ದೇವೇಂದ್ರನು ನಾಚಿಕೆಯಿಂದ ತಲೆ ತಗ್ಗಿಸಿ ನಿಂತುಕೊಂಡನು. ಅದನ್ನು ನೋಡಿ ಸತ್ಯಭಾಮಾದೇವಿಯು ಕರುಣೆ ತುಂಬಿ ಮತ್ತೆ ನುಡಿದಳು. ''ಇಂದ್ರ, ನೀನು ನಾಚಿಕೆ ಪಡಬೇಡ. ಇದೋ ಈ ನಿನ್ನ ಪಾರಿಜಾತ ವೃಕ್ಷವನ್ನು ನೀನೇ ತೆಗೆದುಕೊಂಡು ಹೋಗು. ಸ್ವರ್ಗದ ದೇವತೆಗಳ ಮನಸ್ಸಿಗೆ ನೋವಾಗವದು ಬೇಡ. ನಿನ್ನ ಹೆಂಡತಿಯಾದ ಶಚಿಯು ಮನೆಯವರೆಗೆ ಬಂದ ನನ್ನನ್ನು ಗರ್ವದಿಂದ ಆದರಿಸಲಿಲ್ಲ. ಉಪಚರಿಸಲಿಲ್ಲ. ನನಗೂ ಸಿಟ್ಟು ಬಂದಿತು. ಎಷ್ಟಾದರೂ ನಾನೂ ಹೆಣ್ಣಲ್ಲವೇ ! ನನ್ನ ಗಂಡ ಏನು ಕಡಿಮೆ ಎಂಬ ಗರ್ವ ನನ್ನಲ್ಲಿಯೂ ತಲೆಯೆತ್ತಿತ್ತು. ನನ್ನ ಪತಿಯನ್ನು ಹೊಗಳಿದೆ. ಅವಳ ಪತಿಯನ್ನು ತೆಗಳಿದೆ. ನಿಮ್ಮ ಜೊತೆಗೆ ಕಲಹಕ್ಕೆ ಇಳಿದೆ. ವಸ್ತುತಸ್ತು ನನ್ನ ಪ್ರಭುವೇ ನನಗೆ ಕಲ್ಪವೃಕ್ಷ ಪಾರಿಜಾತ. ಈ ಜಡಗಿಡಗಳಿಂದ ನನಗೆ ಏನಾಗಬೇಕಾಗಿದೆ ? ಶಚಿಯ ಗರ್ವವನ್ನು ಕಂಡು ನನಗೂ ಕೋಪಬಂದಿತು. ಸ್ತ್ರೀಯರ ಸ್ವಭಾವವೇ ಹಾಗೆ. ಹೆಂಗಸರಿಗೆ ಗಂಡನ ಬಗ್ಗೆ ಅಭಿಮಾನವಿದ್ದರೆ ತಪ್ಪಲ್ಲ. ಇರಬೇಕಾದದ್ದೇ. ಆದರೆ ನಿನ್ನ ಹೆಂಡತಿಗೆ ಇದ್ದದ್ದು ಗಂಡನ ಮೇಲೆ ಅಭಿಮಾನವಲ್ಲ. ತನ್ನ ಸೌಂದರ್ಯದ ಅಭಿಮಾನ. ತಾನು ಮಹಾ ಚೆಲುವಿಯೆಂದು ಅವಳಿಗೆ ಅಹಂಕಾರವಿದೆ. ಅವಳ ಆ ರೂಪದ ಮದವನ್ನು ಇಳಿಸಲಿಕ್ಕಾಗಿ ನಾನು ಇಷ್ಟೆಲ್ಲ ಮಾಡಬೇಕಾಯಿತು. ಈ ಪಾರಿಜಾತದಿಂದೇನೂ ನನಗೆ ಪ್ರಯೋಜನವಿಲ್ಲ. ಹೆರವರ ವಸ್ತುವನ್ನು ನಾನೆಂದಿಗೂ ಬಯಸಿದವಳಲ್ಲ. ಇದನ್ನು ತೆಗೆದುಕೊಂಡು ಹೋಗು. ನಿನ್ನ ಹೆಂಡತಿಗೆ ಬಂದ ಅತಿಥಿ ಅಭ್ಯಾಗತರ ಜೊತೆಗೆ ವಿನಯದಿಂದ ವ್ಯವಹರಿಸಲು ಹೇಳು.''

ಸತ್ಯಭಾಮೆಯ ಈ ನುಡಿಯನ್ನು ಕೇಳಿ ಇಂದ್ರನು ಮರಳಿ ಬಂದು ಅವಳೆದುರು ನಿಂತು ನುಡಿದನು. ''ದೇವಿ, ನೀನು ಇಷ್ಟೇಕೆ ಚಂಡಿಯಾಗಿರುವೆ! ಶಚಿಯೂ ನಿನ್ನ ಗೆಳತಿಯಲ್ಲವೇ! ಅವಳಿಗೂ ಈಗ ಬುದ್ಧಿ ಬಂದಿದೆ. ಇನ್ನು ಈ ವಿರಸ ಪ್ರಸಂಗವನ್ನು ಬೆಳೆಯಿಸುವದು ಬೇಡ. ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವ ಆ ಪರಮಾತ್ಮನಿಂದ ಸೋತರೂ ನನಗೇನು ಅವಮಾನವೆನಿಸುವದಿಲ್ಲ. ಪರಾತ್‌ಪರ ಪ್ರಭುವಿನಿಂದ ಸೋತರೆ ನಾಚಿಕೆಯೇಕೆ ! ವೇದಗಳಿಗೂ ಅಗೋಚರ ಮಹಿಮೆಯುಳ್ಳ ಈ ಪರಬ್ರಹ್ಮನನ್ನು ಗೆಲ್ಲುವ ವೀರನಾರು ! ಸಾಕ್ಷಾತ್ ನಾರಾಯಣನೇ ಜಗದೋದ್ಧಾರಕ್ಕಾಗಿ ಮಾಯಾ ಮಾನವನಾಗಿ ಕೃಷ್ಣ ರೂಪದಿಂದ ಅವತಾರ ಮಾಡಿದ್ದಾನೆ. ನಾವೆಲ್ಲರೂ ಅವನ ಕಿಂಕರರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತನೇ ಅಧ್ಯಾಯ ಸಂಪೂರ್ಣ*



# ಹದಿನಾರು ಸಾವಿರ ಹೆಂಗಳಿಗೆ ಕೃಷ್ಣನಿಂದ ಮಂಗಳಸೂತ್ರ

ಅಧ್ಯಾಯ - ೩೧

**''ಪಾರಿಜಾತವ ಕೃಷ್ಣ ಸತಿಯ ಬನದಲ್ಲಿ ನೆಟ್ಟ,**
**ನರಕನಂತಃಪುರದಿ ನರಕ ಬವಣೆಯ ಬಟ್ಟ**
**ಎಲ್ಲ ದುಃಖಿದಿ ಬೆಂದ ಹತ್ತುಸಾವಿರ ಮೇಲೆ**
**ಆರುಸಾವಿರ ನೂರು ಕನ್ಯೆಗಳಿಗೂ ಮಾಲೆ**
**ಹಾಕಿ ಕೈ ಹಿಡಿದವರ ಏನು ಕೃಷ್ಣನ ಲೀಲೆ !**

ದೇವೇಂದ್ರನ ಈ ಮಾತುಗಳನ್ನಾಲಿಸಿ ಕೇಶವನು ನಕ್ಕು ಗಂಭೀರವಾಗಿ ನುಡಿದನು. ''ಇಂದ್ರ, ನೀನು ದೇವತೆಗಳ ಒಡೆಯ, ಮೂರು ಲೋಕದ ಅರಸ. ನಾವೋ ಸಾಮಾನ್ಯ ಮಾನವರು. ನಾವೇನಾದರೂ ಅಪರಾಧ ಮಾಡಿದರೆ ನೀನು ಕ್ಷಮಿಸಬೇಕು. ಈ ನಿನ್ನ ಪಾರಿಜಾತ ಮರವನ್ನು ನೀನು ಮರಳಿ ತೆಗೆದುಕೊಂಡು ಹೋಗಿ ಬೇಕಾದಲ್ಲಿಡು. ನೀನು ನನ್ನ ಮೇಲೆ ಪ್ರಯೋಗಿಸಿದ ಈ ವಜ್ರವನ್ನೂ ತೆಗೆದುಕೊಂಡು ಹೋಗು. ಇದನ್ನು ನಿಜವಾದ ನಿನ್ನ ವೈರಿಗಳ ಮೇಲೆ ಮಾತ್ರ ಪ್ರಯೋಗಿಸು.'' ಅದಕ್ಕೆ ಇಂದ್ರನು ತಲೆಬಾಗಿ ''ಸ್ವಾಮಿ, 'ನಾನು ಮಾನವ' ಎಂದು ಹೇಳಿ ನನ್ನನ್ನೇಕೆ ಮೋಹಗೊಳಿಸುವೆ ? ನಾವು ನಿನ್ನ ನಿಜವಾದ ರೂಪವನ್ನು ತಿಳಿಯೆವು. ಜಗದ್‌ರಕ್ಷಣೆಗಾಗಿ ಅವತಾರ ಮಾಡಿದ ನೀನು ಲೋಕಕಂಟಕರನ್ನೆಲ್ಲ ಸಂಹಾರ ಮಾಡುತ್ತಲಿರುವೆ. ಕೃಷ್ಣ, ಈ ಪಾರಿಜಾತ ವೃಕ್ಷವನ್ನು ನೀನು ದ್ವಾರಕಾಪಟ್ಟಣಕ್ಕೆ ತೆಗೆದುಕೊಂಡು ಹೋಗು. ನೀನು ಭೂಲೋಕದಲ್ಲಿರುವ ವರೆಗೆ ಇದು ಅಲ್ಲಿರಲಿ. ಅನಂತರ ಮತ್ತೆ ಸ್ವರ್ಗಕ್ಕೆ ಇದು ತಾನಾಗಿ ಬರುವದು. ಕೃಷ್ಣ, ನೀನು ಸಾಕ್ಷಾದ್ ಮಹಾವಿಷ್ಣುವೇ ಸರಿ. ನನ್ನ ಅಪರಾಧವನ್ನು ದಯಮಾಡಿ ಕ್ಷಮಿಸು.'' ದೇವೇಂದ್ರನ ಬಿನ್ನಹವನ್ನು ಮನ್ನಿಸಿ, ಅವನ ಅತಿಕ್ರಮವನ್ನು ಕ್ಷಮಿಸಿ, ಶ್ರೀ ಕೃಷ್ಣನು ಅವನಿಗೆ ಅನುಗ್ರಹವಿತ್ತು. ಪಾರಿಜಾತ ವೃಕ್ಷವನ್ನು ಗರುಡನ ಮೇಲೆ ಹೊರಿಸಿಗೊಂಡು ಭೂಲೋಕಕ್ಕೆ ಬಂದನು. ಗರುಡನು ದ್ವಾರಕಾಪಟ್ಟಣದ ಮೇಲೆ ಬಂದಾಗ ಮಾಧವನು ತನ್ನ ಪಾಂಚಜನ್ಯವನ್ನು ಊದಿ ದ್ವಾರಕಾ ನಾಗರಿಕರಿಗೆ ತನ್ನ ಬರವನ್ನು ಸೂಚಿಸಿದನು. ಆ ದ್ವಾರಕಾಪುರ ವಾಸಿಗಳೆಲ್ಲರೂ ಕೃಷ್ಣನ ಶಂಖ ಧ್ವನಿಯನ್ನು ಕೇಳಿ ಪರಮಾನಂದ ಭರಿತರಾದರು. ಅನಂತರ ಕೃಷ್ಣನು ಸತ್ಯಭಾಮೆಯೊಂದಿಗೆ ಗರುಡನ ಹೆಗಲ ಮೇಲಿಂದ ಕೆಳಗಿಳಿದು ಆ ಪಾರಿಜಾತ ತರುವನ್ನು ಸತ್ಯಭಾಮೆಯ ಮನೆಯ ಮುಂದಿನ ಕೈದೋಟದಲ್ಲಿ ಇಟ್ಟನು.

ಅದನ್ನು ನೋಡಲು ಜನರು ಹಿಂಡು ಹಿಂಡಾಗಿ ಬರತೊಡಗಿದರು. ಆ ಗಿಡವನ್ನು ನೆಲದಲ್ಲಿ ಇರಿಸಿದಾಗ ಅದರಿಂದ ಮೂರು ಯೋಜನ ದೂರದ ನೆಲವೆಲ್ಲವೂ ಸುಗಂಧ ವಾಸನೆಯಿಂದ ಪರಿಮಳಿತವಾಯಿತು. ಆ ಪಾರಿಜಾತದ ಬಳಿಗೆ ಬಂದ ಕೂಡಲೇ ಜನರಿಗೆಲ್ಲ ತಮ್ಮ ಹಿಂದಿನ ಜನ್ಮದ ನೆನಪು ಮರುಕಳಿಸುತ್ತಿತ್ತು. ಅದರ ನೆರಳಿನಲ್ಲಿ ನಿಂತವರ ದೇಹದಲ್ಲಿ ಒಮ್ಮೆಲೆ ದೈವಿಕ ಕಾಂತಿಯು ಹೊಮ್ಮಿ ಚಿಮ್ಮಿ ಸೂಸುತ್ತಿತ್ತು.

ಅನಂತರ ಶ್ರೀ ಕೃಷ್ಣನು ನರಕಾಸುರನ ಸೇವಕರು ತಂದು ಕೊಟ್ಟ ವಿಪುಲವಾದ ಹಣ, ಹೊನ್ನು, ರನ್ನ, ಮುತ್ತು, ಮಾಣಿಕ್ಯ ಮುಂತಾದ ವಸ್ತು ಒಡವೆಗಳನ್ನೆಲ್ಲ ಹಂಚಿ ಯಾದವ ಬಂಧುಗಳಿಗೆ ಕೊಟ್ಟು ಬಿಟ್ಟನು. ನರಕಾಸುರನ ಅಂತಃಪುರದಲ್ಲಿ ಇದ್ದ ಹದಿನಾರು ಸಾವಿರದ ಒಂದು ನೂರು ಕನ್ಯೆಯರನ್ನು ಮಾತ್ರ ಅವರ ಅಪೇಕ್ಷೆಯಂತೆ ತಾನೇ ಒಂದು ಶುಭ ಮುಹೂರ್ತದಲ್ಲಿ ಮದುವೆಮಾಡಿಕೊಂಡು ಮಂಗಳ ಸೂತ್ರ ಕಟ್ಟಿದನು. ಹರಿಯು ಹದಿನಾರು ಸಾವಿರ ರೂಪಗಳನ್ನು ತೆಗೆದುಕೊಂಡು ಏಕಕಾಲಕ್ಕೆ ಅವರೆಲ್ಲರೊಡನೆ ಮದುವೆಮಾಡಿಕೊಂಡನು. ಪ್ರತಿಯೊಬ್ಬರೂ ಕೃಷ್ಣನು ನನ್ನನ್ನು ಮಾತ್ರ ಪರಿಗ್ರಹಿಸಿದ್ದಾನೆ ಎಂದು ಭಾವಿಸಿದ್ದರು. ಪ್ರತಿದಿನವೂ ಪ್ರತಿ ಇರುಳೂ ಶ್ರೀ ಕೃಷ್ಣನು ಈ ಹದಿನಾರು ಸಾವಿರದ ಒಂದನೂರು ಹೆಂಗಸರ ಪ್ರತಿಯೊಬ್ಬರ ಮನೆಯಲ್ಲಿಯೂ ಇರುತ್ತಿದ್ದನು.

*ಶ್ರೀ ವಿಷ್ಣುಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತೊಂದನೇ ಅಧ್ಯಾಯ ಸಂಪೂರ್ಣ*



## ಉಷಃಕಾಲದಲ್ಲಿ ಉಷೆ ಕಂಡಕನಸು

## ಅಧ್ಯಾಯ - ೩೨

**"ಶಿವಸತಿಸರವ ಉಷೆ ತಾ ಕಂಡು**
**ಬಯಸಿರೆ ಕರುಣಿಸಿದಳು ಶಿವೆ ಕೃಪೆಗೊಂಡು**
**ಸ್ವಪ್ನದಿ ಅನಿರುದ್ಧನ ಕೈ ಹಿಡಿದಳು**
**ಚಿತ್ರಿಸಿ ಗುರುತಿಸಿ ಗೆಳತಿಯು ನಡೆದಳು"**

ಪ್ರದ್ಯುಮ್ನ ಮೊದಲಾದ ರುಕ್ಮಿಣಿಯ ಮಕ್ಕಳ ಬಣ್ಣನೆಯನ್ನು ಹಿಂದೆ ಮಾಡಲಾಗಿದೆ. ಸತ್ಯಭಾಮೆಯು ಭಾನು, ಭೌಮೇರಿಕ ಮುಂತಾದ ಮಕ್ಕಳನ್ನು ಹಡೆದಳು. ಜಾಂಬವತಿಗೆ ಸಾಂಬ ಮೊದಲಾದ ಮಕ್ಕಳು ಹುಟ್ಟಿದರು. ನಗ್ನಜಿತನ ಮಗಳಾದ ಸತ್ಯಾ ಎಂಬ ಕೃಷ್ಣ ಕುಟುಂಬಿನಿಗೆ ಭದ್ರನಂದ ಪ್ರಭೃತಿ ಪುತ್ರರಾದರು. ಮಿತ್ರವಿಂದೆಗೆ ಸಂಗ್ರಾಮಜಿತನೇ ಮೊದಲಾದ ತನಯರು ಉತ್ಪನ್ನವಾದರು. ವೃಕ ಮುಂತಾದವರು ಮಾದ್ರಿಯ ಚಿರಂಜೀವರು. ಲಕ್ಷಣಾಳ ಹೊಟ್ಟೆಯಿಂದ ಗಾತ್ರವಾನ್ ಮುಖ್ಯರಾದ ತನುಜರು ಹುಟ್ಟಿದರು. ಕಾಲಿಗೆ ಶ್ರುತ ಪ್ರಧಾನ ಪುತ್ರರು ಜನಿಸಿದರು. ಇದರಂತೆ ಶ್ರೀ ಕೃಷ್ಣನ ಹದಿನಾರು ಸಾವಿರ ಒಂದು ನೂರು ಪತ್ನಿಯರಿಗೆಲ್ಲ ಕೂಡಿ ಒಟ್ಟು ಎಂಬತ್ತೆಂಟು ಸಾವಿರದ ಎಂಟು ನೂರು ಗಂಡು ಮಕ್ಕಳು ಉತ್ಪನ್ನರಾದರು. ಈ ಎಲ್ಲ ಕೃಷ್ಣ ಕುಮಾರರಲ್ಲಿ ಪ್ರದ್ಯುಮ್ನನೇ ಜ್ಯೇಷ್ಠ ಪುತ್ರನಾಗಿದ್ದ. ಪ್ರದ್ಯುಮ್ನನ ಮಗ ಅನಿರುದ್ಧ, ಅನಿರುದ್ಧ ಪುತ್ರ ವಜ್ರ ಕುಮಾರ.

ಯುದ್ಧದಲ್ಲಿ ಅಜೇಯನಾದ ಅನಿರುದ್ಧನು ಬಲಿರಾಜನ ಮಗ ಬಾಣಾಸುರನ ಮಗಳಾದ ಉಷಾದೇವಿಯನ್ನು ಮದುವೆಯಾದನು. ಆ ಸಮಾಚಾರವು ಇಂತಿದೆ. ಬಾಣಾಸುರನ ಮಗಳಾದ ಉಷೆಯು ಒಂದು ದಿನ ಪರಮೇಶ್ವರನೊಡನೆ ವಿಹಾರಗೈಯುವ ಪಾರ್ವತಿಯನ್ನು ನೋಡಿದಳು. ಶಿವಪಾರ್ವತಿಯರ ಆ ಲೀಲಾವಿಲಾಸವನ್ನು ಕಂಡು ಉಷೆಗೆ ತಾನೂ ಅದರಂತೆ ತನ್ನ ಪತಿಯೊಡನೆ ವಿಹಾರ ಸುಖವನ್ನು ಅನುಭವಿಸಬೇಕೆಂದು ಬಯಕೆಯಾಯಿತು. ಸರ್ವರ ಮನೋಭಾವವನ್ನು ಬಲ್ಲಂಥ ಗೌರಿಯು ಉಷೆಯ ಅಂತರಂಗದ ಆಕಾಂಕ್ಷೆಯನ್ನು ಅರಿತು ಅವಳಿಗೆ ನುಡಿದಳು.

"ವತ್ಸೆ, ಚಿಂತೆ ಮಾಡಬೇಡ, ಸ್ವಲ್ಪೇದಿನಗಳಲ್ಲಿ ನೀನೂ ನನ್ನಂತೆ ನಿನ್ನ ಪತಿಯೊಡನೆ ಭೋಗ ವಿಲಾಸಗಳಿಂದ ಲೀಲಾವಿಹಾರವನ್ನು ಮಾಡುವೆ." ಆತುರ ಸ್ವಭಾವದ ಉಷೆಯು ಆ ಪಾರ್ವತಿಯನ್ನು ಕುರಿತು "ಎಂದು ನಾನು ಪತಿಯೊಡನೆ ವಿಹರಿಸುವದು ?" ನನ್ನ ಪತಿ ಯಾರು ? ಎಂದು ಕೇಳಿದಳು. ಅದಕ್ಕೆ ಪಾರ್ವತಿಯು "ನಾಳಿನ ವೈಶಾಖ ಶುದ್ಧ ದ್ವಾದಶಿಯ ದಿನ ನಿನ್ನ ಕನಸಿನಲ್ಲಿ ಬಂದು ನಿನ್ನೊಡನೆ ಸ್ವಪ್ನವಿಹಾರವನ್ನು ಮಾಡುವ ತರುಣನೇ ನಿನಗೆ ಪತಿಯಾಗುವನು" ಎಂದು ನುಡಿದಳು. ಪಾರ್ವತಿ ದೇವಿಯು ಹೇಳಿದಂತೆ ವೈಶಾಖ ಶುದ್ಧ ದ್ವಾದಶಿಯ ದಿನ ಆ ಬಾಣಕುಮಾರಿಗೆ ಒಂದು ಕನಸು ಬಿದ್ದು ಒಬ್ಬ ತರುಣ ರಾಜಕುಮಾರನೊಂದಿಗೆ ಕನಸಿನಲ್ಲಿಯೇ ಕಾಮಕೇಲೀ ವಿಹಾರವನ್ನು ಮಾಡಿದಂತಾಯಿತು. ಆ ಸ್ವಪ್ನಸುಂದರ ರಾಜ ಪುತ್ರನ ಕಾಯಕಾಂತಿ ಹಾಗೂ ಚೆಲುವು

ಚಾರಿಮೆಗಳನ್ನು ಕಂಡು ರಾಜಕುಮಾರಿಯು ಅವನಲ್ಲಿ ಅನುರಕ್ತಳಾದಳು. ಅವಳು ಎಚ್ಚರಾದ ಕೂಡಲೇ ಅಲ್ಲಿ ಯಾರನ್ನೂ ಕಾಣದೆ ''ಓ ಪ್ರಿಯಕರಾ ! ಎಲ್ಲಿರುವೆ ?'' ಎಂದು ತನ್ನ ಎದುರಿಗೆ ನಿಂತ ಗೆಳತಿಯನ್ನೇ ನಾಚಿಕೆ ಇಲ್ಲದೇ ಕೇಳಿಬಿಟ್ಟಳು. ಬಾಣಸುರನ ಮಂತ್ರಿ ಕುಭಾಂಡನ ಕನ್ನೆಯಾದ ಚಿತ್ರಲೇಖೆಯೇ ಅವಳ ಪ್ರೀತಿಯ ಗೆಳತಿಯಾಗಿದ್ದಳು. ನಿದ್ದೆಯಿಂದ ಎಚ್ಚತ್ತ ರಾಜಕುಮಾರಿಯ ಪುರುಷ ಸಂಬೋಧನಾತ್ಮಕವಾದ ಆ ಆಕಸ್ಮಿಕ ಉದ್ಗಾರವನ್ನು ಕೇಳಿ ಚಿತ್ರಲೇಖೆಗೆ ಅತ್ಯಂತ ಆಶ್ಚರ್ಯವಾಯಿತು. ಅವಳು ತನ್ನ ಗೆಳತಿಗೆ ''ಸಖಿ, ನೀನು ಮಾತನಾಡಿಸುವ ಪುರುಷನು ಯಾರು ?'' ಎಂದು ಕೇಳಿದಳು.

ತನ್ನ ಗೆಳತಿಯನ್ನು ಈ ರೀತಿಯಾಗಿ ಪುಲ್ಲಿಂಗ ಪ್ರತ್ಯಯದಿಂದ ತಾನು ಸಂಬೋಧಿಸಿದ್ದನ್ನು ತಿಳಿದು ಅವಳಿಗೆ ನಾಚಿಕೆಯೆನಿಸಿತು. ಲಜ್ಜೆಯಿಂದ ಬಾಗಿದ ಅವಳು ಏನನ್ನೂ ಹೇಳಲಿಚ್ಛಿಸದೆ ಮೂಕಮುಗ್ಧಳಾಗಿ ನಿಂತುಕೊಂಡಳು. ಮಂತ್ರಿಯ ಮಗಳಾದ ಚಿತ್ರಲೇಖೆಯು ಉಷೆಯ ಬಳಿಗೆ ಬಂದು ಚತುರೋಪಾಯದಿಂದ ಅವಳನ್ನು ತನ್ನ ವಿಶ್ವಾಸದಲ್ಲಿ ತೆಗೆದುಕೊಂಡು ''ನಿಜವಾಗಿಯೂ ನೀನು ಕನಸಿನಲ್ಲಿ ಕಂಡದ್ದೇನು'' ಎಂದು ಕೇಳಿದಳು. ಆಗ ಆ ಬಾಣ ಪುತ್ರಿಯು ಅವಳಿಗೆ ತನ್ನ ಸ್ವಪ್ನ ಸಮಾಚಾರವನ್ನೆಲ್ಲ ತಿಳಿಸಿ ಪಾರ್ವತೀದೇವಿಯು ಹೇಳಿದ ಕಣಿಯ ಕೌತುಕದ ಕಥೆಯನ್ನು ಬಿತ್ತರಿಸಿದಳು. ಮತ್ತು ತನ್ನ ಆ ಕನಸಿನ ಮನದನ್ನನೊಡನೆ ತಾನು ಕೂಡುವ ಉಪಾಯವನ್ನೂ ಮಾಡಬೇಕೆಂದು ಸೂಚಿಸಿದಳು.

ಅದಕ್ಕೆ ಚಿತ್ರಲೇಖೆಯು ನಸುನಕ್ಕು ''ಯಾವನ ಹೆಸರು, ದಶೆ, ಕುಲ, ಗ್ರಾಮ, ಏನೂ ಗೊತ್ತಿಲ್ಲವೋ ಅಂಥ ನಿನ್ನ ವರವನ್ನು ಶೋಧಿಸುವದೆಂತು ! ಆದರೂ ನನ್ನ ಜೀವದ ಗೆಳತಿಯಾದ ನಿನಗೆ ನಾನು ಕಿಂಚಿದುಪಕಾರ ಮಾಡುವೆನು. ಒಂದು ದಿನ ನನಗೆ ಅವಕಾಶಕೊಡು'' ಎಂದು ಕೇಳಿದಳು. ಅವಳು ಮನೆಯಲ್ಲಿ ಯೋಚಿಸಿ ಒಂದು ಉಪಾಯವನ್ನು ಮಾಡಿದಳು. ಚಿತ್ರ ಕಲಾಕುಶಲಳಾದ ಚಿತ್ರಲೇಖೆಯು ಒಂದು ದೊಡ್ಡ ಬಟ್ಟೆಯ ಮೇಲೆ ಮುಖ್ಯ ಮುಖ್ಯ ದೇವ, ದಾನವ, ಗಂಧರ್ವರನ್ನೂ ಮತ್ತು ಮಾನವರನ್ನೂ ಬರೆದು ಉಷಾ ಸಖಿಗೆ ತೋರಿಸಿದಳು. ''ಇದರಲ್ಲಿ ನಿನ್ನ ಕನಸಿನ ಕಾಂತನು ಇರುವನೇನು ? ಪರೀಕ್ಷಿಸು'' ಎಂದು ಹೇಳಿದಳು. ಉಷೆಯು ದೇವ, ದೈತ್ಯ, ನಾಗ, ಗಂಧರ್ವರ ಚಿತ್ರಗಳನ್ನೆಲ್ಲ ದೂರ ಸರಿಸಿ ಮಾನವರ ಚಿತ್ರಗಳನ್ನು ಪರೀಕ್ಷಿಸತೊಡಗಿದಳು. ಯಾದವರ ಚಿತ್ರಗಳನ್ನು, ಕಣ್ಣೆದುರು ಹಾಯಿಸಿದಾಗ ಅವಳಲ್ಲಿ ಆಶಾಂಕುರವು ಉದಿಸಿದಂತಾಯಿತು. ಕೃಷ್ಣರಾಮರ ಚಿತ್ರವು ಕಂಡಾಗ ಅವಳ ಕಣ್ಣು ಅರಳಿದವು. ಮುಂದೆ ಪ್ರದ್ಯುಮ್ನನನ್ನು ನೋಡಿದಾಗ ಅವಳಿಗೆ ಲಜ್ಜೆಯಿಂದ ಮುಖವು ಕೆಂಪಗಾಯಿತು. ಮುಂದೆ ಚಿತ್ರಲೇಖೆಯು ಅವನ ಮಗನಾದ ಅನಿರುದ್ಧನ ಚಿತ್ರವನ್ನು ಉಷೆಯ ಎದುರು ಹಿಡಿದಾಗಲಂತೂ ಅವಳು ನಾಚಿಕೆ ಬಿಟ್ಟು ಕಣ್ಣಗಲಿಸಿ ಆ ಚಿತ್ರವನ್ನು ನೋಡಿ ಸಂತೋಷದಿಂದ ''ಇವನೇ ನನ್ನ ಕನಸಿನ ಕಾಂತ, ನನ್ನ ಮನದನ್ನ'' ಎಂದು ಉದ್ಗರಿಸಿದಳು. ಆಗ ದೇಶದೇಶಗಳ ಇತಿಹಾಸ ಸಮಾಚಾರಗಳನ್ನೆಲ್ಲ ತಿಳಿದ ಚಿತ್ರಲೇಖೆಯು ಉಷೆಗೆ ಅವನ ಪರಿಚಯವನ್ನು ಮಾಡಿಕೊಟ್ಟಳು. ''ಸಖಿ, ಪಾರ್ವತಿದೇವಿಯು ನಿನ್ನ ಮೇಲಿನ ಪ್ರೇಮದಿಂದ ಸೂಚಿಸಿದ ಈ ರಾಜಕುಮಾರನು

ಶ್ರೀ ಕೃಷ್ಣ ಪರಮಾತ್ಮನ ಮೊಮ್ಮಗನಾದ ಅನಿರುದ್ಧ'' ಎಂದು ತಿಳಿಸಿದಳು. ''ಇವನನ್ನು ನೀನು ಪಡೆದರೆ ಈ ಭೂಲೋಕದ ಭಾಗ್ಯಸರ್ವಸ್ವವನ್ನೂ ಪಡೆದಂತೆ. ಆದರೆ ಮೊದಲು ಸಮುದ್ರದ ಮಧ್ಯದಲ್ಲಿರುವ ಆ ದ್ವಾರಕಾ ಪಟ್ಟಣಕ್ಕೆ ಹೋಗುವದೇ ಅಸಾಧ್ಯ. ಆದರೂ ಹೇಗಾದರೂ ಪ್ರಯತ್ನ ಮಾಡಿ ನಿನ್ನ ಪ್ರಿಯಕರನನ್ನು ಇಲ್ಲಿಗೆ ಕರೆತರುವೆ. ಈ ಸಮಾಚಾರವನ್ನು ಯಾರಿಗೂ ತಿಳಿಸಬೇಡ. ನಾನು ದ್ವಾರಕಾ ಪಟ್ಟಣಕ್ಕೆ ಹೋಗಿ ಬೇಗ ಬಂದು ಬಿಡುವೆ. ಅಲ್ಲಿಯ ವರೆಗೆ ನೀನು ನನ್ನನ್ನಗಲಿ ಇರು''. ಎಂದು ಹೇಳಿ ಉಷೆಯನ್ನು ಸಂತೈಸಿ ಚಿತ್ರಲೇಖೆಯು ದ್ವಾರಕಾ ಪಟ್ಟಣಕ್ಕೆ ನಡೆದಳು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತೆರಡನೆಯ ಅಧ್ಯಾಯ ಸಂಪೂರ್ಣ*



## ಅನಿರುದ್ಧ ನಿರುದ್ಧ ಹರಿಹರರ ಯುದ್ಧ

ಅಧ್ಯಾಯ - ೩೩

**"ಸ್ವಪ್ನದೃಷ್ಟ ಅನಿರುದ್ಧನುಷೆಗೆ ಗುರುತಿಸಲು ಚಿತ್ರರೇಖೆ
ಬರೆದು ಎತ್ತಿಕೊಂಡೊಯ್ದು ಉಷೆಗೆ ನೀಡಿದಳು ಚಿತ್ರಲೇಖೆ.
ಬಾಣ ತಿಳಿದು ಅಹಿಬಾಣ ಬಿಟ್ಟು ಬಂಧಿಸಿದೆ ಕೃಷ್ಣ ನಡೆದ
ತೋಳು ಕಡಿದ. ಶಿವ ನುಡಿದ 'ಕ್ಷಮಿಸು', ಅನಿರುದ್ಧನುಷೆಯ ಪಡೆದ"**

ಶಿವಭಕ್ತನಾದ ಬಾಣಾಸುರನಿಗೆ ತೋಳುಗಳು ಸಾವಿರ. ಯುದ್ಧದ ಹೊರತು ಅವುಗಳಿಂದ ಬೇರೆ ಉಪಯೋಗವೇ ಇರಲಿಲ್ಲ. ಮಹಾಶೂರನಾದ ಅವನ ಎದುರು ಬಂದವರೆಲ್ಲ ಸೋತು ಶರಣು ಬಂದು ಬಿಡುತ್ತಿದ್ದರು. ಹೀಗಾಗಿ ಅವನಿಗೆ ಯುದ್ಧ ಮಾಡುವ ಪ್ರಸಂಗವೇ ಅಪರೂಪವಾಗಿ ಬರುತ್ತಿತ್ತು. ಆದುದರಿಂದ ತನ್ನ ಕೈತೋಳುಗಳ ಹೊರೆಯು ಭಾರವೆನಿಸತೊಡಗಿತು. ಅವನು ಮಹಾದೇವರ ಎದುರು ಅಡ್ಡ ಬಿದ್ದು ಬೇಡಿಕೊಂಡ. "ಯುದ್ಧಗಳಿಲ್ಲದೇ ವ್ಯರ್ಥವಾಗುತ್ತಲಿರುವ ಈ ಬಾಹುಭಾರದಿಂದ ನಾನು ಬಳಲುತ್ತಿದ್ದೇನೆ. ಈ ನೀಳ್ದೋಳುಗಳ ತೀಟೆಯನ್ನು ತೀರಿಸಿಕೊಳ್ಳಲಿಕ್ಕೆ ಅನುವು ಮಾಡಿಕೊಂಡುವಂಥ ಯುದ್ಧವು ನನಗೆಂದಾದರೂ ದೊರಕಬಹುದೇ! ಯುದ್ಧವಿಲ್ಲದಿದ್ದರೆ ಈ ತೋಳು ಸಹಸ್ರದಿಂದ ಏನು ಫಲ!" ಅವನ ಈ ಮಾತುಗಳನ್ನು ಕೇಳಿ, ಮಹಾದೇವರು ಅವನಿಗೆ ನುಡಿದರು -

"ನಿನ್ನ ನವಿಲಿನ ಚಿನ್ಹವುಳ್ಳ ಪತಾಕೆಯು ಯಾವಾಗ ಮುರಿದು ಬೀಳುವದೋ ಆಗ ಮಾಂಸ ತಿನ್ನುವ ನರಿ ಹದ್ದುಗಳಿಗೆ ಹಬ್ಬವಾಗುವಂಥ ದೊಡ್ಡ ಯುದ್ಧವನ್ನು ನೀನು ಹೊಂದುವೆ" ಮಹಾದೇವರನ್ನು ವಂದಿಸಿ ಅವನು ಮನೆಗೆ ಬರುವಷ್ಟರಲ್ಲಿ ಅವನ ಮಯೂರ ಧ್ವಜವು ಮುರಿದು ಬಿದ್ದಿತು. ಅದನ್ನು ನೋಡಿ ಅವನಿಗೆ ಒಳ್ಳೇ ಸಂತೋಷವಾಯಿತು. ಇನ್ನು ಕೆಲವೇ ದಿನಗಳಲ್ಲಿ ತನಗೆ ಶಿವನ ವಚನದಂತೆ ಯುದ್ಧ ಪ್ರಾಪ್ತಿಯಾಗುವದೆಂದು ಬಹಳ ಉತ್ಸಾಹವೆನಿಸಿತು. ಇತ್ತ ಚಿತ್ರಲೇಖೆಯು ತನ್ನ ಯೋಗ ಶಕ್ತಿಯಿಂದ ದ್ವಾರಕೆಯಿಂದ ಅನಿರುದ್ಧನನ್ನು ಉಷಾದೇವಿಯ ಅಂತಃಪುರಕ್ಕೆ ಕರೆತಂದಳು. ಅನಿರುದ್ಧನು ಬಾಣಕುಮಾರಿಯ ಅನಿಂದ್ಯ ಸೌಂದರ್ಯವನ್ನು ಕಂಡು ಮುಗ್ಧನಾಗಿ ಅವಳನ್ನು ಗಾಂಧರ್ವ ವಿಧಿಯಿಂದ ವಿವಾಹವಾದನು. ಅವರಿಬ್ಬರೂ ಪ್ರಣಯಿಗಳು ಗುಟ್ಟಾಗಿ ಅಂತಃಪುರದಲ್ಲಿ ವಿವಿಧ ವಿಲಾಸ ವಿಹಾರಗೈದರು. ಅದು ಅಂತಃಪುರದ ಕಾವಲುಗಾರರಿಂದ ಬಾಣಾಸುರನಿಗೆ ತಿಳಿಯಿತು. ಆಗ ಅವನು ಸೈನ್ಯಕ್ಕೆ ತನ್ನ ಕನ್ಯಾಂತಃಪುರದಲ್ಲಿ ಹೊಕ್ಕ ಪರಪುರುಷನನ್ನು ಹಿಡಿದು ತರಲಿಕ್ಕೆ ಅಪ್ಪಣೆಗೈದನು. ಆಗ ತನ್ನ ಮೇಲೆ ಎರಿದ ಬಾಣಾಸುರನ ಸೈನಿಕರನ್ನೆಲ್ಲ ಅನಿರುದ್ಧನು ಒಂದು ಉಕ್ಕಿನ ಅಗಳಿಯನ್ನು ತೆಗೆದುಕೊಂಡು ಬಡಿದು ಕೊಂದು ಹಾಕಿದನು.

ಅದನ್ನು ಕೇಳಿ ಕುಪಿತನಾದ ಬಾಣಾಸುರನು ಸ್ವತಃ ತಾನೇ ಯುದ್ಧಕ್ಕೆ ಬಂದು ಅನಿರುದ್ಧನ ಜೊತೆಗೆ ಹೋರಾಡಿದನು. ಆದರೆ ವೀರ ವರೇಣ್ಯನಾದ ಅನಿರುದ್ಧನು ಬಾಣಾಸುರನನ್ನೂ ಕೂಡ ತನ್ನ ಪರಿಘ ಪ್ರಹಾರದಿಂದ ಗಾಸಿಗೊಳಿಸಿ ಹೊಡೆದು ಹಣ್ಣು

ಮಾಡಿ ಕಳಿಸಿದನು. ಚಿಕ್ಕ ಬಾಲಕನಿಂದ ಸೋತು ಖಿನ್ನವಾಗಿ ನಿಂತ ಆ ಬಾಣಾಸುರನಿಗೆ ಅವನ ಮಂತ್ರಿಗಳು ಮಾಯಾ ಯುದ್ಧವನ್ನು ಮಾಡಲು ಸೂಚಿಸಿದರು. ಮಂತ್ರಿಗಳ ಪ್ರೇರಣೆಯಂತೆ ಬಾಣಾಸುರನು ಆ ಬಾಲಕನೊಡನೆ ಮಾಯಾ ತಂತ್ರದಿಂದ ಕನದಕ್ಕೆ ಮೊದಲಿಟ್ಟನು. ಮಾಯೆಯಿಂದಲೇ ಸರ್ಪಾಸ್ತ್ರವನ್ನು ಬಿಟ್ಟು ಆ ಯಾದವನಂದನನ್ನು ಬಂಧಿಸಿದನು. ಇತ್ತ ದ್ವಾರಕಾ ಪಟ್ಟಣದಲ್ಲಿ ಒಮ್ಮಿಂದೊಮ್ಮೆಲೇ ಪ್ರದ್ಯುಮ್ನ ಕುಮಾರನಾದ ಅನಿರುದ್ಧನು ಕಾಣೆಯಾದದ್ದರಿಂದ ಕೋಲಾಹಲ ಉಂಟಾಯಿತು. ''ಎಲ್ಲಿ ಹೋದನು ? ಅನಿರುದ್ಧನನ್ನು ಯಾರು ಕದ್ದರು ? ಈಗ ಎಲ್ಲಿ ಇರಬಹುದು !'' ಎಂದು ಮುಂತಾಗಿ ಯಾದವರಲ್ಲಿ ತರ್ಕವಿತರ್ಕಗಳು ಪ್ರಾರಂಭವಾದವು. ಅಷ್ಟರಲ್ಲಿ ನಾರದರು ಅಲ್ಲಿಗೆ ಬಂದರು. ಯಾದವರೆಲ್ಲರೂ ನಾರದರ ಸುತ್ತಲೂ ಕೂಡಿ ''ಅನಿರುದ್ಧ ಕುಮಾರನ ಸಮಾಚಾರ ಏನಾದರೂ ನಿಮಗೆ ತಿಳಿದಿದೆಯೇ ?'' ಎಂದು ಕುತೂಹಲ ಪೂರ್ವಕವಾಗಿ ಕೇಳಿದರು. ಆಗ ನಾರದರು 'ಅಂತಃರ್ಧಾನ ವಿದ್ಯಾ ನಿಪುಣಳಾದ ಚಿತ್ರಲೇಖೆಯು ತನ್ನ ಗೆಳತಿ ಉಷೆಗಾಗಿ ಅನಿರುದ್ಧನನ್ನು ಅರಮನೆಯಿಂದ ಹಾರಿಸಿಕೊಂಡು ಹೋದ ಸಮಾಚಾರವನ್ನು ತಿಳಿಸಿದರು. ಮತ್ತು ಉಷಾ ಅನಿರುದ್ಧರ ಗುಪ್ತ ಪ್ರಣಯ ಗಾಂಧರ್ವ ವಿವಾಹ ಸಂಗತಿಯನ್ನು ತಿಳಿಸಿ ಈಗ ಅನಿರುದ್ಧನು ಬಾಣಾಸುರನಿಂದ ಸರ್ಪಾಸ್ತ್ರದಿಂದ ಬಿಗಿಯಲ್ಪಟ್ಟಿದ್ದಾನೆ ಎಂದು ಹೇಳಿದರು. ಕೂಡಲೇ ಕೃಷ್ಣನು ಗರುಡನನ್ನು ಸ್ಮರಿಸಿದನು. ತಕ್ಷಣ ಗರುಡನು ಅಲ್ಲಿ ಉಪಸ್ಥಿತನಾದನು. ಕೃಷ್ಣನು ಗರುಡಾರೂಢನಾಗಿ ಬಾಣಾಸುರನ ಶೋಣಿತ ಪಟ್ಟಣಕ್ಕೆ ಧಾವಿಸಿ ಬಂದನು. ಬಲರಾಮ ಪ್ರದ್ಯುಮ್ನರು ಅವನನ್ನು ಹಿಂಬಾಲಿಸಿದರು. ಬಾಣಾಸುರನ ರಾಜಧಾನಿಯ ಹೆಬ್ಬಾಗಿಲದಲ್ಲಿಯೇ ಶಂಕರನ ಪ್ರಮಥಗಣದವರು ಕೃಷ್ಣನನ್ನು ತಡೆದು ಎದುರಿಸಿದರು. ಅವರೆಲ್ಲರನ್ನು ಯುದ್ಧ ಮಾಡಿ ಸಂಹರಿಸಿ ಕೃಷ್ಣನು ಶೋಣಿತಪುರದಲ್ಲಿ ಪ್ರವೇಶ ಮಾಡತೊಡಗಿದರು.

ಆಗ ಮೂರು ಕಾಲು ಮೂರು ತಲೆಗಳುಳ್ಳ ಅತ್ಯುಗ್ರವಾದ ಮಾಹೇಶ್ವರ ಎಂಬ ಜ್ವರವು ಬಾಣಾಸುರನ ರಕ್ಷಣೆಗಾಗಿ ಕೃಷ್ಣನ ಜೊತೆಗೆ ಹೋರಾಡ ಹತ್ತಿತು. ಆ ಜ್ವರದ ಬಿಸಿ ಬೂದಿಯ ಝಳವು ತಾಕಿ ಬಲರಾಮನ ಮೈಯೆಲ್ಲವೂ ಬೇಗೆಯಿಂದ ಧಗಧಗಿಸತೊಡಗಿತು. ಅದರಿಂದ ಬಲರಾಮನು ಬೆಂದು ಬಸವಳಿದು ಆಯಾಸದಿಂದ ಕಣ್ಣು ಮುಚ್ಚಿದನು. ಆ ಜ್ವರದ ಕುದಿ ಕಿಚ್ಚಿನಿಂದ ಅವನು ಕಂಗೆಟ್ಟು ಹೋದನು. ಆಗ ಶ್ರೀ ಕೃಷ್ಣನು ಬಲದೇವನ ಬಳಿಗೆ ಬಂದು ಅವನನ್ನು ಆಲಿಂಗಿಸಿಕೊಂಡನು. ಕೃಷ್ಣನ ಅಂಗಾಲಿಂಗನದಿಂದ ಬಲರಾಮನ ಜ್ವರದ ತಾಪವೆಲ್ಲವೂ ಪರಿಹಾರವಾಯಿತು. ಅವನು ಮತ್ತೆ ಮೊದಲಿನಂತೆ ಉತ್ಸಾಹ ತುಂಬಿ ನಿಂತುಕೊಂಡನು. ಆಗ ಆ ಜ್ವರವು ಕೃಷ್ಣನೊಂದಿಗೆ ಹೋರಾಡಲು ಸುರು ಮಾಡಿತು.

ಶ್ರೀ ಕೃಷ್ಣನ ಬಾಹುಗಳಿಗೆ ಬಡಿದು ಆ ಜ್ವರವು ತಾನೇ ಗಾಯಗೊಂಡು ಒದ್ದಾಡತೊಡಗಿತು. ಮೇಲೆ ಕೃಷ್ಣ ಜ್ವರವು ಬಂದು ಅದನ್ನು ಹೊಡೆದು ಹಣ್ಣು ಮಾಡಿತು. ಮಾಹೇಶ್ವರ ಜ್ವರದ ಆ ದುರವಸ್ಥೆಯನ್ನು ಕಂಡು ಬ್ರಹ್ಮದೇವರಿಗೆ ಕನಿಕರ ಬಂದು ಅವರು ಶ್ರೀ ಕೃಷ್ಣನಿಗೆ ಅದನ್ನು ಕ್ಷಮಿಸಿ ಬಿಡಲು ಬಿನ್ನಹ ಮಾಡಿಕೊಂಡರು. ಅದಕ್ಕೆ ಕೃಷ್ಣನು ''ಆಗಲಿ ಕ್ಷಮಿಸಿದ್ದೇನೆ'' ಎಂದು ಹೇಳಿ ಅದನ್ನು ಕ್ಷಮಿಸಿಬಿಟ್ಟು ತನ್ನ ವೈಷ್ಣವ

ಜ್ವರವನ್ನು ತನ್ನಲ್ಲಿಯೇ ಉಪಸಂಹಾರ ಮಾಡಿಕೊಂಡನು. ಶ್ರೀ ಹರಿಯಿಂದ ಕ್ಷಮೆಯನ್ನು ಹೊಂದಿ ಪಾರಾದ ಮಾಹೇಶ್ವರ ಜ್ವರವು ಶ್ರೀ ಕೃಷ್ಣನಿಗೆ ನಮಸ್ಕರಿಸಿ ''ನೀನು ನನ್ನನ್ನು ಅನುಗ್ರಹಿಸಿ ಕ್ಷಮಿಸಿದ ಈ ಸಮರ ಸಂದರ್ಭವನ್ನು ಸ್ಮರಣ ಮಾಡಿದವರ ಜ್ವರ ಪರಿಹಾರವಾಗುತ್ತದೆ'' ಎಂದು ಹೇಳಿ ಅಲ್ಲಿಂದ ಹೊರಟು ಹೋಯಿತು.

ಅನಂತರ ಶ್ರೀ ಕೃಷ್ಣನು ತನಗೆ ಪುರಪ್ರವೇಶಕ್ಕೆ ಆತಂಕವಾದ ಬಾಣಾಸುರನ ಐದು ಅಗ್ನಿಗಳನ್ನು ಗೆದ್ದು ದೈತ್ಯ ಸೇನೆಯನ್ನೆಲ್ಲ ಧ್ವಂಸ ಗೈದನು. ಶಿವ ಭಕ್ತನಾದ ಬಾಣಾಸುರನು ಪ್ರಚಂಡವಾದ ದಾನವ ಸೇವೆಯೊಂದಿಗೆ ಶ್ರೀ ಹರಿಯನ್ನು ಎದುರಿಸಿದನು. ದೇವ ಸೇನಾಪತಿಯಾದ ಸ್ಕಂದನೂ, ಮಹಾದೇವನೂ, ಬಾಣಾಸುರನ ಬೆಂಬಲಕ್ಕೆ ಬಂದು ರಣರಂಗದಲ್ಲಿ ಶ್ರೀ ಕೃಷ್ಣನನ್ನು ಎದುರಿಸಿದರು. ಹರಿ ಹರರಲ್ಲಿ ಘನಘೋರವಾದ ಸಮರಕ್ಕೆ ಮೊದಲಿಟ್ಟಿತು. ಅತ್ಯುಗ್ರವಾದ ಶಸ್ತ್ರಾಸ್ತ್ರ ಎಸೆದಾಟ ಮಸೆದಾಟದಿಂದ ಎಲ್ಲ ಲೋಕಗಳೂ ಪ್ರಕ್ಷುಬ್ಧವಾದವು. ಪ್ರಪಂಚವೆಲ್ಲವೂ ಈಗಲೇ ಪ್ರಳಯ ಹೊಂದುವದೋ ಏನೋ ಎಂದು ದೇವತೆಗಳೆಲ್ಲರೂ ಬೆದರಿ ಹೌಹಾರಿಹೋದರು. ಗೋವಿಂದನು ಜೃಂಭಕಾಸ್ತ್ರದಿಂದ ಮಹಾದೇವರನ್ನು ಸ್ತಬ್ಧನನ್ನಾಗಿ ಮಾಡಿದನು. ದೈತ್ಯರೂ, ಪ್ರಮಥಗಣದವರೂ ರುದ್ರನ ರಥದ ಸುತ್ತು ಮುತ್ತು ಸತ್ತು ಬಿದ್ದರು. ಸ್ವಯಂ ಮಹಾದೇವನು ನಿದ್ದೆಯ ಗುಂಗಿನಲ್ಲಿ ತೂಕಡಿಸುತ್ತ ರಥದ ನಟ್ಟನಡುವೆ ಒರಗಿ ಬಿಟ್ಟನು. ಮಹಾದೇವರ ಮಗ ಸ್ಕಂದನ ವಾಹನವಾದ ನವಿಲನ್ನು ಗರುಡನು ತನ್ನ ರೆಕ್ಕೆಯಿಂದ ಹೊಡೆದು ಗಾಯಗೊಳಿಸಿದನು. ಪ್ರದ್ಯುಮ್ನನ ಶಸ್ತ್ರಾಸ್ತ್ರಗಳು ಅವನ ದೇಹವನ್ನು ದುರ್ಬಲಗೊಳಿಸಿದವು. ಕೃಷ್ಣನ ಹುಂಕಾರ ಧ್ವನಿಯಿಂದಂತೂ ಆ ಕಾರ್ತೀಕ ಸ್ವಾಮಿಯು ಕಂಗೆಟ್ಟು ಹೋದನು.

ಹೀಗೆ ರುದ್ರನು ನಿದ್ದೆ ಹೋಗಿ, ದೈತ್ಯ ಸೈನ್ಯವೆಲ್ಲ ಬಿದ್ದು ಹೋಗಿ, ಸ್ಕಂದನು ಪರಾಜಿತನಾಗಿ, ಪ್ರಮಥ ಸೈನ್ಯವೆಲ್ಲವೂ ನಾಶವನ್ನು ಹೊಂದಿದರೂ ಕೃಷ್ಣನು ಮಾತ್ರ ಇನ್ನೂ ಉತ್ಸಾಹದಿಂದ ತುಸುವೂ ಆಯಾಸವಿಲ್ಲದೆ ಏನೂ ಗಾಯಗೊಳ್ಳದೆ ಸಿಂಹನಾದವನ್ನು ಮಾಡುತ್ತಲೇ ಇದ್ದ. ಅದನ್ನು ನೋಡಿ ಸಂತಪ್ತನಾದ ಬಾಣಾಸುರನು ನಂದೀಶ್ವರನನ್ನೇ ಸಾರಥಿಯನ್ನಾಗಿ ಮಾಡಿಕೊಂಡು ದೊಡ್ಡದಾದ ರಥವನ್ನು ಏರಿ, ಕೃಷ್ಣನ ಜೊತೆಗೆ ಯುದ್ಧಕ್ಕೆ ಬಂದು ನಿಂತನು. ಆಗ ಬಲರಾಮನು ತನ್ನ ಪರಾಕ್ರಮದಿಂದ ಬಾಣನ ಸೈನ್ಯವನ್ನೆಲ್ಲ ಛಿನ್ನವಿಚ್ಛಿನ್ನವಾಗಿ ಮಾಡಿ ಓಡಿಸಿದನು. ಬಲರಾಮನ ಭೀಕರವಾದ ಬಾಣ ಪ್ರಯೋಗದಿಂದ ಬಾಣಾಸುರನ ಕಾದಿಟ್ಟ ಸೈನ್ಯವೂ ಕೂಡ ನಷ್ಟ ಭ್ರಷ್ಟವಾಗಿ ಧೈರ್ಯಗೆಟ್ಟು ಧರೆಗುರುಳಿತು. ಅಳಿದುಳಿದ ಸೈನಿಕರನ್ನೆಲ್ಲ ಬಲರಾಮನು ನೇಗಿಲದಿಂದ ಜಗ್ಗಿ ಒನಕೆಯಿಂದ ಥಳಿಸಿದನು. ಕೃಷ್ಣ ಬಾಣರಲ್ಲಿ ಘೋರ ಸಂಗರವು ಮಸಗಿತು. ಹದನವಾದ ಬಾಣಗಳನ್ನು ಪರಸ್ಪರ ಪ್ರಯೋಗ ಮಾಡಿದರು. ಹೀಗೆ ಕೆಲ ಹೊತ್ತು ಯುದ್ಧದ ಆಟವನ್ನು ಆಡಿ ಕೃಷ್ಣನು ಕೊನೆಗೆ ಸಾವಿರ ಸೂರ್ಯರ ತೇಜಸ್ಸುಳ್ಳ ಸುದರ್ಶನ ಚಕ್ರವನ್ನು ಬಾಣಾಸುರನನ್ನು ಸಂಹರಿಸಬೇಕೆಂದು ಎತ್ತಿ ಹಿಡಿದನು. ಅದನ್ನು ಕಂಡು ತನ್ನ ಮಗನಾದ ಬಾಣನಿಗೆ ಇನ್ನು ಉಳಿಗಾಲವಿಲ್ಲವೆಂದು ಖಾತರಿಯಾದ ಬಾಣನ ತಾಯಿ ಕೋಟರೆಯು ಸಂಭ್ರಾಂತಳಾಗಿ ಹೇಗಾದರೂ ಮಾಡಿ ಮಗನನ್ನು ಬದುಕಿಸಿಕೊಳ್ಳಬೇಕೆಂದು ಒಂದು

ಯುಕ್ತಿಯನ್ನು ಮಾಡಿದಳು. ಅವಳು ಬಟ್ಟೆಯನ್ನು ಕಳಚಿ ಹುಟ್ಟಿದ ಮಹರ್ದಶೆಯಲ್ಲಿಯೇ ಯುದ್ಧ ಮಾಡುತ್ತಿರುವ ಶ್ರೀ ಕೃಷ್ಣ ಬಾಣರ ನಡುವೆ ನಿಂತುಕೊಂಡಳು. ಆಗ ಕೃಷ್ಣನು ಕಣ್ಣು ಮುಚ್ಚಿ ತನ್ನ ಕೈಯಲ್ಲಿಯ ಸುದರ್ಶನ ಚಕ್ರವನ್ನು ಬಿಟ್ಟನು. ಅದು ಶ್ರೀ ಕೃಷ್ಣನ ಆದೇಶದಂತೆ ದೈತ್ಯರೆಲ್ಲರ ಶಸ್ತ್ರಾಸ್ತ್ರಗಳನ್ನು ನಾಶಗೊಳಿಸಿ ಬಾಣಾಸುರನ ಸಾವಿರ ತೋಳುಗಳನ್ನು ಕತ್ತರಿಸಿ ಹಾಕಿತು. ಬಾಣನ ತೋಳುಬಳಿಗಳನ್ನೆಲ್ಲ ಸವರಿ ಹಾಕಿ ಸುದರ್ಶನವು ಮರಳಿ ಕೃಷ್ಣನ ಕೈಯಲ್ಲಿ ಬಂದು ಕುಳಿತಿತು. ಮತ್ತೆ ಕೃಷ್ಣನು ಬಾಣನನ್ನು ನಾಶಪಡಿಸಲಿಕ್ಕಾಗಿ ಸುದರ್ಶನವನ್ನು ಬಿಡಲು ಉದ್ಯುಕ್ತನಾದನು. ಅದನ್ನು ತಿಳಿದು ಮಹಾದೇವರು ಅಲ್ಲಿಗೆ ಧಾವಿಸಿ ಬಂದರು. ಬಾಣಾಸುರನ ಕಡಿದೊಗೆದ ಬಾಹುಮೂಲಗಳಿಂದ ಧಾರಾಕಾರವಾಗಿ ರಕ್ತವು ಸುರಿದು ಕೋಡಿಯಾಗಿ ಹರಿಯತೊಡಗಿತ್ತು. ಅದನ್ನು ಕಂಡು ಕರುಣಾಸ್ಕಂದಿತನಾದ ಶಿವನು ಶ್ರೀ ಹರಿಯನ್ನು ಕುರಿತು ನುಡಿದನು.

## ಶ್ರೀ ಶಂಕರ ಉವಾಚ

**ಕೃಷ್ಣ ಕೃಷ್ಣ ಜಗನ್ನಾಥ ಜಾನೇ ತ್ವಾಂ ಪುರುಷೋತ್ತಮಂ ।**
**ಪರೇಶಂ ಪರಮಾತ್ಮಾನಮನಾದಿ ನಿಧನಂ ಹರಿಮ್ ॥**

ಕೃಷ್ಣ, ನೀನೇ ಜಗದೀಶ್ವರ ಮತ್ತು ಪರಬ್ರಹ್ಮನೆಂದು ನಾನು ತಿಳಿದಿದ್ದೇನೆ. ನಿನಗೆ ಹ್ರಾಸವಿನಾಶಗಳಿಲ್ಲ. ಆದಿ ಇಲ್ಲ, ವ್ಯಾಧಿ ಇಲ್ಲ. ನೀನೇ ಪರಾತ್ ಪರನಾದ ಪರಮಾತ್ಮನಾಗಿರುವೆ. ಪ್ರಭು, ಈ ಬಾಣಾಸುರನು ನನ್ನ ಭಕ್ತ. ಇವನಿಗೆ ನಾನು ಅಭಯದಾನವನ್ನು ಇತ್ತಿದ್ದೇನೆ. ನಾನು ಇವನಿಗೆ ಕೊಟ್ಟ ವರವನ್ನು ನೀನು ಸುಳ್ಳು ಮಾಡಬೇಡ. ನನ್ನ ವರದ ಬಲದಿಂದ ಇವನು ಉನ್ಮತ್ತನಾಗಿ ನಿನ್ನನ್ನು ಎದುರಿಸಿದ್ದಾನೆ. ಅದಕ್ಕಾಗಿ ನಾನು ನಿನ್ನಲ್ಲಿ ಕ್ಷಮೆ ಕೇಳಿಕೊಳ್ಳುತ್ತೇನೆ. ಇವನಿಗೆ ಜೀವದಾನ ಮಾಡು'' ಮಹಾದೇವನ ಈ ಮಾತು ಕೇಳಿ ಬಾಣನ ಮೇಲಿನ ದ್ವೇಷವಳಿದು ಪ್ರಸನ್ನ ಮುಖದಿಂದ ನಗುತ್ತ ಶ್ರೀ ಕೃಷ್ಣನು ನುಡಿದನು - ''ಶಂಕರ, ನಾನು ನಿನ್ನ ಮಾತಿನ ಮೇಲಿನ ಗೌರವ ಬುದ್ಧಿಯಿಂದ ಇವನನ್ನು ಬಿಟ್ಟಿದ್ದೇನೆ. ನೀನು ಅವನಿಗೆ ಅಭಯ ವರವನ್ನು ಕೊಟ್ಟ ಬಳಿಕ ನಾನೂ ಅವನಿಗೆ ಅಭಯ ದಾನ ಮಾಡಿದಂತೆಯೇ. ಆದುದರಿಂದ ಅವನನ್ನು ನಾನೀಗ ಜೀವಂತ ಬಿಟ್ಟಿದ್ದೇನೆ. ನೀನು ಸ್ವಸ್ಥಾನಕ್ಕೆ ಹೋಗು.'' ಹೀಗೆ ಹೇಳಿ ಕೃಷ್ಣನು ಅನಿರುದ್ಧನನ್ನು ನಾಗಪಾಶದಿಂದ ಬಂಧಿಸಿಟ್ಟ ಸ್ಥಳಕ್ಕೆ ಬಂದನು. ಅವನನ್ನು ಬಿಗಿದ ಹಾವುಗಳೆಲ್ಲವೂ ಗರುಡನ ರೆಕ್ಕೆಯ ಗಾಳಿಯಿಂದಲೇ ಕಳಚಿ ಬಂಧ ಮೋಚನವಾಯಿತು. ಅನಂತರ ಶ್ರೀ ಕೃಷ್ಣನು ಉಷಾ ಅನಿರುದ್ಧ ಇಬ್ಬರನ್ನೂ ಗರುಡನ ಮೇಲೆ ಕೂಡಿಸಿಗೊಂಡು ದ್ವಾರಕೆಗೆ ಬಂದನು. ಬಲರಾಮ ಪ್ರದ್ಯುಮ್ನರೂ ಅವನ ಜೊತೆಗೇ ಮರಳಿದರು. ಭೂಮಿಯ ಹೊರೆಯನನ್ನು ಹಗುರಗೊಳಿಸಲಿಕ್ಕಾಗಿ ಅವತಾರ ಮಾಡಿದ ಶ್ರೀ ಕೃಷ್ಣನು ಮಡದಿ ಮಕ್ಕಳು ಮೊಮ್ಮಕ್ಕಳಿಂದ ಒಡಗೂಡಿ ದ್ವಾರಕೆಯಲ್ಲಿ ಆನಂದದಿಂದ ವಾಸ ಮಾಡಿದನು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತಮೂರನೇ ಅಧ್ಯಾಯ ಸಂಪೂರ್ಣ*

—o—

## 'ನಾನೆ ವಾಸುದೇವ' ಎಂದು ಖಲನ ಹರಿಯು ತಾನೆ ಕೊಂದ ಅಧ್ಯಾಯ-೩೪

**''ಕಾಶಿಯಲ್ಲಿ ವಾಸಿಸುವ ಪೌಂಡ್ರಕಾಭಿಖ್ಯ ವಾಸುದೇವ ।**
**ನಾನೇ ವಿಷ್ಣು, ಶ್ರೀ ಕೃಷ್ಣನಲ್ಲ ಎಂತೆಂದು ತೊಟ್ಟು ಹೇವ ॥**
**ಕೃತಕಶಂಖ ಶ್ರೀವತ್ಸ ಚಕ್ರಗಳ ಧರಿಸಿ ಯುದ್ಧಮಾಡಿ ।**
**ಹರಿಯ ಚಕ್ರಹತನಾದ ಕಿಚ್ಚಿನಲ್ಲಿ ಕಾಶಿಪುರಿಯ ದೂಡಿ ॥**

ಪೌಂಡ್ರಕ ವಂಶದಲ್ಲಿ ವಾಸುದೇವನೆಂಬುವವನು ಕಾಶೀ ಪಟ್ಟಣದ ಅರಸನ ಗೆಳೆಯನಾಗಿದ್ದನು. ಅನೇಕ ಅಜ್ಞಾನಿಗಳಾದ ಜನರು ತಿಳಿಯದೆ ''ವಿಷ್ಣುವಿನ ಅವತಾರಭೂತನಾದ ವಾಸುದೇವನೆಂದರೆ ನೀನೇ'', ಎಂದು ಅವನನ್ನು ಬಣ್ಣಿಸಿದರು. ಬುದ್ಧಿಗೇಡಿಯಾದ ಆ ವಾಸುದೇವನು ಮೂರ್ಖಜನರ ಆ ಮೆಚ್ಚುಗೆಯ ನುಡಿಯನ್ನು ನಿಜವೆಂದೇ ನಂಬಿ ತಾನೊಬ್ಬ ಶ್ರೀ ವಿಷ್ಣುವಿನ ಅವತಾರೀ ಪುರುಷನೆಂದೇ ಭಾವಿಸಿದನು. ಕೃತ್ರಿಮವಾದ ಶಂಖ - ಚಕ್ರಗಳನ್ನು ಧಾರಣೆ ಮಾಡಿ, ಕಾದ ಕಬ್ಬಿಣದ ತುಣುಕಿನಿಂದ ಎದೆಯನ್ನು ಸುಟ್ಟುಕೊಂಡು ಅದು 'ಶ್ರೀವತ್ಸ ಚಿಹ್ನ' ಎಂದು ಜನರಿಗೆ ತೋರಿಸಿ ನಾನೇ ವಿಷ್ಣು ವಾಸುದೇವನೆಂದು ಹೇಳಿಕೊಳ್ಳುತ್ತಿದ್ದನು.

ಶ್ರೀ ಕೃಷ್ಣ ಪರಮಾತ್ಮನ ಕಡೆಗೆ ಓರ್ವದೂತನನ್ನು ಕಳಿಸಿ ಹೀಗೆ ಅವನ ಮುಖಾಂತರ ಹೇಳಿ ಕಳಿಸಿದನು. ''ಮೂಢನಾದ ಕೃಷ್ಣ, ನಿಜವಾದ ವಾಸುದೇವನೆಂದರೆ ನಾನು. ನನ್ನ ಹೆಸರನ್ನು ನೀನು ಇಟ್ಟುಕೊಂಡು ನಿಜವಾದ ನನ್ನ ಚಿಹ್ನಗಳಾದ ಶಂಖ - ಚಕ್ರಗಳನ್ನು ನೀನು ಬಲತ್ಕಾರದಿಂದ ತೆಗೆದುಕೊಂಡಿರುವೆ. ವಾಸ್ತವಿಕ ವಾಸುದೇವ ವಿಷ್ಣುವಾದ ನಾನು ಈ ನಿನ್ನ ಅಪಚಾರವನ್ನು ಸಹಿಸಲಾರೆ. ನಿನಗೆ ಬದುಕಬೇಕೆಂದು ಇಚ್ಛೆ ಇದ್ದರೆ, ಆ ನನ್ನ ಶಂಖ-ಚಕ್ರಗಳನ್ನು ನನಗೆ ಕೊಟ್ಟು, ವಾಸುದೇವ ಎಂಬ ನನ್ನ ಹೆಸರನ್ನೂ ತೊರೆದು, ನನಗೆ ಶರಣು ಬಾ. ನೀನು ಬಂದು ನನಗೆ ನಮಸ್ಕಾರ ಮಾಡದಿದ್ದರೆ ದುಷ್ಟ ನಿಗ್ರಹಕ್ಕಾಗಿ ಅವತಾರ ಮಾಡಿದ ನಾನು ನಿನ್ನನ್ನು ಸಂಹಾರ ಮಾಡಬೇಕಾಗುವದು'' ಪೌಂಡ್ರಕ ವಾಸುದೇವನ ಈ ಸಂದೇಶವನ್ನು ಕೇಳಿ ಕೃಷ್ಣನಿಗೆ ನಗೆ ಬಂದಿತು. ಅವನ ದೂತನನ್ನು ಕುರಿತು ಕೃಷ್ಣನು ನಕ್ಕು ಇಂತು ನುಡಿದನು -

''ದೂತ, ನಿಮ್ಮ ಒಡೆಯನಾದ ಪೌಂಡ್ರಕನಿಗೆ ಹೋಗಿ ತಿಳಿಸು. ''ನಿನ್ನ ಅಪ್ಪಣೆಯಂತೆ ನಾನು ಸುದರ್ಶನ ಚಕ್ರವನ್ನು ಬಿಟ್ಟು ಬಿಡುತ್ತೇನೆ. ನಿನಗೇ ಕೊಟ್ಟು ಬಿಡುತ್ತೇನೆ. ನಿನ್ನ ಅಭಿಪ್ರಾಯವು ನನಗೆ ತಿಳಿದಿದೆ. ನಿನ್ನ ಆದೇಶದಂತೆ ನನ್ನ ಎಲ್ಲ ಆಯುಧಗಳೊಂದಿಗೆ ನಿನ್ನ ಊರಿಗೆ ಬರುತ್ತೇನೆ. ನನ್ನ ಚಿಹ್ನವಾದ ಚಕ್ರವನ್ನು ನಿನಗೇ ಕೊಡುತ್ತೇನೆ. ನೀನು ಹೇಳಿದಂತೆ ನಾಳೆ ನಾನು ನಿನಗೆ ಶರಣು ಬಂದು ಮತ್ತೆಂದೂ ನಿನ್ನಿಂದ ನನಗೆ ಭಯವುಂಟಾಗದಂತೆ ಮಾಡುತ್ತೇನೆ''. ಕೃಷ್ಣನ ಸಂದೇಶವನ್ನು ತೆಗೆದುಕೊಂಡು ದೂತನು ಕಾಶಿಗೆ ತೆರಳಿದ ಬಳಿಕ ಆ ಭಗವಂತನು ಗರುಡನನ್ನು ಸ್ಮರಿಸಿದನು. ನೆನೆದ ಕೂಡಲೇ ಗರುಡನನ್ನೇರಿ ಕಾಶೀ ಪಟ್ಟಣಕ್ಕೆ ಪ್ರಯಾಣ ಮಾಡಿದನು.

ಅತ್ತ ಪೌಂಡ್ರಕವಾಸುದೇವನು ಕೃಷ್ಣಾಗಮನದ ಸಮಾಚಾರವನ್ನು ತಿಳಿದು ತನ್ನ ಮಿತ್ರನಾದ ಕಾಶೀ ರಾಜನ ಪ್ರಚಂಡ ಸೇನಾ ಸನ್ನಾಹದೊಂದಿಗೆ ಯುದ್ಧಕ್ಕೆ ಸಿದ್ಧನಾಗಿ ಅಂಗರಕ್ಷಕರ ಮಧ್ಯದಲ್ಲಿ ಕೃಷ್ಣನಿಗೆ ಎದುರಾದನು. ಅವನ ಪಕ್ಕದಲ್ಲಿಯೇ ಅವನಿಗೆ ಬೆಂಬಲಿಗನಾಗಿ ಕಾಶೀ ನರೇಶನು ನಿಂತುಕೊಂಡಿದ್ದನು. ಶ್ರೀ ಕೃಷ್ಣನು ರಥದಲ್ಲಿ ಕೂತು ಬರುವ ಪೌಂಡ್ರಕ ವಾಸುದೇವನನ್ನು ದೂರಿನಿಂದಲೇ ನೋಡಿದನು. ಎರಡು ಕೃತ್ರಿಮ ತೋಳುಗಳನ್ನು ಹಚ್ಚಿಕೊಂಡು ಒಂದು ಕೈಯಲ್ಲಿ ಚಕ್ರವನ್ನು ಮತ್ತೊಂದರಲ್ಲಿ ಗದೆಯನ್ನೂ, ಇನ್ನೊಂದರಲ್ಲಿ ಶಂಖವನ್ನೂ ಮಗದೊಂದರಲ್ಲಿ ಶಾರ್ಙ್ಗ ಧನುಸ್ಸನ್ನೂ ಪೌಂಡ್ರಕನು ಹಿಡಿದುಕೊಂಡಿದ್ದನು. ಕುಶಲನಾದ ಬಡಿಗನಿಂದ ಈ ಎಲ್ಲ ಶ್ರೀ ವಿಷ್ಣುವಿನ ಚಕ್ರಾದಿ ಚಿಹ್ನೆಗಳನ್ನೆಲ್ಲ ಮಾಡಿಸಿ, ಎದೆಯನ್ನುಸುಟ್ಟು ಕೊಂಡು, ಶ್ರೀ ವತ್ಸಲಾಂಛನವನ್ನೂ ವಕ್ಷಸ್ಥಳದಲ್ಲಿ ಮೂಡಿಸಿಕೊಂಡು, ತಾನೇ ನಿಜವಾದ ವಾಸುದೇವ ಎಂದು ಆಢ್ಯತೆಯಿಂದ ಬರುತ್ತಲಿರುವ ಪೌಂಡ್ರಕನನ್ನು ಕಂಡು ಕೃಷ್ಣನಿಗೆ ತಡೆಯಲಾರದಷ್ಟು ನಗೆ ಬಂದಿತು. ಅವನು ತನ್ನಂತೆಯೇ ರತ್ನ ಖಚಿತವಾದ ಕಿರೀಟ ಕುಂಡಲಗಳನ್ನು ಧರಿಸಿದ್ದ. ಪೀತಾಂಬರವನ್ನುಟ್ಟಿದ್ದ. ವನಮಾಲೆಯನ್ನು ಹಾಕಿಕೊಂಡಿದ್ದ. ಗರುಡನ ಧ್ವಜವು ಅವನ ರಥದ ಮೇಲೆ ಹಾರಾಡುತ್ತಿತ್ತು. ಕೈಯಲ್ಲಿಯ ಚಕ್ರವನ್ನು ಆಗಾಗ ತಿರುಗಿಸುತ್ತಿದ್ದ. ಶಂಖವನ್ನು ಊದುತ್ತಿದ್ದ. ನಾಟಕದ ನಟನಂತೆ, ವಾಸುದೇವ ವಿಷ್ಣುವಿನ ವಿನೋದೀ ವೇಷಧರನಂತೆ ಅಭಿನಯಿಸುವ ಆ ಪೌಂಡ್ರಕನ ಹಾವ ಭಾವವನ್ನು ನೋಡಿ ಕೃಷ್ಣನು ಉಪಹಾಸ ಪೂರ್ಣವಾಗಿ ಮತ್ತೆ ಮತ್ತೆ ನಕ್ಕನು.

ಕೃಷ್ಣನಿಗೂ ಪೌಂಡ್ರಕನಿಗೂ ನಿಕರದ ಸಂಗ್ರಾಮವು ನಡೆಯಿತು. ಪೌಂಡ್ರಕನ ಮಹಾಶೂರರಾದ ಭಟರು ಖಡ್ಗ, ಶೂಲ, ಶಕ್ತಿ ಪರಿಘ, ಬಿಲ್ಲು, ಬಾಣ ಮುಂತಾದ ಘೋರತರವಾದ ಶಸ್ತ್ರಾಸ್ತ್ರಗಳನ್ನು ಎಸೆದು ಶ್ರೀ ಕೃಷ್ಣನ ಜೊತೆಗೆ ಹೋರಾಡಿದರು. ಕೃಷ್ಣನು ತನ್ನ ಶಾರ್ಙ್ಗಧನುಸ್ಸಿನಲ್ಲಿ ಬಾಣ ಹೂಡಿ ಕ್ಷಣಾರ್ಧದಲ್ಲಿ ವೈರಿಗಳ ಶಸ್ತ್ರಾಸ್ತ್ರಗಳನ್ನೆಲ್ಲ ಕಡಿದು ಹಾಕಿದನು. ಸುದರ್ಶನ ಚಕ್ರದಿಂದ ಕಾಶಿ ರಾಜನ ಸೈನ್ಯವನ್ನೆಲ್ಲ ಸಂಹರಿಸಿದನು. ತನ್ನ ನಕಲಿಯ ಚಿನ್ಹಗಳನ್ನು ಧರಿಸಿದ ಮೂಢ ಪೌಂಡ್ರಕನನ್ನು ಕುರಿತು ನುಡಿದನು - ''ಪೌಂಡ್ರಕ, ನೀನು ಹೇಳಿಕಳಿಸಿದಂತೆ ನಾನು ಬಂದಿದ್ದೇನೆ. ನಿನ್ನ ಮಾತಿನಂತೆ ನನ್ನ ಚಿನ್ಹವಾದ ಚಕ್ರ ಗದೆ ಗರುಡರನ್ನು ಬಿಟ್ಟು ನಿನ್ನ ಕಡೆಗೆ ಕಳಿಸಿದ್ದೇನೆ. ಇವುಗಳನ್ನೆಲ್ಲ ನೀನೇ ತೆಗೆದುಕೋ'' ಎಂದು ಹೇಳಿ ಚಕ್ರವನ್ನು ಬಿಟ್ಟನು. ಸುದರ್ಶನ ಚಕ್ರವು ಹೋಗಿ ಪೌಂಡ್ರಕನ ತಲೆಯನ್ನು ಕತ್ತರಿಸಿತು. ಅವನ ಗದೆಯು ರಥವನ್ನು ಪುಡಿಗೈದಿತು. ಗರುಡನು ಹೋಗಿ ಅವನ ಧ್ವಜವನ್ನು ಹಾಳು ಗೆಡವಿದ. ಪೌಂಡ್ರಕ ವಾಸುದೇವನು ನೆಲಕ್ಕುರುಳಿದ. ಆಗ ಅವನ ಮಿತ್ರನಾದ ಕಾಶೀನರೇಶನು ಕೃಷ್ಣನ ಜೊತೆಗೆ ಯುದ್ಧಕ್ಕೆ ಬಂದ. ಆಗ ಕೇಶವನು ಶಾರ್ಙ್ಗ ಬಿಲ್ಲಿನಲ್ಲಿ ಬಾಣ ಹೂಡಿ ಅವನ ತಲೆ ಕಡಿದು ರಣಾಂಗಣದಿಂದ ಬಹುದೂರವಾದ ಕಾಶೀ ಪಟ್ಟಣದ ನಟ್ಟ ನಡುವೆಯೇ ಹಾರಿ ಬೀಳುವಂತೆ ಮಾಡಿದ. ಹೀಗೆ ಪೌಂಡ್ರಕ ವಾಸುದೇವನನ್ನೂ ಸೇನಾ ಪರಿವಾರ ಸಹಿತನಾದ ಕಾಶಿರಾಜನನ್ನೂ ಕೊಂದು, ನಿಜವಾದ ವಿಷ್ಣು ವಾಸುದೇವನು ದ್ವಾರಕೆಗೆ ಬಂದು ದೇವೇಂದ್ರನಂತೆ ಅಲ್ಲಿ ಮೆರೆದನು. ಇತ್ತ

ಕಾಶಿಯಲ್ಲಿ ಒಮ್ಮಿಂದೊಮ್ಮೆಲೇ ರುಂಡವು ಬಂದು ಬಿದ್ದದ್ದನ್ನು ನೋಡಿ ನಾಗರಿಕರೆಲ್ಲರೂ 'ಇದಾರ ರುಂಡ ?' ಯಾರು ಕಡಿದು ಇದನ್ನು ಇಲ್ಲಿಗೆ ತೂರಿ ಒಗೆದರು? ಎಂದು ಕುತೂಹಲದಿಂದ ನೋಡಿದರು. ಅದು ಅವರ ರಾಜನಾದ ಕಾಶಿಪತಿಯ ತಲೆಯೇ ಆಗಿದ್ದಿತು. ಯುದ್ಧ ಮಾಡಲು ಹೋದ ಆ ರಾಜನನ್ನು ಕೃಷ್ಣನೇ ಕಡಿದು ತಲೆಯನ್ನು ಬುದ್ಧಿ ಪೂರ್ವಕವಾಗಿಯೇ ಕಾಶಿ ನಗರದ ನಡುವೆ ತೂರಿ ಬೀಳಿಸಿದ್ದಾನೆಂದು ಎಲ್ಲರಿಗೂ ತಿಳಿಯಿತು. ಅದರಿಂದ ರಾಜನ ಮಗನಿಗೆ ಬಹಳ ದುಃಖ ಸಂತಾಪಗಳುಂಟಾಗಿ ಅವನು ಮಹಾದೇವರನ್ನು ಕುರಿತು ಪುರೋಹಿತನೊಂದಿಗೆ ತಪಸ್ಸು ಮಾಡಿದನು. ಮಹಾದೇವರು ಅವನಿಗೆ ''ಪ್ರತ್ಯಕ್ಷನಾಗಿ ''ಏನು ವರಬೇಕು ಕೇಳು?'' ಎಂದನು. ಅದಕ್ಕೆ ಅವನು ''ದೇವ ನನ್ನ ತಂದೆಯನ್ನು ಕೊಂದವನನ್ನು ಸಂಹರಿಸಲಿಕ್ಕಾಗಿ ಒಂದು ಕೃತ್ಯೆಯನ್ನು ಅಗ್ನಿಯಿಂದ ನಿರ್ಮಿತವಾಗುವಂತೆ ಮಾಡು'' ಎಂದು ಕೇಳಿದನು. ಶಂಕರನು ಹಾಗೆ ಆಗಲಿ ಎಂದು ವರವಿತ್ತ. ಅನಂತರ ದಕ್ಷಿಣಾಗ್ನಿಯ ಚಯನವನ್ನು ಮಾಡಿದ ಕೂಡಲೇ ಅಗ್ನಿಯಿಂದ ಜಗತ್ತನ್ನೇ ಸುಡಬಲ್ಲ ಒಂದು ಕರಾಳ ಕೃತ್ಯೆಯು ಉತ್ಪನ್ನವಾಯಿತು. ಆ ಹೆಮ್ಮಾರಿಯ ಮೋರೆ ಅಗ್ನಿ ಕುಂಡದಂತೆ ಉರಿಯುತ್ತಿತ್ತು. ಕೂದಲುಗಳೂ ಕೂಡ ಕಿಚ್ಚಿನ ಬಣವೆಯಂತೆ ಧಗಧಗಿಸುತ್ತಿದ್ದವು. ಆ ಬೆಂಕಿಯ ಭೈರವಿಯು ಕೋಪೋತ್ತಾಪದಿಂದ ಎಲ್ಲಿದ್ದಾನೆ ಆ ಕೃಷ್ಣ ಎನ್ನುತ್ತ ದ್ವಾರಕೆಗೆ ನಡೆಯಿತು.

ಅಗ್ನಿ ಮೂರ್ತಿಯಂತಿರುವ ಆ ಕರಾಳ ಕೃತ್ಯೆಯನ್ನು ಕಂಡೇ ಜನರೆಲ್ಲರೂ ಕಂಗೆಟ್ಟು ಕೃಷ್ಣನಿಗೆ ಶರಣು ಹೋದರು. ಆ ಬೆಂಕಿಯ ಬೊಂಬೆಯನ್ನು ಕಂಡ ಕೂಡಲೇ ಕೃಷ್ಣನಿಗೆ ತಿಳಿದು ಹೋಯಿತು. ಕಾಶೀ ರಾಜಕುಮಾರನು ಶಿವನನ್ನು ಆರಾಧಿಸಿ ಈ ಕೃತ್ಯೆಯನ್ನು ನನ್ನ ಹತ್ಯೆಗಾಗಿ ಕಳಿಸಿದ್ದಾನೆ ಎಂದು ಉರಿಮೋರೆಯ ಆ ಮಹಾಮಾರಿಯು ಬೆಂಕಿಯ ವಂಕಿಗಳನ್ನು ತೂರಾಡುತ್ತ ತೂಗಾಡುತ್ತ ಬರುತ್ತಲಿದ್ದರೂ ಜನರೆಲ್ಲ ಹೌಹಾರಿ ಹೆದರಿ ನಡುಗುತ್ತಲಿದ್ದರೂ ಶ್ರಿ ಕೃಷ್ಣನು ಮಾತ್ರ ನಿಶ್ಚಿಂತನಾಗಿ ಲೀಲಾ ವಿನೋದವಾಡುತ್ತಲೇ ಇದ್ದನು. ಅದು ಹತ್ತರ ಬಂದಾಗ ತನ್ನ ಸುದರ್ಶನ ಚಕ್ರವನ್ನು ಆ ಕೃತ್ಯೆಯತ್ತ ಕಳಿಸಿದನು. ಸುತ್ತೂ ಕಡೆಗೂ ಉರಿಯ ಅಗ್ನಿಜ್ವಾಲೆಗಳನ್ನು ಹಮ್ಮಿ ಬೆಂಕಿಯ ಹಾರಗಳನ್ನೇ ಧರಿಸಿದಂತಿರುವ ಹರಿಯ ಸುದರ್ಶನ ಚಕ್ರವು ಆ ಕೃತ್ಯೆಯ ಬೆನ್ನು ಹತ್ತಿತು.

ಸುದರ್ಶನದ ಮಹಾಜ್ವಾಲೆಗಳಿಂದ ಅರ್ಧದಗ್ಧವಾಗಿ ಆ ಕೃತ್ಯೆಯು ಹೆದರಿ ಹಿಂದಿರುಗಿ ಓಡತೊಡಗಿತು. ಸುದರ್ಶನವು ಅದನ್ನು ಬೆನ್ನಟ್ಟಿತು. ಚಕ್ರದ ತೇಜಸ್ತೋಮದಿಂದ ಕೃತ್ಯೆಯ ತೇಜೋವಧವಾಗಿ ಅದರ ಝಳಕ್ಕೆ ಸುಟ್ಟು ಕರಕಾದಂತಾಗಿ ಅದು ದಿಕ್ಕೆಟ್ಟು ಓಡುತ್ತ ಸುದರ್ಶನದ ಭಯದಿಂದ ಸಂಭ್ರಾಂತವಾಗಿ ಕಾಶಿಯಲ್ಲಿ ಹೊಕ್ಕಿತು. ಆಗ ಸುದರ್ಶನಚಕ್ರವನ್ನು ಎದುರಿಸಲಿಕ್ಕಾಗಿ ಕಾಶೀ ಪಟ್ಟಣದ ಕಾವಲುಗಾರರೂ ಹಾಗೂ ಕಾಶೀ ಪತಿಯ ಕಾದಿಟ್ಟ ಸೈನ್ಯವೆಲ್ಲವೂ ಮತ್ತು ಮಹಾದೇವರ ಪ್ರಮಥಗಣವೂ ಕೂಡಿ ಬಂದಿತು. ಉರಿಯ ತೆರೆಗಳನ್ನು ತೂರುತ್ತಾ ತಿರುಗುತ್ತಲಿರುವ ಸುದರ್ಶನಚಕ್ರದ ಮೇಲೆ ತಮ್ಮಲ್ಲಿದ್ದ ಶಸ್ತ್ರಾಸ್ತ್ರಗಳನ್ನೆಲ್ಲ ಬೀಸಿ ಒಗೆದರು. ತೂರಿ ಎಸೆದರು. ಆದರೆ ಅದರಿಂದ ಆ ಚಕ್ರಕ್ಕೆ ಏನೂ ಆಗದೇ ಅದು ಧಗಧಗಿಸುತ್ತ ಬಂದು

ಸಮಸ್ತ ಸೈನಿಕರನ್ನೆಲ್ಲ ಸುಟ್ಟು ಹಾಕಿತು. ಅಳಿದುಳಿದ ಸೇನಾಪರಿವಾರದವರೆಲ್ಲರೂ ಕೃತ್ಯೆಯೊಡನೆ ಮತ್ತೆ ಕಾಶಿಯಪಟ್ಟಣದ ಒಳಗೊಳಗೆ ಓಡಿ ಅಡಗಿಕೊಂಡರು. ಆ ಕೃತ್ಯೆಯು ಪಟ್ಟಣದ ಮನೆಮೂಲೆಗಳಲ್ಲಿ ಅಡಗಿಕೊಂಡಿದ್ದನ್ನೂ ಅದಕ್ಕೆ ಊರ ಜನರು ತಮ್ಮಲ್ಲಿ ಆಶ್ರಯವಿತ್ತು ಬಚ್ಚಿಟ್ಟದ್ದನ್ನೂ ಕಂಡ ಸುದರ್ಶನವು ಆ ಕೃತ್ಯೆಯ ಸಲುವಾಗಿ ಇಡೀ ಕಾಶೀಪಟ್ಟಣವನ್ನೇ ಸುಡತೊಡಗಿತು.

ಹರಿ ದ್ವೇಷಿಯಾದ ಕೃತ್ಯೆಗೆ ಆಶ್ರಯಕೊಟ್ಟ ತಪ್ಪಿಗಾಗಿ ಕೃತ್ಯೆ ಸಹಿತವಾಗಿ ಅರಸ ಅರಸಿಯರು ಸುಟ್ಟು ಹೋದರು. ಆನೆ ಕುದುರೆಗಳು ಉರಿದು ಹೋದವು. ಅರಮನೆ ಕೋಶಾಗಾರಗಳು ಅಗ್ನಿಗೆ ಆಹುತಿಯಾದವು. ಮನೆ ಮಠ ಮಂದಿರಗಳಲ್ಲೆಲ್ಲಾ ಅಗ್ನಿ ತಾಂಡವ ನಡೆದು ಎಲ್ಲವೂ ಸುಟ್ಟು ಬೂದಿಯಾದವು. ಅಗಸರೂ ಅರಸರೂ ಆಳುಗಳೂ ಕಾಳುಗಳೂ, ಅಶ್ವಶಾಲೆ, ಗಜಶಾಲೆ, ಪರ್ಣಕುಟಿ, ಪ್ರಾಸಾದ, ಪೌರಯಾತ್ರಿಕ ಮುಂತಾದವರಿಂದ ತುಂಬಿ ತುಳುಕುವ ಇಡೀ ನಗರವೆಲ್ಲವೂ ಕ್ಷಣಾರ್ಧದಲ್ಲಿ ಭಸ್ಮರಾಶಿಯಾಗಿ ಬಿದ್ದಿತು. ಇಷ್ಟಾದರೂ ಸುದರ್ಶನದ ಕೋಪ ತಾಪಗಳು ಇನ್ನೂ ಕಡಿಮೆಯಾಗಿರಲಿಲ್ಲ. ಆದರೆ ಮುಂದೆ ಅಲ್ಲಿ ಸುಡಲು ಯಾರೂ ಉಳಿಯದ್ದರಿಂದ ಅದು ನಿರುಪಾಯವಾಗಿ ತನ್ನ ರಶ್ಮಿತೇಜೊ ಮಂಡಲಗಳಿಂದ ಬೆಳಗುತ್ತ ಕಾಶಿಯಿಂದ ಮರಳಿ ಬಂದು ಮತ್ತೆ ಕೃಷ್ಣನ ಕೈಯನ್ನು ಅಲಂಕರಿಸಿತು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತನಾಲ್ಕನೇ ಅಧ್ಯಾಯ ಸಂಪೂರ್ಣ*

—o—

ಅಧ್ಯಾಯ - ೩೫

**ಕೌರವರಾಯನ ಕುವರಿಯ ಸಾಂಬನು ಇಚ್ಛಿಸಿ ಬಂಧನ ಹೊಂದಿದನು ।**
**ಬಿಡಿಸಲು ಬಂದಿಹ ಬಲನವಮಾನಿಸಿ ದುರ್ಯೋಧನ ಕಳೆಗುಂದಿದನು ॥**
**ಹಸ್ತಿನ ಪುರವನು ಗಂಗೆಗೆ ಎಳೆಯಲು ಶರಣಾಗತಿಯಲಿ ನಿಂದಿಹನು. ।**
**ಮುಸಲಿಯು ಮದುಮಗಳೊಂದಿಗೆ ಸಾಂಬನ ದ್ವಾರಕೇಗಾಗಲೆ ತಂದಿಹನು ॥**

## ಸಾಂಬನ ವಿವಾಹ

**ಮೈತ್ರೇಯ -** ಪೂಜ್ಯರೇ, ಬಲರಾಮದೇವರ ಬೇರೆ ಏನಾದರೂ ಮಹಿಮೆ ಪರಾಕ್ರಮಗಳ ಸಂಗತಿ ನಡೆದಿದ್ದರೆ ತಿಳಿಸಬೇಕು. ನನಗೆ ಬಲರಾಮ ಚರಿತ್ರೆಯನ್ನು ಇನ್ನೂ ಕೇಳಬೇಕೆಂದು ಅಪೇಕ್ಷೆ ಇದೆ.

**ಪರಾಶರ -** ಭೂಮಂಡಲವನ್ನೆಲ್ಲ ಫಣಾ ಮಂಡಲದಲ್ಲಿ ಧರಿಸಿದ ಆದಿಶೇಷನ ಅವತಾರ ಭೂತನಾದ ಬಲಭದ್ರನ ಮತ್ತೊಂದು ಸಾಹಸದ ಕತೆಯನ್ನು ಬಿತ್ತರಿಸುತ್ತೇನೆ ಕೇಳಿರಿ. ದುರ್ಯೋಧನನ ಮಗಳಾದ ಲಕ್ಷಣಾದೇವಿಯ ಸ್ವಯಂವರದ ಸಮಾಚಾರವನ್ನು ಕೇಳಿ ಜಾಂಬುವತಿಯ ಮಗನಾದ ಸಾಂಬನು ಹಸ್ತಿನಾವತಿಗೆ ಹೋದನು. ಮತ್ತು ರಾಜಕುಮಾರಿಯಾದ ಲಕ್ಷಣೆಯನ್ನು ತನ್ನ ವೀರವಿಕ್ರಮಗಳಿಂದ ಸ್ವಯಂವರ ಮಂಟಪದಿಂದ ಹಾರಿಸಿಗೊಂಡು ಹೊರಟನು. ಆಗ ಭೀಷ್ಮ, ದ್ರೋಣ ಕರ್ಣ, ದುರ್ಯೋಧನ, ದುಃಶ್ಯಾಸನ ಮುಂತಾದ ವೀರಾಧಿವೀರರೆಲ್ಲರೂ ಸೇರಿ ಸಾಂಬನ ಮೇಲೆ ಏರಿ ಬಂದು ಹೋರಾಡಿ ಅವನನ್ನು ಹಿಡಿದು ಬಂಧನದಲ್ಲಿರಿಸಿದರು.

ಈ ಸಮಾಚಾರವು ಯಾದವರಿಗೆ ತಿಳಿದ ಕೂಡಲೇ ಅವರೆಲ್ಲರೂ ಕ್ರೋಧಾಂಧರಾಗಿ ದುರ್ಯೋಧನನನ್ನು ಕೊಂದು ಬರಬೇಕೆಂದು ಹೊರಟರು. ಕೃಷ್ಣನೂ ಕೌರವರನ್ನು ನಿಗ್ರಹಿಬೇಕೆಂದು ಸಂಕಲ್ಪಿಸಿದನು. ಅದನ್ನು ನೋಡಿ ದುರ್ಯೋಧನನ ಪಕ್ಷಪಾತಿಯಾದ ಬಲರಾಮನು ಸೆರೆಹಿಡಿದು ಕೆಂಪಗಾದ ತನ್ನ ಕಣ್ಣುಗಳನ್ನು ತೆರೆದು ಮಧ 'ದುಂಧಿ'ಯಿಂದ ತೊದಲು ಬದಲಾಗುವ ಶಿಥಿಲ ಶಬ್ದಗಳಲ್ಲಿಯೇ ನುಡಿದನು. ನೀವಾರೂ ಕೌರವನ ಮೇಲೆ ಏರಿ ಹೋಗಬೇಡಿರಿ. ಅವನು ನನ್ನ ಶಿಷ್ಯ. ನಾನು ಹೇಳಿದಂತೆಯೇ ಅವನು ನಡೆಯುತ್ತಾನೆ. ನಾನು ಅವನಿಗೆ ಹೇಳಿ ಸಾಂಬನನ್ನು ಬಿಡಿಸಿಕೊಂಡು ಬರುತ್ತೇನೆ. ನೀವೆಲ್ಲರೂ ಸುಮ್ಮನಿರಿ'' ಎಂದು ಹೇಳಿ ಯಾದವರನ್ನೆಲ್ಲ ಸಾಂತ್ವನಗೊಳಿಸಿ ತಾನು ಹಸ್ತಿನಾವತಿಗೆ ತೆರಳಿದನು. ಅಲ್ಲಿಗೆ ಹೋಗಿ ಅವನು ನಗರದ ಒಳಗೆ ಹೋಗದೆ ಊರ ಹೊರಗೆ ಉದ್ಯಾನದಲ್ಲಿ ಉಳಿದನು. ಬಲರಾಮನು ಬಂದದ್ದನ್ನು ತಿಳಿದು ದುರ್ಯೋಧನ ಮೊದಲಾದವರು ಅಲ್ಲಿಗೆ ಬಂದು ಸ್ವಾಗತ ನೀಡಿ ಅರ್ಘ್ಯಪಾದ್ಯಾದಿಗಳನ್ನು ಇತ್ತು ಸತ್ಕರಿಸಿದರು. ಅವರ ಆದರೋಪಚಾರವನ್ನು ಸ್ವೀಕರಿಸಿ ಬಲರಾಮನು ಅವರಿಗೆ ಹೇಳಿದ -''ನಮ್ಮ ಅರಸರಾದ ಉಗ್ರಸೇನ ಮಹಾರಾಜರು ನೀವು ಬಂಧಿಸಿದ ಕೃಷ್ಣಕುಮಾರ ಸಾಂಬನನ್ನು ಬಿಟ್ಟು ಬಿಡಬೇಕೆಂದು ನಿಮಗೆ ಅಪ್ಪಣೆ ಮಾಡಿದ್ದಾರೆ. ಇದು ರಾಜಾಜ್ಞೆ. ಅವನನ್ನು ಕೂಡಲೇ ಬಿಡುಗಡೆ ಮಾಡಿರಿ'' ಅದನ್ನು ಕೇಳಿ ಭೀಷ್ಮ ದ್ರೋಣರು

ಕ್ಷುಬ್ಧರಾದರು. ಕರ್ಣ ದುರ್ಯೋಧನಾದಿಗಳು ಕ್ಷುದ್ಧರಾದರು. ರಾಜ್ಯ ಪದಕ್ಕೆ ಯಾದವರು ಅನರ್ಹರೆಂದು ಭಾವಿಸಿದ ಬಾಲ್ಹೀಕಾದಿಗಳು ಕುಪಿತರಾಗಿ ನುಡಿದರು - ಬಲರಾಮ, ನೀನು ಇದೇನು ಮಾತನಾಡುತ್ತಿರುವೆ ? ಕುರುಕುಲದ ರಾಜರಿಗೆ ಆಜ್ಞೆ ಮಾಡಲಿಕ್ಕೆ ಯಾದವರು ಎಷ್ಟರವರು ! ಯಾದವರು ನಮ್ಮ ಮೇಲೆ ಹುಕುಮು ಮಾಡುವುದಾದರೆ ನಮ್ಮ ಶ್ವೇತಛತ್ರ ಸಿಂಹಾಸನಗಳ ಪ್ರಯೋಜನವೇನು ! ಬಲದೇವ, ಸಾಕು ಮರಳಿ ದ್ವಾರಕಗೆ ಹೋಗು. ನಿಮ್ಮ ಉಗ್ರಸೇನನಾಗಲಿ, ಸ್ವತಃ ನೀನಾಗಲಿ ಹೇಳಿದರೆ ನಾವೇನು ಸಾಂಬನನ್ನು ಬಿಡುವವರಲ್ಲ. ಅನ್ಯಾಯ ಮಾಡಿದ ಅವನನ್ನು ಬಿಗಿದು ಬಂದೀಖಾನೆಯಲ್ಲಿ ಒಗೆದಿದ್ದೇವೆ. ಹಿಂದೆ ನಿಮ್ಮ ಪೂರ್ವಜರಾದ ಕಕುರರೂ ಅಂಧಕರೂ ಕುರುಕುಲದವರಿಗೆ ನಮಸ್ಕಾರ ಮಾಡಿ ಕೈ ಕಟ್ಟಿಕೊಂಡು ನಿಲ್ಲುತ್ತಿದ್ದರು. ನೀವು ಆ ರೀತಿ ನಮಗೆ ನಮಸ್ಕಾರ ಮಾಡುವುದಿಲ್ಲ. ಹೋಗಲಿ. ಆದರೆ ತಿರುಗಿ ನಮ್ಮ ಮೇಲೆಯೇ ಈಗ ಆಜ್ಞೆ ಮಾಡಬಂದಿರುವಿರಲ್ಲ !

ಇದು ನಿಮ್ಮ ತಪ್ಪಲ್ಲ. ನಮ್ಮದೇ ತಪ್ಪು. ನಾವು ಸ್ನೇಹದಿಂದ ನಿಮಗೆ ಸಮಾನಾಸನ ಸಹಪಂಕ್ತಿ ಭೋಜನಗಳನ್ನಿತ್ತು ಗೌರವಿಸಿದೆವು. ನಾವಿತ್ತ ಆ ಗೌರವವೇ ನಿಮ್ಮನ್ನು ಗರ್ವದ ಗೋಪುರಕ್ಕೆ ಏರಿಸಿದೆ. ನಾವು ಪ್ರೀತಿಗೆ ಪ್ರಾಧಾನ್ಯವಿತ್ತೆವು. ರಾಜ ನೀತಿಯನ್ನೂ ಯಾರನ್ನು ಯಾವ ಮಟ್ಟದಲ್ಲಿ ಆದರಿಸಬೇಕಂಬ ಮಾತನ್ನೂ ಮರೆತೆವು. ಅದೇ ಈಗ ನಿಮ್ಮ ಉನ್ಮಾದಕ್ಕೆ ಕಾರಣವಾಗಿದೆ. ಬಲದೇವ ಈಗ ನಾವೆಲ್ಲರೂ ನಿನಗೆ ಕೊಟ್ಟ ಅರ್ಘ್ಯಪಾದ್ಯಾದಿಗಳು ನಿಮ್ಮ ಕುಲಕ್ಕೆ ನಮ್ಮಂಥವರಿಂದ ಕೊಡಲು ಅರ್ಹವಾಗಿಲ್ಲ. ಆದರೆ ನಾವು ನಿಮ್ಮ ಮೇಲಿನ ಪ್ರೀತಿಯಿಂದ ಈ ಆದರ ಸತ್ಕಾರ ಮಾಡಿದ್ದೇವೆ ಹೀಗೆ ಹೇಳಿ ಕೌರವರೆಲ್ಲರೂ ಸಾಂಬನನ್ನು ಏನಾದರೂ ಬಿಡಲಾರೆವು ಎಂದು ನಿರ್ಧರಿಸಿ ಮನೆಗೆ ಮರಳಿದರು.

ಮೊದಲೇ ಮದಿರೆಯ ನಿಶೆಯಲ್ಲಿದ್ದ ಬಲರಾಮನಿಗೆ ಕೌರವರ ತಿರಸ್ಕಾರದ ನುಡಿಗಳಿಂದ ಪಿತ್ತ ಕೆರಳಿತು. ಸಿಟ್ಟಿನಿಂದ ಅವನು ಸಿಡಿದು ನಿಂತು ಕಾಲನ್ನು ಎತ್ತಿ ನೆಲಕ್ಕೆ ಅಪ್ಪಳಿಸಿದನು. ಅವನ ಪಾದಪ್ರಹಾರದಿಂದ ನೆಲವೆಲ್ಲ ನಡುಗಿ ಹೋಯಿತು. ಅವನು ತನ್ನ ತೋಳನ್ನು ತಟ್ಟಿಕೊಂಡನು. ಆ ಆಸ್ಫೋಟನದ ಸದ್ದು ದಶದಿಕ್ಕುಗಳಲ್ಲೆಲ್ಲ ಪ್ರತಿಧ್ವನಿಸಿತು. ಕೋಪದಿಂದ ಅವನು ಕಣ್ಣನ್ನು ಕೆಂಪಗೆ ಮಾಡಿ ಹುಬ್ಬು ಗಂಟು ಹಾಕಿ ಗರ್ಜಿಸಿದನು. - ಓಹ ! ಕ್ಷುಲ್ಲಕರಾದ ಈ ದುರುಳ ಕೌರವರಿಗೆ ಎಂಥ ಸೊಕ್ಕು ! ತಮಗೆ ರಾಜ್ಯಾಧಿಕಾರವು ಶಾಶ್ವತವಂತೆ. ನಮಗೆ ಮಾತ್ರ ತಾತ್ಕಾಲಿಕವಾದುದಂತೆ. ಅದಕ್ಕಾಗಿಯೇ ಅವರು ಉಗ್ರಸೇನನ ಆಜ್ಞೆಯನ್ನು ಉಲ್ಲಂಘಿಸುವರಂತೆ. ಶುದ್ಧ ಮೂರ್ಖರು. ಇಂದು ದೇವತೆಗಳ ಸುಧರ್ಮ ಸಭೆಯ ಮೇಲೆ ಕುಳಿತವನು ಇಂದ್ರನಲ್ಲ. ನಮ್ಮ ಉಗ್ರಸೇನ ಮಹಾರಾಜನೇ ಕುಳಿತಿದ್ದಾನೆ. ಈ ಕೌರವರು ನೂರು ಮನುಷ್ಯರು ಕುಳಿತು ಎಂಜಲಾದ ಸಾದಾ ಸಿಂಹಾಸನದ ಮೇಲೆ ಕುಳಿತೇ ಇಷ್ಟು ಕೊಬ್ಬಿದ್ದಾರೆ. ಇವರ ಅಲ್ಪತೆಗೆ ಧಿಕ್ಕಾರವಿರಲಿ. ಯಾವನ ಮಡದಿಯರೂ ದಾಸಿಯರೂ ಪಾರಿಜಾತ ಹೂ, ಚಿಗುರುಗಳನ್ನು ತಮ್ಮ ತಲೆಯಲ್ಲಿ ಮುಡಿದುಕೊಳ್ಳುವರೋ ಅಂಥ ಉಗ್ರಸೇನನು ಈ ಕೌರವರಿಗೆ ಅಧಿರಾಜನಲ್ಲವೇ ! ಎಲ್ಲ ರಾಜಮಹಾರಾಜರ ಒಡೆಯನಾದ, ಸಾರ್ವಭೌಮನಾದ ಆ ಉಗ್ರಸೇನ ಮಹಾರಾಜನ ಮಾತು ಹಾಗಿರಲಿ. ಅವನ ಸೇವಕನಾದ ನಾನೇ ಇಂದು

ಭೂಮಂಡಲದಲ್ಲಿ ಕೌರವರೇ ಇಲ್ಲ ಎಂದೆನಿಸಿಬಿಡುತ್ತೇನೆ. ಕರ್ಣ, ದ್ರೋಣ, ಭೀಷ್ಮ, ಬಾಲ್ಹೀಕ ಮುಂತಾದವರ ಹುಟ್ಟನ್ನೇ ಅಡಗಿಸಿಬಿಡುತ್ತೇನೆ. ದುರ್ಯೋಧನ, ದುಶ್ಶಾಸನ, ಭೂರಿ-ಭೂರಿಶ್ರವರ ಅಸ್ತಿತ್ವವನ್ನೇ ಅಳಿದು ಹಾಕುತ್ತೇನೆ. ಶಲ್ಯ, ಸೋಮದತ್ತ ಪಂಚಪಾಂಡವರು ಮುಂತಾದ ಸರ್ವಕುಲವನ್ನೇ ಧ್ವಂಸ ಗೈಯುತ್ತೇನೆ. ಅವರ ಚತುರಂಗ ಸೈನ್ಯವನ್ನೆಲ್ಲ ನಾಶಮಾಡಿ ಕೃಷ್ಣಕುಮಾರ ಸಾಂಬನನ್ನು ಬಿಡಿಸಿಕೊಂಡು, ಸೊಸೆಯೊಂದಿಗೆ ದ್ವಾರಕೆಗೆ ಹೋಗುತ್ತೇನೆ. ಅಥವಾ ಇವರನ್ನೆಲ್ಲ ಯುದ್ಧ ಮಾಡಿ ಕೊಂದು ಬರುವವರೆಗೆ ದ್ವಾರಕೆಯ ಜನರು ಕಾತರರಾಗಿ ಕಾಯುವದೇ ಬೇಡ. ಇಡೀ ಕೌರವ ಕುಲಸಹಿತವಾದ ಈ ಹಸ್ತಿನಾವತಿ ಪಟ್ಟಣವನ್ನೇ ಈ ನನ್ನ ನೇಗಿಲದಿಂದ ಜಗ್ಗಿ ಎಳೆದು ಗಂಗೆಯಲ್ಲಿ ಹಾಕಿ ಮುಳುಗಿಸಿ, ನವದಂಪತಿಗಳಾದ ಸಾಂಬ ಲಕ್ಷಣೆಯರನ್ನು ಕರೆದೊಯ್ದು ಉಗ್ರಸೇನ ಮೊದಲಾದ ಯಾದವರನ್ನು ಸಂತೋಷಗೊಳಿಸುವೆನು'' ಹೀಗೆ ನುಡಿದು ಮದದಿಂದ ಆರಕ್ತವಾದ ನೇತ್ರವುಳ್ಳ ಬಲರಾಮನು ತನ್ನ ನೇಗಿಲನ್ನೆತ್ತಿ ಕೋಟೆ ಕೊತ್ತಲಗಳುಳ್ಳ ಹಸ್ತಿನಾವತಿ ಪಟ್ಟಣದ ಬುಡಕ್ಕೆ ಹಾಕಿ ಜಗ್ಗಿದನು. ಇದರಿಂದ ಇಡೀ ಹಸ್ತಿನಾವತೀ ಪಟ್ಟಣವೆಲ್ಲವೂ ಭೂಕಂಪವಾದಂತೆ ಹೊಯ್ದಾಡಿ ಒಂದೆಡೆವಾಲಿತು. ಊರ ಜನರೆಲ್ಲರೂ ಕುಳಿತಲ್ಲಿಯೇ ಹೊರಳಿ ಭಯ ಭ್ರಾಂತರಾಗಿ ಕಂಗೆಟ್ಟು ಎಲ್ಲ ಪೌರರೂ ಕೌರವರೂ ಓಡುತ್ತ ಊರ ಹೊರಗೆ ಬಲರಾಮನಿದ್ದ ಉಪವನಕ್ಕೆ ಧಾವಿಸಿದರು. ಎಲ್ಲರೂ ಅವನಿಗೆ ಕೈ ಮುಗಿದು.

ರಾಮ ರಾಮ ಮಹಾ ಬಾಹೋ ।
ಕ್ಷಮ್ಯತಾಂ ಕ್ಷಮ್ಯತಾಂ ತ್ವಯಾ ॥
ಉಪಸಂಹ್ರಿಯತಾಂ ಕೋಪಃ ।
ಪ್ರಸೀದ ಮುಸಲಾಯುಧ ॥

''ಬಲರಾಮ, ಮಹಾಬಲಿಷ್ಠನಾದ, ರಾಮ, ರಾಮ, ರಾಮ ಕ್ಷಮಿಸು ಕ್ಷಮಿಸು, ನಿನ್ನ ಕೋಪವನ್ನು ತಡೆ. ನಮ್ಮನ್ನು ಕ್ಷಮಿಸು. ಇಕೋ ಈ ನಿನ್ನ ಮಗನಾದ ಸಾಂಬನನ್ನಿಟ್ಟಿದ್ದೇವೆ. ಅವನು ಪ್ರೀತಿಸಿದ ನಮ್ಮ ಈ ಕೌರವ ರಾಜಕುಮಾರಿ ಲಕ್ಷಣೆಯನ್ನು ಅವನಿಗೆ ಕೊಟ್ಟಿದ್ದೇವೆ. ಆ ಇಬ್ಬರೂ ವಧೂವರರನ್ನು ಸೆರಮನೆಯಿಂದ ಬಿಟ್ಟಿದ್ದೇವೆ. ನಿನ್ನ ಶೌರ್ಯ ಪ್ರಭಾವಗಳನ್ನು ತಿಳಿಯದೆ ನಾವು ನಿನಗೆ ಬಿರುನುಡಿಗಳನ್ನಾಡಿದ್ದು ತಪ್ಪಾಯಿತು. ಕ್ಷಮಿಸಿಬಿಡು' ಎಂದು ಬೇಡಿಕೊಂಡರು.

ಹೀಗೆ ಹಸ್ತಿನಾವತಿಯಿಂದ ಗಡಬಿಡಿಸಿ ಭೀಷ್ಮ, ದ್ರೋಣ, ಕೃಪಾಚಾರ್ಯರನ್ನು ಮುಂದೆ ಮಾಡಿಕೊಂಡು ಕೌರವರೆಲ್ಲರೂ ಬಂದು ಬಲರಾಮನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಮತ್ತು ಸಾಂಬನನ್ನೂ ಅವನ ನವ-ವಧುವನ್ನೂ ಅವನ ಬಳಿಗೆ ತಂದು ಕಳಿಸಿದರು. ಮತ್ತೆ ಭೀಷ್ಮ ದ್ರೋಣರಂಥ ಹಿರಿಯರು ಪ್ರಣಾಮಗೈಯಲು ಬಲರಾಮನು ಅವರ ಮಾತನ್ನು ಮನ್ನಿಸಿ ನಾನು ಕ್ಷಮಿಸಿದ್ದೇನೆಂದು ಹೇಳಿದನು. ಅನಂತರ ಕೌರವರೆಲ್ಲರೂ ಬಲರಾಮನನ್ನು ಪೂಜಿಸಿ ವರದಕ್ಷಿಣೆ, ವರೋಪಚಾರದ ವಿಪುಲ ಧನಕನಕಗಳಿಂದ ಸಹಿತವಾಗಿ ತಮ್ಮ ಕನ್ಯೆಯನ್ನು ಸಾಂಬನಿಗೆ ಇತ್ತು ಸಂಭ್ರಮದಿಂದ ಬೀಳ್ಕೊಟ್ಟರು.

*ಶ್ರೀ ವಿಷ್ಣುಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತೈದನೇ ಅಧ್ಯಾಯ ಸಂಪೂರ್ಣ*

—o—

## ಅಧ್ಯಾಯ - ೩೬

**ದ್ವಿವಿದನೆಂಬ ದೈತ್ಯ ಕಪಿಯು ಜನರನೆಲ್ಲ ಕಾಡಿದ**
**ರಾಮ ಮಡದಿಯೊಡನೆ ವನದಿ ವಿಹರಿಸುವದು ನೋಡಿದ**
**ಅವನ ಅಸ್ತ್ರ ಒನಿಕೆಯು ನೇಗಿಲ್ಹಿಡಿದು ಅಣಕವಾಡಿದ**
**ಬಲನು ಕೋತಿಯೊಡನೆ ಹೋರಿ ಅದರ ವಧವ ಮಾಡಿದ**

ದೇವದ್ರೋಹಿಯಾದ ನರಕಾಸುರನಿಗೆ 'ದ್ವಿವಿದ' ಎಂಬ ವಾನರ ಪುಂಗವನು ಗೆಳೆಯನಾಗಿದ್ದನು. ಅವನು ದೇವತೆಗಳನ್ನು ಮನಸ್ಸಿನಿಂದ ದ್ವೇಷಿಸುತ್ತಿದ್ದನು. ''ದೇವರಾಜನಾದ ಇಂದ್ರನ ಪ್ರೇರಣೆಯಿಂದ ಕೃಷ್ಣನು ನರಕಾಸುರನನ್ನು ಕೊಂದಿದ್ದಾನೆ. ಇದರ ಸೇಡನ್ನು ನಾನು ಎಲ್ಲ ದೇವತೆಗಳ ಮೇಲೆ, ತೀರಿಸಿಕೊಳ್ಳುತ್ತೇನೆ'' ಎಂದು ನಿಶ್ಚಯಿಸಿ ಯಜ್ಞಗಳನ್ನೆಲ್ಲ ಧ್ವಂಸ ಮಾಡಿದನು. ಭೂಲೋಕಕ್ಕೆ ಮೃತ್ಯುವಾಗಿ ಪರಿಣಮಿಸಿದನು. ಸಾಧು-ಸಜ್ಜನರನ್ನು ವಿಚಿತ್ರ ಹಿಂಸೆಗೆ ಗುರಿಪಡಿಸಿದನು. ಮಾನವರನ್ನು ಸಂಹಾರ ಮಾಡಿದನು. ಹಳ್ಳಿ ಪಟ್ಟಣಗಳನ್ನು ಸುಟ್ಟನು. ಗುಡ್ಡಗಳನ್ನು ಕಡಿದು ಬಗೆದು ಗ್ರಾಮಗಳನ್ನೆಲ್ಲ ನೆಲಸಮ ಮಾಡಿದನು. ಪರ್ವತಗಳನ್ನು ಕಿತ್ತಿ ಸಮುದ್ರದಲ್ಲಿ ಒಗೆಯುತ್ತಿದ್ದನು. ಅದರಿಂದ ಸಾಗರದ ನೀರೆಲ್ಲವೂ ಉಕ್ಕೇರಿ, ಮೇರೆ ಮೀರಿ ದೇಶಗಳ ಒಳಸೇರಿ ಎಷ್ಟೋ ಊರುಗಳೂ, ಜನರೂ, ದನ ಕರುಗಳೂ ನೀರಿನಲ್ಲಿ ಮುಳುಗಿ ಸಾಯುತ್ತಿದ್ದವು. ಹೊಲಗಳಲ್ಲಿ ಬೆಳೆದು ನಿಂತಿರುವ ಪೈರುಗಳನ್ನೆಲ್ಲ ಬಗೆ ಬಗೆಯ ಪ್ರಾಣಿ ರೂಪದಿಂದ ಬಂದು ಹಾಳು ಮಾಡುತ್ತಿದ್ದನು. ಈ ದುರುಳ ಕಪಿಯ ಉಪಟಳದಿಂದ ಭೂಮಂಡಲದಲ್ಲಿ ಯಜ್ಞಗಳು ಎಲ್ಲಿಯೂ ನಡೆಯದಂತಾದವು. ಒಂದು ದಿನ ರೈವತ ಪರ್ವತದಲ್ಲಿ ಬಲರಾಮನು ತನ್ನ ಮಡದಿಯಾದ ರೇವತಿ ಮುಂತಾದ ಸ್ತ್ರೀಯರಿಂದೊಡಗೂಡಿ ಸುರಾಪಾನವನ್ನು ಮಾಡಿ ವಿಹರಿಸುತ್ತಿದ್ದನು. ಅವನ ಸುತ್ತಲೂ ಲಲನಾಮಣಿಗಳು ಮಧುರ ಕಂಠದಿಂದ ಗೀತಗಳನ್ನು ಹಾಡುತ್ತಿದ್ದರು. ಕುಬೇರನು ಮಂದರ ಪರ್ವತದಲ್ಲಿ ವಿಹರಿಸುವಂತೆ ಯದುಕುಲ ಶ್ರೇಷ್ಠನಾದ ಬಲರಾಮನು ವಿಲಾಸಿನಿಯರಿಂದೊಡಗೂಡಿ ಲೀಲಾಲೋಲನಾಗಿದ್ದನು. ಆಗ ದೈತ್ಯವಾನರನಾದ ದ್ವಿವಿದನು ಅಲ್ಲಿಗೆ ಬಂದು ಬಲರಾಮನ ಒನಿಕೆ ಮತ್ತು ನೇಗಿಲಗಳನ್ನು ಹಿಡಿದು ಅವನನ್ನು ಅಣಕಿಸಿದನು. ಮತ್ತು ಆ ಹೆಣ್ಣು ಮಕ್ಕಳ ಮುಂದೆ ಹಲ್ಲು ಕಿರಿದನು. ಹಾಗೂ ಮದ್ಯವನ್ನು ತುಂಬಿಟ್ಟ ಪಾನ ಪಾತ್ರಗಳನ್ನು ಒಡೆದು ಹಾಕಿದನು. ಆಗ ಕುಪಿತನಾದ ಬಲರಾಮನು ಆ ಕೋತಿಯನ್ನು ಬೈದು ಬೆದರಿಸಿದನು. ಆದರೂ ಆ ಕಪಿರಾಕ್ಷಸನು ಬಲರಾಮನನ್ನು ತಿರಸ್ಕರಿಸಿ ಕಿಲ ಕಿಲ ಶಬ್ದವನ್ನು ಮಾಡಿದನು.

ಅವನ ಈ ಮಂಗಾಟವನ್ನು ನೋಡಿ ಬಲರಾಮನಿಗೆ ನಗೆಯೂ ಸಿಟ್ಟೂ ಬಂದಿತು. ಆ ವಾನರನನ್ನು ಹೊಡೆಯಲಿಕ್ಕಾಗಿ ತನ್ನ ಒನಕೆಯನ್ನು ಎತ್ತಿದನು. ಆಗ ಆ ಕಪಿಯು ದೊಡ್ಡದಾದ ಒಂದು ಗುಡ್ಡದ ಕೋಡುಗಲ್ಲನ್ನೆತ್ತಿ ಬಲರಾಮನ ಮೇಲೆ ಬೀಸಿತು.

ಬಲರಾಮನು ತನ್ನ ವನಿಕೆಯಿಂದ ಅದನ್ನು ಸಾವಿರ ಹೋಳು ಮಾಡಿ ಬೀಳಿಸಿದನು. ಅನಂತರ ಆ ವಾನರನು ಬಲರಾಮನ ಒನಿಕೆಯಿಂದ ತಪ್ಪಿಸಿಕೊಂಡು ವೇಗದಿಂದ ಅವನ ಎದೆಗೆ ಬಂದು ಅಂಗೈಯಿಂದ ಹೊಡೆದನು. ಆಗ ಬಲರಾಮನು ಸಿಟ್ಟಿಗೆದ್ದು ಮುಷ್ಟಿಯಿಂದ ಆ ಕೋತಿಯ ನಡುನೆತ್ತಿಯಮೇಲೆ ಒಂದು ಪೆಟ್ಟನ್ನಿಟ್ಟನು. ಅದರಿಂದ ಆ ದುಷ್ಟ ದೈತ್ಯನು ನೆತ್ತರಕಾರಿ ಪ್ರಾಣಹೋಗಿ ನೆಲದಮೇಲೆ ಉರುಳಿ ಬಿದ್ದನು. ಅವನ ದೈತ್ಯದೇಹಪಾತದಿಂದ ಪರ್ವತದ ಶಿಖರವು ದೇವೇಂದ್ರನ ವಜ್ರಾಯುಧದ ಹೊಡೆತವನ್ನು ತಿಂದಂತೆ ನೂರು ಹೋಳಾಗಿ ಸೀಳಿಹೋಯಿತು. ಆಗ ದೇವತೆಗಳು ಬಲರಾಮನ ಮೇಲೆ ಹೂಗಳ ಮಳೆಯನ್ನೇ ಕರೆದರು. ''ರಾಮ, ನೀನು ಬಹಳ ಒಳ್ಳೆಯ ಕೆಲಸ ಮಾಡಿದೆ. ದೈತ್ಯ ಪಕ್ಷಪಾತಿಯಾದ ಈ ದೈತ್ಯನನ್ನು ಕೊಂದು ನೀನು ಜಗತ್ತಿಗೆ ಒಂದು ಉಪಕಾರ ಗೈದಿರುವೆ '' ಎಂದು ಬಲರಾಮನನ್ನು ಪ್ರಶಂಸಿಸಿ ದೇವತೆಗಳು ಆನಂದದಿಂದ ಸ್ವರ್ಗಕ್ಕೆ ತೆರಳಿದರು. ಹೀಗೆ ಭೂಮಂಡಲವನ್ನು ಹೊತ್ತ ಆದಿಶೇಷನ ಅಂಶಭೂತನಾದ ಬಲರಾಮನ ಕಾರ್ಯಗಳು ಅದ್ಭುತವಾಗಿವೆ; ಅಸಂಖ್ಯವಾಗಿವೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತಾರನೆಯ ಅಧ್ಯಾಯ ಸಂಪೂರ್ಣ*



## ಅಧ್ಯಾಯ - ೩೭

### ಋಷಿಗಳ ಶಾಪ. ಯದುವಂಶ ವಿನಾಶ. ಕೃಷ್ಣ ಪರಂಧಾಮ ಪ್ರಯಾಣ

**ಯದುಗಳು 'ಗರ್ಭಿಣಿ ವೇಷದ ಸಾಂಬನು ಹಡೆಯುವದೇನು ?' ಕೇಳಿದರು**
**ಕೆರಳಿದ ಮುನಿಗಳು 'ನಿಮ್ಮನ್ನು ಕೊಲ್ಲುವ ಒನಕೆಯನೆಂ'ದು ಹೇಳಿದರು**
**ಯಾದವರೆಲ್ಲರು ಪ್ರಭಾಸತೀರ್ಥದಿ ಕುಡಿದರು ಕಲಹದಿ ತಾಗಿದರು.**
**ಹರಿಸಂಕಲ್ಪದಿ ಒಬ್ಬರಿಗೊಬ್ಬರು ಹಣೆಯುತ ಪ್ರಾಣವ ನೀಗಿದರು.**

ಈ ರೀತಿಯಾಗಿ ಕೃಷ್ಣನು ಅಣ್ಣ ಬಲರಾಮನಿಂದೊಡಗೂಡಿ ದುಷ್ಟ ದೈತ್ಯರನ್ನೆಲ್ಲ ಕೊಂದು ಹಾಕಿದನು. ಭೂಭಾರವನ್ನು ಹಗುರಗೊಳಿಸಲಿಕ್ಕಾಗಿ ಅರ್ಜುನ ಮೊದಲಾದ ಪಾಂಡವರಿಂದ ಒಡಗೂಡಿ ಹದಿನೆಂಟು ಅಕ್ಷೋಹಿಣೀ ಸೈನ್ಯವನ್ನು ಕುರುಕ್ಷೇತ್ರದ ಯುದ್ಧದ ನೆವದಿಂದ ಅಳಿದು ಹಾಕಿದನು. ರಾಜಮಹಾರಾಜರೆಲ್ಲರೂ ಸಂಹರಿಸಲ್ಪಟ್ಟರು. ಅನಂತರ ಬ್ರಾಹ್ಮಣ ಶಾಪದ ನೆವದಿಂದ ಯಾದವ ಕುಲಕ್ಕೂ ಕ್ಷಯವನ್ನು ತಂದು ತಾನೂ ಕೂಡ ದ್ವಾರಕೆಯನ್ನು ತೊರೆದು ಮನುಷ್ಯ ದೇಹವನ್ನು ಬಿಟ್ಟು ಪರಂಧಾಮಕ್ಕೆ ನಡೆದನು.

**ಮೈತ್ರೇಯ** - ವಿಪ್ರನ ಶಾಪದ ನೆವದಿಂದ ಕೃಷ್ಣನು ತನ್ನ ನಿಜದೇಹದಂತೆ ಇದ್ದ ಯಾದವರ ಕುಲವನ್ನು ಸಂಹರಿಸಿದ್ದು ಹೇಗೆ! ಮತ್ತು ಕಾಣುವ ಮಾನವೀಯ ದೇಹವನ್ನು ಬಿಟ್ಟದ್ದು ಹೇಗೆ'!

**ಪರಾಶರ** - ದೊಡ್ಡ ಕ್ಷೇತ್ರವಾದ ಪಿಂಡಾರಕದಲ್ಲಿ ಒಮ್ಮೆ ವಿಶ್ವಾಮಿತ್ರ, ಕಣ್ವ, ನಾರದ ಮಹಾಮುನಿಗಳು ಕೂಡಿದ್ದರು. ಮದೋನ್ಮತ್ತರಾದ ಯಾದವ ತರುಣರು ಆ ಮುನಿಗಳನ್ನು ನೋಡಿ ಏನಾದರೂ ಕುಚೋದ್ಯ ಮಾಡುವ ವಿಚಾರದಿಂದ ಸಾಂಬನಿಗೆ ಸೀರೆ ಉಡಿಸಿದರು. ಸುಂದರವಾದ ಗರ್ಭಿಣೀ ಸ್ತ್ರೀಯರ ವೇಷವನ್ನು ಹಾಕಿ ಮುನಿಗಳ ಎದುರು ವೈಯ್ದು ನಿಲ್ಲಿಸಿ ನಮಸ್ಕಾರ ಮಾಡಿ ಕೇಳಿದರು ? ''ಪೂಜ್ಯರೇ, ಈ ಹೆಣ್ಣು ಮಗಳಿಗೆ ಗಂಡು ಮಗು ಬೇಕಾಗಿದೆ. ಇವಳು ನಿಜವಾಗಿ ಏನು ಹಡೆಯುವಳು ! ದಯವಿಟ್ಟು ತಾವು ತಿಳಿಸಬೇಕು'' ಎಂದು. ಆ ಮುನಿಗಳೇನು ಸಾಮಾನ್ಯರೇ ! ಎಲ್ಲರೂ ದಿವ್ಯ ದೃಷ್ಟಿಯುಳ್ಳ ದಿವ್ಯಜ್ಞಾನಿಗಳು. ಈ ಹುಡುಗರು ತಮ್ಮನ್ನು ಮೋಸ ಮಾಡಲು ಉಪಹಾಸಗೈಯುತ್ತಿದ್ದಾರೆ ಎಂದು ಅವರಿಗೆ ಗೊತ್ತಾಯಿತು. ಅವರಿಗೆ ಸಿಟ್ಟು ಬಂದು ಹೇಳಿದರು. ''ಇವಳು ಎಲ್ಲ ಯಾದವರ ವಿನಾಶಕ್ಕೆ ಕಾರಣವಾದ ಒನಕೆಯನ್ನು ಹಡೆಯುತ್ತಾಳೆ. ಇದರಿಂದ ನಿಮ್ಮ ಯಾದವ ವಂಶವೆಲ್ಲ ವಿಧ್ವಂಸವಾಗಿ ಹೋಗುತ್ತದೆ. ಇದನ್ನು ಕೇಳಿ ಹೆದರಿ ಹೋದ ಆ ಯದು ತರುಣರು ಆ ಸಮಾಚಾರವನ್ನೆಲ್ಲ ಬಂದು ತಮ್ಮ ದೊರೆಯಾದ ಉಗ್ರಸೇನ ಮಹಾರಾಜನಿಗೆ ತಿಳಿಸಿದರು. ಮತ್ತು ಮುನಿಗಳ ಶಾಪಾಕ್ಷರದಂತೆ ಸಾಂಬನು ಒಂದು ಒನಕೆಯನ್ನು ಹಡೆದನು. ಉಗ್ರಸೇನನು ಆ ಉಕ್ಕಿನ ಒನಕೆಯನ್ನು ಕಡಿದು ತಿಕ್ಕಿ ತೇದು ಚೂರು ಚೂರು ಮಾಡಿ ಸಮುದ್ರದಲ್ಲಿ ಚೆಲ್ಲಿಸಿ ಬಿಟ್ಟನು. ಚೂರು ಚೂರು ಮಾಡಿದ ಆ ವನಿಕೆಯ ಅವಶೇಷವನ್ನು ಎಷ್ಟು ತೇಯ್ದು ತಿಕ್ಕಿ ಎಷ್ಟು ಚಿಕ್ಕದು ಮಾಡಿದರೂ ಕೊನೆಗೊಂದು ಉಕ್ಕಿನ ಚೂಪಾದ ತುಣುಕು ಚೂರಾಗದೆ ಉಳಿಯಿತು. ಅದನ್ನೂ ಕೂಡ ಯಾದವರು ಎತ್ತಿ ಸಮುದ್ರದಲ್ಲಿ ಎಸೆದುಬಿಟ್ಟರು. ಸಮುದ್ರದಲ್ಲಿ ಬಿದ್ದ ಆ ಉಕ್ಕಿನ ತುಣಕನ್ನು ಒಂದು ಮೀನು ನುಂಗಿತು. ಆ ಮೀನನ್ನು

ಮೀನುಗಾರರು ಜಾಲಹಾಕಿ ಹಿಡಿದು ಮನೆಗೊಯ್ದು ಹೆಚ್ಚಿದಾಗ ಅದರ ಹೊಟ್ಟೆಯಲ್ಲಿ ಲೋಹ ಖಂಡವು ಇದ್ದುದು ಕಾಣಿಸಿತು. ಅದನ್ನು ಜರಾ ಎಂಬ ಬೇಡನು ತೆಗೆದುಕೊಂಡನು. ಭಗವಾನ್ ಶ್ರೀ ಕೃಷ್ಣನಿಗೂ ಇದೆಲ್ಲವೂ ಮೊದಲೇ ತಿಳಿದಿದ್ದರೂ ಕೂಡ ತನ್ನ ವಿಧಿ ಸಂಕಲ್ಪವನ್ನು ಅವನು ಬದಲಿಸಲು ಇಚ್ಛಿಸಲಿಲ್ಲ. ದೇವತೆಗಳು ಶ್ರೀ ಕೃಷ್ಣನ ಬಳಿಗೆ ವಾಯು ದೇವರನ್ನು ಕೊಟ್ಟು ಕಳಿಸಿದರು. ವಾಯು ಬಂದು ಭಗವಂತನಿಗೆ ನಮಸ್ಕಾರ ಮಾಡಿ ಪ್ರಾರ್ಥನೆಯನ್ನು ಮಾಡಿಕೊಂಡನು.

''ಪ್ರಭು, ಎಲ್ಲ ದೇವಾಧಿ ದೇವತೆಗಳಿಂದೊಡಗೂಡಿದ ದೇವೇಂದ್ರನು ನಿಮ್ಮನ್ನು ಈ ರೀತಿಯಾಗಿ ಬಿನ್ನವಿಸುತ್ತಾನೆ. ''ಭೂಭಾರವನ್ನು ಹರಣ ಮಾಡಲಿಕ್ಕಾಗಿ ದೇವತೆಗಳ ಪ್ರಾರ್ಥನೆಯಂತೆ ನೀನು ಭೂಲೋಕದಲ್ಲಿ ಅವತಾರ ಮಾಡಿ ನೂರು ವರ್ಷಗಳು ಆಗಿ ಹೋದವು. ದುಷ್ಟ ದೈತ್ಯರನ್ನು ನೀನು ಸಂಹರಿಸಿರುವೆ. ಭೂಮಿಯ ಭಾರವು ಹಗುರಗೊಳಿಸಲ್ಪಟ್ಟಿದೆ. ಇನ್ನು ಮೇಲೆ ನೀನು ಸ್ವರ್ಗಕ್ಕೆ ಬರಬೇಕು. ದೇವತೆಗಳನ್ನು ಸನಾಥರನ್ನಾಗಿ ಮಾಡು. ನಿನಗೆ ಇಚ್ಛೆ ಇದ್ದರೆ ನೀನು ಬೇಕಾದಷ್ಟು ದಿನ ಭೂಮಿಯಲ್ಲಿಯೇ ಇರಬಹುದು. ಆದರೆ ನಿನ್ನ ಸೇವಕನಾದ ನಾನು ಕರ್ತವ್ಯವೆಂದು ನಿನ್ನ ಅವತಾರ ಕಾರ್ಯದ ಸಮಾಪ್ತಿಯನ್ನು ತಿಳಿಸಿದ್ದೇನೆ. ನಿನ್ನ ಮನಸ್ಸಿಗೆ ಬಂದಂತೆ ಮಾಡಬಹುದು.''

ದೂತನ ಈ ಮಾತನ್ನು ಕೇಳಿ ಭಗವಂತ ನುಡಿದ - ''ವಾಯೋ! ನೀನು ಹೇಳಿದ್ದು ನಿಜವಿದೆ. ಅವತಾರ ಕಾರ್ಯವು ಸಮಾಪ್ತವಾದುದನ್ನು ನಾನೂ ಬಲ್ಲೆ. ಅದಕ್ಕಾಗಿಯೇ ಈಗ ಯಾದವ ಕುಲಸಂಹಾರದ ಕಾರ್ಯವನ್ನು ಪ್ರಾರಂಭಮಾಡಿರುತ್ತೇನೆ. ಯಾದವರೆಲ್ಲ ನಾಶವಾಗುವವರೆಗೆ ಭೂಭಾರ ಹರಣರೂಪಕಾರ್ಯವು ಪೂರ್ತಿಗೊಳ್ಳಲಾರದು. ಇನ್ನು ಏಳುದಿನಗಳಲ್ಲಿ ಯಾದವರನ್ನು ನಾಶಮಾಡಿ ಈ ಅವತಾರ ಕಾರ್ಯವನ್ನು ಮುಗಿಸುತ್ತೇನೆ. ಸಾಗರದಿಂದ ಬೇಡಿ ಸ್ಥಳ ಪಡೆದು ಕಟ್ಟಿದ ದ್ವಾರಕಾ ಪಟ್ಟಣವನ್ನು ಸಮುದ್ರಕ್ಕೆ ಒಪ್ಪಿಸಿ ಮುಳುಗಿಸಿ ಬಿಡುತ್ತೇನೆ. ಯಾದವ ಕುಲ ಕ್ಷಯವನ್ನು ಮಾಡಿ ನಾನೂ ನನ್ನ ಅಣ್ಣ ಬಲರಾಮನೂ ಮನುಷ್ಯ ದೇಹವನ್ನು ಪರಿತ್ಯಜಿಸಿ ಸ್ವರ್ಗಕ್ಕೆ ಬರುತ್ತೇವೆ. ನಾನೀಗ ಕೊಂದ ಜರಾಸಂಧಾದಿಗಳ ಪ್ರಚಂಡ ಸೇನೆಗೆ ಯಾದವ ಸೇನೆ ಕಡಿಮೆಯೇನಿಲ್ಲ. ಇವರನ್ನು ಸಂಹಾರ ಮಾಡಬಲ್ಲ ಬಲಿಷ್ಠರು ಭೂಮಿಯಲ್ಲಿ ಯಾರೂ ಇಲ್ಲ. ಆದುದರಿಂದ ವಿಪ್ರಶಾಪದಿಂದ ಪರಸ್ಪರ ಕಲಹವನ್ನು ಹುಟ್ಟಿಸಿ ಇವರೆಲ್ಲರನ್ನು ಅಳಿದು ನಾನು ಸ್ವರ್ಗ ರಕ್ಷಣೆಗಾಗಿ ಬಂದೆ ಎಂದು ಇಂದ್ರಾದಿ ದೇವತೆಗಳಿಗೆ ತಿಳಿಸು''. ಪರಮಾತ್ಮನ ಈ ನುಡಿಯನ್ನು ಆಲಿಸಿ ದೇವತಾ ಸಂದೇಶವನ್ನು ತಂದ ವಾಯು ದೇವಲೋಕಕ್ಕೆ ತೆರಳಿದನು. ಕೂಡಲೇ ದ್ವಾರಕೆಯಲ್ಲಿ ಉತ್ಪಾತ ಅಪಶಕುನಗಳು ಆಗಿ ತೋರತೊಡಗಿದವು. ಅವುಗಳನ್ನು ನೋಡಿ ಕೃಷ್ಣ ಪರಮಾತ್ಮನು ಇವೆಲ್ಲ ದ್ವಾರಕೆಯ ಸರ್ವನಾಶ ಸೂಚಕವಾದ ಅನಿಷ್ಟಗಳು ಎಂದು ತಿಳಿದು ಯಾದವರನ್ನು ಕರೆದು ತೋರಿಸಿ ಹೇಳಿದನು - ''ನೋಡಿದಿರಾ ಈ ಅಪಶಕುನಗಳನ್ನು ! ಭಯಂಕರವಾದ ಉತ್ಪಾತಗಳು ಕಂಡು ಬರತೊಡಗಿವೆ. ಇವುಗಳ ಶಾಂತಿ ಮಾಡಲಿಕ್ಕಾಗಿ ನಾವೆಲ್ಲರೂ ಪ್ರಭಾಸ ಕ್ಷೇತ್ರಕ್ಕೆ ಹೋಗೋಣ ನಡೆಯಿರಿ.''ಶ್ರೀ ಕೃಷ್ಣ ಪರಮಾತ್ಮನ ಈ ಮಾತನ್ನು ಕೇಳಿ ಯಾದವ ಶ್ರೇಷ್ಠನಾದ ಉದ್ಧವನು ಭಗವಂತನ ಬಳಿಗೆ ಬಂದು ನಮಸ್ಕರಿಸಿ ಬಿನ್ನವಿಸಿದನು. ''ಭಗವನ್, ಈ ಅನಿಷ್ಟ ಅಪಶಕುನಗಳನ್ನು ನೋಡಿದರೆ ಇಡೀ ಯಾದವ ಕುಲವನ್ನೆಲ್ಲ

ನೀನು ಉಪಸಂಹರಿಸುವ ಲಕ್ಷಣ ಕಾಣುತ್ತದೆ. ಈ ದುರ್ನಿಮಿತ್ತಗಳೆಲ್ಲವೂ ಯದುಕುಲದ ನಾಶವನ್ನೇ ಸೂಚಿಸುತ್ತವೆಯೆಂದು ತೋರುತ್ತಲಿದೆ. ಆದುದರಿಂದ ನಾನೇನು ಮಾಡಬೇಕು ? ನನ್ನಿಂದೇನಾದರೂ ನಿನ್ನ ಸೇವೆಯಾಗಬೇಕಿದ್ದರೆ ದಯವಿಟ್ಟು ತಿಳಿಸು'' ಎಂದು ಬೇಡಿಕೊಂಡನು.

ಅದನ್ನು ಕೇಳಿ ಭಕ್ತನಾದ ಉದ್ಧವನ ಮೇಲೆ ಪರಮಾನುಗ್ರಹಮಾಡಿ ನುಡಿದ **ಶ್ರೀ ಕೃಷ್ಣ** - ಉದ್ಧವ, ನೀನು ನನ್ನ ಪ್ರಸಾದದಿಂದ ದಿವ್ಯಗತಿಯಿಂದ ಬದರಿಕಾಶ್ರಮಕ್ಕೆ ಪ್ರಯಾಣ ಮಾಡು. ಗಂಧಮಾದನ ಪರ್ವತದಲ್ಲಿರುವ ನರನಾರಾಯಣರ ಆಶ್ರಮವು ಪರಮ ಪವಿತ್ರವಾದ ಕ್ಷೇತ್ರವಾಗಿದೆ. ನೀನು ಅಲ್ಲಿ ನಿಂತು ತಪಸ್ಸನ್ನಾಚರಿಸು. ನನ್ನ ಪ್ರಸಾದದಿಂದ ನಿನಗೆ ಅಲ್ಲಿ ತಪಃ ಸಿದ್ಧಿಯಾಗುವುದು. ಈ ಯಾದವ ಕುಲವನ್ನೆಲ್ಲ ಉಪಸಂಹರಿಸಿ ನಾನು ಸ್ವರ್ಗಕ್ಕೆ ತೆರಳುತ್ತೇನೆ. ಈ ದ್ವಾರಕೆಯನ್ನೆಲ್ಲ ಸಮುದ್ರರಾಜನು ತೋಯಿಸಿಬಿಡುವನು. ಆದರೆ ನನ್ನ ಹೆದರಿಕೆಯಿಂದ ಸಮುದ್ರರಾಜನು ನನ್ನ ಮನೆಯೊಂದನ್ನು ಮಾತ್ರ ಮುಳುಗಿಸದೆ ಬಿಡುವನು. ನಾನು ಪರಂಧಾಮಕ್ಕೆ ಹೋದ ಬಳಿಕವೂ ನೀರಿನ ನಡುವಿರುವ ಆ ನನ್ನ ಮನೆಯಲ್ಲಿ ನಾನು ಒಂದು ರೂಪದಿಂದ ಇದ್ದು ಭಕ್ತರನ್ನು ಉದ್ಧರಿಸುತ್ತೇನೆ. ಭಗವಂತನ ಈ ನುಡಿಯನ್ನು ಆಲಿಸಿ ಉದ್ಧವನು ಶ್ರೀ ಕೃಷ್ಣ ಚಂದ್ರನಿಗೆ ವಂದನೆ ಗೈದು ಗಂಧಮಾದನ ಪರ್ವತದಲ್ಲಿರುವ ನರನಾರಾಯಣಾಶ್ರಮಕ್ಕೆ ತೆರಳಿದನು. ಇತ್ತ ಯಾದವರೆಲ್ಲರೂ ಶೀಘ್ರಗಾಮಿಗಳಾದ ರಥಗಳನ್ನು ಆರೋಹಣ ಮಾಡಿಕೊಂಡು ಕೃಷ್ಣ ರಾಮ ಸಹಿತರಾಗಿ ಪ್ರಭಾಸ ಕ್ಷೇತ್ರಕ್ಕೆ ಬಂದರು. ಕುಕುರ, ಅಂಧಕ, ಸಾತ್ವತ, ವೃಷ್ಣಿ ಮುಂತಾದ ಯಾದವ ಕುಲದ ಜನರೆಲ್ಲರೂ ಪ್ರಭಾಸ ಕ್ಷೇತ್ರದಲ್ಲಿ ಭೋಜನ ಮಾಡಿದರು. ಅನಂತರ ಮಜಾ ಮಾಡಲಿಕ್ಕಾಗಿ ಯಥೇಚ್ಛವಾಗಿ ಸೆರೆ ಕುಡಿದರು. ಮದ್ಯದ ನಿಶೆಯಲ್ಲಿ ಉನ್ನತ್ತರಾಗಿ ಪರಸ್ಪರ ಹೊಡೆದಾಡ ತೊಡಗಿದರು. ವಾದಕ್ಕೆ ವಾದ ಹುಟ್ಟಿದವು. ಮಾತಿಗೆ ಮಾತು ಬೆಳೆದವು. ಬಾಯಿಗೆ ಬಾಯಿ ಹತ್ತಿ ನಂತರ ಕೈಗೆ ಕೈ ಹತ್ತಿ, ಕಲಹಕ್ಕೆ ಮೊದಲಿಟ್ಟು ಭೀಕರವಾದ ಯಾದವೀಕಲಹದ ಕಿಡಿ ಕಿಚ್ಚಾಗಿ ಸುಡತೊಡಗಿತು.

**ಮೈತ್ರೇಯ** - ಪೂಜ್ಯರೇ, ತಮ್ಮ ತಮ್ಮ ಅನ್ನವನ್ನು ಉಂಡು ಸುಖವಾಗಿರುವ ಆ ಯಾದವರಿಗೆ ಪರಸ್ಪರ ಇಷ್ಟು ಘೋರ ಕಲಹವಾಗಲಿಕ್ಕೆ ಕಾರಣವಾದರೂ ಏನು ?

**ಪರಾಶರ** - ಅವರು ಎಲ್ಲರೂ ತಮ್ಮ ತಮ್ಮ ಅನ್ನವನ್ನು ಬಡಿಸಿಕೊಂಡು ಊಟ ಮಾಡುವಾಗ ''ನನ್ನ ಮೃಷ್ಟಾನ್ನ ರುಚಿಯಾಗಿದೆ; ನನ್ನ ಮೃಷ್ಟಾನ್ನ ರುಚಿಯಾಗಿದೆ.'' ಎಂದು ವಾದಕ್ಕೆ ಮೊದಲಾಯಿತು. ಅದೇ ಮಾತು ವಾದವಾಗಿ ಬೆಳೆದು ಜೋರಾಗಿ ಸ್ಪರ್ಧೆ, ಈರ್ಷೆ, ಮದಮಸ್ತಿಗಳಿಂದ ಕಲಹಕ್ಕೆ ಸುರುವಾಯಿತು. ದೈವ ಸಂಕಲ್ಪದಂತೆ ಕಣ್ಣು ಕೆಂಪಗೆ ಮಾಡಿ ಒಬ್ಬರಿಗೊಬ್ಬರು ತನ್ನ ಮೃಷ್ಟಾನ್ನವೇ ರುಚಿ ಎಂದು ಸಾಧಿಸಿ ಸಿದ್ಧಪಡಿಸುವದಕ್ಕಾಗಿ ಎದುರಾಳಿಯನ್ನು ಒಪ್ಪಿಸುವದಕ್ಕಾಗಿ ಶಸ್ತ್ರ ಹಿಡಿದು ಹೊಡೆದಾಡಿದರು. ಶಸ್ತ್ರಾಸ್ತ್ರಗಳೆಲ್ಲ ಮುರಿದು ತುಂಡಾಗಿ ಬೀಳಲು ಅಲ್ಲಿಯೇ ಸಮುದ್ರ ತೀರದಲ್ಲಿ ಬೆಳೆದ ಗಲಗವನ್ನು ತೆಗೆದುಕೊಂಡು ಹೊಡೆದಾಡ ಹತ್ತಿದರು. ಬ್ರಾಹ್ಮಣ ಶಾಪದಿಂದ ಸಾಂಬನ ಹೊಟ್ಟೆಯಿಂದ ಜನಿಸಿದ ಒನಿಕೆಯನ್ನು ಕುಟ್ಟಿ ಪುಡಿಮಾಡಿ ಸಮುದ್ರದಲ್ಲಿ ಹಾಕಿದ್ದರು. ಆ ಪುಡಿಯೇ ಗಲಗಿನ ಬಳ್ಳಿಯಾಗಿ ಸಮುದ್ರದಲ್ಲಿ ಬೆಳೆದಿದ್ದಿತು. ಬ್ರಾಹ್ಮಣ ಶಾಪದ ಪ್ರಭಾವದಿಂದ ಆ ಜೇಕಿನ

**ಬಳ್ಳಿಯ ಗಲಗುಗಳು ವಜ್ರಾಯುಧದಂತೆ ತೀಕ್ಷ್ಣ ಘೋರವಾಗಿದ್ದವು. ಅವನ್ನೇ ತೆಗೆದುಕೊಂಡು ಯಾದವರು ಹೊಡೆದಾಡಿ ಹೋರಾಡಿದರು.**

ಪ್ರದ್ಯುಮ್ನ, ಸಾಂಬ, ಕೃತವರ್ಮ, ಸಾತ್ಯಕಿ, ಪೃಥು, ವಿಪ್ರಥು, ಅನಿರುದ್ಧ, ಚಾರುವರ್ಮ, ಚಾರಕ ಅಕ್ರೂರ ಮುಂತಾದ ಯಾದವರೆಲ್ಲರು ಗಲಗುರೂಪವಾದ ವಜ್ರ ಶಲಾಕೆಗಳನ್ನು ಹಿಡಿದು ಒಬ್ಬರಿಗೊಬ್ಬರು ಪ್ರಹರಿಸುತ್ತ ಭೀಕರ ಯುದ್ಧವನ್ನೇ ಸುರುಮಾಡಿದರು. ಆಗ ಕೃಷ್ಣನು ಅವರ ಕಲಹವನ್ನು ಬಿಡಿಸಬೇಕೆಂದು ಬುದ್ಧಿ ಹೇಳಲಿಕ್ಕೆ ಬಂದ. ಪ್ರತಿಯೊಬ್ಬರೂ ಅವನು ತನ್ನ ಎದುರಾಳಿಯ ಪಕ್ಷದವನಾಗಿ ತನಗೆ ಹೇಳಲಿಕ್ಕೆ ಬಂದಿದ್ದಾನೆಂದು ಬಗೆದರು. ಅವನನ್ನೂ ಪ್ರತಿಪಕ್ಷಿಯೆಂದೇ ಭಾವಿಸಿ ಅವನನ್ನು ತಿರಸ್ಕರಿಸಿದರು. ಮತ್ತೆ ಹೊಡೆದಾಡತೊಡಗಿದರು. ಅದನ್ನು ನೋಡಿ ಕೃಷ್ಣನಿಗೂ ಕೋಪ ಕೆರಳಿ ಅವನೂ ಒಂದು ಹಿಡಿ ಗಲಗು ಹಿರಿದು ನಿಂತನು. ಆ ಗಲಗುಗಳ ಹಿಡಿಯು ಅವನ ಕೈಯಲ್ಲಿ ಉಕ್ಕಿನ ಸಳಾಕೆಯಾದಂತಾಯಿತು. ಕೃಷ್ಣನು ಅದರಿಂದ ಯಾದವರನ್ನೆಲ್ಲ ಹೊಡೆದನು. ಎಲ್ಲ ಯಾದವರೂ ಪರಸ್ಪರ ಹೊಡೆದಾಡಿ ಬಡೆದಾಡಿ ಸತ್ತು ಬಿದ್ದರು. ಅನಂತರ ಕೃಷ್ಣನ ಸಾರಥಿಯಾದ ದಾರುಕನು ನೋಡುತ್ತಿದ್ದಂತೆಯೇ ಭಗವಂತನ ಚೈತ್ರ ಎಂಬ ಹೆಸರಿನ ರಥವು ಕುದುರೆಗಳಿಂದ ತಾನಾಗಿ ಎಳೆಯಲ್ಪಟ್ಟು ಸಮುದ್ರದ ಮಧ್ಯ ಪಥದಿಂದ ಹೊರಟು ಹೋಯಿತು. ಶ್ರೀ ಕೃಷ್ಣನ ಶಂಖ ಚಕ್ರ ಗದಾ ಪದ್ಮ ಶಾರ್ಙ್ಗ ಬಿಲ್ಲು ಎಲ್ಲವೂ ಶ್ರೀ ಕೃಷ್ಣನಿಗೆ ಪ್ರದಕ್ಷಿಣೆಯನ್ನು ಹಾಕಿ ಸೂರ್ಯ ಮಂಡಲದ್ವಾರಾ ಹೊರಟು ಹೋದವು. ಯಾದವ ಕುಲಕೋಟಿಯಿಂದ ಕಿಕ್ಕಿರಿದು ತುಂಬಿ ಕುಲು ಕುಲು ನಗುತ್ತಿರುವ ಆ ಪ್ರಭಾಸ ಕ್ಷೇತ್ರದಲ್ಲಿ ಶ್ರೀ ಕೃಷ್ಣ ಹಾಗೂ ಅವನ ಸಾರಥಿಯಾದ ದಾರುಕ ಇವರಿಬ್ಬರ ಹೊರತು ಯಾರೂ ಉಳಿಯಲಿಲ್ಲ. ಪ್ರಭಾಸ ಕ್ಷೇತ್ರದ ತುಂಬ ಸ್ಮಶಾನ ಶಾಂತಿಯು ಪಸರಿಸಿತ್ತು. ಅವರಿಬ್ಬರೂ ತೆವಳುತ್ತ ಅಲ್ಲಿಯೇ ಸಮೀಪದ ಒಂದು ಗಿಡದಡಿಯಲ್ಲಿ ಆಸನ ಹಾಕಿ ಕುಳಿತ ಬಲರಾಮನನ್ನು ನೋಡಿದರು. ಬಲರಾಮನ ಮುಖದಿಂದ ದೊಡ್ಡದಾದ ಹಾವೊಂದು ಹೊರಬಿದ್ದು ಸಮುದ್ರದೆಡೆಗೆ ಹರಿಯಿತು. ಸಿದ್ಧರೂ ಸರ್ಪಗಳೂ ಅದನ್ನು ಪೂಜಿಸಿದರು. ಆಗ ಸಮುದ್ರನಾಥನು ಅರ್ಘ್ಯಪಾದ್ಯಾದಿಗಳನ್ನು ನೀಡಿ ಸ್ವಾಗತ ಮಾಡಿ ಆದಿಶೇಷನನ್ನು ಪೂಜಿಸಿದನು. ಹೀಗೆ ಸಾಗರ ಹಾಗೂ ಸರ್ಪದೇವತೆಗಳಿಂದ ಪೂಜಿತವಾಗಿ ಆ ಹೆಬ್ಬಾವು ಸಾಗರದಲ್ಲಿ ಪ್ರವೇಶ ಮಾಡಿತು. ಅಣ್ಣನ ನಿರ್ಯಾಣವನ್ನು ನೋಡಿ ಕೇಶವನು ತನ್ನ ಸಾರಥಿಯಾದ ದಾರುಕನಿಗೆ ಹೇಳಿದನು -

''ದಾರುಕ, ನೀನು ದ್ವಾರಕೆಗೆ ಹೋಗಿ ಈ ಎಲ್ಲ ಸಮಾಚಾರವನ್ನು ವಸುದೇವ ಮತ್ತು ಉಗ್ರಸೇನರಿಗೆ ತಿಳಿಸು. ಬಲದೇವ ಹಾಗೂ ಎಲ್ಲ ಯಾದವರ ಮರಣದ ಸುದ್ದಿಯನ್ನು ಆಹುಕ ಮೊದಲಾದ ದ್ವಾರಕಾ ವಾಸಿಗಳಿಗೆ ಹೇಳು. ನಾನೂ ಕೂಡ ಯೋಗ ಸಮಾಧಿಯಿಂದ ಈ ಶರೀರವನ್ನು ತ್ಯಾಗಮಾಡುತ್ತೇನೆ. ಮತ್ತು ಆಹುಕ ಮೊದಲಾದ ದ್ವಾರಕಾ ನಿವಾಸಿಗಳಿಗೆ ಇನ್ನು ಮೇಲೆ ದ್ವಾರಕೆಯಲ್ಲಿ ಇರಬೇಡವೆಂದು ಹೇಳು. ಇನ್ನು ಮೇಲೆ ದ್ವಾರಕಾ ನಗರಿಯನ್ನೆಲ್ಲ ಸಮುದ್ರವು ಉಕ್ಕೇರಿ ತನ್ನ ನೀರಿನಲ್ಲಿ ಮುಳುಗಿಸಿ ಬಿಡುವದು. ಅರ್ಜುನನು ಬರುವ ದಾರಿಯನ್ನೇ ಕಾಯುತ್ತಲಿರಿ. ಅವನು ಬಂದ ಕೂಡಲೇ ನೀವೆಲ್ಲರೂ ದ್ವಾರಕೆಯನ್ನು ಬಿಟ್ಟು ಅವನೊಟ್ಟಿಗೇ ಹೋಗಿಬಿಡಿರಿ.

ದಾರುಕ, ಅರ್ಜುನನಿಗಾದರೂ ಶಕ್ಯವಾದಷ್ಟು ನನ್ನ ಅಂತಃಪುರದ ರಾಣೀವಾಸದ ಜನರನ್ನು ರಕ್ಷಿಸಲಿಕ್ಕೆ ಹೇಳು. ನೀನೂ ಕೂಡ ಅರ್ಜುನನೊಡನೆ ದ್ವಾರಕೆಯ ಜನರನ್ನೆಲ್ಲ ಕರೆದುಕೊಂಡು ಹೋಗು. ಮುಂದೆ ನಮ್ಮ ವಂಶದ ವಜ್ರನು ಯಾದವ ಕುಲದ ರಾಜನು ಆಗುವನು. ಭಗವಂತನ ಈ ಮಾತನ್ನು ಕೇಳಿ ದಾರುಕನಿಗೆ ದುಃಖವು ಉಕ್ಕೇರಿ ಬಂದಿತು. ಅವನು ಶ್ರೀ ಕೃಷ್ಣನಿಗೆ ಮತ್ತೆ ಮತ್ತೆ ಪ್ರದಕ್ಷಿಣೆ ಹಾಕಿ, ಪುನಃ ಪುನಃ ನಮಸ್ಕಾರ ಮಾಡಿ ಅನೇಕ ಸಲ ಪಾದಮುಟ್ಟಿ ಅವನಿಗೆ ವಂದನೆ ಗೈದು ದ್ವಾರಕೆಗೆ ತೆರಳಿದನು. ಅವನು ಹೋದ ಬಳಿಕ ಇತ್ತ ಶ್ರೀ ಕೃಷ್ಣಪರಮಾತ್ಮನು ತನ್ನ ಮೂಲ ರೂಪವನ್ನು ಸ್ಮರಿಸಿದನು. ದುರ್ವಾಸ ಋಷಿಯ ಮಾತಿಗೆ ಬೆಲೆ ಕೊಡುವದಕ್ಕಾಗಿ ತನ್ನ ತೊಡೆಯ ಮೇಲೆ ಕಾಲನ್ನಿರಿಸಿ ಯೋಗಾರೂಢನಾಗಿ ಕುಳಿತುಕೊಂಡನು. ಅಷ್ಟರಲ್ಲಿ ಜರಾ ಎಂಬ ಬೇಡನು ಅಲ್ಲಿಗೆ ಬಂದನು. ಅವನು ದೂರದಿಂದ ಹೊಳೆಯುವ ಹರಿಯ ಚರಣವನ್ನು ಕಂಡು 'ಹರಿಣ' ಎಂದು ಬಗೆದು ಬಾಣಬಿಟ್ಟನು. ಯಾದವ ಕುಮಾರರು ಸಾಂಬನು ಹೆತ್ತ ಒನಕೆಯನ್ನು ಒಡೆದು ಪುಡಿಮಾಡಿ ತಿಕ್ಕಿ ತೇದ ಮೇಲೆ ಕೊನೆಗೆ ಶೇಷ ಉಳಿದ ಉಕ್ಕಿನ ತುಣುಕನ್ನು ಸಮುದ್ರದಲ್ಲಿ ಎಸೆದಿದ್ದರು. ಅದನ್ನು ನುಂಗಿದ ಮೀನದ ಗರ್ಭದಿಂದ ಆ ತುಣುಕನ್ನು ಜರಾಬೇಡನು ತೆಗೆದುಕೊಂಡು ಮಸೆದು ಚೂಪಾಗಿ ಮಾಡಿ ತನ್ನ ಬಾಣದ ತುದಿಗೆ ಕೂಡಿಸಿದ್ದನು. ಅವನು ಈ ಕೃಷ್ಣನು ಕುಳಿತಲ್ಲಿಗೆ ಬಂದು ಚಿಗರೆಯಂತೆ ತೋರುವ ಕೃಷ್ಣನ ಪಾದಕ್ಕೆ ಗುರಿ ಇಟ್ಟು ಬಾಣಬಿಟ್ಟನು. ಬಿಟ್ಟ ಬಳಿಕ ಅವನಿಗೆ ಚತುರ್ಭುಜನಾದ ಕೃಷ್ಣನು ಕಣ್ಣಿಗೆ ಬಿದ್ದನು. ಅವನು ಓಡಿ ಬಂದು ಭಗವಂತನ ಪಾದದ ಮೇಲೆ ಬಿದ್ದು ''ಸ್ವಾಮಿ ಕ್ಷಮಿಸು, ಹರಿಣವೆಂದು ಹರಿಯನ್ನೇ ಹೊಡೆದೆ. ಈ ಮಹಾಪಾಪಿಯನ್ನು ಕ್ಷಮಿಸು ನನ್ನ ಪಾಪವೇ ನನ್ನನ್ನು ಸುಟ್ಟಿದೆ ಭಗವನ್ ಪ್ರಸನ್ನನಾಗು. ಕ್ಷಮೆದೋರು'' ಎಂದು ಮತ್ತೆ ಮತ್ತೆ ಕಾಲಿಗೆ ಬಿದ್ದು ಕ್ಷಮೆಯನ್ನು ಕೋರಿದನು. ಅದನ್ನು ಕೇಳಿ ಶ್ರೀಕೃಷ್ಣನು ಶಾಂತನಾಗಿ ''ಲುಬ್ಧ, ಗಾಬರಿಯಾಗಬೇಡ. ನಿನಗಾವ ಭಯವೂ ಇಲ್ಲ. ನೀನು ನನ್ನ ದಯೆಯಿಂದ ದೇವತೆಗಳಿಗೆ ಲಭ್ಯವಾದ ಸ್ವರ್ಗಕ್ಕೆ ಹೋಗು'' ಎಂದು ಅಪ್ಪಣೆ ಗೈದು ಅನುಗ್ರಹಿಸಿದನು. ಅಷ್ಟರಲ್ಲಿ ಸ್ವರ್ಗಲೋಕದಿಂದ ಆ ಜರಾವ್ಯಾಧನನ್ನು ಕರೆದೊಯ್ಯಲಿಕ್ಕೆ ವಿಮಾನವು ಬಂದಿತು. ಪರಮಾತ್ಮನ ಪ್ರಸಾದದಿಂದ ಧನ್ಯನಾದ ಆ ಬೇಡನು ಶ್ರೀ ಕೃಷ್ಣನಿಗೆ ನಮಸ್ಕರಿಸಿ ಆ ವಿಮಾನವನ್ನೇರಿ ಸ್ವರ್ಗಕ್ಕೆ ನಡೆದನು. ಅನಂತರ ಶ್ರೀ ಕೃಷ್ಣನು ಜರಾವ್ಯಾಧನನ್ನು ಸ್ವರ್ಗಕ್ಕೆ ಕಳಿಸಿ ತಾನೂ ಯೋಗಾರೂಢನಾಗಿ ತನ್ನ ಮನುಷ್ಯ ದೇಹವನ್ನು ಪರಿತ್ಯಾಗ ಮಾಡಿದನು. ಅರ್ಥಾತ್ ತನ್ನ ಮೂಲ ರೂಪವಾದ ವಿಷ್ಣುವಿನಲ್ಲಿ ಐಕ್ಯಹೊಂದಿದನು. (ಶ್ರೀ ಕೃಷ್ಣನ ಶರೀರವಾದರೂ ಅಪ್ರಾಕೃತವಾದ ಜ್ಞಾನಾನಂದಮಯವಾದ ದಿವ್ಯ ದೇಹವೇ ಆಗಿದ್ದಿತು. ಆ ಶರೀರ ಸಹಿತವಾಗಿಯೇ ಅವನು ಪರಂಧಾಮವನ್ನು ಹೊಂದಿದನು. ಆದರೆ ಜನ ಸಾಮಾನ್ಯರ ಕಣ್ಣಿಗೆ ಕಾಣುವಂತೆ ತನ್ನ ದೇಹದಂತೆ ತೋರುವ ಮನುಷ್ಯ ಶರೀರವನ್ನು ನಿರ್ಮಿಸಿ ಅದನ್ನು ಇಲ್ಲಿ ಬಿಟ್ಟು ಹೋದ ಎಂದು ಶ್ರೀ ಮಧ್ವಾಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಹೇಳಿದ ಮಾತುಗಳನ್ನು ಇಲ್ಲಿ ಅನುಸಂಧಾನಕ್ಕೆ ತೆಗೆದುಕೊಳ್ಳಬೇಕು.)

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತೇಳನೇ ಅಧ್ಯಾಯ ಸಂಪೂರ್ಣ*

—o—

## ಪಾಂಡವರ ಸ್ವರ್ಗಾರೋಹಣ

ಅಧ್ಯಾಯ - ೩೮

**"ಅರ್ಜುನ ಬಂದನು ದುಃಖದಿ ಬೆಂದನು ಯದುಗಳ ಶವ ಸಂಸ್ಕರಿಸಿದನು.**
**ವ್ಯಾಸಾದೇಶದಿ ಸೋದರ ಪಾಂಡವರೊಂದಿಗೆ ಸ್ವರ್ಗಕೆ ತೆರಳಿದನು."**

ಅರ್ಜುನನು ಪ್ರಭಾಸ ಪಟ್ಟಣಕ್ಕೆ ಬಂದು ರಾಮಕೃಷ್ಣರ ದೇಹಗಳನ್ನು ಹುಡುಕಿ ಅಗ್ನಿ ಸಂಸ್ಕಾರವನ್ನು ಮಾಡಿದನು. ಉಳಿದ ಯಾದವರೆಲ್ಲರ ಶವಸಂಸ್ಕಾರವನ್ನೂ ಮಾಡಿದನು. ರುಕ್ಮಿಣೀ, ಸತ್ಯಭಾಮಾ ಮುಂತಾದ ಕೃಷ್ಣನ ಅಷ್ಟ ಮಹಿಷಿಯರು ಶ್ರೀ ಕೃಷ್ಣನ ಪಾರ್ಥಿವ ಶರೀರವನ್ನು ಆಲಂಗಿಸಿಗೊಂಡು ಅಗ್ನಿ ಪ್ರವೇಶ ಮಾಡಿ ದೇಹ ತ್ಯಾಗ ಮಾಡಿದರು. ಬಲರಾಮನ ಮಡದಿಯಾದ ರೇವತಿಯೂ ಪತಿಯ ಶರೀರವನ್ನು ಅಪ್ಪಿಕೊಂಡು ಚಿತಾರೋಹಣ ಮಾಡಿದಳು. ರಾಮಕೃಷ್ಣರ ಮಡದಿಯರಿಗೆ ಪತಿಯ ಶರೀರದ ಅಂಗಾಲಿಂಗನದಿಂದ ಧಗಧಗಿಸುವ ಚಿತಾಗ್ನಿಯೂ ಕೂಡ ಚಂದನದಂತೆ ತಂಪೆನಿಸಿತು. ಉಗ್ರಸೇನ, ವಸುದೇವ, ದೇವಕಿ, ರೋಹಿಣೀ ಮುಂತಾದವರೆಲ್ಲರೂ ಕೃಷ್ಣನ ಮರಣದ ಸಮಾಚಾರವನ್ನು ಕೇಳಿ ದುಃಖದಗ್ಧರಾಗಿ ಅವನ ವಿರಹವನ್ನು ತಾಳಲಾರದೇ ಅಗ್ನಿಪ್ರವೇಶ ಮಾಡಿದರು. ಅನಂತರ ಅರ್ಜುನನು ಅವರೆಲ್ಲರಿಗೂ ವಿಧಿಪೂರ್ವಕವಾಗಿ ಪ್ರೇತ ಕಾರ್ಯವನ್ನೆಲ್ಲ ಮಾಡಿಮುಗಿಸಿದನು. ಮತ್ತು ಉಳಿದೆಲ್ಲ ಜನರನ್ನೂ ಯಾದವ ಕುಮಾರನಾದ ವಜ್ರನನ್ನೂ ಕರೆದುಕೊಂಡು ದ್ವಾರಕಾ ಪಟ್ಟಣದಿಂದ ಹೊರಬಿದ್ದನು. ಹದಿನಾರು ಸಾವಿರ ಕೃಷ್ಣನ ಕಾಂತೆಯರು ಊರು ಬಿಟ್ಟು ಪಾರ್ಥನ ಜೊತೆಗೆ ಹೊರಟರು. ಅರ್ಜುನನು ವಜ್ರನನ್ನು ಜಾಗರೂಕತೆಯಿಂದ ರಕ್ಷಿಸುತ್ತ ಮುಂದೆ ನಡೆದನು. ಶ್ರೀ ಕೃಷ್ಣ ಪರಮಾತ್ಮನು ದೇಹಬಿಟ್ಟ ದಿನವೇ ಸ್ವರ್ಗದಿಂದ ತಂದ ಸುಧರ್ಮ ಸಭೆಯೂ ಪಾರಿಜಾತ ವೃಕ್ಷವೂ ಭೂಮಿಯನ್ನು ಬಿಟ್ಟು ಸ್ವರ್ಗಕ್ಕೆ ಏರಿದವು. ಅಂದೇ ಬಲಿಷ್ಠನಾದ ಕಲಿಯು ಭೂಮಿಯಲ್ಲಿ ಕಾಲಿರಿಸಿದನು.

ಹೀಗೆ ಜನ ಶೂನ್ಯವಾದ ದ್ವಾರಕೆಯನ್ನು ಸಮುದ್ರವು ಬಂದು ತೆರೆಗಳಿಂದ ಆಕ್ರಮಿಸಿ ಮುಳುಗಿಸಿತು. ಆದರೆ ಶ್ರೀ ಕೃಷ್ಣನ ನಿವಾಸ ಮಂದಿರವನ್ನು ಮಾತ್ರ ಸಮುದ್ರವು ನೀರಿನಿಂದ ತೋಯಿಸಲಿಲ್ಲ. ಅದನ್ನು ಮುಳುಗಿಸುವ ಶಕ್ತಿಯು ಸಮುದ್ರಕ್ಕಿರುವುದಿಲ್ಲ. ಕೃಷ್ಣನ ಆ ದ್ವಾರಕಾ ಮಂದಿರದಲ್ಲಿ ಶ್ರೀ ಕೃಷ್ಣನು ಸರ್ವದಾ ಇಂದಿಗೂ ಸನ್ನಿಹಿತನಾಗಿದ್ದಾನೆ. ಭಗವಂತನು ದ್ವಾಪರ ಯುಗದಲ್ಲಿ ಉಳಿದ, ಆಡಿದ, ನಡೆದಾಡಿದ ಆ ಮಂದಿರವನ್ನು ನೋಡಿದವರ ಪಾಪಗಳೆಲ್ಲವೂ ಪರಿಹಾರವಾಗಿ ಮಹಾ ಪುಣ್ಯವು ಪ್ರಾಪ್ತವಾಗುವದು (ಆ ಕೃಷ್ಣನ ಮನೆಯೇ ಈಗಿನ ದ್ವಾರಕಾಕ್ಷೇತ್ರವೆನಿಸಿದೆ.)

ಅರ್ಜುನನು ದ್ವಾರಕಾ ವಾಸಿಗಳಲ್ಲಿ ಅಳಿದುಳಿದ ಜನರನ್ನೆಲ್ಲ ಧನಧಾನ್ಯ ಸಮೃದ್ಧಿಯುಳ್ಳ ಪಂಚನದ ದೇಶದಲ್ಲಿ ಇರಲು ವ್ಯವಸ್ಥೆಗೈದು ನಿವಾಸ ಮಾಡಿಸಿದನು. ಮತ್ತು ಕೃಷ್ಣನ ಸ್ತ್ರೀಯರನ್ನೆಲ್ಲ ತನ್ನ ಜೊತೆಗೆ ಕರೆದುಕೊಂಡು ಹಸ್ತಿನಾವತಿಗೆ ಹೊರಟನು. ಅರ್ಜುನನೊಬ್ಬನೇ ಅನಾಥರಾದ ಅಷ್ಟು ಜನ ಯಾದವ ಸುಂದರಿಯರನ್ನು ಕರೆದೊಯ್ಯುವುದನ್ನು ಕಂಡು ದರೋಡೆಖೋರರ ತಂಡಿನ ನಾಯಕರಿಗೆ ಆಶೆಯಾಗಿ

ಎಲ್ಲರೂ ಕೂಡಿ ಗುಪ್ತಾಲೋಚನೆಯನ್ನು ನಡೆಯಿಸಿದರು. ''ಈ ಸ್ತ್ರೀಯರಿಗೆ ಗಂಡನಿಲ್ಲ. ಇವರನ್ನು ಒಬ್ಬನೇ ಅರ್ಜುನನು ಒಯ್ಯುತ್ತಿದ್ದಾನೆ. ಭೀಷ್ಮ ದ್ರೋಣಾದಿಗಳನ್ನು ಕೊಂದಿದ್ದೇನೆ ಎಂಬ ಗರ್ವದಿಂದ ನಮ್ಮೆಲ್ಲರ ಎದುರೇ ನಡೆದಿದ್ದಾನೆ. ಧಿಕ್ಕಾರವಿರಲಿ ನಮ್ಮ ಪೌರುಷಕ್ಕೆ. ಅವನ ಕೈಯಲ್ಲಿ ನಿರ್ವೀರ್ಯ ಶಸ್ತ್ರಗಳಿವೆ. ಅವನ ಕೈಯಲ್ಲಿ ಶಸ್ತ್ರವಿದೆಯೆಂದು ಸೊಕ್ಕಿನಿಂದ ನಮ್ಮನ್ನು ತಿರಸ್ಕರಿಸಿ ಅನಾಥ ನಾರಿಯರನ್ನು ಹಿಡಿದುಕೊಂಡು ಹೊರಟಿದ್ದಾನೆ. ಬನ್ನಿರಿ ಎಲ್ಲರೂ ಕೂಡಿ ಅವನಿಗೆ ಈ ಹಳ್ಳಿಯ ಗೋಪಾಲ ಜಾತಿಯ ತುಡುಗರ ತಂಡಿನ ಬಲವೆಷ್ಟಿದೆಯೆನ್ನುವುದನ್ನು ತೋರಿಸಿ ಕೊಡೋಣ'' ಸಾವಿರಾರು ಜನ ಪಾಪಿಗಳು ದುರಾಶೆಯಿಂದ ಕೈಯಲ್ಲಿ ಕಲ್ಲು ಕಟ್ಟಿಗೆ ಹಿಡಿದು ಅರ್ಜುನನ ಮೇಲೆ ಧಾವಿಸಿದರು. ಆಗ ಅರ್ಜುನನು ಅವರನ್ನು ಕುರಿತು ''ಎಲೋ ಅಜ್ಞರೇ ! ನಿಮಗೆ ಸಾಯಬೇಕೆಂದು ಇಚ್ಛೆ ಇಲ್ಲದಿದ್ದರೆ ಸುಮ್ಮನೇ ತಿರುಗಿ ಹೋಗಿರಿ'' ಎಂದು ಗದರಿಸಿದನು. ದಸ್ಯುಗಳು ಅವನ ಮಾತನ್ನು ಕೇಳದೇ ಅರ್ಜುನನ ಬಳಿಯಲ್ಲಿರುವ ದ್ರವ್ಯವನ್ನೆಲ್ಲ ದೋಚಿಕೊಂಡರು. ಮತ್ತು ಶ್ರೀ ಕೃಷ್ಣನ ಕುಟುಂಬಿನಿಯರಾದ ನಾರಿಯರನ್ನೆಲ್ಲ ಸ್ವಾಧೀನಪಡಿಸಿಕೊಂಡರು.

ಆಗ ಅರ್ಜುನನು ತನ್ನ ಗಾಂಡೀವ ಧನಸ್ಸನ್ನು ತೆಗೆದು ಹೆದೆಯೇರಿಸಿ ಬಾಣವನ್ನು ದಸ್ಯುಗಳ ಮೇಲೆ ಬಿಡಬೇಕೆಂದು ಪ್ರಯತ್ನಿಸಿದನು. ಆದರೆ ಅವನಿಗೆ ಗಾಂಡೀವ ಬಿಲ್ಲನ್ನು ಎತ್ತಲಿಕ್ಕೂ ಕೂಡ ಆಗಲೊಲ್ಲದು. ಹೇಗೋ ಕಷ್ಟಪಟ್ಟು ಎತ್ತಿ ನಿಲ್ಲಿಸಿ ಬಾಣ ಹೂಡಿದರೂ ಅದು ಸಡಿಲವಾಯಿತು. ಅಸ್ತ್ರಗಳೆಲ್ಲವೂ ಮರೆತು ಹೋಗಿದ್ದವು. ಮಂತ್ರಗಳು ಎಷ್ಟು ನೆನಪು ಮಾಡಿಕೊಂಡರೂ ಜ್ಞಾಪಕಕ್ಕೇ ಬರಲೊಲ್ಲವು. ಅವನು ಹಾಗೇ ಬಾಣಗಳನ್ನು ಬಿಟ್ಟನು. ಆ ಬಾಣಗಳು ಚೋರರ ತಂಡಿನ ನಾಯಕರಿಗೆ ಬಡೆದರೂ ಅವರ ಮೈಗೆ ಏನೂ ಗಾಯವಾಗಲಿಲ್ಲ. ಬಹು ವೇಗದಿಂದ ಬಿಟ್ಟ ಬಾಣಗಳೂ ಕೇವಲ ವೈರಿಗಳ ತೊಗಲನ್ನು ಗಾಯಗೊಳಿಸಿದವು. ಎದೆಯಲ್ಲಿ ನೆಡಲಿಲ್ಲ. ಯಾರೂ ಪ್ರಾಣ ಬಿಡಲಿಲ್ಲ. ಅಗ್ನಿಯ ಅಕ್ಷಯ ಬತ್ತಳಿಕೆಯಲ್ಲಿಯ ಬಾಣಗಳೆಲ್ಲವೂ ಕ್ಷೀಣವಾಗಿ ಹೋಗಿದ್ದವು. ತುರುಗಾಹಿ ತುಡುಗರ ತಂಡದೊಡನೆ ಹೋರಾಡುವಾಗ ಪಾರ್ಥನು ಶಕ್ತಿ ವಿಹೀನನಾಗಿ ಹೈರಾಣಾಗಿ ನಿಂತನು. ಆಗ ಅರ್ಜುನನಿಗೆ ಜ್ಞಾನೋದಯವಾಯಿತು. ಇಷ್ಟು ದಿನ ತಾನು ಸಂಪಾದಿಸಿದ ಗೆಲುವುಗಳಿಗೆಲ್ಲ ಸಾಕ್ಷಾತ್ ಶ್ರೀ ಕೃಷ್ಣನೇ ಕಾರಣ ಎಂದು. ಕುರುಕ್ಷೇತ್ರದ ಯುದ್ಧದಲ್ಲಿ ಅನೇಕ ರಾಜರನ್ನು ಕೊಂದದ್ದು ಕೃಷ್ಣನ ಬೆಂಬಲದಿಂದಲೇ ಎಂದು ಅವನಿಗೆ ಮನದಟ್ಟಾಯಿತು.

ಅರ್ಜುನನು ಕಣ್ದೆರೆದು ನೋಡುತ್ತಿದ್ದಂತೆಯೆ ದಸ್ಯುಗಳು ಕೃಷ್ಣನ ಮಡದಿಯರನ್ನು ಸೆಳೆದರು. ಎಷ್ಟೋ ಪ್ರಮದೆಯರು ರಕ್ಷಕರಿಲ್ಲದೇ ದಿಕ್ಕೆಟ್ಟು ಓಡತೊಡಗಿದರು. ಬತ್ತಳಿಕೆಯಲ್ಲಿಯ ಬಾಣಗಳೆಲ್ಲ ತೀರಿದ್ದರಿಂದ ಅರ್ಜುನನು ತನ್ನ ಗಾಂಡೀವ ಬಿಲ್ಲನ್ನೆತ್ತಿ ಅವರಿಗೆ ಹೊಡೆದನು. ಆದರಿಂದ ಅವರ ಒಂದು ಕೂದಲವೂ ಕೊಂಕಲಿಲ್ಲ. ಅರ್ಜುನನು ನೋಡುತ್ತಿರುವಾಗಲೇ ಆ ದಸ್ಯುಗಳು ಕೃಷ್ಣನ ಪತ್ನಿಯರನ್ನೆಲ್ಲ ಓಡಿಸಿಗೊಂಡು ಹೋದರು. ಅದನ್ನು ನೋಡಿ ಅರ್ಜುನನಿಗೆ ದುಃಖವು ಉಕ್ಕಿ ಬಂದಿತು. ''ಅಯ್ಯೋ ! ಸ್ವಾಮಿ ಕೃಷ್ಣ, ನನ್ನನ್ನು ಮೋಸ ಮಾಡಿದೆ. ಅದೇ ಬಿಲ್ಲು, ಅದೇ ಬಾಣ, ಅದೇ ರಥ, ಅದೇ ಕುದುರೆ.

ಆದರೆ ಅವೊಂದೂ ಈಗ ಉಪಯೋಗಕ್ಕೆ ಬರಲಿಲ್ಲ. ದೈವವೇ ಎಲ್ಲಕ್ಕಿಂತ ಪ್ರಬಲವಾಗಿದೆ. ಕೃಷ್ಣನಿಲ್ಲದೆ ನನಗೆ ಆ ದೈವವೂ ಇಂದು ವಿಮುಖವಾಗಿ ಆ ದಸ್ಯುಗಳಿಗೇ ಗೆಲುವನ್ನು ತಂದು ಕೊಟ್ಟಿತು. ಅದೇ ಅರ್ಜುನ. ಅದೇ ಬಾಹು, ಆದರೆ ಅವೆಲ್ಲವೂ ಕೃಷ್ಣನೊಬ್ಬನಿಲ್ಲದಾಗ ನಿರ್ವೀರ್ಯವಾಗಿವೆ. ನನ್ನ ಅರ್ಜುನತ್ವವೂ ಭೀಮನ ಭೀಮತ್ವವೂ ಕೃಷ್ಣನ ಕೃಪೆಯ ಮೂಲಕವೇ ಆಗಿದ್ದವು. ಆ ಕೃಪೆ ತಪ್ಪಿದಾಗ ಸಾಮಾನ್ಯ ದಸ್ಯುಗಳೂ ಕೂಡ ನನ್ನನ್ನು ಸೋಲಿಸಿ ಹೋದರು'' . ಹೀಗೆ ಬಡಬಡಿಸುತ್ತ ಅರ್ಜುನನು ಇಂದ್ರಪ್ರಸ್ಥಕ್ಕೆ ಹೋಗಿ ಅಲ್ಲಿ ಯಾದವ ನಂದನನಾದ ವಜ್ರಕುಮಾರನನ್ನು ಸಿಂಹಾಸನ ಮೇಲೆ ಕೂಡಿಸಿ ಪಟ್ಟಾಭಿಷೇಕಗೈದು ಮಹಾರಾಜನನ್ನಾಗಿ ಮಾಡಿದನು. ಅನಂತರ ಅವನು ಬದರೀ ವನದಲ್ಲಿರುವ ಶ್ರೀ ವೇದವ್ಯಾಸರ ದರ್ಶನ ತೆಗೆದುಕೊಂಡು ವಿನಯದಿಂದ ವಂದಿಸಿದನು. ತಮ್ಮ ಚರಣಗಳಿಗೆ ನಮಿಸುತ್ತಿರುವ ಅರ್ಜುನನಿಗೆ ವ್ಯಾಸರು ಕೇಳಿದರು - ''ಇದೇನು ಅರ್ಜುನ ! ನೀನು ಇಷ್ಟೇಕೆ ತೇಜೋಹೀನನಾಗಿರುವೆ ? ನೀನೇನಾದರೂ ಬ್ರಹ್ಮಹತ್ಯಾದಿ ಪಾಪಗಳನ್ನು ಮಾಡಿದೆಯಾ ? ನಿನ್ನ ಮುಖದ ಮೇಲಿನ ಕಾಂತಿ ಕಳೆಗೆಟ್ಟು ಹೋಗಲು ಕಾರಣವೇನು ?

ಎಂದೂ ನೀನು ಪರಸ್ತ್ರೀಯರನ್ನು ಬಯಸಿಲ್ಲವಷ್ಟೇ ! ಸಂತಾನಾಪೇಕ್ಷೆಯಿಂದ ಮದುವೆಯಾಗುವೆನೆಂದು ಬಂದವರನ್ನು ಬರಿಗೈಯಿಂದ ಹಿಂದಿರುಗಿಸಿಲ್ಲವಷ್ಟೇ ! ಇಷ್ಟೇಕೆ ಕಳೆಗುಂದಿದೆ ನಿನ್ನ ಮುಖ ?'' ಆಗ ಅರ್ಜುನನು ನಿಟ್ಟುಸಿರಿಟ್ಟು ವ್ಯಾಸರಿಗೆ ಹೇಳಿದನು. ''ಸ್ವಾಮಿ, ನಮ್ಮ ತೇಜ, ನಮ್ಮ ಬಲ, ನಮ್ಮ ಪರಾಕ್ರಮ, ಎಲ್ಲವೂ ಕೃಷ್ಣನೇ ಆಗಿದ್ದ. ಅವನು ನಮ್ಮನ್ನು ಬಿಟ್ಟು ಹೋಗಿಬಿಟ್ಟ. ಅವನಿಂದ ಹೀನರಾದ ನಾನು ಹುಲ್ಲಿಗಿಂತ ಕಡೆಯಾಗಿದ್ದೇವೆ. ನಮ್ಮ ಬಿಲ್ಲು ಬಾಣ, ದೇಹತ್ರಾಣ, ಪಂಚಪ್ರಾಣ ಭೂತನಾದ ಕೃಷ್ಣನು ಹೋದ ಬಳಿಕ ನಮ್ಮ ಸರ್ವಸ್ವವೂ ಹೋದಂತೆಯೇ ಸರಿ. ಯಾರ ಕೃಪಾಕಟಾಕ್ಷಕ್ಕೆ ಪಾತ್ರರಾದ ನಮ್ಮನ್ನು ಸಿರಿ, ಗೆಲುವು, ಉನ್ನತಿಗಳು ಎಂದೂ ಬಿಟ್ಟುಹೋಗಿರಲಿಲ್ಲವೋ ಅಂಥ ಕೃಷ್ಣನು ನಮ್ಮನ್ನು ತ್ಯಾಗಮಾಡಿ ಹೋಗಿ ಬಿಟ್ಟಿದ್ದಾನೆ. ಕೃಷ್ಣನ ವಿರಹದಿಂದ ನಾನೊಬ್ಬನೇ ಅಲ್ಲ, ಇಡೀ ಭೂಲೋಕವೆಲ್ಲವೂ ತೇಜೋಹೀನವಾಗಿದೆ.

ಕೃಷ್ಣನ ದಯೆಯಿಂದ ನಾನೊಂದು ಅಗ್ನಿಯಂತೆ ತೇಜಸ್ವಿಯಾಗಿದ್ದೆ. ಭೀಷ್ಮದ್ರೋಣರಂಥ ಕಡುಗಲಿಗಳು ನನ್ನ ಪರಾಕ್ರಮದ ದಾವಾನಲದಲ್ಲಿ ದೀಪದ ಹುಳಗಳಂತೆ ಸುಟ್ಟು ಸತ್ತು ಹೋದರು. ಅಂಥ ನಾನೀಗ ಕೃಷ್ಣನಿಲ್ಲದೇ ಊತುರುಗಾಹಿಗಳಿಂದ ಸೋಲಿಸಲ್ಪಟ್ಟೆ. ಕೃಷ್ಣನ ಅನುಗ್ರಹದಿಂದ ನನ್ನ ಗಾಂಡೀವ ಧನಸ್ಸು ಮೂರು ಲೋಕದಲ್ಲಿಯೇ ಅಜೇಯವಾಗಿದ್ದಿತು. ಇಂದು ಅದೇ ಗಾಂಡೀವವು ಗೋಪಾಲಕರ ಕಟ್ಟಿಗೆಯಿಂದ ಹೊಡೆತ ತಿಂದು ಸೋಲಿಸಲ್ಪಟ್ಟಿದೆ. ನಾನು ರಕ್ಷಿಸಿ ಕರೆದೊಯ್ಯುತ್ತಲಿರುವ ಕೃಷ್ಣನ ಹದಿನಾರು ಸಾವಿರ ಮಡದಿಯರನ್ನು ದಸ್ಯುಗಳು ಬರೀ ಬಡಿಗೆಯ ಸಹಾಯದಿಂದ ನನ್ನನ್ನು ಸೋಲಿಸಿ ಸೆಳೆದೊಯ್ದಿದ್ದಾರೆ. ಕೃಷ್ಣನಿಲ್ಲದೆ ನಾನು ತೇಜೋಹೀನನಾದದ್ದು ಆಶ್ಚರ್ಯವೇನಲ್ಲ. ಆದರೆ ಇಂಥ ಕ್ಷುಲ್ಲಕ ಜನರಿಂದ

ಪರಾಜಿತನಾಗಿ ಅವಮಾನಿತನಾದರೂ ಇನ್ನೂ ನಾನು ಬದುಕಿದ್ದೇನೆ. ಇದೇ ಆಶ್ಚರ್ಯ-ವಾಗಿದೆ. ನನ್ನಂಥ ನಿರ್ಲಜ್ಜನಾರು ?'' ಆಗ ವೇದವ್ಯಾಸರು ಅರ್ಜುನನ್ನು ಸಂತೈಸುತ್ತ -

''ಪಾರ್ಥ, ದುಃಖಪಡಬೇಡ, ನೀನು ನಾಚಿಕೆ ಪಡುವ ಕಾರಣವಿಲ್ಲ. ಇದೆಲ್ಲ ಪೂರ್ವಕಾಲದ ಪ್ರಭಾವವಾಗಿದೆ. ಪ್ರಾಣಿಗಳ ಉನ್ನತಿ, ಅವನತಿ, ಜನನ, ಮರಣಗಳಿಗೆಲ್ಲ ಕಾಲವೇ ಕಾರಣವಾಗಿವೆ. ನದೀ, ಸಮುದ್ರ, ಬೆಟ್ಟ, ಭೂಮಿ, ದೇವತೆಗಳು, ಮಾನವರು, ಪಶುಗಳು, ಹಾವುಗಳು, ಗಿಡ ಬಳ್ಳಿಗಳು ಎಲ್ಲವೂ ಕಾಲದಿಂದ ಜನಿಸುತ್ತದೆ. ಇದೆಲ್ಲವೂ ಕಾಲನಾಮಕನಾದ ಕೃಷ್ಣನ ಮಹಿಮೆಯೆಂದೇ ತಿಳಿ. ಕಾಲದ ಈ ಪ್ರಭಾವವನ್ನು ತಿಳಿದು ಶಾಂತನಾಗು. ಕೃಷ್ಣನ ಮಹಿಮೆಯು ನೀನು ಬಣ್ಣಿಸಿದಂತೆ ಯಥಾರ್ಥವೇ ಆಗಿದೆ. ಹಿಂದೆ ಭೂದೇವಿಯು ಭಾರಾಕ್ರಾಂತಳಾಗಿ ದೇವತೆಗಳ ಸಭೆಗೆ ಹೋಗಿ ತನ್ನ ಭಾರವನ್ನು ಹಗುರಗೊಳಿಸಬೇಕೆಂದು ಪರಮಾತ್ಮನನ್ನು ಪ್ರಾರ್ಥಿಸಿದ್ದಳು. ಅವಳ ಪ್ರಾರ್ಥನೆಯ ಮೇರೆಗೆ ಭೂಭಾರಹರಣಕ್ಕಾಗಿ ಕಾಲರೂಪಿಯಾದ ಕಾಲ ನಿಯಾಮಕನಾದ ಕೃಷ್ಣನು ಭೂಮಿಯಲ್ಲಿ ಅವತಾರ ಮಾಡಿ ಎಲ್ಲ ರಾಜರನ್ನೂ ಸಂಹರಿಸಿ ಯಾದವ ಕುಲವನ್ನೂ ನಾಶಮಾಡಿ, ಅವತಾರ ಕಾರ್ಯವನ್ನು ಮುಗಿಸಿ, ಭೂಮಿಯಲ್ಲಿ ಇನ್ನೇನೂ ಕರ್ತವ್ಯಾಂಶವು ಇಲ್ಲದ್ದರಿಂದ ತನ್ನ ಇಚ್ಛೆಯಿಂದಲೇ ಪರಂಧಾಮಕ್ಕೆ ಪ್ರಯಾಣ ಮಾಡಿದ್ದಾನೆ. ಅರ್ಜುನ ! ನಿನಗಿಂತ ಶೂರರಾದ ಭೀಷ್ಮದ್ರೋಣರನ್ನು ನೀನು ಗೆದ್ದದ್ದು ಆ ಕಾಲ ನಿಯಾಮಕ ಶ್ರೀ ಹರಿಯ ಪ್ರಭಾವದಿಂದಲೇ ಅಲ್ಲವೇ ? ಈಗ ಅದೇ ಕಾಲನ ಬಲದಿಂದ ನಿನ್ನನ್ನು ದಸ್ಯುಗಳು ಗೆದ್ದಿದ್ದಾರೆ. ಈ ಭಗವಂತನೇ ಸರ್ವರ ಶರೀರಾಂತರ್ಗತನಾಗಿ ಜಗತ್ತಿನ ಸ್ಥಿತಿ ಮೃತಿಗಳಿಗೆ ಕಾರಣನಾಗುತ್ತಾನೆ.

ಪರಮಾತ್ಮನ ಕೃಪಾದೃಷ್ಟಿಯು ನಿನ್ನ ಮೇಲೆ ಬಿದ್ದಾಗ ನಿನ್ನ ಭಾಗ್ಯೋದಯವಾಗಿದ್ದಿತು. ಅದೇ ದೇವನ ಕೃಪಾದೃಷ್ಟಿಯು ತುರುಗಾಹಿಗಳ ಮೇಲೆ ಬಿದ್ದಾಗ ಅವರು ನಿನ್ನನ್ನು ಪರಾಜಯ ಗೊಳಿಸಿದರು. ಪರುಶುರಾಮ ದೇವರ ಜೊತೆಗೆ ಯುದ್ಧ ಮಾಡಿದ ಭೀಷ್ಮಾಚಾರ್ಯರನ್ನೂ ನಿನಗೆ ಶಸ್ತ್ರ ವಿದ್ಯೆಯನ್ನು ಕಲಿಸಿದ ಗುರುಗಳಾದ ದ್ರೋಣಚಾರ್ಯರನ್ನೂ ನಿನಗೆ ಗೆಲ್ಲಬಹುದೆಂದಾಗಲಿ ಕೊಲ್ಲಬಹುದೆಂದಾಗಲಿ ಯಾರಿಗೆ ವಿಶ್ವಾಸವಿದ್ದಿತು? ಈಗ ದನಕಾಯುವವರು ನಿನ್ನನ್ನು ಗೆದ್ದರೆಂಬುದನ್ನು ಯಾರು ನಂಬುವರು? ನೀನು ಕೌರವರನ್ನೂ ಗೆದ್ದದ್ದೂ ನಿನ್ನನ್ನು ಈ ಕೀಳು ಕಳ್ಳರು ಕಟ್ಟಿಗೆಯಿಂದ ಹೊಡೆದು ಗೆದ್ದದ್ದೂ ಸರ್ವ ಶಕ್ತನಾದ ಶ್ರೀ ಹರಿಯು ಲೀಲಾವಿಲಾಸವೇ ಸರಿ !

ಅರ್ಜುನ, ನೀನು ಸಂರಕ್ಷಣ ಮಾಡಬೇಕೆಂದು ದ್ವಾರಕೆಯಿಂದ ಕರೆದುಕೊಂಡು ಬಂದ ಕೃಷ್ಣನ ಅಂತಃಪುರ ಪರಿವಾರವನ್ನು ಆ ಕಳ್ಳರು ಸೆಳೆದೊಯ್ದುದ್ದಕ್ಕಾಗಿ ನೀನು ದುಃಖಿಸುತ್ತಲಿರುವೆ. ಅದರ ಸಮಾಚಾರವನ್ನು ತಿಳಿಸುತ್ತೇನೆ ಕೇಳು. ಹಿಂದೆ ಅಷ್ಟಾವಕ್ರನೆಂಬ ತಪಸ್ವೀ ಬ್ರಾಹ್ಮಣನು ಪರಬ್ರಹ್ಮನ ನಿರಂತರ ಧ್ಯಾನವನ್ನು ಮಾಡುತ್ತ ನೀರಿನಲ್ಲಿಯೇ ಬಹಳ ವರ್ಷಗಳವರೆಗೆ ಜಲಸಮಾಧಿಯಲ್ಲಿ ಕುಳಿತಿದ್ದನು. ದೇವದಾನವರ ಯುದ್ಧದಲ್ಲಿ ದೇವತೆಗಳಿಗೆ ವಿಜಯವಾಗಿ ಮೇರುಪರ್ವತದಲ್ಲಿ ಎಲ್ಲ ದೇವತೆಗಳು ಕೂಡಿ ತಮಗೆ ದೊರೆತ ಗೆಲುವಿನ ಉತ್ಸವ ಸಮಾರಂಭವನ್ನು

ಸಂಭ್ರಮದಿಂದ ನೆರವೇರಿಸಿದರು. ಆ ವಿಜಯೋತ್ಸವಕ್ಕೆ ರಂಭಾ, ತಿಲೋತ್ತಮಾ ಮೊದಲಾದ ಸ್ತ್ರೀಯರು ಹೊರಟಿದ್ದರು. ದಾರಿಯಲ್ಲಿ ಕುತ್ತಿಗೆಯವರೆಗೆ ನೀರಿನಲ್ಲಿ ಕುಳಿತು ತಪಸನ್ನು ಮಾಡತಕ್ಕ ಅಷ್ಟಾವಕ್ರ ಮಹರ್ಷಿಯ ಉಗ್ರ ತಪಸ್ಸನ್ನೂ ಅವನ ಮಹಾ ಮಹಿಮೆಯನ್ನೂ ನೋಡಿ ಬಣ್ಣಿಸಿದರು. ವಿನಯದಿಂದ ತಲೆ ತಗ್ಗಿಸಿ ಭಕ್ತಿಯಿಂದ ಆ ತಪೋನಿಧಿಗೆ ವಂದಿಸಿ ಮುಕ್ತ ಕಂಠದಿಂದ ಅವನನ್ನು ಹೊಗಳಿ ಹಾಡಿದರು. ಸ್ವರ್ಗ ಸುಂದರಿಯರ ಆ ಸ್ತುತಿಯನ್ನು ಕೇಳಿ ಸಂತುಷ್ಟನಾದ ಆ ಮುನಿಯ ಮುಖವು ಪ್ರೀತಿ ಪ್ರಸನ್ನವಾಗಲು ಅಪ್ಸರೆಯರು ಮತ್ತಷ್ಟು ಅವನನ್ನು ಹೊಗಳಿದರು. ಆದರಿಂದ ಅಷ್ಟಾವಕ್ರನು ಪರಮತುಷ್ಟನಾಗಿ ಆ ಅಪ್ಸರೆಯರಿಗೆ ''ನಾನು ಈ ನಿಮ್ಮ ಸ್ತೋತ್ರದಿಂದ ಪ್ರಸನ್ನನಾಗಿದ್ದೇನೆ. ನೀವು ಬೇಕಾದಂಥ ದುರ್ಲಭವಾದ ವರಗಳನ್ನು ಕೇಳಿದರೂ ನಾನು ಕೊಡುತ್ತೇನೆ. ನಿಮಗೇನು ಬೇಕು ಹೇಳಿರಿ, ಬೇಕಾದ ವರ ಕೇಳಿರಿ'' ಎಂದು ನುಡಿದನು. ಆಗ ರಂಭಾದಿ ವೇದ ಪ್ರಸಿದ್ಧರಾದ ಅಪ್ಸರೆಯರು ಇಂತು ಮಾತನಾಡಿದರು-

''ಮುನಿಪುಂಗವ, ನೀವು ಪ್ರಸನ್ನರಾದ ಬಳಿಕ ಯಾವದು ತಾನೇ ಅಲಭ್ಯ ! ತಮ್ಮ ಅನುಗ್ರಹದಿಂದ ನಮಗೆಲ್ಲವೂ ಯಥೇಚ್ಛವಾಗಿದೆ. ಈ ರಂಭಾದಿ ದೇವಗಣಿಕೆಯರ ಜೊತೆಗೆ ಬಂದ ಉಳಿದ ಅಪ್ಸರೆಯರು ಅಷ್ಟಾವಕ್ರ ಮುನಿಗೆ ನಮಿಸಿ ತಮ್ಮ ಇಷ್ಟಾರ್ಥವನ್ನು ಕೇಳಿಕೊಂಡರು - ಪೂಜ್ಯರೇ, ತಾವು ನಮ್ಮ ಮೇಲೆ ನಿಜವಾಗಿಯೂ ಪ್ರಸನ್ನರಾಗಿದ್ದರೆ ನಮಗೆ ಪುರುಷೋತ್ತಮನಾದ ಪತಿಯು ದೊರೆಯುವಂತೆ ಅನುಗ್ರಹಿಸಬೇಕು.'' ಅಷ್ಟಾವಕ್ರ ಮುನಿಯು ಸ್ವರ್ಗ ಸೀಮಂತಿನಿಯರ ಬೇಡಿಕೆಗೆ ತಥಾಸ್ತು ಎಂದು ಹೇಳಿ ನೀರಿನಿಂದ ಮೇಲಕ್ಕೆ ಎದ್ದನು. ಅವನ ದೇಹವು ಗಂಟುಗಂಟಾಗಿ ನಾಕೆಂಟು ಕಡೆಗೆ ಮಣಿದು ಬಾಗಿ ವಿದ್ರೂಪವಾಗಿದ್ದಿತು. ಆ ಅಂಕಡೊಂಕ ದೇಹದ ವಕ್ರಾಕಾರದ ಮುನಿಯನ್ನು ಕಂಡು ಆ ಅಮರಾಂಗನೆಯರಿಗೆ ಹುಚ್ಚು ನಗೆ ಬಂದಿತು. ಅವರು ಎಷ್ಟು ಬಿಗಿ ಹಿಡಿದರೂ ನಗೆಯನ್ನು ತಡೆಯಲಿಕ್ಕಾಗದೆ ನಗೆ ಬುಗ್ಗೆಯು ಪುಟಿದು ಹಾಸ್ಯ ಸ್ಫೋಟವಾಯಿತು.

ಆಗ ಕ್ರುದ್ಧನಾದ ಅಷ್ಟಾವಕ್ರ ಮುನಿಯು ಅವರಿಗೆ ಶಾಪವಿತ್ತನು - ನನ್ನ ದೇಹವು ಮಣಿದು ವಿಕೃತವಾಗಿದೆಯೆಂದು ತಿಳಿದು ನನ್ನನ್ನು ನೀವು ನಕ್ಕು ಅವಮಾನ ಮಾಡಿದ್ದೀರಿ. ಆದುದರಿಂದ ನಾನು ನಿಮಗೆ ಈಗ ಶಾಪವನ್ನು ಕೊಡುತ್ತೇನೆ. ನನ್ನ ಮೊದಲಿನ ವರದಂತೆ ನೀವೂ ಜಗತ್ಪೂಜ್ಯನಾದ ಪುರುಷೋತ್ತಮನನ್ನು ಪತಿಯನ್ನಾಗಿ ಪಡೆದರೂ ಕೊನೆಗೆ ಕಳ್ಳರ ಕೈಯಲ್ಲಿ ಸಿಕ್ಕು ಬೀಳುವಿರಿ. ಆಗ ಎಲ್ಲ ಅಮರಾಂಗನೆಯರು ಆ ಮುನಿಗೆ ನಮಸ್ಕಾರ ಮಾಡಿ ಪ್ರಾರ್ಥಿಸಿ ನಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಕೇಳಿಕೊಂಡರು. ಆಗ ಅಷ್ಟಾವಕ್ರ ಮುನಿಯು ಅವರಿಗೆ - ನೀವು ಕಳ್ಳರ ವಶರಾದ ಕೂಡಲೇ ಆ ಜನ್ಮವನ್ನು ನೀಗಿ ಮತ್ತೆ ಸ್ವರ್ಗ ಲೋಕಕ್ಕೆ ತೆರಳುವಿರಿ'' ಎಂದು ಉಪಶಾಪವನ್ನು ಇತ್ತನು. ಅಷ್ಟಾವಕ್ರ ಋಷಿಯ ಮೊದಲು ಕೊಟ್ಟ ವರದಂತೆ ಆ ದೇವಾಂಗನೆಯರೆಲ್ಲರೂ ಪುರುಷೋತ್ತಮನಾದ ಶ್ರೀ ಕೃಷ್ಣನ ಧರ್ಮ ಪತ್ನಿಯರಾಗಿ ಅನಂತರ ಆ ಮುನಿಯ ಶಾಪದಂತೆ ಈಗ ಕಳ್ಳರ ಕೈಗೆ ಸಿಕ್ಕು ಬಿದ್ದಿದ್ದಾರೆ. ಇನ್ನು ಅದೇ ಮುನಿಯ ಉಪಶಾಪದಂತೆ ಅವರೆಲ್ಲರೂ ಬೇಗ ಇಂದ್ರಲೋಕಕ್ಕೆ ಹೋಗುತ್ತಾರೆ. ಆದುದರಿಂದ ಪಾರ್ಥ ಅವರ ವಿಷಯದಲ್ಲಿ ನೀನು

ಏನೂ ಚಿಂತೆ ಮಾಡಬೇಡ. ಅಖಿಲನಾದ ಆ ಕೃಷ್ಣನೇ ಕ್ರಮವಾಗಿ ಎಲ್ಲರನ್ನೂ ಒಂದೊಂದು ವಿಧದಿಂದ ಉಪಸಂಹಾರ ಮಾಡುತ್ತಲಿದ್ದಾನೆ. ಆ ಕೃಷ್ಣನ ಭೃತ್ಯರೂ, ಭಕ್ತರೂ, ಬಂಧುಗಳೂ, ಮಿತ್ರರೂ, ಆದ ನಿಮ್ಮ ಉಪಸಂಹಾರ ಕಾಲವೂ ಕೂಡ ಸನ್ನಿಹಿತವಾಗಿದೆ. ಈಗಾಗಲೇ ನಿಮ್ಮ ಬಲ, ತೇಜಸ್ಸು, ಮಹಿಮೆ, ಪರಾಕ್ರಮಗಳನ್ನು ಆ ಭಗವಂತನು ಉಪಸಂಹಾರ ಮಾಡಿ ಬಿಟ್ಟಿದ್ದಾನೆ. ಆದುದರಿಂದಲೇ ನಿನಗೆ ಕ್ಷುದ್ರ ದನಗಾಹಿಗಳಿಂದ ಸೋಲುಂಟಾಗಿದೆ. ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ. ಎತ್ತರ ಏರಿದವನಿಗೆ ಬೀಳುವದು ತಪ್ಪಿದ್ದಲ್ಲ. ಸಂಯೋಗದ ಕೊನೆ ವಿಯೋಗವೇ ಸರಿ. ಸಂಗ್ರಹದ ಪರಿಣಾಮವೇ ವ್ಯಯ. ಇದನ್ನೆಲ್ಲ ಬುದ್ಧಿವಂತರಾದವರು ತಿಳಿದು ಭಾಗ್ಯ ಬಂದಾಗ ಹಿಗ್ಗುವದೂ ಇಲ್ಲ. ಅದು ಅಳಿದು ಹೋದಾಗ ಕುಗ್ಗುವದೂ ಇಲ್ಲ. ಇಂಥ ಆದರ್ಶ ಪುರುಷರ ನಡತೆಯನ್ನು ನೋಡಿ ಜನರು ತಮ್ಮನ್ನು ತಿದ್ದಿಕೊಳ್ಳುತ್ತಾರೆ. ನರಶ್ರೇಷ್ಠನಾದ ಅರ್ಜುನ, ನೀನು ಇದನ್ನೆಲ್ಲ ತಿಳಿದು ನಿನ್ನ ಸಹೋದರರೊಂದಿಗೆ ನಿನ್ನ ಎಲ್ಲ ರಾಜ್ಯೈಶ್ವರ್ಯವನ್ನು, ಬಿಟ್ಟು ಅರಣ್ಯಕ್ಕೆ ನಡೆಯಿರಿ. ಶ್ರೀ ವೇದವ್ಯಾಸದೇವರ ಈ ಧರ್ಮೋಪದೇಶವನ್ನು ಕೇಳಿ ತಮ್ಮ ಮುಂದಿನ ಕರ್ತವ್ಯದ ನಿಶ್ಚಯವನ್ನು ಮಾಡಿಕೊಂಡ ಅರ್ಜುನನು ಹಸ್ತಿನಾವತಿ ಪಟ್ಟಣಕ್ಕೆ ಬಂದು ಧರ್ಮರಾಜನಿಗೂ ಶ್ರೀ ಭೀಮಸೇನ ದೇವರಿಗೂ ನಕುಲ ಸಹದೇವರಿಗೂ ಶ್ರೀ ಕೃಷ್ಣನ ನಿರ್ಯಾಣದ ಸಮಾಚಾರವನ್ನು ತಿಳಿಸಿದನು. ಮತ್ತು ದಾರಿಯಲ್ಲಿ ದರ್ಶನವಿತ್ತ ಭಗವಾನ್ ಬಾದರಾಯಣರ ಸಂದೇಶವನ್ನೂ ಹೇಳಿದನು. ಪಂಚಪಾಂಡವರು ಅರ್ಜುನನು ತಿಳಿಸಿದ ಮಾತುಗಳನ್ನೆಲ್ಲ ಕೇಳಿ ವ್ಯಾಸವಾಕ್ಯವೆಂದರೆ ನಮಗೆ ವೇದ ವಾಕ್ಯ ಎಂದು ತಿಳಿದು ತಮ್ಮ ಸಾಮ್ರಾಜ್ಯ ಸಿಂಹಾಸನದಲ್ಲಿ ಅಭಿಮನ್ಯು ಕುಮಾರನಾದ ಪರೀಕ್ಷಿತರಾಜನನ್ನು ಕೂಡಿಸಿ ಪಟ್ಟಾಭಿಷೇಕ ಮಾಡಿ ಮನೆತನದ ಹಾಗೂ ಸಾಮ್ರಾಜ್ಯದ ಭಾರವನ್ನು ಅವನಿಗೆ ಒಪ್ಪಿಸಿ ದ್ರೌಪದೀ ಸಹಿತರಾಗಿ ಅರಣ್ಯಕ್ಕೆ ತೆರಳಿದರು.

**ಮೈತ್ರೇಯ** - ಯದು ವಂಶದಲ್ಲಿ ಹುಟ್ಟಿದ ವಾಸುದೇವ ಭಗವಂತನ ವಿವಿಧ ವ್ಯಾಪಾರಗಳನ್ನೂ ಚಾರುಚರಿತ್ರವನ್ನೂ ಈವರಿಗೆ ನಾನು ನಿನಗೆ ವಿಸ್ತಾರವಾಗಿ ತಿಳಿಸಿದ್ದೇನೆ. ಪರಮಪಾವನನಾದ ಈ ಶ್ರೀ ಕೃಷ್ಣ ಕತೆಯನ್ನು ಭಕ್ತಿಯಿಂದ ಕೇಳಿದವರು ತಮ್ಮ ಪಾಪಗಳನ್ನೆಲ್ಲ ಕಳೆದುಕೊಂಡು ವಿಷ್ಣುವಿನ ಲೋಕಕ್ಕೆ ಹೋಗುತ್ತಾರೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಪಂಚಮಾಂಶದ ಮೂವತ್ತೆಂಟನೇ ಅಧ್ಯಾಯ ಸಂಪೂರ್ಣ*

**ಇತಿ**

**ಪರಾಶರ ಮುನಿರಚಿತ ಮಹಾಪುರಾಣವಾದ**

**ವಿಷ್ಣು ಪುರಾಣದ ಐದನೇ ಅಂಶವು ಸಮಾಪ್ತವಾದುದು**

**॥ಓಂ ತತ್ ಸತ್॥**

# ಆರನೇ ಅಂಶ

## ಕಲಿಧರ್ಮ ನಿರೂಪಣ

ಅಧ್ಯಾಯ - ೧

**"ಕಲಿಯ ಧರ್ಮ ಜನರ ಕರ್ಮ ನೀತಿಗೆಟ್ಟ ನಡೆನುಡಿ**
**ಸ್ವೈರ ಸ್ವಾರ್ಥ ಹಸಿವು ಕಾಮ ತೃಪ್ತಿಯೊಂದೆ ಗುರಿ ನಡಿ" ॥**

**ಮೈತ್ರೇಯ** - ಪೂಜ್ಯರೇ ತಾವು ಈವರೆಗೆ ಸೃಷ್ಟಿಯ ರಚನೆ ವಂಶ ಪರಂಪರೆ ಹಾಗೂ ಮನ್ವಂತರ ಸ್ಥಿತಿಗತಿಗಳನ್ನೂ ರಾಜ, ಋಷಿ ಹಾಗೂ ಶ್ರೀ ಹರಿಯ ಚರಿತ್ರೆಗಳನ್ನೂ ವಿಸ್ತಾರಪೂರ್ವಕವಾಗಿ ನಿರೂಪಿಸಿದಿರಿ. ಈಗ ಈ ಪ್ರಪಂಚದ ಉಪಸಂಹಾರವನ್ನು ತಮ್ಮ ಮುಖದಿಂದ ಕೇಳಬೇಕೆಂದು ಬಯಸಿದ್ದೇನೆ. ಅನುಗ್ರಹಿಸಬೇಕು.

**ಪರಾಶರ** - ಪ್ರಾಕೃತ ಪ್ರಳಯ ಹಾಗೂ ಕಲ್ಪಾಂತದಲ್ಲಿ ನಡೆಯುವ ಜಗದ ಉಪಸಂಹಾರದ ಸಮಾಚಾರವನ್ನು ಹೇಳುತ್ತೇನೆ ಕೇಳು. ಮನುಷ್ಯರ ಒಂದು ತಿಂಗಳವು ಪಿತೃಗಳ ಒಂದು ದಿನವಾಗುತ್ತದೆ. ಮನುಷ್ಯರ ಒಂದು ವರ್ಷವು ದೇವ ಮಾನದ ಒಂದು ದಿನವಾಗುತ್ತದೆ. ಎರಡು ಸಾವಿರ ಚತುರ್ಯುಗಗಳೂ ಬ್ರಹ್ಮದೇವರ ಒಂದು ಹಗಲು ರಾತ್ರಿಯಾಗುತ್ತದೆ. ಸತ್ಯಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಈ ನಾಲ್ಕು ಯುಗಗಳು ಕೂಡಿ ಹನ್ನೆರಡು ಸಾವಿರ ದಿವ್ಯ ವರ್ಷಗಳು ಆಗುತ್ತವೆ. ಪ್ರತಿಯೊಂದು ಮನ್ವಂತರದ ಮೊದಲಿನ ಕೃತಯುಗ ಕೊನೆಯ ಕಲಿಯುಗ ಇವೆರಡನ್ನು ಬಿಟ್ಟು ಉಳಿದೆಲ್ಲ ಚತುರ್ಯುಗಗಳೂ ಸಮಾನವಾಗಿರುತ್ತವೆ. ಮನ್ವಂತರ ಪ್ರಾರಂಭದ ಕೃತಯುಗದಲ್ಲಿ ಬ್ರಹ್ಮದೇವರು ಪ್ರಪಂಚವನ್ನೆಲ್ಲ ಸೃಷ್ಟಿಮಾಡಿದಂತೆ ಮನ್ವಂತರ ಕೊನೆಯ ಕಲಿಯುಗದಲ್ಲಿ ಉಪಸಂಹಾರವೂ ನಡೆಯುತ್ತದೆ. ಚತುಷ್ಪಾದಾತ್ಮಕವಾದ ಧರ್ಮವು ಕಲಿಯುಗದಲ್ಲಿ ಸಂಪೂರ್ಣ ಲೋಪವನ್ನು ಹೊಂದುತ್ತದೆ. ಈ ಕಲಿಯುಗದಲ್ಲಿ ನಡೆಯುವ ಧರ್ಮವಿಪ್ಲವದ ಕ್ರಮವನ್ನು ತಿಳಿಸುತ್ತೇನೆ ಕೇಳು.

**ಅರಕ್ಷಿತಾರೋ ಹರ್ತಾರಃ ಶುಲ್ಕವ್ಯಾಜೇನ ಪಾರ್ಥಿವಾಃ ।**
**ಹಾರಿಣೋ ಜನವಿತ್ತಾನಾಂ ಸಂಪ್ರಾಪ್ತೇ ತು ಕಲೌ ಯುಗೇ ॥**

ಕಲಿಯುಗವು ಬಂದ ಬಳಿಕ ರಾಜರು ಪ್ರಜೆಗಳನ್ನು ರಕ್ಷಿಸುವ ಹೊಣೆಗಾರಿಗೆಯನ್ನು ಹೊರದೆ, ಕರದ ನೆವದಿಂದ ಜನರಿಂದ ದುಡ್ಡನ್ನು ಕಿತ್ತಿಕೊಳ್ಳುತ್ತಾರೆ. ಆನೆ ಕುದುರೆಗಳನ್ನು ಕಟ್ಟಿದವನೇ ರಾಜನಾಗುವನು. ಬಲವಿಲ್ಲದವರೆಲ್ಲರೂ ಸೇವಕರಾಗುವರು. ವೈಶ್ಯರು ತಮ್ಮ ಕೃಷಿ ಬೇಸಾಯ ವ್ಯಾಪಾರಾದಿಗಳನ್ನು ಬಿಟ್ಟು ಕಂಬಾರ, ಕುಂಬಾರರಾಗಿ ಶೂದ್ರವೃತ್ತಿಯಿಂದ ಉಪಜೀವಿಸುವರು. ಶೂದ್ರರು ಸನ್ಯಾಸಿಗಳ ವೇಷವನ್ನು ತೊಟ್ಟು ಭಿಕ್ಷೆಯನ್ನು ಎತ್ತುತ್ತ ಪಾಖಂಡ ಮತವನ್ನು ಪ್ರಚಾರಮಾಡಿ ಜಗತ್ತಿನಲ್ಲಿ ಆದರ ಸತ್ಕಾರಗಳನ್ನು ಹೊಂದುವರು. ದೇಶದಲ್ಲಿಯ ಜನರು ಬರಗಾಲ ಹಾಗೂ ಸರಕಾರದ ಕರ ಭಾರಗಳಿಂದ ಜರ್ಜರಿತರಾಗಿ ಗೋಧಿ, ಭತ್ತ, ನವಣೆಗಳನ್ನು ಬೆಳೆಯುವ ಸಂಪನ್ನ

ದೇಶಗಳಿಗೆ ವಲಸೆ ಹೋಗುವರು. ವೇದ ಮಾರ್ಗವು ಅಡಗಿ ಜಗತ್ತಿನಲ್ಲೆಲ್ಲ ನಾಸ್ತಿಕ ಮತವು ಹಬ್ಬಿ ಜನರ ಆಯುಷ್ಯವು ಕಡಿಮೆಯಾಗಿ, ಅಧರ್ಮ ಅಭಿವೃದ್ಧಿಯಿಂದ ಎಲ್ಲರೂ ಅಲ್ಪಾಯುಷಿಗಳಾಗುವರು. ಶಾಸ್ತ್ರ ನಿಷಿದ್ಧವಾದ ಘೋರ ತಪಸ್ಸು ಮತ್ತು ವಾಮ ಮಾರ್ಗ ಉಪಾಸನೆಗಳಿಂದಲೂ ಮತ್ತು ರಾಜಕೃತ ದೋಷಗಳಿಂದಲೂ ಮಕ್ಕಳ ಮರಣದ ಪ್ರಮಾಣವು ಹೆಚ್ಚಾಗುವದು. ಹನ್ನೆರಡು ವರ್ಷಕ್ಕೆ ಜನರ ಕೂದಲು ನೆರೆತು ಹೋಗುವವು. ಸರಾಸರಿ ಆಯುರ್ಮಾನವು ೨೦ ವರ್ಷಕ್ಕೆ ಇಳಿಯುವದು. ಎಲ್ಲಿ ನೋಡಿದರೂ ಜನರು ಅಲ್ಪ ಬುದ್ಧಿಗಳೂ, ಕ್ಷುದ್ರ ವಿಚಾರಿಗಳೂ ನಿಜವಾದ ಆಚರಣವಿಲ್ಲದೆ ಜಾತಿ ಮತಗಳ ಬರೀ ಚಿನ್ಹವನ್ನು ಧಾರಣ ಮಾಡುವವರೂ, ದುಷ್ಟ ಮನಸ್ಸಿನವರೂ ಆಗಿರುತ್ತಾರೆ. ಯಾವ ಯಾವ ಕಾಲದಲ್ಲಿ ಧರ್ಮದ ಹಾನಿಯಾಗಿ ಅಧರ್ಮದ ಏಳಿಗೆ ಯಾಗುವದೋ ಆಗೆಲ್ಲ ಕಲಿ ವೃದ್ಧಿಯಾಯಿತೆಂದು ತಿಳಿಯಬೇಕು. ಧಾರ್ಮಿಕ ಜನರು ಧರ್ಮಕಾರ್ಯವನ್ನು ಪ್ರಾರಂಭಿಸಿದಾಗ ಅನೇಕ ವಿಘ್ನಗಳು ಬಂದು ಕಾರ್ಯವು ಪೂರ್ತಿಯಾಗದೆ ಅದನ್ನು ಪ್ರಾರಂಭಿಸಿದವರಿಗೂ ಕೂಡಾ ಹಾನಿ ಹ್ರಾಸಗಳು ಉಂಟಾದರೆ ಆಗ ಕಲಿ ಪ್ರಾಬಲ್ಯವಾಗಿದೆ ಎಂದು ತಿಳಿಯಬೇಕು.

ಇದರಂತೆ ಶ್ರೀ ಹರಿಯನ್ನು ಉದ್ದೇಶಿಸಿ ಯಜ್ಞಯಾಗಗಳ ಆಚರಣೆಯು ನಿಂತು ಹೋದಾಗ, ವೇದಶಾಸ್ತ್ರಗಳಲ್ಲಿ ಶ್ರದ್ಧೆಯು ಕಡಿಮೆಯಾಗಿ ನಾಸ್ತಿಕ ಮತದಲ್ಲಿ ಜನರಿಗೆ ಶ್ರದ್ಧಾ, ಆದರಗಳು ಹುಟ್ಟಿ ಅದನ್ನು ಆಚರಿಸಿದಾಗ, ಜಗದೊಡೆಯನಾದ ಸರ್ವ ಸೃಷ್ಟಾರನಾದ ಶ್ರೀ ಹರಿಯಿಂದ ಜನರೆಲ್ಲ ವಿಮುಖರಾದಾಗ, ಕಲಿಯ ಪ್ರಭಾವವು ಬೆಳೆದಿದೆ ಎಂದು ಭಾವಿಸಬೇಕು.

ಪಾಖಂಡ ಮತಗಳ ಪ್ರಭಾವಕ್ಕೆ ಒಳಪಟ್ಟು ಮಾನವರು "ದೇವರು ಎಲ್ಲಿ ಇದ್ದಾನೆ ? ಬ್ರಾಹ್ಮಣರಿಂದ ಏನು ಪ್ರಯೋಜನ ? ವೇದಗಳು ಪ್ರಮಾಣವೇಕೆ ? ನೀರಿನಲ್ಲಿ ಮುಳುಗಿದರೆ ಮಡಿ ಏಕೆ ? ಇಲ್ಲದಿದ್ದರೆ ಮೈಲಿಗೆ ಏಕೆ ? ಎಂದು ಮಾತನಾಡುತ್ತ ಸನಾತನ ಧರ್ಮವನ್ನು ಉಪಹಾಸ ಮಾಡಿ ಧರ್ಮ ವಿಮುಖರಾದರೆ ಅದು ಕಲಿಕಾಲದ ಪ್ರಭಾವವೆಂದು ತಿಳಿಯಬೇಕು. ಕಲಿಯ ಪ್ರಬಲನಾದಾಗ ಜನರಲ್ಲಿ ಪಾಷಂಡ ಮತದ ಪ್ರಭಾವವು ಹೆಚ್ಚಿ, ಈ ತರಹದ ನಾಸ್ತಿಕ ವಿಚಾರಗಳು ಹರಡಿ, ಮಳೆ ಬೆಳೆಗಳು ಕಡಿಮೆಯಾಗುವವು. ಬೆಳೆದ ಹಣ್ಣು ಕಾಳುಗಳಲ್ಲಿ ಸತ್ವವಿಲ್ಲದೆ ರುಚಿ ಇಲ್ಲದೆ ವಸ್ತುಗಳೆಲ್ಲವೂ ನೀರಸವಾಗಿ ಬಿಡುವವು. ಕಲಿಯುಗದಲ್ಲಿ ಬಟ್ಟೆಗಳೆಲ್ಲವೂ ಸಣಬು ಅಥವಾ ನಾರಿನಿಂದ ನೇಯಲ್ಪಡುವವು. ಗಿಡಗಳೆಲ್ಲವೂ . ಬಹುಶಃ ಬನ್ನಿಗಿಡದಷ್ಟು ಗಿಡ್ಡಾಗುವವು. ಎಲ್ಲ ವರ್ಣದವರೂ ಶೂದ್ರಪ್ರಾಯರಾಗುವರು. ಧಾನ್ಯಗಳೆಲ್ಲವೂ ಸಾಸಿವೆಯಂತೆ ಬಹಳ ಸಣ್ಣದಾಗುವವು. ಹಾಲೆಂದರೆ ಆಡಿನ ಹಾಲೇ ಆಗ ಲಭ್ಯವಾಗುವದು. ಜನರು ಮೈಗೆ ಗಂಧ ಭಸ್ಮಾದಿ ಲೇಪನಗಳನ್ನು ಬಿಟ್ಟು ಬರೀ ಗಂಧೆಣ್ಣೆ, ಅತ್ತರು ಬಡಿದುಕೊಂಡು ತಿರುಗಾಡುವರು. ಕಲಿಯುಗದ ಜನರಿಗೆ ಅತ್ತೆ ಮಾವಂದಿರೇ ಪೂಜ್ಯಗುರುಗಳು. ಹೆಂಡತಿಯ ಬಳಗವೇ ಮಿತ್ರವರ್ಗ. ಮಡದಿಯೇ ಸರ್ವಸ್ವ. ತಮಗೆ ಹೆಣ್ಣು ಕೊಟ್ಟ ಮಾವನ ಅನುಸರಣ ಮಾಡುತ್ತ 'ಎಲ್ಲಿಯ ತಾಯಿ ? ಎಲ್ಲಿಯ ತಂದೆ ?

ಎಂದು ಅನ್ನುತ್ತ ತನ್ನ ಸ್ವಂತ ವಂಶದ ಬಳಗವನ್ನೆಲ್ಲ ಮರೆತು ಬಿಡುವರು. ಇಂದ್ರಿಯ ಚಾಪಲ್ಯ, ಮನೋದೋಷ, ಜಿಹ್ವಾ ಚಾಪಲ್ಯ ಮುಂತಾದ ಅನೇಕ ದೋಷಗಳಿಂದ ಜನರು ಪ್ರತಿದಿನವೂ ಪಾಪ ಕೃತ್ಯಗಳನ್ನು ಮಾಡುವರು. ಕಲಿಯುಗದ ಜನರಿಗೆ ನಾಚಿಕೆಯಿಲ್ಲ. ಮಡಿ ಮೈಲಿಗೆ ಇಲ್ಲ. ಸತ್ವವಿಲ್ಲ. ಯಾವಾಗಲೂ ದುಃಖ, ಒದ್ದಾಟ, ಗೋಳಾಟ ವೇದಶಾಸ್ತ್ರಗಳನ್ನು ಯಾರೂ ಓದುವದೇ ಇಲ್ಲ. ಹೋಮ ಹವನಗಳಂತೂ ನೋಡಲಿಕ್ಕೂ ಕೂಡ ಸಿಕ್ಕುವದಿಲ್ಲ. ಧರ್ಮವು ವಿರಳ. ವಿರಳವಾಗಿ ಎಲ್ಲಿಯೋ ಕೆಲವುಕಡೆ ಮಾತ್ರ ಉಳಿದುಕೊಂಡಿರುತ್ತದೆ. ಇಂಥ ಕಲಿ ಕಾಲದಲ್ಲಿ ಅತ್ಯಲ್ಪ ಧರ್ಮವನ್ನು ಮಾಡಿದರೂ ಕೂಡ ಕೃತಯುಗದಲ್ಲಿ ಮಹಾ ತಪಸ್ಸಿನಿಂದ ದೊರಕಬೇಕಾದ ಪುಣ್ಯ ಫಲಗಳನ್ನು ಅನಾಯಾಸವಾಗಿ ಗಳಿಸಬಹುದು. ಕಲಿಯುಗದಲ್ಲಿ ವರ್ಣವಿಲ್ಲ, ಧರ್ಮವಿಲ್ಲ, ಆಶ್ರಮವಿಲ್ಲ, ಆಚಾರವಿಲ್ಲ. ಜನರಿಗೆ ಧರ್ಮದಲ್ಲಿ ಪ್ರವೃತ್ತಿಯೇ ಇರುವದಿಲ್ಲ. ವಿಧಿಪೂರ್ವಕವಾದ ವಿವಾಹಗಳೂ, ಜರಗುವದಿಲ್ಲ. ಗುರು ಶಿಷ್ಯರ ಭಾವವು ಅಳಿದು ಹೋಗುವದು. ದಾಂಪತ್ಯ ಪದ್ಧತಿಯು ನಶಿಸಿ ಹೋಗುವದು. ಯಾವ ಕುಲದಲ್ಲಿಯ ಕನ್ಯೆಯಾದರೂ ಸರಿ, ರೂಪ ನೋಡಿ ಮದುವೆಯಾಗುವರು.

ಬಾಯಿಂದ ಹೊರಟದ್ದೇ ಆಗ ಶಾಸ್ತ್ರವೆನಿಸುವದು. ಮನಬಂದಂತೆ ಆಹಾರ, ನಿಯಂತ್ರಣವಿಲ್ಲದ ವಿಹಾರ, ಮನಬಂದಂತೆ ವೆಚ್ಚ ಮಾಡಿ ಅದೇ ಧರ್ಮ ಎಂದು ಮೆರೆಸುವರು. ತುಸು ಐಶ್ವರ್ಯ ಬಂದರೂ ಸೊಕ್ಕು ಬಹಳ ಬಂದು ಬಿಡುವದು. ಹೆಣ್ಣು ಮಕ್ಕಳಿಗೆ ತಮ್ಮ ಬರೀ ಕೂದಲುಗಳಿಂದಲೇ ರೂಪ, ಮದ, ಬರುವದು. ಬಗೆ ಬಗೆಯ ಕೇಶ ಬಂಧಗಳಿಂದ ಒನಪು ವೈಯಾರ ಮಾಡಿ ಜನರನ್ನು ಮುಗ್ಧಗೊಳಿಸುವರು. ಬಂಗಾರ ಮುತ್ತು ರತ್ನಗಳು ಇಲ್ಲವಾಗಿ ದಟ್ಟ, ದಾರಿದ್ರ್ಯ ಬಂದಾಗ ಸ್ತ್ರೀಯರು ಬರೀ ತಮ್ಮ ಕೇಶಾಲಂಕಾರ ಕೇಶರಚನಾ ವಿಶೇಷಗಳಿಂದಲೇ ಶೃಂಗಾರ ಮಾಡಿಕೊಳ್ಳುವರು.

ಹಣವಿಲ್ಲದ ಗಂಡನನ್ನು ಬಿಟ್ಟು ಬಿಡುವರು. ವರನನ್ನು ವರಿಸುವಾಗ ದುಡ್ಡೊಂದನ್ನೇ ನೋಡಿ ನಾರಿಯರು ಮದುವೆಯಾಗುವರು. ಹಣ ಕೊಡುವವನೇ ಜನರಿಗೆಲ್ಲ ನಾಯಕನೆನಿಸುವನು. ಕುಲ, ದೊಡ್ಡ ಗುಣಗಳು, ಒಡೆತನಕ್ಕೆ ಹೇತುವೆನಿಸುವದಿಲ್ಲ. ಮನೆ ಮಾರುಗಳನ್ನು ಹೆಚ್ಚಿಸಿ ಬಾಡಿಗೆ ಕೊಡಲಿಕ್ಕಾಗಿಯೇ ದ್ರವ್ಯವನ್ನು ವೆಚ್ಚ ಮಾಡುವರು. ಹಣಗಳಿಸುವದರಲ್ಲಿಯೇ ಬುದ್ಧಿಯ ಉಪಯೋಗ. ಗಳಿಸಿದ ಹಣಕ್ಕೆಲ್ಲ ಉಪಭೋಗದಲ್ಲಿಯೇ ಪರ್ಯವಸಾನ. ದಾನ ಧರ್ಮದ ಕಡೆಗೆ ಗಮನವೇ ಹರಿಯುವದಿಲ್ಲ. ನಾರಿಯರಿಗೆ ಅಂದಚಂದದ ವಸ್ತು, ಒಡವೆ, ವಿಲಾಸ ಸಾಮಗ್ರಿಗಳನ್ನು ದೊರಕಿಸುವ ಹಂಬಲ. ಪುರುಷರಿಗೆ ಅನ್ಯಾಯದಿಂದ ಹಣಗಳಿಸುವ ಹವ್ಯಾಸ. ಆಪ್ತಮಿತ್ರರು ಹೇಳಿದರೂ ಸ್ವಾರ್ಥ ಲಾಭವಿಲ್ಲದ ಪುಣ್ಯ ಕಾರ್ಯಕ್ಕಾಗಿ ಒಂದಾಣೆ ನಯೆಪೈಸೆಯನ್ನು ಕೂಡ ವೆಚ್ಚಮಾಡಲು ಯಾರೂ ಸಿದ್ಧರಾಗುವದಿಲ್ಲ. ಹಾಲು ಕೊಡುವ ಹಸುಗಳಲ್ಲಿ ಮಾತ್ರ ಗೋ ಎಂಬ ಪೂಜ್ಯ ಬುದ್ಧಿ. ಬರಗಾಲವು ಮೇಲಿಂದ ಮೇಲೆ ತಲೆದೋರುವದು. ಜನರು ಪ್ರತಿವರ್ಷವೂ ಕಾತರತೆಯಿಂದ ಮುಗಿಲು ಕಡೆ ನೋಡುತ್ತ ಮಳೆಯನ್ನು ನಿರೀಕ್ಷಿಸಬೇಕಾಗುವದು. ಜನರಿಗೆ ಹೊಟ್ಟೆತುಂಬ ಆಹಾರ ದೊರಕದೇ

ಬರೀ ಗಡ್ಡೆ-ಗೆಣಸು ತಿಂದಿರುವ ಪ್ರಸಂಗ ಬರುವದು. ಅನಾವೃಷ್ಟಿ, ಅತಿವೃಷ್ಟಿ ರೋಗ ಹಸಿವುಗಳಿಂದ ದುಃಖಿತರಾದ ಜನರು ಆತ್ಮಹತ್ಯೆಗೆ ಪ್ರವರ್ತಿಸುವರು.

ಕಲಿಯುಗದ ಜನರು ನಿತ್ಯವೂ ಸ್ನಾನ ಕೂಡ ಮಾಡದೇ ಬೆಳಿಗ್ಗೆ ಎದ್ದಕೂಡಲೇ ಹಾಗೇ ತಿನ್ನುವರು. ಸಂಧ್ಯಾವಂದನೆ ಇಲ್ಲ. ಅಗ್ನಿ ಕಾರ್ಯವಿಲ್ಲ. ದೇವರಪೂಜೆ ಇಲ್ಲ. ಶ್ರಾದ್ಧವನ್ನು ಕೂಡ ಜನರು ಮಾಡುವದಿಲ್ಲ. ಎಲ್ಲರೂ ಲಂಪಟರು ಲೋಲುಪರು. ಕಲಿಯುಗದ ಹೆಣ್ಣು ಮಕ್ಕಳು ಕುಳ್ಳದೇಹ, ಊಟ ಬಹಳ, ಅಲ್ಪ ಭಾಗ್ಯ, ಬಹು ಪ್ರಜೆವುಳ್ಳವರಾಗುವರು. ಸರ್ವದಾ ತಲೆ ಕೆರೆಯುವದು, ಹೇನು ಒರೆಯುವದು ಅವರ ಕೆಲಸವಾಗುವದು. ಗುರುಹಿರಿಯರ ಮಾತನ್ನು ಧಿಕ್ಕರಿಸಿ ಚಿಲ್ಲರೆ ಮನಸ್ಸಿನಿಂದ ಸ್ವಾರ್ಥಪರಾಯಣರಾಗಿ ಬಿರುಸು ಮಾತುಗಳನ್ನಾಡುತ್ತ ಶಾರೀರ ಶುದ್ಧಿರಹಿತರಾಗಿ ದುಷ್ಟ ಪುರುಷರನ್ನು ಕಾಮಿಸುವರು. ಕುಲಸ್ತ್ರೀಯರೂ ಕೂಡ ದಾರಿ ಬಿಟ್ಟು ಬೀದಿಗಿಳಿಯುವರು.

ಬ್ರಹ್ಮಚಾರಿಗಳು ವೈದಿಕ ಆಚಾರ ನಿಯಮಗಳಿಲ್ಲದೇ ಮನ ಬಂದ ಅನರ್ಥಕಾರಿಯಾದ ವಿದ್ಯೆಯನ್ನು ಕಲಿಯುವರು. ಗೃಹಸ್ಥರು ದಾನವಿಲ್ಲ ಧರ್ಮವಿಲ್ಲದೇ ಸ್ವಾರ್ಥಿಗಳಾಗಿ ತಮ್ಮ ಮಡದಿ ಮಕ್ಕಳ ಪೋಷಣೈಕರತರಾಗುವರು. ವಾನಪ್ರಸ್ಥಾಶ್ರಮಿಗಳೂ, ಸನ್ಯಾಸಿಗಳೂ ಕಂದಮೂಲ ಫಲಗಳನ್ನು ತಿನ್ನುವದನ್ನು ಬಿಟ್ಟು ಸಂಸಾರಿಗಳಂತೆ ಮನೆಯಲ್ಲಿ ಕುದಿಸಿ ಬೇಯಿಸಿದ ಮೃಷ್ಟಾನ್ನ ಪಕ್ವಾನ್ನಗಳನ್ನು ಯಥೇಚ್ಛವಾಗಿ ತಿನ್ನುವರು. ಗೃಹಸ್ಥರಿಗಿಂತ ಹೆಚ್ಚಿಗೆ ಬಂಧು ಬಳಗ ಸಂಸಾರ ಲಂಪಟ ಹಚ್ಚಿಕೊಂಡು ಸನ್ಯಾಸಿಗಳು ದ್ರವ್ಯ ಸಂಗ್ರಹಕ್ಕಾಗಿಯೇ ಸಂಚಾರವನ್ನು ಕೈಕೊಳ್ಳುವರು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಆರನೇ ಅಂಶದ ಒಂದನೇ ಅಧ್ಯಾಯ ಸಂಪೂರ್ಣ*



## ಅಧ್ಯಾಯ - ೨

**'ಅಲ್ಪ ಶ್ರಮದಿ ಭೂರಿ ಫಲವ ಪಡೆವರಾರು ? ಎಂದರು**
**ಮುನಿಗಳಲ್ಲಿ ವಾದವಾಗಿ ವ್ಯಾಸರಲ್ಲಿ ಬಂದರು.**
**ಬದರಿಯಲ್ಲಿ ಅಲಕನಂದೆಯಲ್ಲಿ ವ್ಯಾಸ ಮಿಂದರು**
**ಮುಳುಗಿ ಎದ್ದು 'ಧನ್ಯ ಶೂದ್ರ, ನಾರಿ ಕಲಿಯು, ಎಂದರು**
**ಹೇಗೆ ? ಎಂತು ? ನುಡಿಯೆ ಮುನಿಗಳೆಲ್ಲ ನಮಿಸಿ ನಿಂದರು.**

**ಪರಾಶರ** - ಹಿಂದೊಮ್ಮೆ ಮುನಿಗಳ ಸಭೆಯಲ್ಲಿ ''ಅತ್ಯಲ್ಪ ಧರ್ಮವು ಯಾವ ಕಾಲದಲ್ಲಿ ಮಹಾ ಫಲವನ್ನು ಕೊಡುತ್ತದೆ ? ಅದನ್ನು ಆಯಾಸವಿಲ್ಲದೆ ಯಾರು ಮಾಡಬಲ್ಲರು ?'' ಎಂಬ ವಿಷಯದಲ್ಲಿ ವಾದವು ನಡೆಯಿತು. ಈ ವಿಷಯದಲ್ಲಿ ತಮಗೆ ಬಂದ ಸಂದೇಹವನ್ನು ಪರಿಹರಿಸಿಕೊಳ್ಳಬೇಕೆಂದು ಮುನಿ ಪುಂಗವರೆಲ್ಲರೂ ಶ್ರೀ ವೇದವ್ಯಾಸ ದೇವರ ಬಳಿಗೆ ಹೋದರು. ಆಗ ವ್ಯಾಸರು ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದರು. ನಡುಮಟ ನೀರಿನಲ್ಲಿ ನಿಂತು ಅವಗಾಹನವನ್ನು ಮಾಡುತ್ತಿರುವ ವ್ಯಾಸರನ್ನು ನೋಡಿ ಅವರ ಸ್ನಾನಾನ್ಹಿಕಗಳು ಮುಗಿಯುವದನ್ನೇ ಪ್ರತೀಕ್ಷಿಸುತ್ತ ಅಲ್ಲಿಯೇ ಗಂಗೆಯ ದಂಡೆಯ ಗಿಡ ಗುಂಪಿನ ನೆರಳಿನಲ್ಲಿ ನಿಂತುಕೊಂಡರು ಎಲ್ಲ ಮುನಿಗಳು. ಗಂಗೆಯ ನೀರಿನಲ್ಲಿ ಮುಳುಗಿದ ವ್ಯಾಸರು ಒಮ್ಮೆಲೇ ನೀರಿನಲ್ಲಿ ಮುಳುಗಿದ ತಮ್ಮ ತಲೆಯನ್ನು ಮೇಲೆತ್ತಿ ''ಶೂದ್ರಸು ಸುದೈವಿ. ಕಲಿಯು ಶ್ರೇಷ್ಠ'' ಎಂದು ಉಚ್ಚರಿಸಿದರು. ಋಷಿಗಳೆಲ್ಲರೂ ಆಶ್ಚರ್ಯ ಚಕಿತರಾಗಿ 'ಇದೇನು'! ಎಂದು ವ್ಯಾಸರ ಕಡೆಗೆ ನೋಡಿದರು. ಆಗ ವ್ಯಾಸರು ಮತ್ತೊಮ್ಮೆ ನೀರಿನಿಂದ ತಮ್ಮ ಮುಖವನ್ನು ಮೇಲಕ್ಕೆ ಎತ್ತಿ ''ಸ್ತ್ರೀಯರು ಧನ್ಯರು, ಮತ್ತು ಸುದೈವಿಗಳು. ಅವರಿಗಿಂತ ಧನ್ಯರು ಯಾರಿದ್ದಾರೆ?'' ಎಂದು ನುಡಿದರು.

ಅನಂತರ ವೇದವ್ಯಾಸರು ತಮ್ಮ ಸ್ನಾನವನ್ನು ಮುಗಿಸಿ ತಮ್ಮ ಆನ್ಹಿಕವನ್ನು ಪೂರೈಸಿ ಬಂದ ಬಳಿಕ ಎಲ್ಲ ಋಷಿಗಳು ಅವರಿಗೆ ಹೋಗಿ ಭಕ್ತಿಯಿಂದ ಸಾಷ್ಟಾಂಗ ವಂದನೆ ಮಾಡಿದರು. ಆಗ ವ್ಯಾಸರು ಅವರೆಲ್ಲರನ್ನೂ ಆಸನದ ಮೇಲೆ ಕೂಡಿಸಿ ''ನೀವು ಇಲ್ಲಿ ಬಂದ ಕಾರಣವೇನು ?'' ಎಂದು ಕೇಳಿದರು. ಆಗ ಋಷಿಗಳು ವಿನಯದಿಂದ ವ್ಯಾಸರಿಗೆ ಸ್ವಾಮಿ, ನಾವು ನಮ್ಮ ಒಂದು ಸಂಶಯವನ್ನು ಪರಿಹರಿಸಿಗೊಳ್ಳಬೇಕೆಂದು ನಿಮ್ಮ ಕಡೆಗೆ ಬಂದಿದ್ದೆವು. ಆದರೆ ಈಗ ಆ ಸಂಶಯವು ಹಾಗಿರಲಿ, ಅದಕ್ಕಿಂತ ಮೊದಲು ತಾವು ಸ್ನಾನ ಮಾಡುವಾಗ ''ಸ್ತ್ರೀಯರು ಸುದೈವಿಗಳು. ಕಲಿಯು ಶ್ರೇಷ್ಠ. ಶೂದ್ರ ಧನ್ಯ'' ಎಂದು ಮೂರು ಉದ್ಗಾರ ತೆಗೆದಿರಿ. ಇದು ಹೇಗೆ ! ಏಕೆ ? ಇದರಲ್ಲಿ ಏನೂ ಅಂಥ ಗೌಪ್ಯವಿಲ್ಲದಿದ್ದರೆ ನಮಗೆ ಹೇಳಬೇಕು.'' ಋಷಿಗಳ ಈ ಮಾತುಗಳನ್ನು ಕೇಳಿ ವೇದವ್ಯಾಸರು ನಕ್ಕು ನುಡಿದರು.

''ಕೃತಯುಗದಲ್ಲಿ ಹತ್ತು ವರ್ಷಗಳ ವರೆಗೆ ತಪಸ್ಸು ಮಾಡಿದರೆ ದೊರೆಯುವ ಫಲವು ತ್ರೇತಯುಗದಲ್ಲಿ ಒಂದು ವರ್ಷದ ತಪಸ್ಸಿನಿಂದಲೇ ದೊರೆಯುವದು;

ದ್ವಾಪರಯುಗದಲ್ಲಿ ಒಂದು ತಿಂಗಳ ತಪಸ್ಸಿನಿಂದ ದೊರೆಯುವ ಫಲವು ಕಲಿಯುಗದಲ್ಲಿ ಒಂದೇ ದಿನ ತಪಸ್ಸು ಮಾಡಿದರೂ ದೊರೆಯುವದು. ಇದರಂತೆ ಬ್ರಹ್ಮಚರ್ಯೆ, ಜಪ, ತಪ, ಮತ್ತಿತರ ಪುಣ್ಯ ಕರ್ಮಗಳಿಗೆಲ್ಲ ಇದೇ ಕ್ರಮದಲ್ಲಿ ಕಲಿಯುಗದಲ್ಲಿ ಕೃತ, ತ್ರೇತಾ, ದ್ವಾಪರಗಳಿಗಿಂತ ಅತಿಶಯ ಅಧಿಕ ಫಲವು ದೊರಕುವದು. ಆದುದರಿಂದಲೇ ಕಲಿಯುಗವೇ ಶ್ರೇಷ್ಠ ಎಂದು ನಾನು ಹೇಳಿದ್ದು. ಕೃತಯುಗದಲ್ಲಿ ಧ್ಯಾನ ಮಾಡುವದರಿಂದ, ತ್ರೇತಾಯುಗದಲ್ಲಿ ಯಜ್ಞಮಾಡುವದರಿಂದ, ದ್ವಾಪರಯುಗದಲ್ಲಿ ದೇವರ ಪೂಜೆ ಮಾಡುವದರಿಂದ ಪ್ರಾಪ್ತವಾಗುವ ಪುಣ್ಯವು ಕಲಿಯುಗದಲ್ಲಿ ಕೇವಲ ಕೇಶವನ ನಾಮಸ್ಮರಣೆ ಮಾತ್ರದಿಂದಲೇ ಪ್ರಾಪ್ತವಾಗುವುದು. ಕಲಿಯುಗದಲ್ಲಿ ಅತ್ಯಲ್ಪ ಧರ್ಮಾಚರಣೆಯಿಂದ ಅತ್ಯಧಿಕ ಧರ್ಮಾಚರಣೆಯ ಶ್ರೇಷ್ಠ ಫಲವನ್ನು ಪಡೆಯಲಿಕ್ಕಾಗುವದು. ಆದುದರಿಂದ ನಾನು ಕಲಿಯುಗವೇ ಶ್ರೇಷ್ಠ ಎಂದು ಹೇಳಿದ್ದು ಯುಕ್ತಿ ಸಂಗತಿವಾಗಿದೆ.

ಇದರಂತೆ ''ಶೂದ್ರನೂ ಧನ್ಯನು'' ಎಂದು ನಾನು ಉದ್ಗಾರ ತೆಗೆದಿದ್ದು ಯಥಾರ್ಥವೇ ಆಗಿದೆ. ಯಾಕೆಂದರೆ ಬ್ರಾಹ್ಮಣರು ಮೊದಲು ನಿಯಮನಿಷ್ಠರಾಗಿ ವೇದಗಳನ್ನು ಓದಬೇಕು. ಅನಂತರ ಸ್ವಧರ್ಮಾಚರಣದಿಂದ ಗಳಿಸಿದ ಹಣದಿಂದ ಯಜ್ಞಯಾಗಗಳನ್ನು ಮಾಡಬೇಕು. ವ್ಯರ್ಥವಾದ ಮಾತುಕತೆ ವ್ಯರ್ಥಭೋಜನ, ಮತ್ತು ವ್ಯರ್ಥ ಯಜ್ಞಯಾಗಗಳು ಬ್ರಾಹ್ಮಣರ ಅಧಃಪಾತಕ್ಕೆ ಕಾರಣವಾಗುತ್ತವೆ. ಆದುದರಿಂದ ಅವರು ತಮ್ಮ ಇಂದ್ರಿಯಗಳನ್ನು ಮನಸ್ಸನ್ನೂ ಯಾವಾಗಲೂ ಬಿಗಿ ಹಿಡಿದಿರಬೇಕಾಗುವದು. ಈ ಯಜ್ಞಯಾಗಾದಿ ಕಾರ್ಯಗಳನ್ನು ಸರಿಯಾಗಿ ಮಾಡದಿದ್ದರೆ ಮಹಾಪಾಪವುಂಟು. ಮೇಲಾಗಿ ಬ್ರಾಹ್ಮಣರು ತಮಗೆ ಮನಬಂದದ್ದನ್ನು ತಿನ್ನುವಂತಿಲ್ಲ. ಬೇಕಾದ ಪೇಯವನ್ನು ಕುಡಿಯುವಂತಿಲ್ಲ. ಅವರು ತಮ್ಮ ಇಚ್ಛೆ ಬಂದಂತೆ ಯಾವ ಕಾರ್ಯವನ್ನೂ ಮಾಡಲಾರರು. ಅವರ ಜೀವನವೇ ಶಾಸ್ತ್ರಾಧೀನ! ಎಲ್ಲ ಕಾರ್ಯಗಳಲ್ಲಿಯೂ ಅವರಿಗೆ ಪಾರತಂತ್ರ್ಯ.

ಅವರು ಸದ್ಗತಿಯನ್ನು ಹೊಂದಬೇಕಾದರೆ ಬಹಳ ಕಷ್ಟ ಪಡಬೇಕು. ಆದರೆ ಪಾಕ ಯಜ್ಞದಲ್ಲಿ ಅಧಿಕಾರವುಳ್ಳ ಶೂದ್ರನು ಬ್ರಾಹ್ಮಣರ ಸೇವಾ ಮಾತ್ರದಿಂದಲೇ ದಿವ್ಯ ಲೋಕಗಳನ್ನು ಹೊಂದುತ್ತಾನೆ. ಅದರಿಂದ ಆ ಶೂದ್ರನು ಅತ್ಯಂತ ಧನ್ಯನು ಎಂದು ನಾನು ಹೇಳಿದೆ. ಶೂದ್ರರಿಗೆ ಭಕ್ಷ್ಯಾಽಭಕ್ಷ್ಯ ನೇಮವಿಲ್ಲ. ಪೇಯಾ-ಪೇಯ ನಿರ್ಬಂಧವಿಲ್ಲ. ಮತ್ತಾವ ವ್ರತ-ನಿಯಮಾನುಷ್ಠಾನಗಳ ಕಟ್ಟು ಕಟ್ಟಳೆಗಳು ಇಲ್ಲ. ಅದೇ ಕಾರಣಕ್ಕಾಗಿಯೇ 'ಶೂದ್ರನು ಸಾಧು' ಎಂದು ನಾನು ಹೇಳಿದ್ದೇನೆ. ಸ್ವಧರ್ಮಕ್ಕೆ ವಿರೋಧವಾಗದಂತೆ ಹಣವನ್ನುಗಳಿಸಿ, ಪಡೆದ ಧನವನ್ನು ಸತ್ ಪಾತ್ರರಲ್ಲಿಯೇ ದಾನಮಾಡಬೇಕು. ವಿಧಿಪೂರ್ವಕವಾಗಿ ಯಜ್ಞ-ಯಾಗಾನುಷ್ಠಾನ ಮಾಡಬೇಕು. ಈ ಹಣವನ್ನು ಗಳಿಸುವದೇ ಕಷ್ಟ. ಅದನ್ನು ರಕ್ಷಿಸುವದು ಕಷ್ಟ. ಮತ್ತು ಆ ಹಣವನ್ನು ಅಸದ್ ವಿನಿಯೋಗವಾಗದಂತೆ ಎಚ್ಚರಿಕೆಯಿಂದ ಸತ್ ಕಾರ್ಯದಲ್ಲಿ ವಿನಿಯೋಗಿಸುವದು ಇನ್ನೂ ಕಠಿಣಕರವಾದುದು. ಇವೇ ಮೊದಲಾದ ಪುಣ್ಯಗಳನ್ನು ಬ್ರಾಹ್ಮಣರು ಬಹಳ ಕಷ್ಟ ಪಟ್ಟು ಸಂಪಾದಿಸಬೇಕಾಗುವದು. ಆದರೆ ಇದೇ ತರಹದ ಫಲವನ್ನು ಸ್ತ್ರೀಯು ತನ್ನ ಕಾಯಾ

ವಾಚಾ, ಮನಸಾ ತ್ರಿಕರಣ ಶುದ್ಧಿಯಿಂದ ಪತಿಯ ಸೇವೆ ಮಾಡುವದರಿಂದಲೇ ಪಡೆಯುತ್ತಾಳೆ. ಮೋಕ್ಷಾದಿ ಪುರುಷಾರ್ಥಗಳನ್ನು ಕೂಡ ಹೊಂದುತ್ತಾಳೆ. ಆದುದರಿಂದ ನಾನು ನಾರಿಯರು ಸುದೈವಿಗಳು ಎಂದು ಹೇಳಿದ್ದೇನೆ. ಬ್ರಾಹ್ಮಣರೇ, ನಾನು ಈಗ ಎಲ್ಲವನ್ನೂ ತಿಳಿಸಿದ್ದೇನೆ. ಇನ್ನು ಮೇಲೆ ನೀವು ನನ್ನನ್ನು ಕೇಳಬೇಕೆಂದು ಬಂದ ಪ್ರಶ್ನೆಗಳನ್ನು ಕೇಳಿರಿ.'' ಎಂದರು. ಆದರೆ ಆದಕ್ಕೆ ಆ ಋಷಿಗಳು ನಿಮ್ಮ ಈ ಮಾತಿನಲ್ಲಿ ನಮ್ಮ ಎಲ್ಲ ಪ್ರಶ್ನೆಗಳ ಸಮಾಧಾನ ದೊರೆತಂತಾಯಿತು. ಇನ್ನು ನಮಗೇನೂ ಪ್ರಷ್ಟವ್ಯಾಂಶವಿಲ್ಲ.'' ಎಂದು ಹೇಳಿದರು. ಭಗವಾನ್ ವೇದವ್ಯಾಸರು ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿ ತಮ್ಮಡಿಗೆ ನಮಿಸಿದ ಆ ಮುನಿಗಳನ್ನು ಕುರಿತು ನುಡಿದರು.

''ಮುನಿಗಳೆ, ನಾನು ನನ್ನ ದಿವ್ಯ ದೃಷ್ಟಿಯಿಂದ ನಿಮ್ಮ ಪ್ರಶ್ನೆಯನ್ನು ತಿಳಿದು ನೋಡಿ ನಿಮ್ಮ ಸಲುವಾಗಿಯೇ ''ಒಳ್ಳೇದು ಶ್ರೇಷ್ಠ ಧನ್ಯ'' ಎಂಬ ಉದ್ಗಾರಗಳನ್ನು ತೆಗೆದೆನು. ಕಲಿಯುಗದಲ್ಲಿ ಅಲ್ಪ ಧರ್ಮಾಚರಣೆಯಿಂದಲೇ ಮಹಾ ಫಲವು. ಶೂದ್ರರಿಗೆ ಬರೀ ಮೇಲಿನ ವರ್ಣದವರ ಸೇವೆಯಿಂದ, ಸ್ತ್ರೀಯರಿಗೆ ಕೇವಲ ತಮ್ಮ ಪತಿ ಸೇವೆಯಿಂದಲೇ ಆ ಮಹಾ ಮಹತ್ತರವಾದ ಫಲಗಳೆಲ್ಲವೂ ಪ್ರಾಪ್ತವಾಗುತ್ತವೆ. ಆದುದರಿಂದಲೇ ನಾನು ಶೂದ್ರ, ಧನ್ಯ, ನಾರಿ ಸುದೈವಿ, ಕಲಿಯುಗವು ಶ್ರೇಷ್ಠ'' ಎಂದು ಉದ್ಗಾರತೆಗೆದನು. ಇದರಿಂದ ನಿಮ್ಮ ಸಂದೇಹದ ನಿವಾರಣೆಯು ಆಗಿರಲಿಕ್ಕೆ ಸಾಕು. ನೀವು ಕೇಳದೆ ನಿಮ್ಮ ಸಂಶಯ ಪರಿಹಾರವನ್ನು ನಾನು ಮಾಡಿದ್ದೇನೆ. ನನ್ನಿಂದ ನಿಮಗೆ ಮತ್ತೇನಾಗಬೇಕು ಹೇಳಿರಿ.'' ಅನಂತರ ಅಲ್ಲಿಗೆ ಬಂದ ಋಷಿಗಳೆಲ್ಲರೂ ವ್ಯಾಸರನ್ನು ಪೂಜೆ ಮಾಡಿ ತಾವು ಕೇಳದೆ ತಮ್ಮ ಮನೋಗತವಾದ ಸಂದೇಹವನ್ನು ಅರಿತು ಅದಕ್ಕೆ ಸಮಂಜಸವಾದ ಸಮಾಧಾನವನ್ನು ಹೇಳಿ ಕಳಿಸಿದ ವ್ಯಾಸರ ಸರ್ವಜ್ಞತ್ವವನ್ನು, ಶಿಷ್ಯ ಕಾರುಣ್ಯವನ್ನು ಕೊಂಡಾಡುತ್ತ ತಮ್ಮ - ತಮ್ಮ ಸ್ಥಾನಗಳಿಗೆ ತೆರಳಿದರು.

ಈ ಕಲಿಯು ಅತ್ಯಂತ ದುಷ್ಟನಾಗಿದ್ದರೂ ಅವನಲ್ಲಿ ಒಂದು ಗುಣವಿದೆ. ಈ ಕಲಿ ಕಾಲದಲ್ಲಿ ಕೃಷ್ಣನ ನಾಮ ಸ್ಮರಣೆಯಿಂದಲೇ ಮಾನವರು ಈ ಸಂಸಾರ ಬಂಧನದಿಂದ ಬಿಡುಗಡೆಯಾಗಿ ಮೋಕ್ಷವನ್ನು ಹೊಂದುತ್ತಾರೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಆರನೇ ಅಂಶದ ಎರಡನೇ ಅಧ್ಯಾಯ ಸಂಪೂರ್ಣ*

—o—

## ಕಾಲಮಾನ ಮತ್ತು ನೈಮಿತ್ತಿಕ ಪ್ರಳಯ | ಅಧ್ಯಾಯ - ೩

**ಪರಾಶರ** - ಎಲ್ಲ ವಿಧವಾದ ಪ್ರಾಣಿಜಾತ ಪರಿಪೂರಿತವಾದ ಈ ಪ್ರಪಂಚಕ್ಕೆ ನೈಮಿತ್ತಿಕ, ಆತ್ಯಂತಿಕ, ಪ್ರಾಕೃತ ಎಂದು ಮೂರು ಬಗೆಯಾದ ಪ್ರಳಯವಾಗುತ್ತದೆ. ಒಂದು ಕಲ್ಪದ ಕೊನೆಗೆ ಆಗುವ ಪ್ರಳಯಕ್ಕೆ ನೈಮಿತ್ತಿಕ ಬ್ರಾಹ್ಮ ಪ್ರಳಯವೆನ್ನುವರು. ಎರಡು ಪರಾರ್ಧಗಳ ಅನಂತರ ಆಗುವ ಪ್ರಳಯಕ್ಕೆ ಪ್ರಾಕೃತ ಪ್ರಳಯವೆನ್ನುವರು. ಮೋಕ್ಷನಾಮಕ ಪ್ರಳಯಕ್ಕೆ ಆತ್ಯಂತಿಕ ಪ್ರಳಯವೆನ್ನುವರು.

**ಮೈತ್ರೇಯ** - ಪರಾರ್ಧ ಎಂದರೆ ಏನು ?

**ಪರಾಶರ** - ಒಂದು ಅಂಕಿಯಿಂದ ಹತ್ತುಹತ್ತರ ಅಂಕಿಗಳನ್ನು ಗುಣಿಸುತ್ತ ಹೋದರೆ ಹದಿನೆಂಟನೆಯ ಅಂಕಿಯೇ ಪರಾರ್ಧ ಎನಿಸುವದು. (ವಾಯು ಪುರಾಣದಲ್ಲಿ ಈ ಹದಿನೆಂಟೂ ಅಂಕಿಗಳ ಸಂಖ್ಯೆಯನ್ನು ಕೊಟ್ಟಿದ್ದಾರೆ. ಒಂದು ಹತ್ತು, ನೂರು, ಸಾವಿರ ಅಯುತ, ನಿಯುತ, ಪ್ರಯುತ, ಅರ್ಬುದ, ನ್ಯರ್ಬುದ, ವೃಂದ, ಖರ್ವ, ನಿಖರ್ವ,ಶಂಖ, ಪದ್ಮ, ಸಮುದ್ರ, ಮಧ್ಯ, ಅಂತ, ಪರಾರ್ಧ ಎಂದು) ಇಂಥ ಎರಡು ಪರಾರ್ಧ ಕಾಲಗಳ ನಂತರ ನಡೆಯುವ ಪ್ರಾಕೃತ ಪ್ರಳಯದಲ್ಲಿ ಈ ಸುವ್ಯಕ್ತವಾದ ಜಗತ್ತೆಲ್ಲವೂ ವ್ಯಕ್ತದಲ್ಲಿ ಲೀನವಾಗುತ್ತದೆ. ಒಂದು ಮಾತ್ರೆಯುಳ್ಳ ಅಕ್ಷರೋಚ್ಚಾರಕ್ಕೆ ಹತ್ತು ಅವಕಾಶಕ್ಕೆ ಮಾತ್ರಾ ಅಥವಾ ನಿಮೇಷ ಎನ್ನುವರು. ಹದಿನೈದು ನಿಮಿಷಗಳೆಂದರೆ ಒಂದು ಕಾಷ್ಠಾ ಮೂವತ್ತು ಕಾಷ್ಠಾಗಳೆಂದರೆ ಒಂದು ಕಲಾ. ಹದಿನೈದು ಕಲೆಗಳು ಕೂಡಿ ಒಂದು ನಾಡಿಕಾ. ಎರಡು ನಾಡಿಕಾ ಅಂದರೆ ಒಂದು ಮುಹೂರ್ತ, ಮೂವತ್ತು ಮುಹೂರ್ತವೆಂದರೆ ಒಂದು ದಿನ. ಮೂವತ್ತು ದಿನಗಳೆಂದರೆ ಒಂದು ತಿಂಗಳು. ಹನ್ನೆರಡು ತಿಂಗಳಾದರೆ ಒಂದು ವರ್ಷ. ಮನುಷ್ಯ ಮಾನದ ಒಂದು ವರ್ಷವೆಂದರೆ ದೇವತೆಗಳ ಒಂದು ದಿನವಾಗುವದು. ಇಂಥ ಮುನ್ನೂರು ಅರವತ್ತು ದಿನಗಳಾದರೆ ದೇವತೆಗಳ ಒಂದು ವರ್ಷ. ಇಂಥ ಹನ್ನೆರಡು ಸಾವಿರ ವರ್ಷಗಳಿಗೆ ಒಂದು ಚತುರ್ಯುಗವಾಗುವದು. ಒಂದು ಸಾವಿರ ಚತುರ್ಯುಗಗಳು ಉರುಳಿದರೆ ಒಂದು ಬ್ರಹ್ಮದೇವರ ದಿನವಾಗುವದು.

ಮುನಿವರ್ಯನೆ, ಇದಕ್ಕೆ ಒಂದು ಕಲ್ಪ ಎನ್ನುತ್ತಾರೆ. ಇದರಲ್ಲಿ ೧೪ ಮನುಗಳು ಆಳಿಹೋಗುತ್ತಾರೆ. ಇದರ ಕೊನೆಗೆ ಬ್ರಹ್ಮದೇವರ ಒಂದು ನೈಮಿತ್ತಿಕ ಪ್ರಳಯವು ಆಗುತ್ತದೆ. ಆ ನೈಮಿತ್ತಿಕ ಪ್ರಳಯದ ಅತ್ಯುಗ್ರವಾದ ಭಯಾನಕ ಸ್ವರೂಪವನ್ನು ವರ್ಣಿಸುತ್ತೇನೆ ಕೇಳು. ಒಂದು ಸಾವಿರ ಚತುರ್ಯುಗಗಳು ಗತಿಸಿದ ಬಳಿಕ ಪೃಥ್ವಿಯೆಲ್ಲವೂ ಕ್ಷೀಣವಾಗುತ್ತದೆ. ಒಂದು ನೂರು ವರ್ಷಗಳವರೆಗೆ ಮಳೆಯೇ ಆಗದೆ ಎಲ್ಲ ಪ್ರಾಣಿಗಳೂ ದುರ್ಬಲವಾಗಿ ಬರಗಾಲದಿಂದ ಪೀಡಿತವಾಗಿ ಸತ್ತುಹೋಗುತ್ತವೆ. ಅನಂತರ ವಿಷ್ಣುವು ರುದ್ರನ ರೂಪವನ್ನು ಧರಿಸಿ ಸರ್ವಕ್ಷಯವನ್ನು ಮಾಡುತ್ತಾನೆ. ಭಗವಾನ್ ಶ್ರೀ ವಿಷ್ಣು ಸೂರ್ಯನ ಏಳು ವಿಧವಾದ ಕಿರಣಗಳಲ್ಲಿ ತಾನು ನಿಂತುಕೊಂಡು ಪ್ರಾಣಿ ಹಾಗೂ ಪ್ರಪಂಚದಲ್ಲಿರುವ ನೀರನ್ನೆಲ್ಲ ಹೀರಿಕೊಂಡು ಭೂಮಂಡಲವನ್ನೆಲ್ಲ ಶುಷ್ಕಗೊಳಿಸುತ್ತಾನೆ.

ಸಮುದ್ರ, ನದಿ, ಝರಿ, ಕೆರೆ, ಬಾವಿಗಳಲ್ಲಿರುವ ನೀರೆಲ್ಲವೂ ಒಣಗಿ ಹೋಗುತ್ತದೆ. ಭೂತಲದಿಂದ ಪಾತಾಳದವರೆಗೆ ಹುಡುಕಿದರೂ ಒಂದು ಹನಿ ಕೂಡ ನೀರು ಎಲ್ಲಿಯೂ ಯಾರಿಗೂ ದೊರಕುವದಿಲ್ಲ. ಪ್ರಪಂಚದ ಜಲಾಂಶವನ್ನೆಲ್ಲ ಹೀರಿ ಪಾನಮಾಡಿದ ಸೂರ್ಯನ ಏಳು ರಶ್ಮಿಗಳು ಏಳು ಪ್ರತ್ಯೇಕ ಸೂರ್ಯರೆ ಆಗಿ ಬೆಳಗ ತೊಡಗುತ್ತವೆ. ಆ ಸಪ್ತ ಸೂರ್ಯರೂ ತಮ್ಮ ಉದ್ದೀಪ್ತವಾದ ಕಿರಣಗಳಿಂದ ಉರಿಯುತ್ತ ಪಾತಾಳ ಸಹಿತವಾಗಿ ಮೂರು ಲೋಕಗಳನ್ನೆಲ್ಲ ಸುಡುತ್ತಾರೆ. ಆ ಏಳು ಸೂರ್ಯ ಮಂಡಲಗಳಿಂದ ಹೀರಲ್ಪಟ್ಟು ಸಮುದ್ರ, ನದಿ, ಪರ್ವತ, ಸಹಿತವಾದ ಈ ವಿಶ್ವದಲ್ಲಿ ಎಲ್ಲಿಯೂ ಒಂದು ಹನಿ ನೀರು ಹಸಿ ಕಂಡು ಬರಲಾರದು. ಗಿಡಗಳೆಲ್ಲವೂ ಸುಟ್ಟು ಕರಕಾಗಿ ಬಿಡುತ್ತವೆ. ಭೂಮಂಡಲವೆಲ್ಲವೂ ಸುಟ್ಟು ಆಮೆಯ ಬೆನ್ನಿನಂತೆ ಬಿರುಸಾಗುತ್ತದೆ.

ಆಗ ಕಾಲಾಗ್ನಿ ರುದ್ರರೂಪನಾದ ಶ್ರೀ ಹರಿಯು ಆದಿಶೇಷನ ನಿಟ್ಟುಸುರಿನ ಬಿಸಿಬೇಗೆಯಿಂದ ಹುಟ್ಟಿದ ತನ್ನ ರುದ್ರವಾದ ಅಗ್ನಿರೂಪದಿಂದ ಕೆಳಗಿನ ಪಾತಾಳಾದಿ ಲೋಕಗಳನ್ನೆಲ್ಲ ಸುಟ್ಟು ಹಾಕುತ್ತಾನೆ. ಮತ್ತು ಆ ಪಾತಾಳವನ್ನು ಸುಟ್ಟು ಮೇಲೆ ಬಂದ ಬೆಂಕಿಯು ಭೂಮಂಡಲವನ್ನೆಲ್ಲ ದಹಿಸಿ ಬಿಡುತ್ತದೆ. ಭೂಮಂಡಲವನ್ನು ಸುಟ್ಟು ಊರ್ಧ್ವ ಮುಖವಾದ ಆ ಅಗ್ನಿಯು ಭುವರ್ಲೋಕವನ್ನು ಕವಳಿಸಿ, ಸ್ವರ್ಗ ಲೋಕಕ್ಕೂ ತಮ್ಮ ಉರಿಯ ಕೆನ್ನಾಲಿಗೆಗಳನ್ನು ಚಾಚುತ್ತದೆ. ಭೂಲೋಕದಿಂದ ಉಗ್ಗಿ-ನುಗ್ಗಿ ಬರುತ್ತಿರುವ ಆ ಬೆಂಕಿಯ ಬುಗ್ಗೆಗಳನ್ನು ಕಂಡು ಗಾಬರಿಯಾದ ಭುವರ್ಲೋಕ ಮತ್ತು ಸ್ವರ್ಗ ಲೋಕದ ಜನರು ಆ ಕಾಡ್ಗಿಚ್ಚಿನ ಉರಿಯನ್ನು ತಾಳಲಾರದೆ ತಮ್ಮ ಲೋಕಗಳನ್ನು ಬಿಟ್ಟು, ಮೇಲಕ್ಕೆ ಓಡಿ, ಮಹರ್ಲೋಕಕ್ಕೆ ಹೋಗುತ್ತಾರೆ. ಸಮಸ್ತ ಪ್ರಪಂಚದಲ್ಲೆಲ್ಲ ಸುತ್ತುಮುತ್ತು ಎತ್ತ ನೋಡಿದರತ್ತ ಧಗ-ಧಗಿಸುವ ಜ್ವಾಲೆಗಳಿಂದ ಜ್ವಲಿಸುವ ಅಗ್ನಿಯು ಉರಿಯುವ ಉಂಡೆಯಂತೆ ಕಿಚ್ಚಿನ ಪಿಂಡದಂತೆ ಸರ್ವವನ್ನು ಕಬಳಿಸಿ, ದಂದಹಿಸುತ್ತಲಿರುತ್ತದೆ. ಸುರಲೋಕವನ್ನು ವ್ಯಾಪಿಸಿ ದಹಿಸಿ, ಭಸ್ಮ ಮಾಡಿದ ಆ ಪ್ರಳಯಾಗ್ನಿಯು ಮಹರ್ಲೋಕಕ್ಕೂ ತನ್ನ ಕಿಡಿಕುಡಿಗಳನ್ನು ಚಾಚುತ್ತದೆ. ಅಲ್ಲಿಯೂ ಉರಿ ತೆಗೆದುಕೊಂಡು ಮತ್ತೆ ಆ ಕಾಡ್ಗಿಚ್ಚು ಹೊತ್ತಿ ಉರಿಯಹತ್ತಲು ಅಲ್ಲಿ ಆಶ್ರಯ ಪಡೆದ ಮನ್ವಾದಿ ಅಧಿಕಾರಿಗಳೂ ಆ ಲೋಕವನ್ನು ಬಿಟ್ಟು ಜನೋಲೋಕಕ್ಕೆ ಪ್ರಯಾಣ ಬೆಳಸುತ್ತಾರೆ.

ಹೀಗೆ ರುದ್ರ ರೂಪಿಯಾದ ಶ್ರೀ ಕೃಷ್ಣನು ತನ್ನ ಸಂಕರ್ಷಣ ಸ್ವರೂಪದಿಂದ ಜಗತ್ತೆಲ್ಲವನ್ನೂ ಸುಟ್ಟು ಹಾಕಿ, ತನ್ನ ಬಾಯಿಂದ ಹೊರಟ ಶ್ವಾಸೋಚ್ಛ್ವಾಸದಿಂದ ಆನೆಯ ಹಿಂಡುಗಳಂತೆ ತೋರುವ ಅನೇಕ ಮೇಘಮಂಡಲಗಳನ್ನು ನಿರ್ಮಿಸುತ್ತಾನೆ. ಭಯಂಕರ ಗುಡುಗು ಮಿಂಚುಗಳಿಂದ ಒಡಗೂಡಿದ ಕಪ್ಪು-ಕಪ್ಪಾದ ಹೊಗೆಬಣ್ಣದ ಘೋರ ಮೋಡದ ಪಡೆಗಳು ಮುಗಿಲಿನ ತುಂಬ ತೇಲತೊಡಗುತ್ತವೆ. ಅವುಗಳಲ್ಲಿ ಕೆಲವು ಅಲತಿಗೆಯ ರಸದಂತೆ ಕೆಂಪಾಗಿದ್ದರೆ, ಮತ್ತೆ ಕೆಲವು ವೈಡೂರ್ಯದಂತೆ ಇಂದ್ರನೀಲಮಣಿಯಂತೆ, ಕುಂದ ಕುಸುಮಗಳಂತೆ, ಕಪ್ಪು ಕಾಡಗೆಯಂತೆ, ಬಗೆ ಬಗೆಯ ಬಣ್ಣದಿಂದ ಒಡಗೂಡಿ ಆಗಸದ ಅಂಗಳದಲ್ಲಿ ತರಂಗಿಸುತ್ತವೆ. ಅವುಗಳಲ್ಲಿ ಕೆಲವು ದೊಡ್ಡ ದೊಡ್ಡ ಪಟ್ಟಣಗಳಂತಿದ್ದರೆ ಹಲವು ದೊಡ್ಡ ದೊಡ್ಡ ಪರ್ವತಗಳಂತೆ ಕಾಣುತ್ತವೆ.

ಅವುಗಳ ಭಯಂಕರ ಆಕಾರ, ಕರಾಳ ಸ್ವರೂಪ, ಭೀಮಕಾಯ, ಘೋರ ಸದ್ದು ಗದ್ದಲದಿಂದ ಆಕಾಶವೆಲ್ಲವೂ ತುಂಬಿ ಹೋಗುತ್ತದೆ. ಅವು ಧಾರಾಕಾರವಾಗಿ ನಿರಂತರ ಮಳೆಗರೆದು ಎಲ್ಲ ಲೋಕಗಳಲ್ಲಿ ಹಬ್ಬಿದ ಅಗ್ನಿ ಜ್ವಾಲೆಗಳನ್ನು ಆರಿಸಿ ಶಾಂತ ಪಡಿಸುತ್ತವೆ. ಸರ್ವಲೋಕಗಳಲ್ಲಿಯೂ ತುಂಬಿ ಧಗಧಗಿಸುವ ಬೆಂಕಿಯ ಕಿಚ್ಚೆಲ್ಲವೂ ಶಾಂತವಾದ ಬಳಿಕ ಆ ಮೋಡಗಳು ಒಂದೇ ಸಮನೆ ಬಿಟ್ಟೂ ಬಿಡದೆ ಮಳೆಗರೆದು ಜಗತ್ತನ್ನೆಲ್ಲ ನೀರಿನಿಂದ ತುಂಬಿ ಬಿಡುತ್ತವೆ. ಭುವರ್ಲೋಕ, ತಪೋ ಲೋಕ, ಸ್ವರ್ಗಲೋಕ, ಮುಂತಾದ ಎಲ್ಲ ಲೋಕಗಳು ನೀರಿನಿಂದ ವ್ಯಾಪ್ತವಾಗಿ, ಎಲ್ಲ ಕಡೆಗೂ ಕತ್ತಲೆಯು ಹರಡಿ, ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಜಲರಾಶಿಯಲ್ಲಿ ಮುಳುಗಿ ಹೋಗುವದು. ಹೀಗೆ ಈ ಪ್ರಳಯ ಮೇಘಗಳು ತೆರಪಿಲ್ಲದೆ ಇಪ್ಪತ್ತು ನಾಲ್ಕು ಗಂಟೆಯೂ, ಹನ್ನೆರಡೂ ತಿಂಗಳೂ, ಒನಿಕೆಯ ಪ್ರಮಾಣದಿಂದ ಧಾರಾಕಾರವಾಗಿ ಜಡಿಮಳೆ ಸುರಿಸಿ, ಮಳೆಗಳನ್ನು ಒಂದುನೂರು ವರ್ಷಗಳ ವರೆಗೆ ಸುರಿಸಿ, ಸುರಿಸಿ ಸಮಸ್ತ ಪ್ರಪಂಚವನ್ನೇ ನೀರಿನಲ್ಲಿ ಮುಳುಗಿಸಿ ಬಿಡುವವು. ನಿತ್ಯ ಸತ್ಯವಾದ ಆ ಶ್ರೀ ಹರಿಯ ಮಹಿಮೆಯಿಂದ ಪ್ರಳಯದಲ್ಲಿ ಹೀಗೆ ಮೊದಲು ಅನಾವೃಷ್ಟಿ, ಅನಂತರ ಅಗ್ನಿ ತಾಂಡವ, ಕೊನೆಗೆ ಅತಿವೃಷ್ಟಿಗಳಿಂದ ಜಗತ್ತೆಲ್ಲವೂ ಜಲಮಯವಾಗಿ ಹೋಗುತ್ತದೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಆರನೇ ಅಂಶದ ಮೂರನೇ ಅಧ್ಯಾಯ ಸಂಪೂರ್ಣ*



## ಪ್ರಾಕೃತ ಪ್ರಳಯ

ಅಧ್ಯಾಯ - ೪

ನೂರಾರು ವರ್ಷಗಳ ಅಜಸ್ರ ಧಾರಾವೃಷ್ಟಿಯಿಂದ ಜಗತ್ತೆಲ್ಲ ತುಂಬಿ ನೆಲಸ್ಥಲವೆಲ್ಲವೂ ಜಲದಿಂದ ಏಕಾಕಾರವಾಗುವದು. ಪ್ರಳಯ ಜಲವು ಏರುತ್ತೇರುತ್ತ ಸಪ್ತರ್ಷಿಗಳ ಸ್ಥಾನವನ್ನೂ ವ್ಯಾಪ್ತಿಸಿದಾಗ ಮೂರು ಲೋಕವೆಲ್ಲವೂ ಏಕಾರ್ಣವವಾಗಿ ನೋಡಿದಲ್ಲೆಲ್ಲಾ ನೀರೇನೀರಾಗುತ್ತದೆ. ಆಗ ವಿಷ್ಣುವಿನ ಮುಖದಿಂದ ಹೊರಟ ಶ್ವಾಸೋಚ್ಛ್ವಾಸದ ಗಾಳಿಯು ಆ ಪ್ರಳಯದ ಮೋಡಗಳನ್ನು ನಾಶ ಮಾಡುತ್ತ ಮತ್ತೆ ನೂರು ವರ್ಷ ಬೀಸತೊಡಗುವುದು. ಆ ಭೀಕರವಾದ ಪ್ರಳಯ ವಾಯುವನ್ನು ಸರ್ವಾಂತರ್ಯಾಮಿಯಾದ ಶ್ರೀಹರಿಯು ಸಂಪೂರ್ಣವಾಗಿ ಪಾನಮಾಡಿ ಆದಿಶೇಷನ ಹಾಸಿಗೆಯ ಮೇಲೆ ತನ್ನ ಪರಬ್ರಹ್ಮ ಸ್ವರೂಪದಿಂದ ಪವಡಿಸುವನು. ಜನಲೋಕ, ಸತ್ಯಲೋಕಗಳಲ್ಲಿರುವ ಋಷಿ ದೇವತಾಮುನಿಗಳು ಆ ಭಗವಂತನನ್ನು ಸ್ತುತಿಸುವರು. ಆ ಪರಮಾತ್ಮನು ತನ್ನ ಮಾಯಾಮಯವಾದ ಯೋಗ ನಿದ್ರೆಯನ್ನು ತಳೆದು ಶಯನ ಮಾಡುತ್ತಾನೆ. ಈ ನಿಮಿತ್ತದಿಂದ ಇದಕ್ಕೆ ನೈಮಿತ್ತಿಕ ಪ್ರಳಯವೆನ್ನುತ್ತಾರೆ. ಆ ಪರಮಾತ್ಮನು ಎಚ್ಚರದಿಂದಿದ್ದಾಗ ಈ ಜಗತ್ತೆಲ್ಲವೂ ಚೇಷ್ಟಾಯುತವಾಗಿ ಕಾರ್ಯ ಪ್ರವಣವಾಗಿರುತ್ತದೆ. ಅವನು ಮಲಗಿದಾಗ ಅವನ ಉದರದಲ್ಲಿ ಎಲ್ಲ ಪ್ರಪಂಚವು ಲೀನವಾಗಿ ಬಿಡುತ್ತದೆ. ಚತುರ್ಯುಗ ಸಹಸ್ರ ಕಾಲದ ಬ್ರಹ್ಮದೇವರ ಹಗಲಿದ್ದಂತೆ ಅಷ್ಟೇ ಅವರ ರಾತ್ರಿಯೂ ಕೂಡ ನಾಕು ಸಹಸ್ರ ಚತುರ್ಯುಗಾತ್ಮಕ ಕಾಲಾವಕಾಶದ್ದಿರುತ್ತದೆ. ಆ ಪ್ರಳಯ ರಾತ್ರಿಯ ಅನಂತರ ಪರಮಾತ್ಮನು ಎಚ್ಚತ್ತು ಬ್ರಹ್ಮನಲ್ಲಿ ನಿಂತು ಬ್ರಹ್ಮನಾಮಕನಾಗಿ ಮತ್ತೆ ಸೃಷ್ಟಿ ಮಾಡತೊಡಗುತ್ತಾನೆ. ಇದು ನೈಮಿತ್ತಿಕ, ಅವಾಂತರ ಪ್ರಳಯವಾಯಿತು. ಇನ್ನು ಪ್ರಾಕೃತ ಪ್ರಳಯದ ಬಗ್ಗೆ ಹೇಳುತ್ತೇನೆ ಕೇಳು.

ಅನಾವೃಷ್ಟಿ, ಅತಿವೃಷ್ಟಿ, ಅಗ್ನಿವರ್ಷ ಮುಂತಾದವುಗಳಿಂದ ಮಹತ್ತತ್ವದಿಂದ ವಿಶೇಷಾಂತವಾದ ವಿಕಾರಗಳೆಲ್ಲ ಕ್ಷೀಣವಾಗುತ್ತ ನಡೆಯುತ್ತವೆ. ಮೊದಲು ನೀರು ಪೃಥ್ವಿಯ ಗುಣವಾದ ಗಂಧವನ್ನು ನುಂಗಿ ಬಿಡುತ್ತದೆ. ಗಂಧ ನಷ್ಟವಾದ ಕೂಡಲೇ ಪೃಥ್ವಿಯ ಪ್ರಣಾಶವಾಗಿ ವಿಶ್ವವೆಲ್ಲಾ ಜಲಮಯವಾಗಿ ಬಿಡುತ್ತದೆ. ಆಗ ಎಲ್ಲಿ ನೋಡಿದಲ್ಲೆಲ್ಲ ಪ್ರಚಂಡವಾದ ಜಲರಾಶಿಯು ತುಂಬಿ ತುಳುಕಿ ಭೋರ್ಗರೆಯುತ್ತದೆ. ಅನಂತರ ಜಲಗುಣವಾದ ರಸವನ್ನು ತೇಜಸ್ಸು ಕಬಳಿಸುತ್ತದೆ. ಆದರಿಂದ ಜಲತನ್ಮಾತ್ರೆಗಳು ನಷ್ಟವಾಗಿ ಜಲವು ನಾಶವಾಗಿ ಎಲ್ಲ ಕಡೆಗೂ ಅಗ್ನಿಯ ತಾಂಡವ ನಡೆಯುತ್ತದೆ. ಜಗದಂಡಮಂಡಲದ ತುಂಬ ಬೆಂಕಿಯ ಜ್ವಾಲೆಗಳೇ ಹರಡಿ ಕಂಡಲ್ಲೆಲ್ಲಾ ಕೆಂಡದ ಉಂಡೆ, ಕೆಂಡದ ಹೊಂಡ, ಕಿಚ್ಚಿನ ಕುಂಡಗಳೇ ಧಗಧಗಿಸುವವು. ಅಗ್ನಿಯ ಆ ಜೋತಿಸ್ವರೂಪವನ್ನು ನಂತರ ವಾಯು ಗ್ರಾಸಗೈದು ಆಕಾಶದ ತುಂಬ ಗಾಳಿಯದೇ ಏರಾಟ ಹೋರಾಟ ನಡೆದು ಹೋಗುವದು. ಅಗ್ನಿಯ ರೂಪತನ್ಮಾತ್ರಗಳು ಹೀಗೆ ವಾಯುವಿನಲ್ಲಿ ಕರಗಿ, ಅಗ್ನಿ ಶಾಂತವಾದ ಬಳಿಕ ವಾತದ ಸ್ವೈರ ಸಂಚಾರವು ದಶದಿಕ್ಕುಗಳಲ್ಲಿಯೂ ಜರುಗಿ ಅದರ ಸ್ಪರ್ಶ ಗುಣವನ್ನು ಆಕಾಶವು ನುಂಗಿಬಿಡುವದು. ಅನಂತರ ಗಾಳಿಯ ಬೀಸಾಟ ಸೂಸಾಟಗಳೆಲ್ಲ ನಿಂತು ರೂಪ ರಸಗಂಧ ಸ್ಪರ್ಶ ರಹಿತ ಆಕಾಶವು ಮಾತ್ರ ಎಲ್ಲೆಡೆಗೆ ತಾನೇ ತಾನಾಗಿ ವಿಜೃಂಭಿಸುವುದು.

ಆಗ ಮಂಡಲಾಕಾರವುಳ್ಳ ಸುಷಿರ ಸ್ವರೂಪವೂ ಶಬ್ದಲಕ್ಷಣವೂ ಆದ ಆಕಾಶವು ಮಾತ್ರ ಉಳಿಯುತ್ತದೆ. ಶಬ್ದ ಮಾತ್ರ ಆಕಾಶವನ್ನೆಲ್ಲ ವ್ಯಾಪಿಸಿ ನಿಲ್ಲುತ್ತದೆ. ಅನಂತರ ಆಕಾಶದ ಶಬ್ದಗುಣವನ್ನು ಭೂತಾದಿಯು ಗ್ರಾಸ ಮಾಡುತ್ತದೆ. ಈ ಭೂತಾದಿಯಲ್ಲಿ ಪಂಚಮಹಾಭೂತಗಳು ಹಾಗೂ ಇಂದ್ರಿಯಗಳು ಲಯವಾಗುತ್ತವೆ. ಕೇವಲ ಅಹಂಕಾರಾತ್ಮಕವಾದುದರಿಂದ ತಾಮಸವಾದ ಆ ಭೂತಾದಿಯನ್ನು ಬುದ್ಧಿ ಲಕ್ಷಣವಾದ ಮಹತತ್ವವು ಗ್ರಹಿಸಿ ಬಿಡುವದು.

ಬ್ರಹ್ಮಾಂಡದ ಒಳಗೆ ಪೃಥ್ವೀ ಮಹತ್‌ತತ್ವಗಳು ಆಚೀಚೆಯ ಸೀಮಾ ನಿದರ್ಶನಗಳಾದಂತೆ ಬಾಹ್ಯ ಜಗತ್ತಿನಲ್ಲಿಯೂ ಅವೇ ಸೀಮಾ ಸ್ತರಗಳಾಗಿವೆ. ಬ್ರಹ್ಮಾಂಡದ ಹೊರಗಿರುವ ಏಳು ಆವರಣಗಳೂ ಪ್ರಳಯ ಕಾಲದಲ್ಲಿ ಮೊದಲಿನ ಕ್ರಮದಂತೆ ತಮ್ಮ ತಮ್ಮ ಕಾರಣದಲ್ಲಿ ಲೀನವಾಗುತ್ತ ಹೋಗುತ್ತವೆ. ಈ ಸಂಪೂರ್ಣವಾದ ಭೂಮಂಡಲವು ಸಪ್ತದ್ವೀಪ, ಸಪ್ತಪರ್ವತ, ಸಪ್ತ ಸಮುದ್ರ, ಸಪ್ತಲೋಕ ಸಹಿತವಾಗಿಯೇ ನೀರಿನಲ್ಲಿ ಮುಳುಗಿ ಹೋಗುವದು. ಆ ಜಲಾವರಣವನ್ನೆಲ್ಲ ಅಗ್ನಿಯು ಕುಡಿದು ಕೂಡುವದು. ಅಗ್ನಿ ವಾಯುವಿನಲ್ಲಿಯೂ, ವಾಯು ಆಕಾಶದಲ್ಲಿಯೂ ಲೀನವಾಗುವವು. ಆ ಆಕಾಶವನ್ನು ಅಹಂಕಾರ ತತ್ವವನ್ನು ಮಹತ್ತತ್ವವೂ ಕಬಳಿಸುವವು. ಇದೆಲ್ಲದರಿಂದ ಸಹಿತವಾದ ಮಹತ್ತತ್ವವನ್ನು ಮೂಲಪ್ರಕೃತಿಯು ತನ್ನಲ್ಲಿ ಲೀನಗೊಳಿಸುವದು. ಈ ಪ್ರಕೃತಿಯೇ ಜಗದುಪಾದಾನ ಕಾರಣವಾಗಿದ್ದು ಪ್ರಧಾನ ಎಂದು ಕರೆಯಲ್ಪಡುತ್ತದೆ. ಈ ಪ್ರಕೃತಿಯು ವ್ಯಕ್ತಾವ್ಯಕ್ತ ಸ್ವರೂಪಿಣಿಯಾಗಿದ್ದು ವ್ಯಕ್ತವು ಅವ್ಯಕ್ತದಲ್ಲಿ ಲೀನವಾಗುತ್ತದೆ. ಈ ವ್ಯಕ್ತಾವ್ಯಕ್ತ ಪ್ರಕೃತಿ ಹಾಗೂ ಪುರುಷ ಇವೆರಡೂ ಜೀವ ಜಗದ್ವಿಲಕ್ಷಣನಾದ ಪರಮಾತ್ಮ ತತ್ವದಲ್ಲಿ ಲೀನವಾಗುತ್ತವೆ.

ಸರ್ವಾಧಾರವಾದ ಆ ಪರತತ್ವಕ್ಕೇ ವಿಷ್ಣು ಎಂದು ಹೆಸರಿದ್ದು ವೇದವೇದಾಂತಗಳಲ್ಲಿ ಅವನ ಮಹಾ ಮಹಿಮೆಯೇ ಪ್ರತಿಪಾದಿತವಾಗಿದೆ. ಸಾಂಖ್ಯ ಯೋಗ, ಕರ್ಮಯೋಗ, ಭಕ್ತಿಯೋಗ ಮುಂತಾದವುಗಳ ಗುರಿ ಅವನೇ ಆಗಿದ್ದಾನೆ. ಮಾನವರು ಋಗಾದಿವೇದೋಕ್ತ ಮಾರ್ಗದಿಂದ ಅವನನ್ನು ಉದ್ದೇಶಿಸಿಯೇ ಹೋಮ ಹವನ ಮಾಡುತ್ತಾರೆ. ನಿವೃತ್ತಿಮಾರ್ಗದಲ್ಲಿರುವ ಯೋಗಿಗಳು ಕೂಡ ಮೋಕ್ಷದಾಯಕನಾದ ಆ ಶ್ರೀ ವಿಷ್ಣುವನ್ನೇ ತಮ್ಮ ಜ್ಞಾನ ಯೋಗದಿಂದ ಉಪಾಸನೆ ಮಾಡುತ್ತಾರೆ.

ಹೀಗೆ ವ್ಯಕ್ತಾವ್ಯಕ್ತ ಪ್ರಕೃತಿ ಪುರುಷರೆಲ್ಲರೂ ಇಂಥ ಆ ಪರಮಾತ್ಮನಲ್ಲಿ ಲೀನರಾಗುತ್ತಾರೆ. ನಾನು ಹಿಂದೆ ಹೇಳಿದ ದ್ವಿಪರಾರ್ಧಾತ್ಮಕವಾದ ಕಾಲವು ಬ್ರಹ್ಮ ಸ್ವರೂಪಿಯಾದ ಆ ಭಗವಂತನ ಒಂದು ಹಗಲು ಎನಿಸುತ್ತದೆ. ಅದರಷ್ಟೇ ರಾತ್ರಿಯೂ ಇರುತ್ತದೆ. ವಾಸ್ತವವಾಗಿ ವಿಚಾರಿಸಿದರೆ ಆ ಭಗವಂತನಿಗೆ ಹಗಲೇನು ರಾತ್ರಿ ಏನು! ಅವನು ಈ ಕಾಲ ನಿಯಮ ಬದ್ಧನೇ ಅಲ್ಲ. ಇದೆಲ್ಲವೂ ಔಪಚಾರಿಕ. ಇದು ಪ್ರಾಕೃತಿಕ ಲಯವಾಯಿತು. ಇನ್ನು ಮೋಕ್ಷಾಖ್ಯವಾದ ಆತ್ಯಂತಿಕಲಯದ ಸಮಾಚಾರವನ್ನು ಹೇಳುತ್ತೇನೆ. ಕೇಳು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಆರನೇ ಅಂಶದ ನಾಲ್ಕನೇ ಅಧ್ಯಾಯ ಸಂಪೂರ್ಣ*

—o—

## ಆತ್ಯಂತಿಕಲಯ ಮತ್ತು ಆಧ್ಯಾತ್ಮಿಕಾದಿ ತ್ರಿವಿಧ ತಾಪಗಳ ವರ್ಣನೆ

ಅಧ್ಯಾಯ - ೫

ಆಧಿಭೌತಿಕ, ಆಧಿದೈವಿಕ, ಆಧ್ಯಾತ್ಮಿಕ ಈ ಮೂರು ತಾಪತ್ರಯಗಳನ್ನು ತಿಳಿದು ಜ್ಞಾನವೈರಾಗ್ಯಗಳನ್ನು ಬೆಳೆಸಿಗೊಂಡು ಭಕ್ತಿಯಿಂದ ಭಗವಂತನ್ನು ಆರಾಧಿಸಿದವನು ಆತ್ಯಂತಿಕ ಲಯವನ್ನು ಹೊಂದುತ್ತಾನೆ. ಇದೇ ಮೋಕ್ಷ ಎನಿಸುತ್ತದೆ. ಆಧ್ಯಾತ್ಮಿಕ ತಾಪವು ಶಾರೀರ ಮಾನಸಿಕ ಎಂದು ಎರಡು ಬಗೆಯಾಗಿದೆ. ಶಿರೋರೋಗ, ಜ್ವರ, ಪಿನಶಿ, ಶೂಲಿ, ಭಗಂದರ, ಗುಲ್ಮ, ಮೂಲವ್ಯಾಧಿ, ಕಫ, ದಮ್ಮು, ಕಣ್ಣು ಬೇನೆ, ಅತಿಸಾರ, ಕುಷ್ಠ ಮುಂತಾದ ದೈಹಿಕ ತಾಪಗಳು ಅಸಂಖ್ಯವಾಗಿವೆ. ಮಾನಸಿಕ ತಾಪಗಳು ಅನಂತ, ಕಾಮ, ಕ್ರೋಧ, ಭಯ, ದ್ವೇಷ, ಲೋಭ, ಮೋಹ, ವಿಷಾದ, ಶೋಕ, ಅಸೂಯೆ, ಅಪಮಾನ, ಈರ್ಷ್ಯೆ, ಅಭಿಮಾನ ಮುಂತಾದ ಬಗೆಬಗೆಯ ಭಾವಗಳಿಂದ ಉಂಟಾಗುವ ಆಧ್ಯಾತ್ಮಿಕ ತಾಪಗಳು ವಿವಿಧವಾಗಿವೆ.

ಮೃಗ, ಪಕ್ಷಿ, ಮನುಷ್ಯ, ದೆವ್ವ, ಭೂತ, ರಾಕ್ಷಸ, ಹಾವು ಚೇಳು, ಚೋರ ಮುಂತಾದವರಿಂದ ಆಧಿ ಭೌತಿಕ ತಾಪವು ಉತ್ಪನ್ನವಾಗುತ್ತದೆ. ಇದರಂತೆ ಚಳಿ ಮಳೆ ಬಿಸಿಲು ಗಾಳಿ ಮಿಂಚು ಸಿಡಿಲು ಮುಂತಾದವುಗಳಿಂದ ಪ್ರಾಪ್ತವಾಗುವ ದುಃಖವು ಆಧಿದೈವಿಕ ಎನಿಸಿಕೊಳ್ಳಲ್ಪಡುತ್ತದೆ. ಜನ್ಮ ಮುಪ್ಪು, ಸಾವು, ನೋವು, ನರಕಯಾತನೆ ಮುಂತಾಗಿ ದುಃಖವು ಸಾವಿರಾರು ಬಗೆಯಾಗಿದೆ. ಕೋಮಲದೇಹವುಳ್ಳ ಪ್ರಾಣಿಯು ಬಹುವಿಧವಾದ ಮಲ ಹೊಲಸಿನಿಂದ ತುಂಬಿದ ತಾಯಿಯ ಗರ್ಭದಲ್ಲಿ ಬೆನ್ನು ಕುತ್ತಿಗೆ ಎಲವುಗಳನ್ನು ಕೂಡ ಮಣಿಸಿ ಮುದುರಿಕೊಂಡು ಚೀಲದ ಮುಸುಕಿನಿಂದ ಬಿಗಿಯಲ್ಪಟ್ಟು ಸಂಕಟ ಪಡುತ್ತಾನೆ. ತಾಯಿಯು ಊಟ ಮಾಡಿದ ಉಪ್ಪು ಖಾರದ ಆಹಾರದಿಂದ ಗರ್ಭದಲ್ಲಿದ್ದ ಜಂತುವಿನ ಮೈಯೆಲ್ಲ ಉರುಪಿಡುತ್ತದೆ. ಮಲ ಮೂತ್ರದ ಹಾಸಿಗೆಯಲ್ಲಿ ಬಿದ್ದು ಹೊರಳಾಡುತ್ತ ಕೈಕಾಲು ಚಾಚಲಿಕ್ಕೂ ಕೂಡ ಬಾರದೆ ಹಿಂದಿನ ನೂರು ಜನ್ಮಗಳ ಗೋಳಾಟವನ್ನು ನೆನೆಯುತ್ತ ತನ್ನ ಹಿಂದಿನ ಕರ್ಮ ಮೂಲಕವಾಗಿ ಗರ್ಭದಲ್ಲಿ ಬಂಧಿಸಲ್ಪಟ್ಟವನಾಗಿ ದುಃಖ ಪಡುತ್ತಾನೆ.

ಹುಟ್ಟುವಾಗಲೂ ಶಿಶುವಿನ ಮುಖವು ಮಲ, ವೀರ್ಯ,ಮೂತ್ರ,, ರಕ್ತಗಳು ಮೆತ್ತಿ ಗರ್ಭಾಶಯವನ್ನು ಸಂಕೋಚಗೊಳಿಸುವ ಪ್ರಾಜಾಪತ್ಯ ವಾಯುವಿನಿಂದ ಪೀಡಿತವಾಗುತ್ತದೆ. ಪ್ರಬಲವಾದ ಪ್ರಸೂತಿ ವಾಯುವು ಈ ಮಗುವಿನ ತಲೆಯನ್ನು ಕೆಳಗೆ ಮಾಡಿ ಸೂಕುತ್ತದೆ. ಆದರಿಂದ ಕಾತರನಾಗಿ ಅತಿದುಃಖದಿಂದ ತಾಯಿಯ ಗರ್ಭದಿಂದ ಹೊರಬಿದ್ದು ಬರುತ್ತಾನೆ ಜೀವ. ತಾಯಿಯ ಉದರದಿಂದ ನೆಲದ ಮೇಲೆ ಬಿದ್ದ ಕೂಡಲೇ ಬಾಹ್ಯ ವಾಯುವಿನ ಸ್ಪರ್ಶದಿಂದ ಮೂರ್ಛಿತನಾದಂತಾಗುವನು. ಮುಳ್ಳು ಅಥವಾ ಕತ್ತರಿಯಿಂದ ಚುಚ್ಚಿ ಒಡೆದ ಹುಣ್ಣಿನಿಂದ ಹೊರಬಿದ್ದ ಹುಳದಂತೆ ನೆಲದಮೇಲೆ ಬಿದ್ದು ಮೈ ತುರಿಸಿಕೊಳ್ಳಲಿಕ್ಕೂ ಆಚೀಚೆ ಮಗ್ಗುಲಾಗಲಿಕ್ಕೂ ಅಶಕ್ತನಾಗಿ ಅಳುತ್ತಾನೆ. ಹೊಲಸಿನ

ಮಡಿಲಲ್ಲಿ ಬಿದ್ದು ಕ್ರಿಮಿಕೀಟಗಳು ಕಡಿದರೂ ಜಾಡಿಸಲಿಕ್ಕಾಗದೇ ಒದ್ದಾಡುತ್ತಾನೆ. ಮುಂದೆ ಬಾಲ್ಯದಲ್ಲಿಯೂ ಅನೇಕ ದುಃಖಗಳನ್ನು ಅನುಭವಿಸಿ ಅಜ್ಞಾನಾವೃತನಾಗಿ 'ನಾನು ಯಾರು ? ಎಲ್ಲಿಂದ ಬಂದಿದ್ದೇನೆ ? ಎಲ್ಲಿಗೆ ಹೋಗುತ್ತೇನೆ ? ನಾನು ಈ ಬಂಧನಕ್ಕೆ ಏಕೆ ಒಳಪಟ್ಟಿದ್ದೇನೆ ! ಮುಂದೇನು ಮಾಡಬೇಕು ? ಎಂಬುದನ್ನು ತಿಳಿಯದೇ ದುಃಖಪಡುತ್ತಾನೆ. ಮುಂದೆ ವಯಸ್ಸಾದ ಬಳಿಕ ಹಸಿವು ಕಾಮಗಳನ್ನು ತಣಿಸುವದರಲ್ಲಿಯೇ ಆಸಕ್ತನಾಗಿ ಪಶು ಸಮಾನನಾಗಿ ವ್ಯವಹರಿಸುತ್ತಾನೆ. ವೇದ ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡದೇ ನರಕ ದುಃಖಕ್ಕೆ ದಾರಿ ಮಾಡಿಕೊಳ್ಳುತ್ತಾನೆ. ಹೀಗಾಗಿ ಅಜ್ಞಾನಿಗಳಿಗೆ ಇಲ್ಲಿಯೂ ದುಃಖ; ಪರತ್ರದಲ್ಲಿಯೂ ದುಃಖ.

ಮುಂದೆ ವೃದ್ಧಾಪ್ಯದಿಂದ ದೇಹವೆಲ್ಲವೂ ಜರ್ಜರವಾಗಿ ಹಲ್ಲು ಬಿದ್ದು ಕಣ್ಣು ಕಾಣುವುದಿಲ್ಲ. ಮೂಗಿನಲ್ಲಿ ಕೂದಲುಗಳು ಹೊರೆಯಾಗಿ ಬೆಳೆದು, ಮೈಯಲ್ಲಿಯ ಎಲ್ಲ ಎಲವು ತೆರೆದು, ಬೆನ್ನು ಬಾಗಿ, ಓಡಾಡಲು ಬಾರದಂತಾಗುತ್ತದೆ. ಕಣ್ಣು ಕಾಣದೆ ಕಿವಿ ಕೇಳದೇ, ಬಾಯಿಂದ ಜೊಲ್ಲುಸುರಿದು, ಪರಾಧೀನವಾದ ಸರ್ವೇಂದ್ರಿಯಗಳಿಂದ ಒಂದೊಂದು ವಾಕ್ಯವನ್ನು ಉಚ್ಚರಿಸಲಿಕ್ಕೂ ಬಹಳ ಆಯಾಸವೆನಿಸಿದಂತಾಗುತ್ತದೆ. ಸ್ವಂತ ಏಳಲಿಕ್ಕೂ ಕೂಡಲಿಕ್ಕೂ ಶಕ್ತಿ ಇಲ್ಲದೆ, ಮತ್ತೊಬ್ಬರು ಬಂದು ಕೂಡಿಸಬೇಕು ಇಲ್ಲವೇ ಮಲಗಿಸಬೇಕು. ಮುಪ್ಪಿನ ಕಾಲದಲ್ಲಿ ಮಡದಿ ಮಕ್ಕಳೆಲ್ಲರೂ ಅಸಹ್ಯ ಪಟ್ಟುಕೊಳ್ಳುವರು. ಮಡಿಮೈಲಿಗೆ ಎಲ್ಲವೂ ನಿಂತು ಹೋಗುವವು. '' ಇನ್ನೂ ತಿನ್ನಬೇಕು ಉಣ್ಣಬೇಕು ಮಜಾಮಾಡಬೇಕು ''. ಎಂಬ ಆಶೆ ಬೆಳೆಯುವದು. ಆದರೆ ಜಠರಾಗ್ನಿಯು ಮಂದವಾಗಿ ತಿಂದದ್ದು ಪಚನವಾಗುವುದಿಲ್ಲ. ತಿನ್ನುವ ಚಾಪಲ್ಯ ಬಹಳವಾಗಿ ಆಪ್ತೇಷ್ಟರೂ ಕೂಡ ಪರಿಹಾಸ ಮಾಡುವಂತಾಗುವದು. ಜನ್ಮಾಂತರದ ಘಟನೆಗಳಂತೆ ತನ್ನ ಯೌವನದ ಸಂಗತಿಗಳನ್ನೆಲ್ಲ ನೆನಿಸಿ ನಿಟ್ಟುಸಿರಿಡುವನು.

ಹೀಗೆ ಮುಪ್ಪಿನ ಕಾಲದಲ್ಲಿ ವಾರ್ಧಕ್ಯದ ದುಃಖಗಳನ್ನು ಅನುಭೋಗಿಸಿ ಮರಣ ಹೊಂದುವಾಗಲೂ ವಿಲಕ್ಷಣ ಸಾಯುವ ಸಂಕಟವನ್ನು ಅನುಭವಿಸುವನು. ತಲೆ ನಡುಗುವುದು. ಕೈಕಾಲುಗಳೂ ಕೂಡ ಅಲಗಾಡುವವು. ಸ್ಮರಣ ಶಕ್ತಿ ಕಡಿಮೆಯಾಗಿ ಅರವು ಮರವು ಆಗುವುದು. ಬಂಗಾರ, ಧನಧಾನ್ಯ, ಮನೆ, ಮಡದಿ, ಮಕ್ಕಳ ಮೇಲೆ ವಿಲಕ್ಷಣ ಮೋಹ ಮಮತೆಯಿಂದ ನನ್ನ ಅನಂತರ ಇವನ ಗತಿ ಏನು ? ಎಂದು ಚಿಂತೆಯಿಂದ ಕೊರಗುವನು. ಯಮನ ಬಾಣಗಳಂತಿರುವ ಮರ್ಮಾಂತಕವಾದ ರೋಗಗಳ ಪ್ರಹಾರದಿಂದ ಶರೀರದೊಳಗೆ ಗರಗಸವಾಡಿಸಿದಂತಾಗಿ ಒಂದೊಂದೆ ನಾಡಿಗಳು ಬಿಡತೊಡಗುತ್ತವೆ. ಕಣ್ಣು ಗುಡ್ಡೆಗಳು, ತಿರುಗಿ, ಕೈಕಾಲುಗಳು ಲಟಪಟ ಒದ್ದಾಡಿ, ನಾಲಿಗೆ ಒಣಗಿ ಗಂಟಲು ಘರಘರ ಎನ್ನುವದು. ಶ್ವಾಸಕೂಡಿ ಉಸಿರಾಡಲಿಕ್ಕೂ ಮಹಾ ಪ್ರಯಾಸವಾಗುವದು. ಭಯಂಕರವಾದ ನೋವು ಉರಿ ಸಂಕಟಗಳಿಂದ ಉರುಳಾಡಿ, ಹೊರಳಾಡಿ, ಯಮಕಿಂಕರರಿಂದ ಪೀಡಿತನಾಗಿ ಈ ದೇಹವನ್ನು ಬಹು ಕಷ್ಟದಿಂದ ಬಿಟ್ಟು ಪ್ರಾಣ ಪರಿತ್ಯಾಗ ಮಾಡುವನು. ಹೀಗೆ ಇನ್ನೂ ಅನೇಕ ವಿಧವಾಗಿ ಮರಣ ಕಾಲದಲ್ಲಿ ಪ್ರಾಣಿಯು ಬಗೆ ಬಗೆಯ ದುಃಖವನ್ನು ಹೊಂದುವನು. ಅನಂತರ

ಯಾತನಾದೇಹವನ್ನು ಪಡೆದು ಯಮಲೋಕದಲ್ಲಿ ಯಮಪಾಶದಿಂದ ಬಿಗಿಯಲ್ಪಟ್ಟು ಯಮದೂತರಿಂದ ಅನಂತ ದುಃಖ ಸಂಕಟಗಳನ್ನು ಅನುಭವಿಸುವನು. ಕಾದ ಉಸುಕು, ಬೆಂಕಿಯ ಯಂತ್ರ ತೀಕ್ಷ್ಣ ಶಸ್ತ್ರ, ಭೀಷಣವಾದ ಪ್ರಹಾರಗಳಿಗೆ ಬಲಿಯಾಗುವನು. ಗರಗಸದಿಂದ ಕತ್ತರಿಸಲ್ಪಡುವದು, ಕಿಚ್ಚಿನಲ್ಲಿ ಸುಡುವದು, ನೆಲದಲ್ಲಿ ಹೂಳುವದು, ನೇಣುಗಂಬದಲ್ಲಿ ಜೋತಾಡುವದು, ಶೂಲಕ್ಕೆ ಏರಿಸುವದು, ಹುಲಿಯ ಬಾಯಿಗೆ ಬೀಳುವದು, ಹದ್ದು ಕಾಗೆಗಳು ಹರಿದು ತಿನ್ನುವದು, ಆನೆಯ ಕಾಲಿನ ಬುಡಕ್ಕೆ ಸಿಲುಕುವದು, ಎಣ್ಣೆ ಮರಳುವ ಕಾದಕೊಪ್ಪರಿಗೆಯಲ್ಲಿ ಕುದಿಯುವದು, ಖಾರ ಪುಡಿಯ ಕೆಸರಿನಲ್ಲಿ ಮುಳುಗುವದು, ಎತ್ತರದ ಮೇಲಿಂದ ಜಿಗಿಸುವದು ಮುಂತಾಗಿ ಪಾಪಿಗಳು ನರಕದಲ್ಲಿ ಅಸಂಖ್ಯ ಯಮಯಾತನೆಗಳನ್ನು ಅನುಭವಿಸಬೇಕಾಗುವುದು.

ನರಕದಲ್ಲಿ ಮಾತ್ರವಲ್ಲ ಸ್ವರ್ಗದಲ್ಲಿಯೂ ಕೂಡ ಕೆಳಗುರುಳುವ ಭಯದಿಂದ ದುಃಖವು ತಪ್ಪಿದಲ್ಲ. ನರಕ ಸ್ವರ್ಗದಿಂದ ಮತ್ತೆ ತಾಯಿಯ ಗರ್ಭದಲ್ಲಿ ಹೊಕ್ಕು ಮತ್ತೆ ಹುಟ್ಟು ಸಾವು. ಪುನಃ ಜನನ. ಅನಂತರ ಕೂಸಿದ್ದಾಗಲೋ ನವ ತಾರುಣ್ಯದಲ್ಲಿಯೋ ಮುಪ್ಪಿನಲ್ಲಿಯೋ ಮತ್ತೆ ಸಾವು. ಈ ಜನನ ಮರಣ ಚಕ್ರದಲ್ಲಿ ಜೀವಿಯು ನುಗ್ಗಾಗಿ ನುಚ್ಚು ನೂರಾಗಿ ಹೋಗುವನು. ಬದುಕಿದ್ದಾಗಲೂ ನಾನಾ ವಿಧವಾದ ದುಃಖಗಳನ್ನು ಅನುಭವಿಸಬೇಕಾಗುವದು. ಹಣವನ್ನು ಗಳಿಸುವಾಗಿ ಬೆಳೆಸುವಾಗ ದುಃಖ. ದುಡ್ಡೇ ದುಃಖದ ಬೀಜವಾಗುವದು. ಹೆಂಡತಿ, ಮಕ್ಕಳು, ಮನೆ, ಹೊಲ, ದುಡ್ಡುಗಳು ಸುಖಜನಕವೆಂದು ಭ್ರಮಿಸಿ ಅವುಗಳನ್ನು ಸಂಪಾದಿಸಿ, ಪಾಲಿಸಿ, ಗಳಿಸಿ, ಬೆಳೆಸುತ್ತಿರುವ ಮನುಷ್ಯನಿಗೆ ಅವುಗಳಿಂದ ಸುಖಕ್ಕಿಂತ ದುಃಖವೇ ಹೆಚ್ಚಾಗಿ ಇವನ ಪದರಿಗೆ ಬೀಳುವದು.

ಹೀಗೆ ವಿವಿಧ ಸಾಂಸಾರಿಕ ದುಃಖ ಕೋಟಿಯಿಂದ ಸಂತಪ್ತರಾದ ಮನುಷ್ಯರಿಗೆ ಮೋಕ್ಷದ ಹೊರತು ಬೇರೆಡೆಗೆ ಶಾಂತಿಯೆಲ್ಲಿ ! ಸುಖವೆಲ್ಲಿ! ಸಮಾಧಾನವೆಲ್ಲಿ ! ಮುಕ್ತಿ ಮರದ ನೆರಳಿನಲ್ಲಿ ಕುಳಿತ ಮನುಷ್ಯನಿಗೆ ಆಧ್ಯಾತ್ಮಿಕ ಆಧಿಭೌತಿಕ ಆಧಿ ದೈವಿಕ ತಾಪತ್ರಯಗಳೂ ಪರಿಹಾರವಾಗಿ ಜನನ ಮರಣಾದಿ ದುಃಖಗಳೆಲ್ಲ ದೂರವಾಗುವವು. ಈ ಸಂಸಾರತಾಪಗಳಿಗೆಲ್ಲ ಪರಮಾತ್ಮ ಪ್ರಾಪ್ತಿಯೇ ದಿವ್ಯ ಔಷಧವೆನಿಸಿದೆ. ಅದೇ ಮೋಕ್ಷವು ಅದರಿಂದಲೇ ಸರ್ವದುಃಖಗಳ ಆತ್ಯಂತಿಕಲಯವಾಗುತ್ತದೆ. ಆದುದರಿಂದ ಪಂಡಿತರಾದವರು ಅಂಥ ಭಗವತ್ಪ್ರಸಾದೈಕಲಭ್ಯವಾದ ಮುಕ್ತಿಯನ್ನು ಹೊಂದಲು ಪ್ರಯತ್ನಿಸಬೇಕು. ಮೋಕ್ಷದಾಯಕವಾದ ಭಗವಂತನ ಪ್ರಾಪ್ತಿಗೆ ಜ್ಞಾನಕರ್ಮಗಳು ಕಾರಣವೆಂದು ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಈ ಜ್ಞಾನವು ಪರೋಕ್ಷಜ್ಞಾನ ಅಪರೋಕ್ಷಜ್ಞಾನ ಎಂದು ಎರಡು ಬಗೆಯಾಗಿದೆ. ವೇದ, ಬ್ರಹ್ಮಮೀಮಾಂಸಾದಿ ಶಾಸ್ತ್ರಗಳ ಪರ್ಯಾಲೋಚನೆಯಿಂದ ಶಬ್ದ ಬ್ರಹ್ಮದ ಜ್ಞಾನವಾಗುವದು. ದೀಪವು ಕತ್ತಲೆಯನ್ನುಕಳೆಯುವಂತೆ ಶಾಸ್ತ್ರಜನ್ಯವಾದ ಜ್ಞಾನವು ಅಜ್ಞಾನವನ್ನು ಹೊಡೆದು ಹಾಕುತ್ತದೆ. ಅದರಿಂದ ಶ್ರವಣ, ಮನನ, ನಿದಿಧ್ಯಾನ, ಧ್ಯಾನಯೋಗದಿಂದ ಪರಮಾತ್ಮನ ಅಪರೋಕ್ಷ ಜ್ಞಾನವಾಗುವದು. ಶಬ್ದ ಬ್ರಹ್ಮದಲ್ಲಿ ನಿಷ್ಣಾತನಾದವನು ಪರಬ್ರಹ್ಮವನ್ನು ಪಡೆಯುತ್ತಾನೆ ಎಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ. ಅಥರ್ವಣ ಶೃತಿಯಲ್ಲಿ

''ದ್ವೇ ವಿದ್ಯೇ ವೇದಿತವ್ಯೆ ಪರಾ ಚೈವಾಪರಾ ಚ '' ಎಂದು ಪರಾಪರ ವಿದ್ಯೆಗಳ ಬಗೆಗೆ ನಿರೂಪಣೆ ಗೈದಿದ್ದಾರೆ. ಕರ್ಮಕಾಂಡ ಬೋಧಕವಾದ ಋಗಾದಿ ವಿದ್ಯೆಯೆಲ್ಲವೂ ಅಪರ ವಿದ್ಯೆ ಎನಿಸುವದು. ಆ ಪರಬ್ರಹ್ಮನಾದ ಶ್ರೀ ವಿಷ್ಣುವನ್ನು ಮಾತ್ರ ಪ್ರತಿಪಾದಿಸುವ ಬ್ರಹ್ಮ ಮೀಮಾಂಸಾ ಅಥವಾ ವೇದಾಂತ ಶಾಸ್ತ್ರವು ಪರವಿದ್ಯೆ ಎನಿಸುವದು. ಅವ್ಯಕ್ತನೂ, ಮುಪ್ಪು ತಪ್ಪಿದವನೂ, ಸಾವು ಸಮೀಪದಲ್ಲಿಯೂ ಸುಳಿಯದವನೂ, ನೋವು ನರಳಿಕೆಗಳ ಗುರುತೇ ಇಲ್ಲದವನೂ, ಪ್ರಾಕೃತವಾದ ಕೈಕಾಲುಗಳಿಲ್ಲದವನೂ, ಸರ್ವತ್ರ ವ್ಯಾಪ್ತನೂ, ಸರ್ವಕ್ಕೂ ಕಾರಣನೂ, ಸ್ವಯಂ ಕಾರಣ ಶೂನ್ಯನೂ, ನಾಶರಹಿತನೂ ಆದ ಪರಬ್ರಹ್ಮನನ್ನೇ ಮೋಕ್ಷ ಬಯಸುವವರು ಧ್ಯಾನ ಮಾಡಬೇಕು. ಇಂಥ ಭಗವತ್ ಶಬ್ದವಾಚ್ಯನಾದ ಪರಮಾತ್ಮನ ದಿವ್ಯ ಸ್ವರೂಪವನ್ನು ಮಾತ್ರ ತಿಳಿಸಿ ಕೊಡುವ ಜ್ಞಾನವೇ ಪರವಿದ್ಯೆ ಎನಿಸುವದು. ಉಳಿದುದೆಲ್ಲವೂ ಅಪರವಿದ್ಯೆ.

ವಾಸ್ತವಿಕವಾಗಿ ಆ ಪರಮಾತ್ಮನು ಶಬ್ದಾ ಗೋಚರನೇ ಆಗಿದ್ದಾನೆ. ಯಾವ ಶಬ್ದಗಳೂ ಸಾಕಲ್ಯೇನ ಅವನ ಸ್ವರೂಪಜ್ಞಾನವನ್ನು ಮಾಡಿ ಕೊಡಲಾರವು. ಆದರೂ ಸರ್ವ ಕಾರಣಗಳಿಗೂ ಮೂಲಕಾರಣನಾದ ಆ ಪರಮಾತ್ಮನ ಮಹಾವಿಭೂತಿಯನ್ನು 'ಭಗವಾನ್' ಎಂಬ ಶಬ್ದದಿಂದ ಕರೆಯುತ್ತಾರೆ. ಭಗವಾನ್ ಶಬ್ದದಲ್ಲಿ 'ಭ' ಕಾರಕ್ಕೆ ಎಲ್ಲರನ್ನೂ ಪಾಲನ ಪೋಷಣ ಮಾಡುವವ ಎಂದು ಅರ್ಥ. 'ಗ'ಕಾರಕ್ಕೆ ಸ್ಥಿತಿ ಕರ್ತಾ, ನಾಶಕರ್ತಾ, ಮೋಕ್ಷವನ್ನು ಕೊಡುವವ ಎಂದು ಅರ್ಥವಿದೆ.

**ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ**
**ಜ್ಞಾನ ವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಃ ।**

ಪೂರ್ಣವಾದ ಐಶ್ವರ್ಯ ಧರ್ಮ, ಯಶಸ್ಸು, ಶ್ರೀ ಜ್ಞಾನ, ವೈರಾಗ್ಯ ಈ ಆರರ ಗಣಕ್ಕೆ ಭಗ ಎಂದು ಹೆಸರು. '' ವಸತಿ ಅಸ್ಮಿನ್ ಸರ್ವಂ ಅಥವಾ ವಸತಿ ಸರ್ವೇಷು '' ಅಂದರೆ ಆ ಪರಮಾತ್ಮನು ಸರ್ವರಲ್ಲಿಯೂ ಸರ್ವತ್ರಾಪಿ ವಾಸಿಸಿದ್ದಾನೆ. ಸರ್ವವೂ ಅವನನ್ನು ಆಧರಿಕೊಂಡಿದೆ ಎಂದು 'ವ ' ಶಬ್ದವು ತಿಳಿಸುತ್ತದೆ. ಹೀಗೆ ಭಗವತ್ ಶಬ್ದವು ಸರ್ವ ಕರ್ತನೂ ಜ್ಞಾನಾನಂದಾದಿ ಷಡ್ಗುಣೈಶ್ವರ್ಯ ಸಂಪನ್ನನೂ ಸರ್ವತ್ರ ವ್ಯಾಪ್ತನೂ ಆದ ಆ ಪರಮಾತ್ಮನನ್ನು ಬೋಧಿಸುತ್ತದೆ. ಪರಬ್ರಹ್ಮ ಬೋಧಕವಾದ ಈ ಭಗವಾನ್ ಶಬ್ದವು ವಾಸುದೇವನ ಹೊರತು ಬೇರಾರನ್ನೂ ಬೋಧಿಸಲಾರದು. ಪೂಜ್ಯವಸ್ತುವನ್ನು ಹೇಳುವ ಪರಿಭಾಷೆಯುಳ್ಳ ಈ ಶಬ್ದವು ಮುಖ್ಯವಾಗಿ ಭಗವದ್ವಾಚಕ. ಬೇರೆಡೆ ಅವನ ಭಕ್ತಾದಿಗಳಲ್ಲಿ ಅವನ ಭೃತ್ಯರಾದ ದೇವತಾದಿಗಳಲ್ಲಿಯೂ ಪ್ರಯೋಗಿಸಿದರೂ ಅದು ಗೌಣ. ಕೇವಲ ಪೂಜ್ಯರು ದೊಡ್ಡವರು ಎಂದು ಮಾತ್ರ ಅರ್ಥಮಾಡಿಕೊಡುವದು. ಇತರತ್ರ ಇದು ಔಪಚಾರಿಕ ಎಂದು ತಿಳಿಯಬೇಕು. ನಿಜವಾದ ''ಭಗವಾನ್'' ಎಂದರೆ

**ಉತ್ಪತ್ತಿಂ ಪ್ರಳಯಂ ಚೈವ ಭೂತಾನಾಮಾಗತಿಂ ತಥಾ ।**
**ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥**

ಜಗತ್ತಿನ ಸೃಷ್ಟಿ ಸಂಹಾರ, ಎಲ್ಲ ಪ್ರಾಣಿಗಳ ಜನ್ಮ ಜನ್ಮಾಂತರಗಳ ಸ್ಥಿತಿ, ಗತಿಗಳನ್ನೂ, ವಿದ್ಯಾ ಅವಿದ್ಯಾಗಳನ್ನೂ ತಿಳಿದು ಸರ್ವನಿಯಮನ ಮಾಡುವವನೇ ಭಗವಾನ್

ಎಂದು ಕರೆಯಲ್ಪಡುತ್ತಾನೆ. ಪೂರ್ಣಜ್ಞಾನ, ಪೂರ್ಣೈಶ್ವರ್ಯ, ಪೂರ್ಣಶಕ್ತಿ, ಪೂರ್ಣ ತೇಜಸ್ಸು, ದೋಷರಾಹಿತ್ಯ ಮುಂತಾದ ಗುಣಗಳು ಭಗವಾನ್ ಶಬ್ದದಿಂದ ಹೇಳಲ್ಪಡುತ್ತವೆ. ಈ ಎಲ್ಲ ಗುಣಗಳೂ ಸರ್ವಭೂತವಾಸನಾದ ಆ ವಾಸುದೇವನ ಹೊರತು ಬೇರೊಬ್ಬರಲ್ಲಿ ಬರುವದು ಸಾಧ್ಯವಿಲ್ಲದ್ದರಿಂದ ಅವನೇ ನಿಜವಾದ 'ಭಗವಾನ್' ಆಗಿರುತ್ತಾನೆ. ಹಿಂದೆ ಖಾಂಡಿಕ್ಯ ಜನಕನು ಪ್ರಶ್ನೆ ಮಾಡಿದಾಗ ಕೇಶಿಧ್ವಜನು ವಾಸುದೇವ ಶಬ್ದದ ಅರ್ಥವನ್ನು ಈ ರೀತಿಯಾಗಿ ತಿಳಿಸಿದ್ದ.

**"ಭೂತೇಷು ವಸತೇ ಸೋऽಂತರ್ವಸಂತ್ಯತ್ರ ಚ ತಾನಿ ಯತ್ ।**
**ಧಾತಾ ವಿಧಾತಾ ಜಗತಾಂ ವಾಸುದೇವ ಸ್ತತಃ ಪ್ರಭುಃ ॥**

ಯಾವನು ಸರ್ವ ಪ್ರಾಣಿಗಳಲ್ಲಿಯೂ ವಾಸವಾಗಿದ್ದಾನೋ, ಯಾವನಲ್ಲಿ ಎಲ್ಲ ಪ್ರಾಣಿಗಳೂ ಇರುತ್ತವೆಯೋ, ಯಾವನು ಈ ಜಗತ್ತಿನ ಸೃಷ್ಟಿ ಸ್ಥಿತ್ಯಾದಿ ಕರ್ತನಾಗಿದ್ದಾನೋ, ಯಾವನು ಸರ್ವನಿಯಾಮಕನೂ ಆಗಿದ್ದಾನೋ ಅವನೇ ವಾಸುದೇವ. ಅವನು ಸರ್ವ ಪ್ರಕೃತಿವಿಕಾರ, ಪ್ರಾಕೃತಿಕ ಗುಣದೋಷಗಳಿಂದ ಅತ್ಯಂತ ದೂರನಾಗಿದ್ದಾನೆ. ಯಾವ ಆವರಣ ನಿಯಮ ನಿಬಂಧನೆಗಳಿಗೂ ಅವನು ಒಳಗಾಗುವುದಿಲ್ಲ. ಸಕಲ ಕಲ್ಯಾಣ ಗುಣ ಪರಿಪೂರ್ಣವಾದ ಅವನು ತನ್ನ ಶಕ್ತಿ ಲವಲೇಶದಿಂದಲೇ ಜಗದಂಡ ಮಂಡಲವನ್ನೆಲ್ಲ ಸರ್ವತ್ರ ವ್ಯಾಪಿಸಿಕೊಂಡು ತನ್ನ ಇಚ್ಛೆಯಿಂದಲೇ ಅನೇಕ ರೂಪ ದೇಹಾದಿಗಳನ್ನು ಸ್ವೀಕರಿಸಿ ಪ್ರಪಂಚದ ಕಲ್ಯಾಣವನ್ನುಂಟು ಮಾಡುತ್ತಾನೆ. ಇಂಥ ಸರ್ವಗುಣ ಪರಿಪೂರ್ಣನೂ, ಪರಾತ್ಪರನೂ, ವ್ಯಕ್ತಾವ್ಯಕ್ತಸ್ವರೂಪನೂ, ಸರ್ವೇಶ್ವರನೂ, ಸರ್ವಜ್ಞಾನಿಯೂ, ಸರ್ವ ಸಮರ್ಥನೂ ಆದ ಆ ಪರಮೇಶ್ವರನನ್ನು ಯಥಾ ಶಕ್ತಿ ತಿಳಿಸಿಕೊಡುವ ವಿದ್ಯೆಯೇ ಪರವಿದ್ಯೆ. ಉಳಿದುದೆಲ್ಲವೂ ಅಪರವಿದ್ಯೆ.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಆರನೇ ಅಂಶದ ಐದನೇಯ ಅಧ್ಯಾಯ ಸಂಪೂರ್ಣ*

—o—

## ಕೇಶಿಧ್ವಜ ಖ್ಯಾಂಡಿಕ್ಯರ ಕಥೆ

**ಅಧ್ಯಾಯ - ೬**

ಆ ಪುರುಷೋತ್ತಮನನ್ನು ಸ್ವಾಧ್ಯಾಯ ಮತ್ತು ಸಂಯಮ ಎರಡರಿಂದ ಕಾಣಬಹುದು. ಬ್ರಹ್ಮನನ್ನು ಹೊಂದಲು ಕಾರಣವಾದ ಈ ಸ್ವಾಧ್ಯಾಯ, ಸಂಯಮಗಳು ಕೂಡ ಬ್ರಹ್ಮ ಎಂದೇ ಕರೆಯಲ್ಪಡುತ್ತವೆ. ವೇದಶಾಸ್ತ್ರಾಧ್ಯಯನ ರೂಪ ಜ್ಞಾನಯೋಗದಿಂದ ನಿರಂತರ ಧ್ಯಾನ ರೂಪವಾದ ಭಕ್ತಿಯನ್ನು ಆಶ್ರಯಿಸಬೇಕು. ಆ ಭಕ್ತಿಯೋಗದಿಂದ ಜ್ಞಾನಯೋಗವನ್ನು ಆಶ್ರಯಿಸಬೇಕು. ಜ್ಞಾನಭಕ್ತಿಗಳ ಮೇಲನಮಾಡಿ ನಿರಂತರವಾಗಿ ಮಾಡಿದ ಧ್ಯಾನೋಪಾಸನೆಗಳಿಂದ ಪರಮಾತ್ಮನ ದಿವ್ಯದರ್ಶನವಾಗುತ್ತದೆ. ಆ ಭಗವಂತನನ್ನು ಕಾಣಲು ಈ ಚರ್ಮ ಚಕ್ಷುಸ್ಸಿನಿಂದ ಸಾಧ್ಯವಿಲ್ಲ. ಅವನನ್ನು ನೋಡಲು ಈ ಜ್ಞಾನಯೋಗ, ಧ್ಯಾನ ಯೋಗಗಳೇ ಎರಡು ಕಣ್ಣಾಗಿವೆ. ಈ ವಿಷಯದಲ್ಲಿ ಕೇಶಿಧ್ವಜನು ಖಾಂಡಿಕ್ಯ ಜನಕನಿಗೆ ಯೋಗದ ಬಗೆಗೆ ಹೇಳಿದ್ದನ್ನು ನಿನಗೆ ತಿಳಿಸುತ್ತೇನೆ. ಕೇಳು. ಧರ್ಮಧ್ವಜ ಎಂಬ ಹೆಸರಿನ ಜನಕರಾಜನಿಗೆ ಅಮಿತಧ್ವಜ ಕೃತಧ್ವಜ ಎಂದು ಹೆಸರಿನ ಇಬ್ಬರು ಮಕ್ಕಳಿದ್ದರು. ಕೃತಧ್ವಜನಿಗೆ ಕೇಶಿಧ್ವಜ ಎಂಬ ಅಧ್ಯಾತ್ಮ ನಿಷ್ಠನಾದ ಪುತ್ರನು ಹುಟ್ಟಿದನು. ಅಮಿತಧ್ವಜನಿಗೆ ಖಾಂಡಿಕ್ಯ ಎಂಬ ಮಗನು ಹುಟ್ಟಿದನು. ಜನಕನ ವಂಶದಲ್ಲಿ ಹುಟ್ಟಿದ್ದರಿಂದ ಇವನನ್ನು ಖಾಂಡಿಕ್ಯಜನಕ ಎಂದು ಕರೆಯುತ್ತಿದ್ದರು. ಈ ಖಾಂಡಿಕ್ಯಜನಕನು ಕರ್ಮ ಮಾರ್ಗದಲ್ಲಿ ಅತ್ಯಂತ ನಿಪುಣನೂ, ಪ್ರಸಿದ್ಧನೂ ಆಗಿದ್ದನು. ಕೇಶಿಧ್ವಜನಾದರೂ ಆಧ್ಯಾತ್ಮ ವಿದ್ಯೆಯಲ್ಲಿ ವಿಶಾರದನಾಗಿದ್ದನು. ಅವರಿಬ್ಬರೂ ಒಬ್ಬರನ್ನೊಬ್ಬರು ಗೆಲ್ಲಲು ಬಯಸುತ್ತಿದ್ದರು. ಕೊನೆಗೆ ಕೇಶಿಧ್ವಜನು ಖಾಂಡಿಕ್ಯ ಜನಕನನ್ನು ರಾಜ್ಯ ಭ್ರಷ್ಟನನ್ನಾಗಿ ಮಾಡಿದನು.

ಆ ಖಾಂಡಿಕ್ಯ ಜನಕನು ತನ್ನ ಪುರೋಹಿತರಿಂದಲೂ, ಮಂತ್ರಿಯಿಂದಲೂ ಕೂಡಿಕೊಂಡು ಅತ್ಯಲ್ಪವಾದ ಸಾಧನ ಸಾಮಗ್ರಿಗಳನ್ನು ತೆಗೆದುಕೊಂಡು ರಾಜ್ಯವನ್ನು ತೊರೆದು ಅರಣ್ಯವನ್ನು ಸೇರಿದನು. ಇತ್ತ ಕೇಶಿಧ್ವಜನು ಜ್ಞಾನನಿಷ್ಠನಾಗಿ ಬ್ರಹ್ಮವಿದ್ಯೆಯನ್ನು ಆಶ್ರಯಿಸಿ ಅಜ್ಞಾನ ಬಂಧನದಿಂದ ಪಾರಾಗಲು ಯಜ್ಞಗಳನ್ನು ಮಾಡಿದನು. ಒಂದು ದಿನ ಕೇಶಿಧ್ವಜನು ಯಜ್ಞವನ್ನು ಮಾಡುತ್ತಲಿರುವಾಗ ಅವನ ಹೋಮದ ಹಸುವನ್ನು ಅರಣ್ಯದಲ್ಲಿ ಒಂದು ಕ್ರೂರವಾದ ಹುಲಿಯು ಹೊಡೆದು ಕೊಂದಿತು. ಆಗ ರಾಜನು ''ಇದಕ್ಕೆ ಏನು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು?'' ಎಂದು ಕೇಳಿದನು. ಅದಕ್ಕೆ ಪುರೋಹಿತರು ''ಈ ವಿಷಯದಲ್ಲಿ ನಮಗೆ ಏನೂ ತಿಳಿಯದು. ಕಶೇರುವನ್ನು ಬೇಕಾದರೆ ಕೇಳು'' ಎಂದು ಉತ್ತರಿಸಿದರು. ಮಹಾರಾಜ ಕೇಶಿಧ್ವಜನು ಕಶೇರುವಿನ ಬಳಿಗೆ ಹೋಗಿ ''ನಮ್ಮ ಹೋಮದ ಹಸುವನ್ನು ಹುಲಿಯು ಕೊಂದಿದೆ. ಇದಕ್ಕೆ ಏನು ಪ್ರಾಯಶ್ಚಿತ್ತ? ಎಂದು ಕೇಳಿದನು. ಅದಕ್ಕೆ ಕಶೇರುವು ''ಮಹಾರಾಜ, ನನಗೂ ಈ ವಿಷಯದಲ್ಲಿ ಸರಿಯಾಗಿ ಜ್ಞಾನವಿಲ್ಲ. ಭೃಗು ಋಷಿಯ ಮಗನಾದ ಶುನಕನನ್ನು ಕೇಳಿ ನೋಡು, ಅವನು ಈ ವಿಷಯದಲ್ಲಿ ಬಲ್ಲವನಾಗಿದ್ದಾನೆ'' ಎಂದನು. ''ಆಗ ಕೇಶಿಧ್ವಜನು ಶುನಕನ ಬಳಿಗೆ ಹೋಗಿ ''ನನ್ನ ಯಾಗವು ನಡೆದಾಗ ನನ್ನ ಧರ್ಮಧೇನುವು ಹತವಾಗಿದೆ. ಇದಕ್ಕೆ ಏನು

ಪ್ರಾಯಶ್ಚಿತ್ತ?'' ಎಂದು ಕೇಳಿದನು. ಅದಕ್ಕೆ ಶುನಕನು '' ಮಹಾರಾಜ, ನಿಜವಾಗಿ **ಹೇಳಬೇಕೆಂದರೆ ಈ ವಿಷಯದಲ್ಲಿ** ನನಗಾಗಲಿ, ಕಶೇರುಗಾಗಲಿ, ಮತ್ತೆ ಬೇರಾರಿಗೇ ಆಗಲಿ, ಸರಿಯಾದ ಜ್ಞಾನವಿಲ್ಲ. ಈ ವಿಷಯವನ್ನು ಪೂರ್ಣವಾಗಿ ಅರಿತವನೆಂದರೆ ನೀನು ಗೆದ್ದು ದೇಶದಿಂದ ಹೊರಗೆ ಹಾಕಿದ ಖಾಂಡಿಕ್ಯಜನಕನೊಬ್ಬನೇ ಆಗಿದ್ದಾನೆ. ಅವನ ಹೊರತು ಬೇರಾರಿಗೂ ಇದರ ಸರಿಯಾದ ತಿಳುವಳಿಕೆಯಿಲ್ಲ.'' ಎಂದು ಹೇಳಿದನು. ಈ ಮಾತನ್ನು ಕೇಳಿ ಕೇಶಿಧ್ವಜನು ''ಹಾಗಾದರೆ ನಾನು ಆ ಖಾಂಡಿಕ್ಯನ ಬಳಿಗೇ ಹೋಗುತ್ತೇನೆ. ಅವನು ನನ್ನ ವೈರಿಯಾದರೂ ಚಿಂತೆಯಿಲ್ಲ. ಅಲ್ಲಿ ಹೋದಾಗ ಅವನು ಧಾರ್ಮಿಕ ವಿಷಯವನ್ನು ಕೇಳಲು ಹೋದ ನನ್ನನ್ನು ಕೊಂದರೆ ಅವರಿಂದ ನನಗೆ ಯಜ್ಞದ ಫಲವು ದೊರಕುತ್ತದೆ. ಅಥವಾ ಅವನು ನನ್ನನು ಕೊಲ್ಲದೇ ಸರಿಯಾಗಿ ಪ್ರಾಯಶ್ಚಿತ್ತವನ್ನು ಹೇಳಿದರೆ ನನ್ನ ಯಜ್ಞವು ಯಾವ ಲೋಪದೋಷವೂ ಇಲ್ಲದೆ ನಿರ್ವಿಘ್ನವಾಗಿ ನೆರವೇರುವದು.'' ಎಂದು ನಿರ್ಧರಿಸಿದನು. ಅದರಂತೆ ಕೇಶಿಧ್ವಜನು ಕೃಷ್ಣಾಜಿನವನ್ನು ಹೊದ್ದುಕೊಂಡು ರಥವನ್ನು ಏರಿ ಖಾಂಡಿಕ್ಯ ಜನಕನು ವಾಸಿಸಿದ ಅರಣ್ಯಕ್ಕೆ ತೆರಳಿದನು. ದೂರದಿಂದ ರಥಾರೂಢನಾಗಿ ಬರುತ್ತಲಿರುವ ಕೇಶಿಧ್ವಜನನ್ನು ಕಂಡು ಖಾಂಡಿಕ್ಯನಿಗೆ ಸಿಟ್ಟು ಬಂದಿತು. ಕಣ್ಣು ಕೋಪದಿಂದ ಕೆಂಪಗಾಯಿತು. ಕೈಯ ಬಾಣವನ್ನು ತೆಗೆದು ಬಿಲ್ಲಿನಲ್ಲಿ ಹೆದೆಏರಿಸಿ ಗುರಿಯಿಟ್ಟು ಅವನು ಸಿಟ್ಟಿನಿಂದಲೇ ಕೇಶಿಧ್ವಜನನ್ನು ಕುರಿತು ಗರ್ಜಿಸಿ ನುಡಿದ- ''ಮೂರ್ಖಾ, ಕೃಷ್ಣಾಜಿನದ ಕವಚವನ್ನು ಹಾಕಿಕೊಂಡು ನನ್ನನ್ನು ಕೊಲ್ಲ ಬಂದೆಯಾ ! ಕೃಷ್ಣಾಜಿನವನ್ನು ತೊಟ್ಟುಕೊಂಡರೆ ನಾನು ನಿನ್ನನ್ನು ಕೊಲ್ಲುವದಿಲ್ಲ ಎಂದು ಭಾವಿಸಿರುವೆ. ಮೃಗಗಳ ಮೈಮೇಲೆ ಕೃಷ್ಣಾಜಿನವೇ ಇರುತ್ತದೆ. ಯಾರಾದರೂ ಅವುಗಳನ್ನು ಕೊಲ್ಲದೇ ಬಿಡುವರೇ? ಅಂಥ ಅನೇಕ ಚಿಗರೆಗಳ ಮೇಲೆ ನಾನು ನೀನು ಇಬ್ಬರೂ ಅನೇಕಬಾರಿ ಬಾಣಗಳನ್ನು ಪ್ರಯೋಗಿಸಿದ್ದೇವೆ. ಈಗಲೂ ಕೃಷ್ಣಾಜಿನವನ್ನು ಧರಿಸಿದ ನಿನ್ನನ್ನು ನಾನು ವಧಿಸುತ್ತೇನೆ. ನನ್ನ ರಾಜ್ಯವನ್ನು ಹರಣಮಾಡಿದ ನೀನು ಪರಮ ನೀಚನಾದ ಆತತಾಯಿಯು ಆಗಿರುವೆ'' ಎಂದು ಬಾಣವನ್ನು ಬಿಡಲು ಉದ್ಯುಕ್ತನಾದನು.

ಅದನ್ನು ಕಂಡು ಕೇಶಿಧ್ವಜನು ವಿನಯದಿಂದ ತಲೆಬಾಗಿ ''ಖಾಡಿಕ್ಯ, ನಾನು ನನ್ನ ಒಂದು ಧರ್ಮ ಸಂಶಯವನ್ನು ನಿನ್ನಿಂದ ಪರಿಹರಿಸಿಕೊಳ್ಳಲಿಕ್ಕಾಗಿ ನಿನ್ನ ಬಳಿಗೆ ಬಂದಿದ್ದೇನೆ. ನಿನ್ನನ್ನು ಕೊಲ್ಲಲಿಕ್ಕೆ ಬಂದಿಲ್ಲ. ಇದನ್ನು ವಿಚಾರಿಸಿ ನೀನು ನನ್ನ ಮೇಲೆ ಕೋಪವನ್ನಾದರೂ ಬಿಡು, ಬಾಣವನ್ನಾದರೂ ಬಿಡು, '' ಎಂದು ಹೇಳಿದನು. ಅನಂತರ ಖಾಂಡಿಕ್ಯನು ತನ್ನ ಎಲ್ಲ ಮಂತ್ರಿಗಳ ಜೊತೆಗೆ ಏಕಾಂತದಲ್ಲಿ ಪುರೋಹಿತರಿಂದ ಕೂಡಿಕೊಂಡು ಗುಪ್ತ ಆಲೋಚನೆಯನ್ನು ಮಾಡಿದನು. ಆಗ ಅವನ ಮಂತ್ರಿಗಳು ''ನಮ್ಮ ಆಶ್ರಮದವರೆಗೆ ಬಂದ ಘಾತಕಿಯಾದ ಈ ಕೇಶಿಧ್ವಜನನ್ನು ನಾವು ಈಗಲೇ ಕೊಲ್ಲಬೇಕು. ಇವನು ಒಬ್ಬಂಟಿಗನಾಗಿ ಇಲ್ಲಿಗೆ ಬಂದಿದ್ದಾನೆ. ನಾವು ಈಗ ಇವನನ್ನು ಇಲ್ಲಿ ಕೊಂದು ಬಿಟ್ಟರೆ ಈ ಭೂಮಂಡಲದ ಸಾಮ್ರಾಜ್ಯವೆಲ್ಲವೂ ನಮ್ಮದೇ ಆಗುವದು'' ಎಂದು ಸಲಹೆ ಮಾಡಿದರು. ಅವರ ಸಲಹೆಯನ್ನು ಕೇಳಿ ಖಾಂಡಿಕ್ಯನು ವಿಚಾರ ಮಾಡಿ ತನ್ನ ನಿರ್ಧಾರವನ್ನು ತಿಳಿಸಿದನು.

''ಮಂತ್ರಿ, ಮಹನೀಯರೇ, ನೀವು ಹೇಳಿದ್ದೇನೋ ನಿಜ. ಏಕಾಕಿಯಾಗಿ ಇಲ್ಲಿಗೆ ಬಂದ ಇವನನ್ನು ನಾವು ಸುಲಭವಾಗಿ ಕೊಲ್ಲಬಹುದು. ಅದರಿಂದ ಅನಾಯಾಸವಾಗಿಯೇ ಭೂಮಂಡಲದ ರಾಜ್ಯವನ್ನೆಲ್ಲ ಗೆಲ್ಲಬಹುದು. ಆದರೆ ಯಜ್ಞದೀಕ್ಷಿತನಾಗಿ ಧರ್ಮ ಜಿಜ್ಞಾಸೆಯಿಂದ ನನ್ನನ್ನು ಕೇಳಲು ಬಂದ ಅವನನ್ನು ವಧಿಸಿದರೆ ಅವನಿಗೆ ಪರಲೋಕ ಜಯವಾಗುವದು. ನನಗೆ ಭೂಲೋಕ ಸಾಮ್ರಾಜ್ಯವು ದೊರಕುವದು. ಅವನನ್ನು ಕೊಲ್ಲದಿದ್ದರೆ ಪರಲೋಕ ಜಯವು ನನ್ನದಾಗಿ ಭೂಲೋಕ ಜಯವು ಅವನದಾಗುವದು. ಭೂಲೋಕ ಜಯ, ಭೂಲೋಕದ ರಾಜ್ಯ ಎಲ್ಲವೂ ಅಶಾಶ್ವತ. ಆದರೆ ಪರಲೋಕ ಜಯವು ಮಾತ್ರ ಶಾಶ್ವತವೂ ಚಿರಂತನವೂ ಸಪ್ರಹಣೀಯವೂ ಆಗಿರುತ್ತದೆ. ಆದ್ದರಿಂದ ಆ ಕೇಶಿಧ್ವಜನನ್ನು ನಾನು ಕೊಲ್ಲದೇ ಅವನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಕಳಿಸುತ್ತೇನೆ.'' ಹೀಗೆ ನಿರ್ಧರಿಸಿ ಖಾಂಡಿಕ್ಯಜನಕನು ತನ್ನ ವೈರಿಯಾದ ಕೇಶಿಧ್ವಜನ ಬಳಿಗೆ ಬಂದು ''ನಿನಗೆ ಏನು ಕೇಳುವದಿದೆಯೊ ಕೇಳು. ನಿನ್ನ ಪ್ರಶ್ನೆಗೆ ನಾನು ಸರಿಯಾಗಿ ಉತ್ತರ ಹೇಳುತ್ತೇನೆ '' ಎಂದು ಸೌಮ್ಯವಾಗಿ ಹೇಳಿದನು. ಆಗ ಕೇಶಿಧ್ವಜನು ತನ್ನ ಯಾಗದ ಆಕಳು ಕಾಡಿನಲ್ಲಿ ಹುಲಿಯಿಂದ ಹೊಡೆಯಲ್ಪಟ್ಟ ಸಮಾಚಾರವನ್ನು ತಿಳಿಸಿ ''ಇದಕ್ಕೆ ಏನು ಪ್ರಾಯಶ್ಚಿತ್ತ?'' ಎಂದು ಕೇಳಿದನು. ಅದನ್ನು ಕೇಳಿ ಖಾಂಡಿಕ್ಯ ಜನಕನು ತನಗೆ ಗೊತ್ತಿದ್ದಂತೆ ಗೋಹತ್ಯಾ ದೋಷ ನಿವಾರಣೆಗಾಗಿ ಶಾಸ್ತ್ರ ಗ್ರಂಥಗಳಲ್ಲಿ ಹೇಳಿದ ಪ್ರಾಯಶ್ಚಿತ್ತದ ವಿಧಿ ವಿಧಾನವನ್ನೆಲ್ಲ ವಿವರವಾಗಿ ತಿಳಿಸಿಕೊಟ್ಟನು. ಅದನ್ನೆಲ್ಲ ಸರಿಯಾಗಿ ಕೇಳಿ ತಿಳಿದುಕೊಂಡು ಕೇಶಿಧ್ವಜನು ಮಹಾತ್ಮನಾದ ಖಾಂಡಿಕ್ಯ ಜನಕನ ಉಪಕಾರಕ್ಕಾಗಿ ಅಭಿನಂದಿಸಿ ಅವನ ಅಪ್ಪಣೆ ಪಡೆದು ತನ್ನ ಯಜ್ಞಮಂಟಪಕ್ಕೆ ಬಂದನು. ಅಲ್ಲಿ ಖಾಂಡಿಕ್ಯನು ಹೇಳಿದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಅನಂತರ ತಾನು ಕೈಕೊಂಡ ಯಾಗವನ್ನು ವಿಧಿಪೂರ್ವಕವಾಗಿ ಮಾಡಿ ಮುಗಿಸಿ ಅವಭೃತ ಸ್ನಾನ ಮಾಡಿ ಕೃತಕೃತ್ಯನಾದನು. ಯಜ್ಞವೆಲ್ಲವೂ ಮುಗಿದ ಬಳಿಕ ಅವನಿಗೆ ಒಂದು ವಿಚಾರ ಬಂದಿತು. ''ನನ್ನ ಯಾಗವೇನೋ ನಿರ್ವಿಘ್ನವಾಗಿ ಮುಗಿದಿದೆ. ಋತ್ವಿಜರಿಗೆ ವಿಪುಲವಾಗಿ ದಾನ ಕೊಟ್ಟಿದ್ದೇನೆ. ಸದಸ್ಯರನ್ನೆಲ್ಲ ಗೌರವಿಸಿದ್ದೇನೆ. ಬಂದ ಯಾಚಕರಿಗೆಲ್ಲ ಬೇಡಿದ್ದನ್ನು ಕೊಟ್ಟು ತೃಪ್ತಿಪಡಿಸಿದ್ದೇನೆ. ಲೋಕಾಚಾರಕ್ಕೆ ಅನುಸರಿಸಿ ಮಾಡಬೇಕಾದದ್ದೆಲ್ಲ ಮಾಡಿ ಮುಗಿಸಿದ್ದೇನೆ. ಇಷ್ಟಾದರೂ ನನ್ನ ಮನಸ್ಸಿಗೆ ಏಕೋ ಸಮಾಧಾನವಿಲ್ಲ. ಈ ಯಜ್ಞದಲ್ಲಿ ಯಾವುದೋ ಕ್ರಿಯಾಲೋಪ ಆದಂತೆ ಎನಿಸುತ್ತದೆ. ಅದಕ್ಕಾಗಿ ನನ್ನ ಮನಸ್ಸಿನಲ್ಲಿ ಯಾವುದೋ ಅವ್ಯಕ್ತವಾದ ಚಿಂತೆ, ಕೊರಗು ಕುಟುಕುತ್ತಲಿದೆ. ಯಾಕಾಗಿರಬಹುದು ? ಓಗೆ ಬಹುವಿಧವಾಗಿ ಆಲೋಚನೆ ಮಾಡಿದ ಬಳಿಕ ಅವನಿಗೆ ಖಾಂಡಿಕ್ಯನ ನೆನಪಾಯಿತು. ''ನಾನು ಖಾಂಡಿಕ್ಯನಿಂದ ಪ್ರಾಯಶ್ಚಿತ್ತ ಉಪದೇಶವನ್ನು ಪಡೆದು ಬಂದು ಯಜ್ಞವನ್ನು ಪೂರ್ತಿಗೊಳಿಸಿದೆ. ಆದರೆ ಆ ಉಪದೇಶವನ್ನು ಕೊಟ್ಟು ಯಜ್ಞ ಸಮಾಪ್ತಿಗೆ ಕಾರಣನಾದ ಆ ಗುರುವಿಗೆ ಗುರುದಕ್ಷಿಣೆಯನ್ನೇ ಕೊಡಲಿಲ್ಲ. ಅದಕ್ಕಾಗಿಯೇ ನನ್ನ ಮನಸ್ಸಿನಲ್ಲಿ ಅಸ್ಪಷ್ಟವಾದ ಹಳಹಳಿ ಉಳಿದುಕೊಂಡಿದೆ'' ಎಂದು ನಿರ್ಧರಿಸಿ ಮತ್ತೆ ವನಕ್ಕೆ ಹೊರಟನು. ಖಾಂಡಿಕ್ಯನು ಬಯಸಬಹುದೆಂದು ಹೊನ್ನ ರನ್ನಗಳ ಹೊರೆಯನ್ನು

ಗುರುದಕ್ಷಿಣೆಯನ್ನಾಗಿ ತೆಗೆದುಕೊಂಡು ರಥಾರೂಢನಾಗಿ ಅರಣ್ಯಕ್ಕೆ ಬಂದನು. ಶಸ್ತ್ರಧಾರಿಯಾಗಿ ಬಂದ ಕೇಶಿಧ್ವಜನನ್ನು ಕಂಡು ಖಾಂಡಿಕ್ಯನು ತಾನೂ ಆಯುಧವನ್ನು ಧರಿಸಿ ಅವನನ್ನು ಕೊಲ್ಲಲು ಬಂದನು. ಅದನ್ನು ಕಂಡು ಕೇಶೀಧ್ವಜನು ನಮ್ರನಾಗಿ ನುಡಿದನು. 'ಖಾಂಡಿಕ್ಯ, ನಾನು ನಿನ್ನನ್ನು ಹೊಡೆಯಲು ಬಂದಿಲ್ಲ. ಸಿಟ್ಟಿಗೇಳಬೇಡ. ನಾನು ನಿನಗೆ ಗುರುದಕ್ಷಿಣೆಯನ್ನು ಕೊಡಲು ಬಂದಿದ್ದೇನೆ. ನೀನು ಮಾಡಿದ ಸದುಪದೇಶವನ್ನು ಕೇಳಿ, ನಾನು ನನ್ನ ಯಜ್ಞವನ್ನು ಸಾಂಗವಾಗಿ ನೆರವೇರಿಸಿದೆ. ಅದಕ್ಕಾಗಿ ನಿನಗೆ ಗುರುದಕ್ಷಿಣೆಯನ್ನು ಕೊಡಬಯಸಿ ಆಗಮಿಸಿದ್ದೇನೆ. ಇದನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸು ಮತ್ತು ನಿನಗೆ ಏನು ಗುರುದಕ್ಷಿಣೆ ಬೇಕು ಹೇಳು'' ಖಾಂಡಿಕ್ಯನು ಮತ್ತೆ ತನ್ನ ಮಂತ್ರಿ ಪರಿವಾರ, ಪುರೋಹಿತರ ಗುಪ್ತ ಸಭೆಯನ್ನು ಕರೆದು ಕೇಳಿದನು. '' ಈ ಕೇಶೀಧ್ವಜನು ನನಗೆ ಗುರುದಕ್ಷಿಣೆಯಾಗಿ ಕೊಡಲು ಬಂದಿದ್ದಾನೆ. ನಾನಾವ ಗುರುದಕ್ಷಿಣೆಯನ್ನು ಅವನಿಗೆ ಕೇಳಲಿ ?· ಅದನ್ನು ಕೇಳಿ ಅವನ ಮಂತ್ರಿಗಳು '' ಅವನ ಸರ್ವ ರಾಜ್ಯವನ್ನು ಗುರುದಕ್ಷಣೆಯಾಗಿ ಕೊಟ್ಟು ಬಿಡಲು ಕೇಳಿರಿ. ಅಂದರೆ ನಮ್ಮ ಸೈನಿಕರಿಗೆ ಯಾವ ಆಯಾಸವೂ ಆಗದೇ ಒಂದು ಹನಿ ರಕ್ತಪಾತವಾಗದೆ, ನಮಗೆ ಸಾಮ್ರಾಜ್ಯವು ದೊರಕುತ್ತದೆ'' ಎಂದು ಸಲಹೆ ಮಾಡಿದರು.

ಅದನ್ನು ಕೇಳಿ ಬುದ್ಧಿವಂತನಾದ ಖಾಂಡಿಕ್ಯನು ನಕ್ಕು ನುಡಿದನು - '' ಅರ್ಥವೇ ಪುರುಷಾರ್ಥವೆಂದು ಬಗೆದ ನೀವು ಸಲಹೆ ಮಾಡಿದ್ದೇನೋ ಸರಿಯಾಗಿದೆ. ಆದರೆ ನಿಜವಾದ ಪರಮಾರ್ಥ ಎಂದರೆ ಏನು ಎಂಬುದನ್ನು ನೀವು ಅರಿತಿಲ್ಲ. ನಾನು ಇನ್ನು ರಾಜ್ಯವನ್ನು ಪಡೆದರೂ ಆಳುವದಾದರೂ ಎಷ್ಟು ದಿನ! ಇಷ್ಟು ದಿನಗಳ ಇಷ್ಟು ಅಲ್ಪಾವಧಿಯ ಶಾಸನಕ್ಕಾಗಿ ನಮ್ಮಂಥವರು ಭೂಮಿಯನ್ನು ಬೇಡಿ ಪಡೆಯಬೇಕೇ! ಹೀಗೆ ನುಡಿದು ಖಾಂಡಿಕ್ಯನು ಕೇಶೀಧ್ವಜನ ಬಳಿಗೆ ಬಂದು ''ನಾನು ಬೇಡಿದ ಗುರುದಕ್ಷಿಣೆಯನ್ನು ಕೊಡುವಿಯಾ ? '' ಎಂದು ಕೇಳಿದನು. ಅದಕ್ಕೆ ಕೇಶೀಧ್ವಜನು '' ನೀನು ಕೇಳಿದ ಗುರುದಕ್ಷಿಣೆಯನ್ನು ಕೊಡಲು ನಾನು ಸಿದ್ಧನಿದ್ದೇನೆ ಎಂದು ನುಡಿದನು.

ಆಗ ಖಾಂಡಿಕ್ಯನು ಕೇಶಿಧ್ವಜನಿಗೆ ಈ ಗುರುದಕ್ಷಿಣೆಯನ್ನು ಕೇಳಿದನು - '' ರಾಜನ್ ನೀನು ಆಧ್ಯಾತ್ಮಿಕವಾದ ತತ್ವಜ್ಞಾನ ವಿಷಯದಲ್ಲಿ ಮಹಾಪಂಡಿತನಾಗಿರುವೆ. ನೀನು ನನಗೆ ಗುರುದಕ್ಷಿಣೆಯನ್ನು ಕೊಡುವದಾದರೆ, ಸರ್ವ ಕ್ಲೇಶಗಳನ್ನು ಪರಿಹರಿಸಿ ಶಾಂತಿನೀಡುವ ದಿವ್ಯಜ್ಞಾನದ ಉಪದೇಶವನ್ನು ಹೇಳಿಕೊಡು.

*ಶ್ರೀ ವಿಷ್ಣು ಮಹಾಪುರಾಣದಲ್ಲಿನ ಆರನೇ ಅಂಶದ ಆರನೇ ಅಧ್ಯಾಯ ಸಂಪೂರ್ಣ*

—o—

## ಯೋಗೋಪದೇಶ

ಅಧ್ಯಾಯ - ೭

ಕೇಶೀಧ್ವಜನು 'ನಿನಗೆ ಗುರುದಕ್ಷಿಣೆಯನ್ನು ಏನು ಕೊಡಬೇಕೆಂದು ' ಕೇಳಿದಾಗ ಖಾಂಡಿಕ್ಯನು ಜ್ಞಾನೋಪದೇಶವನ್ನು ಮಾಡು ಎಂದು ಹೇಳಿದ್ದು ಕೇಳಿ ಕೇಶಿಧ್ವಜನಿಗೆ ಆಶ್ಚರ್ಯವೆನಿಸಿತು. ಅವನು ಖಾಂಡಿಕ್ಯನಿಗೆ ''ಕ್ಷತ್ರಿಯರಿಗೆ ರಾಜ್ಯವು ಅತ್ಯಂತ ಪ್ರೀತ್ಯಾಸ್ಪದವಾದದ್ದು. ನಾನು ನಿನಗೆ ಬೇಡಿದ್ದನ್ನು ಕೊಡಲಿಕ್ಕೆ ಸಿದ್ಧನಾದಾಗ ನೀನು ಸಾಮ್ರಾಜ್ಯವನ್ನೇ ಏಕೆ ಕೇಳಲಿಲ್ಲ? '' ಎಂದು ಕೇಳಿದನು. ಅದಕ್ಕೆ ವಿವೇಕಿಯಾದ ಖಾಂಡಿಕ್ಯನು ಸಮಾಧಾನದಿಂದ ಉತ್ತರಿಸಿದನು.

'' ಕೇಶಿಧ್ವಜ, ಪ್ರಜಾಜನರನ್ನು ಪರಿಪಾಲಿಸುವದು ಕ್ಷತ್ರಿಯರ ಧರ್ಮವಾಗಿದೆ. ಕರ್ತವ್ಯಕರ್ಮವಾಗಿದೆ. ತನ್ನ ಸ್ವರಾಜ್ಯದ ಮೇಲೆ ಆಕ್ರಮಣ ಮಾಡಬಂದವರನ್ನು ನಿಗ್ರಹಮಾಡುವದೂ ಅವರ ಧರ್ಮವೇ ಆಗಿದೆ. ನನಗಿಂತ ಬಲಿಷ್ಠನಾದ ನೀನು ನನ್ನ ರಾಜ್ಯವನ್ನು ಕಸಿದುಕೊಂಡೆ. ನಾನು ಶಕ್ತಿ ಇರುವವರೆಗೆ ನಿನ್ನೊಡನೆ ಹೋರಾಡಿದೆ. ಸೋತು ಅಡವಿ ಸೇರಿದೆ. ಶಕ್ತಿಯ ಅಭಾವವು ಅಧರ್ಮವಲ್ಲ. ನಾನು ಈಗ ವಾನಪ್ರಸ್ಥಾಶ್ರಮಿಯಂತೆ ಧರ್ಮಾನುಷ್ಠಾನ ಗೈಯುತ್ತ ಈ ಅರಣ್ಯದಲ್ಲಿದ್ದೇನೆ. ಕ್ಷತ್ರಿಯರಿಗೆ ಯುದ್ಧಮಾಡಿ ಗೆದ್ದು ರಾಜ್ಯವನ್ನುಗಳಿಸುವುದು ಧರ್ಮವಾಗಿದೆ. ಆದರೆ ಭಿಕ್ಷೇಬೇಡಿ ಯಾಚನಾವೃತ್ತಿಯಿಂದ ರಾಜ್ಯಗಳಿಸುವುದು ಧರ್ಮವಲ್ಲ. ಅದಕ್ಕಾಗಿ ನಾನು ನಿನ್ನನ್ನು ರಾಜ್ಯ ಕೊಡು ಎಂದು ಯಾಚಿಸಲಿಲ್ಲ. ಅದು ಧರ್ಮವಲ್ಲ. ನೀಡುವುದೇ ಕ್ಷತ್ರಿಯ ಧರ್ಮ, ಬೇಡುವದಲ್ಲ, ನಾನು ನನ್ನದು ಎಂಬ ಅಭಿಮಾನ ಮದದಿಂದ ಮತ್ತರಾದವರು ರಾಜ್ಯೈಶ್ವರ್ಯಕ್ಕೆ ಆಸೆ ಪಡುತ್ತಾರೆ. ನನಗೆ ಅಂಥ ಆಸೆ ಇಲ್ಲ. ನಾನು ಯದೃಚ್ಛಾ ಲಾಭ ಸಂತುಷ್ಟನಾಗಿದ್ದೇನೆ.'' ಅದನ್ನು ಕೇಳಿ ಕೇಶಿಧ್ವಜನು ಸಂತೃಪ್ತನಾಗಿ ''ನಿನ್ನ ವಿಚಾರಗಳು ಉಚ್ಚ ಹಾಗೂ ಉದಾತ್ತವಾಗಿವೆ. ಯೋಗ್ಯವಾಗಿವೆ. ನೀನು ಗುರುದಕ್ಷಿಣಾರೂಪವಾಗಿ ಜಿಜ್ಞಾಸೆಯನ್ನು ಮಾಡಿರುವೆ. ನಾನು ನಿನಗೆ ಕೆಲವು ತತ್ವಬೋಧಕ ಮಾತುಗಳನ್ನು ಹೇಳುತ್ತೇನೆ ಕೇಳು. ನಾನು ಈ ಅಜ್ಞಾನ ಬಂಧನದಿಂದ ಪಾರಾಗಿ ಮೃತ್ಯುವನ್ನು ದಾಟುವದಕ್ಕಾಗಿ ಅನೇಕ ಯಜ್ಞಯಾಗಗಳನ್ನು ಮಾಡುತ್ತಲಿದ್ದೇನೆ. ಮತ್ತು ನನ್ನ ಅನಿಷ್ಟ ಪುಣ್ಯಗಳನ್ನು ಸವಿಸುವದಕ್ಕಾಗಿ ರಾಜ್ಯೈಶ್ವರ್ಯ ಸುಖವನ್ನು ಅನುಭವಿಸುತ್ತೇನೆ. ನಿನ್ನ ಮನಸ್ಸು ಈಗ ಜಿಜ್ಞಾಸೋನ್ಮುಖವಾದದ್ದು ಬಹಳ ಸಂತೋಷ. ತನ್ನದಾಗದ್ದನ್ನು ತನ್ನದೆಂದು ತಿಳಿಯುವುದು ತಾನಾಗದ್ದನ್ನು ತಾನೇ ಎಂದು ಭಾವಿಸುವುದು ಇವೆರಡು ಸಂಸಾರವೆಂಬ ಹೆಮ್ಮರದ ಬೀಜಗಳಾಗಿವೆ. ಪಂಚಭೂತಾತ್ಮಕವಾದ ಈ ಶರೀರವನ್ನು ಅಜ್ಞಾನದಿಂದ ಆವೃತನಾದ ಜೀವಿಯು ತಾನೇ ಈ ಶರೀರ ಎಂದು ಭಾವಿಸುತ್ತಾನೆ. ಪಂಚಭೂತಾತ್ಮಕವಾದ ಈ ದೇಹದಲ್ಲಿಯ ಅಗ್ನಿ, ಜಲ, ಆಕಾಶ, ವಾಯು, ಪೃಥ್ವೀ ಎಲ್ಲವೂ ಆತ್ಮದಿಂದ ಭಿನ್ನವಾದಾಗ ಈ ಪಂಚಭೂತಾತ್ಮಕವಾದ ಶರೀರವನ್ನು ತಾನೇ ಎಂದು ಯಾವ ಬುದ್ಧಿವಂತನು ತಿಳಿದಾನು ! ದೇಹವು ತನ್ನಿಂದ ಭಿನ್ನವಾದ ಬಳಿಕ ಆ ದೇಹದ ಭೋಗಕ್ಕೆ

ವಿಷಯವಾಗಬಹುದಾದ ಹೊಲ, ಮನೆ, ಭೋಗ - ಭಾಗ್ಯಗಳು ತನ್ನವು ಎಂದು ತಿಳಿವಳಿಕೆಯುಳ್ಳವನು ಹೇಗೆ ಭಾವಿಸುವನು!

ಈ ದೇಹದಿಂದ ಉತ್ಪನ್ನರಾದ ಪುತ್ರ ಪೌತ್ರಾದಿಗಳಲ್ಲಿ ತನ್ನವರೆಂದು ಸ್ನೇಹವನ್ನು ಯಾವ ವಿವೇಕಿಯು ಮಾಡಬಹುದು ? ಮಾನವರು ಮಾಡುವ ಕರ್ಮಗಳೆಲ್ಲವೂ ಈ ದೇಹದ ಸಲುವಾಗಿಯೇ ಇದ್ದು ಇದು ನಾನು ನನ್ನದು ಎಂದು ಭ್ರಾಂತಿಭಾವನೆಯಿಂದ ಮಾಡಲ್ಪಡುವುದರಿಂದ ಮಾನವರ ಬಂಧನಕ್ಕೆ ಕಾರಣವಾಗುತ್ತವೆ. ಮಣ್ಣಿನ ಗೋಡೆಯನ್ನು ಮಣ್ಣು ಸೆಗಣಿಗಳಿಂದ ಸಾರಿಸಿದಾಗ ಮಿಂಚಿ ಮಿನುಗುವಂತೆ ಈ ಪ್ರಾರ್ಥಿವ ಶರೀರಕ್ಕೆ ಪಂಚಭೂತಾತ್ಮಕವಾದ ಭೋಗಗಳಿಂದಲೇ ಪರಿಪುಷ್ಟಿಯೆನಿಸಿದರೆ ಆತ್ಮನಿಗೆ ಭೋಗವೆಲ್ಲಿಯದು? ಆದರೆ ಈ ಜೀವನು ವಾಸನೆಯ ಧೂಳಿಯಿಂದ ಆವೃತವಾಗಿ ಸಾವಿರಾರು ಜನ್ಮಗಳಲ್ಲಿ ಈ ಸಾಂಸಾರಿಕ ಭೋಗಾವರ್ತದಲ್ಲಿ ಮುಳುಗಿದ್ದರಿಂದ ನಾನು ನನ್ನದು ಎಂಬ ಮೋಹವು ಹುಟ್ಟಿ ಅವನಿಗೆ ಕೇವಲ ಶ್ರಮ ದುಃಖಗಳನ್ನು ಉಂಟು ಮಾಡಿರುತ್ತದೆ. ಸಂಸಾರಪಥದಲ್ಲಿ ಶ್ರಾಂತನಾದ ಈ ಆತ್ಮ ಪಾಂಥನ ಈ ಮೋಹ ಶ್ರಮವು ದಿವ್ಯ ಜ್ಞಾನವೆಂಬ ತಂಪುನೀರು ಬಿದ್ದಾಗ ಸ್ವಚ್ಛವಾಗಿ ತೊಳೆಯಲ್ಪಟ್ಟು ಶಾಂತವಾಗುತ್ತದೆ. ಅವನ ಅಂತಃಕರಣಕ್ಕೆ ಆಗ ತಣಿವು, ತೃಪ್ತಿ, ಶಾಂತಿ ಸಮಾಧಾನಗಳು ದೊರಕುತ್ತವೆ. ವಸ್ತು ತಸ್ತು ಸ್ವತಃ ದುಃಖ ರಹಿತನಾಗಿ ಜ್ಞಾನಾನಂದ ಪರಿಪೂರ್ಣನಾದ ಆತ್ಮನಿಗೆ ಅಜ್ಞಾನ ಮೂಲಕವಾಗಿ ಸುಖದುಃಖಾದಿಗಳು ಪ್ರಾಪ್ತವಾಗುತ್ತವೆ. ನೀರಿಗೂ ಅಗ್ನಿಗೂ ಸಂಪರ್ಕವಿಲ್ಲದಿದ್ದರೂ ಪಾತ್ರೆಯಲ್ಲಿಟ್ಟ ನೀರು ಪಾತ್ರೆಗೆ ಅಗ್ನಿ ಸಂಪರ್ಕವಾದಾಗ ಕುದಿದು ಸಪ್ಪಳ ಮಾಡುವಂತೆ ಆತ್ಮನು ಪ್ರಕೃತಿ ಸಂಪರ್ಕದಿಂದ ಅಹಂಕಾರಾದಿ ದೋಷಗಳಿಂದ ದೂಷಿತನಾಗಿ ಪ್ರಾಕೃತ ಧರ್ಮಗಳನ್ನು ಹೊಂದುತ್ತಾನೆ. ವಾಸ್ತವಿಕವಾಗಿ ಅವು ಆತ್ಮನಿಷ್ಠವಲ್ಲ. ಅವುಗಳಿಂದ ಆತ್ಮನು ಅತ್ಯಂತ ಭಿನ್ನನೇ ಆಗಿದ್ದಾನೆ. ಇದೇ ಅವಿದ್ಯೆಯ ಬೀಜವಾಗಿದ್ದು ಈ ಅಜ್ಞಾನಮೂಲಕವಾದ ದುಃಖಗಳನ್ನು ದೂರಮಾಡಲಿಕ್ಕೆ ಯೋಗದ ಹೊರತು ಬೇರೆ ಉಪಾಯವಿಲ್ಲ. ಆ ಯೋಗದ ಸ್ವರೂಪವನ್ನು ತಿಳಿಸುತ್ತೇನೆ ಕೇಳು :- ಮನುಷ್ಯರ ಬಂಧನಕ್ಕೂ ಮೋಕ್ಷಕ್ಕೂ ಮನಸ್ಸೇ ಮುಖ್ಯ ಕಾರಣವಾಗಿದೆ. ಅದು ವಿಷಮ ವಿಷಯಗಳಲ್ಲಿ ಆಸಕ್ತವಾಗಿದ್ದರೆ ಬಂಧನಕ್ಕೆ ಕಾರಣವಾಗುತ್ತದೆ. ವಿಷಯ ಶೂನ್ಯನಾಗಿ ಭಗವನ್ನಿಷ್ಠವಾದರೆ ಮುಕ್ತಿಗೆ ಕಾರಣವಾಗುತ್ತದೆ. ಆದುದರಿಂದ ವಿವೇಕಿಯಾದ ಮನುಷ್ಯನು ಆ ಮನಸ್ಸನ್ನು ವಿಷಯಗಳಿಂದ ಉಪಸಂಹರಿಸಿ ಅದರಿಂದ ಗುಣ ಪರಿಪೂರ್ಣನಾದ ಪರಮೇಶ್ವರನನ್ನು ಧ್ಯಾನಮಾಡಬೇಕು. ಮನುಷ್ಯನ ಪ್ರಯತ್ನದಿಂದ ಭಗವಂತನಲ್ಲಿ ಉಂಟಾಗುವ ವಿಶಿಷ್ಟವಾದ ಈ ಮನಃಪ್ರಾವಣ್ಯಕ್ಕೆ ಯೋಗ ಎಂದು ಹೆಸರು. ಇಂಥ ಯೋಗವನ್ನು ಅನುಷ್ಠಾನ ಮಾಡುವ ಮುಮುಕ್ಷು ಜೀವವು ಯೋಗಿ ಎಂದು ಕರೆಯಲ್ಪಡುತ್ತಾನೆ. ಇಂಥ ಯೋಗವನ್ನು ಪ್ರಾರಂಭಮಾಡಿದ ಯೋಗಿಯ ಮೊದಲಿನ ಅವಸ್ಥೆಯಲ್ಲಿ ಯೋಗಯುಕ್ತ ಎಂದೂ ಮತ್ತು ಅದೇ ಯೋಗ ಸಮಾಧಿಯಿಂದ ಪರಬ್ರಹ್ಮವನ್ನು

ಕಂಡು ಬ್ರಹ್ಮಜ್ಞಾನಿಯೆಂದೂ ಕರೆಯಲ್ಪಡುತ್ತಾನೆ. ಯೋಗಯುಕ್ತನಾದ ಮನುಷ್ಯನು ಯಾವದಾದರೊಂದು ವಿಘ್ನದಿಂದ ಅವನ ಮನಸ್ಸು ದೂಷಿತವಾಗಿ ಯೋಗಭ್ರಷ್ಟನಾದರೂ ಜನ್ಮಾಂತರಗಳಲ್ಲಿ ಮತ್ತೆ ಯೋಗಾಭ್ಯಾಸವನ್ನು ಮಾಡಿ ಮುಕ್ತಿಯನ್ನು ಕೊನೆಗೆ ಹೊಂದುತ್ತಾನೆ.

ಯೋಗ ಸಮಾಧಿಯು ಯಶಸ್ವಿಯಾದ ಯೋಗಿ ಬ್ರಹ್ಮಾಪರೋಕ್ಷವನ್ನು ಹೊಂದಿ ತನ್ನ ಯೋಗಾಗ್ನಿಯಿಂದ ಕರ್ಮಪುಂಜಗಳನ್ನೆಲ್ಲ ದಗ್ಧಗೈದು ಅದೇ ಜನ್ಮದಲ್ಲಿಯೇ ಮೋಕ್ಷವನ್ನು ಹೊಂದುತ್ತಾನೆ. ಯೋಗಿಯಾದವನು ಬ್ರಹ್ಮಚರ್ಯ, ಅಹಿಂಸೆ, ಸತ್ಯ, ಅಸ್ತೇಯ, ಅಪರಿಗ್ರಹ ಮುಂತಾದ ಧರ್ಮಗಳನ್ನು ನಿಷ್ಕಾಮ ಬುದ್ಧಿಯಿಂದ ಆಚರಿಸಬೇಕು. ಸ್ವಾಧ್ಯಾಯ, ಶೌಚ, ಸಂತೋಷ, ತಪೋನುಷ್ಠಾನಗಳನ್ನು ಜಿತೇಂದ್ರಿಯನಾಗಿ ಆಚರಿಸುತ್ತ ಪರಬ್ರಹ್ಮನಲ್ಲಿ ನಿರಂತರವಾಗಿ ಮನಸ್ಸನ್ನು ಇಟ್ಟು ಅವಿಚ್ಛಿನ್ನ ಧ್ಯಾನವನ್ನು ಮಾಡಬೇಕು. ಇವೇ ಹತ್ತು ಧರ್ಮಗಳು ಯಮ ನಿಯಮಗಳೆಂದು ಕರೆಯಲ್ಪಡುತ್ತವೆ. ನಿಷ್ಕಾಮ ಬುದ್ಧಿಯಿಂದ ಈ ನಿಯಮಗಳನ್ನು ಪಾಲನೆ ಮಾಡಿ ಪ್ರಾಣಾಯಾಮವನ್ನು ಮಾಡಬೇಕು. ಪ್ರಾಣ ಎಂಬ ವಾಯುವನ್ನು ಅಭ್ಯಾಸದಿಂದ ವಶದಲ್ಲಿ ಇಟ್ಟುಕೊಂಬುವದೇ ಪ್ರಾಣಾಯಾಮವೆನಿಸುವದು. ಅನಂತರ ಪ್ರತ್ಯಾಹಾರದ ಅಭ್ಯಾಸವನ್ನು ಮಾಡಿ ಶಬ್ದಾದಿ ವಿಷಯಗಳಲ್ಲಿ ಅನುರಕ್ತವಾದ ತನ್ನ ಇಂದ್ರಿಯಗಳನ್ನು ತನ್ನ ಸ್ವಾಧೀನಪಡಿಸಿಕೊಳ್ಳಬೇಕು. ಇಂದ್ರಿಯಗಳನ್ನು ತನ್ನ ಚಿತ್ತಾನುಸಾರಿಯಾಗುವಂತೆ ವಶಪಡಿಸಿಕೊಳ್ಳದೆ ಯಾವ ಮನುಷ್ಯನೂ ಯೋಗ ಸಾಧನವನ್ನು ಮಾಡಲಾರ. ಹೀಗೆ ಪ್ರಾಣಾಯಾಮದಿಂದ ಪ್ರಾಣವಾಯುವನ್ನೂ ಪ್ರತ್ಯಾಹಾರದಿಂದ ಎಲ್ಲ ಇಂದ್ರಿಯಗಳನ್ನು ಸಂಪೂರ್ಣವಾಗಿ ತನ್ನ ವಶದಲ್ಲಿ ತೆಗೆದುಕೊಂಡು ಮನಸ್ಸನ್ನು ಪರಮಾತ್ಮನ ಪಾದಾರವಿಂದದಲ್ಲಿಯೇ ಧೃಡವಾಗಿ ನೆಡಬೇಕು. ಹೊಯ್ದಾಡದಂತೆ ಇಡಬೇಕು. ಯಮ, ನಿಯಮ, ಪ್ರಾಣಾಯಾಮ, ಪ್ರತ್ಯಾಹಾರಗಳಿಂದ ಜಿತೇಂದ್ರಿಯನಾಗಿ ಜಿತಶ್ವಾಸನಾಗಿ ಪರಮಾತ್ಮನನ್ನು ಹೃದಯದಲ್ಲಿ ಧಾರಣಮಾಡಿಕೊಂಡು ಧ್ಯಾನ ಸಮಾಧಿಯಲ್ಲಿ ನಿರತನಾಗಬೇಕು.

**ಖಾಂಡಿಕ್ಯ** - ಮಹಾನುಭಾವನಾದ ಕೇಶಿಧ್ವಜನೇ, ಚಿತ್ತದ ಎಲ್ಲ ದೋಷಗಳು ನಾಶವಾಗುವಂಥ ಶುಭಾಶ್ರಯವು ಯಾವುದಿದೆ ? ಹೇಳು.

**ಕೇಶಿಧ್ವಜ** - ಮನಸ್ಸಿನ ದೋಷಗಳನ್ನೆಲ್ಲ ಕಳೆಯಬಲ್ಲ ಏಕಮಾತ್ರ ಶುಭಾಶ್ರಯವೆಂದರೆ ಪರಬ್ರಹ್ಮ ಮಾತ್ರ. ಮೂರ್ತಾಮೂರ್ತಾತ್ಮಕವಾದ ಆ ಪರಮಾತ್ಮನ ಸ್ವರೂಪವನ್ನು ನಿಶ್ಚಲವಾದ ಮನಸ್ಸಿನಿಂದ ಧ್ಯಾನಮಾಡಬೇಕು. ಭಗವಂತನ ಸೂಕ್ಷ್ಮ ರೂಪವು ಒಮ್ಮೆಲೇ ಧ್ಯಾನಗಮ್ಯವಾಗುವದಿಲ್ಲ. ಆದುದರಿಂದ ಮೊದಲು ಸ್ಥೂಲವಾದ ಮೂರ್ತ ಸ್ವರೂಪವನ್ನು ಧ್ಯಾನಮಾಡಬೇಕು. ಚತುರ್ಮುಖ ಬ್ರಹ್ಮ, ಮರುದ್ಗಣ, ಅಷ್ಟವಸು, ರುದ್ರಗಣ, ಸೂರ್ಯ, ಚಿಕ್ಕೆ ದೇವ, ಗಂಧರ್ವ, ದೈತ್ಯ, ಶೈಲ, ಸಮುದ್ರ, ನದಿ, ಮರ, ಪಂಚಮಹಾಭೂತ, ಪ್ರಧಾನ ಕಿಂಬಹುನಾ ಚರಾಚರಾತ್ಮಕವಾದ ಪ್ರಪಂಚವೆಲ್ಲವು

ಪರಮಾತ್ಮನಿಂದ ನಿಯಮಿತವಾಗಿ ರೂಪಿತವಾಗಿ ಅವನ ಸ್ಥೂಲ ರೂಪವೆಂದು ಕರೆಯಲ್ಪಡುತ್ತದೆ. ವಿಶ್ವನಿಯಾಮಕನಾದ ಈ ಭಗವದ್ರೂಪಕ್ಕೆ ವಿಶ್ವ ಎಂದು ಹೆಸರು.

ಒಂದು ಹುಲ್ಲುಕಡ್ಡಿಯಿಂದ ಹಿಡಿದು ಚತುರ್ಮುಖ ಬ್ರಹ್ಮದೇವರವರೆಗೆ ಎಲ್ಲ ಜೀವಜಂತುಗಳಲ್ಲಿ ಕ್ಷೇತ್ರಜ್ಞನಾಮಕನಾದ ಪರಮಾತ್ಮನ ಪರಾತ್ಪರವಾದ ಶಕ್ತಿಯೇ ಒಂದೊಂದು ರೂಪದಿಂದ ನಿಂತು ಕೆಲಸಮಾಡಿಸುತ್ತಿರುತ್ತದೆ. ಎಲ್ಲ ಕಡೆಗೂ ಭಗವತ್ಸನ್ನಿಧಾನವಿದೆ. ಕಾರ್ಯೋನ್ಮುಖವಾದ ಈ ಭಗವತ್ ಶಕ್ತಿಯ ಸನ್ನಿಧಾನ ತಾರತಮ್ಯದಿಂದ ಜೀವಿಗಳಲ್ಲಿಯೂ ತಾರತಮ್ಯವು ಉಂಟಾಗಿದೆ. ಅಚೇತನಗಳಿಗಿಂತ ಸಚೇತನಗಳಲ್ಲಿ, ಹೊಟ್ಟೆ ಹೊಸೆಯುವ ಪ್ರಾಣಿಗಳಿಗಿಂತ ಹರಿಯುವ ಪ್ರಾಣಿಗಳಲ್ಲಿ, ಹರಿಯುವ ಪ್ರಾಣಿಗಳಿಗಿಂತ ಹಾರಾಡುವ ಪ್ರಾಣಿಗಳಲ್ಲಿ, ಅವುಗಳಿಗಿಂತ ಮೃಗ, ಪಶು, ಮನುಷ್ಯ, ನಾಗ, ಗಂಧರ್ವ, ದೇವತಾ- ಇಂದ್ರಾದಿ ದೇವೋತ್ತಮರಲ್ಲಿ ಅವರಿಗಿಂತ ಚತುರ್ಮುಖ ಬ್ರಹ್ಮರಲ್ಲಿ ಒದಕ್ಕಿಂತ ಒಂದರಲ್ಲಿ ಹೆಚ್ಚು ಹೆಚ್ಚು ಭಗವಂತನ ಸನ್ನಿಧಾನವಿರುವದರಿಂದ ಅವು ಉತ್ತರೋತ್ತರ ಪ್ರಬಲವೂ ಶ್ರೇಷ್ಠವೂ ಆಗಿವೆ. ಇಲ್ಲೆಲ್ಲ ಭಗವಂತನ ಒಂದೊಂದು ರೂಪವು ಸನ್ನಿಹಿತವಾಗಿ ಯಥಾಯೋಗ್ಯ ಕೆಲಸಮಾಡಿಸುತ್ತದೆ. ಇದು ಪರಮಾತ್ಮನ ಮೂರ್ತರೂಪವೆನಿಸುತ್ತದೆ. ಅಮೂರ್ತವಾದ ಭಗವದ್ರೂಪವನ್ನು ಪಂಡಿತರು ಸತ್‌ಎಂದು ಕರೆಯುತ್ತಾರೆ. ಆ ಸದ್ರೂಪಿಯಾದ ಪರಮಾತ್ಮನು ದೇವ ಮನುಷ್ಯ ತಿರ್ಯಕ್ ಪ್ರಾಣಿ ರೂಪದಿಂದಲೂ ಅವತಾರ ಮಾಡುತ್ತಾನೆ. ಆದರೆ ಈ ಭಗವದವತಾರಗಳಾವವೂ ಕರ್ಮಮೂಲಕವಾಗಿ ಅಲ್ಲ. ಜಗದೋದ್ಧಾರಕ್ಕಾಗಿ ಪ್ರಾಣಿಗಳ ಉಪಕಾರಕ್ಕಾಗಿ ಎಂದು ತಿಳಿಯಬೇಕು. ಅಪ್ರತಿಹತ ಶಕ್ತಿಯುಳ್ಳ ಆ ಪರಮಾತ್ಮನ ಅವತಾರ ರೂಪದಲ್ಲಿಯ ಕಾರ್ಯಗಳೆಲ್ಲವೂ ಅವ್ಯಾಹತವಾಗಿರುತ್ತವೆ. ಪರಮಾತ್ಮನ ಈ ಎಲ್ಲ ವಿಭೂತಿ ರೂಪಗಳನ್ನು ಯೋಗಿಯಾದ ಮನುಷ್ಯನು ಧ್ಯಾನಮಾಡಬೇಕು. ಅನುಕೂಲ ಗಾಳಿಬೀಸಿದ ಕಾಡ್ಗಿಚ್ಚು ಬನವನ್ನೆಲ್ಲ ಸುಡುವಂತೆ ಚಿತ್ತಸ್ಥಿತನಾದ ವಿಷ್ಣುವು ಸರ್ವ ಪಾಪಗಳನ್ನೂ ತೊಳೆದು ಬಿಡುತ್ತಾನೆ. ಆದುದರಿಂದ ಸಮಸ್ತ ಶಕ್ತಿಗಳಿಗೂ ಆಧಾರಭೂತನಾದ ಆ ಪರಮಾತ್ಮನಲ್ಲಿ ಮನಸ್ಸನ್ನು ಸಂತತಧಾರೆಯಾಗಿ ನೆಲೆಸಿ ನಿರಂತರ ನಿಲ್ಲಿಸಬೇಕು. ಇದಕ್ಕೆ ಧಾರಣಾ ಎಂದು ಹೆಸರು. ಎಲ್ಲ ಕಡೆಗೂ ಹರಿದಾಡುವ ಚಂಚಲವಾದ ಮನಸ್ಸಿಗೆ ಒಳ್ಳೆ ಶುಭಕರವಾದ ಆಶ್ರಯವೆಂದರೆ ಶ್ರೀ ವಿಷ್ಣುವೇ ಆಗಿದ್ದಾನೆ. ಮನಸ್ಸಿನ ಉಳಿದೆಲ್ಲ ಆಶ್ರಯಗಳು ಅಶುದ್ಧಾಶ್ರಯ ಎನಿಸುತ್ತವೆ. ಯಜ್ಞಯಾಗಾದಿಗಳಿಂದ ಪ್ರೀತರಾಗುವ ದೇವತೆಗಳು ಕೂಡ ಅಪೂರ್ಣರಾದುದರಿಂದ ಅವರಲ್ಲಿ ಮನಸ್ಸನ್ನಿಟ್ಟರೆ ಅದು ಅಶುದ್ಧ ಧಾರಣೆಯೆನಿಸುವದು. ಭಕ್ತಾನುಕಂಪಿಯಾದ ಪರಮಾತ್ಮನ ಮೂರ್ತ ಸ್ವರೂಪದಲ್ಲಿ ಮನಸ್ಸನ್ನಿಟ್ಟರೆ ಮಾತ್ರ ಅದು ಶುದ್ಧ ಧಾರಣೆಯೆನಿಸುವದು. ಮನಸ್ಸಿಗೆ ಇಂಥ ಭಗವದ್ರೂಪವನ್ನು ನಿರಾಧಾರವಾಗಿ ಧಾರಣಮಾಡುವದು ಸಾಧ್ಯವಿಲ್ಲ ಆದುದರಿಂದ ಯಾವ ತರಹದ ಭಗವನ್ ಮೂರ್ತಿಯನ್ನು ಧ್ಯಾನ ಮಾಡಿ ಮನಸ್ಸಿನಲ್ಲಿ ಧಾರಣಮಾಡಬೇಕು ಎನ್ನುವದನ್ನು ಹೇಳುತ್ತೇನೆ ಕೇಳು.

"ಪ್ರಸನ್ನ ವದನಂ ಚಾರು ಪದ್ಮಪತ್ರೋಪಮೇಕ್ಷಣಂ ।
ಸುಕಪೋಲಂ ಸುವಿಸ್ತೀರ್ಣ ಲಲಾಟಫಲಕೋಜ್ವಲೆ ॥

ಸಮಕರ್ಣಾಂತ ವಿನ್ಯಸ್ತ ಚಾರುಕುಂಡಲಭೂಷಣಂ ।
ಕಂಬುಗ್ರೀವಂ ಸುವಿಸ್ತೀರ್ಣ ಶ್ರೀವತ್ಸಾಂಕಿತ ವಕ್ಷಸಂ ॥

ಶಾರ್ಙ್ಗ ಶಂಖ ಗದಾ ಖಡ್ಗ ಚಕ್ರಾಕ್ಷ ವಲಯಾನ್ವಿತಂ ।
ವರದಾಭಯ ಹಸ್ತಂ ಚ ಮುದ್ರಿಕಾ ರತ್ನ ಭೂಷಿತಂ ॥

ಚಿಂತಯೇತ್ ತನ್ಮಯೋ ಯೋಗೀ ಸಮಾಧಾಯಾತ್ಮ ಮಾನಸಂ ।
ತಾವದ್ ಯಾವದ್ ದೃಢೀಭೂತಾ ತತ್ರೈವ ನೃಪ ಧಾರಣಾ" ॥

ಪ್ರಸನ್ನವಾದ ಮುಖ, ಚೆಲುವಿನ ತಾವರೆಯಂತೆ ಚಂದಾಗಿ ಒಪ್ಪುವ ಕಣ್ಣು, ಉಲ್ಲಸಿತ ಗಲ್ಲ, ಹರವಾದ ಹಣೆ, ಕಿವಿಗಳೆರಡರಲ್ಲಿಯೂ ಸಮರೇಖೆಯಲ್ಲಿ ಜೋತಾಡುವ ಕುಂಡಲ, ಶಂಖದ ಮುಟ್ಟಿಗೆಯಂತಿರುವ ಕೊರಳು, ಎದೆಯ ಬಿತ್ತರದಲ್ಲಿ ರಾರಾಜಿಸುವ ಶ್ರೀವತ್ಸದ ಗುರುತು, ಶಂಖ, ಚಕ್ರ, ಗದಾ, ಬಿಲ್ಲು, ಕಡಗ, ಕಂಕಣ, ಉಂಗುರಗಳಿಂದ ಒಪ್ಪುವ ವರದಹಸ್ತ, ಇಂಥ ಪ್ರಸನ್ನ ಮುಖ ಮುದ್ರೆಯ ಭಗವನ್ಮೂರ್ತಿಯನ್ನು ಮನಸ್ಸಿನಲ್ಲಿ ಇರಿಸಿ ಚಿಂತಿಸಬೇಕು. ಅಂತರಂಗದಲ್ಲಿ ಇಂಥ ಭಗವದ್ರೂಪವು ಗಟ್ಟಿಯಾಗಿ ನೆಲಿಸುವಂತೆ ಈ ಧ್ಯಾನ ಧಾರಣೆಯ ಕ್ರಮಗಳು ಬಿಡುವಿಲ್ಲದೆ ಸಾಗಬೇಕು. ಕುಳಿತಾಗ ನಿಂತಾಗ ಬೇರೆ ಬೇರೆ ಕೆಲಸ ಮಾಡುವಾಗ ಯಾವ ಕಾಲಕ್ಕೂ ಈ ಭಗವನ್ಮೂರ್ತಿಯು ಚಿತ್ತ ಭಿತ್ತಿಯಿಂದ ಜಾರಿಹೋಗದಿದ್ದರೆ ಧಾರಣೆಯು ಸಿದ್ಧವಾಗಿದೆಯೆಂದು ಬಗೆಯಬೇಕು. ಹೀಗೆ ಒಂದೊಂದು ಭಗವಂತನ ಚಿನ್ಹ ಮತ್ತು ಚರಣಾದಿ ಅವಯವಗಳನ್ನು ಧ್ಯಾನ ಮಾಡುತ್ತ ಮಾಡುತ್ತ ಅವು ಚಿತ್ತದಲ್ಲಿ ಸ್ಥಿರವಾಗಿ ಮೂಡಿದ ಬಳಿಕ ಸಮಗ್ರ ಭಗವದ್ರೂಪವನ್ನು ಮನಸ್ಸಿನಲ್ಲಿ ಧಾರಣೆ ಮಾಡಿ ಧ್ಯಾನ ಮಾಡಬೇಕು. ಬೇರೆಲ್ಲಿಯೂ ಮನಸ್ಸನ್ನು ಹರಿಬಿಡದೆ ಭಗವನ್ಮೂರ್ತಿಯಲ್ಲಿಯೇ ತದ್ಯೆಕ ತಾನಲೀನ ಮಾನಸವಾದ ಪ್ರಣಿಧಾನದಿಂದ ನಿಷ್ಪಾದ್ಯವಾದ ಈ ನಿರಂತರ ಮನೋಯೋಗಕ್ಕೆ ಸಮಾಧಿ ಎಂದು ಕರೆಯುತ್ತಾರೆ. ಇಂಥ ಈ ಅಸಂಪ್ರಜ್ಞಾತ ಸಮಾಧಿಯು ಯೋಗಿ ಚಿತ್ತವನ್ನು ಸಂಪೂರ್ಣವಾಗಿ ಭಗವದ್ ಭಾವದಲ್ಲಿ ಲೀನಗೊಳಿಸಿ ಪರಮಾತ್ಮನ ಪ್ರಾಪ್ತಿಯನ್ನೂ ಭಗವದಪರೋಕ್ಷವನ್ನೂ ಯೋಗಿಗೆ ಮಾಡಿಸಿಯೇ ನಿವೃತ್ತವಾಗುತ್ತದೆ. ಇಂಥ ಸಾಕ್ಷಾತ್ಕಾರಜನಕವಾದ ತಪಃಸಮಾಧಿಯಿಂದ ಯೋಗಿಗೆ ಅವನ ಯೋಗ್ಯತಾನುಗುಣವಾಗಿ ಸಾಲೋಕ್ಯ, ಸಾರೂಪ್ಯ, ಸಾಮಿಪ್ಯ, ಸಾಯುಜ್ಯ ಮುಂತಾದ ಮೋಕ್ಷಗಳು ಪ್ರಾಪ್ತವಾಗುತ್ತವೆ. ಭಗವಂತನ ಪಾದದಿಂದಲೇ ನಡೆದು ಅವನ ಕಣ್ಣಿನಿಂದಲೇ ನೋಡಿ, ಅವನ ಕೈಯಿಂದಲೇ ಊಟ ಮಾಡಿ, ಅವನ ಇಂದ್ರಿಯಗಳಿಂದಲೇ ಸರ್ವ ವ್ಯಾಪಾರವನ್ನು ಮಾಡುವ ಮುಕ್ತಾತ್ಮನು ಪರಮಾತ್ಮನಿಂದ ಅಭಿನ್ನನಾದಂತೆಯೇ ತೋರುತ್ತಾನೆ. ಆದರೆ ವಸ್ತುತಃ ಭಿನ್ನವಾದ ಆ ಮುಕ್ತನು 'ಆ ಪರಮಾತ್ಮನು ಸ್ವಾಮಿ ನಾನು

ಸೇವಕ' ಎಂಬ ಭಾವನೆಯಿಂದ ಅವನಲ್ಲಿ ಭಕ್ತಿಯನ್ನು ಹೆಚ್ಚು ಹೆಚ್ಚು ಮಾಡಿ ಅಧಿಕಾಧಿಕಾನಂದವನ್ನು ಹೊಂದುತ್ತಾನೆ. ಹೀಗೆ ಅಷ್ಟಾಂಗ ಯುಕ್ತವಾದ ಯೋಗಸಮಾಧಿಯಿಂದ ಭಗವತ್ಪ್ರಾಪ್ತಿಯ ಉಪಾಯವನ್ನು ನಾನು ನಿನಗೆ ತಿಳಿಸಿದ್ದೇನೆ. '' ಎಂದು ಜಿಜ್ಞಾಸೆಯಿಂದ ಪ್ರಶ್ನೆ ಮಾಡಿದ ಖಾಂಡಿಕ್ಯನಿಗೆ ಸಂಕ್ಷೇಪವಾಗಿ ಕೇಶಿಧ್ವಜನು ತಿಳಿಸಿದನು. '' ನಾನು ಮತ್ತೇನು ಮಾಡಬೇಕು ಹೇಳು '' ಎಂದು ಕೇಳಿದನು.

**ಖಾಂಡಿಕ್ಯ** - ನೀನು ನನಗೆ ಯೋಗಮಹಿಮೆಯನ್ನು ತಿಳಿಸಿಕೊಟ್ಟದ್ದರಿಂದ ನನಗೆ ಏನೆಲ್ಲವನ್ನೂ ಕೊಟ್ಟಂತಾಯಿತು. ನಿನ್ನ ಉಪದೇಶದಿಂದ ನನ್ನ ಮನಸ್ಸಿನ ಕೊಳೆಯೆಲ್ಲವೂ ತೊಳೆದಂತಾಗಿದೆ. ಇದೀಗ ನಾನು ನುಡಿದ ನನ್ನ ಎಂಬ ಶಬ್ದವು ಕೂಡ ಯಥಾರ್ಥವಲ್ಲ. ನನ್ನದೆನ್ನುವದು ಇಲ್ಲಿ ಯಾವುದೂ ಇಲ್ಲ. ನಾನು ನನ್ನದು ಎಂಬ ವ್ಯವಹಾರವೆಲ್ಲವೂ ಅಜ್ಞಾನ ಅಭಿಮಾನ ಮೂಲಕವಾಗಿಯೇ ನಡೆಯುತ್ತದೆ. ವಾಸ್ತವಿಕವಾಗಿ ಜಗತ್ತಿನಲ್ಲಿಯ ಎಲ್ಲ ವಸ್ತುಗಳೂ ವಾಚಾಮಗೋಚರನಾದ ಭಗವಂತನ ಅಧೀನವಾಗಿದೆ. ಅಂಥ ಭಗವಂತನ ಪ್ರಾಪ್ತಿಗೆ ಮುಖ್ಯ ಸಾಧನವಾದ ಯೋಗ ಮಾರ್ಗವನ್ನು ಉಪದೇಶಿಸಿ ನೀನು ನನಗೆ ಪರಮೋಪಕಾರವನ್ನು ಗೈದಿರುವೆ '' ಎಂದು ಹೇಳಿ ಖಾಂಡಿಕ್ಯನು ಕೇಶಿಧ್ವಜನನ್ನು ಪೂಜಿಸಿ ಸತ್ಕರಿಸಿ ಬಳಿಕ ಕೇಶಿಧ್ವಜನು ತನ್ನ ಊರಿಗೆ ಬಂದನು. ಅತ್ತ ಖಾಂಡಿಕ್ಯನು ತಾವಿದ್ದ ವನರಾಜ್ಯದಲ್ಲಿ ತನ್ನ ಮಗನನ್ನು ನಿಯಮಿಸಿ ಯೋಗ ಸಿದ್ಧಿಗಾಗಿ ಯೋಗಸಾಧನವನ್ನು ಮಾಡಬೇಕೆಂದು ಅರಣ್ಯಕ್ಕೆ ತೆರಳಿದನು. ಮನಸ್ಸಿನಲ್ಲಿ ಭಗವಂತನನ್ನು ನಿರಂತರವಾಗಿ ಚಿಂತನಮಾಡಿದನು. ಶಮ, ದಮಾದಿ ಸಂಪತ್ತಿಯುಳ್ಳವನಾಗಿ ಏಕಾಂತ ಭಕ್ತಿಯಿಂದ ಆ ಪರಮಾತ್ಮನಲ್ಲಿ ಚಿತ್ತವನ್ನಿಟ್ಟು ನಿರಂತರ ಧ್ಯಾನಮಾಡಲು ಅವನಲ್ಲಿಯೇ ಲಯವನ್ನು ಹೊಂದಿದನು. ಕೇಶಿಧ್ವಜನೂ ಕೂಡ ತನ್ನ ಪ್ರಾರಬ್ಧವನ್ನು ಸವೆಯಿಸಲಿಕ್ಕಾಗಿ ವಿಷಯ ಸುಖವನ್ನು ಅನುಭವಿಸಿದನು. ಹೀಗೆ ಬಗೆ ಬಗೆಯ ಭೋಗಾನುಭವಗೈಯುತ್ತ ಅವನು ತನ್ನ ಪಾಪಪುಣ್ಯಗಳನ್ನು ಕಳೆದುಕೊಂಡು ತಾಪವನ್ನು ಪರಿಹರಿಸಿಗೊಂಡು ಮಲವೆಲ್ಲವೂ ಕ್ಷೀಣವಾದ ಬಳಿಕ ಭಗವಂತನ ಅನುಗ್ರಹದಿಂದ ಅವ್ಯಯ ಫಲವೀವ ಸಿದ್ಧಿಯನ್ನು ಪಡೆದನು.

**ಪರಾಶರ** - ಹೀಗೆ ಯೋಗ ಶಕ್ತಿಯಿಂದ ಪರಮಾತ್ಮನಲ್ಲಿ ಲೀನವಾಗುವದೇ ಆತ್ಯಂತಿಕ ಲಯವೆಂದು ಹೇಳಲ್ಪಡುತ್ತದೆ. ಈ ಮೂರನೆಯ ಲಯದ ಬಗೆಗೂ ನಾನು ಈವರೆಗೆ ನಿರೂಪಣೆಗೈದಿದ್ದಾಯಿತು. ಸೃಷ್ಟಿ, ಸಂಹಾರ ಮನ್ವಂತರಗಳು, ವಂಶಗಳು, ಅವುಗಳಲ್ಲಿ ಜನಿಸಿದವರ ಚರಿತ್ರಗಳು ಇವುಗಳನ್ನೆಲ್ಲ ನಾನು ನಿನ್ನಗೋಸ್ಕರ ಹೇಳಿದೆ. ಈ ವಿಷ್ಣು ಪುರಾಣವು ಸಕಲ ಪಾಪವನ್ನು ಪರಿಹರಿಸಿ ಪುರುಷಾರ್ಥ ಪ್ರದಾಯಕವಾದುದರಿಂದ ಎಲ್ಲ ಶಾಸ್ತ್ರಗಳಿಗಿಂತ ವೈಶಿಷ್ಟ್ಯವುಳ್ಳದ್ದಾಗಿದೆ. ಇಂಥ ದಿವ್ಯ ಪುರಾಣವನ್ನು ಮೈತ್ರೇಯ, ನಾನು ನಿನಗೆ ಹೇಳಿದ್ದೇನೆ. ನಿನಗೆ ಮತ್ತೇನು ಕೇಳಬೇಕೆಂದಿದೆ ? ಹೇಳು.

**ಮೈತ್ರೇಯ** - ಪೂಜ್ಯರೇ ನಾನು ಕೇಳಿದ್ದನ್ನೆಲ್ಲವನ್ನೂ ತಾವು ನಿರೂಪಣಗೈದಿದ್ದೀರಿ. ಇನ್ನೇನೂ ನನಗೆ ಪ್ರಷ್ಟವ್ಯಾಂಶವು ಉಳಿದಿಲ್ಲ. ನನ್ನ ಮನಸ್ಸಿನ ಸಂಶಯಗಳೆಲ್ಲ

ದೂರಾದವು. ಹೃದಯವು ನಿರ್ಮಲವಾಯಿತು. ನಿಮ್ಮ ಅನುಗ್ರಹದಿಂದ ನನಗೆ ವಿಶ್ವದ ಹುಟ್ಟು ಸಾವು ಸ್ಥಿತಿಗತಿಗಳ ಬಗೆಗೆ ಚೆನ್ನಾಗಿ ತಿಳುವಳಿಕೆಯಾಯಿತು. ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ವಿಷ್ಣುವಿನಿಂದಲೇ ಪಾಲಿತ ಪೋಷಿತವಾಗಿ ಅವನಿಂದಲೇ ಓತಪ್ರೋತವಾಗಿದೆ. ಅವನನ್ನು ಬಿಟ್ಟು ಇಲ್ಲ. ಇದನ್ನೆಲ್ಲ ನಾನು ತಿಳಿದು ಧನ್ಯನಾದೆ. ವರ್ಣಧರ್ಮ ಆಶ್ರಮಧರ್ಮಗಳೂ, ಪ್ರವೃತಕರ್ಮ ನಿವೃತ್ತ ಕರ್ಮಗಳೂ, ಉಳಿದ ಅನೇಕಾನೇಕ ವಿಷಯಗಳೂ ನನ್ನಿಂದ ತಿಳಿಯಲ್ಪಟ್ಟಿವೆ. ಇದೆಲ್ಲವೂ ತಮ್ಮ ದಯೆ. ನನ್ನ ಸಂಶಯಗಳೆಲ್ಲವೂ ದೂರಾಗಿವೆ. ಇನ್ನೇನು ಕೇಳಬೇಕಾದದ್ದು ಉಳಿದಿಲ್ಲ. ನಾನು ಈ ಮಹಾಪುರಾಣವನ್ನು ಹೇಳುವ ಶ್ರಮವನ್ನು ತಮಗೆ ಕೊಟ್ಟೆ. ಅದಕ್ಕಾಗಿ ತಾವು ನನ್ನನ್ನು ಕ್ಷಮಿಸಬೇಕು. ದೊಡ್ಡವರು ಶಿಷ್ಯರನ್ನೂ ಕೂಡ ತಮ್ಮ ಮಕ್ಕಳೆಂದೇ ಭಾವಿಸುತ್ತಾರೆ. ಅದರಂತೆ ತಾವು ನನ್ನನ್ನು ತಮ್ಮ ಮಗನೆಂದು ಭಾವಿಸಿ ನಾನು ಕೊಟ್ಟ ಈ ಪರಿಶ್ರಮಾಪರಾಧವನ್ನು ಕ್ಷಮಿಸಬೇಕು. ನನ್ನ ಮೇಲೆ ಪ್ರಸನ್ನರಾಗಬೇಕು.

**ಪರಾಶರ** - ನಾನು ನಿನಗೆ ಹೇಳಿದ ವೇದಸಮ್ಮತವಾದ ಈ ವಿಷ್ಣುಪುರಾಣವನ್ನು ಶ್ರವಣಮಾಡುವದರಿಂದ ಸರ್ವ ಪಾಪಗಳೂ ನಾಶವಾಗುತ್ತವೆ. ಇದರಲ್ಲಿ ಪ್ರಪಂಚದ ಸೃಷ್ಟಿ, ಸಂಹಾರ, ಸ್ಥಿತಿ, ವಂಶ, ಮನ್ವಂತರಗಳು, ಆಗ ಜನಿಸಿದವರ ವಂಶ ಚರಿತಗಳು ನಿರೂಪಿಸಲ್ಪಟ್ಟಿವೆ. ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ವಿದ್ಯಾಧರ, ಸಿದ್ಧ, ಅಪ್ಸರ, ಮುನಿ, ಮಾನವ, ಸಿದ್ಧ, ತಾಪಸರೆಲ್ಲರ ಮಹಿಮೆ ಗೈಮೆಗಳನ್ನು ಬಣ್ಣಿಸಲಾಗಿದೆ. ಚಾತುರ್ವರ್ಣ್ಯ ವಿಭಾಗ, ವಿಶಿಷ್ಟ ಮಹಾಪುರುಷರ ಚರಿತ್ತ, ಪುಣ್ಯದೇಶ, ಪುಣ್ಯನದೀ, ಸಮುದ್ರ, ಪರ್ವತ, ವೇದ, ಶಾಸ್ತ್ರ, ವರ್ಣ ಧರ್ಮ, ಸೃಷ್ಟಿ ಸ್ಥಿತಿ ಕಾರಣನಾದ ಶ್ರೀಗಳಿಗೆ ಹರಿಯ ಮಹಿಮೆ ಮುಂತಾದ ವಿವಿಧ ವಿಷಯಗಳು ನಿರೂಪಿಸಲ್ಪಟ್ಟವೆ. ಪರವಶನಾಗಿ ಆನುಷಂಗಿಕವಾಗಿ ಶ್ರೀ ಹರಿಯ ನಾಮಸ್ಮರಣೆಗೈದರೂ ಮನುಷ್ಯರ ಸಕಲ ಪಾಪಗಳೂ ಪರಿಹಾರವಾಗುತ್ತವೆ. ನರಕಾದ್ಯನರ್ಥಪ್ರದವಾದ ಕಲ್ಮಷವೆಲ್ಲವೂ ಅವನ ನಾಮಸ್ಮರಣ ಮಾತ್ರದಿಂದಲೇ ತೊಳೆದು ಹೋಗುವದು. ಅಂಥ ಮಹಾವಿಷ್ಣುವಿನ ಮಹಾಮಹಿಮೆಯೇ ಈ ಪುರಾಣದಲ್ಲಿ ಪ್ರತಿಪಾದಿತವಾಗಿದೆ. ಇಂಥ ಈ ವಿಷ್ಣು ಪುರಾಣವನ್ನು ಶ್ರವಣ ಮಾಡಿದರೆ ಯಜ್ಞಮಾಡಿ ಅವಭೃಥ ಸ್ನಾನ ಮಾಡಿದಷ್ಟು ಪುಣ್ಯ ಬರುವದು. ಪ್ರಯಾಗ, ಪುಷ್ಕರ, ಕುರುಕ್ಷೇತ್ರ ಹಾಗೂ ಸಾಗರ ಸಂಗಮ ಸ್ಥಳಗಳಲ್ಲಿ ಸ್ನಾನಮಾಡಿ ಉಪವಾಸ ಮಾಡಿದ ಫಲವು ಈ ವಿಷ್ಣು ಪುರಾಣ ಶ್ರವಣ ಮಾತ್ರದಿಂದಲೇ ಪ್ರಾಪ್ತವಾಗುವದು. ಈ ದಿವ್ಯ ಪುರಾಣ ಶ್ರವಣದಿಂದ ಒಂದು ವರ್ಷದವರೆಗೆ ಅಗ್ನಿ ಹೋತ್ರವನ್ನಿಟ್ಟು ಹೋಮಮಾಡಿದ ಪುಣ್ಯವೂ, ಜ್ಯೇಷ್ಠ ಶುಕ್ಲ ದ್ವಾದಶಿಯ ದಿನ ಸ್ನಾನಮಾಡಿ ಮಥುರಾ ಪಟ್ಟಣದಲ್ಲಿ ಶ್ರೀ ಹರಿ ದರ್ಶನದಿಂದ ಬರುವ ಪುಣ್ಯವೂ ಅಶ್ವಮೇಧ ಯಜ್ಞಮಾಡಿದ ಪುಣ್ಯವೂ ತಾನಾಗಿ ಪ್ರಾಪ್ತವಾಗುತ್ತದೆ. ಕೇಳಬೇಕಾದ ವಿಷಯಗಳಲ್ಲಿ ಇದು ಅತ್ಯುತ್ತಮ, ಪವಿತ್ರಗಳಲ್ಲಿ ಪವಿತ್ರ, ಮಂಗಲಗಳಲ್ಲಿ ಮಂಗಲ. ಕೆಟ್ಟ ಕನಸುಗಳ ದುಷ್ಫಲಗಳ ನಾಶಕ, ಸಂತಾನ ಸಂಪತ್ಪ್ರದ. ಈ ಪುರಾಣವನ್ನು ಮೊದಲು ಬ್ರಹ್ಮದೇವರು ಋಭುಮುನಿಗೂ, ಋಭುವು ಪ್ರಿಯ ವ್ರತನಿಗೂ, ಅವನು ಭಾಗುರಿಗೆ,

ಧಾಗುರಿಯು ಸ್ತಂಭ ಮಿತ್ರನಿಗೆ, ಸ್ತಂಭಮಿತ್ರನು ದಧೀಚನಿಗೆ, ದಧೀಚನು ಸಾರಸ್ವತನಿಗೆ, ಸಾರಸ್ವತನು ಭೃಗುಮುನಿಗೆ, ಭೃಗುಮುನಿ ಪುರುಕುತ್ಸನಿಗೆ, ಪುರುಕುತ್ಸನು ನರ್ಮದೆಯ ದಂಡೆಯ ಮೇಲೆ ಧೃತರಾಷ್ಟ್ರ ಮತ್ತು ಪೂರಣ ನಾಗರಿಗೆ, ಅವರಿಬ್ಬರು ವಾಸುಕಿಗೆ, ವಾಸುಕಿಯು ವತ್ಸನಿಗೆ, ವತ್ಸನು ಅಶ್ವತರನಿಗೆ, ಅವನು ಕಂಬಲನಿಗೆ, ಕಂಬಲನು ಏಲಾಪುತ್ರನಿಗೆ ಹೇಳಿ ಪಾತಾಳದಲ್ಲಿ ಈ ಪುರಾಣವು ಪ್ರಚಾರವಾಗಿದ್ದಿತು. ವೇದಶಿರಾ ಎಂಬ ಋಷಿಯು ಪಾತಾಳಕ್ಕೆ ಹೋದಾಗ ಅಲ್ಲಿಂದ ಈ ಪುರಾಣವನ್ನೆಲ್ಲ ಕಲಿತುಕೊಂಡು ಬಂದು ಪ್ರಮತಿಗೆ ಉಪದೇಶ ಮಾಡಿದ. ಪ್ರಮತಿಯು ಜಾತುಕರ್ಣನಿಗೂ, ಜಾತುಕರ್ಣನು ಅನೇಕ ಪುಣ್ಯಾತ್ಮರಿಗೂ ಈ ಪುರಾಣವನ್ನು ಉಪದೇಶಗೈದ. ಪುಲಸ್ತ್ಯ ಮುನಿಗಳ ವರದಿಂದ ನಾನು ಇದನ್ನು ಸ್ಮರಣ ಮಾಡಿಕೊಂಡು ನಿನಗೆ ಹೇಳಿದ್ದೇನೆ. ಮೈತ್ರೇಯ, ಇದನ್ನು ನೀನು ಕಲಿಯುಗದ ಕೊನೆಗೆ ಶಿನೀಕನಿಗೆ ಹೇಳುವೆ. ಈ ದಿವ್ಯ ಪುರಾಣವನ್ನು ಕೇಳಿದವರು ಸರ್ವತೀರ್ಥ ಸ್ನಾನ ಮಾಡಿದಂತೆ, ಸರ್ವದೇವತೆಗಳನ್ನೂ, ಬಣ್ಣಿಸಿದಂತೆ. ಕಪಿಲಾಧೇನುವನ್ನು ದಾನಮಾಡಿದ ಪುಣ್ಯವು ಇದರ ಶ್ರವಣದಿಂದ ಪ್ರಾಪ್ತವಾಗುತ್ತದೆ. ಈ ಪುರಾಣದ ಆದಿಯಲ್ಲಿ ಮಧ್ಯದಲ್ಲಿ ಹಾಗೂ ಅಂತ್ಯದಲ್ಲಿ ಶ್ರೀ ವಿಷ್ಣುವೇ ಪ್ರತಿಪಾದಿತನಾಗಿದ್ದಾನೆ. ಆ ಪರಮಾತ್ಮನ ಮಹಿಮಾವರ್ಣನ ರೂಪವಾದ ಈ ಮಹಾ ಪುರಾಣದ ಶ್ರವಣ, ಪಠಣ, ವಾಚನಾದಿಗಳನ್ನು ಮಾಡಿದರೆ ಮತ್ತಾವುದರಿಂದಲೂ ದೊರಕದ ಶ್ರೀ ಹರಿಯ ಅನುಗ್ರಹವು ತಾನಾಗಿ ಸಿದ್ಧಿಸುವದು. ಯಾವ ಪರಮಾತ್ಮನಲ್ಲಿ ಚಿತ್ತವಿಟ್ಟವರಿಗೆ ಸ್ವರ್ಗಪ್ರಾಪ್ತಿಯೂ ಒಂದು ವಿಘ್ನವೆನಿಸುವುದೋ ಬ್ರಹ್ಮಲೋಕವೂ ಕೂಡ ಅಲ್ಪ ಫಲವೆನಿಸುವದೋ ಅಂಥ ಮೋಕ್ಷಾದಿ ಪುರುಷಾರ್ಥಪ್ರದನಾದ ಶ್ರೀ ಹರಿಯ ಚರಿತ್ರವನ್ನು ಶ್ರವಣ ಪಠನ ಮಾಡಿದರೆ ಪಾಪಗಳೆಲ್ಲ ತೊಳೆದುಹೋಗುವದು ಏನಾಶ್ಚರ್ಯ!

**ವ್ಯೋಮಾನಲಾಗ್ನಿ ಜಲಭೂರಚನಾಮಯಾಯ**
**ಶಬ್ದಾದಿ ಭೋಗ್ಯ ವಿಷಯೋಪನಯಕ್ಷಮಾಯ**
**ಪುಂಸಃ ಸಮಸ್ತಕರಣೈರುಪಕಾರಕಾಯ**
**ವ್ಯಕ್ತಾಯ ಸೂಕ್ಷ್ಮ ಬೃಹದಾತ್ಮವತೇ ನತೋಽಸ್ಮಿ ॥**

ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಈ ಪಂಚ ಭೂತಾತ್ಮಕ ಪ್ರಪಂಚ ನಿಯಾಮಕನಾದ ಮತ್ತು ಶಬ್ದಾದಿ ಭೋಗ್ಯ ವಿಷಯಗಳನ್ನು ಒದಗಿಸಿ ಸುಖಪ್ರದನಾದ ಸರ್ವೇಂದ್ರಿಯಗಳ ದ್ವಾರಾ ಉಪಕಾರ ಗೈಯುವ ಸೂಕ್ಷ್ಮ ಸ್ಥೂಲ ವಿರಾಟ ರೂಪವುಳ್ಳ ಆ ಪರಮಾತ್ಮನಿಗೆ ನನ್ನ ನಮಸ್ಕಾರವಿರಲಿ.

*ಇತಿ ಪರಾಶರರು ಮೈತ್ರೇಯರಿಗೆ ಉಪದೇಶಿಸಿದ ಶ್ರೀ ಮಹಾವಿಷ್ಣು ಪುರಾಣ ಸಮಾಪ್ತ*

*ಓಂ ಶಾಂತಿ ಶಾಂತಿ ಶಾಂತಿಃ*

—o—

